ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ

## ಶ್ರೀ ಸರ್ವಮೂಲ ಗ್ರಂಥಗಳು

# ಶ್ರೀ ಬ್ರಹ್ಮಸೂತ್ರ ಭಾಷ್ಯ

## ಭಾಗ - ೩

ಪರಮಪೂಜ್ಯ ಶ್ರೀ ವಿಶ್ವೇಶತೀರ್ಥ ಶ್ರೀಪಾದರ ಕನ್ನಡಸಾರ ಸಹಿತ




ಅನುವಾದಕರು

**ವಿದ್ವಾನ್ ಎ. ಹರಿದಾಸ ಭಟ್ಟ**, ಎಮ್.ಎ.



ಪ್ರಕಾಶಕರು

**ಅಖಿಲ ಭಾರತ ಮಾಧ್ವಮಹಾ ಮಂಡಲ (ರಿ) ಉಡುಪಿ**

ಪೂರ್ಣಪ್ರಜ್ಞ ವಿದ್ಯಾಪೀಠ, ಡಾ|| ವಿಶ್ವೇಶತೀರ್ಥ ಸ್ವಾಮೀಜಿ ರಸ್ತೆ

ಬೆಂಗಳೂರು - 560 028

|| ಶ್ರೀಃ ||

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ

# ಶ್ರೀ ಸರ್ವಮೂಲ ಗ್ರಂಥಗಳು

(ಕನ್ನಡ ಅನುವಾದ ವಿವರಣೆ ಸಹಿತ)

## ಸಂಪುಟ - ೧೧(ಬಿ)

## (ಅಧ್ಯಾಯ ಮೂರು ಮತ್ತು ನಾಲ್ಕು)

# ಶ್ರೀಬ್ರಹ್ಮಸೂತ್ರಭಾಷ್ಯ

## ಭಾಗ - ೩

ಪರಮಪೂಜ್ಯ ಶ್ರೀ ವಿಶ್ವೇಶತೀರ್ಥ ಶ್ರೀಪಾದರ ಕನ್ನಡಸಾರ ಸಹಿತ

ಅನುವಾದಕರು

ವಿದ್ವಾನ್ ಎ. ಹರಿದಾಸ ಭಟ್ಟ, ಎಮ್.ಎ.

ಪ್ರಕಾಶಕರು

ಅಖಿಲ ಭಾರತ ಮಾಧ್ವಮಹಾ ಮಂಡಲ (ರಿ), ಉಡುಪಿ

ಪೂರ್ಣಪ್ರಜ್ಞ ವಿದ್ಯಾಪೀಠ

ಬೆಂಗಳೂರು - 560 028

ಸರ್ವಮೂಲ ಬ್ರಹ್ಮಸೂತ್ರ ಭಾಷ್ಯ ಭಾಗ-3 (ಅಧ್ಯಾಯ 3 ಮತ್ತು 4) ಕನ್ನಡ ಅನುವಾದ
ಅನುವಾದಕರು : ಮ|| ಶಾ|| ಸಂ|| ವಿದ್ವಾನ್ ಎ.ಹರಿದಾಸ ಭಟ್ಟ
ಪ್ರಕಾಶನ ಅಖಿಲ ಭಾರತ ಮಾಧ್ವ ಮಹಾ ಮಂಡಲ, ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು-560 028. ಈ ಗ್ರಂಥವು ತಮ್ಮ ಐತಿಹಾಸಿಕ ಪಂಚಮ ಪರ್ಯಾಯ ಶ್ರೀ ಕೃಷ್ಣಪೂಜಾ ಕೈಂಕರ್ಯವನ್ನು ಸ್ವೀಕರಿಸಿರುವ ಪರಮಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ ಅಮೃತಹಸ್ತದಿಂದ ದಿನಾಂಕ 22.7.2017 (ಹೇಮಲಂಬಿ ನಾಮಸಂವತ್ಸರ ಆಷಾಢ ಬಹುಳ ತ್ರಯೋದಶಿ ಶನಿವಾರ) ಉಡುಪಿ ಶ್ರೀಕೃಷ್ಣ ಸನ್ನಿಧಾನದಲ್ಲಿ ಬಿಡುಗಡೆಗೊಂಡಿದೆ.

ಈ ಕೃತಿಯನ್ನು ಭಾವೀ ಪರ್ಯಾಯ ಪೀಠವನ್ನು ಸ್ವೀಕರಿಸಲಿರುವ ಪಲಿಮಾರು ಮಠಾಧೀಶರಾದ ಪರಮಪೂಜ್ಯ ಶ್ರೀ ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದಂಗಳವರು ಬೆಂಗಳೂರಿನ ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ಲೋಕಾರ್ಪಣೆಗೊಳಿಸಿರುತ್ತಾರೆ.

ಪುಟಗಳು : 782
ಪ್ರಥಮ ಮುದ್ರಣ : 2017

ಪ್ರತಿ ಬೆಲೆ : ರೂ.400
ಪ್ರತಿಗಳು : 1000




ಗ್ರಂಥಗಳು ದೊರೆಯುವ ಸ್ಥಳ
ಅಖಿಲ ಭಾರತ ಮಾಧ್ವ ಮಹಾ ಮಂಡಲದ ಕಾರ್ಯಾಲಯ
ಪೂರ್ಣಪ್ರಜ್ಞ ವಿದ್ಯಾಪೀಠ, ಪೂರ್ಣಪ್ರಜ್ಞ ನಗರ, ಬೆಂಗಳೂರು -28
ಅಕ್ಷರ ಜೋಡಣೆ : ಪ್ರೇಮ್‌ಕುಮಾರ್
ಮುದ್ರಣ : ಓಂಕಾರ್ ಆಫ್‌ಸೆಟ್ ಪ್ರಿಂಟರ್ಸ್, ನ್ಯೂತರಗು ಪೇಟೆ, ಬೆಂಗಳೂರು.

# ಶ್ರೀ 108 ಶ್ರೀ ಪೇಜಾವರ ಮಠಾಧೀಶರಾದ
# ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ ಸಂದೇಶ

ಶ್ರೀ ಮಧ್ವಾಚಾರ್ಯರ 750ನೇ ವರ್ಷದ ಜಯಂತಿಯ ಸಂದರ್ಭದಲ್ಲಿ ಕೈಗೊಂಡಿರುವ ಜ್ಞಾನಪ್ರಸಾರ ಯೋಜನೆಯ ಅಂಗವಾಗಿ ಶ್ರೀಮದಾಚಾರ್ಯರ ಎಲ್ಲಾ ಗ್ರಂಥಗಳ ಕನ್ನಡ ಅನುವಾದವನ್ನು ಪ್ರಕಾಶಿಸುವ ಬೃಹತ್ ಯೋಜನೆಯನ್ನು ಆನಂದತೀರ್ಥ ಪ್ರತಿಷ್ಠಾನದ ಸಹಕಾರದಿಂದ ಅಖಿಲ ಭಾರತ ಮಾಧ್ವ ಮಹಾಮಂಡಲವು ಕೈಗೊಂಡಿದೆ. ತೆಲುಗು, ತಮಿಳು ಮುಂತಾದ ಪ್ರಾದೇಶಿಕ ಭಾಷೆಗಳಲ್ಲಿಯೂ, ಹಿಂದಿ, ಇಂಗ್ಲೀಷ್ ಭಾಷೆಗಳಲ್ಲಿಯೂ ಅನುವಾದವನ್ನು ಪ್ರಕಟಿಸುವ ಬಯಕೆ ನಮ್ಮದಾಗಿದೆ. ಜಗತ್ತಿನ ಸತ್ಯತತ್ವಗಳನ್ನು ಅನುಭವದ ನೆಲೆಯಲ್ಲಿ ಪರೀಕ್ಷಿಸಿ ಸರಿಯಾದ ಪ್ರಮಾಣಗಳ ಆಧಾರದಲ್ಲಿ ವೈಜ್ಞಾನಿಕವಾಗಿ ವಿವೇಚಿಸುವ ವಿಶಿಷ್ಟತೆಯನ್ನು ಶ್ರೀಮದಾಚಾರ್ಯರ ಸಿದ್ಧಾಂತದಲ್ಲಿ ನಾವು ಕಾಣಬಹುದು. ಎಲ್ಲಾ ಪ್ರಮಾಣ, ತರ್ಕ, ಊಹಾಪೋಹಗಳಿಗಿಂತಲೂ ಅನುಭವಕ್ಕೆ ಹೆಚ್ಚಿನ ಸ್ಥಾನವನ್ನು ಶ್ರೀಮದಾಚಾರ್ಯರು ನೀಡಿದ್ದಾರೆ. ಎಲ್ಲಾ ಭಾಷೆಗಳಲ್ಲಿ ಆಚಾರ್ಯರ ಗ್ರಂಥಗಳ ಅನುವಾದದ ಪ್ರಕಟಣೆಯು, ಜಗತ್ತಿನ ಜಿಜ್ಞಾಸುಗಳಿಗೆ ಈ ಸತ್ಯದ ಅರಿವುಂಟಾಗಲು ಅನುಕೂಲವಾಗುವುದು. ಶ್ರೀಮದಾಚಾರ್ಯರ ಸಂದೇಶವು ವಿಶ್ವದಲ್ಲಿ ಪ್ರತಿಧ್ವನಿತವಾಗಲಿ, ಈ ಗ್ರಂಥ ಪ್ರಕಾಶನದಿಂದಾಗಿ ಜ್ಞಾನ, ಭಕ್ತಿ, ಕರ್ತವ್ಯ, ಚಾರಿತ್ರ್ಯಗಳ ಬಗ್ಗೆ ಜನಜಾಗೃತಿಯುಂಟಾಗಲಿ ಎಂದು ಹಾರೈಸುತ್ತೇವೆ. ಭಕ್ತರೂ, ಅಭಿಮಾನಿಗಳೂ, ಜಿಜ್ಞಾಸುಗಳೂ ಆದ ಎಲ್ಲಾ ಮಹಾಜನರ ಸಹಕಾರದಿಂದ, ಶ್ರೀಹರಿವಾಯುಗುರುಗಳ ಅನುಗ್ರಹದಿಂದ ಈ ಪವಿತ್ರವಾದ ಮಹತ್ತರವಾದ ಜ್ಞಾನಕಾರ್ಯವು ಯಶಸ್ವಿಯಾಗಲಿ ಎಂದು ಆಶಿಸುತ್ತೇವೆ.

ಶ್ರೀ ಶ್ರೀವಿಶ್ವೇಶತೀರ್ಥ ಶ್ರೀಪಾದರು

ದಿನಾಂಕ 22.07.2017 ಪರ್ಯಾಯ ಶ್ರೀ ಪೇಜಾವರ ಮಠ, ಉಡುಪಿ.

# ಸಂಪಾದಕ ಮಂಡಳಿಯ ನಿವೇದನೆ

ಕ್ರಿ.ಶ. 1986ರಲ್ಲಿ ಶ್ರೀ ಮಧ್ವಾಚಾರ್ಯರ 750ನೇ ಜಯಂತಿಯ ಅಂಗವಾಗಿ ಆಚಾರ್ಯರು ಅನುಗ್ರಹಿಸಿದ ಸರ್ವಮೂಲ ಗ್ರಂಥಗಳ ಭಾಷಾಂತರ ಕಾರ್ಯವನ್ನು ಶ್ರೀ ಶ್ರೀ ವಿಶ್ವೇಶತೀರ್ಥರು ಸಂಕಲ್ಪಿಸಿದ್ದು ಅಂದಿನಿಂದ ಇಂದಿನವರೆಗೆ ಹದಿನೆಂಟು ಸಂಪುಟಗಳು ಹೊರ ಬಂದಿದೆ.

ಕ್ರಿ.ಶ. 1987ರಲ್ಲಿ ಗೀತಾ ಪ್ರಸ್ಥಾನ ಪ್ರಕಟವಾಯಿತು. ಆಮೇಲಿನ ಎರಡು ವರ್ಷಗಳಲ್ಲಿ ದಶೋಪನಿಷತ್‌ಗಳು–ಮೂರು ಸಂಪುಟಗಳಲ್ಲಿ ಹೊರಬಂದವು. 1993ರಲ್ಲಿ ಮಹಾಭಾರತ ತಾತ್ಪರ್ಯ ನಿರ್ಣಯದ ಮೊದಲ ಭಾಗವು ಪ್ರಕಟಗೊಂಡಿತು. ಮರುವರ್ಷ ದಶಪ್ರಕರಣಗಳನ್ನು ಪ್ರಕಾಶ ಪಡಿಸಲಾಯಿತು.

ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ರಾಮಾಯಣ ಮತ್ತು ಮಹಾಭಾರತದ ಕಥೆಗಳು ಅಡಕವಾಗಿವೆ. ಮೊದಲ ಒಂಬತ್ತು ಅಧ್ಯಾಯಗಳವರೆಗೆ ರಾಮಾಯಣದ ಕಥಾಭಾಗವು ಮುಕ್ತಾಯವಾಗಿದೆ. ಹತ್ತನೇ ಅಧ್ಯಾಯದಲ್ಲಿ ಶ್ರೀವೇದವ್ಯಾಸರ ಅವತಾರ ಮತ್ತು ಅವರು ನಡೆಸಿದ ಯಜ್ಞಕಾರ್ಯಗಳ ವಿವರಣೆ ಇದೆ. ಹನ್ನೊಂದನೇ ಅಧ್ಯಾಯದಿಂದ ಮಹಾಭಾರತದ ಕಥೆ ಆರಂಭವಾಗುತ್ತದೆ. ಇದರಲ್ಲಿ ಹತ್ತೊಂಭತ್ತನೇ ಅಧ್ಯಾಯದಿಂದ ಇಪ್ಪತ್ತೆರಡನೇ ಅಧ್ಯಾಯದವರೆಗಿನ ಭಾಗವನ್ನು ಕ್ರಿ.ಶ.1999ರಲ್ಲಿ ಪ್ರಕಟಮಾಡಲಾಗಿದೆ. ಜನವರಿಯಲ್ಲಿ 23 ರಿಂದ 32 ಅಧ್ಯಾಯಗಳು ಹತ್ತನೇ ಸಂಪುಟವಾಗಿ ಹೊರಬಂದಿವೆ. ಇಲ್ಲಿಗೆ ಮಹಾಭಾರತದ ತಾತ್ಪರ್ಯನಿರ್ಣಯ ಪೂರ್ಣಗೊಂಡಂತಾಗಿದೆ. ಇದರ ಜೊತೆಯಲ್ಲಿ ಸಂಕೀರ್ಣಗ್ರಂಥ (ಹತ್ತು ಗ್ರಂಥಗಳನ್ನು ಒಳಗೊಂಡ ಗ್ರಂಥ–ಇದರಲ್ಲಿ ಸದಾಚಾರ ಸ್ಮೃತಿ, ತಂತ್ರಸಾರ ಸಂಗ್ರಹ, ಯಮಕ ಭಾರತ ಹತ್ತು ಸ್ತೋತ್ರಾದಿಗಳು ದ್ವಾದಶ ಸ್ತೋತ್ರ, ನರಸಿಂಹಸ್ತುತಿ, ಜಯಂತೀನಿರ್ಣಯ, ಯತಿಪ್ರಣವಕಲ್ಪ, ಕಂದುಕ ಸ್ತುತಿ, ಬಿಲ್ವಮಂಗಲಃ ಸಾಧುಃ ಈ 10 ಸರ್ವಮೂಲ ಗ್ರಂಥಗಳು ಸೇರಿದ್ದು) 1999ರಲ್ಲಿ ಪ್ರಕಟಗೊಂಡಿದೆ.

ತದನಂತರ ಸೂತ್ರ ಪ್ರಸ್ಥಾನಕ್ಕೆ ಸಂಬಂಧಿಸಿದ ಮೊದಲನೇ ಕೃತಿ ಬ್ರಹ್ಮಸೂತ್ರ ಭಾಷ್ಯ ಗ್ರಂಥ ಪ್ರಥಮಾಧ್ಯಾಯ ಹಾಗೂ ದ್ವಿತೀಯಾಧ್ಯಾಯದ ಅನುವಾದವನ್ನು ವಿದ್ವಾನ್ ಎ.ಹರಿದಾಸಭಟ್ಟರು ಮಾಡಿದ್ದಾರೆ. ಇಲ್ಲಿ ಗ್ರಂಥಕ್ಕೆ ಸರಿ ಹೊಂದುವ ಅನುವಾದದ ಜೊತೆಗೆ ಉಪಯುಕ್ತ ಮಾಹಿತಿಗಳನ್ನು ಆಧಾರ ಸಹಿತ ನಿರೂಪಿಸಲಾಗಿದೆ. ಶ್ರೀ ಮಧ್ವಾಚಾರ್ಯರ ಭಾಷ್ಯದ ವೈಶಿಷ್ಟ್ಯವನ್ನು ತಿಳಿಯಲು ಅನುಕೂಲವಾಗುವಂತೆ ಶಾಂಕರ ರಾಮಾನುಜ ಭಾಷ್ಯಗಳಲ್ಲಿ ಹೇಳಿದ ಸೂತ್ರದ ಅರ್ಥವನ್ನು ನೀಡಲಾಗಿದೆ. ಆದಕ್ಕೆ ತಾತ್ಪರ್ಯ

ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆಯನ್ನು ಸೇರಿಸಲಾಗಿದೆ. ಒಟ್ಟಿನಲ್ಲಿ ಇದು ತೌಲನಿಕ ಅಧ್ಯಯನಕ್ಕೆ ಅನುಕೂಲವಾಗುವ ಒಂದು ಕೃತಿಯಾಗಿ ಹೊರಬಂದಿದೆ.

ಅನುವ್ಯಾಖ್ಯಾನದ ಮೊದಲನೇ ಅಧ್ಯಾಯವನ್ನು ವಿದ್ವಾನ್ ಎ.ಹರಿದಾಸಭಟ್ಟರು ಅನುವಾದಿಸಿದ್ದು ಜಿಜ್ಞಾಸುಗಳಿಗೆ ಈಗಾಗಲೇ ಲಭ್ಯವಿದೆ. ಮುಂದಿನ ಭಾಗದ ಅನುವಾದ ಅನತಿಕಾಲದಲ್ಲೇ ಪ್ರಕಟಗೊಳ್ಳಲಿದೆ.

ಪುರಾಣ ಪ್ರಸ್ಥಾನದಲ್ಲಿ ಮತ್ತೊಂದು ಗ್ರಂಥವಾದ ಶ್ರೀ ಭಾಗವತ ತಾತ್ಪರ್ಯ ನಿರ್ಣಯವು ಸಮಗ್ರವಾಗಿ ಒಂಭತ್ತು ಸಂಪುಟಗಳಲ್ಲಿ ಪ್ರಕಟಗೊಂಡಿದೆ. ನಾಡಿನ ಹಿರಿಯ ವಿದ್ವಾಂಸರಾದ ವಿದ್ವಾನ್ ಶ್ರೀ ಕೆ.ಹಯವದನ ಪುರಾಣಿಕರು ನಾನಾ ವ್ಯಾಖ್ಯಾನಗಳ ವಿವರಣೆಯೊಂದಿಗೆ ವಿದ್ಯಾರ್ಥಿಗಳಿಗೂ ಅನುಕೂಲವಾಗುವಂತೆ ಸಿದ್ಧಗೊಳಿಸಿದ್ದಾರೆ. ಇದಲ್ಲದೆ ಹಿಂದೆ ಪ್ರಕಟಗೊಂಡಿದ್ದ ಸರ್ವಮೂಲ ಗ್ರಂಥಗಳ ಪುನರ್ಮುದ್ರಣ ಅತ್ಯಗತ್ಯವಾಗಿದ್ದು, ಹಂತ ಹಂತವಾಗಿ ಇವುಗಳು ಪುನರ್ ಮುದ್ರಣಗೊಂಡು, ಆಸಕ್ತರಿಗೆ ಲಭ್ಯವಾಗಿರುತ್ತವೆ. ಉಳಿದ ಗ್ರಂಥಗಳಾದ ನ್ಯಾಯವಿವರಣ, ಅನುವ್ಯಾಖ್ಯಾನ, ಅಣುಭಾಷ್ಯಗಳ ಅನುವಾದವು ಪರಮಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ ನೇತೃತ್ವ ಹಾಗೂ ಮಾರ್ಗದರ್ಶನಲ್ಲಿ ನಡೆಯುತ್ತಿದ್ದು, ಆದಷ್ಟು ಬೇಗನೇ ಜಿಜ್ಞಾಸುಗಳಿಗೆ ದೊರೆಯುವಂತೆ ಯೋಜಿಸಲಾಗಿದೆ.

ಪ್ರಕೃತ ಬ್ರಹ್ಮಸೂತ್ರಗಳ ಮೂರು ಹಾಗೂ ನಾಲ್ಕನೇ ಅಧ್ಯಾಯಗಳ ಭಾಷ್ಯದ ಅನುವಾದವನ್ನು ವಿದ್ವಾನ್ ಶ್ರೀ ಎ.ಹರಿದಾಸ ಭಟ್ಟರು ಮಾಡಿದ್ದಾರೆ. ಇಲ್ಲಿಯೂ ಕೂಡ ಗ್ರಂಥಕ್ಕೆ ಸರಿಹೊಂದುವ ಅನುವಾದದ ಜೊತೆಗೆ ಉಪಯುಕ್ತ ಮಾಹಿತಿಯನ್ನು ಆಧಾರಸಹಿತವಾಗಿ ನಿರೂಪಿಸಲಾಗಿದೆ. ಶ್ರೀ ಮಧ್ವಾಚಾರ್ಯರ ಭಾಷ್ಯದ ವೈಶಿಷ್ಟ್ಯವನ್ನು ತಿಳಿಯಲು ಅನುಕೂಲವಾಗುವಂತೆ, ಶಾಂಕರ, ರಾಮಾನುಜ ಭಾಷ್ಯದಲ್ಲಿ ಹೇಳಿದ ಸೂತ್ರಗಳ ಅರ್ಥವನ್ನು ನೀಡಲಾಗಿದೆ. ಶ್ರೀ ಹರಿದಾಸಭಟ್ಟರಿಗೆ ನಮ್ಮ ಅಭಿನಂದನೆಗಳು.

ಈ ಸಂಪುಟದ ಅಕ್ಷರ ಜೋಡಣೆಯ ಕಾರ್ಯವನ್ನು ಶ್ರೀ ಆರ್.ಎಸ್.ಪ್ರೇಮಕುಮಾರ್ ಅಂದವಾಗಿ ಮಾಡಿಕೊಟ್ಟಿದ್ದಾರೆ. ಇವರಿಗೆ ಮಂಡಲದ ಅಭಿನಂದನೆಗಳು: ಈ ಸಂಪುಟವನ್ನು ಸಕಾಲಕ್ಕೆ ಮುದ್ರಿಸಿಕೊಟ್ಟ ಓಂಕಾರ್ ಆಫ್‌ಸೆಟ್ ಪ್ರಿಂಟರ್ಸ್ ಅವರಿಗೂ, ಮುಖಪುಟ ವಿನ್ಯಾಸ ಹಾಗೂ ಈ ಸಂಪುಟ ಬಿಡುಗಡೆಗೆ ಹಾಗೂ ಇತರೇ ಕಾರ್ಯಗಳಿಗೆ ವಿವಿಧ ಹಂತದಲ್ಲಿ ಶ್ರಮಿಸಿದ ಮಂಡಲದ ಪ್ರಧಾನ ಕಾರ್ಯದರ್ಶಿ ಹೆಚ್.ಎನ್.ನಾರಾಯಣ ರಾವ್ ಹಾಗೂ ಮಂಡಲದ ಇತರ ಸಿಬ್ಬಂದಿವರ್ಗದವರಿಗೂ ಅಭಿನಂದನೆಗಳು.

**22.7.2017** **ಸಂಪಾದಕ ಮಂಡಳಿ**

# ಪ್ರಕಾಶಕರ ನುಡಿ

ಅಖಿಲ ಭಾರತ ಮಾಧ್ವ ಮಹಾಮಂಡಲವು ಕ್ರಿ.ಶ. 1986ರಲ್ಲಿ ಸರ್ವಮೂಲದ ಕನ್ನಡ ಅನುವಾದದ ಆವೃತ್ತಿಗಳನ್ನು ಹೊರತರುವ ನಿರ್ಧಾರವನ್ನು ಕೈಗೊಂಡಿತು. ಸುಮಾರು 31 ವರ್ಷಗಳಲ್ಲಿ ಹದಿನೆಂಟು ಸಂಪುಟಗಳಲ್ಲಿ 33 ಗ್ರಂಥಗಳು ಅನುವಾದಗೊಂಡಿದ್ದು ಜಿಜ್ಞಾಸುಗಳಿಗೆ ಲಭಿಸಿವೆ. ಇದುವರೆಗೆ ಈ ಗ್ರಂಥಗಳು ಪ್ರಕಟವಾಗಿವೆ–ಗೀತಾಪ್ರಸ್ಥಾನ (ಗೀತಾಭಾಷ್ಯ ಹಾಗೂ ಗೀತಾ ತಾತ್ಪರ್ಯ ನಿರ್ಣಯ), ಉಪನಿಷತ್ ಪ್ರಸ್ಥಾನ–ಹತ್ತು ಉಪನಿಷತ್‌ಗಳು (3 ಸಂಪುಟಗಳಲ್ಲಿ), ದಶಪ್ರಕರಣಗಳು (ಒಂದು ಸಂಪುಟದಲ್ಲಿ) ಸಂಕೀರ್ಣ ಗ್ರಂಥ–ತಂತ್ರಸಾರ ಮತ್ತು ಸ್ತೋತ್ರಗಳು (ಒಂದು ಸಂಪುಟದಲ್ಲಿ), ಪುರಾಣಪ್ರಸ್ಥಾನದಲ್ಲಿ ಒಂದಾದ 32 ಅಧ್ಯಾಯಗಳನ್ನು ಒಳಗೊಂಡ ಶ್ರೀಮನ್ ಮಹಾಭಾರತ ತಾತ್ಪರ್ಯ ನಿರ್ಣಯ (4 ಸಂಪುಟಗಳಲ್ಲಿ) ಹಾಗೂ ಸೂತ್ರ ಪ್ರಸ್ಥಾನದಲ್ಲಿ ಸೇರಿದ ಬ್ರಹ್ಮಸೂತ್ರಭಾಷ್ಯ 1ನೇ ಹಾಗೂ 2ನೇ ಅಧ್ಯಾಯ ಮತ್ತು ಶ್ರೀಮದನುವ್ಯಾಖ್ಯಾನ ಭಾಗ–1 (ಪ್ರಥಮಾಧ್ಯಾಯ) ಶ್ರೀ ಭಾಗವತ ತಾತ್ಪರ್ಯನಿರ್ಣಯ (9 ಸಂಪುಟಗಳಲ್ಲಿ) ಋಗ್ಭಾಷ್ಯ (2 ಸಂಪುಟ) ಪ್ರಕಟಗೊಂಡಿದ್ದು ಜಿಜ್ಞಾಸುಗಳಿಗೆ ಬಹಳ ಉಪಯುಕ್ತವಾಗಿವೆ. ಇದಲ್ಲದೆ ಹಿಂದೆ ಪ್ರಕಟಗೊಂಡಿದ್ದ ಸರ್ವಮೂಲ ಗ್ರಂಥಗಳ ಪುನರ್‌ಮುದ್ರಣ ಅತ್ಯಗತ್ಯವಾಗಿದ್ದು, ಹಂತ ಹಂತವಾಗಿ ಇವುಗಳು ಪುನರ್ ಮುದ್ರಣಗೊಂಡು ಆಸಕ್ತರಿಗೆ ಲಭ್ಯವಾಗಿರುತ್ತದೆ.

ಇದೀಗ ಬ್ರಹ್ಮಸೂತ್ರ ಭಾಷ್ಯದ 3 ಹಾಗೂ 4ನೇ ಅಧ್ಯಾಯಗಳ ಅನುವಾದ ಈ ಸಂಪುಟದಲ್ಲಿ ಪ್ರಕಟಗೊಳ್ಳುತ್ತಿದೆ. ಇಲ್ಲಿಗೆ ಬ್ರಹ್ಮಸೂತ್ರಭಾಷ್ಯ ಪೂರ್ಣಗೊಂಡಿದೆ.

ಈ ಅನುವಾದವನ್ನು ನಾಡಿನ ಶ್ರೇಷ್ಠ ವಿದ್ವಾಂಸರೂ, ರಾಷ್ಟ್ರಪ್ರಶಸ್ತಿ ಪುರಸ್ಕೃತರೂ ಆದ ವಿದ್ವಾನ್ ಎ.ಹರಿದಾಸ ಭಟ್ಟರು ನಡೆಸಿಕೊಟ್ಟಿದ್ದಾರೆ. ಇವರಿಗೆ ಮಂಡಲವು ಕೃತಜ್ಞತೆಯನ್ನು ಅರ್ಪಿಸುತ್ತದೆ.

ಈ ಸಂಪುಟದ ಅಕ್ಷರ ಜೋಡಣೆಯ ಕಾರ್ಯವನ್ನು ಆರ್.ಎಸ್.ಪ್ರೇಮಕುಮಾರ್ ಅವರು ಅಂದವಾಗಿ ಮಾಡಿಕೊಟ್ಟಿದ್ದಾರೆ. ಇವರಿಗೆ ಮಂಡಲದ ಅಭಿನಂದನೆಗಳು. ಈ ಸಂಪುಟವನ್ನು ಸಕಾಲಕ್ಕೆ ಮುದ್ರಿಸಿಕೊಟ್ಟ ಓಂಕಾರ ಆಫ್‌ಸೆಟ್ ಪ್ರಿಂಟರ್ಸ್‌ರವರಿಗೂ, ಮುಖಪುಟ ವಿನ್ಯಾಸ ಹಾಗೂ ಈ ಸಂಪುಟ ಬಿಡುಗಡೆಗೆ ಹಾಗೂ ಇತರೇ ಕಾರ್ಯಗಳಿಗೆ ವಿವಿಧ ಹಂತದಲ್ಲಿ ಶ್ರಮಿಸಿದ ಮಂಡಲದ ಪ್ರಧಾನ ಕಾರ್ಯದರ್ಶಿ ಹೆಚ್.ಎನ್.ನಾರಾಯಣರಾವ್ ಹಾಗೂ ಮಂಡಳದ ಇತರ ಎಲ್ಲಾ ಸಿಬ್ಬಂದಿವರ್ಗದವರಿಗೂ ಅಭಿನಂದನೆಗಳು.

ಸಹೃದಯ ವಾಚಕರು ವಿಳಂಬಕ್ಕೆ ಬೇಸರಿಸದೆ ಆತ್ಮೀಯತೆಯಿಂದ ಈ ಸಂಪುಟವನ್ನು ಬರಮಾಡಿಕೊಳ್ಳುವಿರೆಂದು ನಂಬಿದ್ದೇವೆ.

**ಬೆಂಗಳೂರು** | **ಅಧ್ಯಕ್ಷರು**
**ದಿನಾಂಕ 22.7.2017** | **ಅ.ಭಾ.ಮಾ.ಮ.ಮಂಡಲ,ಬೆಂಗಳೂರು**

# ಶ್ರೀಬ್ರಹ್ಮಸೂತ್ರಭಾಷ್ಯಸಾರ

ವೇದಾಂತಗಳಲ್ಲಿ ಬ್ರಹ್ಮಸೂತ್ರಗಳ ಪಾತ್ರ ಅತ್ಯಂತ ಮಹತ್ವವಾದುದು. ವೇದ, ಉಪನಿಷತ್ತುಗಳ ತಾತ್ಪರ್ಯಾರ್ಥ ಗಹನವಾದುದು. ಬ್ರಹ್ಮಸೂತ್ರಗಳ ಸಹಾಯವಿಲ್ಲದಿದ್ದರೆ ಆ ತಾತ್ಪರ್ಯ ತಿಳಿಯದೇ ಅಪಾರ್ಥವಾಗುವ ಸಂಭವವಿದೆ. ಅದಕ್ಕಾಗಿ ವೇದಗಳನ್ನು ವಿಭಾಗ ಮಾಡಿ, ಮಹಾಭಾರತಾದಿ ಗ್ರಂಥಗಳನ್ನು ರಚಿಸಿದ ವೇದವ್ಯಾಸರು ವೇದಾರ್ಥನಿರ್ಣಯಕ್ಕಾಗಿ ಬ್ರಹ್ಮಸೂತ್ರಗಳನ್ನು ರಚಿಸಿದರು. ವೇದಾಂತವೆಂಬ ಮಂದರಾಚಲಕ್ಕೆ ಬ್ರಹ್ಮಸೂತ್ರಗಳೆಂಬ ಹಗ್ಗವನ್ನು ಬಿಗಿದು ಕಡೆದಾಗ ಬರುವ ಅಮೃತವೇ ಸಕಲಗುಣಪೂರ್ಣನಾದ ಶ್ರೀಕೃಷ್ಣನ ತತ್ತ್ವಜ್ಞಾನ ಎಂದು ವಾದಿರಾಜರು ರುಗ್ಮಿಣೀಶವಿಜಯದಲ್ಲಿ ಹೇಳಿದ್ದಾರೆ. ನಾಲ್ಕು ಅಧ್ಯಾಯದ ಬ್ರಹ್ಮಸೂತ್ರಗಳು ನಮ್ಮನ್ನು ಸಾಧನ ಪ್ರಪಂಚದಲ್ಲಿ ತೊಡಗಿಸಿ ಭಗವಂತನ ಕಡೆ ಸಾಗಿಸುವ ದಾರಿದೀಪವಾಗಿವೆ.

ಇಂತಹ ಸೂತ್ರಗಳಿಗೆ ಶ್ರೀಮಧ್ವಾಚಾರ್ಯರು ಅನುವ್ಯಾಖ್ಯಾನ, ಭಾಷ್ಯ, ನ್ಯಾಯವಿವರಣ ಮತ್ತು ಅಣುಭಾಷ್ಯಗಳೆಂಬ ನಾಲ್ಕು ಗ್ರಂಥಗಳನ್ನು ರಚಿಸಿ ಕೊಟ್ಟಿದ್ದಾರೆ. ಅದರಲ್ಲೂ ಶ್ರೀವೇದವ್ಯಾಸರಿಂದ 'ಕುರು ಸೂತ್ರಭಾಷ್ಯಂ' ಎಂದು ಆಜ್ಞೆ ಪಡೆದು ಸೂತ್ರಭಾಷ್ಯವನ್ನು ಶ್ರೀ ಮಧ್ವಾಚಾರ್ಯರು ರಚಿಸಿದ್ದಾರೆ. ಗೀತಾಭಾಷ್ಯವನ್ನು ತಮ್ಮ ಮೂಲಗುರುಗಳಾದ ಶ್ರೀ ವೇದವ್ಯಾಸರಿಗೆ ಅರ್ಪಿಸಿದರೆ, ಸೂತ್ರಭಾಷ್ಯವನ್ನು ತಮಗೆ ಪಾಠ ಹೇಳಿದ ಗುರುಗಳಿಗೆ ತಮ್ಮ ಪ್ರತಿರೂಪದಂತೆ ಅರ್ಪಿಸಿದರು ಎಂದು ಸುಮಧ್ವವಿಜಯದಲ್ಲಿ ಹೇಳಲಾಗಿದೆ– 'ರೂಪಮನ್ಯದಿವ ಧನ್ಯಮಾತ್ಮನಃ।' ಈ ಭಾಷ್ಯದ ಮೂಲಕ ತಮ್ಮ ವಿದ್ಯಾಗುರುಗಳ

ಅಜ್ಞಾನಾಂಧಕಾರವನ್ನು ದೂರಮಾಡಿ ಅವರಿಗೆ ತತ್ತ್ವಜ್ಞಾನಾಮೃತವನ್ನು ಅನುಗ್ರಹಿಸಿದರು. ಬ್ರಹ್ಮಸೂತ್ರಭಾಷ್ಯದ ಒಂದು ವರ್ಣವನ್ನು ಬರೆದರೂ ಗಂಗೆಯ ತಟದಲ್ಲಿ ದೇವಾಲಯ ನಿರ್ಮಿಸಿದ ಪುಣ್ಯವಿದೆ ಎಂದು ನಾರಾಯಣ ಪಂಡಿತಾಚಾರ್ಯರು ಹೇಳಿದ್ದಾರೆ.

**ಬ್ರಹ್ಮಸೂತ್ರ ಪರವಿದ್ಯೆ :** ಪರಾಪರವಿದ್ಯೆಗಳನ್ನು ಪರಿಚಯಿಸಿಕೊಡಲು ಹೊರಟ ಆಥರ್ವಣೋಪನಿಷತ್ತು 'ತತ್ರಾಪರಾ ಋಗ್ವೇದೋ ಯಜುರ್ವೇದಃ...' ಎಂಬುದಾಗಿ ಋಗ್ವೇದಾದಿಗಳನ್ನೆಲ್ಲಾ ಅಪರವಿದ್ಯೆಯನ್ನಾಗಿಯೇ ಪರಿಗಣಿಸಿ, 'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ' ಎಂಬುದಾಗಿ ಅಕ್ಷರ ಎನಿಸುವ ಭಗವಂತನ ಜ್ಞಾನಕ್ಕೆ ಸಾಧನವಾದುದೇ ಪರವಿದ್ಯೆ ಎಂದು ತಿಳಿಸಿದೆ.

ಬ್ರಹ್ಮಸೂತ್ರದಲ್ಲಿ ಹೇಳಿದ ಯುಕ್ತಿಗಳ ಅನುಸಂಧಾನವಿಲ್ಲದಾಗ ಆಪಾತತಃ ಕರ್ಮಪ್ರಕ್ರಿಯೆ ಮೊದಲಾದ ಇತರ ವಿಷಯಗಳನ್ನು ತಿಳಿಸುವ ವೇದ ಬ್ರಹ್ಮಸೂತ್ರದ ಹೊರತು ಪರವಿದ್ಯೆ ಎನಿಸಲಾರದು. ಸಕಲ ವೇದಾರ್ಥಗಳನ್ನು ನಿರ್ಣಯ ಮಾಡುವ ಬ್ರಹ್ಮಸೂತ್ರದ ಸಹಕಾರವಿದ್ದಾಗಷ್ಟೇ ಭಗವತ್ತತ್ತ್ವವನ್ನು ಪ್ರತಿಪಾದಿಸುವ ವೇದ ಪರವಿದ್ಯೆ ಎನಿಸುವುದು. ಆದುದರಿಂದ ವೇದ ಪರವಿದ್ಯೆ ಎನಿಸುವಂತೆ ಅದಕ್ಕೆ ಸಹಾಯಕವಾಗಿರುವ ಬ್ರಹ್ಮಸೂತ್ರವೂ ಪರವಿದ್ಯೆ ಎನಿಸುವುದು.

ಅಂತಹ ಬ್ರಹ್ಮಸೂತ್ರಭಾಷ್ಯದ ಪ್ರಥಮಾಧ್ಯಾಯದಲ್ಲಿ ವಿಷ್ಣುವು ಸಕಲ ಗುಣಪೂರ್ಣನೆಂದು ಸಮರ್ಥಿಸಲಾಗಿದೆ. ವೇದ ಉಪನಿಷತ್ತುಗಳಲ್ಲಿ ಬರುವ ಸಕಲಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುವ ಮೂಲಕ ವಿಷ್ಣು ಸಕಲ ಗುಣಗಳಿಂದಲೂ ಪೂರ್ಣನೆಂದು ಇಲ್ಲಿ ತೋರಿಸಿಕೊಡಲಾಗಿದೆ.

**ವೇದ ಪುರಾಣಗಳ ಸಮನ್ವಯ :** ಶ್ರೀಮಧ್ವಾಚಾರ್ಯರು ಸ್ಪಷ್ಟೀಕರಿಸುವಂತೆ ಶ್ರೀವಿಷ್ಣುವೇ ಸರ್ವೋತ್ತಮನೆಂದು ವೇದ ಪುರಾಣಗಳ ತಾತ್ಪರ್ಯಸಿದ್ಧವಾದ ಅರ್ಥ. ಅಲ್ಲಲ್ಲಿ ರುದ್ರ, ಹಿರಣ್ಯಗರ್ಭ ಮುಂತಾದವರು ಸರ್ವೋತ್ತಮರೆಂದು ಹೇಳಿದ್ದರೆ, ಆ ರುದ್ರಾದಿನಾಮಗಳು ಶ್ರೀವಿಷ್ಣುವಿಗೆ ಸೇರಿದವುಗಳೆಂಬ ಅಭಿಪ್ರಾಯದಲ್ಲಷ್ಟೇ. ವಿಷ್ಣುವನ್ನೇ ರುದ್ರ, ಇಂದ್ರ ಮುಂತಾದ ಶಬ್ದಗಳಿಂದ ವೇದ ಪುರಾಣಗಳಲ್ಲಿ ಕರೆಯಲಾಗಿದೆ. ವಿಷ್ಣುವಿನ ಭಕ್ತರೆಂದು ಬ್ರಹ್ಮ ರುದ್ರಾದಿಗಳನ್ನು ಕರೆದಿರುವ ವಾಕ್ಯಗಳು ದೇವತೆಗಳ ವರ್ಗದಲ್ಲಿ ಸೇರಿರುವ ಶ್ರೇಷ್ಠ ಜೀವರನ್ನೂ ಸಂಬಂಧಿಸಿ ಬಂದಿವೆ. ಹೀಗೆ ಶಿವ, ವಿಷ್ಣು ಮುಂತಾದವರು ಒಂದೇ, ಶಿವನೂ,

ವಿಷ್ಣುವೂ ಸರ್ವೋತ್ತಮನು ಎಂದು ಮುಂತಾದ ವಾಕ್ಯಗಳನ್ನೂ, ಶಿವ ರುದ್ರಾದಿಗಳು ವಿಷ್ಣುವಿನ ದಾಸರು ಎಂದಿರುವ ವಾಕ್ಯಗಳನ್ನೂ ಬೇರೆ ಬೇರೆ ಅರ್ಥದಲ್ಲಿ ಸಮನ್ವಯಗೊಳಿಸಿ ಬ್ರಹ್ಮ, ರುದ್ರಾದಿ ಸಕಲ ದೇವತಾಶಬ್ದದಿಂದ ಪ್ರತಿಪಾದ್ಯನಾದ ಶ್ರೀವಿಷ್ಣುವೇ ಸರ್ವೋತ್ತಮನೆಂದೂ, ಬ್ರಹ್ಮ, ರುದ್ರಾದಿ ದೇವತೆಗಳು ಅವನ ಅಧೀನರಾದ ದೇವತಾಜೀವರೆಂದೂ ನಾವು ತೀರ್ಮಾನಿಸಿಕೊಳ್ಳಬಹುದಾಗಿದೆ.

ಇಂತಹ ಬ್ರಹ್ಮಸೂತ್ರಗಳ ಅಧ್ಯಯನ ಅತ್ಯಂತ ಆವಶ್ಯಕವಾಗಿದ್ದು ಈ ಕನ್ನಡಾನುವಾದ ಎಲ್ಲರಿಂದಲೂ ಗ್ರಾಹ್ಯವಾಗಲಿ ಎಂದು ಶ್ರೀಕೃಷ್ಣನನ್ನು ಪ್ರಾರ್ಥಿಸುತ್ತೇವೆ.

22.07.2017
ಉಡುಪಿ

ಇತಿ ಶ್ರೀಮನ್ನಾರಾಯಣ ಸ್ಮರಣೆಗಳು
**ಶ್ರೀ ವಿಶ್ವೇಶತೀರ್ಥ ಶ್ರೀಪಾದರು**
ಪರ್ಯಾಯ ಶ್ರೀ ಪೇಜಾವರ ಅಧೋಕ್ಷಜ ಮಠ,
ಶ್ರೀಕೃಷ್ಣಮಠ, ಉಡುಪಿ

# ಓದುವ ಮುನ್ನ

ಬ್ರಹ್ಮಸೂತ್ರದ ಮೂರು ಮತ್ತು ನಾಲ್ಕನೆಯ ಅಧ್ಯಾಯಗಳು ಸಾಧನೆಯದೃಷ್ಟಿಯಿಂದ ಮಹತ್ವಪೂರ್ಣವಾದವುಗಳು. ಮೂರನೆಯ ಅಧ್ಯಾಯವು ಸಾಧನಾಧ್ಯಾಯ ಎಂದೇ ಪ್ರಸಿದ್ಧವಾಗಿದೆ. ಭಗವತ್ಪ್ರಾಪ್ತಿಗೆ ಬೇಕಾದ ವೈರಾಗ್ಯ, ಭಕ್ತಿ, ಉಪಾಸನೆಗಳನ್ನು ಈ ಅಧ್ಯಾಯದ ಮೂರು ಪಾದಗಳು ನಿರೂಪಿಸುತ್ತವೆ. ನಾಲ್ಕನೆಯ ಜ್ಞಾನಪಾದದಲ್ಲಿ ಅಪರೋಕ್ಷಜ್ಞಾನದ ಸಾಮರ್ಥ್ಯವನ್ನು ಹೇಳಲಾಗಿದೆ. ಆದ್ದರಿಂದ ಅದು ಜ್ಞಾನಪಾದ.

ನಾಲ್ಕನೆಯ ಅಧ್ಯಾಯ ಫಲಾಧ್ಯಾಯ. ಜ್ಞಾನದ ಫಲ, ಕರ್ಮಕ್ಷಯ. ಅಪರೋಕ್ಷಜ್ಞಾನ ಬಂದ ಕೂಡಲೇ ಸಂಚಿತಕರ್ಮವು ನಾಶವಾಗುತ್ತದೆ. ಮುಂದೆ ಜ್ಞಾನಿಯು ಮಾಡಿದ ದುಷ್ಕರ್ಮದಿಂದ ಪಾಪಲೇಪವಾಗುವುದಿಲ್ಲ. ಇದು ಜ್ಞಾನದ ಮೊದಲ ಫಲ. ಎರಡನೆಯ ಫಲ–ಶರೀರ ಮೋಕ್ಷ. ಜ್ಞಾನಿಯು ಪ್ರಾರಬ್ಧವನ್ನು ಅನುಭವಿಸಿದ ಮೇಲೆ ತನ್ನ ಚರಮಶರೀರವನ್ನು ಸ್ವೇಚ್ಛೆಯಿಂದಲೇ ತ್ಯಜಿಸುತ್ತಾನೆ. ಈ ಫಲವನ್ನು ಎರಡನೆಯ ಪಾದದಲ್ಲಿ ಹೇಳಲಾಗಿದೆ. ಜ್ಞಾನದ ಮೂರನೆಯ ಫಲ–ಅರ್ಚಿರಾದಿ ಮಾರ್ಗ. ಬ್ರಹ್ಮನಾಡಿಯ ಮೂಲಕ ಚರಮದೇಹದಿಂದ ಹೊರ ಬಂದ ಜ್ಞಾನಿಯು ಅರ್ಚಿರಾದಿಲೋಕಗಳ ಮೂಲಕ ಚತುರ್ಮುಖಬ್ರಹ್ಮದೇವರ ಅಥವಾ ಪರಮಾತ್ಮನ ಬಳಿಗೆ ಹೋಗುವ ಕ್ರಮವನ್ನು ಈ ಪಾದದಲ್ಲಿ ತಿಳಿಸಲಾಗಿದೆ. ನಾಲ್ಕನೆಯದು ಭೋಗಪಾದ. ಇಲ್ಲಿ, ಲಿಂಗದೇಹ ಮತ್ತು ಭಗವದಿಚ್ಛಾವರಣಗಳನ್ನು ಕಳೆದುಕೊಂಡ ಜ್ಞಾನಿಗಳು ಅನಂತಾಸನಾದಿಲೋಕಗಳಲ್ಲಿ ಆನಂದವನ್ನು ಅನುಭವಿಸುವ ಕ್ರಮವನ್ನು ತಿಳಿಸಲಾಗಿದೆ.

ಹೀಗೆ ಸಾಧನಾಧ್ಯಾಯದ (ಮೂರನೆಯ ಅಧ್ಯಾಯದ) ನಾಲ್ಕು ಪಾದಗಳು ಕ್ರಮವಾಗಿ–

(1) ವೈರಾಗ್ಯಪಾದ (2) ಭಕ್ತಿಪಾದ (3) ಉಪಾಸನಾಪಾದ (4) ಜ್ಞಾನಪಾದ

ಫಲಾಧ್ಯಾಯದ (ನಾಲ್ಕನೆಯ ಅಧ್ಯಾಯದ) ನಾಲ್ಕು ಪಾದಗಳು—

(1)ಕರ್ಮಕ್ಷಯಪಾದ (2)ಉತ್ಕ್ರಾಂತಿಪಾದ (3)ಮಾರ್ಗಪಾದ (4)ಭೋಗಪಾದ

ಈ ಪಾದಗಳಲ್ಲಿ ಕೇವಲ ನಿರ್ದಿಷ್ಟ ವಿಷಯಗಳ ನಿರೂಪಣೆ ಮಾತ್ರ ಇಲ್ಲ. ಹಾಗಿದ್ದಲ್ಲಿ ಈ ಸೂತ್ರಗಳು ಶ್ರುತ್ಯರ್ಥನಿರ್ಣಾಯಕಗಳು ಆಗಲಿಕ್ಕಿಲ್ಲ. ಇಲ್ಲಿರುವ ಒಂದೊಂದು ಅಧಿಕರಣಗಳಲ್ಲಿ ಶ್ರುತಿಗೆ ಯುಕ್ತಿಯಿಂದಲೋ ಶ್ರುತ್ಯಂತರದಿಂದಲೋ ವಿರೋಧ ಬಂದಾಗ ಆ ವಿರೋಧವನ್ನು ಶ್ರುತ್ಯುಕ್ತಯುಕ್ತಿಯಿಂದ ಪರಿಹರಿಸಿ ಶ್ರುತಿಯ ಅರ್ಥವನ್ನು ನಿರ್ಣಯಿಸಲಾಗಿದೆ. ಉದಾಹರಣೆಗೆ ಮೂರನೆಯ ಅಧ್ಯಾಯದ ಮೊದಲನೆಯ ಅಧಿಕರಣ 'ತದಂತರಾಧಿಕರಣ' ಅಲ್ಲಿಯ ಪೂರ್ವಪಕ್ಷ ಹೀಗಿದೆ— ಮೋಕ್ಷಕ್ಕಾಗಿ ಜ್ಞಾನ-ಭಕ್ತಿ-ವೈರಾಗ್ಯಾದಿಗಳ ಅಗತ್ಯವಿಲ್ಲ. ಮೋಕ್ಷ ಎಂದರೆ ಬಂಧದ ಬಿಡುಗಡೆ. ಪಂಚಭೂತಗಳ ಸಂಬಂಧವೇ ಬಂಧನ. ವ್ಯಕ್ತಿ ಸಾಯುವಾಗ ಸಹಜವಾಗಿ ಈ ಪಂಚಭೂತಗಳ ಸಂಬಂಧವು ಕಡಿದು ಹೋಗುತ್ತದೆ.

**ಭೂತಬಂಧಸ್ತು ಬಂಧಃ ಸ್ಯಾತ್ ಮುಕ್ತಿಸ್ತೇಭ್ಯೋ ವಿಮೋಚನಮ್ ॥** ಎಂದು ವರಾಹ ಪುರಾಣದಲ್ಲಿದೆ. ಸಾಯುವಾಗ ಈ ಬಂಧ ಸಹಜವಾಗಿಯೇ ಕಳೆಯುತ್ತದೆ. ಆದ್ದರಿಂದ ಆಧ್ಯಾತ್ಮಿಕ ಸಾಧನೆಗಳು ಬೇಕಾಗಿಲ್ಲ, ಎಂದು. ಈ ಪೂರ್ವಪಕ್ಷಕ್ಕೆ ಪ್ರಥಮಾಧಿಕರಣದಲ್ಲಿ ಕೊಟ್ಟ ಸಮಾಧಾನ ಹೀಗಿದೆ— ಜೀವನು ಮೋಕ್ಷಕ್ಕೆ ಹೋಗುವವರೆಗೂ ಪಂಚಭೂತಗಳ ಸಂಬಂಧವನ್ನು ಕಳೆದುಕೊಳ್ಳುವುದಿಲ್ಲ. ಅವನು ಸತ್ತಾಗ ಸ್ಥೂಲವಾದ ಈ ಪಾಂಚಭೌತಿಕದೇಹದ ಸಂಬಂಧವು ನಾಶವಾದರೂ ಪಂಚಭೂತಗಳಿಂದ ನಿರ್ಮಿತವಾದ, ಸೂಕ್ಷ್ಮವಾದ ದೇಹವು ಅವನಿಗೆ ಇದ್ದೇ ಇರುತ್ತದೆ. ಆ ದೇಹದಲ್ಲಿ ನೀರಿನ ಅಂಶ ಹೆಚ್ಚಾಗಿರುವುದರಿಂದ ಅದನ್ನು 'ಆಪಃ' ಎಂದೇ ಉಪನಿಷತ್ತು ಕರೆಯುತ್ತದೆ. ತಾನು ಮಾಡಿರುವ ಪುಣ್ಯಾಪಾಪಗಳಿಗೆ ಅನುಸಾರವಾಗಿ ಜೀವನು ಅದರ ಮೇಲೆ ಹೊಂದಿಕೆಯಾಗಿ ಪ್ರಾಣಿ-ಪಶು-ಪಕ್ಷಿ-ಮನುಷ್ಯರೂಪವಾದ ಸ್ಥೂಲದೇಹವನ್ನು ಪಡೆಯುತ್ತಾನೆ. ಹೀಗೆ ಸೂಕ್ಷ್ಮದೇಹ ಕಳಚುವವರೆಗೂ ಈ ಜೀವನ ಪ್ರಯಾಣ ನಡೆಯುತ್ತಲೇ ಇರುತ್ತದೆ. ಇದರಿಂದ ಬಿಡುಗಡೆ ಜೀವನ ಯತ್ನಯಕ್ಕೆ ಮೀರಿದ್ದು. ದೇವರೇ ಕೃಪೆ ತೋರಬೇಕು. ಅದಕ್ಕಾಗಿ ವೈರಾಗ್ಯ-ಭಕ್ತ್ಯಾದಿಗಳು ಬೇಕೇಬೇಕು. ಆದ್ದರಿಂದ 'ನಾನ್ಯಃ ಪಂಥಾಃ ಅಯನಾಯ ವಿದ್ಯತೇ' ಎಂದು ಪುರುಷಸೂಕ್ತದಲ್ಲಿ 'ಜ್ಞಾನವೇ ಮೋಕ್ಷಸಾಧನ' ಎಂದಿರುವುದು ಸರಿಯಾಗಿದೆ.

ಹೀಗೆ ಪ್ರತಿಯೊಂದು ಸೂತ್ರಗಳಲ್ಲಿ ಯುಕ್ತಿಯ ಮೂಲಕ ಶ್ರುತಿಯ ಅರ್ಥವನ್ನು ದೃಢಪಡಿಸಲಾಗಿದೆ.

## 13

**ಮಾಧ್ವ ಭಾಷ್ಯದ ವೈಶಿಷ್ಟ್ಯ**–ಶಾಂಕರ–ರಾಮಾನುಜಭಾಷ್ಯಗಳು ಜೊತೆಜೊತೆಯಾಗಿಯೇ ಹೋಗುತ್ತವೆ. ಎರಡೂ ಭಾಷ್ಯಗಳಲ್ಲಿ ಒಂದೇ ರೀತಿಯ ಚರ್ಚೆಯು ನಡೆಯುತ್ತದೆ. ಮೂಲಭೂತವಾದ ವಿಷಯಗಳು ಬಂದಾಗ ಮಾತ್ರ ಅವುಗಳಲ್ಲಿ ವಿಭಿನ್ನತೆ ಬರುತ್ತದೆ. ಆದರೆ, ಮಾಧ್ವಭಾಷ್ಯ ಬಹುತೇಕ ಎಲ್ಲಾ ಅಧಿಕರಣಗಳಲ್ಲೂ ಪೂರ್ವಭಾಷ್ಯಗಳಿಗಿಂತ ವಿಭಿನ್ನವಾದ ವಿಷಯಗಳನ್ನೇ ನಿರೂಪಿಸುತ್ತದೆ. ವಿಭಿನ್ನವಾಗಿಯೇ ಸೂತ್ರದ ಅರ್ಥವನ್ನು ಹೇಳುತ್ತದೆ. ಆ ಭಾಷ್ಯಗಳಲ್ಲಿ ಪೂರ್ವಪಕ್ಷಸೂತ್ರಗಳೆಂದು ಪರಿಗಣಿಸಲ್ಪಟ್ಟ ಅನೇಕ ಸೂತ್ರಗಳು ಮಾಧ್ವಭಾಷ್ಯದಲ್ಲಿ ಸಿದ್ಧಾಂತ ಸೂತ್ರಗಳು. ಇದಕ್ಕೊಂದು ಉದಾಹರಣೆ—

**ಅನಿಷ್ಟಾದಿಕಾರಿಣಾಮಪಿ ಚ ಶ್ರುತಮ್ ॥ (3-1-13)**

'ಇಷ್ಟ' ಎಂದರೆ ಯಾಗ. ಇಷ್ಟಾದಿ ಎಂದರೆ ಯಾಗಾದಿ ಸತ್ಕರ್ಮಗಳು. ಅವುಗಳನ್ನು ಆಚರಿಸಿದವರು 'ಇಷ್ಟಾದಿ–ಕಾರಿಗಳು'. ಅದನ್ನು ಮಾಡದವರು ಅಥವಾ ಅದಕ್ಕೆ ವಿರುದ್ಧವಾಗಿ ದುಷ್ಕರ್ಮವನ್ನು ಮಾಡುವವರು ಅನಿಷ್ಟಾದಿಕಾರಿಗಳು. ಅಂತಹವರಿಗೂ ''ಶ್ರುತಂ=ಶ್ರುತಿಯಲ್ಲಿ ಹೇಳಲ್ಪಟ್ಟಿದೆ''. ಏನೆಂದು ಹೇಳಲ್ಪಟ್ಟಿದೆ? ಇತರ ಇಬ್ಬರು ಭಾಷ್ಯಕಾರರು ವಿವರಿಸಿದರು– ''ಅವರಿಗೂ ಸತ್ಕರ್ಮಿಗಳಿಗೆ ಸಿಗುವ ಚಂದ್ರಲೋಕಪ್ರಾಪ್ತಿಯು ಹೇಳಲ್ಪಟ್ಟಿದೆ'' ಎಂದು. ಅದನ್ನು ಹೇಳುವ ಶ್ರುತಿ—

**''ಯೇ ವೈ ಕೇ ಚಾಸ್ಮಾಲ್ಲೋಕಾತ್ ಪ್ರಯಂತಿ**
**ಚಂದ್ರಮಸಮೇವ ತೇ ಗಚ್ಛಂತಿ॥''** (ಕೌಶೀತಕೀ)

ಈ ಲೋಕದಿಂದ ಹೋದವರೆಲ್ಲರೂ ಚಂದ್ರಲೋಕಕ್ಕೆ ಹೋಗುತ್ತಾರೆ, ಎಂದು ಕೌಶೀತಕೀ ಉಪನಿಷತ್ತಿನ ವಾಕ್ಯ ಹೇಳುತ್ತದೆ. ಇಲ್ಲಿ ಎಲ್ಲರೂ ಎಂದಿರುವುದರಿಂದ ಕೆಟ್ಟವರು ಒಳ್ಳೆಯವರು ಎಲ್ಲರೂ, ಎಂದರ್ಥ. ಶ್ರುತಿಗೆ ಹೀಗೆ ಅರ್ಥಮಾಡಿದಾಗ, ಸೂತ್ರದ 'ಶ್ರುತಂ' ಶಬ್ದಕ್ಕೆ ಸತ್ಕರ್ಮ ಮಾಡದವರಿಗೂ ಸದ್ಗತಿ, ಎಂದು ಅರ್ಥ ಮಾಡಲು ಆಸ್ಪದ ಸಿಗುತ್ತದೆ. ಹಾಗೆ ಅರ್ಥ ಮಾಡಿದಾಗ ಇದು ಪೂರ್ವಪಕ್ಷ ಸೂತ್ರವಾಗುತ್ತದೆ.

ಆದರೆ, ಕೆಟ್ಟವರಿಗೆ ದುರ್ಗತಿಯನ್ನು ಹೇಳುವ ಹತ್ತಾರುವಾಕ್ಯಗಳಿರುವಾಗ ಶ್ರುತಿ–ಸೂತ್ರಗಳಿಗೆ ಹೀಗರ್ಥ ಮಾಡಿ ಒಂದು ಸೂತ್ರವನ್ನು ಪೂರ್ವಪಕ್ಷದ ಗುಂಪಿಗೆ ತಳ್ಳುವುದು ಎಷ್ಟು ಸರಿ?

ಮಾಧ್ವ ಭಾಷ್ಯದಲ್ಲಿ, ಅನಿಷ್ಟಾದಿಕಾರಿಗಳಿಗೂ (ದುಷ್ಟರಿಗೂ) ಇಷ್ಟಾದಿಕಾರಿಗಳಂತೆ (ಸಜ್ಜನರಂತೆ) ಶ್ರುತಂ=ಗಮನಾಗಮನವು ಶ್ರುತ್ಯುಕ್ತವಾಗಿದೆ, ಎಂದರ್ಥ. ಕರ್ಮಿಗಳಿಗೆ ಸದ್ಗತಿಯಿಂದ ಗಮನಾಗಮನ, ದುಷ್ಕರ್ಮಿಗಳಿಗೆ ನರಕದಿಂದ ಗಮನಾಗಮನ. ಹೀಗೆ ಗಮಾನಾಗಮನದ ಕ್ಲೇಷ ಇಬ್ಬರಿಗೂ ಇದೆ, ಎಂದರ್ಥ. ಈಗ ಇದು ಸಿದ್ಧಾಂತ ಸೂತ್ರವಾಯಿತು!

**ಸೂತ್ರದ ಮಹತ್ವಕ್ಕೆ ಆದ್ಯತೆ**—ಇತರ ಭಾಷ್ಯಗಳಂತೆ ಸೂತ್ರದಲ್ಲಿ ಅನಗತ್ಯವಾದ ನಿರ್ಣಯವನ್ನು ಕೊಡುವ ಸೂತ್ರಗಳೂ ದ್ವೈತಭಾಷ್ಯದಂತೆ ಉತ್ಕೃಷ್ಟವಾದ ಅರ್ಥವನ್ನು ನಿರೂಪಿಸುತ್ತವೆ. ಇದಕ್ಕೆ ಒಂದು ನಿದರ್ಶನ—

**ಸ ಏವ ಕರ್ಮಾನುಸ್ಮೃತಿ–ಶಬ್ದ–ವಿಧಿಭ್ಯಃ ॥** (ಸೂ.3.2.9)

ಇತರ ಭಾಷ್ಯಗಳಲ್ಲಿ 'ಸ ಏವ' ಎಂದರೆ ಮಲಗಿದ್ದ ವ್ಯಕ್ತಿಯೇ, ಏಳುತ್ತಾನೆ. ಎದ್ದವನೂ ಮಲಗಿದ್ದವನೂ ಒಬ್ಬನೇ, ಬೇರೆ ಬೇರೆಯಲ್ಲ, ಎಂದರ್ಥ. ಸ್ವಪ್ನಾದಿ ಅವಸ್ಥಾತ್ರಯ ನಿರೂಪಣೆಯ ಸಂದರ್ಭದಲ್ಲಿ ಬಂದಿರುವ ಸೂತ್ರ ಇದು. ಮಲಗಿದವನು ಬೇರೆ, ಎದ್ದವನು ಬೇರೆ, ಎನ್ನುವ ಸಂದೇಹ ಬರುವ ಸಂದರ್ಭ ಇದ್ದಲ್ಲಿ ಅದನ್ನು ಸೂತ್ರಕಾರರು ನಿರಾಕರಿಸಬೇಕು. ಆದರೆ, ಅಂತಹ ಪರಿಕಲ್ಪನೆಯೇ ಯಾರಿಗೂ ಇರುವುದಿಲ್ಲ, ಅದರ ಪರಿಹಾರಕ್ಕಾಗಿ ವ್ಯಾಸರಂತಹ ಮಹಾತ್ಮರು ಸೂತ್ರವನ್ನು ರಚಿಸಿ ನಿರ್ಣಯವನ್ನು ಕೊಡಬೇಕೇ? ಅದರಲ್ಲೂ ಅವರು ಅದಕ್ಕೆ ಸೂತ್ರದಲ್ಲಿ ಕೊಟ್ಟ ಮೊದಲ ಕಾರಣ–ಕರ್ಮ. ಕರ್ಮ ಎಂದರೆ ಕೆಲಸ. ಮಲಗುವುದಕ್ಕಿಂತ ಮುಂಚೆ ವ್ಯಕ್ತಿಯು ಯಾವ ಕೆಲಸವನ್ನು ಅರ್ಧಕ್ಕೆ ನಿಲ್ಲಿಸಿದ್ದನೋ ಅದನ್ನು ಎದ್ದಮೇಲೆ ಪೂರ್ಣಗೊಳಿಸುತ್ತಾನೆ. ಆದ್ದರಿಂದ ಮಲಗಿದ್ದ ವ್ಯಕ್ತಿಯೇ ಮತ್ತೆ ಏಳುತ್ತಾನೆ. ಇದನ್ನು ಸೂತ್ರಕಾರರು ಹೇಳಬೇಕೇ?

ಮಾಧ್ವಭಾಷ್ಯದಲ್ಲಿ 'ಸ ಏವ' ಎಂದರೆ ಜಾಗ್ರದಾದಿ ಮೂರು ಅವಸ್ಥೆಗಳಿಗೆ ಪ್ರೇರಕನಾದವನು ಭಗವಂತನೇ, ಇತರರಲ್ಲ ಎಂದರ್ಥ. ಹೀಗೆ ಅವಸ್ಥಾತ್ರಯ ಪ್ರೇರಕತ್ವ ಮಹಿಮೆಯು ಭಗವಂತನಿಗೆ ಮೀಸಲಾದುದು, ಎಂದು ಹೇಳುವ ಮೂಲಕ ಭಗನ್ಮಾಹಾತ್ಮ್ಯವನ್ನು ನಿರೂಪಿಸಿ ಈ ಸೂತ್ರವು ಭಕ್ತಿಪಾದಕ್ಕೆ ಸಂಗತವಾಗಿದೆ.

ಕೆಲವು ಕಡೆ, ಇತರ ಭಾಷ್ಯಕಾರರು ನಿರೂಪಿಸಿರುವ ಅಧಿಕರಣಾರ್ಥಕ್ಕೂ ಮಾಧ್ವಭಾಷ್ಯದ ಅರ್ಥಕ್ಕೂ ಸಂಬಂಧವೇ ಇರುವುದಿಲ್ಲ. ಇದಕ್ಕೆ ಅನೇಕ ಉದಾಹರಣೆಗಳು ಸಿಗುತ್ತವೆ. ಮೂರನೆಯ ಅಧ್ಯಾಯದ ಎರಡನೆಯ ಪಾದದ

ಹದಿನಾರನೆಯ ಅಧಿಕರಣದಲ್ಲಿ (ಪರಾನಂದಾಧಿಕರಣ) ಬ್ರಹ್ಮನ ಆನಂದಾದಿ ಗುಣಗಳು ಲೋಕವಿಲಕ್ಷಣ ಎಂದು ಸಾಧಿಸಲಾಗಿದೆ—ಹೀಗೆ ದ್ವೈತ ಭಾಷ್ಯದ ವ್ಯಾಖ್ಯಾನ. ಈ ಅಧಿಕರಣದ ಮೊದಲ ಸೂತ್ರ **'ಪರಮತಃ ಸೇತೂನ್ಮಾನ ಸಂಬಂಧಭೇದವ್ಯಪದೇಶೇಭ್ಯಃ'** ಎಂದಿದೆ. 'ಪರಮತಃ' ಎಂಬ ಸೂತ್ರದ ಶಬ್ದಗಳಿಗೆ– ಅತಃ=ಲೌಕಿಕ ಆನಂದಕ್ಕಿಂತಲೂ ಬ್ರಹ್ಮಾನಂದವು ಪರಂ=ವಿಲಕ್ಷಣವಾದುದು–ಎಂದು ಅರ್ಥ. ಉಳಿದೆರಡು ಭಾಷ್ಯಗಳಲ್ಲಿ ಇದು ಪೂರ್ವಪಕ್ಷಸೂತ್ರ. ಅದ್ವೈತಭಾಷ್ಯದ ಅರ್ಥ– ಅತಃ=ಬ್ರಹ್ಮನಿಗಿಂತಲೂ ಪರಂ=ಭಿನ್ನವಾದುದು ಇದೆ, ಎಂದು ಈ ಸೂತ್ರದ ಪೂರ್ವಪಕ್ಷ. ಅದಕ್ಕೆ ಸೂತ್ರಕಾರರು ಕೊಟ್ಟ ಮೊದಲಕಾರಣ–'ಸೇತುವ್ಯಪದೇಶ' ಛಾಂದೋಗ್ಯದಲ್ಲಿ ''ಅಥ ಯ ಆತ್ಮಾ ಸ ಸೇತುಃ'' ಎಂದು ಆತ್ಮನನ್ನು ''ಸೇತು''ವನ್ನಾಗಿ ಹೇಳಲಾಗಿದೆ. 'ಸೇತು' ಎಂದರೆ, ಹರಿವ ನೀರನ್ನು ಹರಿಯದಂತೆ ತಡೆಹಿಡಿಯಬಲ್ಲ ಪಾತ್ರೆಪಗಡಿಗಳು. ಅವುಗಳು ಸದ್ವಿತೀಯಗಳು. ಅದರಂತೆ ಬ್ರಹ್ಮನೂ ಸದ್ವಿತೀಯ ಅಂದರೆ, ಬ್ರಹ್ಮಭಿನ್ನವಾದುದೂ ಇದೆ.

ರಾಮಾನುಜಭಾಷ್ಯಕ್ಕೆ ಈ ಅರ್ಥ ಸಮ್ಮತವಲ್ಲ. ಅವರು ಭೇದವಾದಿಗಳು, ವಿಶ್ವಸತ್ಯತ್ವ ಅವರ ಸಿದ್ಧಾಂತ. ಬ್ರಹ್ಮಭಿನ್ನವು ಇದೆ ಎಂದು ಪೂರ್ವಪಕ್ಷವಲ್ಲ, ಸಿದ್ಧಾಂತ. ಅದಕ್ಕಾಗಿ ಅವರ ಪೂರ್ವಪಕ್ಷ– ಅತಃ ಪರಂ=ಬ್ರಹ್ಮನಿಗಿಂತಲೂ ಶ್ರೇಷ್ಠವಾದ ಇನ್ನೊಂದು ತತ್ತ್ವ ಇದೆ. ಸೇತುವ್ಯಪದೇಶಾತ್, ಬ್ರಹ್ಮನು ಸೇತುವೆ, ಎಂದಿದೆ ಉಪನಿಷತ್ತು. ಸೇತುವೆ ನದಿಯನ್ನು ದಾಟಿ ಗಮ್ಯಸ್ಥಾನ ಸೇರಲು ಇರುವ ಒಂದು ಸಾಧನ. ಅದರಂತೆ ಸೇತುವೆನಿಸಿದ ಬ್ರಹ್ಮನು ಗಮ್ಯಾಂತರ ಪ್ರಾಪ್ತಿಗೆ ಸಾಧನ. ಅಲ್ಲಿಗೆ ಬ್ರಹ್ಮನಿಗಿಂತಲೂ ಉತ್ತಮವಾದ ಪ್ರಾಪ್ಯವಸ್ತು ಮತ್ತೊಂದಿದೆ, ಎಂದು ಈ ಸೂತ್ರದ ಪೂರ್ವಪಕ್ಷ.

ದ್ವೈತಸಿದ್ಧಾಂತದಲ್ಲಿ ಬ್ರಹ್ಮಾನಂದವನ್ನು ಲೋಕಧಾರಕವಾದ ಸೇತುವನ್ನಾಗಿ ಹೇಳಿರುವುದರಿಂದ ಅದು ಲೋಕವಿಲಕ್ಷಣ ಎಂದು ಸೂತ್ರದ ಅರ್ಥ.

**ಆ.** ಇದರಂತೆ, ''**ಪ್ರದಾನವದೇವ ತದುಕ್ತಂ**'' (3.3.44) ಎಂಬ ಸೂತ್ರದಲ್ಲಿ ವಿದ್ಯೆಫಲಿಸಲು ಗುರುಪ್ರಸಾದ ಆಗತ್ಯ ಎಂಬ ವಿಷಯವನ್ನು ದ್ವೈತಭಾಷ್ಯ ಹೇಳಿದರೆ ಇತರ ಭಾಷ್ಯಗಳು 'ಮೀಮಾಂಸಾ' ವಿಷಯವನ್ನು ಜೋಡಿಸಿ ಬೇರೆಯೇ ಅರ್ಥವನ್ನು ಹೇಳಿವೆ.

**ಇ. ಪೂರ್ವವಿಕಲ್ಪಃ ಪ್ರಕರಣಾತ್ ಸ್ಯಾತ್ ಕ್ರಿಯಾ ಮಾನಸವತ್ ॥**

(3.3.46) ಈ ಸೂತ್ರದಲ್ಲೂ ಗುರೂಪಸತ್ತಿಯ ವಿವರವನ್ನು ಮಾಧ್ವಭಾಷ್ಯ ನಿರೂಪಿಸಿದೆ. ಆದರೆ, ಇದು ಪರಭಾಷ್ಯಗಳಲ್ಲಿ ಪೂರ್ವಪಕ್ಷ ಸೂತ್ರ. ಅದೂ ಮೀಮಾಂಸಾನ್ಯಾಯದಿಂದ ಕೂಡಿರುವ ಅರ್ಥವು ಕ್ಷಿಷ್ಟವಾಗಿದೆ.

ಇಂತಹ ಸಂದರ್ಭದಲ್ಲಿ ಆಚಾರ್ಯರು ಎರಡೂ ಭಾಷ್ಯಗಳನ್ನು ಬಿಟ್ಟು ವ್ಯಾಸರ ಮಾರ್ಗದರ್ಶನದಂತೆ ಬೇರೆಯೇ ವ್ಯಾಖ್ಯಾನವನ್ನು ಮಾಡಿದ್ದಾರೆ. ಶಿಷ್ಯರಿಗೆ ಈ ವ್ಯಾಖ್ಯಾನವೇ ಸರಿ ಎಂದು ತಿಳಿಸಲು ಸೂತ್ರದಲ್ಲಿರುವ ಶಬ್ದಗಳೇ ಇರುವ ಆಧಾರಗಳನ್ನೂ ತೋರಿಸಿದ್ದಾರೆ—

**ಪೂರ್ವಸ್ಮಾತ್ ಉತ್ತಮೋ ಲಬ್ಧಃ ಸ್ವಯಮೇವ ಗುರುರ್ಯದಿ ।**
**ಗೃಹ್ಣೀಯಾದವಿಚಾರೇಣ, ವಿಕಲ್ಪಃ ಸಮಯೋರ್ಭವೇತ್ ॥**

ಬೃಹತ್ತಂತ್ರದ ಈ ವಚನದಲ್ಲಿ ಸೂತ್ರದ 'ಪೂರ್ವ' 'ವಿಕಲ್ಪ' ಶಬ್ದಗಳು ಬಂದಿರುವುದನ್ನು ಗಮನಿಸಬಹುದು. ಇದರಂತೆ, 'ಕ್ರಿಯಾಮಾನಸವತ್' ಎಂಬ ಸೂತ್ರಶಬ್ದದ ವಿವರಣೆಯೂ ಆಚಾರ್ಯರು ಹೇಳಿದಂತೆಯೇ ಮಹಾಸಂಹಿತೆಯಲ್ಲಿ ಬಂದಿದೆ—

**ಧ್ಯಾನಯೋಃ ಸಮಯೋರ್ಯದ್ವದ್ ವಿಕಲ್ಪಃ ಕಾಮತೋ ಭವೇತ್ ॥**
**ಏವಂ ಗುರೋರ್ದ್ವಿತೀಯಸ್ಯ ವಿಕಲ್ಪೋ ಗ್ರಹಣೇಽಪಿ ಚ ॥**

ಇಲ್ಲೆಲ್ಲ ಆಚಾರ್ಯರು ಸೂತ್ರಗಳಿಗೆ ಅರ್ಥಮಾಡುವ ಸಂದರ್ಭಗಳಲ್ಲಿ ಸೂತ್ರಗಳಲ್ಲಿರುವ ಶಬ್ದಗಳಿಂದ ಸೂಚಿತವಾಗಿರುವ ಶ್ರುತಿಗಳನ್ನು ಅನುಸಂಧಾನ ಮಾಡಿ ಅದಕ್ಕೆ ಅನುಗುಣವಾಗಿ ಅರ್ಥಮಾಡುತ್ತಾರೆ, ಎನ್ನುವುದನ್ನು ಗಮನಿಸಬೇಕು. ಶ್ರುತ್ಯರ್ಥನಿರ್ಣಾಯವಾದ ಸೂತ್ರಗಳಿಗೆ ಹೀಗೆ ಅರ್ಥ ಹೇಳುವುದು ಸೂಕ್ತವೂ ಆಗಿದೆ.

**''ಸಮನಾ ಚಾಸೃತ್ಯುಪಕ್ರಮಾದ್ ಅಮೃತತ್ವಂ ಚಾನುಪೋಷ್ಯ''** (4.2.7)

ಈ ಸೂತ್ರದಲ್ಲಿ ''ಸಮಾನಾ'' ಎಂದು ಇತರ ಭಾಷ್ಯಕಾರರ ಪಾಠ. ಆಚಾರ್ಯರ ಪಾಠ 'ಸಮನಾ'' ಎಂದು. ನಾ ಎಂದರೆ ಪರಮಪುರುಷ. ಅವನಿಗೆ ದೇಶ–ಕಾಲ–ವ್ಯಾಪ್ತಿಗಳಿಂದ ಸಮಳಾದ ಲಕ್ಷ್ಮೀದೇವಿ ''ಸಮನಾ''. ಹೀಗೆ ಈ ಅಧಿಕರಣವು ಲಕ್ಷ್ಮೀದೇವಿಯ ಕುರಿತ ನಿರ್ಣಯವನ್ನು ಹೇಳುತ್ತದೆ, ಎನ್ನುವುದನ್ನು ಸೂತ್ರಕಾರರು 'ಅಸೃತ್ಯುಪಕ್ರಮಾತ್' ಎಂಬ ಸೂತ್ರದ ಶಬ್ದದಿಂದ ಸೂಚಿಸಿದ್ದಾರೆ. ಆ ಶಬ್ದಘಟಿತ

ವಾದ ಶ್ರುತಿಯೊಂದಿದೆ–''ದ್ವಾ ವಾವ ಸೃತ್ಯನುಪಕ್ರಮೌ ಪ್ರಕೃತಿಶ್ಚ ಪರಮಶ್ಚ, ದ್ವಾವೇತೌ ನಿತ್ಯಮುಕ್ತೌ, ನಿತ್ಯೌ ಚ ಸರ್ವಗತೌ''

ಈ ಶ್ರುತಿಯಲ್ಲಿ ''ಸೃತ್ಯನುಪಕ್ರಮೌ'' ಎಂಬ ಶಬ್ದವಿದೆ. ಅದನ್ನೇ ಸೂತ್ರಕಾರರು 'ಅಸೃತ್ಯುಪಕ್ರಮಾ' (ಸಂಸಾರವಿಲ್ಲದವಳು) ಎಂದಿದ್ದಾರೆ, 'ನಿತ್ಯೌ, ಸರ್ವಗತೌ' ಎಂಬ ಶ್ರುತಿಗತಶಬ್ದಗಳ ಅರ್ಥವನ್ನು 'ಸಮನಾ' ಎಂಬ ಶಬ್ದದಿಂದ ತಿಳಿಸಿದ್ದಾರೆ. ಹೀಗೆ ಈ ಸೂತ್ರ ಲಕ್ಷ್ಮೀದೇವಿಗೆ ಸಂಬಂಧಿಸಿದ ವಿಶೇಷವನ್ನು ತಿಳಿಸುತ್ತಿದೆ, ಎಂದೇ ಸೂತ್ರಕಾರರಿಗೆ ಸಮ್ಮತ. ಆದರೆ, ಎರಡೂ ಭಾಷ್ಯಗಳೂ ಬೇರೆಯೇ ವಿಷಯಗಳನ್ನು ಈ ಸೂತ್ರದ ಭಾಷ್ಯದಲ್ಲಿ ನಿರೂಪಿಸಿವೆ. ಹೀಗೆ, ಆಚಾರ್ಯರಿಗೆ ಶ್ರುತಿ–ಸೂತ್ರಗಳ ಬಗ್ಗೆ ಇರುವ ಅದ್ಭುತ ಸ್ಫೂರ್ತಿಯನ್ನು ಇದೇ ಸೂತ್ರಭಾಷ್ಯದ ವಿವರಣೆಯಲ್ಲಿ ಶ್ರೀತ್ರಿವಿಕ್ರಮಪಂಡಿತರು ಮುಕ್ತಕಂಠದಿಂದ ಶ್ಲಾಘಿಸಿದ್ದಾರೆ—

**''ತಸ್ಯೈತಸ್ಯ ಸರ್ವಶ್ರುತಿ–ಇತಿಹಾಸ–ಪುರಾಣ–ತಂತ್ರಯುಕ್ತಿಮೂಲಂ ಪರಮಾತ್ಮತತ್ತ್ವವಿಷಯನಿರ್ಣಯಾತ್ಮಕಂ ಸೂತ್ರಜಾತಂ ಜಗತಿ ಸುರವರ ಪುರಸ್ಸರ–ಕವಿಜನ–ಮನಃಸರಸಿಜಸಮೂಹ–ಸಹಸ್ರಕಿರಣೇಭ್ಯಃ ಗುರುತಮಭಾಷ್ಯ ಭಟ್ಟಾರಕೇಭ್ಯಃ ಏಭ್ಯೋಽಪರಃ ಕೋ ವ್ಯಾಚಕ್ಷೀತ''॥**

(ಶ್ರುತಿ–ಪುರಾಣಾದಿ ಸಂವಾದಿಯಾದ ಸೂತ್ರಗಳನ್ನು ಶ್ರೀಮದಾಚಾರ್ಯರ ಹೊರತಾಗಿ ಇನ್ನಾರು ವ್ಯಾಖ್ಯಾನಿಸಲು ಸಾಧ್ಯ?–ಎಂದು ತಾತ್ಪರ್ಯ.)

ಕೆಲವೆಡೆ ಸುಲಭವಾದ ಸೂತ್ರಪದಗಳಿಗೆ ಮಾಧ್ವಭಾಷ್ಯದಲ್ಲಿ ಕ್ಲಿಷ್ಟವಾದ ಅರ್ಥವನ್ನು ಹೇಳಿರುವುದೂ ಇದೆ. **''ಅಂಬುವದಗ್ರಹಣಾತ್ತು ನ ತಥಾತ್ವಮ್''** (3.2.19). ಇದು ಎರಡೂ ಭಾಷ್ಯಗಳಲ್ಲಿ ಪೂರ್ವಪಕ್ಷಸೂತ್ರ. ಹಿಂದಿನ **''ಅತ ಏವ ಚೋಪಮಾ ಸೂರ್ಯಕಾದಿವತ್''** (3.2.18) ಎಂಬ ಸೂತ್ರದಲ್ಲಿ, ಒಬ್ಬನೇ ಸೂರ್ಯನ ಪ್ರತಿಬಿಂಬ ನೀರಿನಲ್ಲಿ ಅನೇಕವಾಗಿ ತೋರುವಂತೆ ಅದ್ವಿತೀಯ ಆತ್ಮನು ಅಂತಃಕರಣಾದಿ ಉಪಾಧಿಗಳಲ್ಲಿ ಪ್ರತಿಬಿಂಬಿತನಾಗಿ ಅನೇಕ ಜೀವಭಾವವನ್ನು ಹೊಂದುತ್ತಾನೆ, ಎಂದು ಅದ್ವೈತ ಭಾಷ್ಯದ ವಿವರಣೆ. ಅದರ ಮೇಲೆ ಈ ಸೂತ್ರದ ಆಕ್ಷೇಪ–ನೀರಿನ ದೃಷ್ಟಾಂತ ಸರಿಯಲ್ಲ. ಅಂಬುವತ್=ನೀರಿನಲ್ಲಿರುವಂತೆ ಅಗ್ರಹಣಾತ್=ಬ್ರಹ್ಮನ ಪ್ರತಿಬಿಂಬ ಗ್ರಹಣವಾಗಲಾರದು. ಸೂರ್ಯ ಮೂರ್ತ ರೂಪ. ಆತ್ಮ ಜ್ಞಾನಾತ್ಮಕನಾದ ಕಾರಣ ಅಮೂರ್ತ. ಅವನ ಪ್ರತಿಬಿಂಬ ಮೂಡಲು ಸಾಧ್ಯವಿಲ್ಲ, ಎಂದು.

ರಾಮಾನುಜಭಾಷ್ಯದಲ್ಲಿ, ಸೂರ್ಯನ ಪ್ರತಿಬಿಂಬ ದರ್ಪಣ–ಜಲಾದಿಗಳಲ್ಲಿ ಬಿದ್ದರೂ ಅಲ್ಲಿರುವ ದೋಷಸಂಸರ್ಗ ಸೂರ್ಯನಿಗಿಲ್ಲ. ಅದರಂತೆ ಪರಬ್ರಹ್ಮನಿಗೆ ಎಲ್ಲ ವಸ್ತುಗಳ ಸಂಪರ್ಕವಿದ್ದರೂ ಅವನಿಗೆ ಆ ವಸ್ತುಗಳ ದೋಷಗಳು ಅಂಟುವುದಿಲ್ಲ, ಎಂದು ಪೂರ್ವಸೂತ್ರದ ಅರ್ಥ. ಅದರ ಮೇಲೆ ಈ ಸೂತ್ರದ ಆಕ್ಷೇಪ–ಸೂರ್ಯ–ನೀರಿನ ದೃಷ್ಟಾಂತ ಸರಿಯಲ್ಲ. ಸೂರ್ಯನ ಪ್ರತಿಬಿಂಬ ಮಾತ್ರ ನೀರಿನಲ್ಲಿ ಇದೆ, ಸೂರ್ಯನೇ ಇಲ್ಲ. ಆದರೆ, ಬ್ರಹ್ಮನೇ ಎಲ್ಲ ವಸ್ತುಗಳ ಒಳಗೂ ಇದ್ದಾನೆ. ಅವನಿಗೆ ಆ ವಸ್ತುಗಳ ಧರ್ಮಗಳ ಸಂಗವಾಗಲೇಬೇಕು, ಎಂದು. ಹೀಗೆ, ಆ ಭಾಷ್ಯದಲ್ಲೂ ಇದು ಪೂರ್ವಪಕ್ಷಸೂತ್ರ.

ಆದರೆ, ದ್ವೈತಭಾಷ್ಯದಂತೆ 'ಭಕ್ತಿಸಹಿತ ಜ್ಞಾನವೇ ಮೋಕ್ಷಕ್ಕೆ ಕಾರಣ' ಎಂದು ಈ ಸೂತ್ರದ ಅರ್ಥ. ಆದರೆ, ಸೂತ್ರದಲ್ಲಿ ಭಕ್ತಿ ಪದವೂ ಇಲ್ಲ, ಜ್ಞಾನಪದವೂ ಇಲ್ಲ. ಅಂಬುವತ್ ಎಂದರೆ ನೀರಿನಂತಿರುವ, ಗ್ರಹಣ ಎಂದರೆ ಜ್ಞಾನ. ನೀರು 'ಸ್ನೇಹ' ಗುಣ ಯುಕ್ತವಾಗಿದೆ. ಅದರಂತೆ, ಜ್ಞಾನವೂ ಸ್ನೇಹ=ಭಕ್ತಿಯಿಂದ ಕೂಡಿರಬೇಕು. ಹೀಗೆ, 'ಅಂಬುವತ್ ಗ್ರಹಣವೇ' ಸ್ವರೂಪಾಭಿವ್ಯಕ್ತಿಗೆ ಕಾರಣ. ಅಂಬುವತ್ ಗ್ರಹಣವಿಲ್ಲದೆ (ಅಗ್ರಹಣಾತ್), ನ ತಥಾತ್ವಂ=ಸಾಧಕನ ಸ್ವರೂಪಾಭಿವ್ಯಕ್ತಿ ಇಲ್ಲ. ಇದನ್ನು ವಿಧಿಮುಖವಾಗಿ ಪಾದ್ಮಪುರಾಣದಲ್ಲಿ ಹೇಳಲಾಗಿದೆ—

**ಮಹಿತ್ವಬುದ್ಧಿರ್ಭಕ್ತಿಸ್ತು ಸ್ನೇಹಪೂರ್ವಾಭಿಧೀಯತೇ ।**
**ತಯೈವ ವ್ಯಜ್ಯತೇ ಸಮ್ಯಗ್ ಜೀವರೂಪಂ ಸುಖಾದಿಕಮ್ ॥**

ಈ ಸೂತ್ರದಲ್ಲಿ ಸ್ನೇಹ, ಎಂಬ ಸ್ಫುಟವಾದ ಶಬ್ದವನ್ನು ಪ್ರಯೋಗಿಸದಿರಲು ಪ್ರಮೇಯದ ಗೋಪ್ಯತೆ ಕಾರಣ, ಎಂದು ತ್ರಿವಿಕ್ರಮಪಂಡಿತರು ಹೇಳಿದ್ದಾರೆ. ವಾದಿರಾಜರು—'ಸ್ನೇಹವು' ನೀರಿನ ಸಹಜಗುಣವಾಗಿರುವಂತೆ ಸಾಧಕನ ಸಹಜಗುಣ ಭಕ್ತಿಯಾಗಿರಬೇಕು, ಎಂದು ಸೂಚಿಸಲು ''ಅಂಬುವತ್'' ಎಂಬ ಶಬ್ದವನ್ನು ಪ್ರಯೋಗಿಸಲಾಗಿದೆ. ಹೀಗೆ ಹೇಳಿ– ''ಅತಃ ಪ್ರೌಢಶಿರೋಮಣಿಃ ಸೂತ್ರಕಾರಃ'' ಎಂದು ಪ್ರಶಂಸೆ ಮಾಡಿದ್ದಾರೆ.

ಹೀಗೆ ಸೂತ್ರಕ್ಕೆ ಕ್ಲಿಷ್ಟವಾದ ಅರ್ಥವನ್ನು ಮಾಡಿದ್ದರೂ ಅದೇ ಸೂತ್ರಕಾರರಿಗೆ ಸಮ್ಮತ, ಎಂದು ಶಿಷ್ಯರಿಗೆ ಮನವರಿಕೆ ಮಾಡಿಕೊಡಲು ಆಚಾರ್ಯರು ಪುರಾಣಗಳ ಆಧಾರವನ್ನು ಕೊಡುತ್ತಾರೆ.

**ಅಪೂರ್ವಾರ್ಥಗಳು**—ಬ್ರಹ್ಮಸೂತ್ರಗಳ ರಚನೆಯ ಕಾಲ ತುಂಬಾ ಪ್ರಾಚೀನವಾದುದು. ದ್ವಾಪರದ ಕೊನೆಯಲ್ಲಿ ಅವತರಿಸಿದ ವೇದವ್ಯಾಸರು ಈ ಸೂತ್ರಗಳನ್ನು ರಚಿಸಿದ್ದಾರೆ. ಹೀಗಾಗಿ ಕೆಲವು ಅಪರಿಚಿತ ಶಬ್ದಗಳು ಅವುಗಳಲ್ಲಿ ಸೇರಿವೆ. ಅವುಗಳಿಗೆ ವ್ಯಾಸರಿಗೆ ಸಮ್ಮತವಾದ ಅರ್ಥವನ್ನೇ ಮಾಡಬೇಕು. ಉದಾಹರಣೆಗೆ—

1. **ಭಾವಶಮನವತ್**—(3.4.42) ''ಭಾವಶಮನವತ್=ಋಷಿಪದವ ದೇವ'' (ಭಾಷ್ಯ). ಭಾವ ಎಂದರೆ ಭಾವನೆ. ಉಪಲಕ್ಷಣಯಾ ಕ್ರಿಯೆ. ಶಮನ= ನಿಯಂತ್ರಣ. ಭಾವನೆ ಮತ್ತು ಕ್ರಿಯೆಗಳಲ್ಲಿ ನಿಯಂತ್ರಣವಿರುವ ಋಷಿಗಳು. 'ಭಾವೇ=ಚಿತ್ತೇ, ಚೇಷ್ಟಾಯಾಂ ಚ ಶಮನಾತ್–ಭಾವಶಮನಾಃ=ಋಷಯಃ।'' (ತ.ಪ್ರ.) ಇದು ಮಾಧ್ವಭಾಷ್ಯದ ಅರ್ಥ.

ಇತರ ಭಾಷ್ಯಗಳಲ್ಲಿ 'ಭಾವಮಶನವತ್' ಎಂದು ಸೂತ್ರಪಾಠ. ''ಭಾವಂ, ಅಶನವತ್'' ಎಂದು ಪದವಿಭಾಗ.

2. **ಮೌನವತ್**—ಮುನೇರ್ಭಾವಃ=ಮೌನಂ=ಯತಿತ್ವಂ. ಮೌನ ಎಂದರೆ ಯತಿಧರ್ಮ. **ಮೌನಂ ಚ ಅಮೌನಂ ಚ ನಿರ್ವಿದ್ಯ ಅಥ ಬ್ರಾಹ್ಮಣಃ** (ಬೃ.3.5.1). **''ತಸ್ಮಾದ್ ಬ್ರಾಹ್ಮಣಃ ಪಾಂಡಿತ್ಯಂ ನಿರ್ವಿದ್ಯ ಬಾಲ್ಯೇನ ತಿಷ್ಠಾಸೇತ್''** ಪಾಂಡಿತ್ಯ, ಬಾಲ್ಯ, ಮೌನ ಈ ಮೂರು ಅಪರೋಕ್ಷಜ್ಞಾನಕ್ಕೆ ಸಹಕಾರಿಗಳು. ಮೌನ ಎಂದರೆ ಸದಾ ಮನನಶೀಲತೆ. ''ಮೌನಂ, ಶ್ರವಣಪ್ರತಿಷ್ಠಾರ್ಥಾತ್ ಮನನಾತ್ ಅರ್ಥಾಂತರ ಭೂತಂ ಉಪಾಸನಾಲಂಬನಸ್ಯ ಪುನಃಪುನಃ ಸಂಶೀಲನಮ್। (ರಾ.ಭಾ.). ಯುಕ್ತ್ಯನುಸಂಧಾನ ಮನನ. ಅದಲ್ಲದೆ ಧ್ಯೇಯವಸ್ತುವನ್ನು ಮನಸ್ಸಿನಲ್ಲಿ ಮತ್ತೆ ಮತ್ತೆ ಮೆಲುಕು ಹಾಕುತ್ತಿರುವುದು ಮೌನ. ಇದು ಧ್ಯಾನಕ್ಕೆ ಸಹಕಾರಿಯಾದುದು. ''ಮುನೀನಾಮಪ್ಯಹಂ ವ್ಯಾಸಃ'' ಎಂಬಲ್ಲಿ ಇದೇ ಮೌನವು ವಿವಕ್ಷಿತ. ಈ ಅರ್ಥ ಮೂರೂ ಭಾಷ್ಯಗಳಿಗೆ ಸಮ್ಮತವಾಗಿದೆ.

3. **ಊಷ್ಮಾ**—ಸಾಮರ್ಥ್ಯವಿಶೇಷವುಳ್ಳವನು. (4.2.11) **ಊಷ್ಮನಾಮಾ ಸ ಭಗವಾನ್ ಸಮರ್ಥತ್ವಾತ್ ಪ್ರಕೀರ್ತಿತಃ॥** (ಐ.ಭಾ.) ಇಂತಹ ಸಾಮರ್ಥ್ಯ ದಿಂದಾಗಿಯೇ ಭಗವಂತ ಎಲ್ಲೆಡೆ ಇದ್ದರೂ ಅವನ ರೂಪ, ಗಂಧಾದಿಗುಣಗಳು ನಮ್ಮ ಇಂದ್ರಿಯಗಳಿಗೆ ಗೋಚರವಾಗುವುದಿಲ್ಲ. ಸೌಪರ್ಣಶ್ರುತಿ ಇದರ ಆಧಾರದಲ್ಲೇ ಚೇತನವರ್ಗವನ್ನು ''ಊಷ್ಮಾವತ್, ಅನೂಷ್ಮಾವತ್'' ಎಂದು ವರ್ಗೀಕರಿಸಿ ''ತತ್ರ

ಊಷ್ಮಾವತ್ ಪರಂ ಬ್ರಹ್ಮ'' ಮೊದಲನೆಯ ವರ್ಗದಲ್ಲಿ ಪರಮಾತ್ಮನಷ್ಟೇ ಸೇರುತ್ತಾನೆ, ಎಂದಿದೆ.

ಇತರ ಭಾಷ್ಯಗಳಲ್ಲಿ ಊಷ್ಮಾ ಎಂದರೆ ಬಿಸಿ. ಸೂಕ್ಷ್ಮಶರೀರದ ಬಿಸಿಯು ಈ ಸ್ಥೂಲಶರೀರದಲ್ಲಿ ಕಾಣುತ್ತದೆ. ಜೀವನು ಸೂಕ್ಷ್ಮಶರೀರದೊಂದಿಗೆ ಈ ದೇಹದಿಂದ ನಿರ್ಗಮಿಸಿದರೆ ದೇಹ ತಣ್ಣಗಾಗುತ್ತದೆ.

4. **ಅನುಬಂಧಾದಿಭ್ಯಃ** (3.3.51)— ''ಅನುಬಂಧಸ್ತು ಭಕ್ತಿಃ ಸ್ಯಾತ್'' ಎಂಬ ವಚನದಂತೆ ಅನುಬಂಧ ಎಂದರೆ ಭಕ್ತಿ. ಭಕ್ತಿ ಎಂಬ ಪ್ರಸಿದ್ಧಪದವನ್ನು ಬಿಟ್ಟು ಈ ಪದವನ್ನು ಪ್ರಯೋಗಿಸಲು ಕಾರಣ—ಅನು=ಸ್ವಾನುಸಾರೇಣ ಬಧ್ನಾತಿ= ಆರ್ಜಯತಿ ಹರಿಗುರು ಪ್ರಸಾದಂ ಇತಿ–ಅನುಬಂಧಃ। ಭಕ್ತಿಗೆ ಅನುಸಾರವಾಗಿ ಹರಿಗುರುಗಳ ಪ್ರಸಾದವು ಉಂಟಾಗುತ್ತದೆ. ದ್ವೇಷದಿಂದ ಪ್ರಸಾದವಾಗುವುದಿಲ್ಲ ಎಂದು ತಿಳಿಸುವುದಕ್ಕಾಗಿ ಈಪದವನ್ನು ಪ್ರಯೋಗಿಸಲಾಗಿದೆ. ಇತರ ಭಾಷ್ಯಗಳಲ್ಲಿ ಈ ಅರ್ಥವನ್ನು ಹೇಳಲಾಗಿಲ್ಲ.

ಹೀಗೆ, ಸಮಗ್ರ ಸೂತ್ರಗಳಿಗೆ ಅಪೂರ್ವವಾದ ಅರ್ಥವನ್ನು ಹೇಳಿರುವುದಲ್ಲದೆ ಸೂತ್ರದ ಶಬ್ದಗಳಿಗೂ ವಿಶೇಷವಾದ ಅರ್ಥಗಳನ್ನು ಮಾಧ್ವಭಾಷ್ಯದಲ್ಲಿ ಮಾಡಲಾಗಿದೆ. ಇದು ಆಚಾರ್ಯರಿಗೂ ಸೂತ್ರಕಾರರಾದ ವ್ಯಾಸರಿಗೂ ಸಾಕ್ಷಾತ್ ಸಂಬಂಧವೂ ಇದೆ, ಎನ್ನಲು ಆಧಾರಗಳು. ಅದನ್ನು ಆಚಾರ್ಯರು ಅನುವ್ಯಾಖ್ಯಾನದಲ್ಲಿ 'ವಿಶೇಷತೋ ಮೇ (ಗುರುಂ)' ಎಂದು ವ್ಯಾಸರು ತಮಗೆ ಸಾಕ್ಷಾತ್ ಗುರುಗಳು, ಎಂದಿದ್ದಾರೆ.

## ಕೆಲವು ಪ್ರಧಾನ ವಿಷಯಗಳು

1. **ಸಾರ್ವಜನಿಕ ಉಪದೇಶ**—ಬ್ರಹ್ಮವಿದ್ಯೆಯನ್ನು ವೇದೋಪನಿಷತ್ತುಗಳ ಪ್ರವಚನದ ಮೂಲಕ ಸಾರ್ವಜನಿಕವಾಗಿ ಹೇಳುವುದು ಶಾಸ್ತ್ರಸಮ್ಮತವೋ ಅಲ್ಲವೋ? ಎಂದು ಜಿಜ್ಞಾಸೆ. ಮಾಠರಶ್ರುತಿಯಲ್ಲಿ ಬ್ರಹ್ಮವಿದ್ಯೆಯನ್ನು ಹೆಚ್ಚು ಜಿಜ್ಞಾಸುಗಳಿಗೆ ಹೇಳಿದಷ್ಟು ಉಪದೇಶಕರಿಗೆ ಮಹತ್ವ ಬರುತ್ತದೆ, ಎನ್ನಲಾಗಿದೆ—

**''ಸ ಏತಾಂ ಮನುಷ್ಯೇಷು ವಿಬ್ರೂಯಾತ್ ।**
**ಯಥಾ ಹ ವೈ ಬ್ರೂಯಾತ್ ತಥಾತಥಾಧಿಕೋ ಭವತಿ ॥''**

ಸಾರ್ವಜನಿಕ ಸಭೆಗಳಲ್ಲಿ ಪ್ರವಚನ ಮಾಡಿದರೆ ಹೆಚ್ಚಿನವರಿಗೆ ವೈದಿಕ ಬ್ರಹ್ಮವಿದ್ಯೆಯು ತಲುಪುತ್ತದೆ. ಆದ್ದರಿಂದ ಸಾರ್ವಜನಿಕವಾಗಿ ವೇದ–ಉಪನಿಷತ್ತುಗಳ

ಪ್ರವಚನವು ಶ್ರುತಿ ಸಮ್ಮತವಾದುದು, ಎನಿಸಬಹುದು. ಆದರೆ, ಇದನ್ನು ''ಅನಾವಿಷ್ಕುರ್ವನ್ನನ್ವಯಾತ್'' (3.4.49) ಎಂಬ ಬ್ರಹ್ಮಸೂತ್ರದಲ್ಲಿ ನಿರಾಕರಿಸ ಲಾಗಿದೆ. ಅನಾವಿಷ್ಕುರ್ವನ್=ಗೋಪ್ಯವಾಗಿಯೇ, ಬ್ರಹ್ಮವಿದ್ಯೆಯನ್ನು ಹೇಳಬೇಕು. 'ಆವಿಷ್ಕಾರೇ ಅಯೋಗ್ಯಾನಾಮಪಿ ಸ್ವೀಕಾರಪ್ರಾಪ್ತಿತಃ। ತಚ್ಚ ನಿಷಿದ್ಧಮ್'' (ಭಾಷ್ಯ)

**''ಗೋಪಾಯ ಮಾಂ ಶೇವಧಿಸ್ತೇಹಮಸ್ಮಿ''**

ವಾಯುದೇವರ ಮುಂದೆ ವಿದ್ಯಾಭಿಮಾನಿ ದೇವತೆಯ ಪ್ರಾರ್ಥನೆ ಹೀಗೆ–''ನಾನು ನಿನ್ನ ನಿಧಿ. ಅಯೋಗ್ಯರಿಗೆ ಸಿಗದಂತೆ ನನ್ನನ್ನು ರಕ್ಷಿಸು'' ಎಂದು. ಹೀಗೆ, ಶ್ರುತಿ–ಸೂತ್ರಗಳು ಹೇಳುವಂತೆ ಬ್ರಹ್ಮವಿದ್ಯೆಯನ್ನು ಸಾರ್ವಜನಿಕವಾಗಿ ಹೇಳಬಾರದು. ಶ್ರೀರಾಘವೇಂದ್ರತೀರ್ಥರು ಭಾವದೀಪದಲ್ಲಿ ಇದನ್ನು ಸ್ಪಷ್ಟಪಡಿಸಿ ದ್ದಾರೆ—

**''ಏತೇನ ಸಭಾಚತ್ವಾರಾದೌ ಸ್ಥಿತ್ವಾ ಉಪದೇಶೇಽಪಿ ಅಯೋಗ್ಯಾನಾಂ 'ಸರ್ವಥಾಪಿ ತು ತ ಏವ' (ಬ್ರ.ಸೂ.3.4.34) ಇತಿ ಅನ್ಯತ್ರೋಕ್ತದಿಶಾ ಜ್ಞಾನಪ್ರಾಪ್ತಿರೇವ ನ ಸೇತ್ಸ್ಯತಿ ಇತಿ ಪ್ರತ್ಯುಕ್ತಮ್। ತೇಭ್ಯಃ ಕಥನಸ್ಯೈವ ನಿಂದಿತತ್ವಾತ್''**

ಸಭೆ–ಸಮಾರಂಭಗಳಲ್ಲಿ ಬ್ರಹ್ಮೋಪದೇಶವನ್ನು ಮಾಡಿದರೂ ''ಸರ್ವಥಾಪಿ'' ಎಂಬ ಸೂತ್ರದಲ್ಲಿ ಹೇಳಿರುವಂತೆ ಅಯೋಗ್ಯರಿಗೆ ಜ್ಞಾನವೇ ಬರುವುದಿಲ್ಲವಾದ ಕಾರಣ ಸಾರ್ವಜನಿಕವಾಗಿ ಉಪದೇಶ ನೀಡಬಹುದು, ಎನ್ನುವುದು ಸರಿಯಲ್ಲ. ಅರ್ಥವಾಗಲಿ ಬಿಡಲಿ, ಅಯೋಗ್ಯರಿಗೆ ಉಪದೇಶವೇ ನಿಷಿದ್ಧ. ಬ್ರಹ್ಮದೇವರು ಅಯೋಗ್ಯನಾದ ವಿರೋಚನನಿಗೆ ಉಪದೇಶ ನೀಡಿರಬಹುದು. ಅದು ನಮಗೆ ನಿದರ್ಶನವಲ್ಲ. ಬ್ರಹ್ಮದೇವರು ಅಪರೋಕ್ಷಜ್ಞಾನಿಗಳಾದುದರಿಂದ ಅವರಿಗೆ ಪಾಪಲೇಪವಿಲ್ಲ.

ಆದ್ದರಿಂದ ಸಾರ್ವಜನಿಕವಾಗಿ ಬ್ರಹ್ಮೋಪದೇಶವು ಶ್ರುತಿ–ಸೂತ್ರಗಳಲ್ಲಿ ನಿಷಿದ್ಧವಾಗಿದೆ.

**ಬಿಂಬದರ್ಶನ ಅನಿಯತ**—ಭಗವಂತನ ಅಪರೋಕ್ಷಜ್ಞಾನವು ಮೋಕ್ಷ ಸಾಧನ. ಆದರೆ ಆ ಅಪರೋಕ್ಷ ಬಿಂಬಾಪರೋಕ್ಷವೇ ಆಗಿರಬೇಕೆಂಬ ನಿರ್ಬಂಧವಿಲ್ಲ. ಬ್ರಹ್ಮಸೂತ್ರದ ಸಾಮಾನ್ಯಾಧಿಕರಣದಲ್ಲಿ (3.3.53) ಸಾಮಾನ್ಯದರ್ಶನದಿಂದ

ಮೋಕ್ಷವಿಲ್ಲ, ಎಂದಿದೆ. ಅದನ್ನು ಭಾಷ್ಯದಲ್ಲಿ—'ನ ಸಾಮಾನ್ಯದರ್ಶನಮಾತ್ರೇಣ ಮುಕ್ತಿಃ'' ಎಂದು ವ್ಯಾಖ್ಯಾನಿಸಿ ಅದಕ್ಕೆ ನಾರಾಯಣತಂತ್ರದ ಆಧಾರವನ್ನು ಕೊಡಲಾಗಿದೆ—

**ಸಾಮಾನ್ಯದರ್ಶನಾಲ್ಲೋಕಾಃ ಮುಕ್ತಿರ್ಯೋಗ್ಯಾತ್ಮದರ್ಶನಾತ್ ||**

ಎಂದು. ಈ ಸಂದರ್ಭದ ಭಾಷ್ಯದಲ್ಲಿ ಕೊಟ್ಟಿರುವ ಇಂತಹ ಮೂರು ಪ್ರಮಾಣ ಗಳಲ್ಲೂ 'ಯೋಗ್ಯಾತ್ಮದರ್ಶನ' ಎಂದಿಷ್ಟೇ ಇದೆ. ಆದರೆ, ತತ್ತ್ವಪ್ರಕಾಶಿಕಾದಲ್ಲಿ ''ಕಿಂ ನಾಮ ಬಿಂಬದರ್ಶನಾದೇವ'' ಎಂದು ಬಿಂಬದರ್ಶನವೇ ಮೋಕ್ಷಕಾರಣ ಎಂದು ಹೇಳಿ ಸ್ಪಷ್ಟವಾದ ಶ್ರುತಿಯನ್ನು ಉದಾಹರಿಸಲಾಗಿದೆ—

**''ಸಮೋಽಪಿ ಭಗವಾನ್ ಸ್ವಬಿಂಬದರ್ಶನೇ ಏವೈನಂ ವಿಮೋಚಯತಿ''**

ಆದರೆ, ರಾಯರು ಭಾವದೀಪದಲ್ಲಿ ತತ್ತ್ವಪ್ರಕಾಶಿಕಾವಾಕ್ಯದ ಅಭಿಪ್ರಾಯ ವನ್ನು ಹೀಗೆ ವ್ಯಾಖ್ಯಾನಿಸಿದ್ದಾರೆ—

**''ಬಿಂಬಶಬ್ದೋಽತ್ರ ಸ್ವಯೋಗ್ಯಾತ್ಮಪರಃ। 'ಮುಕ್ತಿರ್ಯೋಗ್ಯಾತ್ಮ ದರ್ಶನಾತ್' ಇತ್ಯುಕ್ತೇಃ''**

'ತತ್ತ್ವಪ್ರಕಾಶಿಕಾದಲ್ಲಿರುವ ಬಿಂಬಶಬ್ದಕ್ಕೆ ಹೃದಯಸ್ಥ ಬಿಂಬರೂಪ, ಎಂದು ಅರ್ಥವಲ್ಲ. ಮೋಕ್ಷಯೋಗ್ಯರಾದ ಜೀವರಿಗೆ ಯೋಗ್ಯವಾದ ರೂಪ' ಎಂದಿಷ್ಟೇ ಅರ್ಥ. ಇದು ರಾಯರ ಅಭಿಪ್ರಾಯ. ಹೀಗೆ ಸ್ವಾಭಿಪ್ರಾಯವನ್ನು ತಿಳಿಸಿ ರಾಯರು 'ಕೆಲವರು ಬಿಂಬದರ್ಶನದಿಂದಲೇ ಮೋಕ್ಷವೆನ್ನುತ್ತಾರೆ' ಎಂದು ಇತರರ ಅಭಿಪ್ರಾಯವನ್ನು ತಿಳಿಸಿದ್ದಾರೆ.

ಭಾವಬೋಧಕಾರರದೂ ಇದೇ ಅಭಿಪ್ರಾಯ. ಅಲ್ಲಿ ''ಬಿಂಬದರ್ಶನಾ ದೇವ'' ಎಂದು ತತ್ತ್ವಪ್ರಕಾಶಿಕಾದ ಪದವನ್ನು ಉಲ್ಲೇಖಿಸಿ ಹೀಗೆ ಹೇಳಲಾಗಿದೆ— **ನಾಯಂ ನಿಯಮಃ ಸರ್ವೇಷಾಂ। ಕಿಂತು ಯೇ ಬಿಂಬದರ್ಶನಯೋಗ್ಯಾಃ ಋಷ್ಯಾದಯಃ ತೇಷಾಮೇವ। ಸರ್ವೇಷಾಂ ಬಿಂಬದರ್ಶನಾಯೋಗ್ಯತ್ವಾತ್। ಅನ್ಯಥಾ, 'ದೃಷ್ಟ್ಯೈವ ಹ್ಯವತಾರಾಣಾಂ' ಇತಿ ಪ್ರಾಗುಕ್ತವಿರೋಧಾತ್। ಯಥೋಕ್ತಂ ಕಾಠಕಭಾಷ್ಯೇ—**

**ಪ್ರಾದುರ್ಭಾವಾನ್ ಋತೇ ವಿಷ್ಣುಂ ಇಂದ್ರಿಯೈರ್ನೈವ ಪಶ್ಯತಿ ||**
**ಪ್ರಾದುರ್ಭಾವಾನಪಿ ಯದಾ ಜ್ಞಾನದೃಷ್ಟ್ಯೈವ ಪಶ್ಯತಿ।**

**ತದೈವ ಮುಚ್ಯತೇ ಯೋಗೀ ನ ದುಷ್ಟೈರಿಂದ್ರಿಯೈಃ ಕ್ವಚಿತ್ ॥**

ಹೀಗೆ ಭಾವಬೋಧಕಾರರೂ ಬಿಂಬದರ್ಶನ ಅನಿವಾರ್ಯವಲ್ಲ, ಎಂದೇ ಅಭಿಪ್ರಾಯಪಟ್ಟಿದ್ದಾರೆ.

ವಾದಿರಾಜರು ಮಾತ್ರ ''**ವಿಶೇಷಂ ಚ ದರ್ಶಯತಿ ॥**'' (4.3.16) ಎಂಬ ಸೂತ್ರದ ತತ್ತ್ವಪ್ರಕಾಶಿಕಾ ವ್ಯಾಖ್ಯಾನದಲ್ಲಿ ''ಮಾನುಷಾ ಏವ ಬಹಿಃಪ್ರಕಾಶಾಃ'' ಎನ್ನುವ ಭಾಷ್ಯೋದಾಹೃತವಾದ ಚತುರ್ವೇದಶಿಖಾ ಪ್ರಮಾಣವಾಕ್ಯವನ್ನು ಹೀಗೆ ವಿವರಿಸಿದ್ದಾರೆ— **'ಅಂತರೇವ ಧ್ಯಾನೇ ಸರ್ವತ್ರ ಧ್ಯಾನೇ ಚ ಶಕ್ತ್ಯಭಾವಾತ್ ಸ್ವದೃಗ್ಗೋಚರ- ಪ್ರತಿಮಾಯಾಂ ಧ್ಯಾತ್ವಾ ತತ್ರೈವ ಸ್ವಬಿಂಬಭೂತಪರಮಾತ್ಮಾನಂ ಪಶ್ಯಂತೀತಿ ಭಾವಃ ।**'' ಹೃದಯದ ಒಳಗೆ ಧ್ಯಾನಿಸಲು (ಋಷಿಗಳಂತೆ) ಹಾಗೂ ಸರ್ವತ್ರ ಧ್ಯಾನಿಸಲು (ದೇವತೆಗಳಂತೆ) ಅಶಕ್ತರಾದವರು ತಮಗೆ ಕಾಣುವ ಪ್ರತಿಮೆಗಳಲ್ಲೇ ಧ್ಯಾನಿಸಿ ಅಲ್ಲಿ ತಮ್ಮ ಬಿಂಬದರ್ಶನವನ್ನು ಪಡೆಯುತ್ತಾರೆ, ಎಂದು ವಾದಿರಾಜರ ಅಭಿಪ್ರಾಯ.

ಇದರಂತೆ ವಾದಿರಾಜರು ಹೇಳಿರುವ ಇನ್ನೊಂದು ವಿಶೇಷ— ಉತ್ತಮ ಜೀವರಿಗೆ ವಿರಜಾಸ್ನಾನದಿಂದ ಲಿಂಗಭಂಗ. ವಿರಜಾಸ್ನಾನವಿಲ್ಲದವರ ಲಿಂಗದೇಹದ ಭಂಗವು ಪ್ರಾರಬ್ಧಕರ್ಮನಾಶವಾದ ಕೂಡಲೇ, ಹಾವು ಪೊರೆಬಿಟ್ಟಂತೆ, ಸ್ವಾಭಾವಿಕವಾಗಿಯೇ ಆಗುತ್ತದೆ— **ವಿರಜಾನದ್ಯವಗಾಹ- ರಹಿತಾನಾಮ್ ಅಧಮ ಜೀವಾನಾಂ ಪ್ರಾರಬ್ಧಕರ್ಮಾವಸಾನೇ ಸತಿ ಲಿಂಗದೇಹಸ್ತು ಸ್ವಪರಿಪಾಕ ದಶಯಾಮ್ ಅಹೇಸ್ತ್ವಗಿವ ಸ್ವಸ್ವಸಾಧನಪೂರ್ತೌ ಸ್ವತ ಏವ ನಿವರ್ತತೇ, ಇತಿ ವಿವೇಕೋ ದ್ರಷ್ಟವ್ಯಃ ।**''

ಇದರಿಂದ, ನಿತ್ಯಸಂಸಾರಿಗಳ ಲಿಂಗದೇಹಭಂಗ ಹೇಗೆ? ಎಂಬ ಸಮಸ್ಯೆಯೂ ಪರಿಹಾರವಾಗುತ್ತದೆ.

**ಅಂತ್ಯಕಾಲದ ಸ್ಮರಣೆ—** ಯಂ ಯಂ ವಾಪಿ ಸ್ಮರನ್ ಭಾವಂ
ತ್ಯಜಂತ್ಯಂತೇ ಕಲೇವರಮ್ ॥
ತಂ ತಮೇವೈತಿ ಕೌಂತೇಯ ॥

ಎಂದು ಗೀತೆಯಲ್ಲಿ, ಶರೀರ ತ್ಯಾಗಕಾಲದಲ್ಲಿ ಬರುವ ಸ್ಮರಣೆಗೆ ಅನುಸಾರವಾಗಿ ಮುಂದಿನ ಜನ್ಮ ಬರುತ್ತದೆ, ಎನ್ನಲಾಗಿದೆ. ಆದರೆ, ಇಂತಹ ಸ್ಮರಣೆ ನಮ್ಮ ಅಧೀನ ದಲ್ಲಿರುವುದಿಲ್ಲ. ಅದು ಕರ್ಮ ಮತ್ತು ಈಶಾಧೀನವಾದುದು. ಅಪರೋಕ್ಷಜ್ಞಾನಿಗಳು

ತಮ್ಮ ಗುರುಗಳಿಂದ, ದೇಹದಿಂದ ಹೊರಹೋಗುವ ನಾಡಿಯ ವಿವರವನ್ನೂ ಮುಂದಿನ ಮೋಕ್ಷದ ಅರ್ಚಿರಾದಿ ಮಾರ್ಗಗಳ ವಿವರವನ್ನೂ ಕೇಳಿ ತಿಳಿದಿರುತ್ತಾರೆ. ಆದರೂ ಪ್ರಾರಬ್ಧಕರ್ಮ ಮುಗಿಯುವವರೆಗೆ ಎಷ್ಟು ಮರಣಗಳು ಬಂದರೂ ಅಂತ್ಯಕಾಲದಲ್ಲಿ ಅದು ಸ್ಮರಣೆಗೆ ಬರುವುದಿಲ್ಲ. ಪ್ರಾರಬ್ಧಕರ್ಮ ತೀರಿದಾಗ ಸುಷುಮ್ನಾ ನಾಡಿಯ ಅಗ್ರಭಾಗವು ಪ್ರಜ್ವಲಿಸುತ್ತದೆ, ಯೋಗಿಗಳಿಗೆ ಮಾರ್ಗದ ಸ್ಮರಣೆ ಬರುತ್ತದೆ. ಮತ್ತೆ ತಿರುಗಿ ಬರದಂತೆ ಆ ದ್ವಾರದಲ್ಲಿ ಯೋಗಿಗಳು ಪ್ರಯಾಣಿಸುತ್ತಾರೆ. ಅಂತ್ಯ ಮರಣಕ್ಕಿಂತ ಮೊದಲಿನ ಮರಣಕಾಲದಲ್ಲಿ ಅವರ ಪ್ರಾರಬ್ಧಾನುಸಾರವಾಗಿಯೇ ಮುಂದಿನ ಯೋನಿಯು ಸ್ಮರಣೆಗೆ ಬರುತ್ತದೆ. ಆ ಸ್ಮರಣೆ ಜ್ಞಾನಿಗಳ ಕೈಮೀರಿದ ಸ್ಥಿತಿಯಾಗಿದ್ದು ಕರ್ಮಾಧೀನವಾಗಿರುತ್ತದೆ—

**ಜ್ಞಾನಿನಾಂ ಕರ್ಮಯುಕ್ತಾನಾಂ ಕಾಯತ್ಯಾಗಕ್ಷಣೋ ಯದಾ ।**
**ವಿಷ್ಣುಮಾಯಾ ತದಾ ತೇಷಾಂ ಮನೋ ಬಾಹ್ಯಂ ಕರೋತಿ ಹಿ ॥**

**'ಕರ್ಮಾಣ್ಯಪಿ ಹಿ ಜನ್ಮಾಂತರೋಪಭೋಗ್ಯಂ ಫಲಮಾರಭಮಾಣಾನಿ ತದನು ರೂಪಂ ಭಾವನಾವಿಜ್ಞಾನಂ ಪ್ರಾಯಣಕಾಲೇ ಆಕ್ಷಿಪಂತಿ''**

ಎಂದು ಶಾಂಕರಭಾಷ್ಯದಲ್ಲಿ ಜ್ಞಾನಿಗಳಲ್ಲವದವರ ಅಂತ್ಯಕಾಲದಲ್ಲೂ ಕರ್ಮಾನುಸಾರವಾಗಿಯೇ ಸ್ಮರಣೆ ಬರುತ್ತದೆ, ಎನ್ನಲಾಗಿದೆ.(4.1.12)

**ಪಾಂಡವರಿಗೆ ವನವಾಸ ಪ್ರಾರಬ್ಧಫಲ**—''ತದಧಿಗಮೇ ಉತ್ತರಪೂರ್ವಾಘಯೋಃ ಅಶ್ಲೇಷವಿನಾಶೌ'' ಬ್ರಹ್ಮಾಪರೋಕ್ಷವಾದಾಗ ಸಂಚಿತಪುಣ್ಯಪಾಪಗಳು ನಶಿಸುತ್ತವೆ. ಮುಂದೆ ಮಾಡುವ ಕರ್ಮಗಳ ಲೇಪವಾಗುವುದಿಲ್ಲ. ''**ಅತೋಽನ್ಯದಪೀತ್ಯೇಕೇಷಾಮುಭಯೋಃ ॥** (4.1.17) ''ಸುಹೃದಃ ಸಾಧು ಕೃತ್ಯಾಂ ದ್ವಿಷಂತಃ ಪಾಪಕೃತ್ಯಾಂ'' ಎಂದು ಪ್ರಮಾಣ ಹೇಳುವಂತೆ ಸಂಚಿತ–ಪ್ರಾರಬ್ಧ ಪುಣ್ಯಗಳು ಸ್ನೇಹಿತರಿಗೂ ಪಾಪಗಳು ಶತ್ರುಗಳಿಗೂ ಸೇರುತ್ತವೆ. ತತ್ತ್ವಪ್ರದೀಪದಲ್ಲಿ ಇನ್ನೂ ಒಂದು ವಿಶೇಷವನ್ನು ಹೇಳಲಾಗಿದೆ– ''**ಅಭೀಷ್ಟಂ ಚೇತ್ ಅನಾರಬ್ಧಮಪಿ ಭುಕ್ತ್ವಾ ಕ್ಷಪ್ಯತೇ । ಆರಬ್ಧಂ ಚೇದನಭೀಷ್ಟಮಪಿ ತಥೈವ ಕ್ಷಪ್ಯತೇ**'' ಅನಾರಬ್ಧಪುಣ್ಯಗಳೂ ಅಭೀಷ್ಟಫಲಕಗಳಾದರೆ ಅವುಗಳ ಭೋಗ ಜ್ಞಾನಿಗಿದೆ. ಆದರೆ, ಪ್ರಾರಬ್ಧ ಅವನಿಗೆ ಅನಭಿಪ್ರೇತವಾದರೂ ಭೋಗಿಸಿಯೇ ನಾಶವಾಗಬೇಕು. ವಾದಿರಾಜರು '**ಅಹೀನಸುಖದಾಯಕಂ ಕಾಮ್ಯಮಪಿ ಕರ್ಮ ಪುನಃ ಶ್ಲೈಷ್ಮ್ಯಾಪಾದಕತ್ವಾತ್ ಅನುಮನ್ಯತೇ ಏವ**—ಜ್ಞಾನಿಗಳು ಜ್ಞಾನೋತ್ತರದಲ್ಲಿ

ಹೀನವಲ್ಲದ ಸುಖದ ಉದ್ದೇಶದಿಂದ ಮಾಡಿದ ಕಾಮ್ಯಪುಣ್ಯದ ಫಲವೂ ಭೋಗಕ್ಕೆ ಕಾರಣವಾಗುತ್ತದೆ, ಎಂದು ಹೇಳಿ ಅದಕ್ಕೆ ಇಂದ್ರನು ಪಠಿಸಿದ ನಾರಾಯಣಕವಚದ ಪುಣ್ಯದಿಂದ ಅಸುರವಿಜಯರೂಪವಾದ ಫಲವನ್ನು ಉದಾಹರಿಸಿದ್ದಾರೆ. ಅದರಂತೆ ಪಾಂಡವರಿಗೆ (ಪ್ರಾರಬ್ಧಕರ್ಮಣಾ ವನವಾಸಗತಾನಾಮೇವ ಪಾಂಡವಾನಾಂ) ಸೂರ್ಯನನ್ನು ಪ್ರಾರ್ಥಿಸಿದ ಫಲವಾಗಿ ಅಕ್ಷಯಪಾತ್ರೆ ಲಭಿಸಿ ಲಕ್ಷ–ಲಕ್ಷ ಯೋಗೀಶ್ವರರಿಗೆ ಸ್ವರ್ಣಪಾತ್ರದಲ್ಲಿ ಅನ್ನದಾನ ಮಾಡುವ ಅವಕಾಶ ಲಭಿಸಿತು, ಎಂದು ಹೇಳಿದ್ದಾರೆ.

**ಸಂನ್ಯಾಸಿಗಳಿಗೆ ವಾಸುದೇವಾರಾಧನೆ**—ವಿಶ್ವ, ತೈಜಸ, ಪ್ರಾಜ್ಞ ಈ ಮೂರು ಭಗವದ್ರೂಪಗಳು ನಮ್ಮ ದೇಹದ ಬಲಗಣ್ಣು, ಕಂಠ, ಹೃದಯ ಸ್ಥಾನಗಳಲ್ಲಿದ್ದು ಜಾಗ್ರತ್–ಸ್ವಪ್ನ–ಸುಷುಪ್ತ್ಯವಸ್ಥೆಗಳಿಗೆ ನಿಯಾಮಕಗಳು. ವಾಸುದೇವರೂಪ (ತುರೀಯ) ಮೋಕ್ಷನಿಯಾಮಕ. ಅದು ಯತಿಗಳಿಗೆ ವಿಶೇಷವಾಗಿ ಧ್ಯಾನಯೋಗ್ಯವಾದುದು—

**ಶುದ್ಧಸ್ಫಟಿಕಸಂಕಾಶಂ ವಾಸುದೇವಂ ನಿರಂಜನಮ್ ।**
**ಚಿಂತಯೀತ ಯತಿರ್ನಾನ್ಯಂ ಜ್ಞಾನರೂಪಾದೃತೇ ಹರೇಃ ॥**

(ಮಾತ್ಸ್ಯ) (ಸೂ.3.2.17)

**ಪತಿತರಾದ ಊರ್ಧ್ವರೇತಸ್ಕರಿಗೆ ಪ್ರಾಯಶ್ಚಿತ್ತವಿಲ್ಲ**—ಬ್ರಹ್ಮಚರ್ಯಾದಿ ಆಶ್ರಮಕ್ಕಿಂತ ವಿಲಕ್ಷಣವಾದ ಧರ್ಮ ಊರ್ಧ್ವರೇತಸ್ತ್ವಧರ್ಮ. 'ಬ್ರಹ್ಮಚರ್ಯಾದೇವ ಪ್ರವ್ರಜೇತ್' ಎಂದು ಇದರ ಉಲ್ಲೇಖ ಉಪನಿಷತ್ತುಗಳಲ್ಲಿ ಬಂದಿದೆ. ''ಯೇ ಚೇಮೇಽರಣ್ಯೇ ಶ್ರದ್ಧಾ ತಪ ಇತ್ಯುಪಾಸತೇ–ಅರಣ್ಯದಲ್ಲಿದ್ದು ಆತ್ಮಶ್ರದ್ಧೆ ಮತ್ತು ತಪಸ್ಸನ್ನು ಮಾಡುವುದು ಅವರ ಧರ್ಮ. ಇಂತಹ ಆಶ್ರಮವನ್ನು ಒಮ್ಮೆ ಸ್ವೀಕರಿಸಿ ಸ್ತ್ರೀಸಂಪರ್ಕವನ್ನು ಮಾಡಿದರೆ ಅಂತಹವನಿಗೆ ಪ್ರಾಯಶ್ಚಿತ್ತವಿಲ್ಲ.

**''ಬ್ರಹ್ಮಚಾರ್ಯವಕೀರ್ಣೇ ನೈರ್ಋತಂ ಗರ್ದಭಮಾಲಭೇತ''**

ಎಂದು ಪ್ರಾಯಶ್ಚಿತ್ತವು ಶ್ರುತವಾದರೂ ಈ ಪ್ರಾಯಶ್ಚಿತ್ತ ನೈಷ್ಠಿಕ ಬ್ರಹ್ಮಚಾರಿಗಳಿಗಲ್ಲ. ಇತರ ಬ್ರಹ್ಮಚಾರಿಗಳಿಗೆ.

**ಆರೂಢೋ ನೈಷ್ಠಿಕಂ ಧರ್ಮಂ ಯಸ್ತು ಪ್ರಚ್ಯವತೇ ಪುನಃ ।**
**ಪ್ರಾಯಶ್ಚಿತ್ತಂ ನ ಪಶ್ಯಾಮಿ ಯೇನ ಶುದ್ಧ್ಯೇತ್ ಸ ಆತ್ಮಹಾ ॥**

ಎಂದು ನೈಷ್ಠಿಕ ಬ್ರಹ್ಮಚಾರಿಗೆ ಪ್ರಾಯಶ್ಚಿತ್ತವನ್ನು ನಿಷೇಧ ಮಾಡಲಾಗಿದೆ.

**ಆರೂಢಪತಿತಂ ವಿಪ್ರಂ ಮಂಡಲಾಚ್ಚ ವಿನಿಃಸೃತಮ್ ।**
**ಉದ್ಬದ್ಧಂ ಕ್ರಿಮಿದಷ್ಟಂ ಚ ಸ್ಪೃಷ್ಟ್ವಾ ಚಾಂದ್ರಾಯಣಂ ಚರೇತ್ ॥**

ಎಂಬ ಸ್ಮೃತಿಯಲ್ಲಿ ಪ್ರಾಯಶ್ಚಿತ್ತ ಮಾಡಿಕೊಂಡರೂ ಅಂತಹವನನ್ನು ಶಿಷ್ಟರು ಬಹಿಷ್ಕರಿಸಬೇಕು ಎನ್ನಲಾಗಿದೆ.

ಇದು ಶಾಂಕರಭಾಷ್ಯದಂತೆ 'ಬಹಿಸ್ತೂಭಯಥಾಪಿ ಸ್ಮೃತೇರಾಚಾರಾಚ್ಚ' (3.4.43) ಎಂಬ ಸೂತ್ರದ ಅರ್ಥ.

**ಅನಾಶ್ರಮಿಯಾಗಿ ಇರಬಾರದು**—ಜ್ಞಾನದಲ್ಲಿ ಅಪೇಕ್ಷೆ ಹುಟ್ಟಬೇಕಾದರೆ ಕರ್ಮಾನುಷ್ಠಾನ ಬೇಕು—''ವಿವಿದಿಷಂತಿ ಯಜ್ಞೇನ ದಾನೇನ ತಪಸಾನಾಶಕೇನ'' ಬಡವನಿಗೆ ಯಜ್ಞದಾನಾದಿಗಳನ್ನು ಮಾಡಲಾಗದಿದ್ದರೂ—

**ಜಪ್ಯೇನೈವ ತು ಸಂಸಿದ್ಧ್ಯೇತ್ ಬ್ರಾಹ್ಮಣೋ ನಾತ್ರ ಸಂಶಯಃ ॥**

ಜಪಾನುಷ್ಠಾನದಿಂದಲೇ ಅವನಿಗೆ ಜ್ಞಾನೇಚ್ಛೆಯು ಹುಟ್ಟುತ್ತದೆ. ಆದ್ದರಿಂದ ಬ್ರಹ್ಮಚರ್ಯಾದಿ ಆಶ್ರಮ ರಹಿತನಾಗಿ ದ್ವಿಜನು ಒಂದು ದಿನವೂ ಇರಬಾರದು. ಸಮಾವರ್ತನೆಯಿಂದ ಬ್ರಹ್ಮಚರ್ಯ ಬಿಟ್ಟಕೂಡಲೇ ಗೃಹಸ್ಥನೋ ನೈಷ್ಠಿಕ ಬ್ರಹ್ಮಚಾರಿಯೋ ಆಗಿರಬೇಕು.

**ಅನಾಶ್ರಮೀ ನ ತಿಷ್ಠೇತ ದಿನಮೇಕಮಪಿ ದ್ವಿಜಃ ।**
**ಸಂವತ್ಸರಮ್ ಅನಾಶ್ರಮೀ ಸ್ಥಿತ್ವಾ ಕೃಚ್ಛ್ರಮೇಕಂ ಸಮಾಚರೇತ್ ।**

ಈ ವಿಷಯ ''ಅತಸ್ತ್ವಿತರಜ್ಜ್ಯಾಯೋ ಲಿಂಗಾಚ್ಚ'' (3.4.39) ಎಂಬ ಸೂತ್ರದ ಶಾಂಕರಭಾಷ್ಯದಲ್ಲಿದೆ.

**ಅದ್ವೈತದರ್ಶನದಲ್ಲಿ ವ್ಯಾಸರು**—ವೇದವ್ಯಾಸರು ಸರ್ವಜ್ಞರು. ಅವರು ತಮ್ಮ ಶಿಷ್ಯರಾದ ಜೈಮಿನಿಗಳಿಗೆ ಆದೇಶ ನೀಡಿ ಹನ್ನೆರಡು ಅಧ್ಯಾಯಗಳ ಪೂರ್ವಮೀಮಾಂಸಾಸೂತ್ರಗಳನ್ನು ಬರೆಸಿದರು. ಆ ಸೂತ್ರಗಳಲ್ಲಿ ಕರ್ಮಪರವಾದ ವೇದಭಾಗಗಳ ಅರ್ಥನಿರ್ಣಯವನ್ನು ಮಾಡಲಾಗಿದೆ. ಬ್ರಹ್ಮಸೂತ್ರಗಳನ್ನು ಸಾಕ್ಷಾದ್ ವೇದವ್ಯಾಸರೇ ರಚಿಸಿದ್ದಾರೆ. ಸಮಗ್ರವೇದಗಳ ಅಧ್ಯಾತ್ಮಪರವಾದ ಅರ್ಥನಿರ್ಣಯ ಬ್ರಹ್ಮಸೂತ್ರಗಳ ಉದ್ದೇಶ.

**ಅತೋ ನೈತಾದೃಶಂ ಕಿಂಚಿತ್ ಪ್ರಮಾಣತಮಮಿಶ್ಯತೇ ॥**

ಎಂದು ಅನುವ್ಯಾಖ್ಯಾನದಲ್ಲಿ ಹೇಳಿರುವಂತೆ ಬ್ರಹ್ಮಸೂತ್ರಗಳು ಪರಮ

ಪ್ರಮಾಣಗಳು. ಆಚಾರ್ಯರ ದೃಷ್ಟಿಯಲ್ಲಿ ಬ್ರಹ್ಮಸೂತ್ರಗಳ ಅಧ್ಯಯನಕ್ಕೆ ಕರ್ಮಸೂತ್ರಗಳ ಅಧ್ಯಯನವು ಅಂಗವಲ್ಲ. ಆದ್ದರಿಂದ ಬ್ರಹ್ಮಸೂತ್ರಗಳಲ್ಲಿ ಬರುವ, ಪೂರ್ವಮೀಮಾಂಸಾಕ್ಕೆ ಸಂಬಂಧಪಡುವಂತೆ ತೋರುವ ಶಬ್ದಗಳಿಗೆ ಇತರ ಭಾಷ್ಯಗಳಲ್ಲಿ ಪೂರ್ವಮೀಮಾಂಸಾನುಸಾರಿಯಾದ ಅರ್ಥವನ್ನು ಹೇಳಲಾಗಿದ್ದರೆ ಆಚಾರ್ಯರು ಅವುಗಳ ಪಾರಿಭಾಷಿಕಾರ್ಥವನ್ನು ಬಿಟ್ಟು ಯೌಗಿಕಾರ್ಥವನ್ನು ಮಾಡಿದ್ದಾರೆ. ಇದು ತೃತೀಯಾಧ್ಯಾಯದ ಮೂರನೆಯ ಪಾದದ ಭಾಷ್ಯದಲ್ಲಿ ಗಮನಿಸಬೇಕಾದ ವಿಷಯ.

1. **ಕುಶಾಚ್ಛಂದಸ್ತುತ್ಯುಪಗಾನವತ್**(3.3.27)—ಕುಶೈಃ ಆಚ್ಛಂದೇನ ಸ್ತುತಿ ಉಪಗಾನವತ್=ಮಂತ್ರಾಧ್ಯಯನವತ್. ಬ್ರಹ್ಮಯಜ್ಞ ಮುಗಿದ ಮೇಲೂ ಬ್ರಾಹ್ಮಣರು ಸ್ವೇಚ್ಛೆಯಿಂದ ದರ್ಭೆಹಿಡಿದು ವೇದಾಧ್ಯಯನ ಮಾಡುವಂತೆ.

ಇಲ್ಲಿ ಇತರ ಭಾಷ್ಯಗಳು ಪೂರ್ವಮೀಮಾಂಸಾಕ್ಕೆ ಸಂಬಂಧಿಸಿದಂತೆ ಈ ಶಬ್ದಕ್ಕೆ ಅರ್ಥ ಹೇಳಿದ್ದಾರೆ.

2. **ಔಪಸದವತ್**(3.3.34)—ಶಿಷ್ಯನಂತೆ ಎಂದು ಮಾಧ್ವಭಾಷ್ಯದ ಅರ್ಥ. ಉಪಸದ್‌ಯಾಗದಂತೆ, ಎಂದು ಇತರ ಭಾಷ್ಯದ ಅರ್ಥ.

3. **ಪ್ರದಾನವದೇನ** (3.3.44)—ಪ್ರ=ಪ್ರಕೃಷ್ಟವಾದ ದಾನ=ವಿದ್ಯಾದಾನ. ಪ್ರೀತಿಪೂರ್ವಕವಾಗಿ ಗುರುಗಳಿಂದ ದಾನ ಪಡೆದ ವಿದ್ಯೆ. ಇತರ ಭಾಷ್ಯಗಳಲ್ಲಿ ಪ್ರದಾನ ಎಂದರೆ ಯಜ್ಞದಲ್ಲಿ ಹವಿಃಪ್ರದಾನ.

4. **ಅಗ್ನೀಂಧನಾದ್ಯನಪೇಕ್ಷಾ** (3.4.25) ಅಗ್ನೇಃ ಇಂಧನಂ ಯಸ್ಮಿನ್ ಕರ್ಮಣಿ=ಅಗ್ನಿಪ್ರಜ್ವಲಿಸುವ ಕರ್ಮ–ಅಗ್ನಿಹೋತ್ರ. "ನಾಗ್ನಿಹೋತ್ರಾದ್ಯಪೇಕ್ಷಾ"(ಭಾಷ್ಯ). ಜ್ಞಾನವು ಮೋಕ್ಷಸಾಧನವಾಗಲು ಅಗ್ನಿಹೋತ್ರಾದಿ ನಿತ್ಯಕರ್ಮಗಳ ಅಪೇಕ್ಷೆ ಇಲ್ಲ.

ಇತರ ಭಾಷ್ಯದಲ್ಲಿ—ಅಗ್ನಿ ಮತ್ತು ಇಂಧನಗಳಿಂದ ಸಾಧ್ಯವಾದ ಯಜ್ಞಾದಿ ಕರ್ಮಗಳ ಅಪೇಕ್ಷೆ ಇಲ್ಲ, ಎಂದು ಅರ್ಥ.

5. **ಕ್ರತುವತ್** (3.3.59)—ಇಲ್ಲಿ ಕ್ರತುಶಬ್ದಕ್ಕೆ ಭಾಷ್ಯದ ವಿವರಣೆ ಇಲ್ಲ. ತತ್ತ್ವಪ್ರದೀಪ ಮತ್ತು ತತ್ತ್ವಪ್ರಕಾಶಿಕಾಗಳಲ್ಲಿ ಮೀಮಾಂಸಾಶಾಸ್ತ್ರಕ್ಕೆ ಸಂಬಂಧಪಟ್ಟಂತೆ ಇದರ ವಿವರವನ್ನು ಕೊಡಲಾಗಿದೆ.

6. **ಸವವಚ್ಚ ತನ್ನಿಯಮಃ** (3.3.4) ಇದು ಪರಭಾಷ್ಯದ ಸೂತ್ರದ ಪಾಠ. ಇಲ್ಲಿ 'ಸವ' ಶಬ್ದ ಪಾರಿಭಾಷಿಕ. ದ್ವೈತಭಾಷ್ಯದ ಸೂತ್ರಪಾಠ ಸಲಿಲವಚ್ಚ ಎಂದು.

7. **ದ್ವಾದಶಾಹವತ್** (4.4.12)–ಈ ಪದಕ್ಕೆ ಆಚಾರ್ಯರು ಭಾಷ್ಯದಲ್ಲಿ ''ಯಥಾ ದ್ವಾದಶಾಹಃ ಕ್ರತ್ವಾತ್ಮಕಃ ಸತ್ರಾತ್ಮಕಶ್ಚ ಭವತಿ'' ಎಂದು ಪೂರ್ವ ಮೀಮಾಂಸಾದ ವಿವರಣೆ ಕೊಟ್ಟಿದ್ದಾರೆ. ಇಲ್ಲಿ ಭಾಷ್ಯದ ಕ್ರತು ಶಬ್ದಕ್ಕೆ ಪ್ರಸಿದ್ಧಾರ್ಥವನ್ನು ಬಿಟ್ಟು 'ಅಹೀನ' ಎಂದು ಅರ್ಥವನ್ನು ತತ್ತ್ವಪ್ರದೀಪದಲ್ಲಿ ಹೇಳಲಾಗಿದೆ. ರಾಯರೂ ಇದೇ ಅರ್ಥವನ್ನು ಹೇಳಿ—''ತೇನ ಕಸ್ಯಚಿತ್ ಮೀಮಾಂಸಾವಿರೋಧಾಪಲಾಪಾನವಕಾಶಃ'' ಎಂದಿದ್ದಾರೆ.

ಹೀಗೆ ಇತರ ಎರಡು ಭಾಷ್ಯಗಳಲ್ಲಿ ತೃತೀಯಾಧ್ಯಾಯದ ತೃತೀಯಪಾದದಲ್ಲಿ ಮೀಮಾಂಸಾಭೂಯಿಷ್ಠವಾದ ನಿರೂಪಣೆ ಇದ್ದರೆ ದ್ವೈತಭಾಷ್ಯದಲ್ಲಿ ಪೂರ್ವಮೀಮಾಂಸಾಕ್ಕೆ ಅಷ್ಟು ಪ್ರಾಧಾನ್ಯವನ್ನು ಕೊಡಲಾಗಿಲ್ಲ. ಆದರೂ ಸೂತ್ರದಲ್ಲಿ 'ಜೈಮಿನಿ' ಶಬ್ದದ ಉಲ್ಲೇಖದೊಂದಿಗೆ ಬರುವ ಸಿದ್ಧಾಂತವು ವ್ಯಾಸರದೇ ಸಿದ್ಧಾಂತ ಎಂದು ಹೇಳಿ ಅದಕ್ಕೆ ಪ್ರಾಶಸ್ತ್ಯವನ್ನು ಕೊಡಲಾಗಿದೆ. ಅದ್ವೈತ ಭಾಷ್ಯದಲ್ಲಿ ಕೆಲವೊಮ್ಮೆ ಜೈಮಿನಿಗಳು 'ಅಸಾಧು ದರ್ಶಗಳು' ಆಗುತ್ತಾರೆ—'ತಸ್ಮಾತ್ ಸಾಧುದರ್ಶೀ ಸ ಭಗವಾನ್ ಬಾದರಿಃ, ಅಸಾಧುದರ್ಶೀ ಜೈಮಿನಿಃ ಇತಿಸಿದ್ಧಮ್'' (ಭಾವತೀ.4.5.14)

ಅದ್ವೈತದರ್ಶನದಲ್ಲಿ ವ್ಯಾಸರಿಗೂ ಇಂತಹ ಪೂಜ್ಯ ಸ್ಥಾನವಿಲ್ಲ. ಅವರು ಒಬ್ಬ ಬ್ರಹ್ಮಾಪರೋಕ್ಷವುಳ್ಳ ಋಷಿಗಳು. **''ತಥಾಹಿ– ಅಪಾಂತರತಮಾ ನಾಮ ವೇದಾಚಾರ್ಯಃ ಪುರಾಣರ್ಷಿಃ ವಿಷ್ಣುನಿಯೋಗಾತ್ ಕಲಿದ್ವಾಪರಯೋಃ ಸಂಧೌ ಕೃಷ್ಣದ್ವೈಪಾಯನಃ ಸಂಬಭೂವ, ಇತಿ ಸ್ಮರಂತಿ ।''** (ಶಾಂ.ಭಾ.3.3.32)

ವಸ್ತುತಃ ಈ ವಿಷಯ ಮಹಾಭಾರತದ ಶಾಂತಿಪರ್ವದಲ್ಲಿ ಬಂದಿದೆ.

**ಅಪಾಂತರತಮಾ ನಾಮ ಸುತೋ ವಾಕ್‌ಸಂಭವಃ ಪ್ರಭೋಃ ।**
**ಭೂತ–ಭವ್ಯ–ಭವಿಷ್ಯಜ್ಞಃ ಸತ್ಯವಾದೀ ದೃಢವ್ರತಃ ॥** (ಅ.184.39)

ಅಪಾಂತರತಮರು ಭಗವಂತನ ವಾಣಿಯಿಂದ ವ್ಯಕ್ತರಾದ ತ್ರಿಕಾಲಜ್ಞರು, ಎಂದು ಅರ್ಥ. ಇಲ್ಲಿ ವಾದಿರಾಜರ ಲಕ್ಷಾಲಂಕಾರದ ವಿವರಣೆ— ವರಾಹಾದಿ ರೂಪವತ್ ಜ್ಞಾನಕಾರ್ಯಾಯ ಅಪಾಂತರತಮ ಇತ್ಯಪಿ ಭಗವತ ಏವ ಏಕಂರೂಪಮ್ ಆದಿನಾರಾಯಣಾಜ್ಜಾತಮ್ । ಸ ಏವ ವ್ಯಾಸೋ ಭವಿಷ್ಯತಿ ॥

ಹೀಗೆ ಶಾಂಕರಭಾಷ್ಯದಂತೆ ಸೂತ್ರಗಳು ಋಷಿಪ್ರಣೀತವಾದುದರಿಂದ ಅವುಗಳಲ್ಲಿ ಅನೇಕ ಸೂತ್ರಗಳು ಪೂರ್ವಪಕ್ಷಸೂತ್ರಗಳೆಂದೂ, ಕೆಲವೊಮ್ಮೆ ಆ ಸೂತ್ರಗಳು ಶ್ರುತಿವಿರುದ್ಧವಾಗಿರುವಂತೆಯೂ ಕಾಣುತ್ತವೆ. ಸಮಯಪಾದದಲ್ಲಿ ನಿರಾಸಮಾಡಬೇಕಾಗಿರುವ ನಾಸ್ತಿಕಮತವನ್ನು ಸಾಧನಾಧ್ಯಾಯದಲ್ಲಿ, ಉಪಾಸನೆಯನ್ನು ಗಂಭೀರವಾಗಿ ಚರ್ಚಿಸುವಾಗ ''ಏಕ ಆತ್ಮನಃ ಶರೀರೇ ಭಾವಾತ್'' (3.3.55) ಎಂಬ ಸೂತ್ರದಲ್ಲಿ ನಿರಾಕರಿಸುವುದು ಅದ್ವೈತ ಭಾಷ್ಯಕಾರರಿಗೆ ಅಸಮಂಜಸವಾಗಿಯೂ ಕಾಣುತ್ತದೆ. ವಿಶಿಷ್ಟಾದ್ವೈತಭಾಷ್ಯವೂ ಎಲ್ಲ ರೀತಿಯಿಂದಲೂ ಅದ್ವೈತಭಾಷ್ಯವನ್ನೇ ಅನುಸರಿಸುತ್ತದೆ. ಆದರೆ, ಬ್ರಹ್ಮನಿರ್ಗುಣತ್ವವನ್ನು ಪ್ರತಿಪಾದನೆ ಮಾಡುವಂತೆ ಅದ್ವೈತ ಭಾಷ್ಯವು ಸೂತ್ರವನ್ನು ವ್ಯಾಖ್ಯಾನಿಸಿದರೆ ಅಲ್ಲಿ ಅದ್ವೈತಭಾಷ್ಯವನ್ನು ಬಿಟ್ಟು ಬೇರೆಯೇ ವ್ಯಾಖ್ಯಾನವನ್ನು ವಿಶಿಷ್ಟಾದ್ವೈತಭಾಷ್ಯ ಮಾಡುತ್ತದೆ. ''ನ ಸ್ಥಾನತೋಽಪಿ'' ಎಂಬ ಅಧಿಕರಣದಲ್ಲಿ (3.2.12 ಸೂ.) ಅದ್ವೈತ ಭಾಷ್ಯ ನಿರ್ಗುಣ ಬ್ರಹ್ಮನ ಸಮರ್ಥನೆಯನ್ನು ಮಾಡಿದೆ. ವಿಶಿಷ್ಟಾದ್ವೈತಭಾಷ್ಯ ಅದೇ ಸೂತ್ರಗಳನ್ನು ಸಗುಣಬ್ರಹ್ಮಸಾಧನಪರವಾಗಿ ವ್ಯಾಖ್ಯಾನಿಸಿದೆ. ''ಕಾಮಾದಿತರತ್ರ...'' (3.3.38) ಸೂತ್ರದ ರಾಮಾನುಜಭಾಷ್ಯದಲ್ಲಿ ನಿರ್ಗುಣವಾದದ ಬಗ್ಗೆ ಕಟುಮಾತು ಹೀಗಿದೆ—

**''ನ ಚ ಮಾತಾಪಿತೃಸಹಸ್ರೇಭ್ಯೋಽಪಿ ವತ್ಸಲತರಂ ಶಾಸ್ತ್ರಂ ಪ್ರತಾರಕಮ್ ಪಾರಾಮಾರ್ಥಿಕಾನ್ ನಿರಸನೀಯಾನ್ ಗುಣಾನ್ ಪ್ರಮಾಣಾಂತರಾಪ್ರತಿಪನ್ನಾನ್ ಆದರೇಣ ಉಪದಿಶ್ಯ ಸಂಸಾರಚಕ್ರಪರಿವರ್ತನೇನ ಪೂರ್ವಮೇವ ಬಂಭ್ರಮ್ಯಮಾಣಾನ್ ಮುಮುಕ್ಷೂನ್ ಭೂಯೋಽಪಿ ಭ್ರಮಯಿತುಮ್ ಅಲಮ್॥''**

ಶಾಂಕರಭಾಷ್ಯವು ನಿರ್ಗುಣೋಪಾಸನೆಯೇ ಬ್ರಹ್ಮೈಕ್ಯಪ್ರಾಪ್ತಿಗೆ ಸಾಧನ ಎಂದು ಹೇಳುವುದಾದರೂ ಸಗುಣೋಪಾಸನೆಯನ್ನು ಅನರ್ಥಕರವೆಂದು ಹೇಳಿಲ್ಲ. ಅಷ್ಟೇ ಅಲ್ಲ, ಸಗುಣೋಪಾಸನೆಯಿಂದ ವಿಷ್ಣುಲೋಕಪ್ರಾಪ್ತಿಯನ್ನು ಹೇಳುತ್ತದೆ. 'ಕಾರ್ಯಾತ್ಯಯೇ...'(4.3.10) ಇತ್ಯಾದಿ ಸೂತ್ರದ ಶಾಂಕರಭಾಷ್ಯ ಹೀಗಿದೆ—

**'ಕಾರ್ಯಬ್ರಹ್ಮಲೋಕಪ್ರತ್ಯುಪಸ್ಥಾನೇ ಸತಿ ತತ್ರೈವೋತ್ಪನ್ನಸಮ್ಯಗ್ ದರ್ಶನಾಃ ಸಂತಃ ತದಧ್ಯಕ್ಷೇಣ ಹಿರಣ್ಯಗರ್ಭೇಣ ಸಹ ಅತಃ ಪರಂ=ಪರಿಶುದ್ಧಂ ವಿಷ್ಣೋಃ ಪರಮಂ ಪದಂ ಪ್ರತಿಪದ್ಯಂತೇ''**

ಸೂತ್ರಗಳಲ್ಲಿ ಪಾಠಭೇದ—ಮೂರು ಭಾಷ್ಯಗಳಲ್ಲಿ ಎಲ್ಲ ವಿಧದ ಪಾಠಭೇದವೂ ಸೂತ್ರದಲ್ಲಿದೆ—

1. ಇತರ ಎರಡೂ ಭಾಷ್ಯಗಳಲ್ಲಿ ಇಲ್ಲದ ಸೂತ್ರವು ದ್ವೈತಭಾಷ್ಯದಲ್ಲಿದೆ. ಉದಾಹರಣೆಗೆ– ''ಸ್ಮರಣಾಚ್ಚ''(3.1.23). ದರ್ಶನಾತ್ತು(3.2.33). ಇದು ದ್ವೈತಭಾಷ್ಯದ ಪಾಠ. ಇಲ್ಲಿ ಪರಭಾಷ್ಯದ ಪಾಠ ''ಸಾಮಾನ್ಯಾತ್ತು''

2. ರಾಮಾನುಜ ಮಧ್ವಭಾಷ್ಯಗಳಲ್ಲಿ ಇಲ್ಲದ ಸೂತ್ರ ಶಾಂಕರಭಾಷ್ಯದಲ್ಲಿದೆ. ಉದಾಹರಣೆಗೆ—ಶ್ರುತೇಶ್ಚ–3.4.46.

3. ಈ ಎರಡು ಅಧ್ಯಾಯಗಳಲ್ಲಿ ಮಾಧ್ವ–ಶಾಂಕರಭಾಷ್ಯಗಳಲ್ಲಿ ಇಲ್ಲದೆ ರಾಮಾನುಜಭಾಷ್ಯದಲ್ಲಿ ಮಾತ್ರ ಇರುವ ಸೂತ್ರ ಇಲ್ಲ.

4. ಮಾಧ್ವ ಭಾಷ್ಯದಲ್ಲಿರುವ ಎರಡು ಪ್ರತ್ಯೇಕ ಸೂತ್ರಗಳು ಇತರ ಭಾಷ್ಯಗಳಲ್ಲಿ ಅಖಂಡವಾಗಿ ಬಂದಿದೆ—

ಕೃತಾತ್ಯಯೇಽನುಶಯವಾನ್ ದೃಷ್ಟಸ್ಮೃತಿಭ್ಯಾಂ ॥ (3.2.8)
ಯಥೇತಮನೇವಂ ಚ ॥ (3.2.9)
ಜಗದ್ ವ್ಯಾಪಾರವರ್ಜಮ್–4.4.17
ಪ್ರಕರಣಾದ ಸನ್ನಿಹಿತತ್ವಾಚ್ಚ–4.4.18

ಇವೆರಡೂ ಸೂತ್ರಗಳು ಒಂದೇ ಸೂತ್ರವಾಗಿ ಇತರ ಎರಡೂ ಭಾಷ್ಯಗಳಲ್ಲಿ ಪಠಿತವಾಗಿವೆ.

5. ಮುಂದಿನ ಸೂತ್ರದ ಒಂದು ಪದ ಹಿಂದಿನ ಸೂತ್ರಕ್ಕೆ ಸೇರುತ್ತದೆ.

ವಿಕಾರವರ್ತಿ ಚ ತಥಾ ಹಿ ದರ್ಶಯತಿ ॥ (4.4.20) ಮಾಧ್ವಪಾಠ. ಮುಂದಿನ ಸೂತ್ರ—ಸ್ಥಿತಿಮಾಹ ದರ್ಶಯತಶ್ಚೈವಂ..(4.4.21)

ಇತರ ಭಾಷ್ಯಗಳಲ್ಲಿ
ವಿಕಾರವರ್ತಿ ಚ ತಥಾಹಿ ಸ್ಥಿತಿಮಾಹ ॥

ಇದಲ್ಲದೆ ಶಬ್ದಗಳ ವ್ಯತ್ಯಾಸ ಪದವಿಭಾಗ–ಸಮಾಸಗಳ ಭೇದ ಹೇರಳವಾಗಿ ಉಪಲಬ್ಧವಾಗುತ್ತದೆ.

**ಕೊನೆಯ ಮಾತು**—ಬ್ರಹ್ಮಸೂತ್ರಭಾಷ್ಯದ ಸಮಗ್ರಕನ್ನಡಾನುವಾದ ಮುಗಿದಿದೆ. ಇಲ್ಲಿ ಮೂರು ಭಾಷ್ಯಗಳಾನುಸಾರಿಯಾದ ಸೂತ್ರಾರ್ಥವನ್ನು ಜೊತೆಯಾಗಿ ನೋಡಬಹುದಾದ್ದರಿಂದ ತುಲನಾತ್ಮಕಾಧ್ಯಯನಕ್ಕೆ ಸಹಕಾರಿಯಾಗಿದೆ ಈ ಕೃತಿ, ಎಂದು ಭಾವಿಸುತ್ತೇನೆ. ಶ್ರೀರಾಘವೇಂದ್ರಸ್ವಾಮಿಗಳ ತಂತ್ರದೀಪಿಕಾ ಗ್ರಂಥದ

ಆವಶ್ಯ ಭಾಗಗಳನ್ನಷ್ಟೇ ಇಲ್ಲಿ ಕೊಡಲಾಗಿದೆ. ಕೆಲವು ವಾಕ್ಯಗಳನ್ನು ಬಿಡಲಾಗಿದೆ. ಇದು ಅಪರಾಧವಾದರೂ ಗ್ರಂಥಗೌರವ ಪರಿಹಾರಕ್ಕಾಗಿ ಹೀಗೆ ಮಾಡಲಾಗಿದೆ. ರಾಯರು ಕ್ಷಮಿಸಬೇಕು. ಶೇಷತಾತ್ಪರ್ಯ ಚಂದ್ರಿಕಾಗ್ರಂಥದ ಪರಭಾಷ್ಯವಿಮರ್ಶೆಯನ್ನೂ ಲೇಶಮಾತ್ರವೇ ಕೊಡಲಾಗಿದೆ.

ತಾಳ್ಮೆಯಿಂದ ಈ ಅನುವಾದದ ನಿರೀಕ್ಷೆಯಲ್ಲಿದ್ದ ಓದುಗರಿಗೆ ಮತ್ತು ಮಂಡಳದ ಪದಾಧಿಕಾರಿಗಳಿಗೆ ಕೃತಜ್ಞತೆಗಳು. ಕರಡು ತಿದ್ದಿ ಸಹಕರಿಸಿದ ಪಂ|| ಬಿ.ಎನ್.ಸೀತಾರಾಮಾಚಾರ್ಯರಿಗೆ ನಾನು ಆಭಾರಿಯಾಗಿದ್ದೇನೆ. ಬೇಸರವಿಲ್ಲದೆ ಚುರುಕಾಗಿ ಡಿ.ಟಿ.ಪಿ. ಮಾಡಿಕೊಟ್ಟಿರುವ ಶ್ರೀ ಪ್ರೇಮ್‌ಕುಮಾರ್ ಇವರಿಗೆ ಸಪ್ರೇಮ ಕೃತಜ್ಞತೆಗಳು.

ಎಲ್ಲಕ್ಕಿಂತ ಪ್ರಧಾನವಾಗಿ ಗುರುಗಳಾದ ಶ್ರೀ ವಿಶ್ವೇಶತೀರ್ಥಶ್ರೀಪಾದರ ಅನುಗ್ರಹದ ಆದೇಶಕ್ಕೆ ನಾನು ಸದಾ ಋಣಿಯಾಗಿದ್ದೇನೆ.

22.7.17 **ಎ. ಹರಿದಾಸಭಟ್**

# ವಿಷಯಾನುಕ್ರಮಣಿಕೆ

## ಮೂರನೆಯ ಅಧ್ಯಾಯ–ಮೊದಲ ಪಾದ



## ಮೂರನೆಯ ಅಧ್ಯಾಯ–ಎರಡನೆಯಪಾದ

## ಮೂರನೆಯ ಅಧ್ಯಾಯ ಮೂರನೆಯ ಪಾದ

ಮೂರನೆಯ ಅಧ್ಯಾಯದ ನಾಲ್ಕನೆಯ ಪಾದ



ನಾಲ್ಕನೆಯ ಅಧ್ಯಾಯದ ಮೊದಲನೆಯ ಪಾದ



ನಾಲ್ಕನೆಯ ಅಧ್ಯಾಯದ ಎರಡನೆಯ ಪಾದ

**ನಾಲ್ಕನೆಯ ಅಧ್ಯಾಯದ ಮೂರನೆಯ ಪಾದ**



**ನಾಲ್ಕನೆಯ ಅಧ್ಯಾಯದ ನಾಲ್ಕನೆಯ ಪಾದ**

# 1

## Introduction

In the course of first chapter the doctrine of Guṇapūrṇatva of Brahman was established by the Samanvaya of adhibhūta, adhidaiva, adhyātma and adhiveda words in Brahman. Each of these words conveys certain attribute of Brahman. By the Samanvaya of these words it is made clear that Brahman has all these attributes and many more that cannot be counted. He is anantaguṇa paripūrṇa. In support of this doctrine of Guṇapūrṇatva the doctrine of Sṛṣtyādyaṣta kartṛtva i.e. creatorship, destroyership etc eight were also explained. These two doctrines were stated in the first and second sūtra of Chapter I and explained in the entire first Chapter.

The opposition to these two doctrines on the grounds of Smṛti, Samaya etc has to be removed.

This is undertaken in second chapter. The four sections discuss the opposition to the above two doctrines on four grounds viz. i) युक्ति विरोध i.e. opposition by logic ii) समयविरोध i.e. opposition by certain systems of thought such as साङ्ख्य, न्याय, जैन, बौद्ध etc. iii) श्रुतिविरोध opposition by internal contradiction among the śruti statement. iv) युक्तिसहितश्रुतिः i.e. the opposition by श्रुति itself supported with reason. These oppositions are removed in second chapter. Therefore, it is designated as अविरोधाध्याय.

# 2

# तृतीयाध्याये प्रथमः पादः

## तदन्तराधिकरणम् (III-1-1)

ॐ तदन्तरप्रतिपत्तौ रंहति संपरिष्वक्तः प्रश्ननिरूपणाभ्याम् ॐ

Pūrvapakṣin argues that getting rid of the contact with matter i.e., the material body etc., is stated to be the liberation. This will automatically happen when a person dies. Every living being casts away the physical body when he dies. This is liberation. Therefore, no means such as vairāgya, bhakti etc., are necessary.

The Siddhānta of this adhikaraṇa is stated in the sūtra 'tadantara prati pattau' etc. Though the physical body is cast away at the time of death, there will not be total separation from the physical elements. The physical contact continues, since jīva has to get another birth after remaining in the heaven etc places for sometime. Therefore, mere casting away of physical body is not liberation. This is clear from the question of pravāhaṇa and the answer of śvetaketu.

## त्र्यात्मकत्वाधिकरणम् (III-1-2)

ॐ त्र्यात्मकत्वात्तु भूयस्त्वात् ॐ

In this adhikaraṇa an objection is raised on the Siddhānta of previous adhikaraṇa and answered.

In the śruti wherein it is stated that the physical element continues with the jīva when a person dies, it is stated that the water continues. This means that the

other elements do not continue. With the continuation of water alone rebirth is not possible. This means the death is the liberation. This objection is not valid. Though water is stated, it refers to the three elements viz., water earth and tejas. These elements function in the combination of three.

Water is stated as continuing, because, it is dominant among the three. Tryatmaka in the sūtra means the combination of three, bhuyastva means dominant. Since the three continue there will be rebirth. Therefore the death is not liberation.

## प्राणगत्यधिकरणम् (III-1-3)

### ॐ प्राणगतेश्च ॐ

In this adhikaraṇa an additional reason is adduced to establish that the physical elements continue with jīva after death. It is stated in the śruti that karaṇa i.e., indriyas continue with jīva. The indriyas, and the elements always remain together. Therefore, the elements also continue with jīva along with indriyas. This is stated in the sūtra 'prāṇagateṣcha' the word prāṇa refers to indriyas.

## अग्न्याद्यधिकरणम् (III-1-4)

### ॐ अग्न्यादिश्रुतेरिति चेन्न भाक्तत्वात् ॐ

In this adhikaraṇa an objection is raised on the point stated in the previous adhikaraṇa that indriyas continue with jīva.

In the śruti 'mṛtasya vāg apyeti' etc., it is stated that vāk etc., indriyas get back to Agni etc. elements, after the death. This means, these do not go with jīva. It also means that the physical elements also do not continue with jīva as these are stated as invariably associated with indriyas. This objection is answered by Siddhāntin by pointing out that the indriyas partly get into their respective elements and partly go with jīva. Same is the case of the elements also. These also partly go with jīva and partly get back to the respective elements.

## प्रथमश्रवणाधिकरणम् (III-1-5)

ॐ प्रथमेऽश्रवणादिति चेन्न ता एवह्युपपत्तेः ॐ

In this adhikaraṇa the objection 'the elements do not continue with jīva, therefore, the death itself is liberation' is again raised on another ground. In the śruti 'tasmin etasmin' etc. śraddhā is stated as offered in the fire. The elements are not mentioned. This means that śraddhā continues with jīva but not the elements.

Siddhānta answers this objection by pointing out that the word śraddhā in the upākrama passage has to be taken in the sense of elements also. The word śrāddhā refers to both śraddhā elements. This is clear from the fact that in the upasamhāra passage 'pañcamyām āhutayaḥ' etc., 'āpaḥ' i.e., water is mentioned as continuing with jīva. It is already stated that 'āpaḥ' stands for the three elements. Therefore, the three elements continue with jīva even after death.

Hence death is not liberation. The statement in upasamhāra has to be preferred to that in upakrama and the two should be reconciled.

## अश्रुतत्वाधिकरणम् (III-1-6)

ॐ अश्रुतत्वादिति चेन्नेष्टादिकारिणां प्रतीतेः ॐ

In this adhikaraṇa the objection that the elements do not continue with jīva after the death is again raised on the ground that there is no explicit śruti statement in this respect as in the case of indriyas continuing with jīva. This objection is rejected by quoting a passage from kaundinya śruti which explicitly states that the elements continue with jīva even after death.

## भाक्ताधिकरणम् (III-1-7)

ॐ भाक्तं वा अनात्मवित्वात् तथाहि दर्शयति ॐ

In this adhikaraṇa whether karma leads to liberation of jñāna is an essential requirement is raised. If karma leads to liberation, then, vairāgya, bhakti etc., will not be necessary to obtain liberation. Therefore, this question has to be settled.

Pūrvapakṣin argues that the Śruti 'apāma somam amṛtā abhūma' clearly informs that one will attain liberation by performing sacrifices. Therefore, there is no need of vairāgya etc., to obtain jñāna, nor there is any need to get knowledge to attain the liberation.

Siddhāntin points out that the śruti 'nānyaḥ panthā ayanāya vidyate' clearly states that jñāna is very

necessary to obtain liberation and there is no other way. The śruti 'sa enam avidito na bhunakti' makes it further clear that without knowledge liberation is not possible. The statement 'apāma somam amṛtā abhūma' does not state the final liberation but it only states that those who perform sacrifice will attain the Indraloka etc., but not final liberation.

Karma is of two types viz., Kāmyakarma and niṣkāma karma. The former leads to Indraloka etc., while latter purifies the mind and enable to obtain knowledge. These two positions are stated in the śruti passage (i) 'amṛto vāva somapā bhavati yāvadindraḥ' (ii) 'karmaṇā jñānam ātanoti,' 'jñānena amṛti bhavati' respectively. Therefore, practice of vairāgya etc., is necessary.

## कृतात्ययाधिकरणम् (III-1-8)

### ॐ कृतात्यये अनुशयवान् दृष्टस्मृतिभ्यां ॐ

In this adhikaraṇa, pūrvapakṣin argues that the liberation can be obtained by getting rid of the karmas by experiencing their results. It is karma that is the ground for bondage. Therefore, vairāgya etc., are not necessary.

Siddhāntin points out that when jīva goes to heaven etc., its entire karma is not eliminated by enjoying its results. The store of karma is so vast that jīva returns with some balance of karma. This is stated in śruti 'tataḥ śeṣeṇa imam lokam ayāti' etc., and smṛti

'bhuktaśeṣānusayavan' etc. Hence, there is no possibility of total elimination of Karma by enjoying its results. In fact, on rebirth jīva again undertakes karma that lead to at least fourteen more births. The only way by which one can eliminate the effects of karma is to obtain knowledge. This requires the practice of vairāgya etc.,

## चरणाधिकरणम् (III-1-10)

ॐ चरणादिति चेन्न तदुपाक्षणार्थेति कार्ष्णाजिनिः ॐ (III-1-10)

ॐ आनर्थ्यक्यमिति चेन्न तदपेक्षत्वात् ॐ (III-1-11)

ॐ सुकृतदुष्कृत एवेति बादरिः ॐ (III-1-12)

This adhikaraṇa consists of three sūtras. In the first sūtra Pūrvapakṣa is stated. In the śruti 'ya iḥ ramaṇīya charaṇaḥ' etc., it is stated that those who have good conduct go to svarga and those whose conduct is not good they will go to hell. This means it is the conduct that leads to svarga or naraka but not the sacrifice. Hence, vairāgya in respect of karma is not necessary.

Siddhāntin quotes the view of kārṣṇajini in this respect and states that the conduct should not be taken in isolation with karma. The conduct and karma both lead to svarga etc. This does not make the expression charaṇa superfluous. In fact, the proper organisation of sacrifice includes conduct. This is the view of Badari and this is affirmed by Bādarāyaṇa by the expression 'tu' in the sūtra.

## अनिष्टादिकार्याधिकरणम् (III-1-11)

ॐ अनिष्टादिकारिणामपि च श्रुतम् ॐ (III-1-13)

ॐ संयमने त्वनुभूयेतरेषामारोहावरोहौ ॐ (III-1-14)

ॐ स्मरन्ति च ॐ (III-1-15)

This adhikaraṇa consists of three sūtras. Here the question whether those who indulge in wrong activities also go to hell etc or not is raised. It is argued that since, these people have no desire for results not fear of doing wrong deed they need not go to any other world. Consequently, they need not have any vairāgya. Siddhāntin points out that the śruti 'iha subhakṛtaḥ, aśubhakṛtaḥ' etc. clearly states that these go to hell. Among the wrong doers there are two categories viz., (i) Those who oppose God, oppose Guru, oppose veda etc., go nityanaraka while the lesser offenders go to yamaleka, remain there for sometime, and return. In view of this to avoid indulging in wrong deeds vairāgya in the same is necessary.

## सप्ताधिकरणम् (III-1-12)

ॐ अपि सप्त ॐ (III-1-16)

Under this adhikaraṇa five anitya narakas viz., (i) raurava, mahān, vanhi, vaitaraṇi, kumbhīpāka (ii) two nityanarakas viz. tāmiśra and andhatāmiśra are stated. It is pointed out that in the case of anityanarakas the offender may return to bhūloka and get a chance to improve. However, in the case of nityanaraka there is

ಸೂಕ್ಷ್ಮರೂಪವು ಹೋದಾಗ ಅದರೊಂದಿಗೆ ತೇಜಸ್ಸು-ಪೃಥಿವೀಗಳೂ ಹೋಗುತ್ತವೆ. ಭೂಯಸ್ತ್ವಾತ್=ಸರ್ವದೇಹಗಳಲ್ಲೂ ಪೃಥಿವಿಯನ್ನು ಬಿಟ್ಟರೆ ನೀರಿನ ಅಂಶವೇ ಹೆಚ್ಚಾಗಿರುವುದರಿಂದ ಉಪನಿಷತ್ತಿನಲ್ಲಿ 'ಆಪಃ' ಎಂದು ಹೇಳಲಾಗಿದೆ.

**॥ ಪ್ರಾಣಗತೇಶ್ಚ ॥** ಬೃಹದಾರಣ್ಯಕದಲ್ಲಿ 'ತಮುತ್ಕ್ರಾಂತಂ ಪ್ರಾಣೋಽನೂತ್ಕ್ರಾಮತಿ' ಎಂದು ಜೀವನ ಜೊತೆಯಲ್ಲಿ ಇಂದ್ರಿಯಗಳಿಗೆ ಗಮನವನ್ನು ಹೇಳಲಾಗಿದೆಯಾದ್ದರಿಂದಲೂ ಅವನ ಜೊತೆಯಲ್ಲಿ ಭೂತಸೂಕ್ಷ್ಮಗಳೂ ಹೋಗುತ್ತವೆ, ಎಂದು ತಿಳಿಯಬಹುದು. ಇಂದ್ರಿಯಗಳಿಗೆ ಆಶ್ರಯ ಭೂತಗಳು. ತಮ್ಮ ಆಶ್ರಯವನ್ನು ಬಿಟ್ಟು ಇಂದ್ರಿಯಗಳಿಗೆ ಗಮನ ಸಾಧ್ಯವಿಲ್ಲ. ಆದ್ದರಿಂದ ಭೂತಗಳೂ ಜೀವನೊಂದಿಗೆ ಹೋಗುತ್ತವೆ.

**॥ ಅಗ್ನ್ಯಾದಿಗತಿಶ್ರುತೇರಿತಿ ಚೇನ್ನ ಭಾಕ್ತತ್ವಾತ್ ॥** ಜೀವನ ಜೊತೆಯಲ್ಲಿ ಇಂದ್ರಿಯಗಳು ಹೋಗುವುದಿಲ್ಲ. 'ಯತ್ರಾಸ್ಯ ಪುರುಷಸ್ಯ ಮೃತಸ್ಯಾಗ್ನಿಂ ವಾಗಪ್ಯೇತಿ, ವಾತಂ ಪ್ರಾಣಃ' ಎಂದು ಬೃಹದಾರಣ್ಯಕದಲ್ಲಿ ಜೀವನು ಮೃತನಾದಾಗ ಇಂದ್ರಿಯಗಳು ಅಗ್ನ್ಯಾದಿಗಳಲ್ಲಿ ಸೇರುತ್ತವೆ, ಎನ್ನಲಾಗಿದೆ. ಎಂದರೆ, ಇದು ಸರಿಯಲ್ಲ. ಆ ಶ್ರುತಿ ಭಾಕ್ತ=ಗೌಣ. ಆ ಶ್ರುತಿಯಲ್ಲಿ 'ರೋಮಗಳು ಓಷಧಿಗಳಲ್ಲಿ ಸೇರುತ್ತವೆ, ತಲೆಕೂದಲು ವನಸ್ಪತಿಗಳಲ್ಲಿ ಸೇರುತ್ತವೆ' ಎಂದೂ ಹೇಳಲಾಗಿದೆ. ಅದು ಪ್ರತ್ಯಕ್ಷವಿರುದ್ಧ. ಆದ್ದರಿಂದ ಆ ಶ್ರುತಿಗೆ ವಾಗಿಂದ್ರಿಯನಿಯಾಮಕದೇವತೆಗಳು ತಮ್ಮ ಮೂಲರೂಪವನ್ನು ಸೇರಿ ಕೊಳ್ಳುತ್ತಾರೆ, ಎಂಬ ಗೌಣಾರ್ಥವನ್ನೇ ಹೇಳಬೇಕು. ಅಗ್ನಿಯಲ್ಲಿ ಹಾಕಿದ ವಸ್ತುಗಳು ನಿರುಪಯುಕ್ತವಾಗುವಂತೆ ವಾಗಾದಿದೇವತೆಗಳಿಂದಲೂ ಜೀವನಿಗೆ ಉಪಕಾರವಿಲ್ಲ, ಎಂದಿಷ್ಟೇ ಅಭಿಪ್ರಾಯ.

**॥ ಪ್ರಥಮೇಽಶ್ರವಣಾದಿತಿ ಚೇನ್ನ ತಾ ಏವ ಹ್ಯುಪಪತ್ತೇಃ ॥** ಪಂಚಾಗ್ನಿಗಳಲ್ಲಿ ಮೊದಲ ಅಗ್ನಿ ದ್ಯುಲೋಕ. ಅದರಲ್ಲಿ 'ಶ್ರದ್ಧಾಂ ಜುಹ್ವತಿ' ಎಂದು ಶ್ರದ್ಧಾರೂಪವಾದ ಆಹುತಿಯನ್ನು ಛಾಂದೋಗ್ಯದಲ್ಲಿ ಹೇಳಲಾಗಿದೆ. ಅಲ್ಲಿ ನೀರಿನ ಪ್ರಸ್ತಾಪ ಇಲ್ಲ. ಹೀಗಿರುವಾಗ 'ಪಂಚಮ್ಯಾಮ್ ಆಹುತೌ ಆಪಃ...' ಎಂದು ನೀರಿನಿಂದ ವೇಷ್ಟಿತನಾದ ಜೀವಾತ್ಮನ ಪ್ರಸ್ತಾವ ಸರಿಯಲ್ಲ ಎಂದರೆ, ತಾಃ ಏವ=ಆ ನೀರನ್ನೇ ಮೊದಲ ಆಹುತಿಯಲ್ಲಿ ಶ್ರದ್ಧಾಶಬ್ದದಿಂದ ಹೇಳಲಾಗಿದೆ. ಉಪಪತ್ತೇಃ=ಶ್ರದ್ಧಾಶಬ್ದಕ್ಕೆ ನೀರು ಎಂಬ ಅರ್ಥವನ್ನು ಹೇಳಿದರೆ ಮಾತ್ರ ಪ್ರಶ್ನಪ್ರತಿವಚನಗಳು ಸಂಗತವಾಗುತ್ತವೆ. 'ವೇತ್ಥ ಯಥಾ ಪಂಚಮ್ಯಾಂ ಆಹುತೌ ಆಪಃ ಪುರುಷವಚಸಃ ಭವಂತಿ' ಎಂಬ ಪ್ರಶ್ನೆಯಲ್ಲಿ 'ನೀರು

ಪುರುಷ ಎಂಬ ಹೆಸರು ಪಡೆಯುವುದು ಹೇಗೆ' ಎಂಬ ಪ್ರಶ್ನೆ. ಇದಕ್ಕೆ 'ಶ್ರದ್ಧೆಯು ಮೊದಲ ಆಹುತಿ' ಎಂಬ ಉತ್ತರ ಅಸಂಗತ. ಶ್ರದ್ಧೆ ಅಂತಃಕರಣವೃತ್ತಿ. ಅದನ್ನು ಆಹುತಿಕೊಡಲು ಸಾಧ್ಯವೂ ಇಲ್ಲ. ಆದ್ದರಿಂದ ಶ್ರದ್ಧೆ ಎಂದರೆ ಶ್ರದ್ಧಾಪೂರ್ವಕವಾಗಿ ಅಗ್ನಿಹೋತ್ರಾದಿಕರ್ಮಗಳಲ್ಲಿ ನೀಡಿದ ದ್ರವಪ್ರಧಾನವಾದ ಆಹುತಿಗಳ ಸೂಕ್ಷ್ಮರೂಪವಾದ ನೀರು.

**॥ ಅಶ್ರುತತ್ವಾದಿತಿ ಚೇನ್ನೇಷ್ಟಾದಿಕಾರಿಣಾಂ ಪ್ರತೀತೇಃ ॥** ಈ ಸಂವಾದದಲ್ಲಿ ಭೂತಗಳು ಶ್ರುತವಾಗಿವೆ, ಜೀವನು ಹೇಳಲ್ಪಟ್ಟಿಲ್ಲ. ಅವನು ಪ್ರಕರಣದಲ್ಲಿ ಅಶ್ರುತ. ಆದ್ದರಿಂದ ಭೂತಪರಿಷ್ವಕ್ತನಾಗಿ ಜೀವ ಹೋಗುತ್ತಾನೆ, ಎಂದು ತಿಳಿಯುವುದು ಹೇಗೆ? ಇದಕ್ಕೆ ಹೀಗೆ ಸಮಾಧಾನ—ಛಾಂದೋಗ್ಯದಲ್ಲಿ ಇಷ್ಟಾದಿಕಾರಿಗಳಿಗೆ=ಯಜ್ಞಾದಿಗಳನ್ನು ಮಾಡುವ ಕರ್ಮಿಗಳಿಗೆ 'ತೇ ಧೂಮಮ್ ಅಭಿಸಂಭವಂತಿ' ಎಂದು ಧೂಮಾದಿ ಮಾರ್ಗವನ್ನು ಹೇಳಿ 'ಆಕಾಶಾಚ್ಚಂದ್ರಮಸಮೇಷ ಸೋಮೋ ರಾಜಾ' ಎಂದು ಅವರಿಗೆ ಚಂದ್ರಲೋಕಪ್ರಾಪ್ತಿಯನ್ನು ಹೇಳಲಾಗಿದೆ. ಇದೇ ರೀತಿಯಾಗಿ ಪಂಚಾಗ್ನಿಹೋಮವನ್ನು ಹೇಳುವಾಗಲೂ ಛಾಂದೋಗ್ಯದಲ್ಲಿ 'ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತಿ, ತಸ್ಯಾ ಆಹುತೇಃ ಸೋಮೋ ರಾಜಾ ಸಂಭವತಿ' ಎಂದು ಹೇಳಲಾಗಿದೆ. ದಧಿ–ಹಾಲು–ತುಪ್ಪ ಮೊದಲಾದ ದ್ರವ್ಯಗಳನ್ನು ಅಗ್ನಿಹೋತ್ರಾದಿಗಳಲ್ಲಿ ಆಹುತಿ ಕೊಡುತ್ತಾರೆ. ಆ ಆಹುತಿಗಳೇ ಸೂಕ್ಷ್ಮರೂಪದಿಂದ 'ಅಪೂರ್ವ' ಎಂಬ ಹೆಸರಿನಲ್ಲಿ ಅವರ ಜೊತೆಯಲ್ಲೇ ಇರುತ್ತವೆ. ಅಂತ್ಯೇಷ್ಟಿಯಲ್ಲಿ ಸ್ಥೂಲಶರೀರವನ್ನು 'ಅಸೌ ಸ್ವರ್ಗಾಯ ಲೋಕಾಯ ಸ್ವಾಹಾ' ಎಂದು ಆಹುತಿ ನೀಡಿದಾಗ ಆ ಸೂಕ್ಷ್ಮರೂಪಗಳು ಅವರೊಂದಿಗೇ ಹೋಗುತ್ತವೆ. ಆದ್ದರಿಂದ 'ಆಪಃ' ಎಂಬ ಪದಕ್ಕೆ ಅಪ್‌ಶರೀರನಾದ ಜೀವ ಎಂದೇ ಅರ್ಥ.

**॥ ಭಾಕ್ತಂ ವಾಽನಾತ್ಮವಿತ್ತ್ವಾತ್ ತಥಾಹಿ ದರ್ಶಯತಿ ॥** ಧೂಮಾದಿ ಮಾರ್ಗದಲ್ಲಿ ಚಂದ್ರಲೋಕಕ್ಕೆ ಹೋದ ಕರ್ಮಿಗಳನ್ನು 'ತಂ ದೇವಾ ಭಕ್ಷಯಂತಿ' ಎಂದು ಛಾಂದೋಗ್ಯದಲ್ಲಿ, ದೇವತೆಗಳು ತಿನ್ನುತ್ತಾರೆ, ಎಂದಿದೆ. ಹೀಗಿದ್ದಾಗ ಅವರು ತಿರುಗಿ ಬರುವುದು ಹೇಗೆ? ಅದಕ್ಕುತ್ತರ— ಭಾಕ್ತಂ=ಭಕ್ಷಯಂತಿ ಎನ್ನುವುದು ಗೌಣ. ನಾವು ಅನ್ನ ತಿಂದಂತೆ ದೇವತೆಗಳು ಕರ್ಮಿಗಳನ್ನು ತಿನ್ನುವುದಿಲ್ಲ, ದೇವತೆಗಳ ಪರಿಚಾರಕರಾಗಿ ಅವರು ಇರುತ್ತಾರೆ, ಎಂದಿಷ್ಟೇ ಅದರ ಅರ್ಥ. ಏಕೆಂದರೆ, ದೇವತೆಗಳಿಗೆ ಅನ್ನ–ಪಾನಾದಿಗಳು ಇಲ್ಲ, ಎಂದು ಶ್ರುತಿಯಲ್ಲಿದೆ. ಅನಾತ್ಮಜ್ಞಾನಿಗಳು ಪಶುಗಳಂತೆ, ದೇವತೆಗಳ ಪರಿಚಾರಕರಾಗಿರುತ್ತಾರೆ ಎಂದು ಶ್ರುತಿಯಿದೆ— 'ಅಥ ಯೋಽನ್ಯಾಂ

ದೇವತಾಮುಪಾಸ್ತೇ ಅನ್ಯೋಽಸೌ ಅನ್ಯೋಽಹಮಸ್ಮೀತಿ, ನ ಸ ವೇದ ಯಥಾ ಪಶುಃ, ಏವಂ ಸ ದೇವಾನಾಂ' (ಬೃ.1.4.10) ಆದ್ದರಿಂದ ಕರ್ಮಿಗಳು ದೇವತೆಗಳ ಪರಿಚಾರಕರು ಮಾತ್ರ, ತಿನ್ನುವ ಅನ್ನರಲ್ಲ.

**ಶಾಂಕರಭಾಷ್ಯದ ವಿಮರ್ಶೆ**—ಶಾಂಕರಭಾಷ್ಯದಂತೆ ಈ ಅಧಿಕರಣದ ಮೊದಲ ಐದು ಸೂತ್ರಗಳು ಭೂತ–ಜೀವ ಉಭಯವಿಚಾರಪರವಾಗಿವೆ. ಕೊನೆಯ ಎರಡು ಸೂತ್ರಗಳು ಜೀವಮಾತ್ರಪರ. ಹೀಗೆ ಒಂದೇ ಅಧಿಕರಣದಲ್ಲಿ ಪರ್ವದ್ವಯಾತ್ಮಕ ವಿಚಾರ. ಇದು ಯುಕ್ತವಲ್ಲ. ವಿಚಾರ ಬೇರೆಯಾದಾಗ ಅಧಿಕರಣವೂ ಬೇರೆಯಾಗಬೇಕು. ಪ್ರಬಲವಾದ ಸೂಚಕಗಳು ಇದ್ದರೆ ಮಾತ್ರ ಅಧಿಕರಣಭೇದ ಮಾಡದೆ ಏಕಾಧಿಕರಣವನ್ನಾಗಿ ಪರಿಗಣಿಸಬೇಕು. ಪ್ರಕೃತದಲ್ಲಿ ಅಂತಹ ಸೂಚನೆಗಳು ಇಲ್ಲವಾದುದರಿಂದ ಅಧಿಕರಣಭೇದ ಮಾಡದಿರುವುದು ಯುಕ್ತವಲ್ಲ.

ನಾಲ್ಕನೆಯ ಸೂತ್ರದಲ್ಲಿ 'ಭಾಕ್ತತ್ವಾತ್' ಎಂಬ ಶಬ್ದಕ್ಕೆ ಭಾಗವಿಷಯತ್ವಾತ್, ಎಂದು ದ್ವೈತಭಾಷ್ಯದ ಅರ್ಥ. ಅದ್ವೈತ ಮತ್ತು ವಿಶಿಷ್ಟಾದ್ವೈತ ಭಾಷ್ಯಗಳಲ್ಲಿ ಇದಕ್ಕೆ 'ಗೌಣತ್ವಾತ್' ಎಂಬ ಅರ್ಥವನ್ನು ಮಾಡಲಾಗಿದೆ. 'ಅಗ್ನಿಂ ವಾಗಪ್ಯೇತಿ' ಎಂದು ಉಪನಿಷತ್ತಿನಲ್ಲಿ ಹೇಳಿರುವುದು ಗೌಣ. ವಾಗಭಿಮಾನಿದೇವತೆಗಳು ನಿಷ್ಕ್ರಿಯರಾಗಿರುವುದರಿಂದ ಅಪ್ಯಯವನ್ನು ಹೇಳಲಾಗಿದೆ, ಎಂದು. ಆದರೆ 'ಪ್ರಾಣಾ ಭಾಗತ ಏವ ತು' ಎಂದು ಸ್ಮೃತಿಯಲ್ಲಿ 'ಭಾಗ(ಅಂಶ)' ಎಂದು ಅರ್ಥವು ಸ್ಪಷ್ಟವಾಗಿ ಇರುವುದರಿಂದ ದ್ವೈತಭಾಷ್ಯದ ಅರ್ಥವು ಸಮಂಜಸವಾಗಿದೆ.

**ರಾಮಾನುಜಭಾಷ್ಯದಲ್ಲೂ** ಅಧಿಕರಣವ್ಯವಸ್ಥೆ ಮತ್ತು ಸೂತ್ರಗಳ ಅರ್ಥ ಅದ್ವೈತಭಾಷ್ಯದಂತೆಯೇ ಇದೆ. ಆದ್ದರಿಂದ ಪ್ರತ್ಯೇಕವಾಗಿ ಅದನ್ನು ವ್ಯಾಖ್ಯಾನ ಮಾಡುವ ಅಗತ್ಯವಿಲ್ಲ.

**ಇಲ್ಲಿಗೆ ಭಾಕ್ತಾಧಿಕರಣವು ಮುಗಿಯಿತು.**

## ೮. ಕೃತಾತ್ಯಯಾಧಿಕರಣಮ್

**ಕೃತಸ್ಯ ಕರ್ಮಣೋ ಭೋಗೇನ ಕ್ಷಯಾನ್ಮುಕ್ತಿರಿತ್ಯತ ಆಹ-**

**॥ ಓಂ ಕೃತಾತ್ಯಯೇಽನುಶಯವಾನ್ ದೃಷ್ಟಸ್ಮೃತಿಭ್ಯಾಮ್ ಓಂ ॥ ೮ ॥**

**'ತತಃ ಶೇಷೇಣೇಮಂ ಲೋಕಮಾಯಾತಿ ಪುನಃ ಕರ್ಮ ಕುರುತೇ ಪುನರ್ಗಚ್ಛತಿ ಪುನರಾಗಚ್ಛತಿ' ಇತಿ ಶ್ರುತೇಃ ।**

**'ಭುಕ್ತಶೇಷಾನುಶಯವಾನಿಮಾಂ ಪ್ರಾಪ್ಯ ಭುವಂ ಪುನಃ ।**
**ಕರ್ಮ ಕೃತ್ವಾ ಪುನರ್ಗಚ್ಛೇತ್ ಪುನರಾಯಾತಿ ನಿತ್ಯಶಃ ॥**
**'ಆ ಚತುರ್ದಶಮಾದ್ ವರ್ಷಾತ್ ಕರ್ಮಾಣಿ ನಿಯಮೇನ ತು ।**
**ದಶಾವರಾಣಾಂ ದೇಹಾನಾಂ ಕಾರಣಾನಿ ಕರೋತ್ಯಯಮ್ ।**
**ಅತಃ ಕರ್ಮಕ್ಷಯಾನ್ಮುಕ್ತಿಃ ಕುತ ಏವ ಭವಿಷ್ಯತಿ ॥'**
**ಇತ್ಯಾದಿಸ್ಮೃತೇಶ್ಚ ಶೇಷವಾನೇವಾಽಯಾತಿ ।**

ಸಾಧಕರು ಸಂಪಾದಿಸಿದ ಪುಣ್ಯ ಅಥವಾ ಪಾಪಗಳು ಸ್ವರ್ಗಾದಿಸುಖ ಅಥವಾ ನರಕಾದಿ ದುಃಖಗಳನ್ನು ಅನುಭವಿಸುವುದರಿಂದಲೇ ನಾಶವಾಗುತ್ತವೆ. ಬಂಧಕಾರಣ ವಾದ ಪುಣ್ಯಪಾಪಗಳೇ ತೀರಿದಮೇಲೆ ಬಂಧದಿಂದ ಶಾಶ್ವತವಾದ ಬಿಡುಗಡೆಯಾಗುತ್ತದೆ. ಇದೇ ಮೋಕ್ಷ. ಆದ್ದರಿಂದ ಮೋಕ್ಷಕ್ಕಾಗಿ ವೈರಾಗ್ಯಾದಿಗಳ ಅಗತ್ಯವಿಲ್ಲ ಎಂಬ ಆಕ್ಷೇಪ ಬಂದಾಗ ಮುಂದಿನ ಸೂತ್ರವು ಸಮಾಧಾನ ನೀಡುತ್ತದೆ.

ಶ್ರುತಿ-ಸ್ಮೃತಿಗಳಿಂದ ತಿಳಿಯುವಂತೆ ಕರ್ಮವು ಸ್ವರ್ಗ-ನರಕಾದಿ ಭೋಗಗಳಿಂದ ಬಹುಭಾಗ ನಾಶವಾದರೂ ಅದರ ಶೇಷಭಾಗವನ್ನು ಉಳಿಸಿಕೊಂಡೇ ಜೀವನು ತಿರುಗಿಬರುತ್ತಾನೆ.

**ವಿವರಣೆ**—ಸ್ವರ್ಗ-ನರಕಾದಿಗಳನ್ನು ಅನುಭವಿಸಿದಾಗ ಅದಕ್ಕೆ ಕಾರಣವಾಗಿರುವ ಪುಣ್ಯಪಾಪಗಳು ಮಾತ್ರ ನಾಶವಾಗುತ್ತವೆ. ಆ ಪುಣ್ಯದ ಶೇಷವನ್ನೂ ಉಳಿಸಿಕೊಂಡು ಸ್ವರ್ಗಿಯು ಭೂಮಿಗೆ ಬರುತ್ತಾನೆ. ಅಲ್ಲಿ ಸರ್ವಕರ್ಮನ್ನಾಶವಾಗುವುದಿಲ್ಲ. ಜನ್ಮ-ಜನ್ಮಾಂತರಗಳಲ್ಲಿ ಮಾಡಿರುವ ಅನಂತ ಕರ್ಮಗಳ ಹೊರೆ ಜೀವನಲ್ಲಿ ಇರುತ್ತದೆ. ಅಪರೋಕ್ಷಜ್ಞಾನದಿಂದಲೇ ಅವುಗಳ ನಾಶವಾಗಬೇಕು. ಭೋಗದಿಂದ ಅವುಗಳ ನಾಶ ಅಸಂಭಾವಿತ. ಆದ್ದರಿಂದ ಕರ್ಮಕ್ಷಯದಿಂದಲೇ ಬಂಧನಿವೃತ್ತಿ ಎಂಬ ನಿರೀಕ್ಷೆ ಸಮುದ್ರದ ತೆರೆಗಳು ಶಾಂತವಾದ ಮೇಲೆ ಸ್ನಾನ ಮಾಡುವ ಆಸೆಯಂತೆ ಹುಸಿಯಾದುದು.

**ಶ್ರುತ್ಯರ್ಥ**—ತತಃ=ಸ್ವರ್ಗದಿಂದ ಶೇಷೇಣ=ಕರ್ಮಶೇಷದಿಂದ ಯುಕ್ತನಾಗಿಯೇ

ಇಮಂ ಲೋಕಂ=ಭೂಲೋಕಕ್ಕೆ ಪುನರಾಯಾತಿ=ತಿರುಗಿ ಬರುತ್ತಾನೆ. ಪುನಃ ಕರ್ಮ ಕುರುತೇ=ಮತ್ತೆ ಇಲ್ಲಿ ಕರ್ಮಗಳನ್ನು ಮಾಡುತ್ತಾನೆ, ಪುನಃ ಗಚ್ಛತಿ=ಮತ್ತೆ ಲೋಕಾಂತರಕ್ಕೆ ಹೋಗುತ್ತಾನೆ, ಪುನರಾಗಚ್ಛತಿ=ತಿರುಗಿ ಬರುತ್ತಾನೆ.

ಸ್ಮೃತ್ಯರ್ಥ—ಭುಕ್ತಶೇಷಾನುಶಯವಾನ್=ಸ್ವರ್ಗಾದಿಲೋಕಗಳಲ್ಲಿ ಅನುಭವಿಸಿರುವ ಪುಣ್ಯ–ಪಾಪಾದಿಗಳ ಅವಶೇಷವನ್ನು ಉಳಿಸಿಕೊಂಡವನಾಗಿಯೇ ಇಮಾಂ ಭುವಂ ಪ್ರಾಪ್ಯ=ಈ ಭೂಲೋಕವನ್ನು ಹೊಂದಿ ಪುನಃ ಕರ್ಮ ಕೃತ್ವಾ=ಮತ್ತೆ ಕರ್ಮವನ್ನು ಮಾಡಿ ಪುನಃ ಗಚ್ಛೇತ್=ಮತ್ತೆ ಪರಲೋಕಕ್ಕೆ ಹೋಗುತ್ತಾನೆ, ಪುನಃ ಆಯಾತಿ=ತಿರುಗಿ ಬರುತ್ತಾನೆ. ನಿತ್ಯಶಃ=ಸರ್ವದಾ ಈ ಅಲೆದಾಟ. ಆ ಚತುರ್ದಶಮಾತ್ ವರ್ಷಾತ್=ಹದಿನಾಲ್ಕನೇ ವರ್ಷದ ಸಮಾಪ್ತಿಯನ್ನು ಆರಂಭಿಸಿ ಅಯಂ=ಈ ಜೀವಾತ್ಮನು ದಶಾವರಾಣಾಂ ದೇಹಾನಾಂ=ಹತ್ತು ದೇಹಗಳ ಪ್ರಾಪ್ತಿಗೆ ಕಡಿಮೆಯಾಗದಷ್ಟು ಕಾರಣಾನಿ=ಕಾರಣವಾಗುವ ಕರ್ಮಾಣಿ=ಪುಣ್ಯಪಾಪಗಳನ್ನು ನಿಯಮೇನ=ನಿಶ್ಚಿತವಾಗಿ ಕರೋತಿ=ಮಾಡುತ್ತಾನೆ. ಅತಃ=ಆದ್ದರಿಂದ ಕರ್ಮ ಕ್ಷಯಾತ್=ಕರ್ಮನಾಶದಿಂದಾಗಿಯೇ ಮೋಕ್ಷವು ಕುತ ಏವ=ಹೇಗೆ ತಾನೇ ಭವಿಷ್ಯತಿ=ಆದೀತು?

## ದ್ವೈತದರ್ಶನದಲ್ಲಿ ಸೂತ್ರಾರ್ಥ—

**॥ ಓಂ ಕೃತಾತ್ಯಯೇಽನುಶಯವಾನ್ ದೃಷ್ಟಸ್ಮೃತಿಭ್ಯಾಮ್ ಓಂ ॥** (ಅತ್ರ ಕರ್ಮಣಾಂ ಭೋಗೇನ ನ ನಿಃಶೇಷಾನಾಶಃ ಇತಿ ಉಚ್ಯತೇ। ಕೃತಸ್ಯ=ಕರ್ಮಣಃ ಅತ್ಯಯೇ= ಸ್ವರ್ಗಾದಿಭೋಗೇನ ಕ್ಷಯೇ ಅನುಶಯವಾನ್=ಭುಕ್ತಶೇಷವಾನ್ ಆಯಾತಿ। ಕುತಃ ? 'ಶೇಷೇಣ ಇಮಂ ಲೋಕಮ್ ಆಯಾತಿ' ಇತಿ 'ಭುಕ್ತಶೇಷಾನು–ಶಯವಾನ್ ಇಮಾಂ ಪ್ರಾಪ್ಯ ಭುವಂ ಪುನಃ।' ಇತಿ ಶ್ರುತಿ–ಸ್ಮೃತಿಭ್ಯಾಂ, ಇತ್ಯರ್ಥಃ। ಭೂಮ್ಯಾಮ್ ಅಲ್ಪಸಂಪಾದನೇ ಕರ್ಮಸಮಾಪ್ತಿಃ ಇತಿ ಶಂಕಾನಿರಾಸಾಯ ಸ್ಮೃತ್ಯುಕ್ತಿಃ।)

ಕೃತಾತ್ಯಯೇ, ಕೃತ=ಕರ್ಮದ ಅತ್ಯಯೇ ಸತಿ=ಸ್ವರ್ಗಾದಿಭೋಗದಿಂದ ಕ್ಷಯವಾದಾಗ ಅನುಶಯವಾನ್=ಭುಕ್ತಕರ್ಮ ಅವಶೇಷಸಹಿತನಾಗಿ ಹಿಂದಕ್ಕೆ ಬರುತ್ತಾನೆ. ಶ್ರುತಿ–ಸ್ಮೃತಿಗಳೇ ಇದಕ್ಕೆ ಆಧಾರ.

**ಇಲ್ಲಿಗೆ ಕೃತಾತ್ಯಯಾಧಿಕರಣವು ಮುಗಿಯಿತು.**

## ೯. ಯಥೇತಾಧಿಕರಣಮ್

'ಯಥೇತಮೇವ ಗಚ್ಛತಿ ಯಥೇತಮಾಗಚ್ಛತಿ ಸ ಭುಂಕ್ತೇ ಸ ಕರ್ಮ ಕುರುತೇ ಸ ಪರಿವರ್ತತೇ' ಇತಿ ಗತಿಪ್ರಕಾರೇಣಾಗತಿಃ ಪ್ರತೀಯತೇ ।

ಅತೋ ಬ್ರೂತೇ-

### ॥ ಓಂ ಯಥೇತಮನೇವಂ ಚ ಓಂ ॥ ೯ ॥

'ಧೂಮಾದಭ್ರಮಭ್ರಾದಾಕಾಶಮಾಕಾಶಾಚ್ಚಂದ್ರಲೋಕಂ ಯಥೇತ-ಮಾಕಾಶಮಾಕಾಶಾದ್ ವಾಯುಂ ವಾಯುರ್ಭೂತ್ವಾ ಧೂಮೋ ಭವತಿ ಧೂಮೋ ಭೂತ್ವಾಽಭ್ರಂ ಭವತ್ಯಭ್ರಂ ಭೂತ್ವಾ ಮೇಘೋ ಭವತಿ ಮೇಘೋ ಭೂತ್ವಾ ಪ್ರವರ್ಷತಿ' ಇತಿ ಕಾಷಾಯಣ-ಶ್ರುತೇರ್ಯಥಾಗತಮನ್ಯಥಾ ಚ ॥

ಜೀವನು ಸ್ವರ್ಗಾದಿಪರಲೋಕಗಳಿಗೆ ಯಾವ ಮಾರ್ಗದಲ್ಲಿ ಹೋಗುವನೋ ಅದೇ ಮಾರ್ಗದಲ್ಲಿ ತಿರುಗಿ ಬರುತ್ತಾನೆ, ಎಂದು 'ಯಥೇತಮೇವ ಗಚ್ಛತಿ' ಎಂಬ ಶ್ರುತಿಯಲ್ಲಿದೆ. ಆದ್ದರಿಂದ ಪರಲೋಕಗಳಿಗೆ ಹೋಗಿ ಬರುವ ಮಾರ್ಗ ಒಂದೇ ಆಗಿರುತ್ತದೆ, ಎಂದು ಪ್ರತೀತವಾದಾಗ ಸಿದ್ಧಾಂತ ಮಾಡುವ ಸೂತ್ರ ಇದು.

ಜೀವನು ಹೋದದಾರಿಯಲ್ಲೇ ಬರುತ್ತಾನೆ, ಬೇರೆ ಮಾರ್ಗದಲ್ಲೂ ಬರುತ್ತಾನೆ. 'ಧೂಮಾದಭ್ರಮ್' ಇತ್ಯಾದಿಶ್ರುತಿ ಹೇಳುವಂತೆ ಅಂತರಿಕ್ಷಲೋಕದವರೆಗೆ ಹೋದ ಮಾರ್ಗದಲ್ಲೇ ಬರುತ್ತಾನೆ. ಆಮೇಲೆ, ಆಕಾಶ, ವಾಯು, ಹೊಗೆ, ಅಭ್ರ, ಮೋಡ, ಮಳೆಯ ಮೂಲಕ ಭೂಮಿಗೆ ಬೀಳುತ್ತಾನೆ.

**ವಿವರಣೆ**—ಪಾಂಚಭೌತಿಕವಾದ ಈ ಸ್ಥೂಲದೇಹವನ್ನು ತೊರೆದ ಮೇಲೆ ಜೀವನಿಗೆ ಆಪ್ಯದೇಹ ಬರುತ್ತದೆ. ಆ ದೇಹದಲ್ಲಿ ಅವನು ಹೊಗೆ, ಮೋಡ, ಆಕಾಶ, ಚಂದ್ರಲೋಕದ ಮಾರ್ಗವಾಗಿ ಸ್ವರ್ಗಾದಿಲೋಕಗಳಿಗೆ ಹೋಗುತ್ತಾನೆ. ಬರುವಾಗ ಆಕಾಶಲೋಕದವರೆಗೆ ಅದೇ ದಾರಿಯಲ್ಲಿ ಬಂದು ಮುಂದೆ ಮಳೆಯ ಮೂಲಕ ಭೂಮಿಗೆ ಬಿದ್ದು ಧಾನ್ಯದಲ್ಲಿ ಸೇರಿ ಪುರುಷದೇಹವನ್ನು ಪ್ರವೇಶಿಸುತ್ತಾನೆ. ಹೀಗೆ ಸ್ವರ್ಗಕ್ಕೆ ಹೋಗಿ ಬರುವ ದಾರಿಯು ಕ್ಲೇಷದಾಯಕವಾದುದರಿಂದ ಇಂತಹ ನಶ್ವರಫಲದಲ್ಲಿ ವೈರಾಗ್ಯ ಬಂದು ಮೋಕ್ಷಸಾಧನದಲ್ಲಿ ಆಸಕ್ತಿ ತಾಳಬೇಕೆಂದು ಸೂತ್ರದ ಅಭಿಪ್ರಾಯ.

**ಶ್ರುತ್ಯರ್ಥ**—ಯಥಾ ಇತಂ=ಹೇಗೆ ಸ್ವರ್ಗದಿಂದ ಬಂದಿರುವನೋ ಅದೇ ಮಾರ್ಗದಿಂದ ಮತ್ತೆ ಸ್ವರ್ಗಕ್ಕೆ ಗಚ್ಛತಿ=ಹೋಗುತ್ತಾನೆ. ಯಥಾ ಇತಂ=ಹೇಗೆ ಸ್ವರ್ಗಕ್ಕೆ ಹೋದನೋ ಅದೇ ರೀತಿಯಾಗಿ ಆಗಚ್ಛತಿ=ಈ ಭೂಮಿಗೆ ಬರುತ್ತಾನೆ. ಸಃ=ಜೀವನು ಕರ್ಮ ಕುರುತೆ=ಪುಣ್ಯಸಂಪಾದಿಸುತ್ತಾನೆ. ಸಃ=ಜೀವನು ಪರಿವರ್ತತೇ=ಸುತ್ತಾಡುತ್ತಲೆ ಇರುತ್ತಾನೆ. ಈ ಅಂಶವನ್ನು ಹೇಳಿರುವುದರಿಂದ ಸ್ವರ್ಗಕ್ಕೆ ಹೋಗಿ ಬರುವವನು ಜೀವನೆಂದು ಸ್ಪಷ್ಟವಾಗುವುದು.

**ಕಾಷಾಯಣ ಶ್ರುತ್ಯರ್ಥ**—ಧೂಮಾತ್=ಧೂಮಾಭಿಮಾನಿದೇವತಾಲೋಕದಿಂದ ಅಭ್ರಂ=ಅಭ್ರಾಭಿಮಾನಿದೇವತಾಲೋಕಕ್ಕೆ ಅಭ್ರಾತ್=ಅಭ್ರಾಭಿಮಾನಿಲೋಕದಿಂದ ಆಕಾಶಂ=ಆಕಾಶಲೋಕಕ್ಕೆ ಆಕಾಶಾತ್=ಆಕಾಶದಿಂದ ಚಂದ್ರಲೋಕಂ=ಚಂದ್ರಲೋಕಕ್ಕೆ ಹೋಗುತ್ತಾನೆ. ಯಥಾ=ಯಾವ ಕ್ರಮದಿಂದ ಆಕಾಶಂ ಇತಂ=ಆಕಾಶಲೋಕಕ್ಕೆ ಹೋದನೋ ಅದೇ ಕ್ರಮದಿಂದ ಅಲ್ಲಿಯವರೆಗೆ ತಿರುಗಿ ಬರುತ್ತಾನೆ. ಆಕಾಶದಿಂದ ಚಂದ್ರಲೋಕದ ಬದಲು ವಾಯುಂ=ವಾಯುಲೋಕಕ್ಕೆ ಬರುತ್ತಾನೆ. ವಾಯುಃ ಭೂತ್ವಾ=ವಾಯುದೇಹ ಪ್ರವೇಶ ಮಾಡಿ ವಾಯುವಿನಂತೆ ಗತಿಶೀಲನಾಗಿ ಅಭ್ರಂ ಭವತಿ=ಅಭ್ರದೇಹವನ್ನು ಪಡೆಯುತ್ತಾನೆ. ಅಭ್ರಂ ಭೂತ್ವಾ=ಅಭ್ರದೇಹ ಪ್ರಾಪ್ತಿಯಿಂದ ತತ್ಸದೃಶನಾಗಿ ಮೇಘೋ ಭವತಿ=ಮೋಡದ ರೂಪ ತಾಳುತ್ತಾನೆ. ಮೇಘೋ ಭೂತ್ವಾ=ಮೋಡದಲ್ಲಿ ಸೇರಿ ಪ್ರವರ್ಷತಿ=ಮಳೆಯಾಗಿ ಸುರಿಯುತ್ತಾನೆ.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ—

**|| ಓಂ ಯಥೇತಮನೇವಂ ಚ ಓಂ ||** (ಅತ್ರ ಸ್ವರ್ಗಾತ್ ಆಗತಿಪ್ರಕಾರಃ ಉಚ್ಯತೇ । ಯಥಾ=ಯೇನ ಪ್ರಕಾರೇಣ ಇತಂ=ಸ್ವರ್ಗಾದಿ ಪ್ರತಿಗತಂ ತಥಾ ಆಯಾತಿ । ಅನೇವಂ ಚ=ಅನ್ಯಮಾರ್ಗೇಣ ಚ, ಇತ್ಯರ್ಥಃ। ಯಥೇತಮ್ ಇತ್ಯುಕ್ತ್ವಾ 'ಧೂಮಾದಭ್ರಮ್, ಅಭ್ರಾದಾಕಾಶಮ್, ಆಕಾಶಾಚ್ಚಂದ್ರಲೋಕಂ ಯಥೇತಮ್, ಆಕಾಶಮ್ ಆಕಾಶಾದ್ವಾಯುಮ್' ಇತಿ ಶ್ರುತಿಃ ಸೂಚಿತಾ। ಆಕಾಶಪರ್ಯಂತಂ ಯಥೇತಂ, ತತೋ ಅರ್ವಾಕ್ ಅನ್ಯಥಾ ಇತ್ಯರ್ಥಃ।)

ಯಥಾ=ಯಾವ ಕ್ರಮದಿಂದ ಇತಂ=ಸ್ವರ್ಗಾದಿ ಲೋಕಗಳನ್ನು ಕುರಿತು ಜೀವನು ಹೋಗುತ್ತಾನೋ ಅದೇ ಕ್ರಮದಿಂದ ಹಿಂದಕ್ಕೆ ಬರುತ್ತಾನೆ. ಅನೇವಂಚ=ಅದಲ್ಲದೆ ಬೇರೆ ಮಾರ್ಗದಿಂದಲೂ ಬರುತ್ತಾನೆ. ಆಕಾಶದವರೆಗೆ ಹೋದದಾರಿಯೇ. ಅಲ್ಲಿಂದ ಕೆಳಗೆ ಬರುವ ದಾರಿ ಬೇರೆ, ಎಂದರ್ಥ.

**ಇಲ್ಲಿಗೆ ಯಥೇತಾಧಿಕರಣವು ಮುಗಿಯಿತು.**

## ೧೦. ಚರಣಾಧಿಕರಣಮ್

**॥ ಓಂ ಚರಣಾದಿತಿ ಚೇನ್ನ ತದುಪಲಕ್ಷಣಾರ್ಥೇತಿ ಕಾರ್ಷ್ಣಾಜಿನಿಃ ಓಂ ॥ ೧೦ ॥**

**'ತದ್ ಯ ಇಹ ರಮಣೀಯಚರಣಾ ರಮಣೀಯಾಂ ಯೋನಿಮಾಪದ್ಯಂತೇ ಕಪೂಯಚರಣಾಃ ಕಪೂಯಾಮ್' (ಛಾಂ.ಉ. 5.10.7) ಇತಿ ಶ್ರುತೇಶ್ಚರಣಫಲಮೇವ ಗಮನಾಗಮನಂ ನ ಯಜ್ಞಾದಿಕೃತಃ ।**

**'ಆಚಾರ ಇತಿ ಸ ಪ್ರೋಕ್ತಃ (ಸಂಪ್ರೋಕ್ತಃ) ಕರ್ಮಾಂಗತ್ವೇನ ಶುದ್ಧಿದಃ ।**
**ಅಶುದ್ಧಿದಸ್ತ್ವನಾಚಾರಶ್ಚರಣಂ ತೂಭಯಂ ಮತಮ್ ॥'**
**ಇತಿ ಸ್ಮೃತೇರಿತಿ ಚೇತ್, ನ ।**

**ಯಜ್ಞಾದ್ಯುಪಲಕ್ಷಣಾರ್ಥಾ ಚರಣಾದಿಶ್ರುತಿರಿತಿ ಕಾರ್ಷ್ಣಾಜಿನಿರ್ಮನ್ಯತೇ ॥**

'ತದ್ಯ ಇಹ' ಇತ್ಯಾದಿ ಛಾಂದೋಗ್ಯಶ್ರುತಿಯಲ್ಲಿ ಸ್ವರ್ಗಲೋಕಗಮನ ಮತ್ತು ಆಗಮನವು 'ಚರಣ'ದ ಫಲ ಎಂದಿದೆ. ಆದ್ದರಿಂದ ಅದು ಯಜ್ಞಫಲವಲ್ಲ ಎಂದು ತಿಳಿಯಬಾರದು. 'ಚರಣವೆಂದರೆ ಸದಾಚಾರ. ಇದು ಯಜ್ಞಾದಿಕರ್ಮಗಳ ಅಂಗ. ಯಜ್ಞಾದಿ ಸತ್ಕರ್ಮಗಳಿಗೆ, ಯಜ್ಞದ್ರವ್ಯಕ್ಕೆ ಮತ್ತು ಕರ್ತೃವಿಗೆ ಶುದ್ಧಿಯು ಆಚಾರದಿಂದ ಬರುತ್ತದೆ. ಇವುಗಳಿಗೆ ಅಶುದ್ಧಿಯನ್ನು ತರುವುದೆಲ್ಲ ಅನಾಚಾರಗಳು. ಇವೆರಡನ್ನೂ 'ಚರಣ' ಎಂದು ಕರೆಯಲಾಗುವುದು. ಹೀಗೆ ಸ್ಮೃತಿ ಇದೆ.

ಆದ್ದರಿಂದ ಗಮನಾಗಮನಗಳು ಈ ಚರಣದ ಫಲ ಎಂದು ತಿಳಿಯಬಾರದು. ಶ್ರುತಿಯಲ್ಲಿರುವ ಚರಣಶಬ್ದವು ಉಪಲಕ್ಷಣ. ಅಜಹಲ್ಲಕ್ಷಣಯಾ ಯಜ್ಞಾದಿ ಸತ್ಕರ್ಮಗಳೂ ಅದಕ್ಕೆ ಅರ್ಥ. ಆದ್ದರಿಂದ ಗಮನಾಗಮನಗಳು ಯಜ್ಞಾದಿಗಳ ಫಲವೂ ಆಗಿದೆ. ಹೀಗೆಂದು ವ್ಯಾಸಶಿಷ್ಯರಾದ ಕಾರ್ಷ್ಣಾಜಿನಿಗಳು ಅಭಿಪ್ರಾಯಪಡುತ್ತಾರೆ.

ವಿವರಣೆ—ಸ್ವರ್ಗಸುಖಭೋಗ ಯಜ್ಞದ ಫಲ. ಆದರೆ, ಅಲ್ಲಿಂದ ಬರುವುದು, ಹೋಗುವುದು ಯಜ್ಞಾಂಗವಾದ ಆಚರಣೆಯ ಫಲ. ಸದಾಚಾರಿಗಳು ಉಚ್ಚಯೋನಿ ಯಲ್ಲಿ ಹುಟ್ಟುತ್ತಾರೆ. ದುರಾಚಾರಿಗಳು ನೀಚಯೋನಿಯಲ್ಲಿ ಜನಿಸುತ್ತಾರೆ. ಎಂದು ಛಾಂದೋಗ್ಯಶ್ರುತಿಯಲ್ಲಿ ಇದೆ. ಹೀಗೆ, ಗಮನಾಗಮನಾದಿಗಳು ಆಚಾರದ ಫಲ,

ಕಾಮ್ಯಕರ್ಮದ ಫಲವಲ್ಲ. ಆದ್ದರಿಂದ ಕಾಮ್ಯಕರ್ಮದಲ್ಲಿ ವೈರಾಗ್ಯ ತಾಳಬೇಕಾಗಿಲ್ಲ, ಎಂದು ಪೂರ್ವಪಕ್ಷದ ಅಭಿಪ್ರಾಯ.

ಶ್ರುತಿಯಲ್ಲಿರುವ ಚರಣ ಶಬ್ದವು ಉಪಲಕ್ಷಣಯಾ ಯಜ್ಞಾದಿಕರ್ಮವಾಚಕ. ಆದ್ದರಿಂದ ಉಚ್ಚನೀಚಯೋನಿಪ್ರಾಪ್ತಿಯು ಕರ್ಮಫಲವೂ ಆಗಿದೆ. ಅದರಲ್ಲಿ ವೈರಾಗ್ಯ ತಾಳಬೇಕು, ಎಂದು ಸೂತ್ರದ ಸಿದ್ಧಾಂತ.

**ಶ್ರುತ್ಯರ್ಥ–** 'ತದ್ ಯ ಇಹ ರಮಣೀಯಚರಣಾಃ ಅಭ್ಯಾಶೋ ಹ
ಯತ್ತೇ ರಮಣೀಯಾಂ ಯೋನಿಮ್ ಆಪದ್ಯೇರನ್
ಬ್ರಾಹ್ಮಣಯೋನಿಂ ವಾ ಕ್ಷತ್ರಿಯಯೋನಿಂ ವಾ ವೈಶ್ಯಯೋನಿಂ ವಾ।
ಅಥ ಯ ಇಹ ಕಪೂಯಚರಣಾ ಅಭ್ಯಾಶೋ ಹ ಯತ್ತೇ
ಕಪೂಯಾಂ ಯೋನಿಮ್ ಆಪದ್ಯೇರನ್ ಶ್ವಯೋನಿಂ ವಾ
ಸೂಕರಯೋನಿಂ ವಾ ಚಂಡಾಲಯೋನಿಂ ವಾ ॥

(ಹೀಗೆ ಶ್ರುತಿಯಲ್ಲಿ 'ಆಪದ್ಯೇರನ್' ಎಂದಿದೆ. ಭಾಷ್ಯದಲ್ಲಿ 'ಆಪದ್ಯಂತೇ' ಎಂದಿದೆ. ಭಾಷ್ಯದಲ್ಲಿ ಅರ್ಥತೋ ಅನುವಾದ ಎಂದಾಗಲೀ ಶಾಖಾಂತರ ಪಾಠ ಎಂದಾಗಲೀ ತಿಳಿಯಬೇಕು.)

ತತ್–ತತ್ರ=ಕರ್ಮಾಚರಣೆ ಮಾಡುವವರಲ್ಲಿ ರಮಣೀಯಚರಣಾಃ=ಸದಾಚಾರ ಪೂರ್ವಕವಾಗಿ ಯಜ್ಞಾದಿಕರ್ಮಗಳನ್ನು ಮಾಡುವವರು ಇಹ=ಈ ಭೂಮಿಯಲ್ಲಿ ಅಭ್ಯಾಶಃ=ಕೂಡಲೇ ರಮಣೀಯಾಂ ಯೋನಿಂ=ಪರಿಶುದ್ಧವಾದ ಜನ್ಮವನ್ನು ಆಪದ್ಯಂತೇ=ಪಡೆಯುತ್ತಾರೆ. ರಮಣೀಯಯೋನಿ ಎಂದರೆ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಜನ್ಮ. ಕಪೂಯಚರಣಾಃ=ದುರಾಚಾರಿಗಳಾಗಿ ಯಜ್ಞಾದಿಕರ್ಮಗಳನ್ನು ಆಚರಿಸುವವರು ಕಪೂಯಾಂ ಯೋನಿಂ=ನೀಚ ಜನ್ಮವನ್ನು ಆಪದ್ಯಂತೇ=ಪಡೆಯುತ್ತಾರೆ. ನೀಚಜನ್ಮ ಎಂದರೆ, ನಾಯಿಜನ್ಮ, ಹಂದಿಜನ್ಮ ಅಥವಾ ಚಂಡಾಲ ಜನ್ಮ.

ಮೋಕ್ಷವು ಜ್ಞಾನದಿಂದಲೇ ಲಭ್ಯವೆಂದಾದ ಮೇಲೆ ಅದು ಕರ್ಮಫಲವಲ್ಲ. ಅರ್ಥಾತ್ ಗಮನಾಗಮನ ಇರುವ ಫಲವೇ ಕರ್ಮಸಾಧ್ಯ. 'ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ' ಎಂಬ ಶ್ರುತಿಯೂ ಅದನ್ನೇ ಹೇಳುತ್ತದೆ. ಆದ್ದರಿಂದ, ಯೋನಿಪ್ರಾಪ್ತಿಯು ಚರಣಫಲವಲ್ಲ, ಯಜ್ಞಾದಿಕರ್ಮಫಲ. ಈ ಅಂಶವನ್ನು ಸೂತ್ರಾತ್ ಬಹಿರೇವ ತಿಳಿದುಕೊಂಡು, ಹಾಗಾದರೆ 'ರಮಣೀಯಚರಣಾಃ' ಎಂಬ ಶ್ರುತಿಯ ವಿರೋಧ ಬರುತ್ತದೆ, ಎಂಬ ಆಕ್ಷೇಪಕ್ಕೆ ಸೂತ್ರದ ಸಮಾಧಾನ—

ಶ್ರುತಿಯಲ್ಲಿರುವ ಚರಣಶಬ್ದವು ಉಪಲಕ್ಷಣ, ಎಂದು. ಇದಕ್ಕೆ ಆಧಾರವಾಗಿ ಛಾಂದೋಗ್ಯಶ್ರುತಿಯೂ ಇದೆ—

ಅಥ ಯ ಇಮೇ ಗ್ರಾಮೇ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ
ತೇ ಧೂಮಮ್ ಅಭಿಸಂಭವಂತಿ ॥

ಯಾರು ತಮ್ಮ ಗ್ರಾಮಗಳಲ್ಲಿ ಯಜ್ಞ(ಇಷ್ಟ) ಪೂರ್ತಂ=ಅನ್ನದಾನ ಅಥವಾ ಕೆರೆ–ಬಾವಿಗಳ ನಿರ್ಮಾಣ, ದತ್ತಂ=ದಾನ ಇತಿ=ಈ ವಿಧವಾದ ಸತ್ಕರ್ಮಗಳನ್ನು ನಡೆಸುತ್ತಾರೋ ಅವರು ಧೂಮಾದಿಮಾರ್ಗದಲ್ಲಿ ಹೋಗುತ್ತಾರೆ.

## ॥ ಓಂ ಆನರ್ಥಕ್ಯಮಿತಿ ಚೇನ್ನ ತದಪೇಕ್ಷತ್ವಾತ್ ಓಂ ॥ ೧೧ ॥

**ತರ್ಹಿ ರಮಣೀಯಾಃ ಕಪೂಯಾ ಇತ್ಯೇವ ಸ್ಯಾತ್, ಚರಣಶಬ್ದಸ್ಯಾऽನರ್ಥಕ್ಯ ಮಿತಿ ಚೇತ್, ನ । ಚರಣಾಪೇಕ್ಷತ್ವಾದ್ ರಮಣೀಯತ್ವಾದೇಃ ತಜ್ಜ್ಞಾಪನಾರ್ಥ-ತ್ವೇನೋಪಪತ್ತೇಃ ॥**

''ರಮಣೀಯಚರಣಾಃ'' ಎಂಬ ಶ್ರುತಿಯಲ್ಲಿ ಚರಣಶಬ್ದಕ್ಕೆ ಯಜ್ಞಾದಿ ಸತ್ಕರ್ಮಗಳು ಎಂದೂ ಅರ್ಥವಾದರೆ 'ಚರಣ' ಶಬ್ದಪ್ರಯೋಗ ವ್ಯರ್ಥವಾದೀತು. ರಮಣೀಯಾಃ, ಕಪೂಯಾಃ ಎಂದಿಷ್ಟೇ ಹೇಳಿದರೂ ಸಾಕು. ಪೂರ್ವದಲ್ಲಿ ಯಜ್ಞಾದಿಸತ್ಕರ್ಮ ಮಾಡುವ ಸುಜನರು ಪ್ರಸ್ತುತರಾದುದರಿಂದ ರಮಣೀಯ ಮತ್ತು ಕಪೂಯ (ನೀಚಕರ್ಮಕಾರಿಗಳು) ಶಬ್ದಗಳಿಂದಲೇ ಉಪಲಕ್ಷಣಯಾ ಸತ್ಕರ್ಮಕಾರಿಗಳು ಮತ್ತು ದುಷ್ಕರ್ಮಕಾರಿಗಳನ್ನು ಗ್ರಹಣ ಮಾಡಬಹುದು. ಚರಣಶಬ್ದದ ಅಗತ್ಯವೇ ಇಲ್ಲ, ಎಂದು ಪೂರ್ವಪಕ್ಷ.

ರಮಣೀಯ ಪದಕ್ಕೆ ಒಳ್ಳೆಯ ಯಜ್ಞಕರ್ತೃಗಳು ಎಂದೂ ಕಪೂಯಪದದಿಂದ ಕೆಟ್ಟ ಯಜ್ಞಕರ್ತೃಗಳು ಎಂದೂ ಅರ್ಥ ಮಾಡಬೇಕು. ಆದರೆ, ಯಜ್ಞದಲ್ಲಿ ಒಳ್ಳೆದು, ಕೆಟ್ಟದು ಎಂಬ ವ್ಯತ್ಯಾಸ ಬರಲು ಕಾರಣ ಕರ್ತೃಗಳ ಆಚಾರಗಳು. ಹೀಗೆ ಯಜ್ಞದ ರಮಣೀಯತ್ವವು ಸದಾಚಾರ ಸಾಪೇಕ್ಷ, ಕೆಟ್ಟತನ ದುರಾಚಾರ ಸಾಪೇಕ್ಷ. ಸದಾಚಾರಿಗಳು ಮಾಡುವ ಯಜ್ಞ ರಮಣೀಯ. ದುರಾಚಾರಿಗಳು ಮಾಡುವ ಯಜ್ಞ ಕಪೂಯ. ಇದನ್ನು ತಿಳಿಸುವ ಸಲುವಾಗಿ ಶ್ರುತಿಯಲ್ಲಿ ಚರಣಶಬ್ದವನ್ನು ಪ್ರಯೋಗ ಮಾಡಲಾಗಿದೆ.

**ವಿವರಣೆ**—ಸ್ನಾನ–ಆಚಮನಾದಿ ಸದಾಚಾರಿಗಳಾಗಿ ಯಜ್ಞಾದಿಗಳನ್ನು ಮಾಡುವವರು ರಮಣೀಯಚರಣರು. ಅವುಗಳಿಲ್ಲದೆ, ದುರಾಚಾರಿಗಳಾಗಿದ್ದು ಯಜ್ಞಾದಿ

ಗಳನ್ನು ಮಾಡುವವರು ಕಪೂಯಚರಣರು. ಇಂತಹವರು ನೀಚಯೋನಿಯಲ್ಲಿ ಹುಟ್ಟಿಬರುತ್ತಾರೆ. ರಮಣೀಯಚರಣರು ಉಚ್ಚಯೋನಿಯಲ್ಲಿ ಹುಟ್ಟುತ್ತಾರೆ. ಹೀಗೆ ಯಜ್ಞಮಾಡಿದವರು ಸ್ವರ್ಗಕ್ಕೆ ಹೋದರೂ ಮುಂದಿನ ಜನ್ಮ ಎಲ್ಲರಿಗೂ ಒಂದೇ ರೀತಿಯಾಗಿರುವುದಿಲ್ಲ. ಅದಕ್ಕೆ ಕಾರಣ ಅವರಿಗೆ ಇರುವ ಆಚಾರಶ್ರದ್ಧೆ. ಇದನ್ನು ತಿಳಿಸುವುದಕ್ಕಾಗಿ ಶ್ರುತಿಯಲ್ಲಿ 'ಚರಣ' ಶಬ್ದವಿದೆ.

**|| ಓಂ ಸುಕೃತದುಷ್ಕೃತೇ ಏವೇತಿ ತು ಬಾದರಿಃ ಓಂ || ೧೨ ||**

**'ಧರ್ಮಂ ಚರತ ಮಾಽಧರ್ಮಮ್' ಇತ್ಯಾದಿಪ್ರಯೋಗಾತ್ ಸುಕೃತದುಷ್ಕೃತೇ ಏವ ಚರಣಶಬ್ದೋಕ್ತೇ ಇತಿ ಬಾದರಿರ್ಮನ್ಯತೇ । ತುಶಬ್ದಾತ್ ಸ್ವಸಿದ್ಧಾಂತೋಽಪಿ ಸ ಏವೇತಿ ಸೂಚಯತಿ ।**

**'ತುಶಬ್ದಸ್ತು ವಿಶೇಷೇ ಸ್ಯಾತ್ ಸ್ವಸಿದ್ಧಾಂತೇಽವಧಾರಣೇ'**

**ಇತಿ ಚ ನಾಮಮಹೋದಧೌ ||**

'ಧರ್ಮಂ ಚರತ ಮಾಽಧರ್ಮಮ್' ಎಂಬಲ್ಲಿ 'ಮಾಡು' (ಕುರುತ) ಎಂಬ ಅರ್ಥದಲ್ಲೂ 'ಚರ' ಧಾತುವಿನ ಪ್ರಯೋಗವಿದೆ. ಆದ್ದರಿಂದ 'ರಮಣೀಯಚರಣಾಃ' ಎಂಬಲ್ಲಿ ಚರಣಶಬ್ದಕ್ಕೆ ಸದಾಚಾರಪೂರ್ವಕ ಮಾಡಿರುವ ಯಜ್ಞಾದಿಕರ್ಮಗಳು ಎಂದೇ ವಾಚ್ಯಾರ್ಥ. ರಮಣೀಯಚರಣ ಎಂದರೆ ಸುಕೃತ; ಅರ್ಥಾತ್ ಸದಾಚಾರಪೂರ್ವಕ ಮಾಡಿದ ಯಜ್ಞಾದಿ ಸತ್ಕರ್ಮ. ಕಪೂಯಚರಣ ಎಂದರೆ ದುರಾಚಾರಿಗಳು ಮಾಡಿರುವ ಯಜ್ಞಕರ್ಮ ಎಂದೇ ಅರ್ಥ. ಆದ್ದರಿಂದ ಚರಣಶಬ್ದಕ್ಕೆ ಲಕ್ಷಣಾಮಾಡುವ ಅಗತ್ಯವಿಲ್ಲ. ಇದು ಬಾದರಿ ಅಂದರೆ ಬಾದರಾಯಣರ ಪುತ್ರರಾದ ಶುಕಾಚಾರ್ಯರ ಅಭಿಪ್ರಾಯ.

ಸೂತ್ರದಲ್ಲಿ 'ತು' ಶಬ್ದದಿಂದ ವ್ಯಾಸರು ತಮ್ಮ ಅಭಿಪ್ರಾಯವೂ ಇದೇ ಆಗಿದೆ, ಎಂದು ಸೂಚಿಸಿದ್ದಾರೆ. ನಾಮಮಹೋದಧಿಕೋಶದಲ್ಲಿ ತುಶಬ್ದಕ್ಕೆ ವಿಶೇಷ, ಸ್ವಸಿದ್ಧಾಂತ, ಅವಧಾರಣ ಎಂದು ಮೂರು ಅರ್ಥಗಳನ್ನು ಹೇಳಲಾಗಿದೆ.

**ವಿವರಣೆ**—ಚರಣಶಬ್ದ, ಸದಾಚಾರ ಹಾಗೂ ಯಜ್ಞಾದಿಕರ್ಮ ಎರಡರಲ್ಲೂ ಸಾಧಾರಣವಾದ ಶಬ್ದ. ಪ್ರಕೃತ, ಬಾಧಕವಶಾತ್ ಅದಕ್ಕೆ ಯಜ್ಞಾದಿಕರ್ಮ ಎಂಬ ವಿಶೇಷಾರ್ಥವನ್ನು ಮಾಡಬೇಕು. ಬಾಧಕ 'ನಾನ್ಯಃ ಪಂಥಾಃ' ಎಂಬ ಶ್ರುತಿ ಮತ್ತು 'ಇಷ್ಟಾಪೂರ್ತಂ' ಎಂಬ ಶ್ರುತಿ. ಆದ್ದರಿಂದಲೇ ತತ್ವಪ್ರಕಾಶಿಕಾದಲ್ಲಿ 'ಸಾಧಾರಣಶ್ರುತೇಶ್ಚ ಅತ್ರ ಬಾಧಕವಶಾತ್ ಸಾಂಗಕರ್ಮಾರ್ಥತ್ವಸ್ಯೈವ ಉಪಪತ್ತೇಃ' ಎಂದಿದೆ.

## ದ್ವೈತದರ್ಶನದಲ್ಲಿ ಸೂತ್ರಾರ್ಥ—

**॥ ಓಂ ಚರಣಾದಿತಿ ಚೇನ್ನ ತದುಪಲಕ್ಷಣಾರ್ಥೇತಿ ಕಾರ್ಷ್ಣಾಜಿನಿಃ ಓಂ ॥** (ಅತ್ರ ಗತಾಗತಸ್ಯ ಕರ್ಮಫಲತ್ವಮುಚ್ಯತೇ । ಯಥೇತಮಿತಿ ಪ್ರಕೃತಂ ಗತಾಗತಂ, ಚರಣಾತ್=ಕರ್ಮಾಂಗಭೂತಾತ್ ಆಚಾರಾತ್ ಭವತಿ । ನತು ಯಜ್ಞಾದಿಕರ್ಮಭಿಃ ।

'ರಮಣೀಯಚರಣಾಃ ರಮಣೀಯಾಂ ಯೋನಿಮ್ ಆಪದ್ಯಂತೇ' ಇತ್ಯಾದಿ ಶ್ರುತೇಃ ಇತಿ ಚೇನ್ನ । ತದುಪಲಕ್ಷಣಾರ್ಥಾ, ತಸ್ಯ=ಯಜ್ಞಾದಿಕರ್ಮಣಃ ಅಜಹಲ್ಲಕ್ಷಣಯಾ ಉಪಪಾದನಾರ್ಥಾ ರಮಣೀಯೇತಿ ಶ್ರುತಿಃ ಇತಿ ಕಾರ್ಷ್ಣಾಜಿನಿಃ ಮನ್ಯತೇ ಇತ್ಯರ್ಥಃ । ಅತಃ ಕಾಮ್ಯಕರ್ಮಣಿ ವೈರಾಗ್ಯಂ ಯುಕ್ತಮ್ ಇತಿ ಭಾವಃ ।)

ಯಥೇತಂ ಎಂದು ಪ್ರಕೃತವಾದ ಗಮನಾಗಮನಾದಿಗಳು, ಚರಣಾತ್=ಕರ್ಮಾಂಗ ವಾದ ಆಚಾರದ ಫಲ, ಯಜ್ಞಾದಿಕರ್ಮಗಳ ಫಲವಲ್ಲ. 'ರಮಣೀಯಚರಣಾಃ' ಎಂಬ ಶ್ರುತಿಯೇ ಇದಕ್ಕೆ ಆಧಾರ, ಈ ವಾದ ಸರಿಯಲ್ಲ. ಆ ಶ್ರುತಿಯಲ್ಲಿರುವ ಚರಣಶಬ್ದವು ಅಜಹಲ್ಲಕ್ಷಣಯಾ ಸದಾಚಾರ ಅಥವಾ ದುರಾಚಾರ ಯುಕ್ತವಾದ ಯಜ್ಞಾದಿಕರ್ಮಗಳ ಉಪಾದಾನಕ್ಕಾಗಿ ಇದೆ.

**॥ ಓಂ ಆನರ್ಥಕ್ಯಮಿತಿ ಚೇನ್ನ ತದಪೇಕ್ಷತ್ವಾತ್ ಓಂ ॥** (ಚರಣಶಬ್ದಸ್ಯ ಇತಿ ಶೇಷಃ । ಉಪಲಕ್ಷಣಾರ್ಥತ್ವೇ ಚರಣಶಬ್ದಸ್ಯ ಆನರ್ಥಕ್ಯಂ ಸ್ಯಾತ್ । ಯಜ್ಞಾದಿ ಕೃತಾಂ ಪ್ರಕೃತತ್ವೇನ 'ಯೇ ಯಜ್ಞಾದಿಕಾರಿಣೋ ರಮಣೀಯಾಃ' ಇತ್ಯಾದ್ಯುಕ್ತ್ಯೈವ ಉಪಲಕ್ಷಣಸಂಭವಾತ್ ಇತಿ ಚೇನ್ನ । ತದಪೇಕ್ಷತ್ವಾತ್-ತದಿತಿ ಚರಣಮುಚ್ಯತೇ । ಸಾಧ್ವಸಾಧುಚರಣಾಪೇಕ್ಷತ್ವಾತ್, ಯಜ್ಞಾದಿಕರ್ಮಿಣಾಂ ರಮಣೀಯತ್ವ-ಕಪೂಯತ್ವಯೋಃ ಇತಿ ಶೇಷಃ । ಯಜ್ಞಾದಿಕೃತ್ವೇ ಸಮಾನೇಽಪಿ ಕಥಮೇಕೇಷಾಂ ರಮಣೀಯತ್ವಮ್ ಇತಿ ನ ಶಂಕ್ಯಮ್ । ಸಾಧ್ವಸಾಧ್ವಾಚಾರಹೇತುಕತ್ವಾತ್ ಇತಿ ದ್ಯೋತಯಿತುಂ ಚರಣಪದಂ ಶ್ರುತೌ ಅರ್ಥವತ್, ಇತಿ ಭಾವಃ ।)

ಚರಣಶಬ್ದವು ಶ್ರುತಿಯಲ್ಲಿ ಉಪಲಕ್ಷಣಯಾ ಯಜ್ಞಾದಿಸತ್ಕರ್ಮಕಾರಿಗಳನ್ನು ತಿಳಿಸುವುದಾದಲ್ಲಿ ಆ ಚರಣಶಬ್ದದ ಪ್ರಯೋಗವೇ ವ್ಯರ್ಥ. ಯಜ್ಞಾದಿಕರ್ತೃಗಳು ಪೂರ್ವಪ್ರಸಕ್ತರಾದುದರಿಂದ 'ರಮಣೀಯಾಃ ರಮಣೀಯಾಂ ಯೋನಿಮ್ ಆಪದ್ಯೇರನ್' ಎಂದಿಷ್ಟೇ ಹೇಳಿದರೂ ಸಾಕು. ಚರಣಶಬ್ದದ ಅಗತ್ಯವೇ ಇಲ್ಲ, ಎಂಬ ಪೂರ್ವಪಕ್ಷ ಸರಿಯಲ್ಲ. ತದಪೇಕ್ಷತ್ವಾತ್, ತತ್=ಚರಣ, ಆಚಾರ. ಅದನ್ನು ಅವಲಂಬಿಸಿದೆಯಾದ್ದರಿಂದ. ಯಜ್ಞಕರ್ತೃತ್ವವು, ಸಮಾನವಾಗಿರುವಾಗ ಅವರಲ್ಲಿ

ಕೆಲವರು'ರಮಣೀಯರು' ಕೆಲವರು 'ಕಪೂಯರು' ಎನಿಸುವುದು ಹೇಗೆ? ಈ ಜಿಜ್ಞಾಸೆ ಪರಿಹಾರವಾಗಬೇಕಾದರೆ ಚರಣ ಶಬ್ದಬೇಕು. ಯಜ್ಞಮಾಡುವವರಲ್ಲಿ ಒಳ್ಳೆತನ ಅಥವಾ ಕೆಟ್ಟತನ ಅವರು ಮಾಡುವ ಆಚಾರವನ್ನು (ಚರಣ) ಅವಲಂಬಿಸಿದೆ. ಸದಾಚಾರ ಶೀಲರಾಗಿ ಯಜ್ಞಮಾಡುವವರು ರಮಣೀಯರು, ದುರಾಚಾರಿಗಳಾಗಿ ಯಜ್ಞಮಾಡುವವರು ಕಪೂಯರು. ಇದನ್ನು ತಿಳಿಸುವ ಸಲುವಾಗಿ ಶ್ರುತಿಯಲ್ಲಿ ಚರಣಶಬ್ದವನ್ನು ಪ್ರಯೋಗಮಾಡಲಾಗಿದೆ.

**।। ಓಂ ಸುಕೃತದುಷ್ಕೃತೇ ಏವೇತಿ ತು ಬಾದರಿಃ ಓಂ ।।** (ಚರಣೇ ಇತ್ಯನುವರ್ತ- ನೀಯಮ್ । ರಮಣೀಯ-ಕಪೂಯಚರಣೇ ಸುಕೃತದುಷ್ಕೃತೇ ಏವ= ಸಮೀಚೀನಾಸಮೀಚೀನ-ಧರ್ಮಾಧರ್ಮಾವೇವ । ನತು ತದಂಗೇ, ತತೋಽನ್ಯೇ । ಧರ್ಮಂ ಕುರುತ, ಇತ್ಯರ್ಥೇ 'ಧರ್ಮಂ ಚರತ' ಇತಿ ಪ್ರಯೋಗಾತ್ ಇತಿ ಬಾದರಿರ್ಮನ್ಯತೇ । ತುಶಬ್ದೋ ಅಯಮೇವ ಸೂತ್ರಕೃತ್‌ಸಿದ್ಧಾಂತಃ ಇತಿ ಸೂಚನಾರ್ಥಃ ।।)

ರಮಣೀಯಚರಣ ಎಂದರೆ ಸತ್ಕರ್ಮ, ಕಪೂಯಚರಣ ಎಂದರೆ ದುಷ್ಕರ್ಮ. ಹೀಗೆ, ಚರಣಶಬ್ದಕ್ಕೆ ಸತ್ಕರ್ಮ-ದುಷ್ಕರ್ಮಗಳೇ ಅರ್ಥ, ಹಿಂದೆ ಹೇಳಿದಂತೆ ಕರ್ಮಾಂಗವಾದ ಆಚಾರ ಅರ್ಥವಲ್ಲ. ಇದು ಬಾದರಿ ಆಚಾರ್ಯರ (ಶುಕಾಚಾರ್ಯರ) ಸಿದ್ಧಾಂತ.

## ಅದ್ವೈತದರ್ಶನದಲ್ಲಿಸೂತ್ರಗಳ ಅರ್ಥ—

**।। ಕೃತಾತ್ಯಯೇಽನುಶಯವಾನ್ ದೃಷ್ಟಸ್ಮೃತಿಭ್ಯಾಂ ಯಥೇತಮನೇವಂ ಚ ।।** ''ತಸ್ಮಿನ್ ಯಾವತ್ ಸಂಪಾತಮ್ ಉಷಿತ್ವಾಥೈತಮೇವಾಧ್ವಾನಂ ಪುನರ್ನಿ- ವರ್ತಂತೇ ಯಥೇತಮ್'' ಎಂದು ಛಾಂದೋಗ್ಯೋಪನಿಷತ್ತಿನಲ್ಲಿದೆ. ಆ ಮಂತ್ರದಲ್ಲಿ ಸಂಪಾತವೆಂದರೆ ಪುಣ್ಯಕರ್ಮ. (ಸಂಪತತಿ ಅನೇನ ಅಸ್ಮಾಲ್ಲೋಕಾದಮುಂ ಲೋಕಮ್) ಯಾವತ್ ಸಂಪಾತ, ಎಂದರೆ ಪುಣ್ಯಕರ್ಮ ತೀರುವವರೆಗೆ, ಎಂದರ್ಥ. ಇದರಿಂದಾಗಿ ಚಂದ್ರಲೋಕದಲ್ಲಿರುವ ಕರ್ಮಿಗಳು ತಾವು ಮಾಡಿದ ಕರ್ಮವು ತೀರಿದ ಮೇಲೆ ಅಲ್ಲಿಂದ ಹಿಂದಿರುಗಿ ಬರುತ್ತಾರೆ, ಎಂದು ತಿಳಿಯತ್ತದೆ. ಅಲ್ಲಿಗೆ, ಕರ್ಮಿಗಳು ಫಲಭೋಗಿಸಿ ಹಿಂದಿರುಗುವಾಗ ಅವರಲ್ಲಿ ಕರ್ಮವೇ ಉಳಿದಿರುವುದಿಲ್ಲ, ಎಂಬ ಆಕ್ಷೇಪದ ಸಮಾಧಾನಕ್ಕಾಗಿ ಈ ಸೂತ್ರವಿದೆ.

ಕೃತಾತ್ಯಯೇ=ಯಾವ ಸತ್ಕರ್ಮವನ್ನು ಮಾಡಿ ಕರ್ಮಿಗಳು ಚಂದ್ರಲೋಕಕ್ಕೆ

ಹೋಗಿರುವರೋ ಆ ಕರ್ಮವು ತೀರಿದಾಗ ಅನುಶಯವಾನ್=ಕರ್ಮಶೇಷವುಳ್ಳವರಾಗಿಯೇ ಹಿಂದಿರುಗಿ ಬರುತ್ತಾರೆ. ಅದಕ್ಕೆ ಪ್ರತ್ಯಕ್ಷಶ್ರುತಿ ಮತ್ತು ಸ್ಮೃತಿಗಳು ಪ್ರಮಾಣವಾಗಿವೆ. ಶ್ರುತಿ ಹೀಗಿದೆ— 'ತದ್ ಯ ಇಹ ರಮಣೀಯಚರಣಾ ಅಭ್ಯಾಶೋ ಹ ಯತ್ತೇ ರಮಣೀಯಾಂ ಯೋನಿಮ್ ಆಪದ್ಯೇರನ್, ಬ್ರಾಹ್ಮಣಯೋನಿಂ ವಾ ಕ್ಷತ್ರಿಯಯೋನಿಂ ವಾ ವೈಶ್ಯಯೋನಿಂ ವಾಥ ಯ ಇಹ ಕಪೂಯಚರಣಾಃ ಅಭ್ಯಾಶೋ ಹ ಯತ್ತೇ ಕಪೂಯಾಂ ಯೋನಿಮಾಪದ್ಯೇರನ್ ಶ್ವಯೋನಿಂ ವಾ ಸೂಕರಯೋನಿಂ ವಾ ಚಂಡಾಲಯೋನಿಂ ವಾ||' (ಛಾಂ.5.10.7)

ಸ್ಮೃತಿ ಹೀಗಿದೆ- ವರ್ಣಾ ಆಶ್ರಮಾಶ್ಚ ಸ್ವಕರ್ಮನಿಷ್ಠಾಃ ಪ್ರೇತ್ಯಕರ್ಮಫಲಮನು-
ಭೂಯ ತತಃ ಶೇಷೇಣ ವಿಶಿಷ್ಟಜಾತಿ–ಕುಲ–ರೂಪಾಯುಃ-
ಶ್ರುತ–ವೃತ್ತ–ವಿತ್ತ–ಸುಖಮೇಧಸಃ ಜನ್ಮ ಪ್ರತಿಪದ್ಯಂತೇ||

ದರ್ಶಪೂರ್ಣಮಾಸದಿಂದ ಉಂಟಾದ ಪುಣ್ಯವು ಸ್ವರ್ಗಭೋಗದಿಂದ ನಷ್ಟವಾದರೂ ಅಭುಕ್ತ ಫಲಕವಾದ, ಪ್ರಾಯಶ್ಚಿತ್ತದಿಂದ ನಾಶವಾಗದ ಅನೇಕ ಕರ್ಮಗಳು ಕರ್ಮಿಗಳಲ್ಲಿ ಇರುತ್ತವೆ. ಅದರ ಜೊತೆಯಲ್ಲಿ ಭೂಮಿಗೆ ಬಂದು ಅದಕ್ಕನುಗುಣವಾದ ಜನ್ಮವನ್ನು ಪಡೆಯುತ್ತಾನೆ.

**|| ಚರಣಾದಿತಿ ಚೇನ್ನ ತದುಪಲಕ್ಷಣಾರ್ಥೇತಿ ಕಾರ್ಷ್ಣಾಜಿನಿಃ ||** ಛಾಂದೋಗ್ಯ ಶ್ರುತಿಯಲ್ಲಿ 'ರಮಣೀಯಚರಣಾಃ' ಎಂದು ಚರಣಶಬ್ದವಿದೆ. ವಿಭಿನ್ನಯೋನಿ ಪ್ರಾಪ್ತಿಯು ಚರಣದ ಫಲ, ಎಂದು ಅದರಿಂದ ತಿಳಿಯುತ್ತದೆ. ಅದು ಪುಣ್ಯಪಾಪಗಳ ಫಲವಲ್ಲ. ಹೀಗಿರುವಾಗ ಸ್ವರ್ಗಿಗಳು ಕರ್ಮಶೇಷದೊಂದಿಗೆ ಬರುತ್ತಾರೆ ಎಂದು ಹೇಳಲು ಆ ಶ್ರುತಿಯು ಹೇಗೆ ಆಧಾರವಾದೀತು? ಚರಣ ಎಂದರೆ ಚಾರಿತ್ರ್ಯ ಅಥವಾ ಆಚಾರ. ಅದು ಕರ್ಮಾಂಗ ಹೊರತು ಕರ್ಮವಲ್ಲ. ಈ ಆಕ್ಷೇಪಕ್ಕೆ ಕಾರ್ಷ್ಣಾಜಿನಿ ಆಚಾರ್ಯರ ಸಮಾಧಾನ ಹೀಗೆ—ಶ್ರುತಿಯಲ್ಲಿರುವ ಚರಣಶಬ್ದ ಲಾಕ್ಷಣಿಕ. ಆಚಾರಪುರಃಸ್ಸರವಾಗಿ ಮಾಡಿದ ಯಜ್ಞಾದಿಕರ್ಮಗಳು ಎಂದು ಅದರ ಅರ್ಥ. ಆದ್ದರಿಂದ ಕರ್ಮಜನಿತ ಪುಣ್ಯಪಾಪಾದಿಗಳ ಫಲವೇ ಉಚ್ಚ–ನೀಚ ಯೋನಿಪ್ರಾಪ್ತಿ.

**|| ಆನರ್ಥಕ್ಯಮಿತಿ ಚೇನ್ನ ತದಪೇಕ್ಷತ್ವಾತ್ ||** ಕರ್ಮವೇ ಯೋನಿಪ್ರಾಪ್ತಿಗೆ ಕಾರಣವಾದರೆ ಆಚಾರವು ಅನರ್ಥಕ, ಎನ್ನಬಾರದು. ಕರ್ಮವು ಆಚಾರಸಾಪೇಕ್ಷವಾಗಿಯೇ ಫಲಜನಕವಾಗಿದೆ. 'ಆಚಾರಹೀನಂ ನ ಪುನಂತಿ ವೇದಾಃ' ವೇದೋಕ್ತ ಕರ್ಮಗಳು (ವೇದಾಃ) ಆಚಾರವಿಲ್ಲದವನಿಗೆ ಫಲ ಕೊಡುವುದಿಲ್ಲ. ಸ್ನಾನಾಚಮನಾದಿಗಳಂತೆ ಆಚಾರವೂ ಕರ್ಮಾಂಗವಾಗಿದೆ. ಅಂಗಿಯಾದ ಕರ್ಮದಿಂದಲೇ ಜನ್ಮಾಂತರವು

ಸಾಧ್ಯವಾಗುವಾಗ ಅಂಗವಾದ ಆಚಾರದ ಫಲ ಜನ್ಮಾಂತರಪ್ರಾಪ್ತಿ ಎನ್ನುವುದು ಯುಕ್ತವಲ್ಲ. ಕಾಲಿಂದ ಓಡಲು ಸಮರ್ಥನಾದವನು ಮೊಣಕಾಲಿನಿಂದೇಕೆ ಓಡಬೇಕು? (ನಹಿ ಪದ್‌ಭ್ಯಾಂ ಪಲಾಯಿತುಂ ಪಾರಯಮಾಣಃ ಜಾನುಭ್ಯಾಂ ರಂಹಿತುಮರ್ಹತಿ–ಶಾಂ.ಭಾ.)

**॥ ಸುಕೃತ–ದುಷ್ಕೃತೇ ಏವೇತಿ ಬಾದರಿಃ ॥** ಬಾದರಿ ಆಚಾರ್ಯರಾದರೋ ಚರಣ ಶಬ್ದಕ್ಕೆ ಕರ್ಮ ಎಂದೇ ಅರ್ಥ ಹೇಳುತ್ತಾರೆ. ಸತ್ಕರ್ಮ ಮಾಡುವವರಿಗೆ 'ಧರ್ಮಂ ಚರತಿ' ಎಂದು ಹೇಳುವುದು ಲೋಕರೂಢಿ. ಆದ್ದರಿಂದ ರಮಣೀಯ–ಚರಣಾಃ ಎಂದರೆ ಸತ್ಕರ್ಮ ಮಾಡಿದವರು, ಎಂದು ಅರ್ಥ. ಕಪೂಯಚರಣಾಃ ಎಂದರೆ ದುಷ್ಕರ್ಮ ಮಾಡಿದವರು ಎಂದು ಅರ್ಥ. ಹೀಗೆ ಜನ್ಮಾಂತರ ಪ್ರಾಪ್ತಿಯು ಕರ್ಮಫಲವೇ ಆಗಿದೆ.

ಈ ಸೂತ್ರಗಳಿಗೆ **ರಾಮಾನುಜಭಾಷ್ಯ**ದಲ್ಲಿ ಇದೇ ರೀತಿಯ ಅರ್ಥವನ್ನು ಹೇಳಲಾಗಿದೆ. ಮಾಧ್ವಭಾಷ್ಯದಲ್ಲಿ 'ಯಥೇತಮನೇವಂ ಚ' ಎಂಬ ಸೂತ್ರವು ಪ್ರತ್ಯೇಕಾಧಿ ಕರಣವೆಂದು ಪರಿಗಣಿಸಲ್ಪಟ್ಟಿದೆ. ಆದರೆ, ಪರಭಾಷ್ಯಗಳಲ್ಲಿ ಆ ಸೂತ್ರವನ್ನು 'ಕೃತಾತ್ಯಯೇ' ಇತ್ಯಾದಿ 8ನೇ ಸೂತ್ರದ ಶೇಷವನ್ನಾಗಿ ಸೇರಿಸಲಾಗಿದೆ. ಅರ್ಥವನ್ನು ಮಾಧ್ವಭಾಷ್ಯದಂತೆಯೇ ಮಾಡಲಾಗಿದೆ. ಕರ್ಮಿಗಳು ಚಂದ್ರಲೋಕಕ್ಕೆ ಹೋದ ದಾರಿಯಿಂದಲೇ ಆಕಾಶದವರೆಗೆ ಹಿಂದಕ್ಕೆ ಬರುತ್ತಾರೆ, ಅಲ್ಲಿಂದ ಮಾರ್ಗಾಂತರದಿಂದ ಭೂಮಿಗೆ ಬರುತ್ತಾರೆ, ಎಂದು 'ಯಥೇತಮ್ ಅನೇವಂ ಚ' ಸೂತ್ರದ ಅರ್ಥ. 'ಕೃತಾತ್ಯಯೇ' ಎಂಬ ಸೂತ್ರದಲ್ಲಿ ಹೇಳುವ ವಿಷಯಕ್ಕೂ ಈ ವಿಷಯಕ್ಕೂ ಸಂಬಂಧವಿಲ್ಲವಾದ ಕಾರಣ ಇದನ್ನು ಪ್ರತ್ಯೇಕ ಸೂತ್ರವೆಂದೇ ಪರಿಗಣಿಸುವುದು ಸೂಕ್ತ. ಆದರೆ, ಕೃತಾತ್ಯಯೇ, ಎಂಬ ಎಂಟನೆಯ ಸೂತ್ರಕ್ಕೂ 'ಚರಣಾದಿತಿ' ಇತ್ಯಾದಿ ಸೂತ್ರಕ್ಕೂ ಮಧ್ಯದಲ್ಲಿ 'ಯಥೇತಂ' ಎಂಬ ಸೂತ್ರವು ಬಂದಿದೆ. ಅಧಿಕರಣವಿಚ್ಛೇದ ಭಯದಿಂದ ಅದನ್ನು ಎಂಟನೇ ಸೂತ್ರಕ್ಕೆ ಸೇರಿಸಿರಬಹುದು.

**ಶೇಷಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ**—ಸೂತ್ರದಲ್ಲಿ ಕರ್ಮಿಯು 'ಅನುಶಯ' ಸಹಿತನಾಗಿ ಸ್ವರ್ಗದಿಂದ ಬರುತ್ತಾನೆ, ಎನ್ನಲಾಗಿದೆ. ಅನುಶಯ ಎಂದರೆ ಉಳಿದಭಾಗ. ಸ್ವರ್ಗಕ್ಕಾಗಿ ಮಾಡಿರುವ ಯಾಗದಿಂದ ಹುಟ್ಟಿರುವ ಪುಣ್ಯದ ಸ್ವಲ್ಪಭಾಗವನ್ನು ಉಳಿಸಿಕೊಂಡು ಬರುತ್ತಾನೆ, ಎಂದು ಸೂತ್ರದ ಅಭಿಪ್ರಾಯ. ಆದರೆ, ಪರಭಾಷ್ಯದಲ್ಲಿ ಆ ಕರ್ಮವನ್ನು ಭೋಗದಿಂದ ಪೂರ್ಣವಾಗಿ ಕ್ಷಯಿಸಿ ಸಂಚಿತವಾದ ಕರ್ಮಾಂತರದ ಜೊತೆಯಲ್ಲಿ ಬರುತ್ತಾನೆ, ಎಂದು ಅರ್ಥ ಮಾಡಲಾಗಿದೆ. ಇದು

ಸೂತ್ರಾಕ್ಷರಕ್ಕೆ ಅನುಗುಣವಲ್ಲ. 'ತತಃ ಶೇಷೇಣೇಮಂ ಲೋಕಮ್ ಆಯಾತಿ' ಎಂಬ ಶ್ರುತಿಯಲ್ಲಿ ಭುಕ್ತಕರ್ಮಶೇಷ ಸಹಿತನಾಗಿ ಹಿಂದಕ್ಕೆ ಬರುತ್ತಾನೆ, ಎಂದೇ ಹೇಳಲಾಗಿದೆ.

ಕರ್ಮವು ಭೋಗದಿಂದ ನಾಶವಾಗುತ್ತದೆ. ಸ್ವರ್ಗಭೋಗದಿಂದ ಯಜ್ಞಸಾಧ್ಯವಾದ ಸುಕೃತವು ನಾಶವಾಗಬೇಕು. ಆದರೂ ಸ್ವರ್ಗದಲ್ಲಿ ಯಜ್ಞಸಾಧ್ಯವಾದ ಸುಕೃತದ ನಿಃಶೇಷಭೋಗ ಇಲ್ಲ. ಬಹುತರಭೋಗ ಮಾತ್ರ. ತಚ್ಛೇಶಭೋಗ ಪೃಥಿವಿಯಲ್ಲಿ. (ಶೇ.ತಾ.ಚಂ.ಪು.90)

ಇಲ್ಲಿಗೆ ಚರಣಾಧಿಕರಣವು ಮುಗಿಯಿತು.

## ೧೧. ಅನಿಷ್ಟಾದಿಕಾರ್ಯಧಿಕರಣಮ್

**ಪುಣ್ಯಕೃತಾಮೇವ ಗಮನಾಗಮನೇ ನೇತರೇಷಾಮಿತಿ । ಅತ ಆಹ-**

**॥ ಓಂ ಅನಿಷ್ಟಾದಿಕಾರಿಣಾಮಪಿ ಚ ಶ್ರುತಮ್ ಓಂ ॥ ೧೩ ॥**

**'ತದ್ ಯ ಇಹ ಶುಭಾಕೃತೋ ಯೇ ವಾ(ಚಾ)ऽಶುಭಕೃತಸ್ತೇऽ-ಶುಭಮನುಭೂಯಾऽವರ್ತಂತೇ ಪುನಃ (ಕರ್ಮ) ಕುರ್ವಂತಿ ಪುನರ್ಗಚ್ಛಂತಿ ಪುನರಾಗಚ್ಛಂತಿ' ಇತಿ ಭಾಲ್ಲವೇಯಶ್ರುತೌ ॥**

ಯಜ್ಞಯಾಗಾದಿ ಸತ್ಕರ್ಮ ಮಾಡಿದವರಿಗೆ ಮಾತ್ರ ಗಮನಾಗಮನಾದಿ ದುಃಖ. ಪಾಪಕರ್ಮ ಮಾಡಿದವರಿಗೆ ಈ ಗಮನಾಗಮನಗಳು ಇಲ್ಲ, ಎನ್ನುವ ಜಿಜ್ಞಾಸೆಗೆ ಉತ್ತರ–ಈ ಸೂತ್ರ. ಬಾಲ್ಲವೇಯಶ್ರುತಿಯಲ್ಲಿ ಶುಭ ಮಾಡದವರು–ಅಶುಭ ಮಾಡಿದವರು ಲೋಕಾಂತರದಲ್ಲಿ ದುಃಖವನ್ನು ಅನುಭವಿಸಿ ತಿರುಗಿ ಬರುತ್ತಾರೆ, ಮತ್ತೆ ಇಲ್ಲಿ ಕರ್ಮಮಾಡಿ ಹೋಗುತ್ತಾರೆ ಎಂದು ಹೇಳಲಾಗಿದೆ. ಹೀಗೆ, ಗಮನಾಗಮನಗಳು ಇಬ್ಬರಿಗೂ ಶ್ರುತ್ಯುಕ್ತವಾಗಿದೆ.

**ವಿವರಣೆ**—ಇದುವರೆಗೆ ಯಜ್ಞಾದಿ ಸತ್ಕರ್ಮಗಳನ್ನು ಮಾಡಿ ಸ್ವರ್ಗಲೋಕಕ್ಕೆ ಹೋದವರ ಗಮನಾಗಮನಗಳನ್ನು ನಿರೂಪಿಸಿರುವುದರಿಂದ, ಅವರಿಗೆ ಮಾತ್ರ ಗಮನಾಗಮನಾದಿ ಕ್ಲೇಷ, ಪಾಪಕರ್ಮ ಮಾಡಿದವರಿಗೆ ಈ ಕ್ಲೇಶಗಳಿಲ್ಲ, ಎಂಬ ಅನ್ಯಥಾಭಾವನೆ ಬರಬಹುದು. ಅದರ ಪರಿಹಾರಕ್ಕಾಗಿ ಪಾಪಕರ್ಮ ಮಾಡಿದವರಿಗೂ ಈ ಕ್ಲೇಶ ತಪ್ಪಿದ್ದಲ್ಲ, ಎಂದು ಈ ಅಧಿಕರಣದಲ್ಲಿ ಹೇಳಲಾಗಿದೆ. ಸತ್ಕರ್ಮಮಾಡಿದವರು

ಸ್ವರ್ಗದಿಂದ ಬಂದು ಪುಣ್ಯಕರ್ಮ ಮಾಡಿ ಮತ್ತೆ ಅಲ್ಲಿಗೆ ಹೋದರೆ ಪಾಪಕರ್ಮ ಮಾಡುವವರು ನರಕದಿಂದ ಬಂದು ಹೋಗುತ್ತಾರೆ.

ಶ್ರುತ್ಯರ್ಥ—ಯೇ ಇಹ ಶುಭಾಕೃತಃ=ಯಾರು ಈ ಭೂಮಿಯಲ್ಲಿ ಒಳ್ಳೆಯದನ್ನು ಮಾಡುವುದಿಲ್ಲವೋ ಹಾಗೆಯೇ ಅಶುಭಕೃತಃ=ಕೆಟ್ಟಕೆಲಸವನ್ನು ಮಾಡುವರೋ ತೇ=ಅಂತಹವರು ಅಶುಭಂ ಅನುಭೂಯ=ಪಾಪಫಲವನ್ನು ಅನುಭವಿಸಿ ಪುನಃ ಆವರ್ತಂತೇ=ತಿರುಗಿ ಭೂಮಿಗೆ ಬರುತ್ತಾರೆ. ಪುನಃ ಕರ್ಮ ಕುರ್ವಂತಿ=ಮತ್ತೆ ಇಲ್ಲಿ ಕರ್ಮವನ್ನು ಮಾಡುತ್ತಾರೆ. ಪುನಃ ಗಚ್ಛಂತಿ=ಮತ್ತೆ ಪರಲೋಕಕ್ಕೆ ಹೋಗುತ್ತಾರೆ, ಪುನಃ ಆಗಚ್ಛಂತಿ=ಮತ್ತೆ ಇಲ್ಲಿಗೆ ಬರುತ್ತಾರೆ.

## ।। ಓಂ ಸಂಯಮನೇ ತ್ವನುಭೂಯೇತರೇಷಾಮ್ ಆರೋಹಾವರೋಹೌ ತದ್ಗತಿದರ್ಶನಾತ್ ಓಂ ।। ೧೪ ।।

**ಸಂಯಮನಮನುಭೂಯ ಕೇಷಾಂಚಿದಾರೋಹಃ ಕೇಷಾಂಚಿದವರೋಹಃ । ತುಶಬ್ದೋऽವಧಾರಣೇ ।**

**'ಸರ್ವೇ ವಾ ಏತೇऽಶುಭಕೃತಃ ಸಂಯಮನೇ ಪ್ರಪತಂತಿ ತತ್ರ ಹ ಯೇ ಪರದ್ವಿಷೋ ಗುರುದ್ವಿಷಃ ಶ್ರುತಿದ್ವಿಷಸ್ತದವಮಂತಾರಃ ಶಠಾ ಮೂರ್ಖಾ ಇತಿ ತೇ ವೈ ತತೋऽವರುಹ್ಯ ತಮಸಿ ಪ್ರಪತಂತಿ ನೈವೈತ ಉತ್ತಿಷ್ಠಂತೇऽಪಿ ಕರ್ಹಿಚಿದ್ ವವ್ರಂ ವಾ ಏತದಿತ್ಯಾಹುರಥ ಯೇऽನ್ಯೇ ಬ್ರಹ್ಮದ್ವಿಷಃ ಸ್ತೇನಾಃ ಸುರಾಪಾ ಇತಿ ತೇ ವೈ ತದನುಭೂಯೇಮಂ ಲೋಕಮನುವ್ರಜಂತಿ' ಇತಿ ಕೌಂಠರವ್ಯಶ್ರುತೇಃ ।।**

ನರಕದಲ್ಲಿ ಯಮಶಾಸನವನ್ನು (ಸಂಯಮನಂ) ಅನುಭವಿಸಿ ಕೆಲವರು ನರಕದಿಂದ ಮೇಲಕ್ಕೆ ಎದ್ದು ಬರುತ್ತಾರೆ, ಮತ್ತೆ ಕೆಲವರು ಇನ್ನೂ ನೀಚಸ್ಥಾನದಲ್ಲಿ ಬೀಳುತ್ತಾರೆ. ಸೂತ್ರದ ತುಶಬ್ದವು ಅವಧಾರಣಾರ್ಥದಲ್ಲಿ ಇದೆ. ಅನುಭೂಯ ಎಂಬ ಶಬ್ದದೊಂದಿಗೆ ಅನ್ವಯ. ಅನುಭೂಯ ತು=ಅನುಭವಿಸಿಯೇ, ಎಂದು ಅರ್ಥ. ಕೌಂಠರವ್ಯ ಶ್ರುತಿಯಲ್ಲಿ ಈ ವಿಷಯ ಇದೆ.

ವಿವರಣೆ—ಸತ್ಕರ್ಮಗಳನ್ನು ಮಾಡದವರಿಗೆ ಹಾಗೂ ದುಷ್ಕರ್ಮಗಳನ್ನು ಮಾಡುವವರಿಗೆ ಗಮನಾಗಮನ ಮಾತ್ರವಲ್ಲದೆ ಇನ್ನೂ ಹೆಚ್ಚಿನ ದುಃಖವೂ ಇದೆ, ಎಂದು ಈ ಸೂತ್ರದಲ್ಲಿ ಹೇಳಲಾಗಿದೆ.

ಶ್ರುತ್ಯರ್ಥ—ಸರ್ವೇ ವಾ ಏತೇ ಅಶುಭಕೃತಃ=ಕೆಟ್ಟಕೆಲಸವನ್ನು ಮಾಡಿದವರೆಲ್ಲರೂ ಸಂಯಮನೇ=ನರಕದಲ್ಲಿ ಪ್ರಪತಂತಿ=ಬೀಳುತ್ತಾರೆ. ತತ್ರ=ಅವರಲ್ಲಿ ಯೇ ಪರದ್ವಿಷಃ=ಹರಿದ್ವೇಷಿಗಳು ಗುರುದ್ವಿಷಃ=ಗುರುದ್ವೇಷಿಗಳು, ಶ್ರುತಿದ್ವಿಷಃ=ವೇದಾಪ್ರಾಮಾಣ್ಯವಾದಿಗಳು ತದವಮಂತಾರಃ=ಇವರಿಗೆಲ್ಲ ಅವಮಾನ ಮಾಡುವವರು, ಶಠಾಃ=ಗೂಢದ್ವೇಷಿಗಳು ಮೂರ್ಖಾಃ=ಅಜ್ಞಾನಿಗಳು ಮತ್ತು ಅನ್ಯಥಾಜ್ಞಾನಿಗಳು ಇತಿ=ಹೀಗಿರುವ ತೇ ವೈ=ಅವರೆಲ್ಲರೂ ತತಃ=ಯಮನ ಸಂಯಮನ ಪುರದಿಂದ ಅವರುಹ್ಯ=ಕೆಳಗಿಳಿದು ತಮಸಿ=ತಮಸ್ಸಿನಲ್ಲಿ ಪ್ರಪತಂತಿ=ಬೀಳುತ್ತಾರೆ. ಏತೇ= ಇಂತಹವರು ಕರ್ಹಿಚಿತ್=ಎಂದೂ ನೈವ ಉತ್ತಿಷ್ಠಂತೇ=ಏಳುವುದೇ ಇಲ್ಲ. ಆದ್ದರಿಂದ ಏತತ್=ಇಂತಹ ತಮಸ್ಸನ್ನು ವವ್ರಂ=ವವ್ರ ಎಂದು ಆಹುಃ=ಕರೆಯುತ್ತಾರೆ. (ವಾರಯತೀತಿ=ವವ್ರಂ). ಅಥ ಯೇ ಅನ್ಯೇ ಬ್ರಹ್ಮದ್ವಿಷಃ=ಬ್ರಾಹ್ಮಣದ್ವೇಷಿಗಳು ಸ್ತೇನಾಃ=ಕಳ್ಳರು, ಸುರಾಪಾಃ=ಮದ್ಯಪಾನ ಮಾಡಿದವರು ಇತಿ=ಇಂತಹವರು ತೇ ವೈ=ಇವರೆಲ್ಲರೂ ತದನುಭೂಯ=ಯಮಶಾಸನವನ್ನು ಅನುಭವಿಸಿ ಇಮಂ ಲೋಕಂ=ಈ ಭೂಲೋಕಕ್ಕೆ ಅನುವ್ರಜಂತಿ=ತಿರುಗಿ ಬರುತ್ತಾರೆ.

ಈ ಶ್ರುತಿಯು, ಯಾರು ಕೆಳಗೆ ಬೀಳುತ್ತಾರೆ, ಯಾರು ತಿರುಗಿ ಬರುತ್ತಾರೆ, ಎಂದು ತಿಳಿಸುತ್ತದೆ.

**॥ ಓಂ ಸ್ಮರಂತಿ ಚ ಓಂ ॥ ೧೫ ॥**

**‘ಗಚ್ಛಂತಿ ಪಾಪಿನಃ ಸರ್ವೇ ನರಕಂ ನಾತ್ರ ಸಂಶಯಃ ।**
**ತತ್ರ ಭುಕ್ತ್ವಾ ಪತಂತ್ಯೇವ ಯೇ ದ್ವಿಷಂತಿ ಜನಾರ್ದನಮ್ ॥**

**ಮಹಾತಮಸಿ ಮಗ್ನಾನಾಂ ನ ತೇಷಾಮುತ್ಥಿತಿಃ ಕ್ವಚಿತ್ ।**
**ಇತರೇಷಾಂ ತು ಪಾಪಾನಾಂ ವ್ಯುತ್ಥಾನಂ ವಿದ್ಯತೇಽಪಿ ಚ ॥**

**ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಮ್ ।**
**ಇತಿ ಸರ್ವತ್ರ ನಿಯಮಃ ಪಂಚಕಷ್ಟೇ ತು ತತ್ ಸದಾ ॥’ ಇತ್ಯಾದಿ ।**

ಸ್ಮೃತಿಯಲ್ಲೂ ಪಾಪಿಗಳಿಗೆ ಗಮನಾಗಮನಾದಿಗಳನ್ನು ಹೇಳಲಾಗಿದೆ—ಪಾಪಿಗಳೆಲ್ಲರೂ ನರಕಕ್ಕೇ ಹೋಗುತ್ತಾರೆ, ಈ ಬಗ್ಗೆ ಸಂದೇಹ ಬೇಡ. ಅಲ್ಲಿ ದುಃಖವನ್ನು ಅನುಭವಿಸಿ ಯಾರು ಹರಿದ್ವೇಷಿಗಳೋ ಅವರು ಮತ್ತೂ ಕೆಳಗಿನ ನರಕಕ್ಕೆ ಬೀಳುತ್ತಾರೆ. ಮಹಾತಮಸ್ಸಿನಲ್ಲಿ ಮುಳುಗಿದ ಅವರಿಗೆ ಮತ್ತೆಂದೂ ಉತ್ಥಾನವಿಲ್ಲ. ಇತರ ಪಾಪಿಗಳಿಗೆ

ನರಕದಿಂದ ಉತ್ಥಾನ ಇದೆ. ಅನಿತ್ಯನರಕಿಗಳಿಗೆ ಸುಖದ ಅನಂತರ ದುಃಖ, ದುಃಖದ ಅನಂತರ ಸುಖ. ಇದು ಇತರ ನರಕಗಳಲ್ಲಿ ನಿಯಮ. ಆದರೆ, ಈ ನಿಯಮ ಪಂಚಕಷ್ಟೇ=ಪಂಚೇಂದ್ರಿಯಗಳಿಗೂ ದುಃಖ ನೀಡುವ ನಿತ್ಯನರಕದಲ್ಲಿ ಇಲ್ಲ. ಅಲ್ಲಿ ಸದಾ ದುಃಖವೇ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ—

**॥ ಓಂ ಅನಿಷ್ಟಾದಿಕಾರಿಣಾಮಪಿ ಚ ಶ್ರುತಮ್ ಓಂ ॥** (ಅತ್ರ ಪಾಪಕೃತಾಮಪಿ ಗತಾಗತಮಸ್ತೀತ್ಯುಚ್ಯತೇ । ಗತಾಗತಮಿತ್ಯಸ್ತಿ । ಇಷ್ಟಂ=ಯಾಗಃ । ಪೂರ್ತ-ದತ್ತಾದಿರಾದಿಪದಾರ್ಥಃ । ನಞ್ ತದಭಾವೇ ತದ್ವಿರುದ್ಧೇ ಚಾಸ್ತಿ । ಇಷ್ಟಾಪೂರ್ತಾದ್ಯಕಾರಿಣಾಂ, ತದ್ವಿರುದ್ಧಪಾಪಕಾರಿಣಾಮಪಿ ಗತಾಗತಂ ಶ್ರುತಂ 'ತದ್ ಯ ಇಹ ಶುಭಕೃತಃ ಯೇ ಚಾಶುಭಕೃತಃ ತೇ ಶುಭಾಶುಭಮನುಭೂಯ ಆವರ್ತಂತೇ' ಇತಿ ಶ್ರುತೌ ಇತ್ಯರ್ಥಃ। ನ ಕೇವಲಮ್ ಇಷ್ಟಾದಿಕಾರಿಣಾಮ್ ಇತ್ಯಪೇರರ್ಥಃ । ಚಸ್ತು ದುಃಖಾಂತರಸಮುಚ್ಚಯೇ।)

ಈ ಅಧಿಕರಣದಲ್ಲಿ ಪಾಪಕರ್ಮ ಮಾಡಿದವರಿಗೂ ಗಮನಾಗಮನಾದಿಗಳು ಇವೆ, ಎಂದು ಹೇಳಲಾಗಿದೆ. ಅನಿಷ್ಟಾದಿಕಾರಿಣಾಮಪಿ=ಇಷ್ಟಾಪೂರ್ತಾದಿಗಳನ್ನು ಮಾಡದವರಿಗೆ ಹಾಗೂ ಅದಕ್ಕೆ ವಿರುದ್ಧವಾಗಿ ಕೆಟ್ಟಕರ್ಮಗಳನ್ನು ಮಾಡಿದವರಿಗೆ ಕೂಡಾ ಗಮನಾಗಮನಗಳು ಇವೆ, ಎಂದು 'ತದ್ ಯ ಇಹ ಶುಭಕೃತಃ' ಎಂಬ ಶ್ರುತಿಯಲ್ಲಿ ಹೇಳಲಾಗಿದೆ.

**॥ ಓಂ ಸಂಯಮನೇ ತ್ವನುಭೂಯೇತರೇಷಾಮ್ ಆರೋಹಾವರೋಹೌ ತದ್ಗತಿದರ್ಶನಾತ್ ಓಂ ॥** (ತುರೇವ। ದ್ವಿತೀಯಾರ್ಥೇ ಸಪ್ತಮೀ। ಸಮ್ಯಗ್ ಯಮನಂ=ಶಾಸನಂ=ಸಮ್ಯಗ್ ಯಮಶಾಸನಮ್ ಅನುಭೂಯೈವ ಇತರೇಷಾಂ= ಅನಿಷ್ಟಾದಿಕಾರಿಣಾಮ್ ಆರೋಹಾವರೋಹೌ = ಕೇಷಾಂಚಿದಾರೋಹಃ=ವ್ಯುತ್ಥಾನಂ, ಅನ್ಯೇಷಾಮ್ ಅವರೋಹಃ=ನೀಚಸ್ಥಾನೇ ನಿತ್ಯನರಕೇ ಪಾತಃ ಭವತಿ। ಕುತಃ? ತದ್ಗತಿದರ್ಶನಾತ್ ತೇಷಾಂ=ಅನಿಷ್ಟಾದಿಕಾರಿಣಾಂ ಗತೇಃ=ಏವಂವಿಧಗತೇಃ 'ಸರ್ವೇ ವಾ ಏತೇऽಶುಭಕೃತಃ ಸಂಯಮನೇ ಪ್ರಪತಂತಿ' ಇತ್ಯಾದಿಶ್ರುತೌ ದರ್ಶನಾತ್। ಸಂಯಮನಮಿತಿ ವಾಚ್ಯೇ ಸಪ್ತಮ್ಯುಕ್ತಿಃ ಯಮಶಾಸನಂ ಕ್ವ ಇತ್ಯಾಕಾಂಕ್ಷಾಯಾಂ, ಸಮ್ಯಗ್ ಯಮನಂ= ಪಾಪೋಪರಮಃ ಯತ್ರೇತಿ ವ್ಯುತ್ಪತ್ತ್ಯಾ ಸಂಯಮನೇ=ನರಕೇ ಇತಿ ಸೂಚಯಿತುಮ್, ಉದಾಹೃತ-ಶ್ರುತಿಸೂಚನಾರ್ಥಂ ಚ ।)

ಸಂಯಮನೇ-ಸಂಯಮನಂ=ಸರಿಯಾದ ಯಮನ ಶಾಸನವನ್ನು ಅನುಭೂಯ ತು=ಅನುಭವಿಸಿದ ಮೇಲೆಯೇ ಇತರೇಷಾಂ=ಯಾಗಾದಿ-ಕರ್ಮಗಳನ್ನು ಮಾಡದ ಮತ್ತು ನಿಷಿದ್ಧಕರ್ಮಗಳನ್ನು ಮಾಡುವ ಜೀವರಿಗೆ ಆರೋಹಾವರೋಹೌ=ಕೆಲವರಿಗೆ ನರಕದಿಂದ ಮೇಲೇಳುವ ಸ್ಥಿತಿಯೂ ಮತ್ತೆ ಕೆಲವರಿಗೆ ಇನ್ನೂ ಘೋರವಾದ ನರಕದಲ್ಲಿ ಬೀಳುವ ಸ್ಥಿತಿಯೂ ಆಗುವುದು.

**।। ಓಂ ಸ್ಮರಂತಿ ಚ ಓಂ ।।** ('ಗಚ್ಛಂತಿ ಪಾಪಿನಃ ಸರ್ವೇ ನರಕಂ ನಾತ್ರ ಸಂಶಯಃ ।। ಇತ್ಯಾದಿ ।

'ತಾನಹಂ ದ್ವಿಷತಃ ಕ್ರೂರಾನ್' ಇತಿ ।

ಸರ್ವದೇವಾವರತ್ವೇನ ಯೋ ಜಾನಾತಿ ಚ ಕೇಶವಮ್ ।

ಇತ್ಯಾದಿ ಸ್ಮರಂತಿ, ಇತ್ಯರ್ಥಃ। ಪ್ರಾಗುಕ್ತಶ್ರುತಿಸಮುಚ್ಚಯೇ ಚ ಸ್ಮೃತಿಭೂಯಸ್ತ್ವಾಯ ಬಹುವಚನಮ್ ।।)

ಸತ್ಕರ್ಮ ಮಾಡದವರು, ದುಷ್ಕರ್ಮ ಮಾಡುವವರು ಹಿಂದೆ ಹೇಳಿದಂತೆ ಬೇರೆ ಬೇರೆ ಸ್ಥಿತಿಗೆ ಹೋಗುತ್ತಾರೆ, ಎನ್ನುವುದಕ್ಕೆ ಅನೇಕ ಸ್ಮೃತಿಗಳೂ ಇವೆ.

**ಇಲ್ಲಿಗೆ ಅನಿಷ್ಟಾದಿಕಾರ್ಯಧಿಕರಣವು ಮುಗಿಯಿತು.**

## ೧೨. ಸಪ್ತಾಧಿಕರಣಮ್

**।। ಓಂ ಅಪಿ ಸಪ್ತ ಓಂ ।। ೧೬ ।।**

**'ರೌರವೋಽಥ ಮಹಾಂಶ್ಚೈವ ವಹ್ನಿರ್ವೈತರಣೀ ತಥಾ ।**
**ಕುಂಭೀಪಾಕ ಇತಿ ಪ್ರೋಕ್ತಾನ್ಯನಿತ್ಯನರಕಾಣಿ ತು ।।**

**ತಾಮಿಸ್ರಶ್ಚಾಂಧತಾಮಿಸ್ರೌ ದ್ವೌ ನಿತ್ಯೌ ಸಂಪ್ರಕೀರ್ತಿತೌ ।**
**ಇತಿ ಸಪ್ತ ಪ್ರಧಾನಾನಿ ಬಲೀಯಸ್ತೂತ್ತರೋತ್ತರಮ್ ।**
**ಏತಾನಿ ಕ್ರಮಶೋ ಗತ್ವೈವಾಽರೋಹೋಽಥಾವರೋಹಣಮ್ ।।'**

**ಇತಿ ಚ ಭಾರತೇ ।।**

ಈ ಸೂತ್ರದಲ್ಲಿ ಏಳು ವಿಧದ ನರಕಗಳನ್ನು ನಿರೂಪಿಸಿ ಅವುಗಳಲ್ಲಿ ಯಾವುದು ನಿತ್ಯ

ಯಾವುದು ಅನಿತ್ಯ ಎಂಬುದನ್ನು ತಿಳಿಸಲಾಗಿದೆ. ಮಹಾಭಾರತದಲ್ಲಿ ಏಳು ನರಕಗಳ ಉಲ್ಲೇಖ ಬಂದಿದೆ—

ರೌರವ, ಮಹಾರೌರವ, ವಹ್ನಿ, ವೈತರಣೀ, ಕುಂಭೀಪಾಕ ಈ ನರಕಗಳು ಅನಿತ್ಯಗಳೆಂದು ಉಲ್ಲೇಖಿಸಲ್ಪಟ್ಟಿವೆ. ತಾಮಿಸ್ರ ಮತ್ತು ಅಂಧತಾಮಿಸ್ರ ಇವೆರಡು ನಿತ್ಯನರಕಗಳು. ಹೀಗೆ ಏಳು ಪ್ರಧಾನ ನರಕಗಳು. (ಇದಲ್ಲದೆ ಕೋಟಿಗಟ್ಟಲೆ ನರಕಗಳಿವೆ) ಇವುಗಳಲ್ಲಿ ಮುಂದು ಮುಂದಿನದು ಪ್ರಬಲವಾದವುಗಳು. ಈ ನರಕಗಳಿಗೆ ಹೋಗಿ ಕೆಲವರಿಗೆ ಉತ್ಥಾನ, ಇನ್ನು ಕೆಲವರಿಗೆ ಅಧಃಪತನ.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ—

**॥ ಓಂ ಅಪಿ ಸಪ್ತ ಓಂ ॥** (ಅತ್ರ ಹರಿದ್ವೇಷಿಣಃ ಪ್ರಾಗುಕ್ತನಿತ್ಯನರಕಃ ಸಮರ್ಥ್ಯತೇ । ಸಂಯಮನಮ್ ಇತ್ಯಸ್ತಿ । ಅಪಿಪದಾತ್ ಸ್ಮರಂತಿ ಇತ್ಯಸ್ತಿ । ಸಂಯಮನಂ ನರಕಂ ಸಪ್ತಾಪಿ= ಸಪ್ತಪ್ರಭೇದಮಪಿ ಸ್ಮರಂತಿ । ನ ತು ಏಕವಿಧಮ್ । ಯೇನ 'ಯಾವದಿಂದ್ರ' ಇತ್ಯುಕ್ತವಿರೋಧಃ ಇತ್ಯರ್ಥಃ ।)

''ಯಾವದಿಂದ್ರಶ್ಚತುರ್ದಶ'' ಎಂಬ ಶ್ರುತಿಯು ಹದಿನಾಲ್ಕು ಲೋಕಗಳೂ ಅನಿತ್ಯಗಳು, ಎಂದಿದ್ದರೂ ನಿತ್ಯವಾದ ಕೆಲವು ನರಕಗಳೂ ಇವೆ, ಎಂದು ತಿಳಿಸುವುದಕ್ಕಾಗಿ 'ಅಪಿ ಸಪ್ತ' ಎಂಬ ಸೂತ್ರದಲ್ಲಿ ಸಪ್ತವಿಧನರಕಗಳನ್ನು ಹೇಳಲಾಗಿದೆ— ಸಂಯಮನಂ= ನರಕವನ್ನು ಸಪ್ತ=ಏಳುವಿಧವಾಗಿ ಸ್ಮರಂತ್ಯಪಿ=ಸ್ಮೃತಿಕಾರರು ಹೇಳುತ್ತಾರೆ. (ಇವು ಏಳು ಪ್ರಧಾನ ನರಕಗಳು. ವಸ್ತುತಃ ಕೋಟಿ ಕೋಟಿ ನರಕಗಳಿವೆ, ಎಂದು ತತ್ತ್ವಪ್ರದೀಪದಲ್ಲಿ ತ್ರಿವಿಕ್ರಮಪಂಡಿತರು ಹೇಳಿದ್ದಾರೆ.)

**ಇಲ್ಲಿಗೆ ಸಪ್ತಾಧಿಕರಣವು ಮುಗಿಯಿತು.**

## ೧೩. ತದ್ವ್ಯಪಾರಾಧಿಕರಣಮ್

**ಈಶ್ವರಸ್ಯ ನರಕಾಯುಕ್ತೇಃ 'ಸರ್ವಂ ವಿಸೃಜತಿ ಸರ್ವಂ ವಿಲಾಪಯತಿ ಸರ್ವಂ ರಮಯತಿ ಸರ್ವಂ ನ ರಮಯತಿ ಸರ್ವಂ ಪ್ರವರ್ತಯತ್ಯಂತರಸ್ಮಿನ್ ನಿವಿಷ್ಟಃ' ಇತಿ ಕೌಷಾರವಶ್ರುತಿವಿರೋಧ ಇತಿ । ಅತೋ ವಕ್ತಿ-**

**॥ ಓಂ ತತ್ರಾಪಿ ಚ ತದ್ವ್ಯಪಾರಾದವಿರೋಧಃ ಓಂ ॥ ೧೭ ॥**

ಚಶಬ್ದಾದದುಃಖಾನುಭವೇನ ।

'ಸ ಸ್ವರ್ಗೇ ಸ ಭೂಮೌ ಸ ನರಕೇ ಸೋಽಂಧೇ ತಮಸಿ ಪ್ರವೃತ್ತಿಕೃದೇಕ ಏವಾನುವಿಷ್ಣೋ ನಾಸೌ ದುಃಖಭುಗೀಶ್ವರಃ ಪ್ರಭುತ್ವಾತ್ ಸರ್ವಂ ಪಶ್ಯತಿ ಸರ್ವಂ ಕಾರಯತಿ ನಾಸೌ ದುಃಖಭುಗ್ ಯ ಏವಂ ವೇದ' ಇತಿ ಪೌತ್ರಾಯಣಶ್ರುತೇರವಿರೋಧಃ ॥

'ನರಕೇಽಪಿ ವಸನ್ನೀಶೋ ನಾಸೌ ದುಃಖಭುಗುಚ್ಯತೇ ।
ನೀಚೋಚ್ಚತ್ವೈವ ದುಃಖಾದೇರ್ಭೋಗ ಇತ್ಯಭಿಧೀಯತೇ ।
ನಾಸೌ ನೀಚೋಚ್ಚತಾಂ ಯಾತಿ ಪಶ್ಯತ್ಯೇವ ಪ್ರಭುತ್ವತಃ ॥'

ಇತಿ ಭಾಗವತತಂತ್ರೇ ।

ಪರಮಾತ್ಮನಿಗೆ ನರಕವು ಯುಕ್ತವಲ್ಲ. ಆದರೆ, ಕೌಷಾರವಶ್ರುತಿಯಲ್ಲಿ ಅವನು ಎಲ್ಲರೊಳಗಿದ್ದು ಪ್ರೇರಿಸುತ್ತಾನೆ, ಎಂದಿದೆ. ಅಂದರೆ ನರಕಸ್ಥಜೀವರಲ್ಲೂ ಅವನು ಪ್ರೇರಕನಾಗಿರಬೇಕು. ನರಕದಲ್ಲಿ ಜೀವರಿಗೆ ದುಃಖವಾಗುವುದಾದಲ್ಲಿ ಅವರೊಳಗಿರುವ ಪರಮಾತ್ಮನಿಗೂ ದುಃಖವಾಗಬೇಕು. ಆದ್ದರಿಂದ ನರಕದಲ್ಲಿ ದುಃಖವಿದೆ ಎನ್ನುವುದು ಸರ್ವಪ್ರೇರಕತ್ವಶ್ರುತಿವಿರುದ್ಧವಾದುದು. ಇದು ಪೂರ್ವಪಕ್ಷ. ಇದರ ನಿರಾಸಕ್ಕಾಗಿ ಸೂತ್ರಕಾರರು 'ತತ್ರಾಪಿ' ಇತ್ಯಾದಿಸೂತ್ರವನ್ನು ರಚಿಸಿದ್ದಾರೆ.

ಸೂತ್ರದ ಚಶಬ್ದವು ಈಶ್ವರನು ದುಃಖವನ್ನು ಅನುಭವಿಸದೆಯೇ ನಾರಕಿಗಳ ಪ್ರೇರಣಾವ್ಯಾಪಾರವನ್ನು ಮಾಡುತ್ತಾನೆ, ಎಂದು ಹೇಳುತ್ತದೆ. ಪೌತ್ರಾಯಣ ಶ್ರುತಿಯು 'ಸ್ವರ್ಗ, ನರಕ, ಅಂಧಂತಮಸ್ಸುಗಳಲ್ಲಿಯೂ ಜೀವರೊಳಗಿದ್ದು ದುಃಖಾನುಭವ ಇಲ್ಲದೆಯೇ, ಪ್ರೇರಿಸುತ್ತಾನೆ, ಎಂದು ಹೇಳುತ್ತದೆ. ಆದ್ದರಿಂದ ನರಕದಲ್ಲಿ ದುಃಖವಿರುವುದಕ್ಕೆ ಪ್ರೇರಕತ್ವಶ್ರುತಿವಿರೋಧವಿಲ್ಲ, ಭಾಗವತತಂತ್ರದಲ್ಲೂ ಈ ವಿಷಯವು ಇದೆ.

ವಿವರಣೆ—ನರಕಲೋಕವು ದುಃಖದಾಯಕವಲ್ಲ ಎನ್ನುವ ಆಕ್ಷೇಪದ ಸಮಾಧಾನಕ್ಕಾಗಿ ಈ ಅಧಿಕರಣ ಇದೆ. ಅಲ್ಲಿರುವ ಜೀವರಿಗೆ ದುಃಖವಿದ್ದಲ್ಲಿ ಅಲ್ಲೇ ಇರುವ ಪರಮಾತ್ಮನಿಗೂ ದುಃಖವಿರಬೇಕು. ಅವನೂ ನಾರಕಿ ಜೀವರ ಪ್ರೇರಕನಾಗಿ ಅಲ್ಲಿರುತ್ತಾನೆ. ಇದು ಶ್ರುತಿಸಿದ್ಧವಾದ ವಿಷಯ. ಅದಕ್ಕೆ ವಿರುದ್ಧವಾದುದರಿಂದ ನರಕದಲ್ಲಿ ದುಃಖವಿಲ್ಲ, ಎಂದು ಪೂರ್ವಪಕ್ಷ. ಪರಮಾತ್ಮನು ದುಃಖವನ್ನು

ಅನುಭವಿಸದೆಯೇ ನರಕದಲ್ಲೂ ತನ್ನ ಪ್ರೇರಣಾರೂಪವ್ಯಾಪಾರವನ್ನು ನಡೆಸುತ್ತಾನೆ. ಆದುದರಿಂದ ನಾರಕ ದುಃಖವು ಶ್ರುತಿವಿರುದ್ಧವಲ್ಲ, ಎಂದು ಸೂತ್ರದ ಸಿದ್ಧಾಂತ.

**ಶ್ರುತ್ಯರ್ಥ**—ಪರಮಾತ್ಮನು ಸರ್ವಂ=ಎಲ್ಲರನ್ನೂ ಪ್ರೇರಯತಿ=ಪ್ರೇರಿಸುತ್ತಾನೆ. ಸರ್ವಂ=ಎಲ್ಲವನ್ನೂ ವಿಸೃಜತಿ=ಸೃಷ್ಟಿಮಾಡುತ್ತಾನೆ. ಸರ್ವಂ=ಎಲ್ಲವನ್ನೂ ವಿಲಾಪಯತಿ=ಸಂಹಾರ ಮಾಡುತ್ತಾನೆ. ಸರ್ವಂ=ಸುಖಯೋಗ್ಯರಾದ ಜೀವರನ್ನು ರಮಯತಿ=ಸುಖಿಸುವಂತೆ ಮಾಡುತ್ತಾನೆ. ಸರ್ವಂ=ಅಯೋಗ್ಯರಾದ ಎಲ್ಲರನ್ನೂ ನ ರಮಯತಿ=ಸುಖಿಸುವಂತೆ ಮಾಡುವುದಿಲ್ಲ. ಅಸ್ಮಿನ್=ಎಲ್ಲ ವಸ್ತುಗಳಲ್ಲಿ ಅಂತಃ= ಒಳಗಡೆ ನಿವಿಷ್ಟಃ=ಸೇರಿದವನಾಗಿ ಪ್ರವರ್ತಯತಿ=ಪ್ರೇರಿಸುತ್ತಾನೆ.

೨. **ಪೌತ್ರಾಯಣಶ್ರುತಿ**—ಸಃ=ಆ ಪರಮಾತ್ಮನು ಸ್ವರ್ಗೇ=ಸ್ವರ್ಗದಲ್ಲಿ, ಸಃ=ಆ ಪರಮಾತ್ಮನು ಭೂಮೌ=ಭೂಮಿಯಲ್ಲಿ ಸಃ ನರಕೇ=ನರಕದಲ್ಲಿ ಸಃ ಅಂಧೇ=ಅವನು- ಅಂಧಂತಮಸ್ಸಿನಲ್ಲಿ ಪ್ರವೃತ್ತಿಕೃತ್=ಪ್ರೇರಿಸುತ್ತಾನೆ. ಏಕಏವ=ಒಬ್ಬನೇ ಅನುವಿಷ್ಟಃ= ಪ್ರವಿಷ್ಟನಾಗಿ ಅಸೌ=ಇವನು ಪ್ರಭುತ್ವಾತ್=ಸಮರ್ಥನಾದುದರಿಂದ ನ ದುಃಖಭುಕ್= ದುಃಖವನ್ನು ಅನುಭವಿಸುವುದಿಲ್ಲ. ಸರ್ವಂ=ಎಲ್ಲವನ್ನೂ ಕಾರಯತಿ=ಮಾಡಿಸುತ್ತಾನೆ. ಯಃ ಏವಂ ವೇದ=ಯಾರು ಪರಮಾತ್ಮನನ್ನು ಹೀಗೆ ತಿಳಿಯುವನೋ ಅಸೌ=ಇವನೂ ನ ದುಃಖಭುಕ್=ದುಃಖವನ್ನು ಅನುಭವಿಸುವುದಿಲ್ಲ. ಈಶಃ=ಪರಮಾತ್ಮನು ನರಕೇ ವಸನ್ನಪಿ=ನರಕದಲ್ಲಿದ್ದರೂ ದುಃಖಭುಕ್=ದುಃಖಾನುಭವಿ ಎಂದು ನ ಉಚ್ಯತೇ= ಹೇಳಲ್ಪಡುವುದಿಲ್ಲ. ನೀಚೋಚ್ಚತ್ವೈವ=ಆತ್ಮಸ್ವರೂಪದಲ್ಲಿ ಆಗುವ ಉಚ್ಚತ್ವ-ನೀಚತ್ವಗಳೇ ದುಃಖಾದೇಃ=ಸುಖ-ದುಃಖಗಳ ಭೋಗಃ ಇತಿ=ಭೋಗವೆಂದು ಅಭಿಧೀಯತೇ= ಹೇಳಲ್ಪಡುತ್ತದೆ. ಅಸೌ=ಈ ಪರಮಾತ್ಮನು ಪ್ರಭುತ್ವತಃ=ಶಕ್ತನಾದ ಕಾರಣ ನೀಚೋಚ್ಚತಾಂ=ಜೀವನಂತೆ ಸ್ವರೂಪದಲ್ಲಿ ದುಃಖದರ್ಶನಪ್ರಯುಕ್ತವಾಗಿ ನೀಚತ್ವವನ್ನಾಗಲೀ ಸುಖಪ್ರಯುಕ್ತ ಉಚ್ಚತ್ವವನ್ನಾಗಲೀ ನ ಯಾತಿ=ಹೊಂದುವುದಿಲ್ಲ. ಅಸೌ ಪಶ್ಯತ್ಯೇವ=ಪರಮಾತ್ಮನ ದುಃಖಾದಿಗಳನ್ನು ಕೇವಲ ನೋಡುತ್ತಾನೆ.

ಪರಮಾತ್ಮನು ಸರ್ವಜ್ಞನಾದುದರಿಂದ ಜೀವನ ಸುಖದುಃಖಗಳ ಸಾಕ್ಷಾತ್ಕಾರವೂ ಅವನಿಗಿದೆ. ಆದರೆ, ಅದರ ಭೋಗ ಅವನಿಗಿಲ್ಲ. ಭೋಗವೆಂದರೆ ಆತ್ಮಸ್ವರೂಪದಲ್ಲಿ ಆಗುವ ಉಚ್ಚತ್ವ-ನೀಚತ್ವ. ಜೀವನಿಗೆ ಅಂತಃಕರಣದಲ್ಲಿ ಅಭಿಮಾನವಿರುವುದರಿಂದ ಅಂತಃಕರಣದ ವಿಕಾರಗಳಾದ ಸುಖ-ದುಃಖಗಳ ಪ್ರತ್ಯಕ್ಷವಾದಾಗ ಅವನಿಗೆ ದುಃಖಾನುಭವ-ಪ್ರಯುಕ್ತವಾಗಿ ನೀಚತ್ವ, ಸುಖಾನುಭವಪ್ರಯುಕ್ತವಾಗಿ ಉಚ್ಚತ್ವ ಉಂಟಾಗುತ್ತದೆ. ಭಗವಂತನಿಗೆ, ಜೀವನ ಅಂತಃಕರಣದಲ್ಲಿ ಅಭಿಮಾನವಿಲ್ಲದಿರುವುದ

ರಿಂದ ಅಲ್ಲಿರುವ ಸುಖ–ದುಃಖಗಳನ್ನು ನೋಡಿದರೂ ತನ್ನಿಮಿತ್ತವಾದ ಉಚ್ಚತ್ವಾದಿಗಳು ಅವನಿಗಿಲ್ಲ. ಅದರಿಂದಾಗಿಯೇ ಅವನು ಸುಖಾದಿಭೋಕ್ತನಲ್ಲ.

## ದ್ವೈತದರ್ಶನದಲ್ಲಿಸೂತ್ರಾರ್ಥ—

**॥ ಓಂ ತತ್ರಾಪಿ ಚ ತದ್ವ್ಯಾಪಾರಾದವಿರೋಧಃ ಓಂ ॥** (ಅತ್ರ ನರಕಸ್ಯ ದುಃಖರೂಪತಾ ಉಚ್ಯತೇ। ತತ್ರೇತಿ ಪ್ರಸ್ತುತಃ ನರಕಃ ಉಚ್ಯತೇ। ಚಶಬ್ದಃ ದುಃಖಾಭೋಗಸಮುಚ್ಚಯಾರ್ಥಃ। ತತ್ರಾಪಿ=ನರಕೇಽಪಿ ದುಃಖಾಭೋಗೇನ್ನೈವ ತದ್‌ವ್ಯಾಪಾರಾತ್–ತಸ್ಯ=ಈಶಸ್ಯ ಪ್ರೇರಣಾಖ್ಯವ್ಯಾಪಾರಾತ್ ಅವಿರೋಧಃ='ಸರ್ವಂ ರಮಯತಿ, ಸರ್ವಂ ನ ರಮಯತಿ' ಇತಿ ಸರ್ವನಿಯಂತೃತ್ವಶ್ರುತಿವಿರೋಧೋ ವಾ ನರಕಸ್ಯ ಸದುಃಖತ್ವೇ ತನ್ನಿಯಂತುಃ ಈಶಸ್ಯ ದುಃಖಾಭೋಕ್ತೃತ್ವವಿರೋಧೋ ವಾ ನೇತ್ಯರ್ಥಃ।

ಸಂಭೋಗಪ್ರಾಪ್ತಿರಿತ್ಯತ್ರ(1.2.8) ಅಭೋಗೋಕ್ತಾವಪಿ ಇಹ ಚ ಶಬ್ದೇನ ತದುಕ್ತಿಃ ಭೋಗೋ ನ ದರ್ಶನಮಾತ್ರಂ,ಕಿಂತು ತತ್‌ಕೃತ–ನೀಚೋಚ್ಚತ್ವಮ್। ತತ್ತು ನೇಶೇಽಸ್ತೀತಿ ದ್ಯೋತಯಿತುಮ್ ॥)

ತತ್ರಾಪಿ=ನರಕದಲ್ಲೂ ಚ=ದುಃಖದ ಅನುಭವವಿಲ್ಲದೆಯೇ ತದ್‌ವ್ಯಾಪಾರಾತ್= ಭಗವಂತನ ಪ್ರೇರಣಾರೂಪವ್ಯಾಪಾರವು ಇರುವುದರಿಂದ ಅವಿರೋಧಃ= ಸರ್ವನಿಯಂತೃತ್ವ ಶ್ರುತಿವಿರೋಧವಾಗಲೀ ನರಕದಲ್ಲಿ ದುಃಖವಿದ್ದಲ್ಲಿ ನಾರಕಿಗಳನ್ನು ನಿಯಮಿಸುವ ಭಗವಂತನಿಗೆ ದುಃಖಭೋಗವಿಲ್ಲದ ಪ್ರಯುಕ್ತ ಬರುವ ವಿರೋಧವಾಗಲೀ ಇಲ್ಲ.

**ಇಲ್ಲಿಗೆ ತದ್ವ್ಯಾಪಾರಾಧಿಕರಣವು ಮುಗಿಯಿತು.**

# ೧೪. ವಿದ್ಯಾಕರ್ಮಾಧಿಕರಣಮ್

**'ಅಥೈತಯೋಃ ಪಥೋರ್ನ ಕತರೇಣ ಚ ತಾನೀಮಾನಿ ಕ್ಷುದ್ರಮಿಶ್ರಾಣ್ಯ-ಸಕೃದಾವರ್ತೀನಿ ಭೂತಾನಿ ಜಾಯಸ್ವ ಮ್ರಿಯಸ್ವೇತ್ಯೇತತ್ ತೃತೀಯಂ ಸ್ಥಾನಮ್' (ಛಾಂ.ಉ. 5.10.8) ಇತಿ ಗತಿಸ್ವಾತಂತ್ರ್ಯಂ ಭೂತಾನಾಂ ಪ್ರತೀಯತ ಇತಿ । ಅತ ಆಹ-**

## ॥ ಓಂ ವಿದ್ಯಾಕರ್ಮಣೋರಿತಿ ತು ಪ್ರಕೃತತ್ವಾತ್ ಓಂ ॥ 18 ॥

**ವಿದ್ಯಾಕರ್ಮಾಪೇಕ್ಷಯೈವೈತದ್ ವಚನಮ್ । ತಯೋರಪಿ ಪ್ರಕೃತತ್ವಾತ್ ।**

**'ವಿದ್ಯಾಪಥಃ ಕರ್ಮಪಥೋ ದ್ವೌ ಪಂಥಾನೌ ಪ್ರಕೀರ್ತಿತೌ ।**

**ತದ್ವರ್ಜಿತಸ್ತ್ರಿಧಾ ಯಾತಿ ತಿರ್ಯಗ್ ವಾ ನರಕಂ ತಮಃ ॥'**

**ಇತಿ ಚ ಭಾರತೇ ।**

ಛಾಂದೋಗ್ಯಉಪನಿಷತ್ತಿನಲ್ಲಿ ಜ್ಞಾನಿಗಳಿಗೆ ಅರ್ಚಿರಾದಿ ಮಾರ್ಗ, ಕರ್ಮಿಗಳಿಗೆ ಧೂಮಾದಿಮಾರ್ಗಗಳನ್ನು ಹೇಳಿ ಇವೆರಡೂ ಇಲ್ಲದವರಿಗೆ ಮೂರನೆಯ ಮಾರ್ಗವನ್ನು ಹೇಳಲಾಗಿದೆ. 'ಆ ಮಾರ್ಗ ಕ್ಷುದ್ರವಾದುದು, ಸುಖದುಃಖ ಮಿಶ್ರವಾದುದು, ಮತ್ತೆ ಮತ್ತೆ ಆವೃತ್ತಿಉಳ್ಳದ್ದು. ಅದು ಮಾನುಷಯೋನಿ.' ಈ ವಿಷಯವನ್ನು ನಿರೂಪಿಸುವಾಗ ಉಪನಿಷತ್ತಿನಲ್ಲಿ 'ಅರ್ಚಿಷಮ್ ಅಭಿಸಂಭವಂತಿ' 'ಧೂಮಮ್ ಅಭಿಸಂಭವಂತಿ' 'ಅಸಕೃದಾವರ್ತೀನಿ ಭೂತಾನಿ' ಎಂದು ಜೀವರಿಗೆ ಸ್ವಾತಂತ್ರ್ಯವನ್ನು ಹೇಳಿದಂತಿದೆ. 'ಅಥೈತಯೋಃ ಪಥೋಃ ನ ಕತರೇಣ' ಕೆಲವರು ಈ ಎರಡರಲ್ಲಿ ಒಂದೂ ಮಾರ್ಗದಿಂದ ಹೋಗುವುದಿಲ್ಲ, ಎನ್ನುವ ಮೂಲಕ ಮಾರ್ಗವನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯವು ಜೀವರಿಗೆ ಹೇಳಿದಂತಿದೆ. ಮಾರ್ಗಗಳು ಫಲರೂಪವಾದವು, ವಿದ್ಯೆ-ಕರ್ಮಗಳು ಅವುಗಳಿಗೆ ಸಾಧನಗಳು. ಗತಿಯಲ್ಲಿ ಸ್ವಾತಂತ್ರ್ಯ ಎಂದರೆ ಫಲಭೂತವಾದ ಮಾರ್ಗಗಮನದಲ್ಲಿ ಸ್ವಾತಂತ್ರ್ಯ. ಈ ಸ್ವಾತಂತ್ರ್ಯಭ್ರಮನಿರಾಸವನ್ನು ಸೂತ್ರಕಾರರು ಈ ಅಧಿಕರಣದಲ್ಲಿ ಮಾಡಿದ್ದಾರೆ.

'ಅಥೈತಯೋಃ' ಎಂಬಲ್ಲಿರುವ ಏತತ್‌ಶಬ್ದದಿಂದ ಪೂರ್ವಪ್ರಕೃತವಾದ ಮಾರ್ಗಗಳ ಪರಾಮರ್ಶವಲ್ಲ, ಮಾರ್ಗಕ್ಕೆ ಸಾಧನವಾದ ವಿದ್ಯೆ-ಕರ್ಮಗಳ ಪರಾಮರ್ಶ. ಇದರ ಹಿಂದೆ 'ಇಮೇ ಅರಣ್ಯೇ ಶ್ರದ್ಧಾ-ತಪ ಇತ್ಯುಪಾಸತೇ' 'ಅಥ ಯ ಇಮೇ ಗ್ರಾಮೇ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ' ಎಂದು ವಿದ್ಯೆ ಮತ್ತು ಕರ್ಮಗಳೂ ಪ್ರಸ್ತುತವಾಗಿವೆ. ಅವುಗಳನ್ನೇ ಏತಯೋಃ ಎಂದು ಪರಾಮರ್ಶಿಸಲಾಗಿದೆ. ಆದ್ದರಿಂದ ಸಾಧಕರಿಗೆ ಸಾಧನೆಯ ಆಯ್ಕೆಯಲ್ಲಿ ಸ್ವಾತಂತ್ರವಿದ್ದರೂ ಸಾಧನಾಫಲವಾದ ಮಾರ್ಗದ ಆಯ್ಕೆಯಲ್ಲಿ ಸ್ವಾತಂತ್ರ್ಯವಿಲ್ಲ.

ಮಹಾಭಾರತದಲ್ಲಿ ಇದು ಸ್ಪಷ್ಟವಿದೆ—ವಿದ್ಯಾರೂಪವಾದ ಸಾಧನ (ಮಾರ್ಗ) ಮತ್ತು ಕರ್ಮರೂಪವಾದ ಸಾಧನ ಎಂದು ಎರಡು ಸಾಧನಗಳು. ಈ ಎರಡು

ಸಾಧನಗಳೂ ಇಲ್ಲದವನು ಹುಟ್ಟು-ಸಾವುಗಳುಳ್ಳ ಯೋನಿಗೋ ಅಥವಾ ನರಕ, ತಮಸ್ಸುಗ್ಗಳಿಗೋ ಮೂರರಲ್ಲಿ ಒಂದು ಕಡೆಗೆ ಹೋಗುತ್ತಾನೆ. ಈ ವಚನದಲ್ಲಿ 'ವಿದ್ಯಾಪಥಃಕರ್ಮಪಥೌ' ಎಂದು ಸಾಧನ ಮಾರ್ಗಗಳನ್ನೇ ಉಲ್ಲೇಖಿಸಲಾಗಿದೆ. ಆದ್ದರಿಂದ ಸಾಧಕನಿಗೆ ಫಲರೂಪದ ಮಾರ್ಗದಲ್ಲಿ ಸ್ವಾತಂತ್ರ್ಯವಿಲ್ಲ. ಮಾರ್ಗಸಾಧನದಲ್ಲಷ್ಟೇ ಸ್ವಾತಂತ್ರ್ಯ.

**ಶ್ರುತ್ಯರ್ಥ—** ಛಾಂದೋಗ್ಯಶ್ರುತಿ (8.10.3)
ತದ್ ಯ ಇತ್ಥಂ ವಿದುಃ ಯೇ ಚೇಮೇಽರಣ್ಯೇ ಶ್ರದ್ಧಾ ತಪ
ಇತ್ಯುಪಾಸತೇ ತೇಽರ್ಚಿಷಮಭಿಸಂಭವಂತಿ ||
ಅಥ ಯ ಇಮೇ ಗ್ರಾಮ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ
ತೇ ಧೂಮಮಭಿ ಸಂಭವಂತಿ ||
ಅಥೈತಯೋಃ ಪಥೋಃ ನ ಕತರೇಣ ತಾನೀಮಾನಿ...

ಯೇ ಇತ್ಥಂ ವಿದುಃ=ಯಾರು ಆತ್ಮತತ್ವವನ್ನು ತಿಳಿಯುವರೋ ಯೇ ಚೇಮೇ=ತಿಳಿದ ಇವರು ಅರಣ್ಯೇ=ಕಾಡಿನಲ್ಲಿ ಶ್ರದ್ಧಾ ತಪಃ=ಆತ್ಮಶ್ರದ್ಧೆ ಮತ್ತು ತಪಸ್ಸು ಇತಿ=ಇತ್ಯಾದಿಯಾಗಿ ಉಪಾಸತೇ=ಉಪಾಸನೆ ಮಾಡುವರೋ ತೇ=ಅವರು ಅರ್ಚಿಷಂ=ಅರ್ಚಿರಾದಿ ಮಾರ್ಗವನ್ನು ಅಭಿಸಂಭವಂತಿ=ಅನುಸರಿಸುತ್ತಾರೆ.

ಯ ಇಮೇ=ಯಾರು ಗ್ರಾಮೇ=ನಾಡಿನಲ್ಲಿ ಇಷ್ಟಾಪೂರ್ತೇ–ಇಷ್ಟ=ಯಾಗಾದಿಗಳು. ಪೂರ್ತ=ಕೆರೆಭಾವಿಗಳ ನಿರ್ಮಾಣ, ದತ್ತಂ=ದಾನ ಇವುಗಳನ್ನು ಉಪಾಸತೇ=ಮಾಡುವರೋ ತೇ=ಅಂತಹವರು ಧೂಮಂ=ಧೂಮಾದಿಮಾರ್ಗವನ್ನು ಅಭಿಸಂಭವಂತಿ=ಹೋಗುತ್ತಾರೆ.

ಅಥ ಏತಯೋಃ ಪಥೋಃ ನ ಕತರೇಣ=ಈ ಎರಡೂ ಸಾಧನೆಗಳೂ ಇಲ್ಲದವರು ತಾನೀಮಾನಿ=ಯಾವ ಈ ಕ್ಷುದ್ರ–ಮಿಶ್ರಾಣಿ=ಅಲ್ಪವಾದ ಮತ್ತು ಸುಖದುಃಖ ಮಿಶ್ರವಾದ ಅಸಕೃತ್=ಮತ್ತೆ ಮತ್ತೆ ಆವರ್ತೀನಿ=ಗಮನವಿರುವವರಾಗುತ್ತಾರೆ. ಜಾಯಸ್ವ–ಮ್ರಿಯಸ್ವ ಇತಿ=ಮತ್ತೆ ಮತ್ತೆ ಹುಟ್ಟೋಣ, ಸಾಯೋಣ ಇತ್ಯೇತತ್=ಹೀಗಿರುವ ತೃತೀಯಂ ಸ್ಥಾನಂ=ಮೂರನೆಯ ಸ್ಥಾನ ಇದು.

(ಇಷ್ಟ+ಪೂರ್ತ–ಇಲ್ಲಿ 'ಅನ್ಯೇಭ್ಯೋಽಪಿ ದೃಶ್ಯತೇ' ಎಂದು ದೀರ್ಘ ಬಂದು=ಇಷ್ಟಾಪೂರ್ತೇ, ಎಂದಾಗಿದೆ. ಜಾಯಸ್ವ–ಮ್ರಿಯಸ್ವ–ಕ್ರಿಯಾಸಮಭಿವ್ಯಾಹಾರೇ ಲೋಟ್. ಅದಕ್ಕೆ ಸ್ವಪ್ರತ್ಯಯ. ಜಾಯಂತೇ, ಮ್ರಿಯಂತೇ ಎಂದರ್ಥ.)

ಭಾಷ್ಯದಲ್ಲಿ ಉದಾಹೃತವಾದ 'ವಿದ್ಯಾಪಥ' ಎಂಬ ಶ್ಲೋಕ ಮಹಾಭಾರತದ್ದು ಎಂದು ಭಾಷ್ಯದೀಪಿಕಾಪಾಠ. 'ಇತಿ ಭಾರತೇ' ಎಂದು ಅದಕ್ಕೆ ಸಮ್ಮತಪಾಠ. ವಿದ್ಯಾಪಥ–ಕರ್ಮಪಥೌ ಎಂದು ಅಕಾರಾಂತ ಶಬ್ದ. ತದ್ವರ್ಜಿತಃ ತ್ರಿಧಾ ಯಾತಿ ಎಂದರೆ, ವಿದ್ಯೆ–ಕರ್ಮಗಳಿಲ್ಲದವನು ಮೂರು ರೀತಿಯ ಗತಿಯನ್ನು ಹೊಂದುತ್ತಾನೆ, ಎಂದರ್ಥ. ಹುಟ್ಟುಸಾವಿನ ಯೋನಿ, ನರಕ ಅಥವಾ ತಮಸ್ಸು.

### ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ—

**॥ ಓಂ ವಿದ್ಯಾಕರ್ಮಣೋರಿತಿ ತು ಪ್ರಕೃತತ್ವಾತ್ ಓಂ ॥** (ಅತ್ರ ಭೂತಾನಾಂ ಸಾಧನೇ ಏವ ಸ್ವಾತಂತ್ರ್ಯಂ, ನತು ಪಿತೃಯಾನಾದಿಫಲಪ್ರಾಪ್ತೌ ಇತ್ಯುಚ್ಯತೇ । ತುರೇವ । ಇತಿ ಶಬ್ದಃ ಶ್ರೌತಪದಾರ್ಥಸ್ಯ ಅರ್ಥೋಕ್ತಿಪರಃ । 'ಏತಯೋಃ ಪಥೋಃ ಕತರೇಣ ಚ' ಇತಿ ಶ್ರುತೌ ಏತಯೋರಿತ್ಯಸ್ಯ ವಿದ್ಯಾಕರ್ಮಣೋರಿತ್ಯೇವಾರ್ಥಃ । ನತು ದೇವಯಾನ–ಪಿತೃಯಾನಯೋರಿತ್ಯರ್ಥಃ । ಯೇನ ಫಲಸ್ವಾತಂತ್ರ್ಯಂ ಸ್ಯಾದಿತಿ ಭಾವಃ । ಕುತಃ ? ಪ್ರಕೃತತ್ವಾತ್ । ವಿದ್ಯಾಕರ್ಮಣೋರಿತ್ಯನ್ವೇತಿ । 'ತದ್ಯ ಇತ್ಥಂ ವಿದುರ್ಯೇ ಚೇಮೇಽರಣ್ಯೇ ಶ್ರದ್ಧಾ ತಪ ಇತ್ಯುಪಾಸತೇ ತೇಽರ್ಚಿಷಮಭಿಸಂಭವಂತಿ । ಅಥ ಯ ಇಮೇ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ತೇ ಧೂಮಮ್ ।' ಇತಿ ವಿದ್ಯಾಕರ್ಮರೂಪಮಾರ್ಗಯೋರಪಿ ಪ್ರಕೃತತ್ವಾದಿತ್ಯರ್ಥಃ ।)

'ಏತಯೋಃ ಪಥೋಃ ಕತರೇಣ ಚ' ಎಂಬ ಶ್ರುತಿಯಲ್ಲಿ ಏತಯೋಃ ಎಂದರೆ ದೇವಯಾನ–ಪಿತೃಯಾನ ಮಾರ್ಗಗಳು ವಿವಕ್ಷಿತವಲ್ಲ. ವಿದ್ಯಾ–ಕರ್ಮರೂಪವಾದ ಸಾಧನಗಳೇ ವಿವಕ್ಷಿತ. ಅವುಗಳೂ ಪೂರ್ವಪ್ರಕೃತವಾಗಿರುವುದರಿಂದ.

ಇಲ್ಲಿಗೆ ವಿದ್ಯಾಕರ್ಮಾಧಿಕರಣವು ಮುಗಿಯಿತು.

## ೧೫. ಮಹಾತಮೋಽಧಿಕರಣಮ್ (ನ ತೃತೀಯಾಧಿಕರಣಮ್)

'ಯತ್ರ ದುಃಖಂ ಸುಖಂ ತತ್ರ ಸರ್ವತ್ರಾಪಿ ಪ್ರತೀಯತೇ ।
ಅಪಿ ನೀಚಗತೌ ಕಿಂಚಿತ್ ಕಿಮು ಮಾನುಷದೇಹಿನಃ ॥'

ಇತಿ ವಚನಾನ್ಮಹಾತಮಸ್ಯಪಿ ಸುಖಪ್ರಾಪ್ತಿರಿತಿ । ಅತ ಆಹ–

**॥ ಓಂ ನ ತೃತೀಯೇ ತಥೋಪಲಬ್ಧೇಃ ಓಂ ॥ ೧೯ ॥**

**'ಅಥಾವಿದ್ವಾನಕರ್ಮಾऽವಾಗ್ ಗಚ್ಛತಿ ತ್ರಿಧಾ ಹವಾ ವಾऽವಾಗ್ಗತಿಃ ತಿರ್ಯಗ್ ಯಾತನಾ ತಮ ಇತಿ । ದ್ವೇ ವಾವ ಸುಖಾನುವೃತ್ತೇ, ನ ತಮಃ ಸುಖಾನುವೃತ್ತಂ ಕೇವಲಂ ಹ್ಯೇವಾತ್ರ ದುಃಖಂ ಭವತಿ ॥' ಇತಿ ಶ್ರುತೇರ್ನ ತೃತೀಯಾವಾಗ್ಗತೌ ಸುಖಮ್ ॥**

'ಎಲ್ಲಿ ದುಃಖವಿದೆಯೋ ಅಲ್ಲಿ ಸುಖವೂ ಇರುತ್ತದೆ. ಇದು ಸರ್ವತ್ರ ಕಾಣುತ್ತದೆ' ಎಂಬ ವಚನದಿಂದ ದುಃಖಕ್ಕೆ ಸುಖದ ವ್ಯಾಪ್ತಿಯು ತಿಳಿಯುವುದರಿಂದ ಮಹಾತಮಸ್ಸಿನಲ್ಲೂ ಸುಖವಿದೆ, ಎಂಬ ಪೂರ್ವಪಕ್ಷಕ್ಕೆ ಉತ್ತರವಾಗಿ ಈ ಸೂತ್ರವಿದೆ.

ಮಹಾತಮಸ್ಸಿನಲ್ಲಿ ಸುಖಲೇಶವೂ ಇಲ್ಲ, ಎಂದು ಶ್ರುತಿಯಿಂದ ತಿಳಿದು ಬರುವುದರಿಂದ ನೀಚಗತಿಗಳಲ್ಲಿ ಮೂರನೆಯದ್ದಾದ ತಮಸ್ಸಿನಲ್ಲಿ ಸುಖವಿಲ್ಲ, ದುಃಖ ಮಾತ್ರ.

ಶ್ರುತ್ಯರ್ಥ—ಅವಿದ್ವಾನ್ ಅಕರ್ಮಾ=ಜ್ಞಾನ-ಕರ್ಮಗಳಿಲ್ಲದವನು ಅವಾಕ್= ನೀಚಸ್ಥಾನಕ್ಕೆ ಗಚ್ಛತಿ=ಹೋಗುತ್ತಾನೆ. ಅವಾಗ್ಗತಿಃ=ನೀಚಗತಿಯು ತ್ರಿಧಾ ವಾ= ಮೂರುವಿಧವಾಗಿದೆ-ತಿರ್ಯಕ್=ಮತ್ತೆ ಮತ್ತೆ ಹುಟ್ಟು-ಸಾವುಗಳಿರುವ ಯೋನಿಪ್ರಾಪ್ತಿ, ಯಾತನಾ=ನರಕ, ತಮಃ=ಅಂಧಂ ತಮಸ್ಸು. ಇವುಗಳಲ್ಲಿ ದ್ವೇ ವಾವ=ಎರಡು ಮಾತ್ರ ಸುಖಾನುವೃತ್ತೇ=ದುಃಖದೊಂದಿಗೆ ಸುಖದಿಂದಲೂ ಕೂಡಿದೆ. ತಮಃ=ಅಂಧಂತಮಸ್ಸು ನ ಸುಖಾನುವೃತ್ತಂ=ಸುಖಾನುವೃತ್ತಿ ಇಲ್ಲದ್ದು. ಅತ್ರ=ಇಲ್ಲಿ ಕೇವಲಂ ದುಃಖಂ ಹ್ಯೇವ=ಬರೆ ದುಃಖ ಮಾತ್ರ.

## ॥ ಓಂ ಸ್ಮರ್ಯತೇऽಪಿ ಚ ಲೋಕೇ ಓಂ ॥ ೨೦ ॥

**'ತಿರ್ಯಕ್ಷು ನರಕೇ ಚೈವ ಸುಖಲೇಶೋ ವಿಧೀಯತೇ ।**
**ನಾಂಧೇ ತಮಸಿ ಮಗ್ನಾನಾಂ ಸುಖಲೇಶೋऽಪಿ ಕಶ್ಚನ ॥'**
**ಇತಿ ಭವಿಷ್ಯತ್ಪರ್ವಣಿ ।**

**ಲೋಕಸಿದ್ಧಂ ಚೈತತ್ । ಚಶಬ್ದಾಲ್ಲೋಕಸಿದ್ಧಿರಪಿ ಸ್ಮಾರ್ತೇತ್ಯಾಹ ।**

**'ಅತಿಪ್ರಿಯೇ ಯಥಾ ರಾಜಾ ನ ದುಃಖಂ ಸಹತೇ ಕ್ವಚಿತ್ ।**
**ಅತ್ಯಪ್ರಿಯೇ ಸುಖಮಪಿ ತಥೈವ ಪರಮೇಶ್ವರಃ ॥'**
**ಇತಿ ಹಿ ಬ್ರಾಹ್ಮೇ ॥ 20 ॥**

ಮಹಾಭಾರತದ ಭವಿಷ್ಯತ್‌ಪರ್ವದಲ್ಲಿ ಹೀಗಿದೆ—ಹುಟ್ಟು-ಸಾವುಗಳಿರುವ ಯೋನಿಯಲ್ಲಿ ಮತ್ತು ನರಕದಲ್ಲಿ ಅಲ್ಪಸುಖ ಇದೆ. ಅಂಧಂತಮಸ್ಸಿನಲ್ಲಿ ಮುಳುಗಿದವರಿಗೆ ಯಾವ ಕಾರಣದಿಂದಲೂ ಸುಖಲೇಶವೂ ಇಲ್ಲ.

ಸ್ಮೃತಿಯಿಂದ ಮಾತ್ರವಲ್ಲ, ಲೋಕನ್ಯಾಯಸಿದ್ಧವೂ ಆಗಿದೆ. ಇದಕ್ಕೆ ಬ್ರಹ್ಮ ಪುರಾಣದ ವಾಕ್ಯವೇ ಆಧಾರ. ರಾಜನು ತನಗೆ ಅತ್ಯಂತ ಪ್ರೀತಿಪಾತ್ರರಿಗೆ ಹೇಗೆ ದುಃಖ ಬರುವುದನ್ನು ಸಹಿಸುವುದಿಲ್ಲವೋ ಅದರಂತೆ, ಅತಿಅಪ್ರಿಯರಾದವರಿಗೆ ಸುಖಬರುವು ದನ್ನೂ ಸಹಿಸುವುದಿಲ್ಲ. ಅದರಂತೆ, ಪರಮಾತ್ಮ.

ವಿವರಣೆ—ತಮಸ್ಸಿಗೆ ಹೋಗುವವರು ಭಗವದ್‌ದ್ವೇಷಿಗಳು. ಅವರಿಗೆ ಸುಖ ವಾಗುವುದನ್ನು ಭಗವಂತ ಸಹಿಸುವುದಿಲ್ಲ. ಆದ್ದರಿಂದ ತಮಸ್ಸಿನಲ್ಲಿ ಸುಖವಿಲ್ಲ.

## ॥ ಓಂ ದರ್ಶನಾಚ್ಚ ಓಂ ॥ ೨೧ ॥

'ನಾರಾಯಣಪ್ರಸಾದೇನ ಸಮಿದ್ಧಜ್ಞಾನಚಕ್ಷುಷಾ ।
ಅತ್ಯಂತದುಃಖಸಂಲ್ಲೀನಾನ್ ನಿಶ್ಶೇಷಸುಖವರ್ಜಿತಾನ್ ॥
ನಿತ್ಯಮೇವ ತಥಾಭೂತಾನ್ ವಿಮಿಶ್ರಾಂಶ್ಚ ಗಣಾನ್ ಬಹೂನ್ ।
ನಿರಸ್ತಾಶೇಷದುಃಖಾಂಶ್ಚ ನಿತ್ಯಾನಂದೈಕಭಾಗಿನಃ ।
ಅಪಶ್ಯತ್ ತ್ರಿವಿಧಾನ್ ಬ್ರಹ್ಮಾ ಸಾಕ್ಷಾದೇವ ಚತುರ್ಮುಖಃ ॥'
ಇತಿ ದರ್ಶನವಚನಾಚ್ಚ ಪಾದ್ಮೇ ॥

ಪಾದ್ಮಪುರಾಣದಲ್ಲಿ ಚತುರ್ಮುಖಬ್ರಹ್ಮದೇವರು ತಮಸ್ಸಿನಲ್ಲಿ ಸುಖವಿಲ್ಲ ದಿರುವುದನ್ನು ನೋಡಿದ್ದಾರೆ, ಎಂದಿರುವುದರಿಂದ ಬ್ರಹ್ಮದರ್ಶನವೂ ಸುಖವಿಲ್ಲದಿರುವು ದಕ್ಕೆ ಒಂದು ಪ್ರಮಾಣವಾಗಿದೆ. ಪಾದ್ಮವಚನದ ಅರ್ಥ ಹೀಗೆ—

ನಾರಾಯಣದೇವರ ಅನುಗ್ರಹದಿಂದ ಚೆನ್ನಾಗಿ ಬೆಳಗಿದ ಜ್ಞಾನದೃಷ್ಟಿಯಿಂದ ಚತುರ್ಮುಖಬ್ರಹ್ಮದೇವರು ತ್ರಿವಿಧಜೀವರನ್ನು ನೋಡಿದರು. ಕೆಲವರಿಗೆ ಅತ್ಯಂತ ದುಃಖ, ಸುಖದ ಲವಲೇಶವೂ ಇಲ್ಲ, ಇನ್ನು ಕೆಲವರು ಸರ್ವದಾ ಸುಖ-ದುಃಖ ಮಿಶ್ರರು. ಇಂತಹವರ ಅನೇಕ ಗುಂಪುಗಳನ್ನೇ ನೋಡಿದರು. ಮತ್ತೆ ಕೆಲವರು-ಸಕಲ ವಿಧದ ದುಃಖಗಳಿಂದ ರಹಿತರಾಗಿ ನಿತ್ಯವಾಗಿ ಆನಂದಮಾತ್ರವನ್ನು ಹೊಂದಿರುವವರು. ಹೀಗೆ, ಬ್ರಹ್ಮದೇವರು ಸಾಕ್ಷಾತ್ತಾಗಿ ತ್ರಿವಿಧಜೀವರನ್ನು ನೋಡಿದರು.

ವಿವರಣೆ—ತತ್ತ್ವಪ್ರದೀಪದಲ್ಲಿ ಪಂಡಿತಾಚಾರ್ಯರು ತ್ರಿವಿಧಜೀವರಲ್ಲಿ ಮತ್ತೆ ತ್ರೈವಿಧ್ಯವನ್ನು ಹೇಳಿದ್ದಾರೆ.

1. ತಮೋಗತರಲ್ಲಿ ದುಃಖತಾರತಮ್ಯದಿಂದ ತ್ರೈವಿಧ್ಯ.
2. ನಿತ್ಯಸಂಸಾರಿಗಳಲ್ಲಿ–ಅ. ಅಲ್ಪಸುಖ, ಆ. ಸಮಸುಖ, ಇ. ಅಧಿಕಸುಖ (ದುಃಖಾಪೇಕ್ಷಯಾ).ಮೊದಲನೆಯವರು ನಾರಕಿಗಳು. ಎರಡನೆಯವರು ಮನುಷ್ಯರು, ಮೂರನೆಯವರು ಸ್ವರ್ಗಿಗಳು.
3. ಮನುಷ್ಯೋತ್ತಮರು, ಋಷಿಗಂಧರ್ವರು, ದೇವತೆಗಳು. ಇವರಲ್ಲಿ ಸುಖತಾರತಮ್ಯಪ್ರಯುಕ್ತವಾಗಿ ತ್ರೈವಿಧ್ಯ.

ನಿತ್ಯಸಂಸಾರಿಗಳಲ್ಲಿ ನಾರಕಿಗಳೆಂದರೆ–ಅನೇಕ ಬಾರಿ ನರಕಕ್ಕೆ ಹೋಗುವವರು, ಅದರಂತೆ ಹೆಚ್ಚುಬಾರಿ ಭೂಮಿಯಲ್ಲಿ ಹುಟ್ಟುವವರು ಮನುಷ್ಯರು. ಅನೇಕ ಸಲ ಸ್ವರ್ಗಕ್ಕೆ ಹೋಗುವವರು ಸ್ವರ್ಗಿಗಳು.

## ॥ ಓಂ ತೃತೀಯೇ ಶಬ್ದಾವರೋಧಃ ಸಂಶೋಕಜಸ್ಯ ಓಂ ॥ ೨೨ ॥

**ತೃತೀಯೇ ತೃತೀಯತಮಸಃ ಶ್ರವಣಾದೇವ ಶಬ್ದಾನುಸಾರೇಣ ಸಂಶೋಕಜ ಮೋಹಪ್ರಾಪ್ತಿಃ ।(ಪ್ತಿ) ಸ್ಮರಣಾಚ್ಚ ।**

ತೃತೀಯೇ=ಮೂರು ತಮಸ್ಸುಗಳಲ್ಲಿ ಮೂರನೆಯದ್ದಾದ ತಮೋಲೋಕದ ಸ್ಥಿತಿಯನ್ನು ಶಬ್ದದಿಂದ ಕೇಳಿದರೇ ಅತಿದುಃಖವಾಗಿ ಅದರಿಂದ ಮೂರ್ಛೆ ಬರುತ್ತದೆ. ಕೇಳಿದಾಗಲೇ ಹೀಗಾದರೆ ಅನುಭವ ಹೇಗಿರಬಹುದು? ಆದ್ದರಿಂದ ತಮಸ್ಸಿನಲ್ಲಿ ಸುಖಲೇಶವೂ ಇಲ್ಲ. (ಶಬ್ದೇನ=ಶ್ರವಣೇನ ಅವರೋಧಃ=ಪ್ರಾಪ್ತಿಃ)

## ॥ ಓಂ ಸ್ಮರಣಾಚ್ಚ ಓಂ ॥ ೨೩ ॥

**'ಮಹಾತಮಸ್ತ್ರಿಧಾ ಪ್ರೋಕ್ತಮೂರ್ಧ್ವಂ ಮಧ್ಯಂ ತಥಾಽಧರಮ್ ।**
**ಶ್ರವಣೇನೈವ ಮೂರ್ಛಾದಿರಧರಸ್ಯ ಯತೋ ಭವೇತ್ ।**
**ತಸ್ಮಾನ್ನ ವಿಸ್ತರೇಣೈತತ್ ಕಥ್ಯತೇ ರಾಜಸತ್ತಮ ॥' ಇತಿ ಕೌರ್ಮೇ ।**

ಕೂರ್ಮಪುರಾಣದಲ್ಲಿ ತಮಸ್ಸು ಮೂರುವಿಧ ಎಂದು ಹೇಳಿ ಮೂರನೆಯ ತಮಸ್ಸಿನ ಶ್ರವಣದಿಂದ ಮೂರ್ಛೆ ಬರುತ್ತದೆ, ಎಂದು ಹೇಳಿರುವುದರಿಂದ ಅಲ್ಲಿ ಅಲ್ಪಸುಖವೂ ಇಲ್ಲ.

ಕೂರ್ಮಪುರಾಣದ ಅರ್ಥ—ಮಹಾತಮಸ್ಸು ಊರ್ಧ್ವ, ಮಧ್ಯ, ನೀಚ ಎಂದು ಮೂರು ವಿಧವಾಗಿದೆ. ನೀಚತಮಸ್ಸಿನ ಶ್ರವಣದಿಂದಲೇ ಮೂರ್ಛೆ, ಹುಚ್ಚು, ಮರಣಗಳು ಬರುವುದರಿಂದ, ಎಲೈ ರಾಜಶ್ರೇಷ್ಠನೇ, ಅದನ್ನು ವಿಸ್ತಾರವಾಗಿ ಹೇಳುವುದಿಲ್ಲ.

ಈ ಸೂತ್ರವು ತತ್ತ್ವಪ್ರದೀಪದ ಪಾಠದಂತೆ ಇಲ್ಲ. 'ಸ್ಮರಣಾಚ್ಚ' ಎಂದು ಭಾಷ್ಯವಾಕ್ಯ ಹೊರತು ಸೂತ್ರವಲ್ಲ. ಎಂದು ಕೆಲವರ ಅಭಿಪ್ರಾಯವಾಗಿದೆ. ಅದ್ವೈತ–ವಿಶಿಷ್ಟಾದ್ವೈತಭಾಷ್ಯಗಳಲ್ಲೂ ಈ ಸೂತ್ರವಿಲ್ಲ.

## ದ್ವೈತದರ್ಶನದಲ್ಲಿಸೂತ್ರಗಳ ಅರ್ಥ—

**॥ ಓಂ ನ ತೃತೀಯೇ ತಥೋಪಲಬ್ಧೇಃ ಓಂ ॥** (ಸುಖಮಿತಿ ಶೇಷಃ। ತೃತೀಯೇ 'ತಿರ್ಯಗ್ ವಾ ನರಕಂ ತಮಃ' ಇತ್ಯುಕ್ತ– ತೃತೀಯೇ, ಅಂಧಂತಮಸಿ ಇತ್ಯರ್ಥಃ। ನ ಸುಖಮ್ ಇತ್ಯಸ್ತಿ। ಕುತಃ? ತಥಾ ಉಪಲಬ್ಧೇಃ। 'ಅಥಾವಿದ್ವಾನಕರ್ಮಾ' ಇತ್ಯಾದಿಶ್ರುತೌ ತಥಾ ದರ್ಶನಾದಿತ್ಯರ್ಥಃ।)

ತೃತೀಯೇ=ನೀಚಗತಿಗಳಲ್ಲಿ ಮೂರನೆಯದ್ದಾದ ತಮಸ್ಸಿನಲ್ಲಿ ಸುಖಲೇಶವೂ ಇಲ್ಲ. ಹಾಗೆ ಹೇಳುವ 'ಅಥಾವಿದ್ವಾನ್' ಇತ್ಯಾದಿಶ್ರುತಿಯು ಇರುವುದರಿಂದ.

**॥ ಓಂ ಸ್ಮರ್ಯತೇಽಪಿ ಚ ಲೋಕೇ ಓಂ ॥** (ನ ತೃತೀಯೇ ಸುಖಮಿತ್ಯೇತತ್– ತಿರ್ಯಕ್ಷು ನರಕೇ ಚೈವ ಸುಖಲೇಶೋ ವಿಧೀಯತೇ । ನಾಂಧೇ ತಮಸಿ...॥ ಇತಿ ಸ್ಮರ್ಯತೇ। ಲೋಕೇಽಪಿ ಸಿದ್ಧಮಿತಿ ಶೇಷಃ। ಲೌಕಿಕ ದೃಷ್ಟಾಂತಯುಕ್ತ–ಯುಕ್ತಿಸಿದ್ಧಮ್ ಇತ್ಯರ್ಥಃ। ಯಥಾ ರಾಜಾಪ್ರಿಯೋ ನರಃ ಸುಖಿತ್ವೇನ ರಾಜಾನಿಷ್ಟತ್ವಾತ್ ನ ಸುಖಭಾಕ್ ಏವಮ್ ಈಶಾಪ್ರಿಯಃ ಅಂಧಂತಮಸಸ್ಥಃ ಸುಖಿತ್ವೇನ ಈಶಾನಿಷ್ಟತ್ವಾತ್ ನ ಸುಖಭಾಕ್ ಇತ್ಯನುಮಾನಸಿದ್ಧಮ್ ಇತ್ಯರ್ಥಃ। 'ಅತ್ಯಪ್ರಿಯೇ ಸುಖಮಪಿ ತಥೈವ ಪರಮೇಶ್ವರಃ' ಇತಿ ಯುಕ್ತಿಮೂಲಸ್ಮೃತಿ ಸಮುಚ್ಚಯೇ ಚಃ।)

ಅಂಧಂತಮಸ್ಸಿನಲ್ಲಿ ಸುಖಲೇಶವೂ ಇಲ್ಲ ಎನ್ನುವುದು ಸ್ಮರ್ಯತೇಽಪಿ= 'ತಿರ್ಯಕ್ಷು ನರಕೇ ಚೈವ' ಎಂಬ ಸ್ಮೃತಿಯಿಂದಲೂ ಸಿದ್ಧವಾಗಿದೆ. ಲೋಕೇ ಚ=ಲೋಕ ದೃಷ್ಟಾಂತಸಹಿತವಾದ ಯುಕ್ತಿಯಿಂದಲೂ ಸಿದ್ಧವಾಗಿದೆ.

**॥ ಓಂ ದರ್ಶನಾಚ್ಚ ಓಂ ॥** (ನ ತೃತೀಯೇ ಸುಖಮಿತ್ಯೇತತ್ ವಿರಿಂಚಿಪ್ರತ್ಯಕ್ಷಾಚ್ಚ ಸಿದ್ಧಮಿತ್ಯರ್ಥಃ। ತಚ್ಚ 'ನಾರಾಯಣಪ್ರಸಾದೇನ' ಇತ್ಯಾದಿಸ್ಮೃತ್ಯಾ ಬೋಧ್ಯಮ್ ಇತಿ ಭಾವಃ।)

ತಮಸ್ಸಿನಲ್ಲಿ ಸುಖಭಾವವು ಚತುರ್ಮುಖನ ಪ್ರತ್ಯಕ್ಷದಿಂದಲೂ ಸಿದ್ಧವಾಗಿದೆ.

**॥ ಓಂ ತೃತೀಯೇ ಶಬ್ದಾವರೋಧಃ ಸಂಶೋಕಜಸ್ಯ ಓಂ ॥** (ಅರ್ಥಾಪತ್ತಿತೋಽಪಿ ಏವಮಿತ್ಯಾಹ । ತೃತೀಯೇ ಇತ್ಯಸ್ತಿ । ತೃತೀಯೇಽಪಿ ತೃತೀಯೇ=ತಮಸಿ ವಿಷಯೇ ಸಂಶೋಕಜಸ್ಯ=ಅತಿದುಃಖಜನ್ಯಸ್ಯ ಮೋಹಸ್ಯ ಶಬ್ದಾವರೋಧಃ=ಶಬ್ದೇನ ಪ್ರಾಪ್ತಿಃ, ಶಬ್ದಶ್ರವಣೇನ ಪ್ರಾಪ್ತಿಃ ಭವತಿ ಇತ್ಯರ್ಥಃ। ತಮಸಿ ತೃತೀಯತಮಸಃ ವರ್ಣನೇ ತತ್–ಶ್ರೋತೄಣಾಮ್ ಅತಿದುಃಖಂ ಭವತಿ । ತೇನ ಚ ಮೂರ್ಛಾ, ಇತಿ ತದನ್ಯಥಾನುಪಪತ್ತ್ಯಾ ನ ತತ್ರ ಸುಖಮಸ್ತೀತಿ ಸಿದ್ಧಮಿತಿ ಭಾವಃ ।)

ತಮಸ್ಸಿನಲ್ಲಿ ಸುಖವಿಲ್ಲ, ಅತಿದುಃಖ ಎನ್ನುವುದು ಅರ್ಥಾಪತ್ತಿಪ್ರಮಾಣದಿಂದಲೂ ಸಿದ್ಧವಾಗುತ್ತದೆ. ಮೂರು ವಿಧವಾದ ತಮಸ್ಸುಗಳಲ್ಲಿ ಮೂರನೆಯ ತಮಸ್ಸಿನ ವರ್ಣನೆಯನ್ನು ಕೇಳುತ್ತಿದ್ದರೆ ಅತಿದುಃಖವಾಗಿ ಮೂರ್ಛೆಯೇ ಬಂದುಬಿಡುತ್ತದೆ.

**॥ ಓಂ ಸ್ಮರಣಾಚ್ಚ ಓಂ ॥** (ತೃತೀಯೇ ಶಬ್ದಾವರೋಧಃ ಸಂಶೋಕಜಸ್ಯ, ಇತ್ಯಸ್ಯ 'ಮಹಾತಮಸ್ತ್ರಿಧಾ ಪ್ರೋಕ್ತಮ್' ಇತ್ಯಾದಿನಾ ಸ್ಮರಣಾತ್, ಇತ್ಯರ್ಥಃ । ಪ್ರಾಕ್ ತಮಸಃ ದುಃಖಮಾತ್ರತ್ವೇ ಸ್ಮೃತ್ಯುಕ್ತಿಃ । ಅತ್ರ ತು, ತಮಸ್ತ್ರೈವಿಧ್ಯೇ, ತೃತೀಯೇ ಶ್ರೋತೃ ಮೋಹಪ್ರಾಪ್ತೌ ಚ, ಇತಿ ಭೇದಃ ।)

ಮೂರನೆಯ ತಮಸ್ಸಿನ ಶ್ರವಣದಿಂದ ಮೂರ್ಛೆ ಬರುತ್ತದೆ, ಎನ್ನುವುದೂ ಸ್ಮೃತಿಯಲ್ಲಿ ಉಕ್ತವಾಗಿದೆ.

## ಅದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ—

**ಶಾಂಕರಭಾಷ್ಯದಲ್ಲಿ** 12ನೇ ಸೂತ್ರದಿಂದ 21ನೆಯ (ಪರಭಾಷ್ಯದಂತೆ) 'ತೃತೀಯೇ ಶಬ್ದಾವರೋಧಃ ಸಂಶೋಕಜಸ್ಯ' ಎಂಬ ಸೂತ್ರದವರೆಗೆ (10 ಸೂತ್ರಗಳು) ಒಂದು ಅಧಿಕರಣ.

**॥ ಅನಿಷ್ಟಾದಿಕಾರಿಣಾಮಪಿ ಚ ಶ್ರುತಮ್ ॥** ಈ ಸೂತ್ರದಲ್ಲಿ ಕೆಟ್ಟಕೆಲಸವನ್ನು ಮಾಡಿದವರಿಗೂ ಗಮನಾಗಮನವು ಇದೆ, ಎಂದು ಹೇಳಲಾಗಿದೆ. ಆದರೆ, ಶಾಂಕರ ಮತ್ತು ರಾಮಾನುಜಭಾಷ್ಯದಂತೆ ಈ ಸೂತ್ರವು ಕುಕರ್ಮಿಗಳಿಗೂ ಚಂದ್ರಲೋಕಪ್ರಾಪ್ತಿ ಇದೆ, ಎಂದು ಪೂರ್ವಪಕ್ಷವಾಗಿ ಹೇಳುತ್ತದೆ. ಇಷ್ಟ ಎಂದರೆ ಯಜನ. ಇಷ್ಟಾದಿಕಾರಿಗಳು ಎಂದರೆ ಯಜನಾದಿಕರ್ಮಗಳನ್ನು ಮಾಡುವವರು. ಅನಿಷ್ಟಾದಿಕಾರಿಗಳು ಎಂದರೆ ಅದನ್ನು ಮಾಡದವರು. ಅವರಿಗೂ ಚಂದ್ರಲೋಕ ಪ್ರಾಪ್ತಿ ಇದೆ. ಹಾಗೆಂದು ಶ್ರುತಿ

ಹೇಳಿದೆ– ಯೇ ವೈ ಕೇ ಚಾಸ್ಮಾಲ್ಲೋಕಾತ್ ಪ್ರಯಂತಿ ಚಂದ್ರಮಸಮೇವ ತೇ ಸರ್ವೇ ಗಚ್ಛಂತಿ'' ಹೀಗೆ ಕೌಷೀತಕೀ ಉಪನಿಷತ್ತು ಎಲ್ಲರಿಗೂ ಚಂದ್ರಲೋಕ ಪ್ರಾಪ್ತಿಯನ್ನು ತಿಳಿಸುತ್ತದೆ. ಅಂತಹವರು ಚಂದ್ರಲೋಕಕ್ಕೆ ಹೋದರೂ ಅವರಿಗೆ ಅಲ್ಲಿ ಸುಖಭೋಗ ಇಲ್ಲ. ಇದು ಪೂರ್ವಪಕ್ಷ ಸೂತ್ರ.

**॥ ಸಂಯಮನೇ ತ್ವನುಭೂಯೇತರೇಷಾಮ್ ಆರೋಹಾವರೋಹೌ ತದ್ಗತಿದರ್ಶನಾತ್ ॥** ಈ ಸೂತ್ರದ ತುಶಬ್ದವು ಹಿಂದಿನ ಸೂತ್ರದ ಪೂರ್ವಪಕ್ಷದ ನಿರಾಕರಣೆಯನ್ನು ಮಾಡುತ್ತದೆ. ಲೋಕಾಂತರಕ್ಕೆ ಏರುವುದು ಭೋಗಕ್ಕಾಗಿಯೇ ಹೊರತು ಅಲ್ಲಿಂದ ಬೀಳುವುದಕ್ಕಾಗಿ ಅಲ್ಲ. ಮರ ಹತ್ತುವುದು ಪುಷ್ಪ–ಫಲಪ್ರಾಪ್ತಿಗಾಗಿ, ಬೀಳುವುದಕ್ಕಾಗಿ ಅಲ್ಲ. ಅನಿಷ್ಟಾದಿಕಾರಿಗಳಿಗೆ ಭೋಗವಿಲ್ಲದ ಮೇಲೆ ಚಂದ್ರಲೋಕ ಪ್ರಾಪ್ತಿ ವ್ಯರ್ಥ. ಅವರು ಸಂಯಮನೇ=ಯಮಪಟ್ಟಣದಲ್ಲಿ ಯಮಯಾತನೆಯನ್ನು ಅನುಭವಿಸಿ ಈ ಭೂಲೋಕಕ್ಕೆ ಏರುತ್ತಾರೆ. ಹೀಗೆ ಅವರಿಗೆ ಭೂಲೋಕಾರೋಹ ಮತ್ತು ಯಮಲೋಕಾವರೋಹಗಳಿವೆ. ಶ್ರುತಿಯು ಈ ರೀತಿಯ 'ಗತಿ'ಯನ್ನು ಅಂತಹವರಿಗೆ ಹೇಳಿದೆ—

ನ ಸಾಂಪರಾಯಃ ಪ್ರತಿಭಾತಿ ಬಾಲಂ ಪ್ರಮಾದ್ಯಂತಂ ವಿತ್ತಮೋಹೇನ ಮೂಢಮ್ ।
ಅಯಂ ಲೋಕೋ, ನಾಸ್ತಿ ಪರ ಇತಿ ಮಾನೀ ಪುನಃಪುನರ್ವಶಮಾಪದ್ಯತೇ ಮೇ ॥
(ಕಠ.2.6)

**॥ ಸ್ಮರಂತಿ ಚ ॥** ಮನು–ವ್ಯಾಸಾದಿಗಳು ಮತ್ತು ನಾಚಿಕೇತೋಪಾಖ್ಯಾನದಲ್ಲಿಯೂ ಇದನ್ನೇ ಹೇಳಿದ್ದಾರೆ.

**॥ ಅಪಿ ಸಪ್ತ ॥** ಪುರಾಣಗಳಲ್ಲಿ ರೌರವ ಮೊದಲಾದ ಏಳು ವಿಧದ ನರಕಲೋಕಗಳೂ ಹೇಳಲ್ಪಟ್ಟಿವೆ. ಅಲ್ಲಿ ಅನಿಷ್ಟಾದಿಕಾರಿಗಳು ದುಃಖವನ್ನು ಅನುಭವಿಸುತ್ತಾರೆ.

**॥ ತತ್ರಾಪಿ ಚ ತದ್ವ್ಯಾಪಾರಾದವಿರೋಧಃ ॥** ಈ ಏಳು ನರಕಗಳಲ್ಲಿ ಚಿತ್ರಗುಪ್ತಾದಿಗಳು ಇದ್ದರೂ ಯಮದೇವನ ವ್ಯಾಪಾರ ಇದ್ದೇ ಇದೆ. ಅವನ ಆದೇಶದಂತೆಯೇ ಅವರು ಶಿಕ್ಷೆ ನೀಡುತ್ತಾರೆ.

**॥ ವಿದ್ಯಾಕರ್ಮಣೋರಿತಿ ತು ಪ್ರಕೃತತ್ವಾತ್ ॥** ''ಅಥೈತಯೋಃ ಪಥೋರ್ನ ಕತರೇಣ ಚ ತಾನೀಮಾನಿ ಕ್ಷುದ್ರಾಣಿ ಅಸಕೃದಾವರ್ತೀನಿ ಭೂತಾನಿ ಭವಂತಿ ॥''

ಎಂಬ ಛಾಂದೋಗ್ಯವಾಕ್ಯದಲ್ಲಿ 'ಏತಯೋಃ ಪಥೋಃ' ಎಂದು ಪ್ರಸ್ತುತವಾದ ಎರಡು ಮಾರ್ಗಗಳು ವಿದ್ಯಾ ಮತ್ತು ಕರ್ಮಗಳಿಗೆ ಸಂಬಂಧಿಸಿದ ಮಾರ್ಗಗಳು. ಅಂದರೆ, ಜ್ಞಾನಿಗಳು ಹೋಗುವ ದೇವಯಾನ ಮತ್ತು ಕರ್ಮಿಗಳು ಹೋಗುವ ಪಿತೃಯಾನಗಳು. ಏಕೆಂದರೆ, ಅವರೆಡು ಮಾರ್ಗಗಳೇ ಪೂರ್ವ ಪ್ರಕೃತವಾದವುಗಳು. ಅನಿಷ್ಟಾದಿಕಾರಿಗಳು ಇವೆರಡೂ ಮಾರ್ಗಗಳಿಂದ ಹೋಗುವುದಿಲ್ಲ, ಮತ್ತೆ ಮತ್ತೆ ಈ ಭೂಮಿಯಲ್ಲಿ ಹುಟ್ಟಿ ಸಾಯುತ್ತಾರೆ. ಇದರಿಂದಲೂ ಚಂದ್ರಲೋಕಪ್ರಾಪ್ತಿ ಅವರಿಗಿಲ್ಲ, ಎಂದು ತಿಳಿಯಬಹುದು.

ರಾಮಾನುಜಭಾಷ್ಯದಲ್ಲೂ ಈ ಸೂತ್ರಕ್ಕೆ 'ಇತಿ ಪ್ರಾಪ್ತೇ ಉಚ್ಯತೇ' ಎಂದು ಅವತಾರಿಕೆ ಇದೆ. ಇದರಿಂದಾಗಿ ಹಿಂದಿನ ಸೂತ್ರಗಳೆಲ್ಲವೂ ಪೂರ್ವಪಕ್ಷಸೂತ್ರಗಳು. ಅನಿಷ್ಟಾದಿಕಾರಿಗಳೂ ಯಮಯಾತನೆಯನ್ನು ನರಕಗಳಲ್ಲಿ ಅನುಭವಿಸಿ ಚಂದ್ರಲೋಕಕ್ಕೆ ಹೋಗುತ್ತಾರೆ, ಎಂದೇ ಪೂರ್ವಸೂತ್ರಗಳ ಪೂರ್ವಪಕ್ಷ. ಅದನ್ನು ಈ ಸೂತ್ರದಲ್ಲಿ ನಿರಾಕರಿಸಲಾಗಿದೆ.

**॥ ನ ತೃತೀಯೇ ತಥೋಪಲಬ್ಧೇಃ ॥** ಅನಿಷ್ಟಾದಿಕಾರಿಗಳಿಗೆ ಹೇಳಿರುವ ತೃತೀಯಸ್ಥಾನದಲ್ಲಿ ಪಿತೃಯಾಣದಲ್ಲಿ ಹೋದವರಿಗೆ ಇರುವಂತೆ ಪಂಚಾಗ್ನಿಗಳಲ್ಲಿ ಆಹುತಿ ನಿಯಮವಿಲ್ಲ. ತಥೋಪಲಬ್ಧೇಃ= 'ಜಾಯಸ್ವಮ್ರಿಯಸ್ವೇತ್ಯೇತತ್ ತೃತೀಯಂ ಸ್ಥಾನಮ್ ॥' (ಛಾಂ.5.10.8) 'ಆಪಃ ಪುರುಷವಚಸೋ ಭವಂತಿ'' ಎಂಬ ಪಂಚಮಾಹುತಿಯಲ್ಲಿ ಪುರುಷಶಬ್ದವು ಶ್ರುತವಾದುದರಿಂದ ಪುರುಷಶರೀರಪ್ರಾಪ್ತಿಗೆ ಮಾತ್ರ ಪಂಚಾಹುತಿನಿಯಮ. ಕ್ಷುದ್ರಯೋನಿಯಲ್ಲಿ ಹುಟ್ಟುವ ಜೀವಿಗಳಿಗೆ ಈ ನಿಯಮವಿಲ್ಲ. ಆದ್ದರಿಂದ ಅಂತಹ ಜೀವಿಗಳು ಚಂದ್ರಲೋಕಕ್ಕೆ ಹೋಗಬೇಕಾಗಿಲ್ಲ. ಸೂತ್ರದಲ್ಲಿರುವ ತೃತೀಯೇ ಎಂದರೆ ತೃತೀಯಸ್ಥಾನ ಅಂದರೆ ಪಾಪಕರ್ಮವನ್ನು ಮಾತ್ರ ಮಾಡಿದವರು ಎಂದು ರಾಮಾನುಜಭಾಷ್ಯದಲ್ಲಿದೆ.

**॥ ಸ್ಮರ್ಯತೇಽಪಿ ಚ ಲೋಕೇ ॥** ಲೋಕದಲ್ಲಿ ಹೀಗಾಗಿರುವ ಘಟನೆಯು ಮಹಾಭಾರತಾದಿಗಳಲ್ಲಿ ಶ್ರುತವಾಗಿದೆ. ದ್ರೋಣಾದಿಗಳು ಯೋಷಾಗ್ನಿಯಲ್ಲಿ ಹೋಮಿಸಲ್ಪಡದೆ ನೇರವಾಗಿ ತಂದೆಯಿಂದಲೇ ಹುಟ್ಟಿದ್ದಾರೆ. ಧೃಷ್ಟದ್ಯುಮ್ನ-ಸೀತೆ-ದ್ರೌಪದಿಯರು ಪುರುಷಾಗ್ನಿಯ ಹೋಮವೂ ಇಲ್ಲದೆ ಅಗ್ನ್ಯಾದಿಗಳಿಂದಲೇ ಹುಟ್ಟಿದ್ದಾರೆ. ಆದ್ದರಿಂದಲೂ ಪಂಚಾಗ್ನಿ ನಿಯಮವಿಲ್ಲವೆಂದು ತಿಳಿಯಬಹುದು.

**॥ ದರ್ಶನಾಚ್ಚ ॥** ನಾಲ್ಕು ವಿಧದ ಚೇತನವರ್ಗವಿದೆ- ಜರಾಯಜ-ಅಂಡಜ-

ಸ್ವೇದಜ–ಉದ್ಭಿಜ್ಜ ಎಂದು. ಸ್ವೇದಜ ಎಂದರೆ ಬೆವರಿನಿಂದ ಹುಟ್ಟುವ ಕ್ರಿಮಿಗಳು. ಉದ್ಭಿಜ್ಜ ಎಂದರೆ ಭೂಮಿಯನ್ನು ಭೇದಿಸಿ ಹುಟ್ಟುವ ಮರಗಿಡಗಳು–ಇವೆರಡು ವರ್ಗದ ಚೇತನಗಳು ಸ್ತ್ರೀಪುರುಷ ಸಂಪರ್ಕವಿಲ್ಲದೆ ಹುಟ್ಟುತ್ತವೆ. ಇವುಗಳಲ್ಲಿ ಪಂಚಾಹುತಿ ನಿಯಮವಿಲ್ಲ. ಅದರಂತೆ ನಾರಕಿಗಳ ಪುನರ್ಜನ್ಮಕ್ಕೂ ಈ ನಿಯಮವು ಅನ್ವಯಿಸುವುದಿಲ್ಲ.

**ರಾಮಾನುಜ ಭಾಷ್ಯದಲ್ಲಿ** ದರ್ಶನಾತ್ ಎಂದರೆ ಶ್ರುತಿಯಲ್ಲಿ ಪಂಚಮಾಹುತಿ ಇಲ್ಲದೆಯೂ ದೇಹಾರಂಭವು ಹೇಳಲ್ಪಟ್ಟಿದೆ– ''ತೇಷಾಂ ಖಲ್ವೇಷಾಂ ಭೂತಾನಾಂ ತ್ರೀಣ್ಯೇವ ಬೀಜಾನಿ ಭವಂತಿ–ಅಂಡಜಂ, ಜೀವಜಮುದ್ಭಿಜ್ಜಂ ಚೇತಿ'' ಇದು ಛಾಂದೋಗ್ಯಶ್ರುತಿ. ಇದರ ಮೇಲೆ ಆಕ್ಷೇಪ–ಇಲ್ಲಿ ಸ್ವೇದಜವನ್ನು ಏಕೆ ಹೇಳಲಾಗಿಲ್ಲ, ಎಂದು. ಅದಕ್ಕೆ ಮುಂದಿನ ಸೂತ್ರದ ಸಮಾಧಾನ–ಉದ್ಭಿಜ್ಜಪದದಿಂದಲೇ ಅದರ ಸಂಗ್ರಹವಾಗಿದೆ. ಭೂಮಿಯನ್ನು ಭೇದಿಸಿ ಬಂದ ಮರಗಳು ಹೇಗೋ ಹಾಗೆ ನೀರನ್ನು ಭೇದಿಸಿ ಬರುವುದರಿಂದಾಗಿ ಸ್ವೇದಜಗಳೂ ಉದ್ಭಿಜ್ಜಗಳು, ಎಂದು.

**॥ ತೃತೀಯಶಬ್ದಾವರೋಧಃ ಸಂಶೋಕಜಸ್ಯ ॥** 'ಅಂಡಜಂ–ಜೀವಜಂ–ಉದ್ಭಿಜ್ಜಂ' ಎಂದು ಚೇತನವರ್ಗವನ್ನು ಛಾಂದೋಗ್ಯದಲ್ಲಿ ಮೂರೇ ವಿಧವಾಗಿ ಹೇಳಲಾಗಿದೆ. ಅಲ್ಲಿ ತೃತೀಯಶಬ್ದೇನ=ಮೂರನೆಯದ್ದಾದ ಉದ್ಭಿಜ್ಜ ಶಬ್ದದಿಂದ ಸಂಶೋಕಜಸ್ಯ=ಸ್ವೇದಜವರ್ಗದ ಅವರೋಧಃ=ಸಂಗ್ರಹವು ಮಾಡಲ್ಪಟ್ಟಿದೆ. ದ್ವೈತ ದರ್ಶನದಲ್ಲಿ ಈ ಹತ್ತು ಸೂತ್ರಗಳನ್ನು ಐದು ಅಧಿಕರಣಗಳನ್ನಾಗಿ ವಿಂಗಡಿಸಲಾಗಿದೆ. ಕೊನೆಯಲ್ಲಿ ಸ್ಮರಣಾಚ್ಚ ಎಂಬ ಇನ್ನೊಂದು ಸೂತ್ರ ಅಧಿಕವಾಗಿದೆ.

ಅಧಿಕರಣ 1 — 3 ಸೂತ್ರಗಳು

ಅಧಿಕರಣ 2 — 'ಅಪಿ ಸಪ್ತ' ಒಂದೇ ಸೂತ್ರ

ಅಧಿಕರಣ 3 — ತತ್ರಾಪಿ ಚ ತದ್‌ವ್ಯಾಪಾರಾದವಿರೋಧಃ–ಒಂದೇ ಸೂತ್ರ.

ಅಧಿಕರಣ 4 — ವಿದ್ಯಾಕರ್ಮಣೋರಿತಿ ಪ್ರಕೃತತ್ವಾತ್–ಒಂದೇ ಸೂತ್ರ.

ಅಧಿಕರಣ 5 — ಐದು ಸೂತ್ರಗಳ ಒಂದು ಅಧಿಕರಣ.

ಮೊದಲನೆಯ ಅಧಿಕರಣದಲ್ಲಿ ಪರಭಾಷ್ಯದಂತೆ ಅನಿಷ್ಟಾದಿಕಾರಿಗಳಿಗೂ ಗತಾಗತ ಇದೆ, ಎಂದು ಸಿದ್ಧಾಂತ.

ಎರಡನೆಯ ಅಧಿಕರಣದಲ್ಲಿ ನರಕದ ಸಪ್ತಪ್ರಭೇದಗಳನ್ನು ಹೇಳಿ ಹರಿದ್ವೇಷಿಗಳಿಗೆ ನರಕಾತ್ ಪುನರಾಗತಿ ಇಲ್ಲ ಎಂದು ಸಿದ್ಧಾಂತ.

ಮೂರನೆಯ ಅಧಿಕರಣದಲ್ಲಿ ನರಕದಲ್ಲೂ ಭಗವಂತನ ಪ್ರೇರಣಾ ವ್ಯಾಪಾರವು ಇದೆ ಎಂದು ಸಿದ್ಧಾಂತ.

ನಾಲ್ಕನೆಯ ಅಧಿಕರಣದಲ್ಲಿ ದೇವಯಾನ ಪಿತೃಯಾನರೂಪ ಫಲದಲ್ಲಿ ಸಾಧಕರಿಗೆ ಸ್ವಾತಂತ್ರ್ಯವಿಲ್ಲ, ಎಂದು ಸಿದ್ಧಾಂತ.

ಐದನೆಯ ಅಧಿಕರಣದಲ್ಲಿ ಅಂಧಂತಮಸ್ಸಿನಲ್ಲಿ ದುಃಖ ಮಾತ್ರ, ಸುಖಲೇಶವೂ ಇಲ್ಲ, ಎಂದು ಸಿದ್ಧಾಂತ.

ಹತ್ತು ಸೂತ್ರಗಳಲ್ಲಿ ಅನಿಷ್ಟಾದಿಕಾರಿಗಳಿಗೆ ಚಂದ್ರಲೋಕಪ್ರಾಪ್ತಿ ಇಲ್ಲ, ಎಂದು ಸಿದ್ಧಾಂತ. ಇದು ಪರಭಾಷ್ಯದ ಅಧಿಕರಣಸಾರ.

**ಶೇಷತಾತ್ಪರ್ಯಚಂದ್ರಿಕಾದಲ್ಲಿ ವಿಮರ್ಶೆ**—ಇಲ್ಲಿ ಗಮನಾಗಮನವನ್ನು ವಿಚಾರ ಮಾಡಿರುವುದು ವೈರಾಗ್ಯಸಿದ್ಧಿಗಾಗಿ. ಇಷ್ಟಾದಿಕಾರಿಗಳಿಗೆ ಇರುವಂತೆ ಅನಿಷ್ಟಾದಿಕಾರಿಗಳಿಗೂ ಗಮನಾಗಮನಕ್ಲೇಷವು ಇದೆ, ಎಂದು ಹೇಳಿರುವುದರಿಂದಲೇ ವೈರಾಗ್ಯಸಿದ್ಧಿಯಾಗುವಾಗ ಚಂದ್ರಲೋಕಗಮನ ಇದೆಯೋ ಇಲ್ಲವೋ ಎನ್ನುವ ವಿಚಾರ ಈ ಪಾದದಲ್ಲಿ ಅನಗತ್ಯವಾಗಿದೆ.

'ತತ್ರಾಪಿ ಚ ತದ್ವ್ಯಾಪಾರಾತ್ ಅವಿರೋಧಃ' ಎಂಬ ಸೂತ್ರದಲ್ಲಿ ಸಪ್ತನರಕಗಳಲ್ಲೂ ಯಮದೇವನ ವ್ಯಾಪಾರವಿದೆ ಎಂದು ಸಾಧನೆ ಮಾಡಿರುವುದು ಪ್ರಕೃತ ಸಂಗತವಲ್ಲ. ಯಮನೋ ಚಿತ್ರಗುಪ್ತನೋ, ಒಟ್ಟಿನಲ್ಲಿ ಅಲ್ಲಿ ಮಹಾದುಃಖವಿದೆ, ಎಂದಿಷ್ಟು ತಿಳಿಸಿದರೆ ಸಾಕು–ವೈರಾಗ್ಯಕ್ಕಾಗಿ.

**ಇಲ್ಲಿಗೆ ಮಹಾತಮೋಽಧಿಕರಣವು ಮುಗಿಯಿತು.**

## ೧೬. ತತ್ಸ್ವಾಭಾವ್ಯಾಧಿಕರಣಮ್

**'ಧೂಮೋ ಭೂತ್ವಾಽಭ್ರಂ ಭವತಿ' (ಛಾಂ.ಉ. 5.10.5 ಕಾಷಾಯಣಶ್ರುತೌ) ಇತ್ಯಾದ್ಯನ್ಯಭಾವಃ ಶ್ರೂಯತೇ । ಸ ಕಥಮಿತಿ । ಅತೋ ಬ್ರವೀತಿ –**

**॥ ಓಂ ತತ್ಸ್ವಾಭಾವ್ಯಾಪತ್ತಿರುಪಪತ್ತೇಃ ಓಂ ॥ ೨೪ ॥**

**ಧೂಮಾದಿಷು ಪ್ರವಿಶ್ಯ ತದ್‌ಗತೌ ಗತಿಃ ಸ್ಥಿತೌ ಸ್ಥಿತಿರಿತ್ಯಾದಿರೇವ ತದ್ಭಾವಾಪತ್ತಿಃ । ನಹ್ಯನ್ಯಸ್ಯಾನ್ಯಭಾವೋ ಯುಜ್ಯತೇ । ನಚ ತತ್ಪದಪ್ರಾಪ್ತಿಃ । ಗಾರುಡೇ ಚ–**

'ಧೂಮಾದಿಭಾವಪ್ರಾಪ್ತಿಶ್ಚ ತದ್‌ಗತೌ ಗತಿರೇವ ತು ।
ಸ್ಥಿತೌ ಸ್ಥಿತಿಃ ಪ್ರವೇಶಶ್ಚ ಲಘುತ್ವಾದಿಸ್ತಥೈವ ಚ ॥
ನಹ್ಯನ್ಯಸ್ಯಾನ್ಯಥಾಭಾವೋ ನಚ ತತ್‌ಪದಮಿಷ್ಯತೇ ।
ವಿದ್ಯಾಗಮ್ಯಂ ಪದಂ ಯಸ್ಮಾನ್ನ ತತ್ ಪ್ರಾಪ್ಯಂ ಹಿ ಕರ್ಮಣಾ ॥
ಏಕದೇಶಸ್ವಭಾವೇನ ವಾಗಭೇದಾಽಪಿ ಯುಜ್ಯತೇ ।
ಯಥಾ ಜೀವಃ ಪರಂ ಬ್ರಹ್ಮ ಬ್ರಹ್ಮೇದಂ ಜಗದಿತ್ಯಪಿ ॥' ಇತಿ ॥

ಹಿಂದೆ ಕರ್ಮಿಗಳ ಮಾರ್ಗವನ್ನು ಹೇಳುವಾಗ ಕಾಷಾಯಣಶ್ರುತಿಯಲ್ಲಿ 'ಧೂಮೋ ಭೂತ್ವಾ ಅಭ್ರಂ ಭವತಿ' ಎಂದು ಧೂಮಾದಿಭಾವವನ್ನು ಹೇಳಲಾಗಿದೆ. ಅದು ಹೇಗೆ? ಧೂಮಾದ್ಯಭಿಮಾನಿದೇವತೆಯ ಐಕ್ಯವೋ, ಅವರ ಪದವಿಪ್ರಾಪ್ತಿಯೋ? ಅದಕ್ಕೆ ಸಮಾಧಾನವನ್ನು ಈ ಸೂತ್ರದಲ್ಲಿ ಕೊಡಲಾಗಿದೆ—ಧೂಮಾದಿಪ್ರಾಪ್ತಿ ಎಂದರೆ ಧೂಮಾದಿದೇವತೆಯ ಒಳಗೆ ಪ್ರವೇಶ ಮಾಡಿ ಅವರು ಹೋದಲ್ಲಿ ಹೋಗುವುದು, ಅವರು ನಿಂತಲ್ಲಿ ನಿಲ್ಲುವುದು, ಈ ರೂಪವಾದುದು. ಹೊರತಾಗಿ, ಅವರೊಂದಿಗೆ ಐಕ್ಯಪ್ರಾಪ್ತಿ ಅಲ್ಲ. ಒಬ್ಬರು ಮತ್ತೊಬ್ಬರಾಗುವುದು ಸಾಧ್ಯವೇ ಇಲ್ಲ, ಅಥವಾ ಆ ದೇವತೆಯ ಪದವಿಯ ಪ್ರಾಪ್ತಿಯೂ ಅಲ್ಲ. ಗಾರುಡದಲ್ಲಿ ಇದನ್ನು ಹೇಳಲಾಗಿದೆ—

ಸಾಧಕನಿಗೆ ಧೂಮಾದಿಭಾವಪ್ರಾಪ್ತಿ ಎಂದರೆ, ಧೂಮಾಭಿಮಾನಿದೇವತೆಯ ಒಳಗೆ ಪ್ರವೇಶ ಮಾಡಿ ಆ ದೇವತೆ ಹೋದಾಗ ಹೋಗುವುದು, ನಿಂತಾಗ ನಿಲ್ಲುವುದು ಧೂಮದಂತೆ ಲಘುವಾಗಿ ಇರುವುದು. ಒಬ್ಬರು ಮತ್ತೊಬ್ಬರಾಗುವುದಿಲ್ಲ. ಅಥವಾ ಅವರ ಪದವಿಯ ಪ್ರಾಪ್ತಿಯೂ ಇವರಿಗಿಲ್ಲ. ದೇವತಾಪದವಿಯು ಬ್ರಹ್ಮಾಪರೋಕ್ಷ ಜ್ಞಾನದಿಂದ ಪ್ರಾಪ್ಯ, ಅದು ಕರ್ಮದಿಂದ ದೊರಕುವುದಿಲ್ಲ. ದೇವತೆಯ ಒಂದಂಶದ ಸಾಮ್ಯವು ಸಾಧಕನಿಗೆ ಬರುವುದರಿಂದ 'ಧೂಮೋ ಭೂತ್ವಾ' ಎಂಬ ಅಭೇದವಚನವೂ ಯುಕ್ತವಾಗುತ್ತದೆ. ಉದಾಹರಣೆಗೆ–'ತತ್ತ್ವಮಸಿ' ಎಂದು ಛಾಂದೋಗ್ಯದಲ್ಲಿ ಜೀವನಿಗೆ ಬ್ರಹ್ಮಾಭೇದವನ್ನು ಹೇಳುವ ಮಾತು, 'ಸರ್ವಂ ಖಲ್ವಿದಂ ಬ್ರಹ್ಮ' ಎಂದು ಬ್ರಹ್ಮನಿಗೆ ಸರ್ವಾತ್ಮಕತ್ವವನ್ನು ಹೇಳುವ ಮಾತು.

**ವಿವರಣೆ**—'ವಾಗಭೇದಾ' ಎಂದು ಗಾರುಡದಲ್ಲಿದೆ. 'ಅಭೇದಾ ವಾಕ್' ಎಂದು ಅನ್ವಯ. 'ನ ವಿದ್ಯತೇ ಭೇದಃ ಪ್ರತಿಪಾದ್ಯಃ ಯಸ್ಯಾಃ ಸಾ' ಭೇದಪ್ರತಿಪಾದಕವಲ್ಲದ ಮಾತು, ಎಂದು ಅರ್ಥ. ತತ್ವಪ್ರದೀಪದಲ್ಲಿ ಹಾಗೆಯೇ ಇದೆ—'ಭೇದರಹಿತಾ ವಾಕ್' ।

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ—

**॥ ಓಂ ತತ್ಸ್ವಾಭಾವ್ಯಾಪತ್ತಿರುಪಪತ್ತೇಃ ಓಂ ॥** (ತದಿತಿ ವಿದ್ಯಾಸೂತ್ರೇ ಪ್ರಕೃತಧೂಮಾದಿ- ರುಚ್ಯತೇ । ತತ ಏವ 'ಕರ್ಮಿಣಃ' ಇತಿ ಚಾನ್ವೇತಿ । 'ಧೂಮೋ ಭೂತ್ವಾ ಅಭ್ರಂ ಭವತಿ' ಇತ್ಯಾದೌ ಧೂಮಾದಿಭವನಂ ನಾಮ ಕರ್ಮಿಣಃ ತತ್ಸ್ವಾಭಾವ್ಯಾಪತ್ತಿಃ । ತಸ್ಯ=ಧೂಮಾದೇಃ ಸ್ವಭಾವ ಇವ ಸ್ವಭಾವೋ ಯಸ್ಯಸಃ= ತತ್ಸ್ವಭಾವಃ । ಗಜಮುಖ ಇತ್ಯಾದಿವತ್ । ತತ್ಸ್ವಭಾವಸ್ಯ ಭಾವಃ=ತತ್ ಸ್ವಾಭಾವ್ಯಮ್ । ಧೂಮಾದಿದೇವತಾ ಸ್ವಭಾವಸದೃಶ–ಸ್ವಭಾವತ್ವಪ್ರಾಪ್ತಿಃ, ನತು ತದೈಕ್ಯಮ್, ತತ್ಪದಪ್ರಾಪ್ತಿರ್ವಾ ಇತ್ಯರ್ಥಃ । ತತ್ಸಾದೃಶ್ಯಂ ಚ ತದ್ದೇವತಾಪ್ರವೇಶೇನ ತದ್ಗತಿ–ಸ್ಥಿತ್ಯಾದೌ ಸ್ವಸ್ಯ ಗತಿಸ್ಥಿತ್ಯಾದಿಃ ಇತಿ ಬೋಧ್ಯಮ್ । ಕುತಃ? ಉಪಪತ್ತೇಃ=ಅನ್ಯಸ್ಯ ಅನ್ಯತ್ವಾದೃಷ್ಟ್ಯಾ ಅಸ್ಯೈವಾರ್ಥಸ್ಯ ಉಪಪತ್ತೇಃ, ಇತ್ಯರ್ಥಃ ।)

ಕರ್ಮಿಗಳಿಗೆ ಧೂಮಾದಿಪ್ರಾಪ್ತಿ ಎಂದರೆ ಧೂಮಾಭಿಮಾನಿದೇವತೆಗಳ ಸ್ವಭಾವ ದಂತೆ ಸ್ವಭಾವಪ್ರಾಪ್ತಿ. ಅಂದರೆ, ಅವರು ಗತಿಶೀಲರಾದರೆ ಇವರಿಗೂ ಗಮನ, ಅವರು ನಿಂತರೆ ಇವರಿಗೂ ಸ್ಥಿತಿ ಹೊರತು, ಅವರ ಐಕ್ಯಪ್ರಾಪ್ತಿ ಅಲ್ಲ. ಉಪಪತ್ತೇಃ= ಅನ್ಯರಿಗೆ ಅನ್ಯರ ಅಭೇದವು ಇರುವುದಿಲ್ಲವಾದುದರಿಂದ ಈ ಅರ್ಥವೇ ಉಪಪನ್ನವಾಗುತ್ತದೆ.

## ಅದ್ವೈತದರ್ಶನದಲ್ಲಿ ಸೂತ್ರಾರ್ಥ—

**॥ ತತ್ಸಾಭಾವ್ಯಾಪತ್ತಿರುಪಪತ್ತೇಃ ॥** ಯಥೇತಮಾಕಾಶಮ್ ಆಕಾಶಾ ದ್ವಾಯುಂ, ವಾಯುರ್ಭೂತ್ವಾ ಧೂಮೋ ಭವತಿ ॥ ಇತ್ಯಾದಿ ಛಾಂದೋಗ್ಯ ಶ್ರುತಿಯಲ್ಲಿ ಇಷ್ಟಾದಿಕಾರಿಗಳ ಆಗಮನವನ್ನು ಹೇಳುವಾಗ ಆಕಾಶಾದಿಭಾವವು ಶ್ರುತವಾಗಿದೆ. ಅದರ ಅರ್ಥ ಆಕಾಶಾಭೇದವಲ್ಲ. ಸಾಭಾವ್ಯಾಪತ್ತಿಃ=ಸಾರೂಪ್ಯಾಪತ್ತಿಃ । ಚಂದ್ರಮಂಡಲ ದಲ್ಲಿದ್ದಾಗ ಅಮ್ಮಯ(ಜಲಮಯ) ಶರೀರವಿತ್ತು. ಉಪಭೋಗವಾದ ಮೇಲೆ ಅದು ಕ್ಷಯವಾಗಿ ಆಕಾಶದಂತೆ ಸೂಕ್ಷ್ಮವಾಗುತ್ತದೆ. ಆಮೇಲೆ ವಾಯವೀಯ ಶರೀರ ಬರುತ್ತದೆ, ಎಂದರ್ಥ. ಉಪಪತ್ತೇಃ=ಹೀಗೆ ಲಾಕ್ಷಣಿಕಾರ್ಥ ಮಾಡಿದರೆ ಶ್ರುತಿಯು ಉಪಪನ್ನವಾಗುತ್ತದೆ. ಆಕಾಶಾದ್ಯಭೇದಾಪತ್ತಿ ಎಂಬ ಮುಖ್ಯಾರ್ಥವನ್ನು ಮಾಡಿದರೆ ಅನ್ಯಸ್ಯ ಅನ್ಯಭಾವವು ಅನುಪಪನ್ನವಾಗುತ್ತದೆ. ಇದೇ ಅರ್ಥ ರಾಮಾನುಜ ಭಾಷ್ಯದಲ್ಲೂ ಇದೆ.

(ಸಮಾನಃ ಭಾವಃ=ರೂಪಂ ಯೇಷಾಂ ತೇ ಸಭಾವಾಃ । ತೇಷಾಂ ಭಾವಃ=ಸಾಭಾವ್ಯಮ್ । ಸಾದೃಶ್ಯಂ–ಭಾಮತೀ)

ಇಲ್ಲಿ ಮಾಧ್ವಭಾಷ್ಯದ ಸೂತ್ರಪಾಠ—'ತತ್‌ಸ್ವಾಭಾವ್ಯಾಪತ್ತಿಃ' ಎಂದು. ಪರಭಾಷ್ಯಪಾಠ 'ಸಾಭಾವ್ಯಾಪತ್ತಿಃ' ಎಂದು.

ಇಲ್ಲಿಗೆ ತತ್‌ಸ್ವಾಭಾವ್ಯಾಧಿಕರಣವು ಮುಗಿಯಿತು

## ೧೭. ನಾತಿಚಿರೇಣಾಧಿಕರಣಮ್

**ಬಹುಸ್ಥಾನಗಮನಾತ್ ಕಲ್ಪಾಂತಮಪ್ಯೇವಂ ಸ್ಯಾದಿತಿ । ಅತ ಆಹ-**

**॥ ಓಂ ನಾತಿಚಿರೇಣ ವಿಶೇಷಾತ್ ಓಂ ॥ ೨೫ ॥**

**'ತದ್ ಯ ಇಹ ರಮಣೀಯಚರಣಾ ಅಭ್ಯಾಶೋ ಹ ಯತ್ ತೇ ರಮಣೀಯಾಂ ಯೋನಿಮಾಪದ್ಯಂತೇ' (ಛಾಂ.ಉ. 5.10.7) ಇತಿ ವಿಶೇಷಾನ್ನಾತಿಚಿರೇಣ ।**

**'ಸ್ವರ್ಗಾಲ್ಲೋಕಾದವಾಕ್ ಪ್ರಾಪ್ತೋ ವತ್ಸರಾತ್ ಪೂರ್ವಮೇವ ತು ।**
**ಮಾತುಃ ಶರೀರಮಾಪ್ನೋತಿ ಪರ್ಯಟನ್ ಯತ್ರತತ್ರ ಚ ॥'**

**ಇತಿ ಚ ನಾರದೀಯೇ ।**

ಕರ್ಮಿಗಳು ಸ್ವರ್ಗವಾಸ ಮುಗಿದ ಮೇಲೆ ಆಕಾಶ, ವಾಯು ಹೀಗೆ ಅನೇಕ ಸ್ಥಾನಗಳಿಗೆ ಹೋಗಬೇಕಾಗಿರುವುದರಿಂದ ಬ್ರಹ್ಮಕಲ್ಪಪರ್ಯಂತವೂ ಕಾಲಯಾಪನೆ ಯಾದೀತು ಎಂಬ ಆಶಂಕೆ ಬಂದಾಗ ಈ ಸೂತ್ರದ ರಚನೆಯಾಗಿದೆ. ಛಾಂದೋಗ್ಯದಲ್ಲಿ 'ಅಭ್ಯಾಶೋ ಹ ಯತ್ತೇ ರಮಣೀಯಾಂ ಯೋನಿಮ್ ಆಪದ್ಯಂತೇ' ಎಂದು ಶ್ರುತಿವಿಶೇಷವಿರುವುದರಿಂದ ಒಂದು ಸಂವತ್ಸರದ ಒಳಗೇ ಸ್ವರ್ಗದಿಂದ ಬಂದ ಜೀವನು ಮಾತೃಗರ್ಭವನ್ನು ಪ್ರವೇಶಿಸುತ್ತಾನೆ. ನಾರದೀಯಪುರಾಣದಲ್ಲಿ ಇದನ್ನು ಹೇಳ ಲಾಗಿದೆ— ಸ್ವರ್ಗಲೋಕದಿಂದ ಕೆಳಗೆ ಬಂದ ಜೀವನು ಒಂದು ವರ್ಷದ ಒಳಗಾಗಿಯೇ (ಎಲ್ಲಿಗೆಲ್ಲ ಪರ್ಯಟನೆ ಮಾಡಿದರೂ) ತಾಯಿಯ ಶರೀರವನ್ನು ಪ್ರವೇಶಿಸುತ್ತಾನೆ.

### ದ್ವೈತದರ್ಶನದಲ್ಲಿ ಸೂತ್ರಾರ್ಥ—

॥ ಓಂ ನಾತಿಚಿರೇಣ ವಿಶೇಷಾತ್ ಓಂ ॥ (ಯೋನಿಮಾಪ್ನೋತೀತಿ ಶೇಷಃ। ಕರ್ಮೀತ್ಯಸ್ತಿ । ಕರ್ಮೀ, ನಾತಿಚಿರೇಣ, ನಸಮಾಸಃ, ಅಚಿರೇಣೈವ ಇತ್ಯರ್ಥಃ। ಯದ್ವಾ ಅತಿಚಿರೇಣ ನ ಯೋನಿಮ್ ಆಪ್ನೋತಿ, ಕಿಂತು ಅಚಿರೇಣ, ಇತ್ಯರ್ಥಃ। ಕುತಃ ?

ವಿಶೇಷಾತ್। 'ತದ್ ಯ ರಮಣೀಯಚರಣಾಃ ಅಭ್ಯಾಶೋ ಹ ಯತ್ತೇ ರಮಣೀಯಾಂ ಯೋನಿಮಾಪದ್ಯಂತೇ' ಇತಿ ವಿಶೇಷಶ್ರವಣಾತ್ ಇತ್ಯರ್ಥಃ। ಅಚಿರೇಣೇತಿ ವಾಚ್ಯೇ ನಾತೀತ್ಯಾದ್ಯುಕ್ತಿಃ 'ಯಥೇತಮ್ ಆಕಾಶಂ ಆಕಾಶಾದ್ ವಾಯುಂ' ಇತ್ಯಾದಿಶ್ರುತೌ ಬಹುಸ್ಥಾನಗಮನೋಕ್ತ್ಯಾ ಚಿರೇಣೇತಿ ನ ಶಂಕ್ಯಮ್, ಅತಿಚಿರೇಣ ಆಗಮನಸ್ಯೈವ ತತ್ರ ನಿಷೇಧಾತ್ ಇತಿ ದ್ಯೋತಯಿತುಮ್। ಅತ ಏವ ಅತೀತ್ಯುಕ್ತಿಃ।)

ವಿಶೇಷಾತ್='ಅಭ್ಯಾಶೋ ಹ ಯತ್ತೇ ರಮಣೀಯಾಂ ಯೋನಿಮಾಪದ್ಯಂತೇ' ಎಂಬ ವಾಕ್ಯವಿಶೇಷದಿಂದ ನಾತಿಚಿರೇಣ=ಸ್ವರ್ಗದಿಂದ ಬಂದ ಒಂದು ವರ್ಷದ ಒಳಗೆ ಕರ್ಮಿಗಳು ತಾಯಿಯ ಗರ್ಭ ಸೇರುತ್ತಾರೆ.

## ಅದ್ವೈತದರ್ಶನದಲ್ಲಿ ಸೂತ್ರದ ಅರ್ಥ—

**॥ ನಾತಿಚಿರೇಣ ವಿಶೇಷಾತ್ ॥** ಚಂದ್ರಲೋಕದಿಂದ ಭೂಲೋಕಕ್ಕೆ ಇಳಿಯುವ ಮಾರ್ಗದಲ್ಲಿ ಆಕಾಶಾದಿಭಾವಪ್ರಾಪ್ತಿಯು ನಾತಿಚಿರೇಣ=ಅತಿಶೀಘ್ರದಲ್ಲಿ ಆಗುತ್ತದೆ. ವಿಶೇಷಾತ್=ಅಂತಿಮವ್ರೀಹ್ಯಾದಿಭಾವವನ್ನು ಹೇಳುವಾಗ ಶ್ರುತಿಯಲ್ಲಿ— 'ಅತೋ ವೈ ಖಲು ದುರ್ನಿಷ್ಪ್ರಪತರಮ್' ಎಂದು ವಿಶೇಷವನ್ನು ಹೇಳಲಾಗಿದೆ. ಇಲ್ಲಿ ದುಃ ಎಂದರೆ ದುಃಖ. ನಿಷ್ಪ್ರಪತರಮ್ ಎಂಬ ಶಬ್ದವನ್ನು ನಿಷ್ಪ್ರಪತತರಮ್ ಎಂದು ಪರಿವರ್ತನೆ ಮಾಡಬೇಕು. ವ್ರಿಹ್ಯಾದಿಭಾವದಿಂದ ಹೊರಬರುವುದು ದುಃಖದಾಯಕ, ಎಂದು ಅರ್ಥ. ಇದರಿಂದ ಆಕಾಶಾದಿಭಾವ ಹೀಗಲ್ಲ ಎಂದು ತಿಳಿಯುತ್ತದೆ. ವ್ರೀಹ್ಯಾದಿಭಾವ ದುಃಖದಾಯಕವಾಗಲು ಕಾರಣ ಕಾಲವಿಲಂಬ. ಇದರಿಂದ ಆಕಾಶಾದಿಭಾವದಲ್ಲಿ ಈ ಕಾಲವಿಲಂಬ ಇಲ್ಲ ಎಂದು ತಿಳಿಯುತ್ತದೆ.

(ದುರ್ನಿಷ್ಪ್ರಪತರಮಿತಿ ಛಾಂದಸಃ ತಶಬ್ದಲೋಪಃ। ದುರ್ನಿಷ್ಪ್ರಪತತರಂ=ದುಃಖ ನಿಷ್ಕ್ರಮಣತರಮಿತ್ಯರ್ಥಃ।)

**ಶೇಷತಾತ್ಪರ್ಯ ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ—**ವ್ರೀಹ್ಯಾದಿಭಾವದಿಂದ ಹೊರಬರುವುದು ದುಃಖದಾಯಕ ಎಂದು ಹೇಳಿರುವುದರಿಂದ ಹಿಂದೆ ನಿರೂಪಿತವಾದ ಆಕಾಶಾದಿಭಾವದಿಂದ ನಿವೃತ್ತಿಯು ಕ್ಲೇಶದಾಯಕವಲ್ಲ ಎಂದಿಷ್ಟು ತಿಳಿಯಬಹುದು. ಕಾಲವಿಲಂಬವಿಲ್ಲ, ಎಂದು ತಿಳಿಯುವುದು ಹೇಗೆ?

**ಇಲ್ಲಿಗೆ ನಾತಿಚಿರೇಣಾಧಿಕರಣವು ಮುಗಿಯಿತು**

## ೧೮. ಅನ್ಯಾಧಿಷ್ಠಿತಾಧಿಕರಣಮ್

'ತ ಇಹ ವ್ರೀಹಿಯವಾ ಓಷಧಿವನಸ್ಪತಯಸ್ತಿಲಮಾಷಾ ಇತಿ ಜಾಯಂತೇ' (ಛಾಂ.ಉ. 5.10.6) ಇತಿ ಶ್ರವಣಾದನರ್ಥಫಲತ್ವಂ ಯಜ್ಞಾದೇರಿತಿ । ಅತಃ ವಕ್ತಿ-

**॥ ಓಂ ಅನ್ಯಾಧಿಷ್ಠಿತೇ ಪೂರ್ವವದಭಿಲಾಪಾತ್ ಓಂ ॥ ೨೬ ॥**

ಅನ್ಯಾಧಿಷ್ಠಿತೇ ವ್ರೀಹ್ಯಾದಿಶರೀರೇ ಪ್ರವೇಶಃ। ನತು ಭೋಗೋಽಸ್ಯ । 'ಧೂಮೋ ಭೂತ್ವಾಽಭ್ರಂ ಭವತಿ' (ಛಾಂ.ಉ. 5.10.5) ಇತ್ಯಾದಿ ಪೂರ್ವೋಕ್ತವತ್ ।

'ಸೋಽವಾಗ್ ಗತಃ ಸ್ಥಾವರಾನ್ ಪ್ರವಿಶತ್ಯಭೋ(ಶ್ಯಾಭೋ)ಗೇನ್ನೈವ
ವ್ರಜನ್ ಸ್ಥೂಲಂ ಶರೀರಮೇತಿ ಸ್ಥೂಲಾಚ್ಛರೀರಾದ್ ಭೋಗಾನನು
ಭುಂಕ್ತೇ' ಇತ್ಯಭಿಲಾಪಾತ್ ಕೌಷಾರವಶ್ರುತೌ ॥

'ಸ್ವರ್ಗಾದವಾಗ್ ಗತೋ ದೇಹೀ ವ್ರೀಹ್ಯಾದೀತರದೇಹಗಃ ।
ಅಭುಂಜಂಸ್ತು ಕ್ರಮೇಣೈವ ದೇಹಮಾಪ್ನೋತಿ ಕಾಲತಃ ॥'

ಇತಿ ಚ ವಾರಾಹೇ ॥

ಸ್ವರ್ಗದಿಂದ ಕೆಳಗೆ ಬಂದ ಜೀವರು ಮಳೆಯಲ್ಲಿ ಭೂಮಿಗೆ ಬಿದ್ದು 'ತೇ ಇಹ ವ್ರೀಹೀಯವಾಃ...ಜಾಯಂತೇ' ಎಂದು ಛಾಂದೋಗ್ಯೋಪನಿಷತ್ತು ಹೇಳುವಂತೆ ಅವರು ಸಸ್ಯದ ಮೂಲಕ ಧಾನ್ಯಗಳಲ್ಲಿ ಸೇರಿಕೊಳ್ಳುತ್ತಾರೆ. ಗಿಡಗಳನ್ನು ಕತ್ತರಿಸಿದಾಗ, ಧಾನ್ಯಗಳನ್ನು ಕುಟ್ಟಿ ಬೇಯಿಸಿದಾಗ ಅವುಗಳಲ್ಲಿ ಸೇರಿಕೊಂಡ ಜೀವನಿಗೂ ದುಃಖವಾಗುತ್ತದೆ. ಇದರಿಂದ, ಸ್ವರ್ಗಾದಿಸುಖಕ್ಕಾಗಿ ಯಾಗ ಮಾಡಿದ ಕರ್ಮಿಗಳಿಗೆ ದುಃಖ ಬಂದಂತಾಯಿತು. ಯಜ್ಞವು ಅನರ್ಥಫಲಕ್ಕೆ ಜನಕವಾಯಿತು. ಈ ಆಕ್ಷೇಪ ಪರಿಹಾರಕ್ಕಾಗಿ ಈ ಅಧಿಕರಣವಿದೆ.

ಸ್ವರ್ಗದಿಂದ ಕೆಳಗಿಳಿದ ಜೀವನು ಬೇರೊಬ್ಬ ಜೀವನಿಂದ ಅಧಿಷ್ಠಿತವಾದ ಧಾನ್ಯಗಳಲ್ಲಿ ಪ್ರವೇಶ ಮಾಡುತ್ತಾನೆ. ಇದರಿಂದಾಗಿ ಧಾನ್ಯದ ಒಳಗೆ ಅವನಿಗೆ ಸುಖಾದಿ ಭೋಗಗಳು ಇರುವುದಿಲ್ಲ. 'ಧೂಮೋ ಭೂತ್ವಾ' ಎಂಬಲ್ಲಿ ಹಿಂದೆ ಹೇಳಿದಂತೆ

ಧೂಮಾಭಿಮಾನಿದೇವತೆಗಳ ಶರೀರದಲ್ಲಿ ಪ್ರವೇಶವಿದ್ದಂತೆಯೇ ಧಾನ್ಯದಲ್ಲಿ ಪ್ರವೇಶಮಾತ್ರ, ತತ್ಕೃತದುಃಖಾದಿಗಳು ಇಲ್ಲ.

ಕೌಶಾರವಶ್ರುತಿಯಲ್ಲಿ ಈ ವಿಷಯ ಹೇಳಲ್ಪಟ್ಟಿದೆ—ಸಃ=ಕರ್ಮಿಯು ಅವಾಗ್ಗತಃ=ಸ್ವರ್ಗದಿಂದ ಕೆಳಗೆ ಬಂದವನು, ಸ್ಥಾವರಾನ್ ಪ್ರವಿಶ್ಯ=ಗೋಧಿ ಮೊದಲಾದ ಸಸ್ಯಗಳನ್ನು ಪ್ರವೇಶ ಮಾಡಿ ಅಭೋಗೇನ್ನೈವ ವ್ರಜನ್=ಆ ಸಸ್ಯಗಳಲ್ಲಿ ಸುಖ-ದುಃಖಾದಿ ಭೋಗಗಳಿಲ್ಲದೆಯೇ ಮುಂದುವರಿಯುತ್ತಾ ಸ್ಥೂಲಂ ಶರೀರಮ್=ಮಾನುಷಾದಿ ಸ್ಥೂಲ ದೇಹವನ್ನು ಪಡೆಯುತ್ತಾನೆ. ಸ್ಥೂಲಾತ್ ಶರೀರಾತ್=ಅಂತಹ ಸ್ಥೂಲಶರೀರದಿಂದಾಗಿ ಭೋಗಾನ್=ಸುಖಾದಿಗಳನ್ನು ಅನುಭವಿಸುತ್ತಾನೆ. ಹೀಗೆ ಶ್ರುತಿಯಲ್ಲಿ ಅಭಿಲಾಪಾತ್=ಹೇಳಿರುವುದರಿಂದ ಕರ್ಮಿಗೆ ದುಃಖವಾಗುವುದಿಲ್ಲ.

ವಾರಾಹವಚನವೂ ಇದನ್ನೇ ಹೇಳುತ್ತದೆ— ಸ್ವರ್ಗಾತ್=ಸ್ವರ್ಗದಿಂದ ಅವಾಗ್ಗತಃ ಕೆಳಗೆ ಬಂದ ದೇಹೀ=ಶರೀರಿಯು ವ್ರೀಹ್ಯಾದೀತರದೇಹಗಃ=ಭತ್ತ ಮೊದಲಾದ ಅನ್ಯಜೀವರ ದೇಹದಲ್ಲಿದ್ದು ಅಭುಂಜನ್=ಭೋಗವಿಲ್ಲದೆಯೇ ಕ್ರಮೇಣೈವ=ಕ್ರಮ ವಾಗಿ ಕಾಲತಃ=ಸರಿಯಾದ ಸಮಯಕ್ಕೆ ದೇಹಂ=ಸ್ಥೂಲದೇಹವನ್ನು ಆಪ್ನೋತಿ=ಹೊಂದುತ್ತಾನೆ.

## ॥ ಓಂ ಅಶುದ್ಧಮಿತಿ ಚೇನ್ನ ಶಬ್ದಾತ್ ಓಂ ॥ ೨೭ ॥

**ಹಿಂಸಾರೂಪತ್ವಾತ್ ಪಾಪಸ್ಯಾಪಿ ಸಂಭವಾದ್ ದುಃಖಂ ಚ ಭವತ್ವಿತಿ ಚೇತ್, ನ। ಶಬ್ದವಿಹಿತತ್ವಾತ್ ।**

**'ಹಿಂಸಾ ತ್ವವೈದಿಕಾ ಯಾ ತು ತಯಾಽನರ್ಥೋ ಧ್ರುವಂ ಭವೇತ್ ।**
**ವೇದೋಕ್ತಯಾ ಹಿಂಸಯಾ ತು ನೈವಾನರ್ಥಃ ಕಥಂಚನ ॥'**

**ಇತಿಹಿ ವಾರಾಹೇ ।**

ಯಜ್ಞವು ಪಶುಹಿಂಸಾರೂಪವಾದುದರಿಂದ ಪಾಪಹೇತು. ಆದರಿಂದಾಗ ಕರ್ಮಿಗೆ ವ್ರೀಹ್ಯಾದಿಶರೀರದಲ್ಲಿ ದುಃಖವೂ ಆಗಲಿ ಎಂದರೆ ಇದು ಯುಕ್ತವಲ್ಲ. ಯಜ್ಞವು ಹಿಂಸಾರೂಪವಾದರೂ ವೇದವಿಹಿತವಾದುದರಿಂದ ಪಾಪಜನಕವಲ್ಲ. ವಾರಾಹವಚನವು ಇದನ್ನು ಹೇಳಿದೆ—ಅವೈದಿಕವಾದ ಯಾವ ಹಿಂಸೆ ಇದೆಯೋ ಅದರಿಂದ ಖಂಡಿತ ವಾಗಿಯೂ ಅನರ್ಥವಿದೆ. ವೇದೋಕ್ತವಾದ ಹಿಂಸೆಯಿಂದ ಏನಾದರೂ ಎಂದೂ ಅನರ್ಥವಿಲ್ಲ.

**ವಿವರಣೆ**—ಸೂತ್ರದಲ್ಲಿರುವ ಅಶುದ್ಧಶಬ್ದವನ್ನು ಆವೃತ್ತಿಮಾಡಿಕೊಳ್ಳಬೇಕು. ಯಜ್ಞಾದಿಕರ್ಮಗಳು ಅಶುದ್ಧ=ದುಃಖಕಾರಣ, ಏಕೆಂದರೆ, ಅಶುದ್ಧಂ=ಪಾಪಜನಕ ವಾಗಿದೆ. ಅದಕ್ಕೂ ಕಾರಣ–ಅಶುದ್ಧಂ=ಹಿಂಸಾರೂಪವಾಗಿದೆ, ಇತಿ ಚೇನ್ನ ಶಬ್ದಾತ್. ಹೀಗೆ ಸೂತ್ರದ ಭಾವ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ಅನ್ಯಾಧಿಷ್ಠಿತೇ ಪೂರ್ವವದಭಿಲಾಪಾತ್ ಓಂ ॥** (ವ್ರೀಹ್ಯಾದಿದೇಹೇ ಪ್ರವೇಶಃ, ಇತಿ ಶೇಷಃ । ಕರ್ಮಿಣಃ ಇತ್ಯಸ್ತಿ ।

ತ ಇಹ ವ್ರೀಹಿಯವಾಸ್ತಿಲಾ ಮಾಷಾ ಇತಿ ಜಾಯಂತೇ ॥

ಇತಿ ವ್ರೀಹ್ಯಾದಿಭಾವೋ ನಾಮ ಅನ್ಯಾಧಿಷ್ಠಿತೇ ವ್ರೀಹ್ಯಾದಿದೇಹೇ ಪ್ರವೇಶ ಏವ । ನತು ತದಭಿಮಾನಿತ್ವಮ್ । ಯೇನ ತಚ್ಛೇದಾದಿನಾ ದುಃಖಂ ಕರ್ಮಿಣಃ ಶಂಕ್ಯೇತ, ಇತ್ಯರ್ಥಃ । ಕಥಂ ತರ್ಹಿ 'ವ್ರೀಹಿಯವಾಃ' ಇತಿ ಐಕ್ಯೋಕ್ತಿಃ ? ಪೂರ್ವವತ್='ಧೂಮೋ ಭೂತ್ವಾ' ಇತಿ ಪೂರ್ವೋಕ್ತಿಃ ಯಥಾ ತಥೇತ್ಯರ್ಥಃ । ಕುತಃ ? ಅಭಿಲಾಪಾತ್= 'ಸೋಽವಾಗ್ಗತಃ ಸ್ಥಾವರಾನ್ ಪ್ರವಿಶತ್ಯಭೋಗೇನ' ಇತ್ಯಾದಿಶ್ರುತೌ ಅಭಿಲಾಪಾತ್, ಇತ್ಯರ್ಥಃ ।)

ಕರ್ಮಿಗಳಿಗೆ ಅನ್ಯಜೀವರಿಂದ ಅಧಿಷ್ಠಿತವಾದ ಭತ್ತ ಮುಂತಾದ ಸಸ್ಯಗಳಲ್ಲಿ ಪ್ರವೇಶ ಮಾತ್ರ. ಅದರಲ್ಲಿ ಸ್ವಕರ್ಮನಿರ್ಮಿತದೇಹದಲ್ಲಿ ಇರುವಂತೆ ಅಭಿಮಾನವಿರುವುದಿಲ್ಲ. ಶ್ರುತಿಯಲ್ಲಿ 'ವ್ರೀಹಿಯವಾಃ ಭವಂತಿ' ಎಂದು ಹೇಳಿದ್ದರೂ ಅದಕ್ಕೆ 'ಧೂಮೋ ಭೂತ್ವಾ' ಎಂದು ಹಿಂದೆ ಹೇಳಿದಂತೆ ಧೂಮಾದಿದೇಹದಲ್ಲಿ ಪ್ರವೇಶವು ಹೇಗೆ ಅರ್ಥವೋ ಅದರಂತೆ ವ್ರೀಹಿಯವಾಃ ಭವಂತಿ, ಎಂಬುದಕ್ಕೂ ಅರ್ಥವನ್ನು ಹೇಳಬೇಕು. ಏಕೆಂದರೆ 'ಸಃ ಅವಾಗ್ಗತಃ ಸ್ಥಾವರಾನ್ ಪ್ರವಿಶ್ಯ' ಎಂದು ಶ್ರುತಿಯು ಹೇಳಿದೆ.

**॥ ಓಂ ಅಶುದ್ಧಮಿತಿ ಚೇನ್ನ ಶಬ್ದಾತ್ ಓಂ ॥** (ಕರ್ಮೇತ್ಯನ್ವೇತಿ । ಯಜ್ಞಾಖ್ಯಂ ಕರ್ಮ ಅಶುದ್ಧಂ=ದುಃಖಸಾಧನಂ, ಹಿಂಸಾತ್ವಾತ್, ದ್ವಿಜಹಿಂಸಾವತ್ । ಅತಃ 'ದುಃಖಂ ನ ಶಂಕ್ಯಂ ಕರ್ಮಿಣಃ' ಇತ್ಯಯುಕ್ತಂ, ಇತಿ ಚೇನ್ನ । ಶಬ್ದಾತ್=ಶಬ್ದವಿಹಿತತ್ವಾತ್, ಇತ್ಯರ್ಥಃ । ಹಿಂಸಾತ್ವಸ್ಯ ಅಪ್ರಯೋಜಕತ್ವಾತ್ ಇತ್ಯರ್ಥಃ ।)

ಯಜ್ಞರೂಪವಾದ ಕರ್ಮವು ಅಶುದ್ಧಂ=ದುಃಖಕ್ಕೆ ಕಾರಣವಾಗಿದೆ. ಏಕೆಂದರೆ, ಬ್ರಾಹ್ಮಣಹಿಂಸೆಯಂತೆಯೇ ಅದು ಪಶುಹಿಂಸಾರೂಪವಾಗಿದೆ, ಎನ್ನುವುದು ಸರಿ

ಯಲ್ಲ. ಶಬ್ದಾತ್=ವೇದವಿಹಿತವಾದುದರಿಂದ ಯಾಜ್ಞೀಯ ಹಿಂಸೆಯು ದುಃಖಜನಕ ವಲ್ಲ.

ಇಲ್ಲಿಗೆ ಅನ್ಯಾಧಿಷ್ಠಿತಾಧಿಕರಣವು ಮುಗಿಯಿತು

## ೧೯. ರೇತೋಽಧಿಕರಣಮ್

**'ಸ್ವರ್ಗಾದವಾಗ್ ಗತಶ್ಚಾಪಿ ಮಾತುರೇವೋದರಂ ವ್ರಜೇತ್' ಇತಿ ವಚನಾತ್, 'ಯ ಏವ ಗೃಹೀ ಭವತಿ ಯೋ ವಾ ರೇತಃ ಸಿಂಚತಿ ತಮೇವಾನುವಿಶತಿ' ಇತಿ ಶ್ರುತಿಃ ಕಥಮಿತಿ । ಅತ ಆಹ-**

**॥ ಓಂ ರೇತಃಸಿಗ್ಯೋಗೋಽಥ ಓಂ ॥ ೨೮ ॥**

**'ತತೋ ರೇತಃಸಿಚಮೇವಾನುಪ್ರವಿಶತ್ಯಥ ಮಾತರಮಥ ಪ್ರಸೂಯತೇ ಸ ಕರ್ಮ ಕುರುತೇ' ಇತಿ ಕೌಂಠರವ್ಯಶ್ರುತೇಃ ಪಿತರಮೇವ ಪ್ರಥಮತೋ ವಿಶತಿ । ಮಾತೃಪ್ರಾಪ್ತೇಃ ಪಶ್ಚಾದಪಿ ಭಾವ್ಯತ್ವಾತ್ ॥**

ಸ್ವರ್ಗದಿಂದ ಕೆಳಗೆ ಬಂದವನು ತಾಯಿಯ ಗರ್ಭವನ್ನೇ ಪ್ರವೇಶ ಮಾಡುತ್ತಾನೆ, ಎಂದು ಸ್ಮೃತಿವಚನವಿರುವುದರಿಂದ 'ಯ ಏವ ಗೃಹೀ ಭವತಿ' ಎಂಬ ಶ್ರುತಿಯಲ್ಲಿ 'ಯಾರು ರೇತಃಸೇಚನವನ್ನು ಮಾಡುವರೋ ಅವರೊಳಗೆ ಜೀವಿಯು ಪ್ರವೇಶಿಸುತ್ತಾನೆ' ಎನ್ನುವುದು ಹೇಗೆ ಯುಕ್ತವಾಗುತ್ತದೆ? ಅದಕ್ಕುತ್ತರ ಈ ಸೂತ್ರ. ಕೌಂಠರವ್ಯಶ್ರುತಿಯು ಹೇಳುವಂತೆ ಕರ್ಮಿಯು ಮೊದಲು ರೇತಃಸೇಚನವನ್ನು ಮಾಡುವ ತಂದೆಯ ದೇಹವನ್ನೇ ಪ್ರವೇಶಿಸುತ್ತಾನೆ. ತಾಯಿಯ ದೇಹದ ಪ್ರವೇಶವು ಆಮೇಲೂ ಆಗಬಹುದು. ಆದ್ದರಿಂದ 'ತಾಯಿಯನ್ನು ಪ್ರವೇಶಿಸುತ್ತಾನೆ, ಎಂಬ ಶ್ರುತಿಯ ವಿರೋಧವಿಲ್ಲ.

### ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಓಂ ರೇತಃ–ಸಿಗ್ಯೋಗೋಽಥ ಓಂ॥** (ಅತ್ರ ಸ್ವರ್ಗಾದವರೂಢಸ್ಯ ಪಿತೃಪ್ರವೇಶಃ ಸಾಧ್ಯತೇ । ಕರ್ಮಿಣ ಇತ್ಯಸ್ತಿ । ಅಥೇತ್ಯನಂತರಂ ಮಾತೃಯೋಗ ಇತಿ ಶೇಷಃ । ಕರ್ಮಿಣೋ ರೇತಃಸಿಗ್ಯೋಗಃ=ಪಿತೃಪ್ರವೇಶಃ । ಅಥ=ತತಃ ಪಶ್ಚಾತ್ ಮಾತೃಯೋಗ ಇತ್ಯರ್ಥಃ । ತಥಾ ಚ 'ಮಾತುರೇವೋದರಂ ವ್ರಜೇತ್' ಇತಿ ವಚನಾವಿರೋಧಃ ।

ಮಾತೃಯೋಗಸ್ಯ ಪಶ್ಚಾದಪಿ ಸತ್ವಾತ್। ಏವೇತ್ಯಸ್ಯ ಅಯೋಗವ್ಯಾವರ್ತಕತ್ವಾತ್ ಇತ್ಯರ್ಥಃ। ಪಿತೃಯೋಗ ಇತಿ ವಾಚ್ಯೇ 'ರೇತಃಸೃಗ್'ಇತ್ಯುಕ್ತಿಃ–ಪಿತೃಪ್ರವೇಶಾನುಪಯೋಗಃ ನ ಶಂಕ್ಯಃ। ದೇಹಪರಿಣಾಮಾಯ ರೇತಸೋಽಪೇಕ್ಷಿತತ್ವೇನ ಈಶಕ್ಲೃಪ್ತ್ಯಾ ತತ್‌ಸೇಕಯೋಗೋಪಯೋಗಾತ್ ಇತಿ ಸೂಚನಾರ್ಥಾ। 'ತತೋ ರೇತಃ ಸಿಚಮೇವಾನುಪ್ರವಿಶತ್ಯಥ ಮಾತರಮ್' ಇತಿ ಶ್ರುತಿ ಸೂಚನಾರ್ಥಾ ಚ।)

ಈ ಅಧಿಕರಣದಲ್ಲಿ ಸ್ವರ್ಗದಿಂದ ಬಂದ ಜೀವನಿಗೆ ಪಿತೃದೇಹ ಪ್ರವೇಶವನ್ನು ಸಾಧಿಸಲಾಗಿದೆ. ಕರ್ಮಿಗೆ ರೇತಃಸಿಗ್‌ಯೋಗಃ=ರೇತಸ್ಸನ್ನು ಸೇಚನೆ ಮಾಡುವ ತಂದೆಯಲ್ಲಿ ಪ್ರವೇಶವಿದೆ. ಅಥ=ಅನಂತರದಲ್ಲಿ ತಾಯಿಯ ಉದರದಲ್ಲಿ ಪ್ರವೇಶವಾಗುತ್ತದೆ. ಆದರಿಂದ 'ತಾಯಿಯ ಗರ್ಭಪ್ರವೇಶವು ಅನಿವಾರ್ಯ' ಎಂಬ ಅರ್ಥದ ಶ್ರುತಿವಿರೋಧವಿಲ್ಲ.

ಇಲ್ಲಿಗೆ ರೇತೋಽಧಿಕರಣವು ಮುಗಿಯಿತು.

## ೨೦. ಯೋನ್ಯಧಿಕರಣಮ್

'ದೇಹಂ ಗರ್ಭಸ್ಥಿತಂ ಕ್ವಾಪಿ ಪ್ರವಿಶೇತ್ ಸ್ವರ್ಗತೋ ಗತಃ' ಇತಿ ವಚನಾತ್ ಪಶ್ಚಾದೇವ ಪ್ರವಿಶತಿ। ಇತಿ। ಅತ ಆಹ–

**॥ ಓಂ ಯೋನೇಃ ಶರೀರಮ್ ಓಂ ॥ ೨೯ ॥**

ಪಿತೃಶರೀರಾನ್ಮಾತೃಯೋನಿಮನುಪ್ರವಿಶ್ಯ ತತ ಏವ ಶರೀರಂ ಪ್ರಾಪ್ನೋತಿ।

'ದಿವಃ ಸ್ಥಾಸ್ನೂನ್ ಗಚ್ಛತಿ ಸ್ಥಾಸ್ನುಭ್ಯಃ ಪಿತರಂ ಪಿತುರ್ಮಾತರಂ ಮಾತುಃ ಶರೀರಂ ಶರೀರೇಣ ಜಾಯತ ಇತಿ ಸಮ್ಮಿತಮಥಾಸಮ್ಮಿತಂ ಸ್ಥಾಸ್ನುಭ್ಯೋ ಜಾಯತೇ ಪಿತುರ್ಮಾತುರಂತರೇ ವಾ ಗರ್ಭೇ ವಾ ಬಹಿರ್ವಾ' ಇತಿ ಪೌಷ್ಯಾಯಣಶ್ರುತೇಃ।

'ಸ್ಥಾವರಾಣಿ ದಿವಃ ಪ್ರಾಪ್ತಃ ಸ್ಥಾವರೇಭ್ಯಶ್ಚ ಪೂರುಷಮ್।
ಪುರುಷಾತ್ ಸ್ತ್ರಿಯಮಾಪನ್ನಸ್ತತೋ ದೇಹಂ ಯಥಾಕ್ರಮಮ್॥

ದೇಹೇನ ಜಾಯತೇ ಜಂತುರಿತಿ ಸಾಮಾನ್ಯತೋ ಜನಿಃ।
ವಿಶೇಷಜನನಂ ಚಾಪಿ ಪ್ರೋಚ್ಯಮಾನಂ ನಿಬೋಧ ಮೇ॥

**ಸ್ಥಾಣುಷ್ವಥಾಪಿ ಪುರುಷೇ ಪ್ರಮದಾಯಾಮಥಾಪಿ ವಾ ।**
**ಗರ್ಭೇ ವಾ ಬಹಿರೇವಾಥ ಕ್ವಚಿತ್ ಸ್ಥಾನಾಂತರೇಷು ವಾ ॥'**

**ಇತಿ ಚ ಬ್ರಾಹ್ಮೇ ।**

'ದೇಹಂ ಗರ್ಭಸ್ಥಿತಂ ಕ್ವಾಪಿ' ಎಂದು ಸ್ವರ್ಗಾದಿಲೋಕಗಳಲ್ಲಿ ಕರ್ಮಫಲವನ್ನು ಅನುಭವಿಸಿದ ಜೀವನು ತಾಯಿಯ ಗರ್ಭದಲ್ಲಿರುವ ದೇಹವನ್ನೇ ಪ್ರವೇಶಿಸುತ್ತಾನೆ. ಹಿಂದಿನ ಪ್ರಮಾಣವಾಕ್ಯದಲ್ಲಿ ಹೇಳಿರುವುದರಿಂದ ತಂದೆಯ ಮೂಲಕ ತಾಯಿಯ ದೇಹ ಸೇರಿ ಅಲ್ಲಿಂದ ಗರ್ಭಪ್ರವೇಶ ಅಲ್ಲ. ಸಾಕ್ಷಾದೇವ ಆಹಾರಾದಿ ಮೂಲಕ ಜೀವನು ಗರ್ಭಸ್ಥವಾದ ದೇಹವನ್ನೇ ಪ್ರವೇಶಮಾಡುತ್ತಾನೆ. ಈ ಆಶಂಕೆ ಬಂದಾಗ ಅದರ ಪರಿಹಾರಕ್ಕಾಗಿ ಈ ಸೂತ್ರವನ್ನು ರಚಿಸಲಾಗಿದೆ.

ಜೀವನು ತಂದೆಯ ದೇಹದಿಂದ ರೇತಸ್ಸಿನ ಮೂಲಕ ತಾಯಿಯ ದೇಹವನ್ನು ಪ್ರವೇಶಿಸಿ ಆಮೇಲೆ ಶರೀರವನ್ನು ಪಡೆಯುತ್ತಾನೆ. ಸಾಕ್ಷಾತ್ತಾಗಿ ಶರೀರಪ್ರವೇಶವಲ್ಲ. ಪೌಷ್ಯಾಯಣ ಶ್ರುತಿಯು ಹೀಗೆ ಹೇಳುತ್ತದೆ—

ದಿವಃ=ಸ್ವರ್ಗದಿಂದ ಭೂಮಿಗೆ ಬಿದ್ದ ಜೀವ ಸ್ಥಾಸ್ನೂನ್=ಸ್ಥಾವರವಾದ ವ್ರೀಹ್ಯಾದಿ ಧಾನ್ಯರೂಪವಾದ ಶರೀರವನ್ನು ಗಚ್ಛತಿ=ಹೊಂದುತ್ತಾನೆ. ಸ್ಥಾಸ್ನುಭ್ಯಃ=ಸ್ಥಾವರವಸ್ತುಗಳಿಂದ ಪಿತರಂ=ತಂದೆಯನ್ನು, ಪಿತುಃ=ತಂದೆಯಿಂದ ಮಾತರಂ=ತಾಯಿಯನ್ನು ಮಾತುಃ=ತಾಯಿಯಿಂದ ಶರೀರಂ=ಅಲ್ಲಿ ನಿರ್ಮಾಣಗೊಳ್ಳುವ ಶರೀರವನ್ನು ಪ್ರವೇಶಿಸುತ್ತಾನೆ. ತತಃ=ಅಲ್ಲಿಂದ ಶರೀರೇಣ ಜಾಯತೇ=ಶರೀರಯುಕ್ತನಾಗಿ ಹುಟ್ಟುತ್ತಾನೆ. ಇತಿ=ಹೀಗೆ ಸಮ್ಮಿತಂ=ವಿದ್ಯೆ-ತಪಸ್ಸು ಮುಂತಾದ ಕಾರಣವಿಲ್ಲದೆ ಸಾಧಾರಣವಾದ ಜನ್ಮಕ್ರಮ. ಅಥ ಅಸಮ್ಮಿತಮ್=ಇನ್ನು ಉತ್ತಮಾಧಿಕಾರಿಗಳಿಗೆ ಸಂಬಂಧಿಸಿದ ಅಸಾಧಾರಣ ಜನ್ಮವಾದರೋ, ಸ್ಥಾಸ್ನುಭ್ಯಃ=ಸ್ಥಿರವಸ್ತುಗಳಿಂದಲೇ ಕೆಲವರು ಜಾಯತೇ= ಹುಟ್ಟುತ್ತಾರೆ. ಶುಕಾಚಾರ್ಯರು ಅರಣಿಯಿಂದ ಹುಟ್ಟಿದ್ದಾರೆ. ಪಿತುಃ ಜಾಯತೇ= ತಂದೆಯಿಂದಲೇ ಹುಟ್ಟುತ್ತಾರೆ. ಮಾಂಧಾತೃವಿನಂತೆ. ಮಾತುಃ ಜಾಯತೇ= ಪುರುಷಸಂಪರ್ಕವಿಲ್ಲದೆ ತಾಯಿಯಿಂದಲೇ ಹುಟ್ಟುತ್ತಾರೆ. ಜರತ್ಕಾರುವಿನ ಅನುಗ್ರಹದಿಂದ ಆಸ್ತೀಕನಂತೆ. ಅಂತರೇ ಜಾಯತೇ=ಮಾತಾಪಿತೃಗಳ ಮಧ್ಯದಲ್ಲಿ ಸಂಪರ್ಕವೇ ಇಲ್ಲದೆ ದರ್ಶನಮಾತ್ರದಿಂದ ಹುಟ್ಟುತ್ತಾರೆ. ನವಿಲುಗಳಂತೆ (ತತ್ತ್ವಪ್ರದೀಪದಲ್ಲಿ 'ಅಂತರೇ ದ್ರುಪದಾದಯಃ' ಎಂದಿದೆ) ಗರ್ಭೇ ಜಾಯತೇ=ಗರ್ಭದಲ್ಲಿ ಆಗಾಗಲೇ ಸಿದ್ಧವಾದ ಶರೀರವನ್ನು ಪ್ರವೇಶಿಸಿ ಹುಟ್ಟುತ್ತಾರೆ. ಋಜುಗಳು ಗರ್ಭದಿಂದ ದೇಹವು ಹೊರಬಂದ ಮೇಲೆ ಪ್ರವೇಶಿಸುತ್ತಾರೆ, ಮಧ್ವಾಚಾರ್ಯರಂತೆ. (ತತ್ತ್ವಪ್ರದೀಪಕಾರರು

ಶರೀರವು ಗರ್ಭದಿಂದ ಹೊರಬಂದ ಮೇಲೆ ವಾಯುದೇವರ ಪ್ರವೇಶ ಎಂದಿದೆ– ತಸ್ಮಾತ್ ಋಜುವ್ಯತಿರಿಕ್ತಾ ಏವ ಗರ್ಭೇ ಇತ್ಯತ್ರೋದಾಹರಣೀಯಾಃ ।)

ಬ್ರಾಹ್ಮಪುರಾಣದಲ್ಲಿ ಹೀಗಿದೆ—ದಿವಃ ಪ್ರಾಪ್ತಃ=ದ್ಯುಲೋಕದಿಂದ ಬಂದವನು ಸ್ಥಾವರಾಣಿ=ವ್ರೀಹ್ಯಾದಿ ಸ್ಥಾವರ ಸಸ್ಯಗಳನ್ನು ಸ್ಥಾವರೇಭ್ಯಶ್ಚ=ಸ್ಥಾವರವಸ್ತುಗಳಿಂದ ಪೂರುಷಂ=ಪುರುಷದೇಹವನ್ನೂ ಪುರುಷಾತ್=ಪುರುಷದೇಹದಿಂದ ಸ್ತ್ರಿಯಂ=ಸ್ತ್ರೀಯ ಗರ್ಭವನ್ನೂ ಯಥಾಕ್ರಮಂ ಆಪನ್ನಃ=ಕ್ರಮವಾಗಿ ಹೊಂದಿದವನಾಗಿ ತತಃ=ಆಮೇಲೆ ಜಂತುಃ=ಜೀವಿಯು ದೇಹೇನ ಜಾಯತೇ=ದೇಹದೊಂದಿಗೆ ಹುಟ್ಟುತ್ತಾನೆ. ಇತಿ=ಇದು, ಸಾಮಾನ್ಯತಃ ಜನಿಃ=ಸಾಮಾನ್ಯ ಹುಟ್ಟು. ಪ್ರೋಚ್ಯಮಾನಂ=ನಾನು ಮುಂದೆ ಹೇಳಲಿರುವ ವಿಶೇಷಜನನಂ=ವಿಶೇಷಜನ್ಮವನ್ನು ನಿಬೋಧ=ಕೇಳು. ಕೆಲವರು ಸ್ಥಾಸ್ನುಷು= ಸ್ಥಾವರಗಳಲ್ಲೇ ಮತ್ತೆ ಕೆಲವರು ಪುರುಷೇ, ಅಥಾಪಿವಾ=ಅಥವಾ ಪ್ರಮದಾಯಾಂ= ಸ್ತ್ರೀಯರಲ್ಲಿ ಅದೂ ಗರ್ಭೇ ವಾ=ಗರ್ಭದಲ್ಲಾಗಲೀ, ಬಹಿರೇವ ವಾ=ಗರ್ಭದಿಂದ ದೇಹ ಹೊರಬಂದ ಮೇಲಾಗಲೀ ಕ್ವಚಿತ್=ಎಲ್ಲೋ ಸ್ಥಾನಾಂತರೇಷು ವಾ=ಸ್ಥಾನವಿಶೇಷದಲ್ಲಾಗಲೀ ಹುಟ್ಟುತ್ತಾರೆ.

## ದ್ವೈತದರ್ಶನದಲ್ಲಿ ಸೂತ್ರಾರ್ಥ—

**॥ ಓಂ ಯೋನೇಃ ಶರೀರಮ್ ಓಂ ॥** (ಅತ್ರ ಕರ್ಮಿಣಃ ಪಿತೃದ್ವಾರಾ ಯೋನಿಪ್ರವೇಶೇನ ದೇಹಪ್ರಾಪ್ತಿಃ ಸಾಧ್ಯತೇ। ಅಥೇತ್ಯಸ್ತಿ। ತತ್ ಪ್ರಕೃತಾತ್ ಅರ್ಥಾಂತರೇ ವರ್ತತೇ। ಕರ್ಮೀ ಪಿತೃಕ್ರಮೇಣ ಯೋನೇಃ ಪ್ರವೇಶಾನಂತರಂ ಶರೀರಂ ಲಭತೇ। ಅಥ ಕ್ವಚಿತ್ ಮಾಂಧಾತೃ–ದ್ರೋಣ–ದ್ರುಪದ–ಶುಕಾದೌ ತಪಃ–ಶಕ್ತ್ಯಾ ತೇನ ವಿನೈವ ಶರೀರಪ್ರಾಪ್ತಿರಿತ್ಯರ್ಥಃ ।)

ಕರ್ಮಿಯು ತಂದೆಯ ಮೂಲಕ ತಾಯಿಯ ಗರ್ಭವನ್ನು ಪ್ರವೇಶ ಮಾಡಿದ ಮೇಲೆ ಶರೀರವನ್ನು ಪಡೆಯುತ್ತಾನೆ. ಅಥ(ಹಿಂದಿನ ಸೂತ್ರದಿಂದ)=ಕೆಲವೊಮ್ಮೆ ಮಾಂಧಾತೃ–ದ್ರೋಣ–ದ್ರುಪದ–ಶುಕಾದಿಗಳಿಗೆ ತಾಯಿಯ ಗರ್ಭಪ್ರವೇಶವಿಲ್ಲದೆಯೇ ತಪಃಶಕ್ತಿಯಿಂದ ಶರೀರ ಪ್ರಾಪ್ತಿಯು ಆಗುತ್ತದೆ.

## ಅದ್ವೈತ ದರ್ಶನದಲ್ಲಿ ಸೂತ್ರಗಳ ಅರ್ಥ—

**॥ ಅನ್ಯಾಧಿಷ್ಠಿತೇ ಪೂರ್ವವದಭಿಲಾಪಾತ್ ॥** ಅನ್ಯೈಃ ಅಧಿಷ್ಠಿತೇಷು=ಇತರ ಜೀವರಿಂದ ಅಧಿಷ್ಠಿತವಾದ ವ್ರೀಹ್ಯಾದಿಸಸ್ಯಗಳಲ್ಲಿ, ಸ್ವರ್ಗಾದಿ ಲೋಕಗಳಲ್ಲಿ ಕರ್ಮಫಲವನ್ನು ಅನುಭವಿಸಿರುವ ಜೀವರು ಸೇರಿಕೊಳ್ಳುತ್ತಾರೆ. ಅವರಿಗೆ

ಸಸ್ಯಗಳಿಗಾಗುವ ಹಾನಿಪ್ರಯುಕ್ತವಾದ ದುಃಖಾನುಸಂಧಾನ ಇರುವುದಿಲ್ಲ. ಪೂರ್ವವತ್ ಅಭಿಲಾಪಾತ್='ಧೂಮೋ ಭೂತ್ವಾಭ್ರಂ ಭವತಿ' ಎಂದು ಹಿಂದೆ ಹೇಳಿದ ರೀತಿಯಲ್ಲೇ 'ತೇ ಇಹ ವ್ರೀಹಿಯವಾಃ...ಜಾಯಂತೇ' ಎಂದು ವ್ರೀಹ್ಯಾದಿಭಾವವನ್ನು ಹೇಳಲಾಗಿದೆ. ಧೂಮಾದಿಭಾವವು ಹೇಗೆ ಮೃತಜೀವಿಗಳ ಕರ್ಮಪ್ರಯುಕ್ತವಲ್ಲದಿರುವುದರಿಂದ ತದವಚ್ಛೇದೇನ ಭೋಗವಿಲ್ಲವೋ ಅದರಂತೆಯೇ ವ್ರೀಹ್ಯಾದಿಭಾವದಲ್ಲೂ ಅವರಿಗೆ ಭೋಗವಿಲ್ಲ. ಭೋಗವಿರುವಲ್ಲಿ ಉಪನಿಷತ್ತು ಹೇಳುವ ರೀತಿ 'ಕಪೂಯಚರಣಾಃ ಕಪೂಯಾಂ ಯೋನಿಮ್' ಎಂದು. ಅಲ್ಲಿ ಜೀವಿಕೃತ ಕರ್ಮನಿಮಿತ್ತತ್ವವನ್ನು ಕಪೂಯಚರಣಾಃ ಎಂಬ ಪದದಿಂದ ಹೇಳಿ ದುಷ್ಟಯೋನಿಪ್ರಾಪ್ತಿಯನ್ನು ಹೇಳಲಾಗಿದೆ. ಹಾಗೆ ಇಲ್ಲಿ ವ್ರೀಹ್ಯಾದಿಭಾವವನ್ನು ಹೇಳಲಾಗಿಲ್ಲ. ಆದ್ದರಿಂದ ವ್ರೀಹ್ಯಾದಿ ಸಂಯೋಗ ಮಾತ್ರ ಕರ್ಮಿಗಳಿಗೆ, ತತ್ ಪ್ರಯುಕ್ತ ದುಃಖಭೋಗವಿಲ್ಲ.

**॥ ಅಶುದ್ಧಮಿತಿ ಚೇನ್ನ ಶಬ್ದಾತ್ ॥** ಯಾಗದಿಂದಾಗಿ ಕರ್ಮಿಗಳಿಗೆ ಸ್ವರ್ಗ ಲಭಿಸಿದೆ. ಯಾಗದಲ್ಲಿ ಪಶುಹಿಂಸೆ ಇದೆ. ಅದರ ಫಲವಾಗಿ ಕರ್ಮಿಗಳು ವ್ರೀಹ್ಯಾದಿಶರೀರಪ್ರಾಪ್ತಿಯಾದಾಗ ದುಃಖವನ್ನೂ ಅನುಭವಿಸುತ್ತಾರೆ ಎಂದೇಕೆ ಹೇಳಬಾರದು? (ಪಶುಹಿಂಸಾದಿರೂಪತ್ವಾತ್ ಅಶುದ್ಧಂ ಆಧ್ವರಿಕಂ ಕರ್ಮ–ಶಾಂ.ಭಾ.) ಅದಕ್ಕುತ್ತರ–ಶಬ್ದಾತ್. ಶಬ್ದವೆಂದರೆ ವೇದ. ಕರ್ತವ್ಯಾಕರ್ತವ್ಯಗಳಲ್ಲಿ ವೇದವೇ ಪ್ರಮಾಣ. ಯಾಗದಲ್ಲಿ ಪಶುಹಿಂಸೆಯನ್ನು ವೇದವೇ ವಿಧಿಸಿದೆ. ವೇದವಿಹಿತವನ್ನು ಮಾಡಿದರೆ ಪಾಪವಿಲ್ಲ.

**॥ ರೇತಃಸಿಗ್ಯೋಗೋಽಥ ॥** ವ್ರೀಹಿಭಾವವನ್ನು ಹೊಂದಿದ ಕರ್ಮಿಗೆ ರೇತಃ ಸೇಚನವನ್ನು ಮಾಡುವ ಪುರುಷದೇಹದಲ್ಲಿ ಪ್ರವೇಶವನ್ನು 'ಯೋ ಯೋಽನ್ನಮತ್ತಿ ಯೋ ರೇತಃ ಸಿಂಚತಿ ತದ್ಭೂಯ ಏವ ಭವತಿ' ಎಂದು ಛಾಂದೋಗ್ಯೋಪನಿಷತ್ತು ಹೇಳುತ್ತದೆ. ಬಾಲ್ಯದಲ್ಲಿ ಅನ್ನ ಉಂಡವನು ಬಹಳ ಕಾಲದ ನಂತರ ತಾರುಣ್ಯ ಬಂದ ಮೇಲೆ ರೇತಃಸೇಚನವನ್ನು ಮಾಡುತ್ತಾನೆ. ಅದುವರೆಗೆ ಅವನ ದೇಹದಲ್ಲಿದ್ದ ಕರ್ಮಿಯು ಸುಖ–ದುಃಖಗಳನ್ನು ಅನುಭವಿಸಬೇಕಾಗುತ್ತದೆ. ಇದರಿಂದಲೂ ಕರ್ಮಿಗೆ ತತ್ತದ್ದೇಹಪ್ರವೇಶ ಮಾತ್ರ, ಭೋಗವಿಲ್ಲ, ಎಂದು ತಿಳಿಯಬಹುದು.

**॥ ಯೋನೇಃ ಶರೀರಮ್ ॥** ಪುರುಷನಿಂದ ರೇತಃ ಸೇಚನಾನಂತರದಲ್ಲಿ 'ತದ್ ಯ ಇಹ ರಮಣೀಯಚರಣಾಃ' ಎಂಬ ಶ್ರುತಿಯು ಯೋನಿಪ್ರಾಪ್ತಿಯಾದ ಮೇಲೆ ಕರ್ಮಿಗೆ ಸ್ವಕರ್ಮನಿರ್ಮಿತ ದೇಹಲಾಭವನ್ನು ಹೇಳುತ್ತದೆ. ಆದ್ದರಿಂದ ಅದಕ್ಕಿಂತ ಹಿಂದೆ ಹೇಳಿರುವ ವ್ರೀಹ್ಯಾದಿಭಾವ ತತ್‌ಪ್ರವೇಶ ಮಾತ್ರ.

ರಾಮಾನುಜಭಾಷ್ಯದಲ್ಲಿ ಈ ಸೂತ್ರಗಳಿಗೆ ಶಾಂಕರಭಾಷ್ಯದಂತೆಯೇ ಅರ್ಥವನ್ನು ಹೇಳಲಾಗಿದೆ. 'ಅಶುದ್ಧಮಿತಿ ಚೇನ್ನ ಶಬ್ದಾತ್' ಎಂಬ ಸೂತ್ರದ 'ಶಬ್ದಾತ್' ಎಂಬ ಭಾಗಕ್ಕೆ ಬೇರೆ ಅರ್ಥವನ್ನು ಹೇಳಲಾಗಿದೆ. ಯಜ್ಞದಲ್ಲಿ ಮಾಡಿದ ಪಶುಹಿಂಸೆ ಹಿಂಸೆಯೇ ಅಲ್ಲ. ಅಲ್ಪದುಃಖ ಪಶುವಿಗೆ ಆದರೂ ಅದರಿಂದ ದೊಡ್ಡ ಲಾಭ ಅದಕ್ಕಿದೆ. 'ಹಿರಣ್ಯಶರೀರಃ ಊರ್ಧ್ವಃ ಸ್ವರ್ಗಂ ಲೋಕಮೇತಿ' ಎಂದು ಶ್ರುತಿ ಅದನ್ನು ಹೇಳುತ್ತದೆ. ಇದು ರಾಮಾನುಜಭಾಷ್ಯದ ವಿಶೇಷ.

ಉಭಯಭಾಷ್ಯಕಾರರೂ ನಾಲ್ಕು ಸೂತ್ರಗಳನ್ನು ಒಂದೇ ಅಧಿಕರಣವನ್ನಾಗಿ ಪರಿಗಣಿಸಿದ್ದಾರೆ. ದ್ವೈತಭಾಷ್ಯದಲ್ಲಿ ಮೊದಲ ಎರಡು ಸೂತ್ರಗಳು ಒಂದು ಅಧಿಕರಣ ಅನಂತರದ ಎರಡು ಸೂತ್ರಗಳು ಇನ್ನೊಂದು ಅಧಿಕರಣ.

**ಶೇಷತಾತ್ಪರ್ಯಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ**—ವ್ರೀಹ್ಯಾದಿಭಾವವು ಕರ್ಮನಿಮಿತ್ತವಲ್ಲ, ಆದುದರಿಂದ ತದವಚ್ಛೇದೇನ ಭೋಗವಿಲ್ಲ, ಎಂಬ ಸಿದ್ಧಾಂತ ಸರಿಯಲ್ಲ. ಅದು ಕರ್ಮನಿಮಿತ್ತವಾಗದಿದ್ದಲ್ಲಿ ಆಕಸ್ಮಿಕವೆಂದಾದೀತು. ಕಾರ್ಯಗಳೆಲ್ಲವೂ ಕರ್ಮನಿಮಿತ್ತವೇ ಆಗಿರುತ್ತವೆ. ಕರ್ಮನಿಮಿತ್ತವಲ್ಲದ ಕಾರ್ಯಗಳೇ ಇಲ್ಲ.

**ಇಲ್ಲಿಗೆ ಮೂರನೇ ಅಧ್ಯಾಯದ ಮೊದಲಪಾದ ಮುಗಿಯಿತು.**

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ

# ಬ್ರಹ್ಮಸೂತ್ರಭಾಷ್ಯಮ್

## ಮೂರನೆಯ ಅಧ್ಯಾಯ-ಎರಡನೆಯಪಾದ

## (ಭಕ್ತಿಪಾದ)

॥ ಓಂ ॥

## ೧. ಸಂಧ್ಯಾಧಿಕರಣಮ್

**ಭಕ್ತಿರಸ್ಮಿನ್ ಪಾದ ಉಚ್ಯತೇ । ಭಕ್ತ್ಯರ್ಥಂ ಭಗವನ್ಮಹಿಮೋಕ್ತಿಃ ।**

**॥ ಓಂ ಸಂಧ್ಯೇ ಸೃಷ್ಟಿರಾಹ ಹಿ ಓಂ ॥ ೧ ॥**

**ನ ಸ್ವಪ್ನೋಽಪಿ ತಂ ವಿನಾ ಪ್ರತೀಯತೇ ।**

**'ನ ತತ್ರ ರಥಾ ನ ರಥಯೋಗಾ ನ ಪಂಥಾನೋ ಭವಂತ್ಯಥ ರಥಾನ್ ರಥಯೋಗಾನ್ ಪಥಃ ಸೃಜತೇ' (ಬೃ.ಉ. 6.3.10) ಇತ್ಯಾದಿಶ್ರುತೇಃ ॥ 1 ॥**

ಈ ಪಾದದಲ್ಲಿ ಭಕ್ತಿಯನ್ನು ಹೇಳಲಾಗಿದೆ. ಅರ್ಥಾತ್ ಭಗವಂತನಲ್ಲಿ ಭಕ್ತಿ ಹುಟ್ಟುವುದಕ್ಕಾಗಿ ಅವನ ಮಹಿಮೆಯನ್ನು ಹೇಳಲಾಗಿದೆ.

ಶ್ರುತಿಗಳು ಸಂಧ್ಯದಲ್ಲೂ=ಸ್ವಪ್ನದಲ್ಲೂ ಭಗವಂತನಿಂದಲೇ ವಸ್ತುಗಳ ಸೃಷ್ಟಿಯನ್ನು ಹೇಳುತ್ತವೆ. ಆದ್ದರಿಂದ ಭಗವಂತನಿಲ್ಲದೆ ಸ್ವಪ್ನವೂ ಬೀಳುವುದಿಲ್ಲ. ಬೃಹದಾರಣ್ಯಕ ಶ್ರುತಿಯಲ್ಲಿ ಸ್ವಾಪ್ನವಸ್ತುಗಳ ಸೃಷ್ಟಿಯೂ ಭಗವಂತನಿಂದಲೇ ಎಂದು ಹೇಳಲಾಗಿದೆ— ತತ್ರ=ಸ್ವಪ್ನದಲ್ಲಿ ನ ರಥಾಃ=ರಥಗಳಿಲ್ಲ, ನ ರಥಯೋಗಾಃ=ಕುದುರೆಗಳಿಲ್ಲ, ನ ಪಂಥಾನಃ=ರಸ್ತೆಗಳಿಲ್ಲ. ಅಥ=ತತ್ಕಾಲದಲ್ಲೇ ರಥಾನ್=ರಥಗಳನ್ನು ರಥಯೋಗಾನ್= ಕುದುರೆಗಳನ್ನು ಪಥಃ=ಮಾರ್ಗಗಳನ್ನೂ ಸೃಜತೇ=ಸೃಷ್ಟಿಮಾಡುತ್ತಾನೆ.

**ವಿವರಣೆ**—ಮಾಹಾತ್ಮ್ಯಜ್ಞಾನಪೂರ್ವಕವಾದ ದೃಢವಾದ ಸ್ನೇಹವೇ ಭಕ್ತಿ. ಭಗವಂತನ ಮಾಹಾತ್ಮ್ಯವನ್ನು ಹೇಳಿದರೆ ಅದರಿಂದ ಭಕ್ತಿ ಹುಟ್ಟುತ್ತದೆ. ಪತ್ನೀಪುತ್ರರಲ್ಲಿ ಮಾಹಾತ್ಮ್ಯಜ್ಞಾನ ಇಲ್ಲದೆಯೂ ಸ್ನೇಹ ಹುಟ್ಟುತ್ತದೆ. ಆ ಸ್ನೇಹಕ್ಕೆ ಅಭಿಮಾನ ಕಾರಣ. ದೇವರಲ್ಲಿ ಮಾಹಾತ್ಮ್ಯಜ್ಞಾನದಿಂದ ಸ್ನೇಹ ಹುಟ್ಟಬೇಕು. ಕೆಲವರಲ್ಲಿ ಮಾಹಾತ್ಮ್ಯಜ್ಞಾನ

ಇದ್ದರೂ ಸ್ನೇಹ ಬೆಳೆಯದಿರಲು ಮಾತ್ಸರ್ಯಾದಿಗಳು ಕಾರಣ. ಆದ್ದರಿಂದ ಮಾತ್ಸರ್ಯಾದಿದೋಷಗಳು ಇಲ್ಲದಿರುವಾಗ ಮಾಹಾತ್ಮ್ಯಜ್ಞಾನದಿಂದ ಸ್ನೇಹ ಹುಟ್ಟುತ್ತದೆ. ಅದಕ್ಕಾಗಿ ಈ ಪಾದದಲ್ಲಿ ಭಗವಂತನ ಮಾಹಾತ್ಮ್ಯವನ್ನು ಹೇಳಲಾಗಿದೆ.

## ।। ಓಂ ನಿರ್ಮಾತಾರಂ ಚೈಕೇ ಪುತ್ರಾದಯಶ್ಚ ಓಂ ।। ೨ ।।

**'ಯ ಏಷ(ಷು) ಸುಪ್ತೇಷು ಜಾಗರ್ತಿ ಕಾಮಂ ಕಾಮಂ ಪುರುಷೋ ನಿರ್ಮಮಾಣಃ' (ಕ.ಉ. 5.8) ಇತಿ ಚ । 'ಏತಸ್ಮಾದ್ಧ್ಯೇವ ಪುತ್ರೋ ಜಾಯತ ಏತಸ್ಮಾದ್ ಭ್ರಾತೈತಸ್ಮಾದ್ ಭಾರ್ಯಾ ಯದೇನಂ ಪುರುಷಮೇಷ ಸ್ವಪ್ನೇನಾಭಿಹಂತಿ' ಇತಿ ಗೌಪವನಶ್ರುತಿಶ್ಚ ।।**

ಕಠಶಾಖೆಯವರು ಪರಮಾತ್ಮನೇ ಸ್ವಾಪ್ನವಸ್ತುಗಳ ಕರ್ತಾ ಎಂದು ಹೇಳುತ್ತಾರೆ.

''ಏಷು ಸುಪ್ತೇಷು=ಜೀವರು ಮಲಗಿದ್ದಾಗ ಯಃ ಪುರುಷಃ=ಯಾವ ಪೂರ್ಣಷಡ್ಗುಣನಾದ ಪರಮಾತ್ಮನೇ ಕಾಮಂ=ಸ್ವೇಚ್ಛೆಯಿಂದ ಕಾಮಂ=ಕಾಮ್ಯವಾದ ಸ್ವಾಪ್ನವಸ್ತುಗಳನ್ನು ನಿರ್ಮಮಾಣಃ=ನಿರ್ಮಿಸುತ್ತಿರುವವನಾಗಿ ಜಾಗರ್ತಿ=ಎಚ್ಚರದಲ್ಲಿರುತ್ತಾನೆ.'' ಈ ಕಠಶ್ರುತಿಯಿಂದ ಪರಮಾತ್ಮನೇ ಸ್ವಾಪ್ನಸೃಷ್ಟಿಕರ್ತಾ, ಎಂದು ಕೆಲವರು ಹೇಳುತ್ತಾರೆ.

ಗೌಪವನ ಶ್ರುತಿಯೂ ಸ್ವಾಪ್ನಪುತ್ರಾದಿ ಸಂಬಂಧಿಗಳ ಸೃಷ್ಟಿಕರ್ತೃ ಭಗವಂತನೆಂದು ಹೇಳುತ್ತದೆ—

'ಈ ಪರಮಾತ್ಮನಿಂದಲೇ ಸ್ವಾಪ್ನಪುತ್ರನೂ ಹುಟ್ಟುತ್ತಾನೆ. ಇವನಿಂದಲೇ ಸ್ವಾಪ್ನ ಸಹೋದರ, ಇವನಿಂದಲೇ ಪತ್ನಿ ಮುಂತಾದವರು ಹುಟ್ಟುತ್ತಾರೆ. ಯದಾ=ಯಾವಾಗ ಏನಂ ಪುರುಷಂ=ಈ ಜೀವನನ್ನು ಏಷಃ=ಈ ಪರಮಾತ್ಮನು, ಸ್ವಪ್ನೇನ ಅಭಿಹಂತಿ= ಸ್ವಪ್ನಾವಸ್ಥೆಗೆ ಒಯ್ಯುವನೋ ಆಗ.

**ಕೇನ ಸಾಧನೇನ ?**

## ।। ಓಂ ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಾತ್ ಓಂ ।। ೩ ।।

**ಅನಾದಿಮನೋಗತಾನ್ ಸಂಸ್ಕಾರಾನ್ ಸ್ವೇಚ್ಛಾಮಾತ್ರೇಣ ಪ್ರದರ್ಶಯತಿ ।**

**ನಾನ್ಯೇನ ಸಾಧನೇನ, ಸಮ್ಯಗನಭಿವ್ಯಕ್ತತ್ವಾತ್ । ಬ್ರಹ್ಮಾಂಡೇ ಚ-**

**'ಮನೋಗತಾಂಸ್ತು ಸಂಸ್ಕಾರಾನ್ ಸ್ವೇಚ್ಛಯಾ ಪರಮೇಶ್ವರಃ ।**
**ಪ್ರದರ್ಶಯತಿ ಜೀವಾಯ ಸ ಸ್ವಪ್ನ ಇತಿ ಗೀಯತೇ ॥**

**ಯದನ್ಯಥಾತ್ವಂ ಜಾಗ್ರತ್ತ್ವಂ ಸಾ ಭ್ರಾಂತಿಸ್ತತ್ರ ತತ್ಕೃತಾ ।**
**ಅನಭಿವ್ಯಕ್ತರೂಪತ್ವಾನ್ನಾನ್ಯಸಾಧನಜಂ ಭವೇತ್ ॥' ಇತಿ ॥**

ಪರಮಾತ್ಮನು ಯಾವ ಸಾಧನದಿಂದ ಸ್ವಾಪ್ನಪದಾರ್ಥಗಳನ್ನು ಸೃಷ್ಟಿ ಮಾಡುತ್ತಾನೆ? ಮಾಯಾಮಾತ್ರಂ=ಸ್ವಾಪ್ನವಸ್ತುಗಳು ಮನೋಗತವಾದ ಸಂಸ್ಕಾರಮಯವಾಗಿವೆ. ಭಗವಂತನು ಅನಾದಿಯಾದ ಮನೋಗತವಾದ ಸಂಸ್ಕಾರಗಳನ್ನು ಉಪಾದಾನಗಳನ್ನಾಗಿ ಮಾಡಿ ತನ್ನ ಇಚ್ಛಾಮಾತ್ರದಿಂದ (ಇಚ್ಛೆಯನ್ನು ನಿಮಿತ್ತವನ್ನಾಗಿ ಮಾಡಿ) ಸ್ವಾಪ್ನವಸ್ತುಗಳನ್ನು ನಿರ್ಮಿಸಿ ಜೀವನಿಗೆ ತೋರಿಸುತ್ತಾನೆ. ಬಾಹ್ಯಮೃದಾದಿಸಾಧನಗಳಿಂದ ಸ್ವಾಪ್ನವಸ್ತುಗಳ ನಿರ್ಮಾಣವಲ್ಲ, ಏಕೆಂದರೆ, ಆ ವಸ್ತುಗಳು ಬಾಹ್ಯವಸ್ತುಗಳಂತೆ ಸರಿಯಾಗಿ ಅಭಿವ್ಯಕ್ತಗಳಲ್ಲ. ಅಂದರೆ ಸ್ವಪ್ನಾತ್ ಪೂರ್ವೋತ್ತರಗಳಲ್ಲಿ ಅವುಗಳು ಕಾಣುವುದಿಲ್ಲ, ಅವುಗಳು ಬಳಕೆಗೆ ಬರುವುದಿಲ್ಲ, ನಾಶವಾದ ಮೇಲೆ ಅವಶೇಷ ಉಳಿಯುವುದಿಲ್ಲ, ಪಕ್ಕದಲ್ಲಿರುವ ಮತ್ತೊಬ್ಬರಿಗೆ ಕಾಣುವುದಿಲ್ಲ. ಇದನ್ನು ಬ್ರಹ್ಮಾಂಡಪುರಾಣದಲ್ಲಿ ಹೇಳಲಾಗಿದೆ—

ಪರಮಾತ್ಮನು, ಜೀವನ ಮನಸ್ಸಿನಲ್ಲಿರುವ ಸಂಸ್ಕಾರಗಳನ್ನು ಬಳಸಿಕೊಂಡು ಸ್ವೇಚ್ಛಾಮಾತ್ರದಿಂದ (ಜೀವನ ಇಚ್ಛೆಯಂತೆ ಅಲ್ಲ) ವಸ್ತುಗಳನ್ನು ನಿರ್ಮಿಸಿ ತೋರಿಸುತ್ತಾನೆ. ಅದೇ ಸ್ವಪ್ನವೆಂದು ಕರೆಯಲ್ಪಡುತ್ತದೆ. ಆ ವಸ್ತುಗಳಲ್ಲಿ ಜಾಗ್ರತ್ವಜ್ಞಾನ (ಇದು ನನ್ನ ಮನೆಯ ವಸ್ತು, ಇದು ಮಣ್ಣಿನಿಂದ ತಯಾರಾದ ಗಡಿಗೆ ಎಂಬ ಜ್ಞಾನ) ಏನಿದೆಯೋ ಅದು ಭ್ರಮೆ. ತತ್ರ=ಆ ಸ್ವಾಪ್ನವಸ್ತುಗಳಲ್ಲಿ ತತ್ಕೃತಾ=ಅನ್ಯಥಾತ್ವಪ್ರಯುಕ್ತವಾಗಿ ಭ್ರಾಂತಿ. ಆ ಸ್ವಾಪ್ನವಸ್ತುಗಳು ಅನಭಿವ್ಯಕ್ತರೂಪತ್ವಾತ್= ಅರ್ಥಕ್ರಿಯಾಕಾರಿಗಳಲ್ಲವಾದ ಕಾರಣದಿಂದಾಗಿ ಅನ್ಯಸಾಧನಜಂ=ಸಂಸ್ಕಾರ ಮತ್ತು ಭಗವದಿಚ್ಛೆಯ ಹೊರತಾದ ಕಾರಣದಿಂದ ಹುಟ್ಟಿದ್ದಾಗಿ ನ ಭವೇತ್=ಆಗುವುದಿಲ್ಲ.

**ವಿವರಣೆ**—ಸ್ವಾಪ್ನವಸ್ತುಗಳನ್ನು ಪರಮಾತ್ಮನು ಸೃಷ್ಟಿಮಾಡುತ್ತಾನೆ, ಎಂದು ಹಿಂದಿನ ಸೂತ್ರದಲ್ಲಿ ಹೇಳಲಾಗಿದೆ. ವಸ್ತು ಸೃಷ್ಟಿಯಾಗಬೇಕಾದರೆ ಸಮವಾಯಿಕಾರಣ ಮತ್ತು ನಿಮಿತ್ತಕಾರಣಗಳು ಇರಬೇಕು. ಬಟ್ಟೆಗೆ ನೂಲು ಸಮವಾಯಿಕಾರಣ. ಇತರ

ಸಲಕರಣೆಗಳು ನಿಮಿತ್ತಕಾರಣಗಳು. ಸ್ವಾಪ್ನವಸ್ತುಗಳಿಗೂ ಜೀವನ ಮನೋಗತವಾದ ಸಂಸ್ಕಾರಗಳು ಉಪಾದಾನಕಾರಣ. ನಮ್ಮ ಮನಸ್ಸಿನಲ್ಲಿರುವ ನಾನಾವಿಧವಾದ ಸಂಸ್ಕಾರ ಗಳಿಂದ ಭಗವಂತನು ನಿರ್ಮಿಸುವ ವಿವಿಧ ಚಿತ್ರಗಳೇ ಸ್ವಾಪ್ನವಸ್ತುಗಳು. ಆದ್ದರಿಂದಲೇ ನಾವು ಬಾಹ್ಯಪ್ರಪಂಚದಲ್ಲಿ ನೋಡಿದ ಆನೆಯು ದೊಡ್ಡದಾಗಿದ್ದರೂ ಸ್ವಪ್ನದಲ್ಲಿ ಚಿತ್ರರೂಪದಲ್ಲಿ ಅದು ಚಿಕ್ಕದಾಗಿರುತ್ತದೆ. ತತ್ಕಾಲದಲ್ಲೇ ಆ ಚಿತ್ರ ಮೂಡಿ ಮರೆಯಾಗುವುದರಿಂದ ಅದು ಆಮೇಲೆ ಕಾಣುವುದಿಲ್ಲ. ಅವು ಸಂಸ್ಕಾರದಿಂದ ನಿರ್ಮಾಣವಾಗಿರುವುದರಿಂದ ಸತ್ಯವೂ ಆಗಿವೆ, ಆನೆಯ ಚಿತ್ರದಂತೆ. ಭಗವಂತನ ಇಚ್ಛೆಯೇ ಅವುಗಳಿಗೆ ನಿಮಿತ್ತಕಾರಣ.

ಸೂತ್ರದಲ್ಲಿರುವ ಮಾಯಾಶಬ್ದಕ್ಕೆ ಈಶ್ವರನ ಇಚ್ಛೆ ಮತ್ತು ಸಂಸ್ಕಾರ ಎಂದು ಎರಡು ಅರ್ಥ. ಮಾತ್ರ ಎಂದರೆ ನಿರ್ಮಿತ. (ಮಾಯಾಭ್ಯಾಂ ನಿರ್ಮಿತಂ=ಮಾಯಾ ಮಾತ್ರಂ) ಸಂಧ್ಯಂ ಮಾಯಾಮಾತ್ರಂ=ಸ್ವಾಪ್ನ ವಸ್ತು ವಾಸನಾ ಮತ್ತು ಈಶ್ವರೇಚ್ಛೆಯಿಂದ ನಿರ್ಮಿತವಾದುದು, ಎಂದರ್ಥ.

**।। ಓಂ ಸೂಚಕಶ್ಚ ಹಿ ಶ್ರುತೇರಾಚಕ್ಷತೇ ಚ ತದ್ವಿದಃ ಓಂ ।। ४ ।।**

**ಸಾಧನಾಂತರಾಭಾವೇಽಪಿ ಭಾವಾಭಾವಸೂಚಕತ್ವೇ(ನೇ)ಚೇಶ್ವರೋ ದರ್ಶಯತಿ ।**

**'ಯದಾ ಕರ್ಮಸು ಕಾಮ್ಯೇಷು ಸ್ತ್ರಿಯಂ ಸ್ವಪ್ನೇಽಭಿ ಪಶ್ಯತಿ ।**
**ಸಮೃದ್ಧಿಂ ತತ್ರ ಜಾನೀಯಾತ್ ತಸ್ಮಿನ್ ಸ್ವಪ್ನನಿದರ್ಶನೇ ।।'**
**(ಛಾಂ.ಉ. 5.2.1) ।। ಇತ್ಯಾದಿಶ್ರುತೇಃ ।**

**ಹಿಶಬ್ದಾದ್ ದರ್ಶನಾಚ್ಚ ।**

**'ಯದ್ ವಾಽಪಿ ಬ್ರಾಹ್ಮಣೋ ಬ್ರೂಯಾದ್ ದೇವತಾ ವೃಷಭೋಽ-ಪಿ ವಾ । ಸ್ವಪ್ನಸ್ಥಮಥವಾ ರಾಜಾ ತತ್ ತಥೈವ ಭವಿಷ್ಯತಿ ।।'**
**ಇತ್ಯಾದ್ಯಾಚಕ್ಷತೇ ಚ ಸ್ವಪ್ನವಿದೋ ವ್ಯಾಸಾದಯಃ ।।**

ಬಾಹ್ಯಸಾಧನಗಳು ಇಲ್ಲದಿದ್ದರೂ ಸ್ವಾಪ್ನವಸ್ತುಗಳು ಶುಭಾಶುಭಗಳಿಗೆ ಸೂಚಕವೂ ಆಗುವಂತೆ ಪರಮಾತ್ಮನು ಅವುಗಳನ್ನು ತೋರಿಸುತ್ತಾನೆ. ಹೀಗೆ ಈಶ ನಿರ್ಮಿತ ವಾದುದರಿಂದ ಮತ್ತು ಶುಭಾಶುಭಸೂಚಕವಾದುದರಿಂದ ಸ್ವಾಪ್ನ ವಸ್ತುಗಳು ಸರ್ವಥಾ

ಅಸತ್ಯಗಳಲ್ಲ. ಛಾಂದೋಗ್ಯಶ್ರುತಿಯಲ್ಲಿ ಸ್ವಾಪ್ನವಸ್ತುಗಳು ಸೂಚಿಸುವ ಶುಭವನ್ನು ಹೇಳಲಾಗಿದೆ—ಕಾಮ್ಯಕರ್ಮಗಳನ್ನು ಮಾಡುವ ಸಂದರ್ಭದಲ್ಲಿ ಸ್ವಪ್ನದಲ್ಲಿ ಸ್ತ್ರೀದರ್ಶನ ವಾದರೆ ಇಂತಹ ಸ್ವಪ್ನರೂಪನಿದರ್ಶನವು ಆಗುತ್ತಿರಲು ತನಗೆ ಶ್ರೇಯಸ್ಸಾಗುತ್ತದೆ, ಎಂದು ತಿಳಿಯಬೇಕು.

ಸೂತ್ರದ ಹಿ ಶಬ್ದವು ಇದು ಅನುಭವ ಸಿದ್ಧವಾದುದು, ಎಂದು ತಿಳಿಸುತ್ತದೆ. ಸ್ವಾಪ್ನವಸ್ತುಗಳಿಂದ ಶುಭಸೂಚನೆ, ಅಶುಭಸೂಚನೆಯಾಗುವುದು ಕಂಡು ಬಂದಿದೆ, ಎಂದು ಭಾವ.

ಅದರಂತೆ, 'ಪುರುಷಂ ಕೃಷ್ಣಂ ಕೃಷ್ಣದಂತಂ ಪಶ್ಯತಿ ಸ ಏನಂ ಹಂತಿ....।।' ಎಂದು ಐತರೇಯಶ್ರುತಿಯಲ್ಲಿ ಅನಿಷ್ಟಸೂಚಕಸ್ವಪ್ನವನ್ನು ಹೇಳಲಾಗಿದೆ. ಕಪ್ಪುಹಲ್ಲಿನ ಕಪ್ಪುವ್ಯಕ್ತಿ ಸ್ವಪ್ನದಲ್ಲಿ ಕಂಡರೆ ಮರಣ, ಎಂದು ಅದರ ಅರ್ಥ.

ಸ್ವಾಪ್ನಶಾಸ್ತ್ರಜ್ಞರಾದ ವ್ಯಾಸಾದಿಗಳೂ ಹೀಗೆ ಹೇಳುತ್ತಾರೆ—

''ಸ್ವಪ್ನಸ್ಥ ಪುರುಷನಿಗೆ ಬ್ರಾಹ್ಮಣ, ದೇವತೆ, ಎತ್ತು ಅಥವಾ ರಾಜ ಏನೇನು ಹೇಳಿದಂತೆ ಕಾಣುವುದೋ ಅದು ನಿಜಜೀವನದಲ್ಲಿ ನಡೆಯುತ್ತದೆ.''

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**।। ಓಂ ಸಂಧ್ಯೇ ಸೃಷ್ಟಿರಾಹ ಹಿ ಓಂ ।।** (ಅತ್ರ ಸ್ವಾಪ್ನಪದಾರ್ಥ–ತದ್ಧಿಯೋಃ ಈಶಾಧೀನತ್ವಮುಚ್ಯತೇ । ಜಾಗ್ರತ್– ಸುಪ್ತಿಸಂಧೌ ಭವತೀತಿ ಸಂಧ್ಯೇ=ಸ್ವಪ್ನೇ ಸೃಷ್ಟಿಃ ಅರ್ಥಾನಾಮಿತಿ ಯೋಗ್ಯತಯಾ ಅನ್ವಯಃ, ನಿರೋಧಶ್ಚೇತ್ಯುಪಲಕ್ಷ್ಯತೇ । ಕುತಃ? ಹಿ=ಯಸ್ಮಾತ್, ಆಹ, ಶಬ್ದ ಇತಿ ವಿಪರಿಣಮ್ಯಾನುವೃತ್ತಿರ್ವಾ, ಶ್ರುತಿರಿತಿ ಶೇಷೋ ವಾ । 'ಅಥ ರಥಾನ್ ರಥಯೋಗಾನ್ ಪಥಃ ಸೃಜತೇ' ಇತ್ಯಾದಿ ಶ್ರುತಿರಿತ್ಯರ್ಥಃ । ಏವಂಚ ಸಂಧ್ಯೇ ಏವಾರ್ಥನಾಂ ಸೃಷ್ಟಿ–ನಿರೋಧಸತ್ವೇನ ಪ್ರಾಗೂರ್ಧ್ವಮದೃಷ್ಟಿಮಾತ್ರೇಣ ಅಸತ್ವಾಭಾವಾತ್ ಸ್ವಾಪ್ನಾರ್ಥ– ತದ್ಧಿಯೋಃ ಈಶಾಧೀನತ್ವಮೇವೇತಿ ಭಾವಃ ।)

ಸಂಧ್ಯ ಎಂದರೆ ಸ್ವಪ್ನಾವಸ್ಥೆ. ಆ ಅವಸ್ಥೆ ಎಚ್ಚರ ಮತ್ತು ನಿದ್ರಾವಸ್ಥೆಗಳ ಮಧ್ಯದಲ್ಲಿದೆಯಾದ ಕಾರಣ ಅದಕ್ಕೆ ಆ ಹೆಸರು ಅನ್ವರ್ಥ. ಆ ಅವಸ್ಥೆಯಲ್ಲೂ ಅಲ್ಲಿ ಕಾಣುವ ವಸ್ತುಗಳ ಸೃಷ್ಟಿಯನ್ನು 'ಅಥ ರಥಾನ್' ಇತ್ಯಾದಿ ಶ್ರುತಿಯು ಹೇಳುತ್ತದೆ. ಹೀಗೆ ಸೃಷ್ಟಿ ಇರುವುದರಿಂದ ಸ್ವಾಪ್ನವಸ್ತುಗಳಾಗಲೀ ಅದರ ಜ್ಞಾನವಾಗಲೀ ಅಸತ್ಯವಲ್ಲ. ಅವೆರಡೂ ಸತ್ಯವಾಗಿದ್ದು ಈಶಾಧೀನವಾಗಿವೆ.

॥ ಓಂ ನಿರ್ಮಾತಾರಂ ಚೈಕೇ ಪುತ್ರಾದಯಶ್ಚ ಓಂ ॥ (ಏಕೇ ಇತಿ ಪೂರ್ವೋತ್ತರಯೋಃ ಅನ್ವೇತಿ । ಏಕೇ ಶಾಖಿನಃ ಸಂಧ್ಯೇ ಅರ್ಥಾನಾಂ ನಿರ್ಮಾತಾರಂ ಚ 'ಕಾಮಂಕಾಮಂ ಪುರುಷೋ ನಿರ್ಮಮಾಣಃ' ಇತ್ಯಾಹುಃ । ನ ಸೃಷ್ಟಿಮಾತ್ರಂ ಶ್ರೂಯತೇ, ಇತಿ ಚಾರ್ಥಃ । ಪುತ್ರಾದಯಶ್ಚ='ತಸ್ಮಾದ್ಧ್ಯೇವ ಪುತ್ರೋ ಜಾಯತೇ' ಇತ್ಯಾದಿನಾ ಸಂಧ್ಯೇ ಪುತ್ರಾಯದಶ್ಚ ಈಶೇನ ಸೃಜ್ಯಂತೇ, 'ಇತಿ ಏಕೇ ಶಾಖಿನಃ ಆಹುಃ' ಇತಿ ಯೋಜ್ಯಮ್ । ನಿರ್ಮಾತಾರಮಿತಿ, ಪುತ್ರೇತಿ ಚ ಶ್ರುತಿವಿಶೇಷಸೂಚನಾರ್ಥಮ್।)

ಏಕೇ=ಕೆಲವು ಶಾಖೆಯವರು ಅಂದರೆ ಕಾಠಕರು 'ಕಾಮಂಕಾಮಂ' ಎಂದು ಪರಮಾತ್ಮನೇ ಸ್ವಾಪ್ನವಸ್ತುಗಳ ನಿರ್ಮಾತೃ ಎಂದು ಹೇಳುತ್ತಾರೆ. ಮತ್ತೆ ಕೆಲವರು ಸ್ವಾಪ್ನ ಪುತ್ರಾದಿಗಳಿಗೂ ಪರಮಾತ್ಮನೇ ನಿರ್ಮಾತೃ ಎಂದು ಹೇಳುತ್ತಾರೆ. ಶ್ರುತಿಯು ಸೃಷ್ಟಿಮಾತ್ರವನ್ನು ಹೇಳುತ್ತಿಲ್ಲ, ಸೃಷ್ಟಿಕರ್ತನನ್ನೂ ಹೇಳುತ್ತದೆ, ಎಂದು ಚ ಶಬ್ದದ ಅರ್ಥ. ಎರಡು ವಿಧದ ಶ್ರುತಿಯ ಸೂಚನೆಗಾಗಿ 'ಪುತ್ರಾದಯಶ್ಚ' ಎಂದು ಹೇಳಲಾಗಿದೆ.

॥ ಓಂ ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತ ಸ್ವರೂಪತ್ವಾತ್ ಓಂ ॥ (ತುರೇವ । ಮಾಯೇತಿ ತಂತ್ರೇಣ ಈಶೇಚ್ಛಾ-ವಾಸನೇ ಉಚ್ಯೇತೇ । ಸಂಧ್ಯಮಿತ್ಯಸ್ತಿ । ಸಂಧ್ಯಂ=ಸ್ವಪ್ನಸಂಬಂಧ್ಯರ್ಥಜಾತಂ, ಮಾಯಾಮಾತ್ರಂ ತು-ಮಾಯಾಭ್ಯಾಂ= ಸಂಸ್ಕಾರೇಶೇಚ್ಛಾಭ್ಯಾಂ ಮಾತ್ರಂತು=ನಿರ್ಮಿತಮೇವ । ಮಾಙ್ ಮಾನೇ ಇತ್ಯತಃ ಕರ್ಮಣಿ ತ್ರಪ್ರತ್ಯಯಃ । ಅನಾದಿಮನೋಗತಸಂಸ್ಕಾರಾನ್ ಉಪಾದಾನೀಕೃತ್ಯ ಈಶಃ, ಸ್ವೇಚ್ಛಯಾ ನಿಮಿತ್ತೇನ, ನಿರ್ಮಿಮೀತೇ । ನಾನ್ಯೇನೇತ್ಯರ್ಥಃ । ಕುತೋ ಮಾಯಾಮಾತ್ರಂ? ಅತ ಉಕ್ತಂ-ಕಾರ್ತ್ಸ್ನ್ಯೇನೇತ್ಯಾದಿ । ಸಾಕಲ್ಯೇನಾನಭಿವ್ಯಕ್ತಸ್ವರೂಪ-ತ್ವಾತ್ ಮಾಯಾಮಾತ್ರಮೇವ, ನ ಬಾಹ್ಯೋಪಾದಾನಕಮ್ । ತಥಾತ್ವೇ ಸಮ್ಯಗಭಿವ್ಯಕ್ತಿಃ ಸ್ಯಾದಿತ್ಯರ್ಥಃ ।)

ಸೂತ್ರದ ಮಾಯಾಶಬ್ದಕ್ಕೆ ಸಂಸ್ಕಾರ ಮತ್ತು ಈಶ್ವರನ ಇಚ್ಛೆ ಎಂದು ಅರ್ಥ. ಮಾಯಾಶಬ್ದದ ಮುಖ್ಯಾರ್ಥ ಜ್ಞಾನವಾದರೂ ಪ್ರಕೃತ ತಜ್ಜನ್ಯಸಂಸ್ಕಾರದಲ್ಲಿ ಲಕ್ಷಣಾ । ಸ್ವಾಪ್ನವಸ್ತುಗಳು ಮಾಯಾಮಾತ್ರ=ಸಂಸ್ಕಾರ ಮತ್ತು ಭಗವಂತನ ಇಚ್ಛೆ ಇವೆರಡರಿಂದ ನಿರ್ಮಿತವಾಗಿವೆ. ಬಾಹ್ಯವಸ್ತುಗಳಿಂದಲ್ಲ. ಏಕೆಂದರೆ, ಕಾರ್ತ್ಸ್ನ್ಯೇನ=ಸಂಪೂರ್ಣವಾಗಿ ಅನಭಿವ್ಯಕ್ತಸ್ವರೂಪತ್ವಾತ್=ಅಭಿವ್ಯಕ್ತರೂಪದಲ್ಲಿ ಇಲ್ಲದಿರುವುದರಿಂದ. ಜಾಗ್ರತ್ ಪದಾರ್ಥಗಳು ಕಂಡಂತೆ ಪೂರ್ವೋತ್ತರಗಳಲ್ಲಿ ಅದು ಕಾಣುವುದಿಲ್ಲ. ಆದ್ದರಿಂದ ಅದು ವಾಸನೋಪಾದಾನಕ.

**॥ ಓಂ ಸೂಚಕಶ್ಚ ಹಿ ಶ್ರುತೇರಾಚಕ್ಷತೇ ಚ ತದ್ವಿದಃ ಓಂ ॥**(ಆದ್ಯಃ ಚಃ ಹೇತೌ । ಸಂಧ್ಯೋಽರ್ಥಃ ಶುಭಾಶುಭಸೂಚಕಃ ಯತಃ ಅತಃ ನಾಸನ್, ಇತಿ ಯೋಜ್ಯಮ್ । ಕುತಃ? ಶ್ರುತೇಃ । 'ಯದಾ ಕರ್ಮಸು ಕಾಮ್ಯೇಷು' ಇತಿ, 'ಕೃಷ್ಣಂ ಕೃಷ್ಣದಂತಂ ಪಶ್ಯತಿ' ಇತ್ಯಾದಿಶ್ರುತೇಃ, ಪ್ರತ್ಯಕ್ಷತಃ ಫಲದರ್ಶನಾಚ್ಚ ಇತಿ ಹೇರರ್ಥಃ । ತದ್ವಿದಃ=ಸಂಧ್ಯಾರ್ಥವಿದಃ ವ್ಯಾಸಾದಯಃ 'ಯದ್ವಾ ಬ್ರಾಹ್ಮಣೋ ಬ್ರೂಯಾತ್' ಇತ್ಯಾದಿ ಆಚಕ್ಷತೇ ಚ ಇತ್ಯರ್ಥಃ ।)

ಸ್ವಾಪ್ನಪದಾರ್ಥಗಳು ಶುಭಾಶುಭಸೂಚಕಗಳಾಗುತ್ತವೆ ಎಂದು ಶ್ರುತಿ ಇದೆ. ಸ್ವಾಪ್ನವೃತ್ತಾಂತವನ್ನು ಬಲ್ಲವರಾದ ವ್ಯಾಸಾದಿಮಹರ್ಷಿಗಳು ಸ್ವಪ್ನದಲ್ಲಿ ಹೇಳಿದ ಬ್ರಾಹ್ಮಣಾದಿವಾಕ್ಯಗಳು ನಿಜಜೀವನದಲ್ಲಿ ಸತ್ಯವಾಗುತ್ತವೆ, ಎಂದೂ ಹೇಳುತ್ತಾರೆ.

**ಇಲ್ಲಿಗೆ ಸಂಧ್ಯಾಧಿಕರಣವು ಮುಗಿಯಿತು.**

## ೨. ಪರಾಭಿಧ್ಯಾನಾಧಿಕರಣಮ್

### ॥ ಓಂ ಪರಾಭಿಧ್ಯಾನಾತ್ತು ತಿರೋಹಿತಂ ತತೋ ಹ್ಯಸ್ಯ ಬಂಧವಿಪರ್ಯಯೌ ಓಂ ॥ ೫ ॥

**ಬಂಧಮೋಕ್ಷಪ್ರದತ್ವಾತ್ ಸ ಏವ ಸ್ವಪ್ನಾದಿತಿರಸ್ಕರ್ತಾ ।**
**'ಸ್ವಪ್ನಾದಿಬುದ್ಧಿಕರ್ತಾ ಚ ತಿರಸ್ಕರ್ತಾ ಸ ಏವ ಚ ।**
**ತದಿಚ್ಛಯಾ ಯತೋ ಹ್ಯಸ್ಯ ಬಂಧಮೋಕ್ಷೌ ಪ್ರತಿಷ್ಠಿತೌ ॥**

**ಇತಿ ಕೌರ್ಮೇ ॥**

ಈಶ್ವರನೇ ಜೀವನಿಗೆ ಬಂಧಮೋಕ್ಷಾದಿಗಳನ್ನು ಉಂಟುಮಾಡುವುದರಿಂದಾಗಿ ಅವನೇ ಸ್ವಾಪ್ನ ಸೃಷ್ಟಿಗೂ ತಿರೋಧಾನಕ್ಕೂ ಕಾರಣನಾಗಿದ್ದಾನೆ. ಕೂರ್ಮಪುರಾಣದಲ್ಲಿ ಈ ಸೂತ್ರ ಸಂವಾದಿಯಾದ ಆಧಾರವಿದೆ—ಯಾವಕಾರಣದಿಂದ ಜೀವನಿಗೆ ಬಂಧನ ಮತ್ತು ಮೋಕ್ಷಗಳು ಈಶ್ವರ ಇಚ್ಛೆಯಿಂದಲೇ ಆಗುವುದೋ ಅದರಿಂದಾಗಿಯೇ ಸ್ವಪ್ನಜ್ಞಾನವನ್ನು ಕೊಡುವವನೂ ಅದನ್ನು ನಾಶಮಾಡುವವನೂ ಅವನೇ ಆಗಿದ್ದಾನೆ.

**ವಿವರಣೆ**—ಸೂತ್ರದಲ್ಲಿ ಬಂಧ ಎಂದರೆ ಸಂಸಾರ, ವಿಪರ್ಯಯ ಎಂದರೆ ಮೋಕ್ಷ. ಸಂಸಾರಬಂಧನ ಮತ್ತು ಅದರಿಂದ ಮೋಕ್ಷ ಇವೆರಡನ್ನೂ ಭಗವಂತನೇ

ಮಾಡುತ್ತಾನೆ. ಅಂತಹ ಕ್ಲಿಷ್ಟಕಾರ್ಯವನ್ನು ಮಾಡುವ ಭಗವಂತನಿಗೆ ಸ್ವಾಪ್ನಸೃಷ್ಟಿ ಮತ್ತು ಅದರ ತಿರೋಧಾನವನ್ನು ಮಾಡುವುದು ದೊಡ್ಡಕಾರ್ಯವೇ ಅಲ್ಲ. ಹೀಗೆ ಕೈಮುತ್ಯ ನ್ಯಾಯವನ್ನು ತಿಳಿಸುವುದಕ್ಕಾಗಿ ಸೂತ್ರದಲ್ಲಿ ಬಂಧಮೋಕ್ಷಕರ್ತೃತ್ವವನ್ನು ಹೇಳಲಾಗಿದೆ. ಇದನ್ನು ತತ್ತ್ವಪ್ರದೀಪದಲ್ಲಿ ತ್ರಿವಿಕ್ರಮಪಂಡಿತರು ತಿಳಿಸಿದ್ದಾರೆ—

ಯದಭಿಧ್ಯಾನನಿಬಂಧನಃ ಅನಾದಿಬಂಧಃ, ತದ್ವಿಮೋಕ್ಷಶ್ಚ ಅತಿದುರಾಪೋಽನಂತ ಕಾಲೀನಃ, ಸ್ವಪ್ನತಿರೋಧಾನಾದಿಕಶಕ್ತಿಃ ಕಿಂ ತಸ್ಯ ವರ್ಣನೀಯಾ? 'ಯಾವ ಭಗವಂತನ ಇಚ್ಛೆಯು ಅನಾದಿಕಾಲೀನವಾದ ಜೀವನ ಬಂಧನಕ್ಕೂ, ಬೇರೆಯವರಿಂದ ಅಸಾಧ್ಯವಾದ ಅನಂತಕಾಲಿಕವಾದ ಮೋಕ್ಷಕ್ಕೂ ಕಾರಣವಾಗಿದೆಯೋ ಅಂತಹ ಭಗವಂತನಿಗೆ ಸ್ವಪ್ನತಿರೋಧಾನಶಕ್ತಿ ಇದೆ ಎನ್ನುವುದನ್ನು ಪ್ರತ್ಯೇಕ ಹೇಳಬೇಕಾಗಿಯೇ ಇಲ್ಲ' ಇದು ಸೂತ್ರದ ಹಿಶಬ್ದಸೂಚಿತವಾದ ಹೇತು. ಅವನು ಬಂಧ-ಮೋಕ್ಷಗಳಿಗೆ ಕಾರಣ ನಾದುದರಿಂದ ಸ್ವಪ್ನೋತ್ಪತ್ತಿ-ತಿರೋಧಾನಗಳಿಗೂ ಕಾರಣ ನಾಗಿದ್ದಾನೆ, ಎಂದು ಅದರ ತಾತ್ಪರ್ಯ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ಪರಾಭಿಧ್ಯಾನಾತ್ತು ತಿರೋಹಿತಂ ತತೋ ಹ್ಯಸ್ಯ ಬಂಧವಿಪರ್ಯಯೌ ಓಂ ॥** (ಅತ್ರ ಸಂಧ್ಯಾತಿರೋಧಾಯಕತ್ವಮ್ ಈಶಸ್ಯ ಉಚ್ಯತೇ। ತುರೇವ। ಸಂಧ್ಯಮಿತ್ಯಸ್ತಿ। ಪರಾಭಿಧ್ಯಾನಾತ್ತು=ಈಶೇಚ್ಛಾತ ಏವ, ಸಂಧ್ಯಂ ತಿರೋಹಿತಂ= ತಿರೋಧೀಯತೇ। ನ ಜ್ಞಾನೇನ। ಹಿ=ಯಸ್ಮಾತ್ ಅಸ್ಯ=ಜೀವಸ್ಯ ಬಂಧಮೋಕ್ಷೌ ತತಃ=ಈಶಾದಿತ್ಯರ್ಥಃ। ಯಥಾ ಬಂಧಮೋಕ್ಷಯೋಃ ಅಜ್ಞಾನ-ಜ್ಞಾನನಿಮಿತ್ತತ್ವ ಪ್ರಸಿದ್ಧಾವಪಿ ನ ಬಂಧ-ಮೋಕ್ಷೌ ಅಜ್ಞಾನ-ಜ್ಞಾನಾಧೀನೌ, ತಯೋಃ ಜಡತ್ವೇನ ಅಸ್ವಾತಂತ್ರ್ಯಾತ್, ಕಿಂತು ಈಶಾಯತ್ತೌ, ತಥಾ ಸಂಧ್ಯಾವಿರ್ಭಾವ-ತಿರೋಭಾವಯೋಃ ಅಜ್ಞಾನ-ಜ್ಞಾನನಿಮಿತ್ತತ್ವಪ್ರತೀತೌ ಅಪಿ ಈಶಾಧೀನತ್ವೈವ ಇತಿ ಭಾವಃ। ಹಿಶಬ್ದೋ ಬಂಧಾದೇಃ ಅಜ್ಞಾನಾದ್ಯಧೀನತ್ವ ಪ್ರಸಿದ್ಧ್ಯರ್ಥಃ। ಹೇತ್ವರ್ಥೋ ವಾ।

ಸ್ವಾಪ್ನವು ಪರಾಭಿಧ್ಯಾನಾತ್ತು=ಪರಮಾತ್ಮನ ಇಚ್ಛೆಯಿಂದಾಗಿಯೇ ತಿರೋಹಿತಂ= ಮರೆಯಾಗುತ್ತದೆ, ಜ್ಞಾನದಿಂದ ಅಲ್ಲ(ಎಚ್ಚರದಿಂದಲ್ಲ). ಹಿ=ಏಕೆಂದರೆ, ಅಸ್ಯ= ಜೀವನಿಗೆ ಬಂಧಮೋಕ್ಷೌ=ಸಂಸಾರಬಂಧನ ಹಾಗೂ ಮೋಕ್ಷಗಳು ತತಃ=ಪರಮಾತ್ಮ ನಿಂದಲೇ ಆಗುತ್ತವೆ.

**ಇಲ್ಲಿಗೆ ಪರಾಭಿಧ್ಯಾನಾಧಿಕರಣವು ಮುಗಿಯಿತು.**

## ೩. ದೇಹಯೋಗಾಧಿಕರಣಮ್

### ॥ ಓಂ ದೇಹಯೋಗಾದ್ ವಾಸೋಽಪಿ ಓಂ ॥ ೬ ॥

**ದೇಹಯೋಗೇನ ವಾಸೋ ಜಾಗ್ರದಪಿ ತತ ಏವ ॥**

**'ಸ ಏವ ಜಾಗರಿತೇ ಸ್ಥಾಪಯತಿ ಸ ಸ್ವಪ್ನೇ ಸ ಪ್ರಭುಸ್ತುರಾಷಾಟ್ ಸ ಏಕೋ ಬಹುಧಾ ಭವತಿ' ಇತಿ ಕೌಂಠರವ್ಯಶ್ರುತೇಃ ॥**

ದೇಹಾಭಿಮಾನವಿಶಿಷ್ಟವಾದ ಸ್ಥಿತಿ ಎಂದರೆ ಎಚ್ಚರ ಅಥವಾ ಜಾಗ್ರದವಸ್ಥೆ ಅದೂ ಭಗವಂತನ ಇಚ್ಛೆಯಿಂದಲೇ ಆಗಿರುತ್ತದೆ. ಸ್ವಪ್ನಾವಸ್ಥೆಯಂತೆ ಎಚ್ಚರಾವಸ್ಥೆಗೂ ಪರಮಾತ್ಮನೇ ನಿಯಾಮಕ. ಕೌಂಠರವ್ಯಶ್ರುತಿಯಿಂದ ಈ ವಿಷಯವು ತಿಳಿಯುತ್ತದೆ—ಸ ಏವ=ಆ ಪರಮಾತ್ಮನೇ, ಜೀವನನ್ನು ಜಾಗರಿತೇ=ಎಚ್ಚರಾವಸ್ಥೆಯಲ್ಲಿ ಸ್ಥಾಪಯತಿ= ಇರಿಸುತ್ತಾನೆ. ಸಃ=ಪರಮಾತ್ಮನೇ ಸ್ವಪ್ನೇ=ಸ್ವಪ್ನಾವಸ್ಥೆಯಲ್ಲಿ ಇರಿಸುತ್ತಾನೆ. ಸಃ ಪರಮಾತ್ಮನು ತುರಾಷಾಟ್=ವೈರಿಗಳ ವೇಗವನ್ನು ಸಹಿಸಬಲ್ಲವನು. ಆದ್ದರಿಂದಲೇ ಪ್ರಭುಃ=ಸಮರ್ಥನು. ಸಃ ಏಕಃ=ಅವನು ಒಬ್ಬನಾದರೂ ಬಹುಧಾ ಭವತಿ=ವಿಶ್ವ ತೈಜಸ, ಪ್ರಾಜ್ಞ ಎಂಬ ಅನೇಕ ರೂಪವುಳ್ಳವನು. ಆದ್ದರಿಂದ ಅವನು ಅವಸ್ಥಾತ್ರಯ ನಿಯಾಮಕನಾಗುತ್ತಾನೆ.

**ವಿವರಣೆ**—ಸುಷುಪ್ತಿ ಮತ್ತು ಸ್ವಪ್ನದಲ್ಲಿ ಜೀವನಿಗೆ ದೇಹಾಭಿಮಾನ ಇರುವುದಿಲ್ಲ. ಎಚ್ಚರದಲ್ಲಿ ಮಾತ್ರ ಅವನಿಗೆ ದೇಹದ ಮೇಲೆ ಅಭಿಮಾನವಿರುತ್ತದೆ. ಆದ್ದರಿಂದ 'ದೇಹಯೋಗಾತ್ ವಾಸ' ಎಂದರೆ ದೇಹದಲ್ಲಿ ಅಭಿಮಾನವಿರುವ ಸ್ಥಿತಿ. ಅದೇ ಎಚ್ಚರ. ಪರಾಭಿಧ್ಯಾನಾತ್, ಎಂಬ ಶಬ್ದವನ್ನು ಹಿಂದಿನ ಸೂತ್ರದಿಂದ ಅನುವೃತ್ತಿ ಮಾಡಿ ಕೊಂಡಾಗ, 'ದೇಹಯೋಗಾತ್ ವಾಸೋಽಪಿ ಪರಾಭಿಧ್ಯಾನಾತ್' ಎಂದು ಪೂರ್ಣವಾಕ್ಯವಾಗುತ್ತದೆ. ಜೀವನಿಗೆ ಎಚ್ಚರಾವಸ್ಥೆಯು ಕಾಲಕೃತವಲ್ಲ, ಅದೂ ಭಗವದಿಚ್ಛಾನಿಮಿತ್ತ, ಎಂದು ಸೂತ್ರದ ಅಭಿಪ್ರಾಯ.

ಸೂತ್ರದಲ್ಲಿ 'ಜಾಗ್ರದಪಿ' ಎಂದು ಹೇಳದೆ ಆ ಜಾಗ್ರದವಸ್ಥೆಯನ್ನು 'ದೇಹ ಯೋಗಾತ್ ವಾಸ' ಎಂದು ವಿವರಿಸಿ ಹೇಳುವುದಕ್ಕೆ ಕಾರಣ ಇದು—ಸ್ವಪ್ನ ಮತ್ತು ಸುಪ್ತಿ ಅವಸ್ಥೆಗಳಲ್ಲಿ ಜೀವನಿಗೆ ದೇಹದ ಮೇಲೆ ಪರಿವೆಯೇ ಇರುವುದಿಲ್ಲ. ಎಚ್ಚರದಲ್ಲಿ ಆ ಪರಿಜ್ಞಾನ ನಮಗಿದೆ. ಆದ್ದರಿಂದ ಜಾಗ್ರದವಸ್ಥೆಯಲ್ಲಿ ಪರಮಾತ್ಮನ ಪ್ರೇರಣೆಯ

ಅಗತ್ಯವಿಲ್ಲ ಎಂದು ಆಕ್ಷೇಪಿಸಕೂಡದು. ಆಗಲೂ ಜೀವನು ಭಗವಂತನ ನಿಯಂತ್ರಣಕ್ಕೆ ಒಳಪಟ್ಟಿರುತ್ತಾನೆ. ಅದನ್ನು ಕೌಂಠರವ್ಯಶ್ರುತಿಯು ಹೇಳಿದೆ. ಇದಕ್ಕಾಗಿ 'ದೇಹಯೋಗಾತ್ ವಾಸಃ' ಎಂದು ಸೂತ್ರಕಾರರು ಹೇಳಿದ್ದಾರೆ.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ :

**॥ ಓಂ ದೇಹಯೋಗಾದ್ ವಾಸೋಽಪಿ ಓಂ ॥** (ಅತ್ರ ಜಾಗ್ರದವಸ್ಥಾ ಪ್ರವರ್ತಕತ್ವಮ್ ಈಶಸ್ಯ ಉಚ್ಯತೇ। ಅಪಿಃ 'ಪರಾಭಿಧ್ಯಾನಾತ್ತು' ಇತ್ಯನುಕರ್ಷಕಃ। ಸುಪ್ತಿಸಮುಚ್ಚಾಯಕ ಇತ್ಯೇಕೇ। ಅಸ್ಯೇತ್ಯಸ್ತಿ। ತೃತೀಯಾರ್ಥೇ ಪಂಚಮೀ। ದೇಹಯೋಗೇನ= ದೇಹಾಭಿಮಾನೇನ ವಾಸೋಽಪಿ=ಸ್ಥಿತಿರಪಿ ಜಾಗ್ರದವಸ್ಥಾಪಿ, ಇತ್ಯರ್ಥಃ। ಪರಾಭಿಧ್ಯಾನಾದೇವ, ನ ಕಾಲಾದಿತಃ ಇತ್ಯರ್ಥಃ। ಜಾಗ್ರದಪಿ ಇತಿ ವಾಚ್ಯೇ ದೇಹೇತ್ಯಾದ್ಯುಕ್ತಿಃ ತತ್‌ಸ್ವರೂಪವ್ಯಕ್ತ್ಯರ್ಥಾ। ಸಾಪಿ ಅವಸ್ಥಾಂತರೇ ಜೀವಸ್ಯ ದೇಹಾನಭಿಮಾನೇನ ತಸ್ಯ ಅನ್ಯಾಯತ್ತತ್ವೇಽಪಿ ಜಾಗರಣೇ 'ಮಮ ದೇಹ' ಇತಿ ಸ್ವಾತಂತ್ರ್ಯಾಭಿಮಾನೇನ ನ ತದಧೀನತ್ವಂ ಜೀವಸ್ಯ ಇತಿ ನ ಶಂಕ್ಯಂ, 'ಸ ಏವ ಜಾಗರಿತೇ ಸ್ಥಾಪಯತಿ' ಇತ್ಯಾದಿ–ಶ್ರುತಿವಿರೋಧಾತ್ ಇತಿ ದ್ಯೋತಯಿತುಮ್ ಇತ್ಯೇಕೇ।)

ಸೂತ್ರದಲ್ಲಿರುವ ಅಪಿ ಶಬ್ದದಿಂದ 'ಪರಾಭಿಧ್ಯಾನಾತ್' ಎಂಬ ಹಿಂದಿನ ಸೂತ್ರದಲ್ಲಿರುವ ಶಬ್ದವನ್ನು ಈ ಸೂತ್ರದಲ್ಲೂ ತೆಗೆದುಕೊಳ್ಳಬೇಕು, ಎಂದು ಸೂಚಿಸುತ್ತದೆ. ಅಥವಾ ನಿದ್ರಾವಸ್ಥೆ ಮಾತ್ರವಲ್ಲ ಈ ಸೂತ್ರದಲ್ಲಿ ಹೇಳಿರುವ ಎಚ್ಚರಾವಸ್ಥೆಯೂ ಕೂಡ ಭಗವದಧೀನ ಎಂದು ಅಪಿಶಬ್ದದ ಅಭಿಪ್ರಾಯ. ಸೂತ್ರದಲ್ಲಿ ತೃತೀಯಾರ್ಥದಲ್ಲಿ ಪಂಚಮೀವಿಭಕ್ತಿಯನ್ನು ಪ್ರಯೋಗಿಸಲಾಗಿದೆ. ದೇಹಯೋಗೇನ ವಾಸೋಽಪಿ= ದೇಹಾಭಿಮಾನಸಹಿತವಾದ ಸ್ಥಿತಿಯೂ ಪರಾಭಿಧ್ಯಾನಾತ್=ಭಗವಂತನ ಇಚ್ಛೆಯಿಂದ ಹೊರತು, ಕಾಲಾದಿಗಳಿಂದಲ್ಲ.

## ಅದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ :

ಶಾಂಕರ ಮತ್ತು ರಾಮಾನುಜ ಭಾಷ್ಯಗಳಲ್ಲಿ ಮೊದಲ ಆರು ಸೂತ್ರಗಳು ಸೇರಿ ಒಂದು ಅಧಿಕರಣ. ಅವುಗಳಲ್ಲಿ ಮೊದಲ ಎರಡು ಸೂತ್ರಗಳು ಪೂರ್ವಪಕ್ಷಸೂತ್ರಗಳು. ಸ್ವಾಪ್ನವಸ್ತುಗಳು ಸತ್ಯ ಎಂದು ಪೂರ್ವಪಕ್ಷ. ಉಳಿದ ನಾಲ್ಕು ಸೂತ್ರಗಳಲ್ಲಿ ಮಿಥ್ಯಾ ಎಂದು ಸಿದ್ಧಾಂತ.

**॥ ಸಂಧ್ಯೇ ಸೃಷ್ಟಿರಾಹ ಹಿ ॥** ಸಂಧ್ಯ ಎಂದರೆ ಸ್ವಪ್ನಾವಸ್ಥೆ. 'ಸಂಧ್ಯಂ ತೃತೀಯಂ

ಸ್ಥಾನಮ್(ಬೃ.4.3.9) ಎಂದು ಶಾಸ್ತ್ರಗಳಲ್ಲಿ ಸಂಧ್ಯಶಬ್ದವನ್ನು ಆ ಅರ್ಥದಲ್ಲಿ ಪ್ರಯೋಗಿಸಲಾಗಿದೆ. ಎಚ್ಚರದಲ್ಲಿ ಚಕ್ಷುರಾದಿಇಂದ್ರಿಯಗಳಿಂದ ಜ್ಞಾನ ಬರುತ್ತದೆ. ಸ್ವಪ್ನದಲ್ಲಿ ಇಂದ್ರಿಯಗಳಿಲ್ಲದೆಯೂ ರೂಪಾದಿಜ್ಞಾನ ಬರುತ್ತದೆ. ಮಲಗಿದ್ದಾಗ ನಾವು ನಿಷ್ಕ್ರಿಯರು. ಸ್ವಪ್ನದಲ್ಲಿ ಕ್ರಿಯಾಶೀಲರು. ಹೀಗೆ ಎಚ್ಚರ–ನಿದ್ರೆಗಳಿಗಿಂತ ವಿಲಕ್ಷಣವಾದ ಸ್ಥಿತಿಯಾದುದರಿಂದ ಸ್ವಪ್ನಾವಸ್ಥೆ 'ಸಂಧ್ಯ' ಎನಿಸುತ್ತದೆ. ಅಂತಹ ಸ್ವಪ್ನಾವಸ್ಥೆಯಲ್ಲಿ ಸತ್ಯವಾದ ಸೃಷ್ಟಿಯೇ ಇದೆ, ಎಂದು ಹೇಳಬೇಕಾಗುತ್ತದೆ. ಏಕೆಂದರೆ ಶ್ರುತಿಯೇ ಹೇಳುತ್ತದೆ—'ಅಥ ರಥಾನ್ ರಥಯೋಗಾನ್ ಪಥಃ ಸೃಜತೇ' ಎಂದು. ಆದ್ದರಿಂದ ಎಚ್ಚರದಂತೆ ಸ್ವಾಪ್ನಾವಸ್ಥೆಯ ಸೃಷ್ಟಿಯೂ ಸತ್ಯವಾಗಿದೆ.

**॥ ನಿರ್ಮಾತಾರಂ ಚೈಕೇ ಪುತ್ರಾದಯಶ್ಚ ॥** ಅಷ್ಟೇ ಅಲ್ಲ ಕಠಶಾಖೆಯವರು ಸ್ವಪ್ನಾವಸ್ಥೆಯಲ್ಲಿ 'ಕಾಮ'ಗಳ ನಿರ್ಮಾತೃ ಇದ್ದಾನೆ ಎಂದು ಹೇಳುತ್ತಾರೆ—'ಕಾಮಂ ಕಾಮಂ ಪುರುಷೋ ನಿರ್ಮಮಾಣಃ' ಎಂದು. ಈ ಶ್ರುತಿಯಲ್ಲಿ ಶ್ರುತವಾದ 'ಕಾಮ' ಎಂದರೆ ಕಾಮ್ಯವಾದ ಪುತ್ರಾದಿಗಳೇ. ನಚಿಕೇತನಿಗೆ ಯಮದೇವ 'ಶತಾಯುಷಃ ಪುತ್ರ–ಪೌತ್ರಾನ್ ವೃಣೀಷ್ವ' ಎಂದು ಪ್ರಾರಂಭಿಸಿ 'ಕಾಮಾನಾಂ ತ್ವಾ ಕಾಮಭಾಜಂ ಕರೋಮಿ' ಎಂದಿರುತ್ತಾನೆ. ಆದ್ದರಿಂದ ಪ್ರಕೃತವಾದ ಪುತ್ರಾದಿಕಾಮ್ಯವಸ್ತುಗಳೇ ಅಲ್ಲಿ ಕಾಮಪದದ ಅರ್ಥ. ಅವುಗಳಿಗೆ ಜೀವನು ನಿರ್ಮಾತೃ ಎಂದು ಉಪನಿಷತ್ತಿನಲ್ಲಿ ಹೇಳಿರುವುದರಿಂದ ಸ್ವಾಪ್ನಪದಾರ್ಥಗಳು ಸತ್ಯವಾಗಿವೆ.

**॥ ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಾತ್ ॥** ಸೂತ್ರದ ತುಶಬ್ದವು ಹಿಂದಿನೆರಡು ಸೂತ್ರಗಳಲ್ಲಿ ಹೇಳಿದ ವಿಷಯವನ್ನು ನಿರಾಕರಿಸುತ್ತದೆ. ಅಂದರೆ ಸ್ವಾಪ್ನವಸ್ತುಗಳು ಸತ್ಯವಾದವುಗಳಲ್ಲ. ಸ್ವಾಪ್ನವಸ್ತುಗಳ ಸೃಷ್ಟಿ ಮಾಯಾಮಯ, ಪರಮಾರ್ಥಲೇಶವೂ ಅಲ್ಲಿಲ್ಲ. ಅವುಗಳು ಕಾರ್ತ್ಸ್ನ್ಯೇನ=ಪಾರಮಾರ್ಥಿಕ ವಸ್ತುಗಳಿಗೆ ಇರಬೇಕಾದ ಧರ್ಮಗಳಿಂದ ಕಾಣುತ್ತಿಲ್ಲ. ದೇಶ–ಕಾಲ–ನಿಮಿತ್ತಗಳ ಸಂಪತ್ತಿ, ಅಬಾಧ ಇವು ಪಾರಮಾರ್ಥಿಕವಸ್ತುಗಳಲ್ಲಿ ಇರಬೇಕಾದ ಧರ್ಮಗಳು. ದೇಶಸಂಪತ್ತಿ ಇಲ್ಲ, ರಥವು ಕಂಡರೆ ಅದಕ್ಕೆ ಚಲಿಸಲು ಬೇಕಾದ ಮಾರ್ಗ ಅಲ್ಲಿಲ್ಲ. ದೇಹದ ಒಳಗೆ ಅಷ್ಟು ಅವಕಾಶವೇ ಇಲ್ಲ. ರಾತ್ರಿ ಮಲಗಿದವನು ಸ್ವಪ್ನದಲ್ಲಿ ಹಗಲನ್ನು ನೋಡುತ್ತಾನೆ. ಕಾಲಸಂಪತ್ತಿ ಇಲ್ಲ, ನಿಮಿತ್ತಗಳೂ ಇಲ್ಲ, ರಥವನ್ನು ನೋಡುವ ಕಣ್ಣು ಮುಚ್ಚಿಕೊಂಡಿದೆ. ಎದ್ದಕೂಡಲೇ 'ನಾನು ನೋಡಿದ್ದು ಒಂದೂ ಇಲ್ಲ' ಎಂದು ಬಾಧವು ಇದೆ. ಆದ್ದರಿಂದ ಸ್ವಾಪ್ನ ಅಸತ್ಯ.

**॥ ಸೂಚಕಶ್ಚ ಹಿ ಶ್ರುತೇರಾಚಕ್ಷತೇ ಚ ತದ್ವಿದಃ ॥** ಸ್ವಪ್ನದರ್ಶನವು ಯದ್ಯಪಿ ಶುಭಾಶುಭ ಸೂಚಕ. ಸ್ವಪ್ನಾಧ್ಯಾಯಬಲ್ಲವರು ಅದನ್ನು ಹೇಳುತ್ತಾರೆ ಕೂಡಾ– 'ಕುಂಜರಾರೋಹಣಾದೀನಿ ಸ್ವಪ್ನೇ ಧನ್ಯಾನಿ। ಖರಯಾನಾದೀನಿ ಅಧನ್ಯಾನಿ।' ಎಂದು. ಆದರೂ ಸ್ವಾಪ್ನಜ್ಞಾನವು ಸೂಚಕ, ಅದು ಸತ್ಯ. ವಸ್ತುಅಸತ್ಯ. (ದರ್ಶನಂ ಸೂಚಕಂ, ತಚ್ಚ ಸ್ವರೂಪೇಣ ಸತ್। ಅಸತ್ತು ದೃಶ್ಯಮ್। ಅತ ಏವ ಸ್ತ್ರೀದರ್ಶನ ಸ್ವರೂಪಸಾಧ್ಯಾಃ ಧಾತುವಿಸರ್ಗಾದಯಃ ಜಾಗ್ರದವಸ್ಥಾಯಾಮ್ ಅನುಭೂಯಂತೇ। ಸ್ತ್ರೀಸಾಧ್ಯಾಸ್ತು ಮಾಲ್ಯ–ವಿಲೇಪನ–ದಂತಕ್ಷಯಾದಯಃ ನಾನುವರ್ತಂತೇ–ಭಾಮತೀ।)

**॥ ಪರಾಭಿಧ್ಯಾನಾತ್ತು ತಿರೋಹಿತಂ ತತೋ ಹ್ಯಸ್ಯ ಬಂಧವಿಪರ್ಯಯೌ ॥** ಜೀವನು ಪರಮಾತ್ಮನೆಂಬ ಅಗ್ನಿಯ ಕಿಡಿ. ಕಿಡಿ ಮತ್ತು ಬೆಂಕಿಗಳ ಶಕ್ತಿ ಏಕರೂಪವಾದುದು. ಆದ್ದರಿಂದ ಜೀವನ ಜ್ಞಾನೈಶ್ವರ್ಯಶಕ್ತಿಯಿಂದಲೇ ಸ್ವಾಪ್ನವಸ್ತುಗಳ ಸೃಷ್ಟಿಯಾಗಲಿ, ಎನ್ನುವಂತಿಲ್ಲ. ಜೀವನು ಈಶನ ಅಂಶನಾದರೂ ಅವನಷ್ಟು ಶಕ್ತಿ ಇವನಲ್ಲಿ ತಿರೋಹಿತವಾಗಿದೆ. ತತಃ=ಆ ಈಶ್ವರನಿಂದಾಗಿಯೇ ಅಸ್ಯ=ಈ ಜೀವನಿಗೆ ಬಂಧ–ವಿಪರ್ಯಯೌ=ಬಂಧ ಮತ್ತು ಮೋಕ್ಷಗಳು ಆಗುತ್ತವೆ. ಈಶನ ಅಜ್ಞಾನದಿಂದ ಬಂಧ, ಜ್ಞಾನದಿಂದ ಮೋಕ್ಷ. ಅವನಿಗೆ ತನ್ನ ಜ್ಞಾನವಾದರೋ, ಪರಾಭಿಧ್ಯಾನಾತ್= ಪರಮಾತ್ಮನ ಧ್ಯಾನದಿಂದಾಗಿ ಆಗುತ್ತದೆ. ಆದ್ದರಿಂದ ಸ್ವಾಪ್ನವಸ್ತುಗಳಿಗೆ ಕರ್ತೃಗಳೇ ಇಲ್ಲ. ಅವು ಅಸತ್ಯವಾಗಿವೆ.

**॥ ದೇಹಯೋಗಾದ್ ವಾ ಸೋಽಪಿ ॥** ಸೋಽಪಿ=ಜೀವನ ಜ್ಞಾನೈಶ್ವರ್ಯಗಳ ತಿರೋಭಾವವು ದೇಹಯೋಗಾತ್=ದೇಹೇಂದ್ರಿಯಾದಿ ಸಂಪರ್ಕದಿಂದ ಆಗಿದೆ. ಭಸ್ಮಾಚ್ಛಾದಿತವಾದ ಬೆಂಕಿಯಂತೆ. (ದ್ವೈತಭಾಷ್ಯದಲ್ಲಿ 'ದೇಹಯೋಗಾತ್– ವಾಸೋಽಪಿ' ಎಂದು ಪದವಿಭಾಗ)

**ರಾಮಾನುಜ ಭಾಷ್ಯದಲ್ಲಿ** ಅಧಿಕರಣ ರಚನೆ ಮತ್ತು ಸೂತ್ರಗಳ ಅರ್ಥ ಶಾಂಕರಭಾಷ್ಯದಂತೆಯೇ ಆದರೂ ಸ್ವಾಪ್ನವಸ್ತುಗಳು ವಾಸನಾಮಯವಾಗಿವೆ. ಮೊದಲ ಎರಡು ಸೂತ್ರಗಳು ಪೂರ್ವಪಕ್ಷಸೂತ್ರಗಳು. ಇತರ ನಾಲ್ಕು ಸೂತ್ರಗಳು ಸಿದ್ಧಾಂತ ಸೂತ್ರಗಳು. ಎರಡು ಭಾಷ್ಯಗಳಂತೆ 'ಸೂಚಕಶ್ಚ' ಎಂಬ ಸೂತ್ರ ನಾಲ್ಕನೆಯ ಸೂತ್ರವಾದರೆ ರಾಮಾನುಜಭಾಷ್ಯದಲ್ಲಿ ಅದು ಕೊನೆಯ ಸೂತ್ರ. ಸ್ವಾಪ್ನವಸ್ತುಗಳಿಗೆ ಜೀವನೇ ಸೃಷ್ಟಿಕರ್ತಾ ಎಂದು ಪೂರ್ವಪಕ್ಷ, ಭಗವಂತ ಕರ್ತಾ ಎಂದು ಸಿದ್ಧಾಂತ. 'ಮಾಯಾಮಾತ್ರಂ=ಪರಮಪುರುಷಸೃಷ್ಟಂ, ಮಾಯಾಶಬ್ದೋ ಆಶ್ಚರ್ಯವಾಚೀ'

(ರಾ.ಭಾ.) ಇಂತಹ ಆಶ್ಚರ್ಯಕರವಾದ ಸೃಷ್ಟಿ ಪರಮಾತ್ಮನಿಗೆ ಮಾತ್ರ ಸಾಧ್ಯ. ಜೀವನು ಸ್ವಭಾವತಃ ಸತ್ಯಸಂಕಲ್ಪನಾದರೂ ಸಂಸಾರದಶಾದಲ್ಲಿ 'ಅನಭಿವ್ಯಕ್ತಸ್ವರೂಪ'ನಾದ್ದರಿಂದ ಅವನಿಗೆ ಇಂತಹ ವಸ್ತುಗಳನ್ನು ಸೃಷ್ಟಿಮಾಡುವ ಸಾಮರ್ಥ್ಯ ಇಲ್ಲ.

ಜೀವನ ರೂಪವೂ ಪಾಪರಹಿತವಾದ ಶುದ್ಧರೂಪ. ಅವನೂ ಈಶನಂತೆ ಸತ್ಯಸಂಕಲ್ಪ. ಆದರೆ, ಅದರ ಪ್ರಕಾಶವು ಸಂಸಾರದಶಾದಲ್ಲಿ ಆಗುವುದಿಲ್ಲ. ಪರಾಭಿಧ್ಯಾನಾತ್=ಪರಮಪುರುಷನ ಸಂಕಲ್ಪದಿಂದ ಅದು ತಿರೋಹಿತವಾಗಿದೆ. ತತಃ= ಅವನ ಸಂಕಲ್ಪದಿಂದಾಗಿಯೇ ಜೀವನಿಗೆ ಬಂಧ ಮತ್ತು ಮೋಕ್ಷಗಳು ಆಗುತ್ತವೆ. ಸೋಽಪಿ=ಆ ತಿರೋಧಾನವೂ ದೇಹಯೋಗಾದ್ವಾ=ಸೂಕ್ಷ್ಮವಾದ ಅಚಿತ್‌ಶರೀರ ಸಂಪರ್ಕದಿಂದಾಗುತ್ತದೆ. ಹೀಗೆ ಅನಭಿವ್ಯಕ್ತಸ್ವರೂಪನಾದ ಕಾರಣ ಜೀವನು ಸ್ವಾಪ್ನವಸ್ತುಗಳ ನಿರ್ಮಾತೃ ಅಲ್ಲ. ಇನ್ನೂ ಒಂದು ಕಾರಣವಿದೆ—ಸ್ವಪ್ನವು ಶುಭದಂತೆ ಅಶುಭಕ್ಕೂ ಸೂಚಕ. ಜೀವನೇ ಕರ್ತನಾದರೆ ಅಶುಭಸೂಚಕವಾದ ಸ್ವಪ್ನವನ್ನೇಕೆ ಸೃಷ್ಟಿ ಮಾಡಬೇಕು. ಆದ್ದರಿಂದಲೂ ಜೀವನು ಸ್ವಪ್ನಕರ್ತನಲ್ಲ.

ಹೀಗೆ ಈ ಅಧಿಕರಣದಲ್ಲಿ ಸ್ವಾಪ್ನವಸ್ತುಗಳ ಸತ್ಯತೆಯನ್ನು ಸಿದ್ಧವತ್‌ಕೃತ್ಯ ಅದಕ್ಕೆ ಕರ್ತೃ ಯಾರು? ಎಂದು ವಿಚಾರ. ಆರಂಭದ ಎರಡು ಸೂತ್ರಗಳಿಂದ ಜೀವನೇ ಕರ್ತೃ ಎಂದು ಪೂರ್ವಪಕ್ಷ. ಇತರ ನಾಲ್ಕು ಸೂತ್ರಗಳಲ್ಲಿ ಅದನ್ನು ನಿರಾಕರಿಸಿ ಪರಮಾತ್ಮನೇ ಕರ್ತೃ ಎಂದು ಸಿದ್ಧಾಂತ. ಇದು ರಾಮಾನುಜಭಾಷ್ಯದ ವ್ಯಾಖ್ಯಾನ.

**ಶೇಷತಾತ್ಪರ್ಯಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ**—ಇದು ಭಕ್ತಿಪಾದ. ಪರಮಾತ್ಮನಲ್ಲಿ ಭಕ್ತಿ ಬರುವುದಕ್ಕೆ ಪೋಷಕವಾದ ವಿಷಯವನ್ನು ಈ ಪಾದದಲ್ಲಿ ಹೇಳಬೇಕು. ಸ್ವಪ್ನಾಸತ್ಯತ್ವವಿಚಾರ ಇದಕ್ಕೆ ಪೋಷಕವಲ್ಲ. ಆದ್ದರಿಂದ ತತ್ಪರತಯಾ ಸೂತ್ರವ್ಯಾಖ್ಯಾನ ಅಸಂಗತ. ಶಾಂಕರಭಾಷ್ಯದಲ್ಲಿ ಹೀಗೆ ಸಂಗತಿಯನ್ನು ಹೇಳಲಾಗಿದೆ—

ಅತಿಕ್ರಾಂತೇ ಪಾದೇ ಪಂಚಾಗ್ನಿವಿದ್ಯಾಮುದಾಹೃತ್ಯ
ಜೀವಸ್ಯ ಸಂಸಾರಗತಿಪ್ರಭೇಧಃ ಪ್ರಪಂಚಿತಃ ।
ಇದಾನೀಂ ತು ತಸ್ಯ ಅವಸ್ಥಾಪ್ರಭೇದಪ್ರಕಾರಃ ಪ್ರಪಂಚ್ಯತೇ ॥

''ಹಿಂದಿನ ಪಾದದಲ್ಲಿ ದ್ಯು ಮೊದಲಾದ ಪಂಚಾಗ್ನಿ ವಿದ್ಯೆಯನ್ನು ಉಲ್ಲೇಖಿಸಿ ಜೀವನಿಗೆ ಸಂಸಾರದಲ್ಲಿ ಆಗುವ ವಿಭಿನ್ನ ಗತಿಗಳನ್ನು ಹೇಳಲಾಗಿದೆ. ಈ ಅಧಿಕರಣದಲ್ಲಿ ಜೀವನಿಗೆ ಆಗುವ ಸ್ವಪ್ನಾದಿ ಅವಸ್ಥಾಪ್ರಭೇದವನ್ನು ಹೇಳಲಾಗಿದೆ.''

ಇದು ಸಾಧನಾಧ್ಯಾಯ ಎಂದು ಸರ್ವಸಮ್ಮತ. ಪರಮಾತ್ಮಪ್ರಾಪ್ತಿಗೆ ಅಥವಾ ಮೋಕ್ಷಕ್ಕೆ ಸಾಧನ ವೈರಾಗ್ಯ, ಭಕ್ತ್ಯಾದಿಗಳು. ವೈರಾಗ್ಯವನ್ನು ಮೊದಲ ಪಾದದಲ್ಲಿ ಹೇಳಲಾಗಿದೆ. ಇಲ್ಲಿ ಭಕ್ತಿಯ ಬಗ್ಗೆ ಹೇಳಬೇಕು. ಜೀವನ ಅವಸ್ಥಾಭೇದದ ಬಗ್ಗೆ ಹೇಳುವುದು ಅಸಂಗತ.

**ನಾಲ್ಕನೆಯ ಸೂತ್ರಕ್ಕೆ ಭಾಷ್ಯಕಾರರ ಪೀಠಿಕೆ ಹೀಗಿದೆ—**

ಮಾಯಾಮಾತ್ರತ್ವಾತ್ ನ ಕಶ್ಚಿತ್ ಸ್ವಪ್ನೇ ಪರಮಾರ್ಥಗಂಧೋऽಸ್ತೀತಿ। ನೇತ್ಯುಚ್ಯತೇ। ''ಸ್ವಪ್ನವು ಮಾಯಾಮಾತ್ರ=ಕಲ್ಪಿತ. ಅಂದ ಮಾತ್ರಕ್ಕೆ ಅದರಲ್ಲಿ ಪಾರಮಾರ್ಥಿಕತ್ವದ ಸುಳಿವೇ ಇಲ್ಲವೆ ? ಇಲ್ಲ, ಎಂದು ಈ ಸೂತ್ರದಲ್ಲಿ ಹೇಳಲಾಗಿದೆ.'' ಆದರೆ, ಈ ಸೂತ್ರದಲ್ಲಿ 'ಸೂಚಕತ್ವವನ್ನು' ಸ್ವಪ್ನಕ್ಕೆ ಹೇಳುವ ಮೂಲಕ ಪರಮಾರ್ಥ ಗಂಧವನ್ನು ಹೇಳಲಾಗಿದೆ. ಇದು ಅಸಂಗತ. ಅದಕ್ಕೆ ಭಾಷ್ಯಕಾರರು ಹೀಗೆ ಸಾಂಗತ್ಯವನ್ನು ತೋರಿಸಿದ್ದಾರೆ—ಸೂಚಕವಾದುದು ಸ್ತ್ರೀದರ್ಶನ ಮಿಥ್ಯಾ, ಸೂಚ್ಯವಾದ ಸಮೃದ್ಧಿ ಮಾತ್ರ ಸತ್ಯ. ಆದರೆ ಭಾಮತೀಟೀಕೆ ಇದಕ್ಕೆ ವಿರುದ್ಧವಾಗಿ ದರ್ಶನವು ಸತ್ಯ. ದೃಶ್ಯವು ಮಾತ್ರ ಮಿಥ್ಯಾ ಎಂದು ಹೇಳುತ್ತದೆ. ಭಾಷ್ಯಟೀಕೆಗಳಿಗೆ ಇಲ್ಲಿ ವಿರೋಧ ಸ್ಪಷ್ಟವಾಗಿದೆ.

**ರಾಮಾನುಜಭಾಷ್ಯ ವಿಮರ್ಶೆ**–ಸ್ವಾಪ್ನಪದಾರ್ಥಗಳಿಗೆ ಜೀವನು ಕರ್ತನೋ ಬ್ರಹ್ಮನೋ ಎಂದು ಸಂದೇಹಿಸಿ ಜೀವನೇ ಕರ್ತಾ ಎಂದು ರಾಮಾನುಜಭಾಷ್ಯದಲ್ಲಿ ಪೂರ್ವಪಕ್ಷ. ಇದಕ್ಕೆ ಸೂತ್ರಕಾರರು ಪರಮಪುರುಷನು ಕರ್ತಾ ಎಂದು ಉತ್ತರಹೇಳಬೇಕು. 'ಮಾಯಾಮಾತ್ರಂ' ಎಂಬ ಉತ್ತರ ಸಂಗತವಾಗುವುದು ಹೇಗೆ? ಮಾಯಾಶಬ್ದಕ್ಕೆ ಆಶ್ಚರ್ಯ ಎಂಬ ಅರ್ಥವನ್ನು ಮಾಡಲಾಗಿದೆ. ಆದ್ದರಿಂದ ಈ ಪೂರ್ವಪಕ್ಷ ಸಿದ್ಧಾಂತಗಳು ಸೂತ್ರಕ್ಕೆ ಅನುಗುಣವಲ್ಲ. ಸ್ವಾಪ್ನವಸ್ತು ಆಶ್ಚರ್ಯಕರವಾದ ಕಾರಣ ಅದು ಪರಮಪುರುಷನ ಸೃಷ್ಟಿಯೇ ಆಗಿದೆ, ಹೀಗೆ ಹೇತುಗರ್ಭ ವಿಶೇಷಣವಾಚಕ 'ಮಾಯಾಮಾತ್ರಂ' ಎಂಬ ಪದ. ಈ ಸಮಾಧಾನವೂ ಯುಕ್ತವಲ್ಲ. ಆಗ, ಕಾರ್ತ್ಸ್ನ್ಯೇನ ಅನಭಿವ್ಯಕ್ತಸ್ವರೂಪತ್ವಾತ್, ಎಂಬ ಪಂಚಮ್ಯಂತವಾದ ಹೇತುವಾಚಕಪದ ವ್ಯರ್ಥವಾದೀತು.

**ಇಲ್ಲಿಗೆ ದೇಹಯೋಗಾಧಿಕರಣವು ಮುಗಿಯಿತು.**

## ೪. ತದಭಾವಾಧಿಕರಣಮ್

### ।। ಓಂ ತದಭಾವೋ ನಾಡೀಷು ತಚ್ಛ್ರುತೇರಾತ್ಮನಿ ಹ ಓಂ ।। ೭ ।।

**ಜಾಗ್ರತ್ಸ್ವಪ್ನಾಭಾವಃ ಸುಪ್ತಿರ್ನಾಡೀಸ್ಥೇ ಪರಮಾತ್ಮನಿ ।**

**'ಆಸು ತದಾ ನಾಡೀಷು ಸೃಪ್ತೋ ಭವತಿ' (ಛಾಂ.ಉ. 8.6.3), 'ಸತಾ ಸೋಮ್ಯ ತದಾ ಸಂಪನ್ನೋ ಭವತಿ' (ಛಾಂ.ಉ. 6.8.1) ಇತಿ ಶ್ರುತೇಃ ।।**

ಜಾಗ್ರತ್ ಮತ್ತು ಸ್ವಪ್ನ ಈ ಎರಡು ಅವಸ್ಥೆಗಳ ಅಭಾವ ಎಂದರೆ ನಿದ್ರಾವಸ್ಥೆ. ಅದು ಸುಷುಮ್ನಾನಾಡಿಯಲ್ಲಿರುವ ಪರಮಾತ್ಮನಲ್ಲಿ. ಛಾಂದೋಗ್ಯಶ್ರುತಿ ಹೇಳುತ್ತದೆ. 'ಜೀವನು ತದಾ=ಸುಪ್ತಿಕಾಲದಲ್ಲಿ ಆಸು ನಾಡೀಷು=ಪ್ರತಿಯೊಂದು ದೇಹಗಳಲ್ಲಿರುವ ಸುಷುಮ್ನಾನಾಡಿಗಳಲ್ಲಿ ಸೃಪ್ತಃ=ಪ್ರಾಪ್ತನಾಗುತ್ತಾನೆ. (ಇದರಿಂದ ನಿದ್ರಾಕಾಲದಲ್ಲಿ ನಾಡೀಪ್ರಾಪ್ತಿ ತಿಳಿಯುತ್ತದೆ) 'ತದಾ=ನಿದ್ರಾವಸ್ಥೆಯಲ್ಲಿ ಸತಾ=ಪರಮಾತ್ಮನೊಂದಿಗೆ ಸಂಪನ್ನಃ=ಸೇರಿದವನಾಗಿ ಭವತಿ=ಆಗುತ್ತಾನೆ' (ಇದರಿಂದ ಭಗವತ್ಪ್ರಾಪ್ತಿಯು ತಿಳಿಯುತ್ತದೆ.)

**ವಿವರಣೆ**—ಸೂತ್ರದ ತದಭಾವಃ ಎಂಬ ಪದಕ್ಕೆ ಭಾಷ್ಯದಲ್ಲಿ 'ಜಾಗ್ರತ್-ಸ್ವಪ್ನಾಭಾವ' ಎಂದು ಅರ್ಥವನ್ನು ತಿಳಿಸಲಾಗಿದೆ. ನಿದ್ರಾವಸ್ಥೆ ಎಂದು ಅರ್ಥ. ಸುಪ್ತಿ ಎಂದು ಹೇಳದೆ ಹೀಗೆ ಅದರ ಸ್ವರೂಪವನ್ನು ತಿಳಿಸಿರುವುದರಿಂದ 'ಸಕಲ ಇಂದ್ರಿಯಗಳು ನಿಷ್ಕ್ರಿಯವಾಗಿರುವುದೇ ಸುಪ್ತಿ ಎಂದು ಸಿದ್ಧವಾಗುತ್ತದೆ. ನಾಡೀಷು ಆತ್ಮನಿ, ಎಂದರೆ ನಾಡಿಯಲ್ಲಿರುವ ಪರಮಾತ್ಮನಲ್ಲಿ ಎಂದು ಅರ್ಥ. ಒಂದು ದೇಹದಲ್ಲಿ ಸುಷುಮ್ನಾ ನಾಡಿಯು ಒಂದೇ ಆದರೂ ಅನೇಕ ದೇಹಗಳ ವಿವಕ್ಷೆಯಿಂದ 'ನಾಡೀಷು' ಎಂದು ಬಹುವಚನವನ್ನು ಪ್ರಯೋಗಿಸಲಾಗಿದೆ. ಅಥವಾ ಒಂದು ದೇಹದಲ್ಲೂ ಹಲವು ಸುಷುಮ್ನಾನಾಡಿಗಳಿವೆ, ಎಂದೂ ಹೇಳಬಹುದು.

### ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**।। ಓಂ ತದಭಾವೋ ನಾಡೀಷು ತಚ್ಛ್ರುತೇರಾತ್ಮನಿ ಹ ಓಂ ।।** (ಅತ್ರ ಈಶಸ್ಯ ಸುಪ್ತಪ್ರಾಪ್ಯತ್ವಮಹಿಮಾ ಉಚ್ಯತೇ । ಅಸ್ಯೇತ್ಯಸ್ತಿ । ಜೀವಸ್ಯ ತದಭಾವಃ= ಪ್ರಸ್ತುತಜಾಗ್ರತ್-ಸ್ವಪ್ನಾಭಾವಃ, ಸುಪ್ತಿರಿತಿ ಯಾವತ್, ನಾಡೀಷು ಆತ್ಮನಿ=ನಾಡೀಸ್ಥ-

ಪರಮಾತ್ಮನಿ । ಕುತಃ? ತಚ್ಛ್ರುತೇಃ-ತಸ್ಯ=ನಾಡೀಸ್ಥತ್ವಸ್ಯ ಆತ್ಮಸ್ಥತ್ವಸ್ಯ ಚ 'ಆಸು ತದಾ ನಾಡೀಷು ಸುಪ್ತೋ ಭವತಿ' 'ಸತಾ ಸೋಮ್ಯ ತದಾ ಸಂಪನ್ನೋ ಭವತಿ' ಇತಿ ಶ್ರವಣಾದಿತ್ಯರ್ಥಃ । ಶ್ರುತಿದ್ವಯನಿರ್ವಾಹಸ್ಪಷ್ಟೀಕರಣಾಯ 'ನಾಡೀಸ್ಥ' ಇತ್ಯನುಕ್ತ್ವಾ ವಿಭಜ್ಯೋಕ್ತಿರಿತಿ ಕೇಚಿತ್ । ಸುಪ್ತಿರಿತಿ ವಾಚ್ಯೇ ತದಭಾವ ಇತ್ಯುಕ್ತಿಃ ಸುಪ್ತಿಸ್ವರೂಪಪ್ರದರ್ಶನಾಯ । ತೇನ ಬಾಹ್ಯಾಂತರಿಂದ್ರಿಯಾಣಾಮ್ ಉಪರತಿರೇವ, ನ ಜ್ಞಾನಮಾತ್ರಸ್ಯ ಇತಿ । ಸ್ವರೂಪಜ್ಞಪ್ತ್ಯಾ ಸ್ವರೂಪಸುಖಭೋಗಃ ತದಾ ಯುಕ್ತ ಇತಿ ಬೋಧ್ಯಮ್ । ನಾಡೀಷು ಇತಿ ಬಹುವಚನಂ ಶ್ರುತ್ಯನುಸಾರಾತ್ । ಶ್ರುತೌ ಚ ಪ್ರತಿದೇಹಂ ತದ್‌ಬಾಹುಲ್ಯಾದಿತಿ ಜ್ಞೇಯಮ್ । ಹೇತಿ—

ತನ್ನಾಡೀಸಂಸ್ಥಿತಂ ವಿಷ್ಣುಂ ಮಧ್ಯೇ ಜೀವಃ ಪ್ರಪದ್ಯತೇ ।

ಇತ್ಯಾದಿ ಪ್ರಸಿದ್ಧಿದ್ಯೋತಕಮ್ ಇತಿ ಭಾತಿ ।)

ತದಭಾವಃ=ಎಚ್ಚರ ಮತ್ತು ಸ್ವಪ್ನಗಳ ಅಭಾವ ಎಂದರೆ ನಿದ್ರೆಯು ನಾಡೀಷು ಆತ್ಮನಿ=ಸುಷುಮ್ನಾನಾಡೀಸ್ಥನಾದ ಪರಮಾತ್ಮನಲ್ಲಿ. ತತ್‌ಶ್ರುತೇಃ, ತಸ್ಯ=ಜೀವನು ನಾಡೀಸ್ಥಿತನಾಗುತ್ತಾನೆ, ಆತ್ಮನಲ್ಲಿ ಇರುತ್ತಾನೆ, ಎಂದು ಹೇಳುವುದಕ್ಕೆ ಶ್ರುತೇಃ=ಶ್ರುತಿ ಇರುವ ಕಾರಣದಿಂದ.

ಸೂತ್ರದಲ್ಲಿ 'ನಾಡೀಸ್ಥ ಆತ್ಮನಿ' ಎಂದು ಹೇಳದೆ 'ನಾಡೀಷು ಆತ್ಮನಿ' ಎಂದು ಹೇಳಿರುವ ಉದ್ದೇಶ ಎರಡು ಶ್ರುತಿಗಳ ಸಾಂಗತ್ಯವನ್ನು ತಿಳಿಸುವುದು. ಒಂದು ಶ್ರುತಿ ಪರಮಾತ್ಮನಲ್ಲಿ ಸುಪ್ತಿ, ಎಂದು ಹೇಳುತ್ತದೆ. ಇನ್ನೊಂದು ಶ್ರುತಿ, ನಾಡಿಯಲ್ಲಿ ಎನ್ನುತ್ತದೆ. ನಾಡೀಸ್ಥಪರಮಾತ್ಮನಲ್ಲಿ ಎಂದು ಹೇಳಿದಾಗ ಎರಡೂ ಸಂಗತವಾಗುತ್ತವೆ. ಇದರಿಂದ ನಾಡಿಯಲ್ಲೂ ಹೌದು, ಪರಮಾತ್ಮನಲ್ಲೂ ಹೌದು, ಎಂದು ಶ್ರುತಿಗಳ ವಿರೋಧವನ್ನು ಪರಿಹರಿಸಿದಂತಾಗುವುದು.

ಇಲ್ಲಿಗೆ ತದಭಾವಾಧಿಕರಣವು ಮುಗಿಯಿತು.

## ೫. ಪ್ರಬೋಧಾಧಿಕರಣಮ್

**॥ ಓಂ ಅತಃ ಪ್ರಬೋಧೋಽಸ್ಮಾತ್ ಓಂ ॥ ೮ ॥**

**ಯತಸ್ತಸ್ಮಿನ್ ಸುಪ್ತಿಃ ।**

**'ಏಷ ಏವ ಸುಪ್ತಂ ಪ್ರಬೋಧಯತ್ಯೇತಸ್ಮಾಜ್ಜೀವ ಉತ್ತಿಷ್ಠತ್ಯೇಷ ಪ್ರಮಾತ್ಯೈಷ ಪರಮಃ' ಇತಿ ಹಿ ಕೌಂಡಿನ್ಯಶ್ರುತಿಃ ॥**

**ಇತಿ ಪಂಚಮಮಧಿಕರಣಮ್ ॥**

ಯಾವ ಕಾರಣದಿಂದ ಪರಮಾತ್ಮನಲ್ಲಿ ಜೀವನಿಗೆ ಸುಪ್ತಿಯೋ ಅತಃ= ಅದರಿಂದಾಗಿಯೇ ಅಸ್ಮಾತ್=ಪರಮಾತ್ಮ ಇಚ್ಛೆಯಿಂದಲೇ ಪ್ರಬೋಧಃ=ಎಚ್ಚರವೂ ಆಗುತ್ತದೆ. ಕೌಂಡಿನ್ಯ ಶ್ರುತಿಯು ಇದನ್ನು ಹೇಳುತ್ತದೆ—ಏಷ ಏವ=ಈ ಪರಮಾತ್ಮನೇ ಸುಪ್ತಂ=ಮಲಗಿರುವವನನ್ನು ಪ್ರಬೋಧಯತಿ=ಎಬ್ಬಿಸುತ್ತಾನೆ, ಏತಸ್ಮಾತ್= ಇವನಿಂದಲೇ ಜೀವಃ=ಜೀವನು ಉತ್ತಿಷ್ಠತಿ=ಎದ್ದೇಳುತ್ತಾನೆ, ಏಷಃ=ಇವನೇ ಪ್ರಮಾತಾ= ಸರಿಯಾದ ಜ್ಞಾನ ಇರುವವನು, ಏಷಃ=ಇವನೇ ಪರಮಃ=ಸರ್ವೋತ್ತಮನು.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಓಂ ಅತಃ ಪ್ರಬೋಧೋऽಸ್ಮಾತ್ ಓಂ ॥** (ಅತ್ರ ಈಶಸ್ಯ ಸುಪ್ತಪ್ರಬೋಧಕತ್ವಮ್ ಉಚ್ಯತೇ। ಅಸ್ಯೈತ್ಯಸ್ತಿ। ಜೀವಸ್ಯ ಸುಪ್ತಿಪ್ರಬೋಧಃ ಅಸ್ಮಾತ್=ಪ್ರಕೃತಾತ್ ಪರಮಾತ್ಮನಃ ಭವತಿ। ಕುತಃ ? ಅತಃ=ಜೀವಸ್ಯಾತ್ಮನ್ಯೇವ ಸುಪ್ತತ್ವಾತ್ ಇತ್ಯರ್ಥಃ। ಈಶೇನ ಸ್ವಾಂತರ್ನಿವೇಶಿತಸ್ಯ ತತ್ಪ್ರೇರಣಾಂ ವಿನಾ ಉದ್‌ಬೋದ್ಧುಮ್ ಅಶಕ್ಯತ್ವಾತ್ ಇತಿ ಭಾವಃ। ಪ್ರಬೋಧ ಇತ್ಯುಕ್ತ್ಯಾ 'ಏಷ ಏವ ಸುಪ್ತಂ ಪ್ರಬೋಧಯತಿ' ಇತ್ಯಾದಿ ಶ್ರುತಿಃ ಸೂಚ್ಯತೇ। ಭೇರೀತಾಡನಾದೇಃ ಪ್ರಬೋಧಕತ್ವದೃಷ್ಟಿಃ ನಿಮಿತ್ತತ್ವಮಾತ್ರವಿಷಯಾ, ಇತಿ ಭಾವಃ।)

ಜೀವನಿಗೆ ಪ್ರಬೋಧಃ=ನಿದ್ರೆಯಿಂದ ಎಚ್ಚರವೂ ಅಸ್ಮಾತ್=ಪರಮಾತ್ಮನಿಂದಲೇ. ಏಕೆಂದರೆ, ಅತಃ=ಅವನಲ್ಲೇ ನಿದ್ರೆಯಾದ ಕಾರಣ. ನಿದ್ರಾವಸ್ಥೆಯಲ್ಲಿ ಪರಮಾತ್ಮನ ಒಳಗೆ ಸೇರಿಕೊಂಡ ಜೀವ ಏಳಬೇಕಾದರೆ ಅವನೇ ಇಚ್ಛೆಮಾಡಬೇಕು. ಹೊರಗಿನ ಶಬ್ದಗಳು ಎಚ್ಚರಕ್ಕೆ ಒಂದು ನಿಮಿತ್ತಮಾತ್ರ.

## ಅದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

ಶಾಂಕರಭಾಷ್ಯದಲ್ಲಿ ಈ ಎರಡು ಸೂತ್ರಗಳು ಸೇರಿ ಒಂದು ಅಧಿಕರಣ.

**॥ ತದಭಾವೋ ನಾಡೀಷು ತಚ್ಛ್ರುತೇರಾತ್ಮನಿ ಹ ॥** ತದಭಾವಃ= ಸ್ವಪ್ನದರ್ಶನಾಭಾವವು ಅಂದರೆ ನಿದ್ರಾವಸ್ಥೆಯು ನಾಡೀಷು-ಆತ್ಮನಿ ಚ=ನಾಡಿಗಳಲ್ಲಿ ಮತ್ತು ಬ್ರಹ್ಮನಲ್ಲಿ ಎರಡರಲ್ಲೂ. ನಾಡಿ ಅಥವಾ ಬ್ರಹ್ಮ ಎಂದು ವಿಕಲ್ಪವಲ್ಲ. ಕೌಷೀತಕೀ

ಉಪನಿಷತ್ತಿನಲ್ಲಿ ಹಾಗೆಯೇ ಇದೆ—''ತಾಸು ತದಾ ಭವತಿ ಯದಾ ಸುಪ್ತಃ ನ ಕಂಚನ ಪಶ್ಯತಿ, ಅಥಾಸ್ಮಿನ್ ಪ್ರಾಣೇ ಏವೈಕಧಾ ಭವತಿ'' ಎಂದು. ಇಲ್ಲಿ ಪ್ರಾಣ ಎಂದರೆ ಬ್ರಹ್ಮ. 'ಆಸು ತದಾ ನಾಡೀಷು ಸುಪ್ತೋ ಭವತಿ' ಎಂದು ಛಾಂದೋಗ್ಯಾದಿಗಳಲ್ಲಿ ನಾಡಿಯಲ್ಲಿ ಸುಪ್ತಿಯನ್ನು ಹೇಳಿದ್ದರೂ ನಾಡೀದ್ವಾರಾ ಬ್ರಹ್ಮನಲ್ಲೇ ಏಕೀಭಾವವನ್ನು ಪಡೆಯುತ್ತಾನೆ. 'ಯೋ ಹಿ ಗಂಗಯಾ ಸಾಗರಂ ಗಚ್ಛತಿ ಗತ ಏವ ಸಃ ಗಂಗಾಯಾಂ ಭವತಿ' (ಶಾಂ.ಭಾ.) ಗಂಗೆಯ ಮೂಲಕ ಸಮುದ್ರ ಸೇರುವವನು ಗಂಗೆಯಲ್ಲೂ ಕೆಲಸಮಯ ಇದ್ದೇ ಇರುತ್ತಾನೆ. ಜೀವನು ನಾಡಿಗಳಲ್ಲಿರುವ ರಶ್ಮಿಯ ಮೂಲಕ ಬ್ರಹ್ಮನನ್ನು ಸೇರುತ್ತಾನೆ. ಹೀಗೆ ನಾಡಿಗಳಲ್ಲಿ ಮಲಗುತ್ತಾನೆ ಎನ್ನುವುದೂ ಸರಿ. ವಸ್ತುತಃ 'ಪುರೀತತಿ ಶೇತೇ' ಎಂದು ಬೃಹದಾರಣ್ಯಕಶ್ರುತಿಯಂತೆ ಪುರೀತನ್ನಾಡಿಗತ ಆಕಾಶದಲ್ಲಿ ಅಂದರೆ ಬ್ರಹ್ಮನಲ್ಲಿ ಸುಪ್ತಿ. ಪುರೀತತ್, ಹೃದಯವೇಷ್ಟನ ನಾಡಿ. 'ಪ್ರಾಕಾರಪರಿಕ್ಷಿಪ್ತೇಽಪಿ ಪುರೇ ವರ್ತಮಾನಃ ಪ್ರಾಕಾರೇ ವರ್ತತೇ ಇತ್ಯುಚ್ಯತೇ' (ಶಾಂ.ಭಾ.) ಕೋಟೆಯೊಳಗಿನ ಅರಮನೆ ಯಲ್ಲಿದ್ದರೂ ಕೋಟೆಯೊಳಗೆ ಇದ್ದಾನೆ ಎನ್ನುವಂತೆ ನಾಡಿಯೊಳಗಣ ಆಕಾಶದಲ್ಲಿದ್ದರೂ ನಾಡಿಯಲ್ಲೇ ಮಲಗಿದ್ದಾನೆ, ಎನ್ನುತ್ತದೆ ಶ್ರುತಿ. ಹೀಗೆ ಮೂರು ಸುಪ್ತಿಸ್ಥಾನಗಳನ್ನು ಉಪನಿಷತ್ತು ಹೇಳಿದೆ—ನಾಡಿಗಳು, ಪುರೀತತ್, ಬ್ರಹ್ಮ. ಮೊದಲಿನವು ಎರಡು ದ್ವಾರಗಳು. ಬ್ರಹ್ಮ ಸುಪ್ತಿಸ್ಥಾನ.

**॥ ಅತಃ ಪ್ರಬೋಧೋಽಸ್ಮಾತ್ ॥** ಯಾವಕಾರಣದಿಂದ ಬ್ರಹ್ಮನೇ ಸುಷುಪ್ತಿ ಸ್ಥಾನವೋ ಅದರಿಂದಾಗಿಯೇ 'ಸತ ಆಗಮ್ಯ ನ ವಿದುಃ ಸತ ಆಗಚ್ಛಾಮಹೇ' (ಛಾಂ.6.10.2) ಎಂದು ಪರಮಾತ್ಮನಿಂದಲೇ ಎಚ್ಚರವನ್ನೂ ಉಪನಿಷತ್ತು ಹೇಳುತ್ತದೆ. ಬ್ರಹ್ಮನಿಂದ ಹೊರಬರುವುದೇ ಎಚ್ಚರವೆಂದಾದ ಮೇಲೆ ಬ್ರಹ್ಮನಲ್ಲಿ ಸೇರುವುದು ಸುಪ್ತಿ.

ವಿಶಿಷ್ಟಾದ್ವೈತದರ್ಶನದಲ್ಲೂ ಇದೇರೀತಿ ಸೂತ್ರಾರ್ಥ. ಈ ಅಧಿಕರಣಕ್ಕೆ ಮೂರೂ ಭಾಷ್ಯಗಳು ಒಂದೇ ಅರ್ಥವನ್ನು ನಿರೂಪಿಸಿವೆ. ಆದರೆ, ಅದ್ವೈತದರ್ಶನದಲ್ಲಿ ಬ್ರಹ್ಮೈಕ್ಯವೇ ಸುಪ್ತಿ. ಉಳಿದೆರಡರಲ್ಲಿ ಬ್ರಹ್ಮಪ್ರಾಪ್ತಿ ಮುಕ್ತಿ.

**ಇಲ್ಲಿಗೆ ಪ್ರಬೋಧಾಧಿಕರಣವು ಮುಗಿಯಿತು.**

## ೬. ಕರ್ಮಾನುಸ್ಮೃತ್ಯಧಿಕರಣಮ್

**॥ ಓಂ ಸ ಏವ ಚ ಕರ್ಮಾನುಸ್ಮೃತಿಶಬ್ದವಿಧಿಭ್ಯಃ ಓಂ ॥ ೯ ॥**

**ನಚ ಕೇಷಾಂಚಿತ್ ಸ್ವಪ್ನಾದಿಕರ್ತಾ ನತು ಸರ್ವೇಷಾಮಿತಿ ।**

**'ಏಷ ಹ್ಯೇವ ಸಾಧುಕರ್ಮ ಕಾರಯತಿ' (ಕೌ. 3.8)**

**ಇತಿ ಕರ್ಮಣ್ಯವಧಾರಣಾತ್ ।**

**'ಪ್ರದರ್ಶಕಸ್ತು ಸರ್ವೇಷಾಂ ಸ್ವಪ್ನಾದೇರೇಕ ಏವ ತು ।**
**ಪರಮಃ ಪುರುಷೋ ವಿಷ್ಣುಸ್ತತೋಽನ್ಯೋ ನಾಸ್ತಿ ಕಶ್ಚನ ॥'**

**ಇತ್ಯನುಸಾರಿಸ್ಮೃತೇಶ್ಚ ।**

**'ಏಷ ಸ್ವಪ್ನಾನ್ ದರ್ಶಯತ್ಯೇಷ ಪ್ರಬೋಧಯತ್ಯಥೈಷ**
**ಏವ ಪರಮ ಆನಂದಃ'**

**ಇತಿ ಚ ಶ್ರುತಿಃ ।**

**'ಆತ್ಮಾನಮೇವ ಲೋಕಮುಪಾಸೀತ' (ಬೃ.ಉ. 15)**

**ಇತಿ ಚ ವಿಧಿಃ ॥**

ಪರಮಾತ್ಮನು ಕೆಲವರಿಗೆ ಮಾತ್ರ ಸ್ವಪ್ನಾದಿ ಅವಸ್ಥಾಪ್ರೇರಕ, ಎಲ್ಲರಿಗೂ ಅಲ್ಲ, ಎಂದು ತಿಳಿಯಬಾರದು. ಕೌಶೀತಕೀ ಉಪನಿಷತ್ತು 'ಏಷ ಹ್ಯೇವ ಸಾಧು ಕರ್ಮ ಕಾರಯತಿ' 'ಇವನೇ ಸತ್ಕರ್ಮಗಳನ್ನು ಮಾಡಿಸುತ್ತಾನೆ' ಎಂದು ಅವಧಾರಣಾ ಪೂರ್ವಕವಾಗಿ ಹೇಳುತ್ತದೆ. ಅವಧಾರಣೆಯಿಂದ ಇನ್ನೊಬ್ಬರಿಗೆ ಕಾರಯಿತೃತ್ವ ಅಥವಾ ಕರ್ತೃತ್ವವು ನಿಷಿದ್ಧವಾಗಿದೆ. ಇಷ್ಟೇ ಅಲ್ಲದೆ, ಶ್ರುತ್ಯನುಸಾರಿ ಸ್ಮೃತಿಯೂ ಹೀಗಿದೆ—'ಸ್ವಪ್ನಾದಿ ಪ್ರದರ್ಶಕ ಅವನೊಬ್ಬನೇ, ಅವನೇ ವಿಷ್ಣು. ಅವನ ಹೊರತಾಗಿ ಮತ್ತಾರೂ ಇಲ್ಲ.' ಶ್ರುತಿಯೂ ಇದೆ— ಇವನೇ ಸ್ವಪ್ನಾದಿಗಳನ್ನು ತೋರಿಸುತ್ತಾನೆ, ನಿದ್ದೆಯಿಂದ ಎಚ್ಚರಿಸುತ್ತಾನೆ. ಇವನು ಪರಮಾನಂದರೂಪನು. ವಿಧಿವಾಕ್ಯವೂ ಇದಕ್ಕೆ ಆಧಾರವಾಗಿದೆ—ಆತ್ಮಸ್ವರೂಪವನ್ನೇ ಉಪಾಸನೆ ಮಾಡಬೇಕು' ಇದು ಬೃಹದಾರಣ್ಯಕ ಶ್ರುತಿ. ಒಂದುವೇಳೆ ಇನ್ನೊಬ್ಬರು ಪ್ರೇರಕರು ಇದ್ದಿದ್ದರೆ ಅವನಿಗೇ ಉಪಾಸ್ಯತ್ವ ಇರಲು ಸಾಧ್ಯವಿಲ್ಲ.

**ವಿವರಣೆ**—ನಾವು ನೋಡುವ ರಾಜಮಹಾರಾಜರು ಸೀಮಿತಪ್ರದೇಶಕ್ಕೆ ಒಡೆಯರಾಗಿರುತ್ತಾರೆ. ಅದರಂತೆ, ಪರಮಾತ್ಮ ಕೆಲವರ, ಕೆಲವು ಕಾಲದ ಕ್ರಿಯೆಗಳಿಗೆ ಮಾತ್ರ ಪ್ರೇರಕನಾಗಿರಬಹುದು, ಎಂಬ ಶಂಕೆಗೆ ಈ ಸೂತ್ರದಲ್ಲಿ ಸಮಾಧಾನವನ್ನು ಕೊಡಲಾಗಿದೆ. ಸೂತ್ರದ ಚಶಬ್ದವು ಹೇತ್ವರ್ಥಕ ಎಂದು ತತ್ತ್ವಪ್ರದೀಪದಲ್ಲಿದೆ. ಶ್ರುತಿ

ಯಲ್ಲಿ 'ಸ ಏವ' ಎಂದು ಅವಧಾರಣೆ ಇರುವುದರಿಂದ ಪರಮಾತ್ಮನೇ ಸರ್ವಕರ್ತಾ, ಬೇರೆಯವರು ಅಲ್ಲ, ವಸ್ತುಸ್ವಭಾವವೂ ಕ್ರಿಯೆಗೆ ಕಾರಣವಲ್ಲ, ಎಂದು ಅರ್ಥ. ಕರ್ಮಶಬ್ದಕ್ಕೆ ಲಕ್ಷಣಯಾ 'ಕರ್ಮಕ್ಕೆ ಈಶಾಧೀನತ್ವವನ್ನು ನಿರೂಪಿಸುವ ಶ್ರುತಿ' ಎಂದು ಅರ್ಥ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ಸ ಏವ ಚ ಕರ್ಮಾನುಸ್ಮೃತಿಶಬ್ದವಿಧಿಭ್ಯಃ ಓಂ ॥** (ಅತ್ರ ಈಶ್ವರಸ್ಯ ಸರ್ವಜನೀನ-ಸರ್ವಾವಸ್ಥಾಪ್ರವರ್ತಕತ್ವಮ್ ಉಚ್ಯತೇ। ಸ ಏವ=ಪ್ರಸ್ತುತಾತ್ಮೈವ, ಸರ್ವಾವಸ್ಥಾಪ್ರವರ್ತಕ ಇತಿ ಶೇಷಃ। ಚಃ ಪಕ್ಷಾಂತರವ್ಯಾವರ್ತಕಃ। ನ ದೇಶಕಾಲಾಂತರೇಽನ್ಯಃ ಇತಿ। ಏವೇತ್ಯತಃ ಅರ್ಥಾಲ್ಲಬ್ಧಸ್ಯಾಪಿ ವಾಚನಿಕತ್ವಾಯ ಚಶಬ್ದಃ। ಕುತಃ ? ಕರ್ಮಾನುಸ್ಮೃತಿಶಬ್ದಾದಿಭ್ಯಃ। ಕರ್ಮೇತಿ ಧರ್ಮಾಧರ್ಮರೂಪಂ, ವ್ಯಾಪಾರಮಾತ್ರಂ ವಾ। ತೇನ ತಸ್ಯ ಈಶೈಕಾಯತ್ತತ್ವರೂಪಶ್ರುತಿಃ ಲಕ್ಷ್ಯತೇ। 'ಸ ಏವ ಸಾಧುಕರ್ಮ ಕಾರಯತಿ ಏಷ ಹ್ಯೇವಾಸಾಧುಕರ್ಮ ಕಾರಯತಿ' ಇತಿ ಕರ್ಮಣಾಮ್ ಈಶಾಯತ್ತತ್ವಶ್ರುತೇಃ। ಸ್ವಪ್ನಾದಿಪ್ರಾಪ್ತೇಶ್ಚ ತದಂತರ್ಭಾವಾತ್। 'ಪ್ರದರ್ಶಕಸ್ತು ಸರ್ವೇಷಾಂ ಸ್ವಪ್ನಾದೇರೇಕ ಏವ ತು' ಇತ್ಯಭಿಮತಾರ್ಥಾನುಸಾರಿಸ್ಮೃತೇಃ। 'ಏಷ ಸ್ವಪ್ನಾನ್ ದರ್ಶಯತಿ' ಇತ್ಯಾದಿಶಬ್ದಾತ್। 'ಆತ್ಮಾನಮೇವ ಲೋಕಮುಪಾಸೀತ' ಇತ್ಯಾತ್ಮನ ಏವೋಪಾಸ್ಯತ್ವವಿಧೇರಿತ್ಯರ್ಥಃ। ಅನ್ಯಸ್ಯಾಪಿ ಪ್ರೇರಕತ್ವೇ ಏವಕಾರಾ-ಯೋಗಾದಿತಿ ಭಾವಃ।)

ಸ ಏವ=ಪ್ರಸ್ತುತನಾದ ಪರಮಾತ್ಮನೇ ಸರ್ವಾವಸ್ಥೆಗಳ ಪ್ರೇರಕನಾಗಿದ್ದಾನೆ. ಚ ಎಂದರೆ ಮತ್ತೊಬ್ಬರಲ್ಲ, ಎಂದರ್ಥ. ಅದಕ್ಕೆ ಕಾರಣಗಳು-ಕರ್ಮ, ಅನುಸ್ಮೃತಿ ಶಬ್ದ ಮತ್ತು ವಿಧಿ. ಕರ್ಮವೆಂದರೆ ಕ್ರಿಯೆ. ಕರ್ಮಶಬ್ದದಿಂದ ಲಕ್ಷಣಯಾ ಕರ್ಮಗಳು ಈಶಾಯತ್ತ ಎಂದು ಹೇಳುವ 'ಸ ಏವ ಸಾಧುಕರ್ಮ ಕಾರಯತಿ' ಎಂಬ ಶ್ರುತಿಯೂ ವಿವಕ್ಷಿತ. ಅನುಸ್ಮೃತಿ ಎಂದರೆ ಸ್ಮೃತಿ. ಶಬ್ದವೆಂದರೆ ವೇದವಾಕ್ಯ. ವಿಧಿ ಎಂದರೆ ಉಪಾಸನಾ ವಿಧಿಬೋಧಕವಾಕ್ಯ. ಆತ್ಮನಿಗೇ ಉಪಾಸ್ಯತ್ವವನ್ನು ವಿಧಾನ ಮಾಡಿರುವುದ ರಿಂದ ಅನ್ಯರಿಗೆ ಪ್ರೇರಕತ್ವ ಇಲ್ಲ. ಇವಿಷ್ಟು ಆಧಾರಗಳಿಂದ ಸರ್ವಕ್ರಿಯೆಗಳೂ ಈಶಾಯತ್ತ ಎಂದು ತಿಳಿಯುತ್ತದೆ.

## ಅದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಸ ಏವ ಚ ಕರ್ಮಾನುಸ್ಮೃತಿಶಬ್ದವಿಧಿಭ್ಯಃ ॥** ಸ್ವಪ್ನಕಾಲದಲ್ಲಿ ಯಾವ

ಜೀವನು ಬ್ರಹ್ಮನಲ್ಲಿ ಪ್ರವೇಶ ಮಾಡಿರುವನೋ ಸ ಏವಚ=ಅದೇ ಜೀವನು ಮತ್ತೆ ಎಚ್ಚರಗೊಳ್ಳುತ್ತಾನೆ. ಬೇರೆ ಜೀವನಲ್ಲ. ಅದಕ್ಕೆ ನಾಲ್ಕು ಕಾರಣಗಳು–ಕರ್ಮ–ಮೊದಲದಿನ ಪ್ರಾರಂಭಿಸಿದ ಕೆಲಸವನ್ನು ಮರುದಿನ ಮುಂದುವರಿಸುತ್ತಾನೆ. ಅನುಸ್ಮೃತಿ–ನಿನ್ನೆದಿನ ನೋಡಿದ್ದನ್ನು ಎದ್ದಮೇಲೆ ಸ್ಮರಿಸುತ್ತಾನೆ. ಮಲಗಿದವನು ಬೇರೆ, ಎದ್ದವನು ಬೇರೆಯಾದರೆ ಇವೆರಡೂ ಸಾಧ್ಯವಿಲ್ಲ.

ಶಬ್ದ=ಶ್ರುತಿ—'ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾದ್ರವತಿ ಬುದ್ಧಾಂತಾಯೈವ' ವಿಧಿ=ಮಲಗಿದವನುಗೆ ಶಾಶ್ವತಬ್ರಹ್ಮಭಾವ ಪ್ರಾಪ್ತಿಯಾದರೆ ಬ್ರಹ್ಮಭಾವ ಪ್ರಾಪ್ತಿಗಾಗಿ ವಿದ್ಯಾವಿಧಿ, ಕರ್ಮವಿಧಿಗಳು ವ್ಯರ್ಥ. ಮಲಗಿದರೆ ಸಾಕು. ಸುಲಭವಾಗಿ ಬ್ರಹ್ಮಭಾವ ಬರುತ್ತದೆ. ಆದ್ದರಿಂದ ಮಲಗಿದವನೇ ಏಳುತ್ತಾನೆ.

**ರಾಮಾನುಜಭಾಷ್ಯದಲ್ಲೂ** ಸೂತ್ರದ ತಾತ್ಪರ್ಯಾರ್ಥ ಇದೇ ಆದರೂ ಕರ್ಮ ಶಬ್ದಕ್ಕೆ ಪುಣ್ಯಪಾಪ ಎಂದರ್ಥ. ಮಲಗುವ ಮೊದಲು ಅವನಲ್ಲಿ ಯಾವ–ಪುಣ್ಯ ಪಾಪಗಳು ಇದ್ದವೋ ತತ್ತ್ವಜ್ಞಾನ ಬರುವವರೆಗೂ ಅದನ್ನು ಅವನೇ ಭೋಗಿಸುತ್ತಾನೆ.

ಅನುಸ್ಮೃತಿ–'ಸೋಹಂ' ಎಂಬ ಪ್ರತಿಭಿಜ್ಞಾ, ಎದ್ದವನಿಗೆ ಬರುತ್ತದೆ. ಆದ್ದರಿಂದ ಮಲಗಿದವನೇ ಏಳುತ್ತಾನೆ.

**ವಿಮರ್ಶೆ**—ಸುಷುಪ್ತಿಕಾಲದಲ್ಲಿ ಬ್ರಹ್ಮಸಂಪತ್ತಿ ಆತ್ಯಂತಿಕ ಸಂಪತ್ತಿಯಲ್ಲ. ಅಜ್ಞಾನ ನಿವೃತ್ತಿಯಾದ ಮೇಲೆಯೇ ಆತ್ಯಂತಿಕ ಸಂಪತ್ತಿ. ಆದ್ದರಿಂದ ಸುಪ್ತಿಕಾಲದಲ್ಲಿ ಬ್ರಹ್ಮನಲ್ಲಿ ಸೇರುವುದು ಮಾತ್ರ, ಐಕ್ಯವಿಲ್ಲ. ಅಂದಮೇಲೆ ಈ ಆಕ್ಷೇಪವೇ ಅಸಂಗತ.

**ಇಲ್ಲಿಗೆ ಕರ್ಮಾನುಸ್ಮೃತ್ಯಧಿಕರಣವು ಮುಗಿಯಿತು.**

## ೭. ಸಂಪತ್ತ್ಯಧಿಕರಣಮ್ (ಮುಗ್ಧಪ್ರಾಪ್ತ್ಯಧಿಕರಣಮ್)

### ॥ ಓಂ ಮುಗ್ಧೇಽರ್ಧಸಂಪತ್ತಿಃ ಪರಿಶೇಷಾತ್ ಓಂ ॥ ೧೦ ॥

**ಮೋಹಾವಸ್ಥಾಯಾಂ ಪರಮೇಶ್ವರೇಽರ್ಧಪ್ರಾಪ್ತಿರ್ಜೀವಸ್ಯ ।**

**'ಹೃದಯಸ್ಥಾತ್ ಪರಾಜ್ಜೀವೋ ದೂರಸ್ಥೋ ಜಾಗ್ರದೇಷ್ಯತಿ ।**
**ಸಮೀಪಸ್ಥಸ್ತಥಾ ಸ್ವಪ್ನಂ ಸ್ವಪಿತ್ಯಸ್ಮಿನ್ ಲಯಂ ವ್ರಜನ್ ॥**

**ಯತ ಏವಂ ತ್ರಯೋಽವಸ್ಥಾ ಮೋಹಸ್ತು ಪರಿಶೇಷತಃ ।**
**ಅರ್ಧಪ್ರಾಪ್ತಿರಿತಿ ಜ್ಞೇಯೋ ದುಃಖಮಾತ್ರಪ್ರತಿಸ್ಮೃತೇಃ ॥'**

**ಇತಿ ವಾರಾಹೇ ।**

**ಸೋಽಪಿ ತತ ಏವೇತಿ ಸಿದ್ಧಮ್ ।**

**'ಮೂರ್ಛಾ ಪ್ರಬೋಧನಂ ಚೈವ ಯತ ಏವ ಪ್ರವರ್ತತೇ ।**
**ಸ ಈಶಃ ಪರಮೋ ಜ್ಞೇಯಃ ಪರಮಾನಂದಲಕ್ಷಣಃ ॥'**

**ಇತಿ ಹಿ ಕೌರ್ಮೇ ।**

ಮೂರ್ಛಾವಸ್ಥೆಯಲ್ಲಿ ಜೀವನಿಗೆ ಪರಮಾತ್ಮನಲ್ಲಿ ಅರ್ಧಪ್ರವೇಶ. ವಾರಾಹವಚನ ಹೀಗಿದೆ—ಜೀವನು ಹೃದಯಸ್ಥನಾದ ಪರಮಾತ್ಮನಿಂದ ದೂರದಲ್ಲಿ ಅಂದರೆ ಬಲಗಣ್ಣಿನಲ್ಲಿ ಇರುವಾಗ ಎಚ್ಚರಾವಸ್ಥೆ. ಕಂಠದೇಶದಲ್ಲಿದ್ದು ಪರಮಾತ್ಮನ ಸಮೀಪಕ್ಕೆ ಬಂದಾಗ ಸ್ವಪ್ನ. ಅವನೊಳಗೆ ಪ್ರವೇಶಿಸಿದಾಗ ಸುಷುಪ್ತಿ. ಹೀಗೆ ಮೂರು ರೀತಿಯಲ್ಲಿದ್ದಾಗ ಮೂರು ಅವಸ್ಥೆಗಳಾದುದರಿಂದ ಪರಿಶೇಷಾತ್ ಮೋಹಾವಸ್ಥೆಯಲ್ಲಿ ಪರಮಾತ್ಮನ ಅರ್ಧಪ್ರಾಪ್ತಿ ಮಾತ್ರ ಆಗುತ್ತದೆ. ಆಗ ದುಃಖ ಮಾತ್ರವೇ ಅನುಸಂಧಾನಕ್ಕೆ ಬರುತ್ತದೆ. ಸುಖದ ಅನುಸಂಧಾನ ಇಲ್ಲ. ಪರಮಾತ್ಮನಲ್ಲಿ ಪೂರ್ಣಪ್ರವೇಶವಾಗಿದ್ದಲ್ಲಿ ಸುಖದ ಅನುಸಂಧಾನವಾಗಬೇಕಿತ್ತು. ಜಾಗ್ರತ್ ಅಥವಾ ಸ್ವಪ್ನದಂತೆ ಪರಮಾತ್ಮನಿಂದ ದೂರ ಅಥವಾ ಹತ್ತಿರವಿದ್ದಲ್ಲಿ ದುಃಖಾತಿರಿಕ್ತವಾದ ವಸ್ತುಗಳ ಜ್ಞಾನ ಬರಬೇಕಿತ್ತು. ದುಃಖಮಾತ್ರಾನುಸಂಧಾನವಿರುವುದರಿಂದ ಮೂರ್ಛಾಕಾಲದಲ್ಲಿ ಅರ್ಧಪ್ರವೇಶವೆಂದೇ ಸಿದ್ಧವಾಗುವುದು. ಇದರಿಂದಾಗಿಯೇ ಮೂರ್ಛಾವಸ್ಥೆಯು ಮೂರು ಅವಸ್ಥೆಗಳಿಗಿಂತ ವಿಲಕ್ಷಣವೂ ಆಗಿದೆ. ಅಲ್ಲದೆ, ಈ ಅವಸ್ಥೆ ದಿನಗಟ್ಟಲೆ ತಿಂಗಳುಗಟ್ಟಲೆ ಇರಬಹುದು. ಜಾಗ್ರದಾದಿಗಳು ಇಷ್ಟು ದೀರ್ಘವಾಗಿರುವುದಿಲ್ಲ. ಈ ಮೂರ್ಛಾವಸ್ಥೆಯೂ ಪರಮಾತ್ಮನಿಂದಲೇ ಆಗುತ್ತದೆ. ಹಿಂದೆ ಹೇಳಿರುವ ಕರ್ಮಾನುಸ್ಮೃತ್ಯಾದಿ ಪ್ರಮಾಣಗಳಿಂದ ಅದೂ ಸಿದ್ಧವಾಗುತ್ತದೆ.

ಕೂರ್ಮಪುರಾಣದಲ್ಲಿ ಹೀಗಿದೆ—ಮೂರ್ಛೆಯಿಂದ ಎಚ್ಚರವೂ ಜೀವನಿಗೆ ಪರಮಾತ್ಮನಿಂದಲೇ ಆಗುತ್ತದೆ. ಅಂತಹ ಪರಮಾತ್ಮನು ಸರ್ವೋತ್ತಮನೂ ಪರಮಾನಂದರೂಪನೂ ಆಗಿದ್ದಾನೆ. ಆದ್ದರಿಂದಲೇ ಅವನೇ ಮೂರ್ಛಾಪ್ರಬೋಧಕನೂ ಆಗಿದ್ದಾನೆ.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಓಂ ಮುಗ್ಧೇऽರ್ಧಸಂಪತ್ತಿಃ ಪರಿಶೇಷಾತ್ ಓಂ ॥** (ಅತ್ರ ಈಶಸ್ಯ ಮೋಹಾಖ್ಯಾವಾಂತರಾವಸ್ಥಾಸ್ಥಿತಜೀವಸ್ಯ ಅರ್ಧಪ್ರಾಪ್ಯತ್ವಮ್ ಉಚ್ಯತೇ। ಅಸ್ಯೇತಿ, ಆತ್ಮನೀತಿ ಚಾಸ್ತಿ। ಮುಗ್ಧೇ=ಮೋಹೇ, ಮೂರ್ಛಾಯಾಂ, ಭಾವೇ ಕ್ತಃ। ಜೀವಸ್ಯ ಆತ್ಮನಿ ಅರ್ಧಪ್ರಾಪ್ತಿಃ ನ ಸಮ್ಯಕ್‌ಪ್ರಾಪ್ತಿಃ। ಕುತಃ ? ಪರಿಶೇಷಾತ್=ಆತ್ಮವಿದೂರತ್ವ-ಸಾಮೀಪ್ಯ-ಪ್ರವೇಶಾರ್ಧಪ್ರವೇಶೇಷು ಆದ್ಯತ್ರಿಕಸ್ಯ 'ಹೃದಯಸ್ಥಾತ್ ಪರಾಜ್ಜೀವಃ' ಇತಿ ಸ್ಮೃತ್ಯಾ ಜಾಗ್ರದಾದ್ಯವಸ್ಥಾಂತರತ್ವೇನ ಅರ್ಧಪ್ರವೇಶಸ್ಯೈವ ಪರಿಶೇಷಾತ್ ಇತ್ಯರ್ಥಃ। ಸ್ವಪ್ನಾದಿವತ್ ನ ಮೋಹಃ ಸ್ವತಂತ್ರಾವಸ್ಥಾ ಇತಿ ದ್ಯೋತನಾಯ ವ್ಯವಧಾನೇನ ಅಸ್ಯೋಕ್ತಿಃ।)

ಮುಗ್ಧೇ=ಮೋಹಾವಸ್ಥೆಯಲ್ಲಿ ಜೀವನಿಗೆ ಪರಮಾತ್ಮನೊಂದಿಗೆ ಅರ್ಧಸಂಪತ್ತಿಃ= ಅರ್ಧಪ್ರಾಪ್ತಿಯಾಗುತ್ತದೆ. ಪರಿಶೇಷಾತ್=ಪರಿಶೇಷದಿಂದಾಗಿ ಪರಮಾತ್ಮಾಪೇಕ್ಷಯಾ ನಾಲ್ಕುರೀತಿಯ ಸ್ಥಿತಿಯು ಜೀವನಿಗೆ ಇರುವ ಸಂಭಾವ್ಯತೆ ಇದೆ-ದೂರಸ್ಥಿತಿ ಸಮೀಪಸ್ಥಿತಿ-ಪೂರ್ಣಪ್ರಾಪ್ತಿ-ಅರ್ಧಪ್ರಾಪ್ತಿ. ಮೊದಲನೆಯದು ಜಾಗ್ರದವಸ್ಥೆ, ಎರಡನೆಯದು ಸ್ವಪ್ನಾವಸ್ಥೆ, ಮೂರನೆಯದು ನಿದ್ರಾವಸ್ಥೆ. ಉಳಿದಿರುವುದು ಒಂದೇ-ಅರ್ಧಪ್ರಾಪ್ತಿ. ಅದೇ ಮೂರ್ಛಾವಸ್ಥೆ. ಸ್ವಪ್ನಾದಿ ಅವಸ್ಥೆಗಳು ಅಸಂಕೀರ್ಣವಾಗಿವೆ. ಆದರೆ, ಮೋಹ ಪೂರ್ಣ ಎಚ್ಚರವೂ ಅಲ್ಲದ, ಪೂರ್ಣ ನಿದ್ರೆಯೂ ಅಲ್ಲದ ಅವಸ್ಥೆ. ಅದಕ್ಕಾಗಿ, ಅದನ್ನು ಕೊನೆಯಲ್ಲಿ ನಿರೂಪಿಸಲಾಗಿದೆ.

## ಅದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಮುಗ್ಧೇऽರ್ಧಸಂಪತ್ತಿಃ ಪರಿಶೇಷಾತ್ ॥** ಜಾಗೃತ್-ಸ್ವಪ್ನ- ಸುಷುಪ್ತಿ-ಮರಣ ಈ ನಾಲ್ಕು ಅವಸ್ಥೆಗಳಲ್ಲದೆ ಇನ್ನೊಂದು ಅವಸ್ಥೆ ಇದೆ. ಅದು ಮೂರ್ಛಾವಸ್ಥೆ. ಅರ್ಧಸಂಪತ್ತಿಯೇ ಮೂರ್ಛಾವಸ್ಥೆ. ಬ್ರಹ್ಮನೊಂದಿಗೆ ಅರ್ಧಸಂಪತ್ತಿಯಲ್ಲ. ಸುಷುಪ್ತ್ಯವಸ್ಥೆಯ ಅರ್ಧಸಾಮ್ಯ ಅದರಲ್ಲಿದೆ. ಸುಷುಪ್ತಿಗೂ ಮೂರ್ಛೆಗೂ ಸಾಮ್ಯವೈಷಮ್ಯ ಹೀಗಿದೆ—

| **ಮೂರ್ಛಾಸ್ಥಿತಿ** | **ನಿದ್ರಾವಸ್ಥೆ** |
| --- | --- |
| 1. ದೀರ್ಘಕಾಲ ಉಸಿರಾಟ ಇರುವುದಿಲ್ಲ | 1. ನಿಯರ್ತವಾದ ಉಸಿರಾಟವಿರುತ್ತದೆ. |
| 2. ದೇಹದಲ್ಲಿ ನಡುಕವಿರುತ್ತದೆ | 2. ದೇಹ ನಿಶ್ಚಲವಾಗಿರುತ್ತದೆ. |

| | |
|---|---|
| 3. ಮುಖವು ಭಯಾನಕವಾಗಿರುತ್ತದೆ. | 3. ಪ್ರಸನ್ನವದನನಾಗಿರುತ್ತಾನೆ. |
| 4. ಕಣ್ಣು ಅರಳಿರುತ್ತದೆ. | 4. ಕಣ್ಣು ಮುಚ್ಚಿರುತ್ತದೆ. |
| 5. ಬಲವಾಗಿ ಹೊಡೆದರೂ ಏಳುವುದಿಲ್ಲ. | 5. ಮೈಕುಲಕಿದರೆ ಏಳುತ್ತಾನೆ. |
| 6. ಮುಸಲಸಂಪಾತ ಮೋಹಕ್ಕೆ ನಿಮಿತ್ತ | 6. ಶ್ರಮ ನಿದ್ದೆಗೆ ನಿಮಿತ್ತ. |

ಇಷ್ಟು ವೈಷಮ್ಯದ ಜೊತೆಗೆ ಬಾಹ್ಯಪರಿಜ್ಞಾನ ಇಲ್ಲದಿರುವುದು ಎರಡರಲ್ಲೂ ಸಮಾನ. ಮೋಹಾವಸ್ಥೆಗೆ ಹೋದವನ ಕರ್ಮ ತೀರಿದ್ದರೆ ಮತ್ತೆ ಎಚ್ಚರಾವಸ್ಥೆಗೆ ಬರುವುದಿಲ್ಲ. ಕರ್ಮಶೇಷವಿದ್ದಲ್ಲಿ ಉಸಿರಾಟ ಮತ್ತು ಬಿಸಿ ಮತ್ತೆ ಬರುತ್ತದೆ. ಜಾಗ್ರದಾದಿ ಅವಸ್ಥೆಗಳು ಪ್ರತಿದಿನ ಇರುತ್ತವೆ. ಮೋಹಾವಸ್ಥೆ ಅಪರೂಪದ್ದು. ಆದ್ದರಿಂದ ಅವಸ್ಥಾಂತರದಂತೆ ಅದು ಪ್ರಸಿದ್ಧವಾಗಿಲ್ಲ.

**ವಿಮರ್ಶೆ**—ನಿದ್ರಾವಸ್ಥೆಯಿಂದ ಹೊರಬಂದವನು ಮಲಗಿದ ಜೀವನೋ ಬೇರೊಬ್ಬನೋ ಎಂಬ ಜಿಜ್ಞಾಸೆ ಬರುವಂತೆ ಮೂರ್ಛಾವಸ್ಥೆಯಲ್ಲೂ ಜಿಜ್ಞಾಸೆ ಬರುವುದರಿಂದ ಅದರ ಪರಿಹಾರವನ್ನು ಹೇಳುವ 'ಸ ಏವ ಕರ್ಮಾನುಸ್ಮೃತಿ...' ಇತ್ಯಾದಿ ಸೂತ್ರಕ್ಕಿಂತ ಮೊದಲು ಈ ಸೂತ್ರವಿರಬೇಕು. ಆ ಸೂತ್ರವಾದ ಮೇಲೆ ಸುಪ್ತಿಸಾಮ್ಯವುಳ್ಳ ಮೂರ್ಛಾವಸ್ಥೆಯನ್ನು ವಿಚಾರ ಮಾಡುವುದು ಉಚಿತವಲ್ಲ.

**ರಾಮಾನುಜ ಭಾಷ್ಯ**ದಲ್ಲಿ ಮೋಹವು ಅವಸ್ಥಾಂತರ ಎಂದು ಈ ಸೂತ್ರದಲ್ಲಿ ಸಮರ್ಥಿಸಲಾಗಿದೆ. ಅರ್ಥಜ್ಞಾನ ಇಲ್ಲದಿರುವುದರಿಂದ ಮೂರ್ಛೆಯು ಜಾಗ್ರತ್ ಅಥವಾ ಸ್ವಪ್ನಾವಸ್ಥೆಗಳಲ್ಲ. ನಿಮಿತ್ತ ಮತ್ತು ಆಕಾರಗಳು ಬೇರೆಯಾದುದರಿಂದ ನಿದ್ರಾವಸ್ಥೆಗಿಂತ ಮೂರ್ಛಾವಸ್ಥೆಯು ಭಿನ್ನವಾಗಿದೆ. ಹೀಗೆ ಪರಿಶೇಷಾತ್ ಮರಣದ ಪೂರ್ವಾವಸ್ಥೆ ಮೂರ್ಛೆ.

**ವಿಮರ್ಶೆ**—ಮರಣಾತ್ ಪೂರ್ವದಲ್ಲಿ ಎಲ್ಲರಿಗೂ ಮೂರ್ಛೆಯೇ ಬರಬೇಕೆಂದಿಲ್ಲ. ಯೋಗಸಿದ್ಧಿವುಳ್ಳವರು ಮೂರ್ಛೆ ಇಲ್ಲದೆಯೂ ಮರಣಹೊಂದುತ್ತಾರೆ. (ಲೌಕಿಕರಲ್ಲೂ ಹೃದಯಾಘಾತವಾದಾಗ ನೇರವಾಗಿ ಮರಣವೇ ಆಗುತ್ತದೆ.) ಆದ್ದರಿಂದ ಮರಣದ ಪೂರ್ವಾವಸ್ಥೆ ಮೂರ್ಛೆ ಎನ್ನುವಂತಿಲ್ಲ.

**ಇಲ್ಲಿಗೆ ಸಂಪತ್ತ್ಯಧಿಕರಣವು ಮುಗಿಯಿತು.**

## ೮. ನ ಸ್ಥಾನತೋಽಪ್ಯಧಿಕರಣಮ್

ಸ್ಥಾನಾಪೇಕ್ಷಯಾ ಪರಮಾತ್ಮನೋಽಪಿ ಭೇದಾದನುಗ್ರಾಹ್ಯಾನುಗ್ರಾಹಕ ಭಾವ ಇತಿ; ಅತ ಆಹ-

**॥ ಓಂ ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ಓಂ ॥**

ಸ್ಥಾನಾಪೇಕ್ಷಯಾಽಪಿ ಪರಮಾತ್ಮನೋ ನ ಭಿನ್ನಂ ರೂಪಮ್ ।

'ಸರ್ವೇಷು ಭೂತೇಷ್ವೇತಮೇವ ಬ್ರಹ್ಮೇತ್ಯಾಚಕ್ಷತೇ'(ಐ.ಆ.3.2.3)

ಇತಿ ಹಿ ಶ್ರುತಿಃ ।

'ಏಕರೂಪಃ ಪರೋ ವಿಷ್ಣುಃ ಸರ್ವತ್ರಾಪಿ ನ ಸಂಶಯಃ ।
ಐಶ್ವರ್ಯಾದ್ ರೂಪಮೇಕಂ ಚ ಸೂರ್ಯವದ್ ಬಹುಧೇಯತೇ ॥'

ಇತಿ ಹಿ ಮಾತ್ಸ್ಯೇ ।

'ಪ್ರತಿದೃಶಮಿವ ನೈಕಧಾಽರ್ಕಮೇಕಂ
ಸಮಧಿಗತೋಽಸ್ಮಿ ವಿಧೂತಭೇದಮೋಹಃ ।' (ಭಾಗ.1.9.49)

ಇತಿ ಚ ಭಾಗವತೇ ॥

ಜಾಗ್ರದಾದಿ ಅವಸ್ಥಾನಿಯಾಮಕನಾಗಿ ಅಕ್ಷ್ಯಾದಿ ವಿಭಿನ್ನಸ್ಥಾನಗಳಲ್ಲಿ ಹಾಗೂ ಅನೇಕ ಜೀವನಿಯಾಮಕತಯಾ ತತ್ತಜ್ಜೀವರಲ್ಲಿ ಇರುವುದರಿಂದಲೂ ಪರಮಾತ್ಮನ ರೂಪಗಳಲ್ಲಿ ಭೇದವಿದೆ. ಭೇದವಿದ್ದಮೇಲೆ ಗುಣಕ್ರಿಯಾದಿವೈಷಮ್ಯವಿರಬೇಕು. ಅದರಿಂದಾಗಿ ಅನುಗ್ರಾಹ್ಯ, ಅನುಗ್ರಾಹಕಭಾವವೂ ಆ ರೂಪಗಳಲ್ಲಿ ಇದೆ, ಎಂಬ ಜಿಜ್ಞಾಸೆಯ ಪರಿಹಾರಕ್ಕಾಗಿ ಸೂತ್ರಕಾರರು ಈ ಸೂತ್ರವನ್ನು ರಚಿಸಿದ್ದಾರೆ.

ಸ್ಥಾನಭೇದದಿಂದಾಗಿ ಪರಮಾತ್ಮನ ನಿಯಾಮಕರೂಪಗಳಿಗೆ ಭೇದವಿಲ್ಲ. ಶ್ರುತಿ ಹೇಳುತ್ತದೆ— ಸರ್ವೇಷು ಭೂತೇಷು=ಸುರ–ನರಾದಿ ಎಲ್ಲಾ ದೇಹಗಳಲ್ಲೂ ಏತಂ=ಈ ಪರಮಾತ್ಮನನ್ನು ಬ್ರಹ್ಮೇತ್ಯೇವ=ಪೂರ್ಣನೆಂದೇ ಆಚಕ್ಷತೇ=ಹೇಳುತ್ತಾರೆ. (ಇದರಿಂದಾಗಿ ರೂಪಭೇದೇನ ಬ್ರಹ್ಮನ ಗುಣಗಳಲ್ಲಿ ಭೇದವಿಲ್ಲ, ಅವೆಲ್ಲ ರೂಪಗಳೂ ಒಂದೇ ಎಂದು ತಿಳಿಯುತ್ತದೆ.) ಮತ್ಸ್ಯಪುರಾಣದ ವಾಕ್ಯದಲ್ಲಿ ಹೀಗಿದೆ— ಸರ್ವೋತ್ತಮನಾದ ವಿಷ್ಣುವು

ಎಲ್ಲೆಡೆಯೂ ಏಕರೂಪಃ=ಗುಣ–ಧರ್ಮಗಳಲ್ಲಿ ವ್ಯತ್ಯಾಸವಿಲ್ಲದವನು, ಅಭಿನ್ನ ರೂಪನು. ಏಕಂ ರೂಪಂ ಚ=ಅವನ ರೂಪವು ಒಂದೇ ಆದರೂ ಐಶ್ವರ್ಯಾತ್=ಈಶನ ಶಕ್ತಿ ವಿಶೇಷದಿಂದಾಗಿ ಸೂರ್ಯವತ್=ಅನೇಕ ಕಣ್ಣುಗಳಲ್ಲಿ ಇರುವ ಸೂರ್ಯರಂತೆ ಬಹುಧಾ=ಅನೇಕವಾಗಿರುವಂತೆ ಈಯತೇ=ತಿಳಿಯಲ್ಪಡುತ್ತದೆ. ಭಾಗವತದಲ್ಲಿ ಇದೇ ಮಾತಿದೆ—ಪ್ರತಿದೃಶಂ=ಒಬ್ಬೊಬ್ಬರ ಕಣ್ಣಿಗೂ ನಿಯಾಮಕನಾಗಿ ನೈಕಧಾ=ಅನೇಕ ರೂಪದಿಂದ ಇರುವ ಅರ್ಕಮಿವ=ಸೂರ್ಯನಂತೆ ನಾನು ನಿನ್ನನ್ನು (ಪರಮಾತ್ಮನನ್ನು) ವಿಧೂತಭೇದಮೋಹಃ=ನಿನ್ನ ರೂಪಗಳಿಗೆ ಭೇದಭ್ರಾಂತಿಯನ್ನು ಕಳೆದುಕೊಂಡು ಸಮಧಿಗತೋಽಸ್ಮಿ=ಚೆನ್ನಾಗಿ ತಿಳಿದುಕೊಂಡಿದ್ದೇನೆ. (ಇದು ಭೀಷ್ಮರು ಯುಧಿಷ್ಠಿರನ ಮುಂದೆ ಮಾಡಿದ ಕೃಷ್ಣಸ್ತುತಿ. ಇದರ ಪೂರ್ವಾರ್ಧ–ತಮಿಮಮಹಂ ಶರೀರಭಾಜಾಂ ಹೃದಿ ಹೃದಿ ವಿಷ್ಟಿತಮಾತ್ಮಕಲ್ಪಿತಾನಾಮ್ ।। ಎಂದು.)

ಪ್ರತಿದೃಶಮಿವ ಎನ್ನುವುದಕ್ಕೆ ಒಂದು ಅಭಿಪ್ರಾಯ–ಕಣ್ಣುಗಳಲ್ಲಿ ಸೂರ್ಯನು ನಿಯಾಮಕನಾಗಿದ್ದಾನೆ. ಕಣ್ಣುಗಳು ಅನಂತ. ಅವುಗಳಲ್ಲಿ ನಿಯಾಮಕನಾದ ಸೂರ್ಯ ಒಬ್ಬನೇ, ಎಂದು. ಅಥವಾ ಹೀಗೂ ಹೇಳಬಹುದು–ಆಕಾಶದಲ್ಲಿ ಇರುವ ಸೂರ್ಯ ಎಲ್ಲರಿಗೂ ಅಭಿಮುಖನಾಗಿರುವಂತೆ ತೋರುತ್ತಾನೆ. ಎಲ್ಲರೂ ತಿಳಿಯುತ್ತಾರೆ–ನನ್ನ ಕಣ್ಣೆದುರಲ್ಲೇ ಸೂರ್ಯನಿದ್ದಾನೆ, ಎಂದು. ಆದರೆ, ಸೂರ್ಯ ಒಬ್ಬನೇ. ಒಬ್ಬೊಬ್ಬರ ಕಣ್ಣ ಮುಂದೆ ಒಬ್ಬೊಬ್ಬ ಸೂರ್ಯನಿಲ್ಲ, ಎಂದು.

**ವಿವರಣೆ**—ಸೂತ್ರದಲ್ಲಿ ಸ್ಥಾನಶಬ್ದದಿಂದ ಸ್ಥಾನಭೇದ ಎಂಬ ಅರ್ಥ ಲಕ್ಷಣಯಾ ಗ್ರಾಹ್ಯ. ಸ್ಥಾನಭೇದದಿಂದಾಗಿಯೂ 'ಉಭಯಲಿಂಗಂ ನ'. ಉಭಯಶಬ್ದವು ಭಿನ್ನ ಎಂಬ ಅರ್ಥದಲ್ಲಿದೆ.

''ಲಿಂಗಂ ಸ್ವರೂಪಮುದ್ದಿಷ್ಟಂ ಲಿಂಗಂ ಜ್ಞಾಪಕಮೇವ ಚ''

ಎಂಬ ಕೋಶದಂತೆ ಲಿಂಗಶಬ್ದಕ್ಕೆ ಸ್ವರೂಪ ಎಂದರ್ಥ. 'ಉಭಯ ಲಿಂಗಂ=ಭಿನ್ನ ರೂಪಂ ನ' ಎಂದು ಅರ್ಥ. ಸ್ಥಾನಭೇದದಿಂದಲೂ ಪರಮಾತ್ಮನ ರೂಪಗಳಿಗೆ ಭೇದವಿಲ್ಲ, ಎಂದು ಅರ್ಥ. 'ನ ಸ್ಥಾನತೋಽಪಿ ಉಭಯತ್ವಂ' ಸ್ಥಾನಭೇದ ಪ್ರಯುಕ್ತವಾಗಿ ಭಗವಂತನಿಗೆ ಭೇದವಿಲ್ಲ, ಎಂದು ಹೇಳಿದರೆ ವ್ಯಾಪ್ತನಾದ ಭಗವಂತನ ಒಂದೊಂದು ಅವಯವಗಳು ಒಂದೊಂದು ಸ್ಥಾನದಲ್ಲಿದೆ, ಎಂದೂ ಪರಿಹಾರ ಲಭ್ಯವಾದೀತು. ಅದು ವಿವಕ್ಷಿತವಲ್ಲ. ಅದಕ್ಕಾಗಿ 'ಉಭಯಲಿಂಗಂ' ಎಂದು ರೂಪವಾಚಕವಾದ ಲಿಂಗ ಶಬ್ದವಿದೆ. ಪ್ರತಿವಸ್ತುಗಳಲ್ಲೂ ಪರಮಾತ್ಮನ ರೂಪವು ಸರ್ವಾವಯವಪೂರ್ಣವಾಗಿಯೇ ಇರುತ್ತದೆ.

**॥ ಓಂ ನ ಭೇದಾದಿತಿ ಚೇನ್ನ ಪ್ರತ್ಯೇಕಮತದ್ವಚನಾತ್ ಓಂ ॥ ೧೨ ॥**

**'ಕಾರ್ಯಕಾರಣಬದ್ಧೌ ತಾವಿಷ್ಯೇತೇ ವಿಶ್ವತೈಜಸೌ ।**
**ಪ್ರಾಜ್ಞಃ ಕಾರಣಬದ್ಧಸ್ತು ದ್ವೌ ತು ತುರ್ಯೇ ನ ಸಿದ್ಧ್ಯತಃ ॥'**
**(ಮಾಂ. 2.16) ಇತಿ ಭೇದವಚನಾನ್ನೇತಿ ಚೇತ್, ನ ।**

**'ಏಷ ತ ಆತ್ಮಾಽಂತರ್ಯಾಮ್ಯಮೃತಃ' (ಬೃ.ಉ. 5.7.3), 'ಅಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಂ ಸರ್ವಮ್' (ಬೃ.ಉ. 4.5.1), 'ಅಯಂ ವೈ ಹರಯೋಽಯಂ ವೈ ದಶ ಚ ಸಹಸ್ರಾಣಿ ಚ ಬಹೂನಿ ಚಾನಂತಾನಿ ಚ । ತದೇತದ್ ಬ್ರಹ್ಮಾಪೂರ್ವಮನಪರಮನಂತರಮಬಾಹ್ಯಮಯಮಾತ್ಮಾ ಬ್ರಹ್ಮ ಸರ್ವಾನುಭೂರಿತ್ಯನುಶಾಸನಮ್' (ಬೃ.ಉ. 4.5.19)**
**ಇತಿ ಪ್ರತ್ಯೇಕಮಭೇದವಚನಾತ್ ॥**

ಜಾಗ್ರದಾದಿಅವಸ್ಥಾನಿಯಾಮಕರೂಪಗಳಿಗೆ ಭೇದಕಧರ್ಮಗಳನ್ನು ಮಾಂಡೂಕೋಪನಿಷತ್ತಿನಲ್ಲಿ ಹೇಳಲಾಗಿದೆ. ಹೀಗೆ, ಭೇದಕ ಧರ್ಮಗಳನ್ನು ಹೇಳುವ ಮೂಲಕ ಭಗವದ್ರೂಪಗಳಿಗೆ ಭೇದವನ್ನು ತಿಳಿಸುವ ವಚನದಿಂದಾಗಿ ಅವುಗಳಿಗೆ ಭೇದವೇ ಇದೆ ಎಂದರೆ ಇದು ಯುಕ್ತವಲ್ಲ. ಬೃಹದಾರಣ್ಯಕೋಪನಿಷತ್ತಿನಲ್ಲಿ ಅಂತರ್ಯಾಮಿರೂಪಗಳನ್ನು ಹೇಳಿ ಆ ಒಂದೊಂದು ರೂಪಗಳಿಗೂ ಅತದ್ವಚನಾತ್= ಅಭೇದವನ್ನು ಹೇಳಲಾಗಿದೆ. ಈ ಕಾರಣದಿಂದ ಸ್ಥಾನಭೇದ, ಕಾರ್ಯಭೇದದಿಂದ ಭಗವಂತನ ರೂಪಗಳಿಗೆ ಭೇದವಿದೆ, ಎಂದು ಹೇಳಬಾರದು.

**ವಿವರಣೆ**—ವಿಶ್ವ-ತೈಜಸ-ಪ್ರಾಜ್ಞರೂಪಗಳು ಜಾಗ್ರತ್-ಸ್ವಪ್ನ-ಸುಷುಪ್ತಿಗಳಿಗೆ ನಿಯಾಮಕಗಳು. ತುರ್ಯರೂಪ ಮೋಕ್ಷನಿಯಾಮಕ. ವಿಶ್ವ-ತೈಜಸರೂಪಗಳಿಗೂ ಪ್ರಾಜ್ಞರೂಪಕ್ಕೂ ಮಾಂಡೂಕೋಪನಿಷತ್ತಿನಲ್ಲಿ ಹೀಗೆ ವೈಧರ್ಮ್ಯವನ್ನು ಹೇಳಲಾಗಿದೆ—

ಕಾರ್ಯಕಾರಣಬದ್ಧೌ ತಾವಿಷ್ಯೇತೇ ವಿಶ್ವತೈಜಸೌ ।
ಪ್ರಾಜ್ಞಃ ಕಾರಣಬದ್ಧಸ್ತು (ದ್ವೌ ತು ತುರ್ಯೇ ನ ವಿದ್ಯತಃ॥)

ವಿಶ್ವ ಮತ್ತು ತೈಜಸರೂಪಗಳು ಕಾರ್ಯಕಾರಣಬದ್ಧರು. ಪ್ರಾಜ್ಞನು ಕಾರಣಬದ್ಧ.

ಕಾರಣ ಎಂದರೆ ಭ್ರಾಂತಿಗೆ ಕಾರಣವಾದ ಅವಿದ್ಯೆ. ಕಾರ್ಯವೆಂದರೆ ಸ್ವಾತಂತ್ರ್ಯಭ್ರಮೆ ಅಥವಾ ತತ್ತ್ವಪ್ರದೀಪದಂತೆ ದೇಹೇಂದ್ರಿಯಾದಿಗಳಲ್ಲಿ ಮಮತಾತಿಶಯ. ಇದು ಎಚ್ಚರದಲ್ಲಿ ಇದೆ, ಸ್ವಪ್ನದಲ್ಲೂ ಸ್ವಾಪ್ನವಸ್ತುಗಳಲ್ಲಿ ಜಾಗ್ರತ್ವಭ್ರಮ, ಅವುಗಳಲ್ಲಿ ರಾಗ–ದ್ವೇಷಾದಿಗಳು ಇವೆ. ಇವೆರಡೂ ಅವಸ್ಥೆಗಳಲ್ಲೂ ಅಜ್ಞಾನವು ಇದ್ದೇ ಇದೆ. ಈ ಅಜ್ಞಾನಕ್ಕೆ ಮತ್ತು ಅಜ್ಞಾನಕಾರ್ಯವಾದ ಭ್ರಮೆಗೆ ನಿಯಾಮಕವಾದುದರಿಂದ ವಿಶ್ವ–ತೈಜಸರು ಕಾರ್ಯ–ಕಾರಣಬದ್ಧರು. ಪ್ರಾಜ್ಞನ ನಿಯಂತ್ರಣಕ್ಕೆ ಒಳಪಟ್ಟಿರುವ ಸುಪ್ತಾವಸ್ಥೆಯಲ್ಲಿ ಅಜ್ಞಾನ ಮಾತ್ರ ಇದೆ, ಅದರ ಕಾರ್ಯವಾದ ಭ್ರಮೆ ಇಲ್ಲ. ಹೀಗಾಗಿ ವಿಶ್ವತೈಜಸರು ಕಾರ್ಯ–ಕಾರಣಬದ್ಧರಾದರೆ ಪ್ರಾಜ್ಞ ಕಾರಣಬದ್ಧ. ಮೋಕ್ಷಾವಸ್ಥೆಯಲ್ಲಿ ಅಜ್ಞಾನವೂ ಇರುವುದಿಲ್ಲವಾದುದರಿಂದ 'ದ್ವೌ ತು ತುರ್ಯೇ ನ ವಿದ್ಯತಃ' –ತುರ್ಯನಲ್ಲಿ ಕಾರ್ಯಬದ್ಧತ್ವವೂ ಇಲ್ಲ, ಕಾರಣ ಬದ್ಧತ್ವವೂ ಇಲ್ಲ.

ಹೀಗೆ, ಭಗವದ್ರೂಪಗಳಲ್ಲಿ ಭೇದಕಧರ್ಮಗಳನ್ನು ಹೇಳುವ ಮೂಲಕ ಭೇದವನ್ನು ತಿಳಿಸಲಾಗಿದೆ. ಇದು ಸೂತ್ರದ ಪೂರ್ವಪಕ್ಷ. ಆದಕ್ಕೆ ಉತ್ತರ 'ಪ್ರತ್ಯೇಕಂ ಅತದ್ವಚನಾತ್' ಬೃಹದಾರಣ್ಯಕೋಪನಿಷತ್ತಿನ ಐದನೆಯ ಅಧ್ಯಾಯದಲ್ಲಿ 'ಯಃ ಪೃಥಿವ್ಯಾಂ ತಿಷ್ಠನ್' ಇತ್ಯಾದಿಯಾಗಿ ಪೃಥಿವೀ–ಜಲ–ಅಗ್ನ್ಯಾದಿಗಳ ಅಂತರ್ಯಾಮಿಯಾಗಿ ಪರಮಾತ್ಮನನ್ನು ಉಲ್ಲೇಖಿಸಿರುವ ಯಾಜ್ಞವಲ್ಕ್ಯರು ಉದ್ದಾಲಕರಿಗೆ 'ಏಷ ತೇ ಆತ್ಮಾಽಂತರ್ಯಾಮ್ಯಮೃತಃ' ಎಂದಿದ್ದಾರೆ. ಆ ಎಲ್ಲ ನಿಯಾಮಕರೂಪಗಳಿಗೆ ಉದ್ದಾಲಕರ ಅಂತರ್ಯಾಮಿರೂಪದೊಂದಿಗೆ ಅಭೇದವನ್ನು ಹೇಳಿದ್ದಾರೆ. ಇದರಿಂದಾಗಿ ಸ್ಥಾನಭೇದೇನ ಇರುವ ರೂಪಗಳಿಗೂ ಪರಸ್ಪರ ಅಭೇದವು ಸಿದ್ಧವಾಗುತ್ತದೆ.

ಅದರಂತೆ ನಾಲ್ಕನೆಯ ಅಧ್ಯಾಯದಲ್ಲಿ 'ಯಃ ಪೃಥಿವ್ಯಾಂ ತೇಜೋಮಯೋಽಮೃತಮಯಃ' 'ಯೋಽಪ್ಸು ತೇಜೋಮಯೋಽಮೃತಮಯಃ' ಎಂದು ಅನೇಕ ಸ್ಥಾನಗಳಲ್ಲಿ ಭಗವದ್ರೂಪಗಳನ್ನು ಹೇಳಿ 'ಅಯಮೇವ ಸಃ, ಯೋಽಯಮಾತ್ಮಾ' ಎಂದು ಒಂದೊಂದಕ್ಕೂ ಪೂರ್ವಪ್ರಸ್ತುತವಾದ ಹಯಗ್ರೀವರೂಪದೊಂದಿಗೆ ಅಭೇದವನ್ನು ಹೇಳಿದ್ದಾರೆ.

ಹೀಗೆ ಈ ಎರಡು ಪ್ರಕರಣಗಳಲ್ಲಿ ವಿಭಿನ್ನ ಸ್ಥಾನಗಳಲ್ಲಿರುವ ಭಗವದ್ರೂಪಗಳಿಗೆ ಪರಸ್ಪರಾಭೇದವನ್ನು ಹೇಳಲಾಗಿದೆ. ನಾಲ್ಕನೆಯ ಅಧ್ಯಾಯದಲ್ಲಿ ನಿಯಾಮಕ ರೂಪಗಳಿಗೆ ಮೂಲರೂಪದೊಂದಿಗೆ ಐಕ್ಯವನ್ನು ಹೇಳಲಾಗಿದೆ—ಹರಯಃ= ಹರಿನಾಮಕಗಳಾದ ದಶ=ಮತ್ಸ್ಯಾದಿ ಹತ್ತುರೂಪಗಳು, ಅಯಂ ವೈ=

ಮೂಲಪದ್ಮನಾಭ ರೂಪವೇ ಆಗಿದೆ. ಸಹಸ್ರಾಣಿ=ವಿಶ್ವಾದಿ ಸಹಸ್ರರೂಪಗಳು ಅಯಂ ವೈ=ಮೂಲ ರೂಪವೇ, ಬಹೂನಿ ಚ ಅನಂತಾನಿ ಚ ಅಯಂ ವೈ. ತದೇತದ್ ಬ್ರಹ್ಮ=ಇವೆಲ್ಲವೂ ಗುಣಪೂರ್ಣಗಳು. ಅಪೂರ್ವಂ=ಅನಾದಿ. ಅನಪರಂ=ಅಂತರಹಿತ. ಅನಂತರಂ=ನ ವಿದ್ಯತೇ ಅಂತರಂ ಅನ್ಯದ್ ಯಸ್ಯ–ಬ್ರಹ್ಮನಿಗೆ ಅಂತರವಾದುದು(ಅವನೊಳಗೆ ಇರುವವನು) ಮತ್ತೊಂದಿಲ್ಲ. ಅಬಾಹ್ಯಂ=ಅವನಿಗೆ ಬಾಹ್ಯವಾದುದು ಇನ್ನೊಂದಿಲ್ಲ. ಅವನೇ ಸರ್ವಾಂತರ, ಸರ್ವಬಾಹ್ಯ. ಅಯಂ ಬ್ರಹ್ಮ, ಅಯಂ ಆತ್ಮಾ, ಸರ್ವಾನುಭೂಃ=ಎಲ್ಲವನ್ನೂ ಅನುಭವಿಸುವವನು (ಸರ್ವಜ್ಞ). ಇತಿ=ಹೀಗೆಂದು ವೇದಾನುಶಾಸನಂ=ವೇದದ ಉಪದೇಶ.

## ॥ ಓಂ ಅಪಿ ಚೈವಮೇಕೇ ಓಂ ॥ ೧೩ ॥

**ಏವಮಭೇದೇನ್ಯೆವ । ಚಶಬ್ದಾದನಂತರೂಪತ್ವಂ ಚೈಕೇ ಶಾಖಿನಃ ಪಠಂತಿ–**

**'ಅಮಾತ್ರೋಽನಂತಮಾತ್ರಶ್ಚ ದ್ವೈತಸ್ಯೋಪಶಮಃ ಶಿವಃ ।**
**ಓಂಕಾರೋ ವಿದಿತೋ ಯೇನ ಸ ಮುನಿರ್ನೇತರೋ ಜನಃ ॥'**

**(ಮಾಂ. 4.7) ಇತಿ ।**

**ಅಭೇದೇಽಪಿ ಭೇದವ್ಯಪದೇಶಃ ಸ್ಥಾನಭೇದಾದೈಶ್ವರ್ಯಯೋಗಾಚ್ಚ ಯುಜ್ಯತೇ । ಬ್ರಹ್ಮತರ್ಕೇ ಚ–**

**'ಬದ್ಧೋ ಬಂಧಾದಿಸಾಕ್ಷಿತ್ವಾದ್ ಭಿನ್ನೋ ಭಿನ್ನೇಷು ಸಂಸ್ಥಿತೇಃ ।**
**ನಿರ್ದೋಷಾದ್ವಯರೂಪೋಽಪಿ ಕಥ್ಯತೇ ಪರಮೇಶ್ವರಃ ॥' ಇತಿ ॥**

ಏವಂ=ಹೀಗೆ ಅಭೇದದಿಂದಲೇ, ಚಶಬ್ದದಿಂದ, ಅನಂತರೂಪಗಳು ಬ್ರಹ್ಮನಿಗೆ ಇವೆ, ಎಂದು ಕೆಲವು ವೇದಶಾಖಿಗಳು ಹೇಳುತ್ತಾರೆ. ಮಾಂಡೂಕೋಪನಿಷತ್ತಿನಲ್ಲಿ ಅಂತಹ ಮಂತ್ರವಿದೆ–ಅಮಾತ್ರಃ=ಭಿನ್ನಾಂಶ ರಹಿತನು, ಅನಂತಮಾತ್ರಃ=ಅಭಿನ್ನವಾದ ಅನಂತರೂಪಗಳುಳ್ಳವನು. ದ್ವೈತಸ್ಯ=ಮಿಥ್ಯಾಜ್ಞಾನಕ್ಕೆ ಉಪಶಮಃ=ನಾಶಕ, ಶಿವಃ=ಮಂಗಳಮಯ, ಇಂತಹ ಓಂಕಾರಃ=ಓಂಕಾರವಾಚ್ಯನಾದ ಪರಮಾತ್ಮನು ಯೇನ ವಿದಿತಃ=ಯಾರಿಂದ ತಿಳಿಯಲ್ಪಡುವನೋ ಸಃ ಮುನಿಃ=ಅವನು ಮನನಕರ್ತೃ. ನೇತರಃ ಜನಃ=ಇತರರು ಮನನಕರ್ತೃಗಳಲ್ಲ. ಓಂಕಾರವಾಚ್ಯನ ಜ್ಞಾನ ಬಂದರೆ ಮಾತ್ರ ಮನನ ಸಾರ್ಥಕ.

ತತ್ತ್ವಪ್ರದೀಪದಲ್ಲಿ-ಅಮಾತ್ರಃ=ಅಳತೆಗೆ ಸಿಗದವನು. ಅನಂತಮಾತ್ರಃ=ಅನಂತ ರೂಪನು. ಶಿವಃ=ಸುಖಾತ್ಮಕ. ಎಂದು ವ್ಯಾಖ್ಯಾನಿಸಲಾಗಿದೆ.

ಹೀಗೆ ಪರಮಾತ್ಮನ ರೂಪಗಳಿಗೆ ಅಭೇದವಿದ್ದರೂ 'ಕಾರ್ಯಕಾರಣಬದ್ಧೌ' ಇತ್ಯಾದಿಯಾಗಿ ಭೇದವ್ಯಪದೇಶವು ಅಕ್ಷಿ-ಹೃದಯಾದಿ ಸ್ಥಾನಭೇದಪ್ರಯುಕ್ತವಾಗಿ ಹಾಗೂ ಅಚಿಂತ್ಯ ಐಶ್ವರ್ಯಪ್ರಯುಕ್ತವಾಗಿ ಎಂದು ತಿಳಿಯಬೇಕು. ಬ್ರಹ್ಮತರ್ಕದಲ್ಲಿ ಹಾಗೆಯೇ ಹೇಳಿದೆ—ಪರಮಾತ್ಮ ಜೀವಗತವಾದ ಬಂಧದ ದರ್ಶಕನಾದುದರಿಂದ ಬದ್ಧ, ಎನಿಸಿದ್ದಾನೆ. ಅಭಿನ್ನನಾದರೂ ಭಿನ್ನಸ್ಥಾನಗತನಾದುದರಿಂದ ಭಿನ್ನನೆನಿಸುತ್ತಾನೆ. ಹೀಗೆ ಅವನು ನಿರ್ದೋಷನಾದರೂ ಅಭಿನ್ನನಾದರೂ ಇಂತಹ ದೋಷವಾಚಕ ಶಬ್ದಗಳಿಂದ ವಾಚ್ಯನಾಗಿದ್ದಾನೆ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ಓಂ ॥** (ಅತ್ರ ಈಶಸ್ಯ ಸರ್ವತ್ರ ನಿರ್ದೋಷಾಶೇಷಗುಣತ್ವಮ್ ಅಭಿನ್ನತ್ವಂ ಚ ಸಾಧ್ಯತೇ। ಸ್ಥಾನತ ಇತಿ ತದ್ಭೇದೋ ಲಕ್ಷ್ಯತೇ। ಆದ್ಯಾದಿತ್ವಾತ್ ಸಪ್ತಮ್ಯರ್ಥೇ ತಸಿಃ। ಉಭಯಶಬ್ದ ಪರ್ಯಾಯಃ ಉಭಶಬ್ದಃ। ಉಭಶಬ್ದಶ್ಚ ಸಂಖ್ಯಾ-ತದನ್ಯಾರ್ಥಯೋರ್ವಾಚಕಃ। ಉಭಾವುದಾತ್ತಃ, ಇತಿ ಸೂತ್ರೇ ದ್ವ್ಯರ್ಥತ್ವಸ್ಯ ವೃತ್ತ್ಯಾದೌ ದರ್ಶಿತತ್ವಾತ್।

ಸುರ-ನರ-ತಿರ್ಯಗಾದ್ಯಕ್ಷ್ಯಾದಿಸ್ಥಾನಭೇದೇಽಪಿ ಪರಸ್ಯ=ಈಶಸ್ಯ ಉಭಯ ಲಿಂಗಂ=ಭಿನ್ನರೂಪಂ ನಾಸ್ತಿ।

'ಲಿಂಗಂ ಸ್ವರೂಪಮುದ್ದಿಷ್ಟಂ ಲಿಂಗಂ ಜ್ಞಾಪಕಮೇವ ಚ।' ಇತ್ಯಾದೇಃ। ದೋಷಿತ್ವಾದಿ ಚ ನ, ಇತ್ಯಪಿ ಧ್ಯೇಯಮ್। ಕುತಃ ? ಸರ್ವತ್ರ ಹಿ=ಯಸ್ಮಾತ್, ಸರ್ವಸ್ಥಾನೇಷು ನಿರ್ದೋಷಾಶೇಷಗುಣಃ, ನಿರ್ಭೇದಶ್ಚ ಪರಃ 'ಸರ್ವಭೂತೇಷು ಏತಮೇವ ಬ್ರಹ್ಮೇತ್ಯಾಚಕ್ಷತೇ' ಇತ್ಯಾದೌ ಶ್ರೂಯತೇ ಇತ್ಯರ್ಥಃ।)

ಸ್ಥಾನತಃ=ಸ್ಥಾನಭೇದ ನಿಮಿತ್ತದಿಂದ ಪರಸ್ಯ=ಪರಮಾತ್ಮನಿಗೆ ಉಭಯಲಿಂಗಂ= ಭಿನ್ನರೂಪವು ನ=ಇಲ್ಲ. ಹಿ= ಏಕೆಂದರೆ, ಸರ್ವತ್ರ=ಸರ್ವತ್ರಪದಘಟಿತವಾದ 'ಸರ್ವತ್ರ ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಂಬ ಶ್ರುತಿಯು, ಎಲ್ಲೆಡೆ ಇರುವ ಪರಮಾತ್ಮನ ರೂಪವೂ ಪೂರ್ಣವಾದುದು, ಎಂದು ಹೇಳುತ್ತದೆ.

ಅರ್ಭಕೌಕಸ್ತ್ವಸೂತ್ರದಲ್ಲಿ (1-2-7) ಸರ್ವಗತನಾದ ಪರಮಾತ್ಮನು ಅಲ್ಪದೇಶ ದಲ್ಲಿಯೂ ಇರುತ್ತಾನೆ, ಎಂದು ಹೇಳಲಾಗಿದೆ. 'ಅಲ್ಪಶ್ರುತೇಃ' ಎಂಬ ಸೂತ್ರದಲ್ಲಿ

(1-3-5) ಒಂದೊಂದು ಕಡೆಯಲ್ಲಿರುವ ಪರಮಾತ್ಮನ ರೂಪಗಳಿಗೂ ಸಮಗ್ರಾವಯವಗಳಿವೆ, ಎಂದು ಹೇಳಲಾಗಿದೆ. ಆದಕ್ಕಾಗಿಯೇ ಸೂತ್ರದಲ್ಲಿ 'ಉಭಯರೂಪಂ' ಎಂಬ ಶಬ್ದದ ಬದಲು 'ಉಭಯಲಿಂಗಂ' ಎಂಬ ಶಬ್ದವನ್ನು ಪ್ರಯೋಗಿಸಲಾಗಿದೆ.

**॥ ಓಂ ನ ಭೇದಾದಿತಿ ಚೇನ್ನ ಪ್ರತ್ಯೇಕಮತದ್ವಚನಾತ್ ಓಂ ॥** (ಪರಸ್ಯ, ಇತ್ಯಸ್ತಿ। ಭೇದೇತ್ಯುಪಲಕ್ಷಣಮ್। 'ಕಾರ್ಯಕಾರಣಬದ್ಧೌ' ಇತಿ ಶ್ರುತೌ ಜಾಗ್ರದ್‌ಬದ್ಧೋ ವಿಶ್ವಃ, ಸ್ವಪ್ನಬದ್ಧಸ್ತೈಜಸಃ, ಅಜ್ಞಾನಬದ್ಧಃ ಪ್ರಾಜ್ಞಃ, ಇತ್ಯಾದಿ-ಭೇದ-ದೋಷಿತ್ವಾದಿವಚನಾತ್ ನಾಭೇದಃ ಪರಸ್ಯ, ಇತಿ ಚೇನ್ನ। ಪ್ರತ್ಯೇಕಮ್ ಅತದ್ವಚನಾತ್-ತತ್=ಭೇದಃ, ಅತತ್=ಅಭೇದಃ। 'ಏಷ ತ ಆತ್ಮಾಂತರ್ಯಾಮ್ಯಮೃತಃ' ಇತ್ಯತ್ರ ಪೃಥಿವ್ಯಂತರ್ಯಾಮ್ಯೇವ ತರ್ವಾಂತರ್ಯಾಮೀ, ಇತಿ 'ಅಯಮೇವ ಸಃ ಯೋಽಯಮಾತ್ಮಾ' ಇತ್ಯಾದೌ ಈಶ್ವರರೂಪಾಣಾಂ ಪ್ರತ್ಯೇಕಂ=ಪರಸ್ಪರಂ ಮೂಲರೂಪೇಣ ಚ ಅಭೇದವಚನಾತ್ ಇತ್ಯರ್ಥಃ। 'ಬದ್ಧೋ ಬಂಧಾದಿಸಾಕ್ಷಿತ್ವಾತ್' ಇತ್ಯಾದೌ ನಿರ್ದೋಷತಾವಚನಾತ್ ಇತ್ಯುಪಲಕ್ಷ್ಯತೇ। ಅತದ್ವಚನಾತ್, ಇತ್ಯೇವ ಪೂರ್ತೌ ಪ್ರತ್ಯೇಕಮ್, ಇತ್ಯುಕ್ತಿಃ ಆದರಸೂಚನಾರ್ಥಾ, ತೇನ ಭೇದೋಕ್ತಿತಃ ಅಭೇದೋಕ್ತೇಃ ಪ್ರಾಬಲ್ಯಮಿತಿ ಭಾವಃ।)

ಮಾಂಡೂಕೋಪನಿಷತ್ತಿನಲ್ಲಿ ವಿಶ್ವಾದಿರೂಪಗಳಿಗೆ ಕಾರ್ಯ-ಕಾರಣಬದ್ಧ ಇತ್ಯಾದಿಯಾಗಿ ವಿಭಿನ್ನಧರ್ಮಗಳನ್ನೂ ದೋಷಸಂಸರ್ಗವನ್ನೂ ಹೇಳಿರುವುದರಿಂದ ಆ ರೂಪಗಳಿಗೆ ಪರಸ್ಪರವಾಗಿ ಹಾಗೂ ಮೂಲರೂಪದೊಂದಿಗೆ ಅಭೇದವು ಇಲ್ಲ, ಎಂದರೆ ಇದು ಸರಿಯಲ್ಲ. ಪ್ರತ್ಯೇಕಂ=ಪೃಥಿವ್ಯಾದಿ ನಿಯಾಮಕವಾಗಿರುವ ಒಂದೊಂದು ರೂಪಗಳನ್ನೂ ಹೇಳಿ ಅವುಗಳಿಗೆ ಒಂದೊಂದಕ್ಕೂ ಪ್ರತ್ಯೇಕವಾಗಿ 'ಏಷ ತೇ ಅಂತರ್ಯಾಮ್ಯಮೃತಃ' ಎಂದು ಮುಂತಾಗಿ ಅತದ್ವಚನಾತ್=ಅಭೇದವನ್ನು ಹೇಳಿರುವುದರಿಂದಾಗಿ ವಿಶ್ವಾದಿರೂಪಗಳಿಗೆ ಪರಸ್ಪರವಾಗಿ ಮತ್ತು ಅವುಗಳಿಗೆ ಮೂಲರೂಪದೊಂದಿಗೆ ಭೇದವಿಲ್ಲ.

(ಸೂತ್ರದಲ್ಲಿ ನ+ತತ್=ಅತತ್, ತತ್ ಎಂದರೆ ಪೂರ್ವಪ್ರಸ್ತುತವಾದ ಭೇದ. ಅತತ್ ಎಂದರೆ ಅಭೇದ.)

**॥ ಓಂ ಅಪಿ ಚೈವಮೇಕೇ ಓಂ ॥** (ಏಕೇಽಪಿ ಶಾಖಿನಃ ಏವಂ=ಅಭೇದಂ, 'ಅಮಾತ್ರೋಽನಂತಮಾತ್ರಶ್ಚ' ಇತಿ ಪರಸ್ಯ ಪಠಂತೀತ್ಯರ್ಥಃ। ಚಶಬ್ದೋಽನಂತ-ರೂಪತ್ವಂ ಚೇಶೇ ಸಮುಚ್ಚಿನೋತಿ। ಅಮಾತ್ರೋ=ಭಿನ್ನಾಂಶರಹಿತಃ ಇತ್ಯರ್ಥಾತ್

ಭೇದವ್ಯಪದೇಶಃ ಸ್ಥಾನಭೇದಾತ್ ಐಶ್ವರ್ಯಾಚ್ಚ ಯುಕ್ತ ಇತಿ ಭಾವಃ). ಏಕೇಽಪಿ ಶಾಖಿನಃ=ಹಿಂದಿನ ಸೂತ್ರದಲ್ಲಿ ಹೇಳಿರುವ ಕಾಣ್ವಶಾಖೆಯವರಲ್ಲದೆ ಮಾಂಡೂಕಶಾಖಿಗಳೂ ಕೂಡಾ 'ಅಮಾತ್ರೋಽನಂತಮಾತ್ರಶ್ಚ' ಎಂದು ಭಗವದ್ರೂಪಗಳಿಗೆ ಅಭೇದವನ್ನು ಹೇಳುತ್ತಾರೆ.

ಇಲ್ಲಿಗೆ ನ ಸ್ಥಾನತೋಽಪ್ಯಧಿಕರಣವು ಮುಗಿಯಿತು.

## ೯. ಅರೂಪಾಧಿಕರಣಮ್

ರೂಪವತ್ತ್ವಾದನಿತ್ಯತ್ವಮಿತಿ; ಅತೋ ವಕ್ತಿ-

**॥ ಓಂ ಅರೂಪವದೇವ ಹಿ ತತ್ಪ್ರಧಾನತ್ವಾತ್ ಓಂ ॥ ೧೪ ॥**

ಪ್ರಕೃತ್ಯಾದಿಪ್ರವರ್ತಕತ್ವೇನ ತದುತ್ತಮತ್ವಾನ್ನೈವ ರೂಪವದ್ ಬ್ರಹ್ಮ । ಹಿಶಬ್ದಾತ್ 'ಅಸ್ಥೂಲಮನಣು' (ಬೃ.ಉ. 5.8.8) ಇತ್ಯಾದಿಶ್ರುತೇಶ್ಚ ।

'ಭೌತಿಕಾನಿ ಹಿ ರೂಪಾಣಿ ಭೂತೇಭ್ಯೋಽಸೌ ಪರೋ ಯತಃ ।
ಅರೂಪವಾನತಃ ಪ್ರೋಕ್ತಃ ಕ್ವ ತದವ್ಯಕ್ತತಃ ಪರೇ ॥'

ಇತಿ ಚ ಮಾತ್ಸ್ಯೇ ।

ಬ್ರಹ್ಮನಿಗೆ ದೇಹ ಮತ್ತು ಶುಕ್ಲಾದಿರೂಪಗಳು ಇರುವುದರಿಂದ ತನ್ನಾಶಪ್ರಯುಕ್ತವಾಗಿ ನಾಶವೂ ಇದೆ, ಎಂದು ಆಕ್ಷೇಪ ಬಂದಾಗ ಈ ಸೂತ್ರವು ಪರಿಹಾರವನ್ನು ಹೇಳುತ್ತದೆ. ತತ್ಪ್ರಧಾನತ್ವಾತ್=ಪ್ರಕೃತ್ಯಾದಿಗಳಿಗೆ ಪ್ರೇರಕನಾಗಿರುವ ಕಾರಣ ಅವುಗಳಿಗಿಂತ ಉತ್ತಮನಾದುದರಿಂದ ಬ್ರಹ್ಮನು ಪ್ರಾಕೃತವಾದ ರೂಪರಹಿತನಾಗಿದ್ದಾನೆ. ಪ್ರಾಕೃತಶರೀರ ಮತ್ತು ರೂಪಗಳು ಇದ್ದಲ್ಲಿ ಮಾತ್ರ ಅವುಗಳಿಗೆ ನಾಶ. ಅಪ್ರಾಕೃತವಿಗ್ರಹಕ್ಕೆ ನಾಶವಿಲ್ಲ. ಮತ್ಸ್ಯಪುರಾಣವು ಹೇಳುತ್ತದೆ—ಎಲ್ಲ ಶರೀರಗಳೂ ಭೌತಿಕವಾಗಿವೆ. ಆದರೆ, ವಿಷ್ಣು ಭೂತಗಳಿಗಿಂತಲೂ ಉತ್ತಮನು. ಆದ್ದರಿಂದಲೇ ಅವನು ಅಶರೀರಿ. ಪ್ರಕೃತಿಗಿಂತಲೂ ಉತ್ತಮನಾಗಿರುವ ಪರಬ್ರಹ್ಮನಲ್ಲಿ ಪ್ರಕೃತಿನಿರ್ಮಿತ ಶರೀರವು ಹೇಗೆ ತಾನೇ ಇರಲು ಸಾಧ್ಯ?

ತತ್ತ್ವಪ್ರದೀಪದಲ್ಲಿ ಈ ಸೂತ್ರದ ತಾತ್ಪರ್ಯವನ್ನು ಹೀಗೆ ಹೇಳಲಾಗಿದೆ— ಆಕಾಶಾದಿ ಪಂಚಭೂತಗಳಿಗಿಂತಲೂ ಉತ್ತಮನಾಗಿರುವುದರಿಂದ ಬ್ರಹ್ಮನಿಗೆ ಭೌತಿಕ

ದೇಹವು ಇಲ್ಲವೆಂದ ಮೇಲೆ ಪಂಚಭೂತಕಾರಣವಾದ ಪ್ರಕೃತಿ ತತ್ತ್ವವನ್ನು ಮೀರಿರುವ ಅವನಿಗೆ ಭೌತಿಕರೂಪವಿಲ್ಲವೆಂದು ಹೇಳಬೇಕಾಗಿಯೇ ಇಲ್ಲ.

## ॥ ಓಂ ಪ್ರಕಾಶವಚ್ಚಾವೈಯರ್ಥ್ಯಮ್ ಓಂ ॥ ೧೫ ॥

**'ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಮ್' (ಮು.3.1.3), 'ಶ್ಯಾಮಾಚ್ಛಬಳಂ ಪ್ರಪದ್ಯೇ' (ಛಾಂ.ಉ. 8.13.1), 'ಸುವರ್ಣಜ್ಯೋತೀಃ' (ತೈ.ಉ. 3.10) ಇತ್ಯಾದಿಶ್ರುತೀನಾಂ ಚ ನ ವೈಯರ್ಥ್ಯಮ್ । ವಿಲಕ್ಷಣರೂಪತ್ವಾತ್ ।**

**ಯಥಾ ಚಕ್ಷುರಾದಿಪ್ರಕಾಶೇ ವಿದ್ಯಮಾನೇಽಪಿ ವೈಲಕ್ಷಣ್ಯಾದ್ ಅಪ್ರಕಾಶಾದಿ-ವ್ಯವಹಾರಃ ॥**

ಬ್ರಹ್ಮನಿಗೆ ಪ್ರಾಕೃತರೂಪವು ಇಲ್ಲದಿದ್ದರೂ ಅಪ್ರಾಕೃತವಾದ, ವಿಲಕ್ಷಣವಾದ ರೂಪವು ಇರುವುದರಿಂದಾಗಿ 'ಯದಾ ಪಶ್ಯಃ...' ಇತ್ಯಾದಿ ಶ್ರುತಿಗಳಲ್ಲಿ ಬಂಗಾರದ ರೂಪ-ವಿಗ್ರಹಗಳನ್ನು ಹೇಳಿರುವುದು ಯುಕ್ತವಾಗಿದೆ. ಇದರಿಂದಾಗಿ ಅರೂಪಿತ್ವ ಶ್ರುತಿಗೆ (ಅವೈಯರ್ಥ್ಯಂ-ವೈಯರ್ಥ್ಯಂ=ಅಪ್ರಾಮಾಣ್ಯಂ ಅವೈಯರ್ಥ್ಯಂ=ಪ್ರಾಮಾಣ್ಯಂ) ಅಪ್ರಾಮಾಣ್ಯವೂ ಇಲ್ಲ. ಹೇಗೆ ಸೂರ್ಯನ ಬೆಳಕು ಇಲ್ಲದಿದ್ದಾಗ ಚಕ್ಷುರಾದಿ ಪ್ರಕಾಶದ್ರವ್ಯ ಇರುವಾಗಲೇ 'ಇಲ್ಲಿ ಪ್ರಕಾಶವೇ ಇಲ್ಲ' ಎನ್ನುವುದು ಯುಕ್ತವಾಗಿದೆಯೋ ಅದರಂತೆ ಅಪ್ರಾಕೃತರೂಪವು ಪರಬ್ರಹ್ಮನಿಗೆ ಇದ್ದರೂ ಪ್ರಾಕೃತರೂಪವು ಇಲ್ಲದಿರುವ ಕಾರಣದಿಂದಾಗಿ 'ಅರೂಪಮವ್ಯಯಂ' ಎಂಬ ವ್ಯಪದೇಶವು ಯುಕ್ತವೇ ಆಗುತ್ತದೆ. ಇದರಂತೆ, ದೇಹ-ದೇಹಾಭಾವವಾಚಕವಾದ ಶ್ರುತಿಗಳಿಗೂ ವಿರೋಧವನ್ನು ಪರಿಹರಿಸಬೇಕು.

**ಶ್ರುತ್ಯರ್ಥ**—1. ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ (ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್ ।) ಇದು ಮುಂಡಕ ಶ್ರುತಿ. ಪಶ್ಯಃ=ಜೀವನು ಯದಾ=ಯಾವಾಗ ರುಗ್ಮವರ್ಣಂ=ಬಂಗಾರವರ್ಣದ ಪುರುಷನನ್ನು ಪಶ್ಯತೇ=ನೋಡುವನೋ (ಆಗ ಪಾಪಮುಕ್ತನಾಗಿ ಬ್ರಹ್ಮಸಾಮ್ಯವನ್ನು ಪಡೆಯುತ್ತಾನೆ.)

2. 'ಶ್ಯಾಮಾತ್ ಶಬಲಂ ಪ್ರಪದ್ಯೇ' ಇದು ಛಾಂದೋಗ್ಯಶ್ರುತಿ. ಇದಕ್ಕೆ ಭಾಷ್ಯದಲ್ಲಿ ಹೇಳಿರುವ ಅರ್ಥ—

ಶ್ಯಾಮೋ ಹೃದಿಸ್ಥೋ ವಿಷ್ಣುಃ ಶಬಲೋ ವಿಶ್ವರೂಪವಾನ್ ॥

ಎಲ್ಲರ ಹೃದಯದಲ್ಲಿರುವ ಬಿಂಬರೂಪ ಶ್ಯಾಮವರ್ಣದ್ದು. ವಿಶ್ವರೂಪಿಯಾದ

ವಿಷ್ಣುವಿನರೂಪ–ಶಬಲ. ಬೂದು ಬಣ್ಣದ್ದು. ಹೃದಯಸ್ಥರೂಪದ ಉಪಾಸನೆಯಿಂದ ವ್ಯಾಪ್ತರೂಪದ ಉಪಾಸನೆಯನ್ನು ಮಾಡಬೇಕು.

3. 'ಸುವರ್ಣಜ್ಯೋತಿಃ' ಇದು ತೈತ್ತಿರೀಯ ಮಂತ್ರ. ಸುವರ್ಣದಂತೆ ರೂಪವುಳ್ಳ ವಿಷ್ಣುವು ಜ್ಯೋತಿರೂಪನಾಗಿದ್ದಾನೆ. ಭಾಷ್ಯದಲ್ಲಿ ಇನ್ನೊಂದು ರೀತಿಯ ವ್ಯಾಖ್ಯಾನವಿದೆ—'ಪರಮಾನಂದೋ ಹರಿಃ ಜ್ಯೋತಿಃ=ಪ್ರೇರಕಃ ಯಸ್ಯ' ಹರಿಯ ಪ್ರೇರಣೆಗೆ ಒಳಪಟ್ಟ ಮುಕ್ತರು, ಎಂದರ್ಥ.

## ॥ ಓಂ ಆಹ ಚ ತನ್ಮಾತ್ರಮ್ ಓಂ ॥ ೧೬ ॥

**ವೈಲಕ್ಷಣ್ಯಂ ಚೋಚ್ಯತೇ ರೂಪಸ್ಯ ವಿಜ್ಞಾನಾನಂದಮಾತ್ರತ್ವಮ್ 'ಐಕಾತ್ಮ್ಯಪ್ರತ್ಯಯಸಾರಮ್' (ಮಾಂ. 2.4) ಇತಿ ।**

**'ಆನಂದಮಾತ್ರಮಜರಂ ಪುರಾಣಮೇಕಂ**
**ಸಂತಂ ಬಹುಧಾ ದೃಶ್ಯಮಾನಮ್ ।**
**ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾ-**
**ಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಮ್'**

**ಇತಿ ಚ ಚತುರ್ವೇದಶಿಖಾಯಾಮ್ ॥**

ಮಾಂಡೂಕೋಪನಿಷತ್ತು 'ಐಕಾತ್ಮ್ಯಪ್ರತ್ಯಯಸಾರಮ್' ಎಂದು ಭಗವಂತನ ಸ್ವರೂಪವು ಜ್ಞಾನಾನಂದಾತ್ಮಕವಾಗಿದೆ, ಎಂದು ಅದರ ವೈಲಕ್ಷಣ್ಯವನ್ನು ಹೇಳುತ್ತದೆ. ಈ ವಿಷಯ ಚತುರ್ವೇದಶಿಖೆಯಲ್ಲಿದೆ—ಬ್ರಹ್ಮನು ಆನಂದೈಕರೂಪನಾಗಿದ್ದಾನೆ, ಏಕೆಂದರೆ, ಅವನಿಗೆ ಮುಪ್ಪಿಲ್ಲ. ಅವನು ಪುರಾಣ=ಅನಾದಿ, ಏಕಂ=ಸರ್ವೋತ್ತಮ, ಸಂತಂ= ನಿರ್ದುಷ್ಟ, ಬಹುಧಾ=ಮತ್ಸ್ಯಾದಿ ಅನೇಕ ರೂಪನಾಗಿ ದೃಶ್ಯಮಾನಂ= ಕಾಣಿಸಿ ಕೊಳ್ಳುವವನು. ತಂ=ಇಂತಹ ಆತ್ಮಸ್ಥಂ=ನಮ್ಮ ಹೃದಯದಲ್ಲಿರುವ ಪರಮಾತ್ಮನನ್ನು ಯೇ ಧೀರಾಃ=ಯಾವ ಜ್ಞಾನಿಗಳು ಪಶ್ಯಂತಿ=ನೋಡುವರೋ ತೇಷಾಂ=ಅವರಿಗೆ ಶಾಶ್ವತಂ ಸುಖಂ=ನಿತ್ಯಸುಖರೂಪವಾದ ಮೋಕ್ಷ.

**ವಿವರಣೆ**—ಸೂತ್ರದ ತತ್‌ಪದದಿಂದ 'ತದ್ಗುಣಸಾರತ್ವಾತ್' ಎಂಬ ಎರಡನೆಯ ಅಧ್ಯಾಯದ ಸೂತ್ರದಲ್ಲಿ ಪ್ರಸ್ತುತವಾದ ಜ್ಞಾನಾನಂದಗಳನ್ನು ಪರಾಮರ್ಶ ಮಾಡಿಕೊಳ್ಳಬೇಕು. ತನ್ಮಾತ್ರಂ=ಜ್ಞಾನಾನಂದಾತ್ಮಕವಾದುದು, ಬ್ರಹ್ಮನ ರೂಪ, ಎಂದು ಭಾವ.

ಶ್ರುತ್ಯರ್ಥ—ಏಕಾತ್ಮಪ್ರತ್ಯಯ ಸಾರಮ್-ಏಕಃ=ಪ್ರಧಾನವಾದ ಆತ್ಮಾ=ಪೂರ್ಣ. ಬ್ರಹ್ಮನು(ಪ್ರಾಜ್ಞನು) ಪ್ರಧಾನನೂ ಪೂರ್ಣನೂ ಆಗಿದ್ದಾನೆ, ಎಂದರ್ಥ. ಏಕಾತ್ಮನಃ ಭಾವಃ=ಐಕಾತ್ಮ್ಯಂ. ಐಕಾತ್ಮ್ಯಂ ಚ ಪ್ರತ್ಯಯಶ್ಚ-ಸಾರಂ=ಸ್ವರೂಪಂ ಯಸ್ಯ ತತ್। ಬ್ರಹ್ಮನ ರೂಪ ಜ್ಞಾನಾತ್ಮಕ ಎಂದು ಅರ್ಥ.

ಮಾಂಡೂಕ ಭಾಷ್ಯದಲ್ಲಿ ಇದಕ್ಕೆ ಇನ್ನೊಂದು ಅರ್ಥವನ್ನು ಹೇಳಲಾಗಿದೆ—

ಏಕಂ ಪ್ರಧಾನ ಉದ್ದಿಷ್ಟಃ ಆತ್ಮಾ ಪೂರ್ಣತ್ವತಃ ಶ್ರುತಃ ।
ತದೇವಾಸ್ಯ ಸ್ವರೂಪಂ ಯತ್ ಐಕಾತ್ಮ್ಯಂ ತೇನ ಕೀರ್ತಿತಮ್ ।
ಪ್ರತ್ಯಯೋ ಜ್ಞಾನರೂಪತ್ವಾತ್ ಸಾರ ಆನಂದರೂಪತಃ ॥

ಹೀಗೆ ಅಲ್ಲಿ ಸಾರಶಬ್ದಕ್ಕೆ ಆನಂದರೂಪ ಎಂದು ಅರ್ಥವನ್ನು ಹೇಳಲಾಗಿದೆ. ಇಲ್ಲಿ ಸ್ವರೂಪ ಎಂಬ ಅರ್ಥವನ್ನು ವಿವಕ್ಷೆ ಮಾಡಬೇಕು.

## ॥ ಓಂ ದರ್ಶಯತಿ ಚಾಥೋ ಅಪಿ ಸ್ಮರ್ಯತೇ ಓಂ ॥ ೧೭ ॥

**ದರ್ಶಯತಿ ಚಾಽನಂದಸ್ಯರೂಪತ್ವಮ್ 'ತದ್ ವಿಜ್ಞಾನೇನ ಪರಿಪಶ್ಯಂತಿ ಧೀರಾ ಆನಂದರೂಪಮಮೃತಂ ಯದ್ ವಿಭಾತಿ' (ಮುಂ.ಉ. 2.2.8) ಇತಿ ।**

**'ಶುದ್ಧಸ್ಫಟಿಕಸಂಕಾಶಂ ವಾಸುದೇವಂ ನಿರಂಜನಮ್ ।**
**ಚಿಂತಯೀತ ಯತಿರ್ನಾನ್ಯಂ ಜ್ಞಾನರೂಪಾದೃತೇ ಹರೇಃ ॥'**

**ಇತಿ ಚ ಮಾತ್ಸ್ಯೇ ॥**

ಬ್ರಹ್ಮನು ಆನಂದಶರೀರವುಳ್ಳವನು, ಎಂದು ಮುಂಡಕ ಶ್ರುತಿಯು ಹೇಳುತ್ತದೆ—'ಆನಂದರೂಪಮ್ ಅಮೃತಂ' ಎಂದು. ಮತ್ಸ್ಯಪುರಾಣದ ವಚನವೂ ಇದೆ—ಶುದ್ಧಸ್ಫಟಿಕ ಸಂಕಾಶಂ=ಪರಿಶುದ್ಧವಾದ ಸ್ಫಟಿಕಮಣಿಯಂತಿರುವ, ನಿರಂಜನಂ= ದೋಷರಹಿತನಾದ ವಾಸುದೇವಂ=ವಾಸುದೇವರೂಪನಾದ ಪರಮಾತ್ಮನನ್ನು ಯತಿಃ=ಸಂನ್ಯಾಸಿಯು ಚಿಂತಯೀತ=ಧ್ಯಾನಿಸಬೇಕು. ಜ್ಞಾನರೂಪಾತ್ ಋತೇ= ಜ್ಞಾನಶರೀರಕನಾದ ವಾಸುದೇವನ ಹೊರತಾಗಿ ಅನ್ಯಂ=ಇತರ ದೇವತೆಗಳನ್ನು ನ ಚಿಂತಯೇತ್=ಧ್ಯಾನಿಸಬಾರದು. (ತತ್ತ್ವಪ್ರದೀಪದಲ್ಲಿ ಪೈಂಗಿಶ್ರುತಿಯ ಅನೇಕ ಮಂತ್ರಗಳನ್ನು ಈ ಕುರಿತು ಉದಾಹರಿಸಲಾಗಿದೆ.)

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ—

**॥ ಓಂ ಅರೂಪವದೇವ ಹಿ ತತ್ಪ್ರಧಾನತ್ವಾತ್ ಓಂ ॥** (ಅತ್ರ ಈಶಸ್ಯ ಅಪ್ರಾಕೃತದೇಹತ್ವಮ್ ಉಚ್ಯತೇ। ತದಿತಿ ತಂತ್ರಮ್ ವ್ಯಸ್ತಂ, ಸಮಸ್ತಂ ಚ। ತತ್=ಪ್ರಸ್ತುತಂ ಬ್ರಹ್ಮ, ಅರೂಪವದೇವ=ಪ್ರಾಕೃತಾದಿ ದೇಹರಹಿತಮೇವ। ಯೇನ ಅನಿತ್ಯತಾ, 'ಅರೂಪಮನಾಮಯಮ್' ಇತ್ಯಾದಿ ಶ್ರುತಿವಿರೋಧೋ ವಾ ಸ್ಯಾತ್। ಕುತಃ ? ತತ್ಪ್ರಧಾನತ್ವಾತ್—ತಸ್ಯ=ಬ್ರಹ್ಮಣಸ್ತೇಭ್ಯಃ=ಪ್ರಕೃತಿ–ಭೂತೇಭ್ಯಃ ಉತ್ತಮತ್ವಾತ್। ಹಿಶಬ್ದಃ 'ಅಸ್ಥೂಲಮನಣು' ಇತ್ಯಾದಿಶ್ರುತೇಶ್ಚ ಇತಿ ಸೂಚಯತಿ। ಸ್ವಾಧೀನೇನ ಪ್ರಕೃತ್ಯಾದಿನಾ ಆತ್ಮಬಂಧಾಯೋಗಾತ್ ಇತಿ ಭಾವಃ।)

ಈ ಅಧಿಕರಣದಲ್ಲಿ ಬ್ರಹ್ಮನಿಗೆ ಅಪ್ರಾಕೃತದೇಹವನ್ನು ಸಮರ್ಥಿಸಲಾಗಿದೆ. 'ತತ್ಪ್ರಧಾನತ್ವಾತ್' ಎಂಬಲ್ಲಿರುವ ತತ್ಪದವನ್ನು ವ್ಯಸ್ತವಾಗಿಯೂ ಸಮಸ್ತವಾಗಿಯೂ ಪರಿಗಣಿಸಬೇಕು. ತತ್=ಪ್ರಸ್ತುತವಾದ ಬ್ರಹ್ಮನು ಅರೂಪವದೇವ=ಪ್ರಾಕೃತ–ಭೌತಿಕದೇಹರಹಿತನು. ಅದರಿಂದಾಗಿ ಅವನಿಗೆ ಅನಿತ್ಯತ್ವವಾಗಲೀ, ಅಶರೀರತ್ವವನ್ನು ನಿರೂಪಿಸುವ ಶ್ರುತಿಯ ವಿರೋಧವಾಗಲೀ ಇಲ್ಲ. ಅದಕ್ಕೆ ಕಾರಣ—ತತ್–ಪ್ರಧಾನತ್ವಾತ್, ತಸ್ಯ=ಬ್ರಹ್ಮನಿಗೆ ತೇಭ್ಯಃ=ಪ್ರಕೃತಿ ಹಾಗೂ ಪಂಚಭೂತಗಳಿಗಿಂತ ಪ್ರಧಾನತ್ವಾತ್=ಉತ್ತಮತ್ವವು ಇರುವುದರಿಂದ. ಹಿಶಬ್ದದಿಂದ ಬ್ರಹ್ಮನಿಗೆ ಪ್ರಾಕೃತ ಶರೀರವು ಇಲ್ಲ ಎನ್ನುವುದಕ್ಕೆ 'ಅಸ್ಥೂಲಮನಣು' ಇತ್ಯಾದಿ ಶ್ರುತಿಗಳೂ ಇವೆ, ಎಂದು ಸೂಚಿಸಲಾಗಿದೆ. ಶ್ರುತಿಮಾತ್ರವಲ್ಲದೆ ಸ್ವೇಚ್ಛೆಯಿಂದಲೂ ಪ್ರಾಕೃತರೂಪವಿಲ್ಲ, ಎಂದು ತಿಳಿಸಲು ಶ್ರುತಿಯನ್ನು ಸೂಚಿಸಲಾಗಿದೆ. 'ನ ಸ್ಥಾನತೋಽಪಿ' ಎಂಬ ಹಿಂದಿನ ಸೂತ್ರದಲ್ಲಿ 'ಪರಸ್ಯ' ಎಂದು ಪ್ರಕೃತವಾಗಿರುವುದರಿಂದ 'ಅರೂಪವಾನ್' ಎಂದು ಪುಲ್ಲಿಂಗವನ್ನು ಪ್ರಯೋಗಮಾಡಬೇಕಾಗಿತ್ತು. ಆದರೂ 'ಅರೂಪಮನಾಮಯಮ್' ಎಂಬ ಶ್ರುತ್ಯನುಸಾರವಾಗಿ ನಪುಂಸಕಲಿಂಗಪ್ರಯೋಗವನ್ನು ಮಾಡಲಾಗಿದೆ. 'ಅನ್ಯಭಾವವ್ಯಾವೃತ್ತೇಶ್ಚ' (1.3.12) ಎಂಬ ಸೂತ್ರದಲ್ಲಿ ಹೇಳಿರುವ ವಿಷಯವನ್ನು ಯುಕ್ತಿಯಿಂದ ಸಮರ್ಥನೆ ಮಾಡುವುದು ಈ ಅಧಿಕರಣದ ಉದ್ದೇಶ. ತತ್ತ್ವಪ್ರದೀಪದಲ್ಲಿ ಆ ಸೂತ್ರದಿಂದ ಅಗತಾರ್ಥತ್ವವನ್ನು ಹೀಗೆ ಹೇಳಲಾಗಿದೆ— ಅಲ್ಲಿ ಬ್ರಹ್ಮನಿಗೆ ಇತರವಸ್ತುಗಳ ಸ್ವಭಾವ ಇಲ್ಲ ಎಂದು ಹೇಳಲಾಗಿದೆ, ಇಲ್ಲಿ ಪ್ರಾಕೃತದೇಹವಿಲ್ಲ, ಎಂದು ಹೇಳಲಾಗಿದೆ.

**॥ ಓಂ ಪ್ರಕಾಶವಚ್ಚಾವೈಯರ್ಥ್ಯಮ್ ಓಂ ॥** ('ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ', 'ಶ್ಯಾಮಾತ್ ಶಬಲಂ ಪ್ರಪದ್ಯೇ' 'ಸುವರ್ಣಜ್ಯೋತೀಃ' ಇತ್ಯಾದಿ

ರೂಪಿತ್ವ ಶ್ರುತೀನಾಮ್, ಇತಿ ಶೇಷಃ। ಅವೈಯ್ಯರ್ಥ್ಯಮ್ ವೈಯರ್ಥ್ಯಂ= ಅಪ್ರಾಮಾಣ್ಯಂ ಚ ನೇತ್ಯರ್ಥಃ। ಸೌಂದರ್ಯಾದ್ಯಭಾವಶ್ಚ ನೇತ್ಯುಪಲಕ್ಷ್ಯತೇ। ಕುತಃ? 'ರೂಪಿತ್ವಾತ್ ಬ್ರಹ್ಮಣಃ' ಇತಿ ಭಾವಃ। ತರ್ಹಿ ಅರೂಪಿತ್ವಶ್ರುತಿವಿರೋಧಃ, ಇತ್ಯತ ಉಕ್ತಮ್-ಪ್ರಕಾಶವದಿತಿ। ಪ್ರಕಾಶಸ್ಯೇವ-'ನಾಸ್ತಿ ಪ್ರಕಾಶಃ' ಇತ್ಯಾದಿವ್ಯವಹಾರಸ್ಯೇವೇತಿ ಯಾವತ್।

ತತ್ತ್ವಪ್ರದೀಪದಿಶಾ ಚಶಬ್ದೋ 'ಅರೂಪಿತ್ವಶ್ರುತೀನಾಂ ಚ' ಇತ್ಯನ್ವೇತಿ। ಅವೈಯ್ಯರ್ಥ್ಯಂ ಇತ್ಯನ್ವಯಃ।

ಯಥಾ, ಗೃಹಾಂತಃ ಚಾಕ್ಷುಷಾದಿಪ್ರಕಾಶೇ ಸತ್ಯಪಿ ತಸ್ಯ ಸೌರಾದಿಲೌಕಿಕ ಪ್ರಕಾಶವೈಲಕ್ಷಣ್ಯಾತ್ 'ನಾಸ್ತಿ ಪ್ರಕಾಶಃ' ಇತ್ಯುಕ್ತಿಃ ತಥಾ ರೂಪಿತ್ವೇಽಪಿ ಬ್ರಹ್ಮಣಃ ವಿಲಕ್ಷಣಾಪ್ರಾಕೃತರೂಪಿತ್ವಾತ್ ಅರೂಪಶ್ರುತ್ಯಪ್ರಾಮಾಣ್ಯಂ ನೇತ್ಯರ್ಥಃ।)

ವೃತ್ತ್ಯಂತರಂ ತು-ರೂಪಶಬ್ದಸ್ಯ ಪ್ರಾಕೃತರೂಪೇ ವ್ಯುತ್ಪನ್ನತಯಾ ಅಪ್ರಾಕೃತೇ ಅವ್ಯುತ್ಪತ್ತ್ಯಾ ರೂಪಿತ್ವಶ್ರುತೀನಾಂ ವೈಯರ್ಥ್ಯಂ ನ। ಪ್ರಕಾಶವತ್=ಪ್ರಕಾಶವಾಚಿ ಶಬ್ದಸ್ಯೇವ। ಯಥಾ ಅಪ್ರಾಕೃತಪ್ರಕಾಶೇಽಪಿ ಬ್ರಹ್ಮಣಿ 'ಸುವರ್ಣ ಜ್ಯೋತಿಃ' ಇತಿ ಪ್ರಕಾಶಶಬ್ದಃ ತಥಾ ರೂಪಶಬ್ದೋಽಪಿ। )

'ಶ್ರುತೀನಾಂ' ಎಂಬ ಶೇಷಪದವನ್ನು 'ಅವೈರ್ಥ್ಯಾತ್' ಎಂಬ ಪದದೊಂದಿಗೆ ಸೇರಿಸಿಕೊಳ್ಳಬೇಕು. ವೈಯರ್ಥ್ಯಂ= ಅಪ್ರಾಮಾಣ್ಯ. ಬ್ರಹ್ಮನಿಗೆ ರೂಪವನ್ನು ಹೇಳುವ 'ರುಗ್ಮವರ್ಣಂ' ಇತ್ಯಾದಿ ಶ್ರುತಿಗಳಿಗೆ ಅವೈಯ್ಯರ್ಥ್ಯಂ ಚ=ಅಪ್ರಾಮಾಣ್ಯವು ಇಲ್ಲ. ಏಕೆಂದರೆ, ಬ್ರಹ್ಮನಿಗೆ ರೂಪವೂ ಇದೆ. ಆದರೂ 'ಅರೂಪಿ' ಎಂದೂ ಶ್ರುತಿಯು ಹೇಳುತ್ತದೆ. ಪ್ರಾಕೃತ ರೂಪವಿಲ್ಲ, ಎಂದು ಅರ್ಥ. ಹೇಗೆ ಚಕ್ಷುಃಪ್ರಕಾಶವು ಇದ್ದರೂ 'ಇಲ್ಲಿ ಪ್ರಕಾಶ ಇಲ್ಲ' ಎಂದು ಹೇಳಲಾಗುವುದೋ ಅದರಂತೆ ಬ್ರಹ್ಮನ ರೂಪವು (ಶರೀರವು) ಅಲೌಕಿಕವಾದ ಕಾರಣ 'ಅರೂಪಮವ್ಯಯಮ್' ಎಂಬ ಶ್ರುತಿಯೂ ಅಪ್ರಮಾಣವಾಗುವುದಿಲ್ಲ.

**॥ ಓಂ ಆಹ ಚ ತನ್ಮಾತ್ರಮ್ ಓಂ ॥** (ರೂಪಮಿತಿ ಪ್ರಕೃತಮನ್ವೇತಿ, 'ತದ್ಗುಣ ಸಾರತ್ವಾತ್' (2.3.29) ಇತಿ ಪ್ರಸ್ತುತೌ ಜ್ಞಾನಾನಂದೌ ತದಿತಿ ಪರಾಮೃಶ್ಯೇತೇ। ರೂಪಂ, ತನ್ಮಾತ್ರಂ=ಜ್ಞಾನಾನಂದಾದಿ ಮಾತ್ರಂ ಚಾಹ-'ಐಕಾತ್ಮ್ಯಪ್ರತ್ಯಯಸಾರಂ' 'ಆನಂದ ಮಾತ್ರಮಜರಮ್' ಇತ್ಯಾದಿಶ್ರುತಿಃ, ಇತ್ಯರ್ಥಃ।)

'ರೂಪಂ' ಎಂಬ ಶಬ್ದವು ಪ್ರಕೃತವಾದುದರಿಂದ 'ರೂಪಂ ತನ್ಮಾತ್ರಂ ಆಹ ಚ'

ಎಂದು ಸೂತ್ರದ ಆಕಾರವಾಗುತ್ತದೆ. ಬ್ರಹ್ಮನ ರೂಪವು ಜ್ಞಾನಾನಂದಾದ್ಯಾತ್ಮಕವೆಂದು ಶ್ರುತಿಯು ಹೇಳುತ್ತದೆ.

**॥ ಓಂ ದರ್ಶಯತಿ ಚಾಥೋ ಅಪಿ ಸ್ಮರ್ಯತೇ ಓಂ ॥** ('ಆನಂದರೂಪಮ್ ಅಮೃತಂ ಯದ್ ವಿಭಾತಿ' ಇತಿ ಶ್ರುತಿಃ ಆನಂದಾತ್ಮಕಂ ರೂಪಂ ದರ್ಶಯತಿ ಚ। ಅಥೋ ಇತಿ ಅರ್ಥಾಂತರಮುಚ್ಯತೇ। ಅಥೋ ಅಪಿ ಜ್ಞಾನಾತ್ಮಕಮಪಿ ರೂಪಂ ಸ್ಮರ್ಯತೇ।

ಶುದ್ಧಸ್ಫಟಿಕಸಂಕಾಶಂ ವಾಸುದೇವಂ ನಿರಂಜನಮ್।
ಚಿಂತಯೀತ ಯತಿರ್ನಾನ್ಯಂ ಜ್ಞಾನರೂಪಾದ್ದೃತೇ ಹರೇಃ ॥

ಇತಿ ಸ್ಮರ್ಯತೇ ಇತ್ಯರ್ಥಃ। ಪೂರ್ವತ್ರ ಈಶ–ತದ್ದೇಹಯೋಃ ಐಕ್ಯಬುದ್ಧ್ಯಾ ಈಶಸ್ಯ ಜ್ಞಾನಾದ್ಯಾತ್ಮಕತ್ವೇ ಶ್ರುತಿರುಕ್ತಾ। ಅತ್ರ ತು ವಿಶಿಷ್ಯೇತಿ ಬೋಧ್ಯಮ್।)

'ಆನಂದರೂಪಂ' ಎಂಬ ಶ್ರುತಿಯು ಆನಂದಾತ್ಮಕವಾದ ರೂಪವನ್ನೂ ಹೇಳುತ್ತದೆ. ಅಥೋ ಅಪಿ=ಜ್ಞಾನಾತ್ಮಕ ರೂಪವೆಂದೂ ಸ್ಮೃತಿ ಇದೆ. ಹಿಂದಿನ ಸೂತ್ರದಲ್ಲಿ ಬ್ರಹ್ಮ ಮತ್ತು ಅವನ ದೇಹಗಳಿಗೆ ಐಕ್ಯವಿವಕ್ಷೆಯಿಂದ ಬ್ರಹ್ಮನು ಜ್ಞಾನಾನಂದಾತ್ಮಕ ಎನ್ನುವ ಶ್ರುತಿಗಳನ್ನು ಉದಾಹರಿಸಿ ಆ ಮೂಲಕ ಬ್ರಹ್ಮನ ದೇಹವೂ ತದಾತ್ಮಕ ಎಂದು ಸಾಧಿಸಲಾಗಿದೆ. ಈ ಸೂತ್ರದಲ್ಲಿ ಬ್ರಹ್ಮದೇಹವೇ ಜ್ಞಾನಾನಂದಾದ್ಯಾತ್ಮಕ ಎನ್ನುವುದಕ್ಕೆ ಶ್ರುತಿ–ಸ್ಮೃತಿಗಳನ್ನು ಉದಾಹರಿಸಲಾಗಿದೆ.

ಇಲ್ಲಿಗೆ ಅರೂಪಾಧಿಕರಣವು ಮುಗಿಯಿತು.

## ೧೦. ಉಪಮಾಧಿಕರಣಮ್

### ॥ ಓಂ ಅತ ಏವ ಚೋಪಮಾ ಸೂರ್ಯಕಾದಿವತ್ ಓಂ ॥ ೧೮ ॥

**ಯಸ್ಮಾದೇವಂ ಪರಮೇಶ್ವರಸ್ವರೂಪಾಣಾಂ ಮಿಥೋ ನ ಕಶ್ಚಿದ್ ಭೇದಃ, ಅತ ಏವ ಸಾದೃಶ್ಯಾಜ್ಜೀವಸ್ಯಾಪಿ ತಥಾ ಸ್ಯಾದಿತಿ ತಸ್ಯ ಪ್ರತಿಬಿಂಬತ್ವಮುಕ್ತ್ವಾ, 'ಚ'ಶಬ್ದೇನ ಭೇದಂ ದರ್ಶಯತಿ।**

**'ರೂಪಂ ರೂಪಂ ಪ್ರತಿರೂಪೋ ಬಭೂವ' (ಬೃ.ಉ. 4.5.19),**

**'ಬಹವಃ ಸೂರ್ಯಕಾ ಯದ್ವತ್ ಸೂರ್ಯಸ್ಯ ಸದೃಶಾ ಜಲೇ।**
**ಏವಮೇವಾऽತ್ಮಕಾ ಲೋಕೇ ಪರಾತ್ಮಸದೃಶಾ ಮತಾಃ ॥' ಇತ್ಯಾದಿ।**

**ಅತ ಏವ ಭಿನ್ನತ್ವತದಧೀನತ್ವಸಾದೃಶ್ಯೈರೇವ ಸೂರ್ಯಕಾದ್ಯುಪಮಾ ನೋಪಾಧ್ಯಧೀನತ್ವಾದಿನಾ ॥**

ಯಾವ ಕಾರಣದಿಂದಾಗಿ (ಏವಂ) 'ನ ಸ್ಥಾನತೋಽಪಿ' ಎಂದು ಹಿಂದಿನ ಸೂತ್ರದಲ್ಲಿ ಹೇಳಿರುವಂತೆ ಭಗವಂತನ ರೂಪಗಳಿಗೆ ಪರಸ್ಪರ ಯಾವ ರೀತಿಯ ಭೇದವೂ ಇಲ್ಲವೋ ಅತಃ ಸಾದೃಶ್ಯಾತ್=ಚಿನ್ಮಯತ್ವರೂಪಸಾದೃಶ್ಯವು ಭಗವಂತ ನೊಂದಿಗೆ ಇರುವುದರಿಂದ ಜೀವನಿಗೂ ಮತ್ಸ್ಯಾದಿಗಳಂತೆ ಭಗವಂತನಿಂದ ಅಭೇದವು (ಉಪಮಾ) ಇರಲಿ ಎಂದು ಆಕ್ಷೇಪ ಮಾಡಿ, ಜೀವನು ಈಶನ ಪ್ರತಿಬಿಂಬನಾಗಿದ್ದಾನೆ ಎಂದು ಹೇಳಿ ಚಶಬ್ದದಿಂದ ಜೀವೇಶರಿಗೆ ಭೇದವಿದೆ, ಎಂದು ಸೂತ್ರಕಾರರು ತಿಳಿಸಿದ್ದಾರೆ.

'ರೂಪಂ ರೂಪಂ ಪ್ರತಿರೂಪೋ ಬಭೂವ' ಎಂಬ ಬೃಹದಾರಣ್ಯಕಶ್ರುತಿಯು ಜೀವನು ಈಶನ ಪ್ರತಿಬಿಂಬ, ಎಂದು ಹೇಳುತ್ತದೆ.

ಜಲೇ=ನೀರು, ಕನ್ನಡಿ ಮುಂತಾದ ಉಪಾಧಿಗಳಲ್ಲಿ ಯದ್ವತ್=ಹೇಗೆ ಬಹವಃ ಸೂರ್ಯಕಾಃ=ಸೂರ್ಯನ ಅನೇಕ ಪ್ರತಿಬಿಂಬಗಳು ಸೂರ್ಯಸ್ಯ ಸದೃಶಾಃ=ಸೂರ್ಯ ನಿಗೆ ಸದೃಶವಾಗಿವೆಯೋ ಏವಮೇವ=ಇದರಂತೆಯೇ ಲೋಕೇ=ಲೋಕದಲ್ಲಿ ಆತ್ಮಕಾಃ= ಆತ್ಮರೆಲ್ಲರೂ ಪರಾತ್ಮಸದೃಶಾಃ=ಪರಮಾತ್ಮನಿಗೆ ಸದೃಶರೆಂದು ಮತಾಃ=ಅಭಿಮತ ರಾಗಿದ್ದಾರೆ.

**ವಿವರಣೆ—** ಅತಏವ = ಬ್ರಹ್ಮಭಿನ್ನತ್ವ– ಬ್ರಹ್ಮಾಧೀನತ್ವ = ಬ್ರಹ್ಮಸಾದೃಶ್ಯ ಗಳಿಂದಾಗಿಯೇ ಸೂರ್ಯಪ್ರತಿಬಿಂಬದ ನಿದರ್ಶನವನ್ನು ಜೀವನಿಗೆ ಕೊಡಲಾಗುತ್ತದೆ. ಹೊರತು, ಜೀವನ ಸ್ವರೂಪವು ಉಪಾಧಿಯ ಅಧೀನವಾಗಿರುವ ಕಾರಣದಿಂದ ಅಲ್ಲ. ಮತ್ಸ್ಯಾದಿಭಗವದ್ರೂಪಗಳಿಗೆ ಭಗವಂತನೊಂದಿಗೆ ಯಾವ ರೀತಿಯ ಭೇದವೂ ಇಲ್ಲದಿರುವಂತೆ ಚೇತನತ್ವೇನ ಅವುಗಳ ಸಾಮ್ಯವು ಸಕಲ ಆತ್ಮರಿಗೂ ಇರುವುದರಿಂದ ಅವರೆಲ್ಲರೂ ಪರಮಾತ್ಮನಿಂದ ಅಭಿನ್ನರಾಗಲಿ, ಎಂಬ ಪೂರ್ವಪಕ್ಷವನ್ನು ಸೂತ್ರಕಾರರು 'ಸೂರ್ಯಕಾದಿವತ್' ಎಂಬ ಸೂತ್ರಾಂಶದಿಂದ ನಿರಾಕರಿಸಿದ್ದಾರೆ. ಜೀವಾತ್ಮರು ಮತ್ಸ್ಯಾದಿಗಳಂತೆ ಭಗವದಂಶರಲ್ಲ. ಸೂರ್ಯನ ಪ್ರತಿಬಿಂಬದಂತೆ ಅಂಶರು. ಸೂರ್ಯನ ಪ್ರತಿಬಿಂಬವು ಸೂರ್ಯನಂತೆಯೇ ಇದ್ದರೂ ಸೂರ್ಯನಿಗಿಂತ ಭಿನ್ನವಾಗಿದೆ. ಅದರಂತೆ ಜೀವರು ಅಂಶರಾದರೂ ಭಗವದ್ಭಿನ್ನರು.

ಸೂತ್ರದಲ್ಲಿ 'ಅತ ಏವ ಚೋಪಮಾ ಇತಿ ಚೇನ್ನ' ಎಂಬುದು ಪೂರ್ವಪಕ್ಷಭಾಗ. 'ನ ಭೇದಾದಿತಿ' ಎಂಬ ಹಿಂದಿನ ಸೂತ್ರದಿಂದ 'ನ' ಎಂಬ ಪದವನ್ನು ಅನುವೃತ್ತಿ

ಮಾಡಿಕೊಳ್ಳಬೇಕು. ಈ ಪೂರ್ವಪಕ್ಷಭಾಗದ ಅರ್ಥವನ್ನು 'ಯಸ್ಮಾದೇವಂ...ಇತಿ' ಎಂಬ ಭಾಷ್ಯಾಂಶವು ವಿವರಿಸುತ್ತದೆ. 'ಅತ ಏವ' ಮತ್ಸ್ಯಾದಿ ದೃಷ್ಟಾಂತವಿರುವುದರಿಂದ ಅತಏವ=ಮತ್ಸ್ಯಾದಿ ರೂಪಗಳ ಚಿತ್ತ್ವೇನ ಸಾದೃಶ್ಯವೂ ಇರುವುದರಿಂದ (ಉಪಮಾ= ತಥಾ) ಮತ್ಸ್ಯಾದಿಗಳಂತೆ ಜೀವನಿಗೂ ಬ್ರಹ್ಮನಿಂದ ಯಾವ ಭೇದವೂ ಇಲ್ಲ. ಇದು ಪೂರ್ವಪಕ್ಷ. 'ಇತಿ ಚೇನ್ನ' ಎಂದು ಅದರ ನಿರಾಸ. 'ಸೂರ್ಯಕಾದಿವತ್' ಎಂದು ದೃಷ್ಟಾಂತದಿಂದಾಗಿ ಪ್ರತಿಬಿಂಬತ್ವಹೇತುವು ಸೂಚಿತವಾಗಿದೆ. ಜಲದಲ್ಲಿ ಕಾಣುವ ಸೂರ್ಯನಂತೆ ಜೀವನು ಪ್ರತಿಬಿಂಬನಾಗಿರುವುದರಿಂದ ಈಶನಿಗಿಂತ ಭಿನ್ನ ಎಂದು ಸಿದ್ಧಾಂತಭಾಗದ ಅರ್ಥ. ಸೂರ್ಯನ ಪ್ರತಿಬಿಂಬಕ್ಕೆ ನೀರು ಉಪಾಧಿಯಾಗಿದೆ. ಆದರೆ, ಜೀವನಿಗೆ ಇಂತಹ ಉಪಾಧಿ ಇಲ್ಲ. ಅವನು ಪ್ರತಿಬಿಂಬದಂತೆ ಬಿಂಬಾಧೀನ ನಾಗಿರುವುದರಿಂದ ಪ್ರತಿಬಿಂಬನೆನಿಸುತ್ತಾನೆ.

ಶ್ರುತ್ಯರ್ಥ—ರೂಪಂ ರೂಪಂ ಪ್ರತಿರೂಪೋ ಬಭೂವ॥ ಪರಮಾತ್ಮನ ರೂಪಂ ರೂಪಂ=ಒಂದೊಂದು ರೂಪಗಳಿಗೂ ಜೀವನು ಪ್ರತಿರೂಪಃ=ಬಿಂಬರೂಪನಾಗಿ ಬಭೂವ=ಆದನು.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಓಂ ಅತ ಏವ ಚೋಪಮಾ ಸೂರ್ಯಕಾದಿವತ್ ಓಂ ॥** (ಅತ್ರ ಈಶಸ್ಯ ಜೀವಸ್ಯ ಭೇದಾಭೇದೌ ನೇತ್ಯುಚ್ಯತೇ । ಉಪಮೇತ್ಯನಂತರಂ 'ನ ಭೇದಾತ್' ಇತಿ ಸೂತ್ರಾತ್ 'ಇತಿ ಚೇನ್ನ' ಇತ್ಯನುವರ್ತನೀಯಮ್ । 'ತತೋ ಹ್ಯಸ್ಯ' ಇತ್ಯತೋ 'ಹ್ಯಸ್ಯ' ಇತಿ ಚ । ಚಃ ಸೂರ್ಯಕಾದಿವಚ್ಚ, ಇತಿ ಭಿನ್ನಕ್ರಮಃ । ಅತ ಏವೇತಿ ತಂತ್ರಮ್ ।

ಅತ ಏವ=ಈಶ-ತದ್ರೂಪಾಣಾಮ್ ಅಭೇದಸ್ಯ 'ನ ಸ್ಥಾನತಃ' ಇತ್ಯತ್ರ ಉಕ್ತತ್ವಾದೇವ, ಅತ ಏವ=ಚೇತನತ್ವಾಂಶಾಂಶಿತ್ವಾದಿಹೇತೋರೇವ ಅಸ್ಯ=ಜೀವಸ್ಯ ಉಪಮಾ=ಮತ್ಸ್ಯಾದಿಸಾಮ್ಯಂ, ಮತ್ಸ್ಯಾದಿವತ್ ಈಶಾಭೇದ ಇತಿ ಯಾವತ್, ಇತಿ ಚೇನ್ನ । ಸೂರ್ಯಕಾದಿವತ್, ಸೂರ್ಯಾದಿ ಪ್ರತಿಬಿಂಬ-ಸೂರ್ಯಕಛಾಯಾದಿವತ್ । ಯೋಗ್ಯತಯಾ, ಪ್ರತಿಬಿಂಬತ್ವಾತ್ ಇತಿ ಹೇತುರನ್ವೇತಿ । ಜೀವಃ ನೇಶಾಭಿನ್ನಃ ಇತಿ ಸಾಧ್ಯಸಮುಚ್ಚಯೇ ಚಃ । ಸೂರ್ಯಕಾದಿಃ ಪ್ರತಿಬಿಂಬತ್ವಾತ್ ಸೂರ್ಯಾದಿನಾ ಯಥಾ ನಾಭಿನ್ನಃ ತಥಾ ಜೀವೋಽಪಿ ಈಶೇನ, ಇತ್ಯರ್ಥಃ ॥

'ನ ಭೇದಾತ್' ಸೂತ್ರದಿಂದ 'ಇತಿ ಚೇನ್ನ' ಎನ್ನುವ ಅಂಶವು ಅನುವೃತ್ತ

ವಾಗುತ್ತದೆ. 'ತತೋ ಹ್ಯಸ್ಯ' ಸೂತ್ರದಿಂದ 'ಹಿ ಅಸ್ಯ' ಅನುವೃತ್ತಿ, ಚಶಬ್ದವನ್ನು 'ಸೂರ್ಯಕಾದಿವಚ್ಚ' ಎಂದು ಸೇರಿಸಿಕೊಳ್ಳಬೇಕು. 'ಅತ ಏವ' ಶಬ್ದದ ಆವೃತ್ತಿ ವಿವಕ್ಷಿತ.

ಅತ ಏವ=ಈಶ ಮತ್ತು ಅವನ ರೂಪಗಳಿಗೆ ಅಭೇದವನ್ನು ಹೇಳಿರುವುದರಿಂದ, ಅತ ಏವ=ಈಶನಿಂದ ಜೀವನಿಗೆ ಚೇತನತ್ವ ಅಂಶದಲ್ಲಿ ಸಾಮ್ಯವಿರುವುದರಿಂದ ಅಸ್ಯ= ಜೀವನಿಗೆ, ಉಪಮಾ=ಮತ್ಸ್ಯಾದಿಗಳಂತೆ ಭಗವದಭೇದ ರೂಪವಾದ ಸಾಮ್ಯವಿದೆ, ಇತಿ ಚೇನ್ನ=ಹೀಗೆ ಹೇಳಬಾರದು. ಸೂರ್ಯಕಾದಿವತ್=ಸೂರ್ಯನ ಪ್ರತಿಬಿಂಬವು ಸೂರ್ಯನಿಂದ ಭಿನ್ನವಾಗಿರುವಂತೆ ಜೀವನೂ ಈಶನಿಗಿಂತ ಭಿನ್ನನಾಗಿದ್ದಾನೆ.

ಇಲ್ಲಿಗೆ ಉಪಮಾಧಿಕರಣವು ಮುಗಿಯಿತು.

## ೧೧. ಅಂಬುವದಧಿಕರಣಮ್

ನಿತ್ಯಸಿದ್ಧತ್ವಾತ್ ಸಾದೃಶ್ಯಸ್ಯ ನಿತ್ಯಾನಂದಜ್ಞಾನಾದೇರ್ನ ಭಕ್ತಿಜ್ಞಾನಾದಿ-ಪ್ರಯೋಜನಮಿತ್ಯತೋ ಬ್ರವೀತಿ ।

**॥ ಓಂ ಅಂಬುವದಗ್ರಹಾಣಾತ್ತು ನ ತಥಾತ್ವಮ್ ಓಂ ॥ ೧೯ ॥**

**ಅಂಬುವತ್ ಸ್ನೇಹೇನ ಗ್ರಹಣಂ ಜ್ಞಾನಮ್, ಭಕ್ತಿಂ ವಿನಾ ನ ತತ್ಸಾದೃಶ್ಯಂ ಸಮ್ಯಗಭಿವ್ಯಜ್ಯತೇ ।**

**'ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ**
**ಆತ್ಮಾ ವಿವೃಣುತೇ ತನುಂ ಸ್ವಾಮ್' (ಕ.ಉ. 2.23) ಇತಿ ಹಿ ಶ್ರುತಿಃ ॥**
**'ಮಹಿತ್ವಬುದ್ಧಿರ್ಭಕ್ತಿಸ್ತು ಸ್ನೇಹಪೂರ್ವಾಽಭಿಧೀಯತೇ ।**
**ತಯೈವ ವ್ಯಜ್ಯತೇ ಸಮ್ಯಗ್ ಜೀವರೂಪಂ ಸುಖಾದಿಕಮ್ ॥'**

**ಇತಿ ಪಾದ್ಮೇ ।**

ಪರಮಾತ್ಮನೊಂದಿಗೆ ಜ್ಞಾನಾನಂದಾದಿರೂಪೇಣ ಸಾದೃಶ್ಯವು ಜೀವನಿಗೆ ನಿತ್ಯಸಿದ್ಧವಾದ ಕಾರಣ ತತ್‌ಪ್ರಾಪ್ತಿರೂಪವಾದ ಮೋಕ್ಷಕ್ಕೆ ಭಕ್ತಿ–ಜ್ಞಾನಾದಿ ಸಾಧನಗಳಿಂದ ಆಗಬೇಕಾಗಿರುವ ಪ್ರಯೋಜನವೇನೂ ಇಲ್ಲ. ಈ ಆಕ್ಷೇಪದ ಸಮಾಧಾನಕ್ಕಾಗಿ ಮುಂದಿನ ಸೂತ್ರವನ್ನು ವೇದವ್ಯಾಸರು ರಚಿಸಿದ್ದಾರೆ. ಅಂಬುವತ್=ಸ್ನೇಹದಿಂದ ಕೂಡಿದ ಗ್ರಹಣಂ=ಜ್ಞಾನ, ಅಂಬುವದ್‌ಗ್ರಹಣವೆಂದರೆ ಸ್ನೇಹಯುಕ್ತಜ್ಞಾನರೂಪವಾದ

ಭಕ್ತಿ. ಇಂತಹ ಭಕ್ತಿಯು ಇಲ್ಲದೆ ಭಗವಂತನ ಸಾದೃಶ್ಯವು ಸರಿಯಾಗಿ ವ್ಯಕ್ತವಾಗುವುದಿಲ್ಲ. ಆದ್ದರಿಂದ ಜ್ಞಾನಾನಂದಾದಿಸಾದೃಶ್ಯದ ಸದಾ ಅಭಿವ್ಯಕ್ತಿರೂಪವಾದ ಮೋಕ್ಷಕ್ಕೆ ಭಕ್ತಿ-ಜ್ಞಾನಾದಿಗಳು ಬೇಕು. ಕಠಶ್ರುತಿಯಲ್ಲಿ ಈ ವಿಷಯವಿದೆ. ಪರಮಾತ್ಮನು ಯಾರನ್ನು ವರಿಸುವನೋ ಅರ್ಥಾತ್ ಯಾರಲ್ಲಿ ಪ್ರಸನ್ನನಾಗುವನೋ ಅವನಿಗೆ ಮಾತ್ರ ಲಭ್ಯನು. ಅಂತಹ ಭಕ್ತನಿಗೆ ಅವನ (ಭಕ್ತನ) ಸ್ವರೂಪವನ್ನು ಅನಾವರಣಗೊಳಿಸುತ್ತಾನೆ. ಪಾದ್ಮವಚನದಲ್ಲೂ ಹೀಗಿದೆ—ಸ್ನೇಹಪೂರ್ವಕವಾದ ಪೂಜ್ಯತ್ವಬುದ್ಧಿಯೇ ಭಕ್ತಿಯಾಗಿದೆ. ಅಂತಹ ಭಕ್ತಿಯಿಂದಲೇ ಜೀವಸ್ವರೂಪಭೂತವಾಗಿರುವ ಸುಖಾದಿಗಳು ಸರಿಯಾಗಿ ಅಭಿವ್ಯಕ್ತವಾಗುತ್ತವೆ.

**ವಿವರಣೆ**—ಜ್ಞಾನಾನಂದಾದಿಅಭಿವ್ಯಕ್ತಿಯೇ ಮೋಕ್ಷ. ಜ್ಞಾನಾನಂದಾದಿಗಳು ಜೀವನ ಸ್ವರೂಪಭೂತವಾಗಿವೆ. ಸ್ವರೂಪವು ನಿತ್ಯವಾದುದರಿಂದ ಜ್ಞಾನಾನಂದಾದಿ ಗುಣಗಳೂ ನಿತ್ಯವಾಗಿವೆ. ನಿದ್ರಾಕಾಲದಲ್ಲಿ ಅವುಗಳು ವ್ಯಕ್ತವಾಗುವಂತೆ ಒಂದೊಮ್ಮೆ ಅಂತಹ ಜ್ಞಾನಾನಂದಾದಿಗಳೂ ಅಭಿವ್ಯಕ್ತವಾಗಲೇಬೇಕು. ಅವುಗಳ ಅಭಿವ್ಯಕ್ತಿಗಾಗಿ ಭಗವಂತನ ಭಕ್ತಿ-ಜ್ಞಾನಾದಿಗಳ ಅಗತ್ಯವಿಲ್ಲ, ಎಂದು ಪೂರ್ವಪಕ್ಷ. ಬಾಹ್ಯಪರಿಜ್ಞಾನವು ಇಲ್ಲದಿರುವುದರಿಂದ ನಿದ್ರಾಕಾಲದಲ್ಲಿ ಜ್ಞಾನಾನಂದಾದಿಗುಣಗಳು ಅಲ್ಪ ಅಭಿವ್ಯಕ್ತವಾಗುತ್ತವೆ. ಅದೂ ತಾತ್ಕಾಲಿಕವಾಗಿ. ಅವುಗಳು ಶಾಶ್ವತವಾಗಿ ಪೂರ್ಣ ಅಭಿವ್ಯಕ್ತವಾಗಬೇಕಾದರೆ ಭಗವಂತನು ನಮ್ಮಲ್ಲಿ ಪ್ರಸನ್ನನಾಗಬೇಕು. ಅವನ ಪ್ರಸಾದವು ಲಭ್ಯವಾಗಬೇಕಾದರೆ ಪರಮಭಕ್ತಿ ಬೇಕು. ಅದಕ್ಕಾಗಿ ಅಪರೋಕ್ಷಜ್ಞಾನ, ಧ್ಯಾನ, ಭಕ್ತಿಪೂರ್ವಕವಾದ ಶ್ರವಣ ಮನನಾದಿಗಳು ಬೇಕು.

ಸೂತ್ರದಲ್ಲಿ, ಅಂಬು ಎಂದರೆ ನೀರು. ನೀರಿನ ಗುಣ 'ಸ್ನೇಹ'. ಅದರಿಂದ ಮನೋವೃತ್ತಿರೂಪವಾದ ಸ್ನೇಹವು ಲಕ್ಷಣಯಾ ವಿವಕ್ಷಿತ. ಅಂಬುವತ್ ಎಂದರೆ ಸ್ನೇಹಯುಕ್ತವಾದ ನೀರಿನಂತಿರುವ ಗ್ರಹಣ ಎಂದರೆ ಜ್ಞಾನ. ಅಂಬುವದಗ್ರಹಣ ಎಂದರೆ ಸ್ನೇಹಸಹಿತಜ್ಞಾನವಿಲ್ಲದೆ ತಥಾತ್ವಂ=ಸಾದೃಶ್ಯವು ನ ಅಭಿವ್ಯಜ್ಯತೇ=ಅಭಿವ್ಯಕ್ತವಾಗುವುದಿಲ್ಲ. ತುಶಬ್ದವು ಸಮ್ಯಕ್ ಎಂಬ ಅರ್ಥವನ್ನು ಸೂಚಿಸುತ್ತದೆ. ಸೂತ್ರದಲ್ಲಿ 'ಭಕ್ತಿಂ ವಿನಾ' ಎಂದು ಸ್ಪಷ್ಟವಾಗಿ ಹೇಳದೆ 'ಅಂಬುವದಗ್ರಹಣಾತ್' ಎಂದು ಹೇಳಿರುವುದು ಭಕ್ತಿಯ ಸ್ವರೂಪವನ್ನು ತಿಳಿಸುವುದು ಹಾಗೂ ಗೋಪ್ಯತ್ವವನ್ನು ರಕ್ಷಿಸುವುದು ಉದ್ದೇಶ, ಎಂದು ತತ್ತ್ವಪ್ರದೀಪದಲ್ಲಿದೆ. ವಾದಿರಾಜರು ಗುರ್ವರ್ಥದೀಪಿಕಾದಲ್ಲಿ ಹೀಗೆ ಕಾರಣವನ್ನು ಹೇಳಿದ್ದಾರೆ—ನೀರಿನಲ್ಲಿ 'ಸ್ನೇಹ' ಗುಣವು ಸ್ವಾಭಾವಿಕವಾಗಿ ದೃಢವಾಗಿರುವಂತೆ ಜೀವನಲ್ಲೂ ಭಗವಂತನಲ್ಲಿ ಸ್ನೇಹವು ದೃಢ ಮತ್ತು

ಸಹಜವಾಗಿರಬೇಕು, ಎಂದು ತಿಳಿಸಲು 'ಅಂಬು' ಶಬ್ದವನ್ನು ಸೂತ್ರಕಾರರು ಪ್ರಯೋಗಿಸಿದ್ದಾರೆ. 'ಗೃಹ್ಣಾತಿ=ಕದಾಪಿ ನ ಮುಂಚತಿ ಇತಿ=ಗ್ರಹಣಂ. ಜ್ಞಾನವಾಚಕವಾಗಿ ಗ್ರಹಣಶಬ್ದವನ್ನು ಪ್ರಯೋಗಿಸುವ ಮೂಲಕ ಜ್ಞಾನವು ದೃಢವಾಗಿರಬೇಕೆಂದು ಸೂಚಿಸಲಾಗಿದೆ. 'ಅತಃ ಪ್ರೌಢಶಿರೋಮಣಿಃ ಸೂತ್ರಕಾರಃ ಇತಿ ಸೂಚಿತಮ್' ಇದು ರಾಜರ ಉದ್ಗಾರ.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಓಂ ಅಂಬುವದಗ್ರಹಾಣಾತ್ತು ನ ತಥಾತ್ವಮ್ ಓಂ ॥** (ಅತ್ರ ಈಶಭಕ್ತೇಃ ಸ್ವರೂಪಸುಖಾಭಿವ್ಯಕ್ತಿರೂಪಫಲಮುಚ್ಯತೇ । ಅಂಬುವದಿತಿ ಸಾದೃಶ್ಯಾರ್ಥೇ ವತಿಃ । ನ ಮತುಪ್ । ಸ್ನೇಹಾತ್ಮಕಾಂಬುಪದೇನ ಮಾನಸಸ್ನೇಹೋ ಲಕ್ಷ್ಯತೇ । ತಥೈವ ತತ್ತ್ವಪ್ರದೀಪೋಕ್ತೇಃ । ಗ್ರಹಣಂ ಜ್ಞಾನಂ । ಅಸ್ಯ ವಿಶೇಷಣಮ್ ಅಂಬುವದಿತಿ । ಅಂಬುವದಗ್ರಹಣಾತ್-ಗ್ರಹಣಾಭಾವಾತ್-ಅಂಬುಸದೃಶಜ್ಞಾನಾಭಾವಾತ್ ಇತ್ಯರ್ಥಃ। ಸ್ನೇಹಯುಕ್ತಜ್ಞಾನಾಭಾವಾತ್ ಇತಿ ಯಾವತ್ । ಭಕ್ತ್ಯಭಾವಾತ್ ಇತಿ ತಾತ್ಪರ್ಯಾರ್ಥಃ । ತಥಾತ್ವಂ ಇತ್ಯನೇನ 'ಅತ ಏವ' ಇತಿ ಪೂರ್ವತ್ರ ಪ್ರಕೃತಂ ತದ್ಗುಣಸಾರತ್ವರೂಪ ಸಾದೃಶ್ಯಂ ಪರಾಮೃಶ್ಯತೇ । ತುರ್ವಿಶೇಷೇ । ವ್ಯಜ್ಯತೇ ಇತಿ ಶೇಷಃ। ಭಕ್ತಿಂ ವಿನಾ ಸುಖಾತ್ಮಕತ್ವರೂಪ ಸಾದೃಶ್ಯಂ ನತು ವ್ಯಜ್ಯತೇ=ನ ಸಮ್ಯಗ್ ವ್ಯಜ್ಯತೇ ಇತ್ಯರ್ಥಃ ।)

ಅಂಬು ಎಂದರೆ ನೀರು. ನೀರಿನಲ್ಲಿ 'ಸ್ನೇಹ' ಎಂಬ ಗುಣವಿದೆ. ಆದರಿಂದಾಗಿಯೇ ನೀರು ಹಾಕಿ ಮಣ್ಣನ್ನು ಉಂಡೆಯನ್ನಾಗಿ ಮಾಡಲು ಸಾಧ್ಯವಾಗುತ್ತದೆ. ಗ್ರಹಣ ಎಂದರೆ ಜ್ಞಾನ. ಅದಕ್ಕೆ ಅಂಬುವತ್ ಎನ್ನುವುದು ವಿಶೇಷಣ. ನೀರಿನಂತಿರುವ ಜ್ಞಾನ. ನೀರು ಹೇಗೆ ಸ್ನೇಹಯುಕ್ತವೋ ಅದರಂತೆಯೇ ಸ್ನೇಹಯುಕ್ತವಾದ ಗ್ರಹಣ. ಅರ್ಥಾತ್ ಸ್ನೇಹಯುಕ್ತವಾದ ಜ್ಞಾನದ ಹೊರತಾಗಿ ತಥಾತ್ವಂ=ಸಾದೃಶ್ಯವು ನ=ವ್ಯಕ್ತವಾಗುವುದಿಲ್ಲ. 'ಅತ ಏವ ಚೋಪಮಾ' ಎಂಬ ಹಿಂದಿನ ಸೂತ್ರದಲ್ಲಿ ಅತ ಏವ, ಪದಗಳಿಂದ ಪ್ರಸ್ತುತವಾದ ಜ್ಞಾನಾನಂದಾದಿ ಈಶ ಸಾದೃಶ್ಯವು ತಥಾಪದದಿಂದ ವಿವಕ್ಷಿತವಾಗಿದೆ. ಸ್ನೇಪಯುಕ್ತ ಜ್ಞಾನವೇ ಭಕ್ತಿ. ಭಕ್ತಿ ಇಲ್ಲದೆ ಸಾದೃಶ್ಯವು ವ್ಯಕ್ತವಾಗುವುದಿಲ್ಲ, ಭಕ್ತಿಯಿಂದ ವ್ಯಕ್ತವಾಗುತ್ತದೆ, ಎಂದು ವಿಧಿರೂಪದಿಂದ ಹೇಳದೆ ನಿಷೇಧರೂಪವಾಗಿ ಹೇಳಿರುವುದರಿಂದ ನಿದ್ರೆಯಲ್ಲಿ ಜ್ಞಾನಾದಿಗಳು ವ್ಯಕ್ತವಾಗುವಂತೆ ಎಂದಾದರೊಮ್ಮೆ ಭಕ್ತಿ ಇಲ್ಲದೆಯೂ ಸಾದೃಶ್ಯವು ವ್ಯಕ್ತವಾಗುತ್ತದೆ, ಎಂಬ ಆಶಾಭಾವದ ನಿರಾಸವಾಗುತ್ತದೆ.

**ಇಲ್ಲಿಗೆ ಅಂಬುವದಧಿಕರಣವು ಮುಗಿಯಿತು.**

# ೧೨. ವೃದ್ಧಿಹ್ರಾಸಾಧಿಕರಣಮ್

## ॥ ಓಂ ವೃದ್ಧಿಹ್ರಾಸಭಾಕ್ತ್ವಮಂತರ್ಭಾವಾದುಭಯ-ಸಾಮಂಜಸ್ಯಾದೇವಮ್ ಓಂ ॥ ೨೦ ॥

ತಸ್ಯ ಚ ಭಕ್ತಿಜ್ಞಾನಾದೇರ್ವೃದ್ಧಿಹ್ರಾಸಭಾಕ್ತ್ವಂ ವಿದ್ಯತೇ। ಬ್ರಹ್ಮಾದೀನಾ-ಮುತ್ತಮಾನಾಂ ಸರ್ವೇಷಾಂ ಭಕ್ತತ್ವೇಽಂತರ್ಭಾವಾತ್। ಏವಂ ಭಕ್ತ್ಯಾದಿವಿಶೇಷಾಂಗೀಕಾರಾದೇವೇಶ್ವರಸ್ಯ ಬ್ರಹ್ಮಾದೀನ್ ಅನ್ಯಾನ್ ಪ್ರತಿ ಚ ಸಾಮಂಜಸ್ಯಂ ಭವತಿ ।

'ಸಾಧನಸ್ಯೋತ್ತಮತ್ವೇನ ಸಾಧ್ಯಂ ಚೋತ್ತಮಮಾಪ್ನುಯುಃ ।
ಬ್ರಹ್ಮಾದಯಃ ಕ್ರಮೇಣೈವ ಯಥಾನಂದ(ದಃ)ಶ್ರುತೌ ಶ್ರುತಾಃ(ತಃ)॥'
ಇತಿ ಚ ಬ್ರಾಹ್ಮೇ ।

ಸಾಧಕನಲ್ಲಿ ಇರಬೇಕಾದ ಆ ಭಕ್ತಿ-ಜ್ಞಾನಾದಿಗಳು ಎಲ್ಲ ಸಾಧಕರಲ್ಲೂ ಒಂದೇ ವಿಧವಾಗಿ ಇಲ್ಲ. ಅದರಲ್ಲಿ ನ್ಯೂನಾಧಿಕಭಾವ ಇದೆ. ಏಕೆಂದರೆ, ಬ್ರಹ್ಮಾದಿ ಉತ್ತಮ ಸಾಧಕರೆಲ್ಲರೂ ಭಕ್ತಕೋಟಿಯಲ್ಲಿ ಸೇರುತ್ತಾರೆ. ಹೀಗೆ ಮೋಕ್ಷಸಾಧನವಾದ ಭಕ್ತಿಯಲ್ಲಿ ವಿಶೇಷವನ್ನು (ತಾರತಮ್ಯವನ್ನು) ಅಂಗೀಕರಿಸಿರುವುದರಿಂದಾಗಿಯೇ ಭಗವಂತನಿಗೆ ಬ್ರಹ್ಮಾದಿದೇವತೆಗಳ ಬಗ್ಗೆ ಹಾಗೂ ಇತರ ಮುಕ್ತಿಯೋಗ್ಯಜೀವರ ಬಗ್ಗೆ ಮೋಕ್ಷರೂಪ ಫಲವೈಷಮ್ಯದಾತೃತ್ವವು ಸಮಂಜಸವಾಗುತ್ತದೆ. ಬ್ರಾಹ್ಮವಚನದಲ್ಲಿ ಹಾಗೆಯೇ ಹೇಳಿದೆ—ಆನಂದ ತಾರತಮ್ಯವನ್ನು ತಿಳಿಸುವ ಶ್ರುತಿಯಲ್ಲಿ ಹೇಳಲ್ಪಟ್ಟಿರುವ ಬ್ರಹ್ಮಾದಿ ದೇವತೆಗಳು, ಅವರವರು ಮಾಡಿರುವ ಮೋಕ್ಷಸಾಧನಗಳು ಉತ್ತಮೋತ್ತಮವಾಗಿರುವುದಕ್ಕೆ ಅನುಸಾರವಾಗಿ ಅದರಿಂದ ಸಾಧ್ಯವಾದ ಮೋಕ್ಷಫಲವನ್ನು ಅದಕ್ಕನುಗುಣವಾಗಿಯೇ ಉತ್ತಮೋತ್ತಮವಾಗಿ ಪಡೆಯುತ್ತಾರೆ.

ವಿವರಣೆ—ಈ ಅಧಿಕರಣದಲ್ಲಿ ಮೋಕ್ಷಯೋಗ್ಯಜೀವರು ನಡೆಸುವ ಸಾಧನದಲ್ಲಿ ತಾರತಮ್ಯವನ್ನು ಯುಕ್ತಿಯಿಂದ, ಸಮರ್ಥಿಸಲಾಗಿದೆ. ಉಪನಿಷತ್ತುಗಳಲ್ಲಿ ಆನಂದ ಮೀಮಾಂಸಾಪ್ರಕರಣದಲ್ಲಿ ಬ್ರಹ್ಮಾದಿದೇವತೆಗಳು ಮೋಕ್ಷದಲ್ಲಿ ಪಡೆಯುವ ಆನಂದದಲ್ಲಿ ತಾರತಮ್ಯವನ್ನು ಹೇಳಲಾಗಿದೆ. ಅವರ ಜ್ಞಾನಭಕ್ತ್ಯಾದಿಸಾಧನಗಳು ಒಂದೇ ರೀತಿಯಾಗಿದ್ದಲ್ಲಿ ಅವರಿಗೆ ಫಲವೈಷಮ್ಯವನ್ನು ಕೊಡುವ ಪರಮಾತ್ಮನಿಗೆ

ವೈಷಮ್ಯಾದಿದೋಷಗಳು ಬಂದೀತು. ನಮಗೆ ಸಮಾನವಾಗಿ ಸಾಧನೆ ಮಾಡಿರುವ ಬ್ರಹ್ಮಾದಿಉತ್ತಮರಿಗೆ ಅಧಿಕಫಲವನ್ನು ನಿಷ್ಕಾರಣವಾಗಿ ಕೊಡುವುದರಿಂದ ವೈಷಮ್ಯದೋಷ, ಅಷ್ಟೇ ಸಾಧನೆಯನ್ನು ಮಾಡಿರುವ ಮಧ್ಯಮ-ಅಧಮ ಸಾಧಕರಿಗೆ ಕಡಿಮೆ ಆನಂದವನ್ನು ನೀಡುವುದರಿಂದ ನೈರ್ಘೃಣ್ಯದೋಷ. ಈ ದೋಷ ಭಗವಂತನಲ್ಲಿ ಇಲ್ಲ. ಅದಕ್ಕಾಗಿ ಮೋಕ್ಷಸಾಧನವಾದ ಭಕ್ತಿ-ಜ್ಞಾನಾದಿಗಳಲ್ಲೂ ತಾರತಮ್ಯವನ್ನು ಅಂಗೀಕರಿಸಬೇಕು. ಅವರವರ ಸಾಧನೆಗಳಿಗೆ ಅನುಗುಣವಾಗಿ ಭಗವಂತ ಫಲವನ್ನು ನೀಡುತ್ತಾನೆ. ಆದ್ದರಿಂದ ಅವನಿಗೆ ವೈಷಮ್ಯಾದಿದೋಷಗಳು ಇಲ್ಲ.

ಭಾಷ್ಯದಲ್ಲಿ ಭಕ್ತಿ ಪದದಿಂದ ಅಪರೋಕ್ಷಸಾಧನವಾದ ಭಕ್ತಿಯೂ ಜ್ಞಾನಪದದಿಂದ ಪರೋಕ್ಷಜ್ಞಾನವೂ ವಿವಕ್ಷಿತವೆಂದು ತತ್ತ್ವಪ್ರದೀಪದಲ್ಲಿ ಹೇಳಲಾಗಿದೆ. ಭಾವಬೋಧದಲ್ಲಿ, ಅಪರೋಕ್ಷಜ್ಞಾನದಿಂದ ಹುಟ್ಟುವ ಉದ್ರಿಕ್ತಭಕ್ತಿಯನ್ನೂ ಜ್ಞಾನಪದದಿಂದ ಅಪರೋಕ್ಷಜ್ಞಾನವನ್ನೂ ತೆಗೆದುಕೊಳ್ಳಲಾಗಿದೆ.

ಉಭಯಸಾಮಂಜಸ್ಯಾತ್, ಎಂಬ ಸೂತ್ರಖಂಡದ ವಿವರಣೆ—ಬ್ರಹ್ಮಾದೀನ್ ಅನ್ಯಾನ್ ಪ್ರತಿ ಚ ಸಾಮಂಜಸ್ಯಂ ಭವತಿ, ಎಂಬ ಭಾಷ್ಯಭಾಗ. ಅನ್ಯಾನ್. ಎಂದರೆ ಮಧ್ಯಮಾಧಿಕಾರಿಗಳಾದ ಋಷಿಗಳು, ಮತ್ತು ಅಧಮಾಧಿಕಾರಿಗಳಾದ ಮನುಷ್ಯೋತ್ತಮರು. 'ಸಾಮಂಜಸ್ಯಂ' ಎಂದರೆ ವೈಷಮ್ಯಾದಿದೋಷಶೂನ್ಯತ್ವ.

**ಕುತಃ ?-**

## ॥ ಓಂ ದರ್ಶನಾಚ್ಚ ಓಂ ॥ ೨೧ ॥

**'ಅಥಾತ ಆನಂದಸ್ಯ ಮೀಮಾಂಸಾ ಭವತಿ' (ತೈ.ಉ. 2.8) ಇತ್ಯಾರಭ್ಯ ಬ್ರಹ್ಮಪರ್ಯಂತೇಷು ಸುಖೇ ವಿಶೇಷದರ್ಶನಾತ್ । ಚಶಬ್ದಾತ್ ಸ್ಮೃತಿಃ-**

**'ಯಥಾ ಭಕ್ತಿವಿಶೇಷೋಽತ್ರ ದೃಶ್ಯತೇ ಪುರುಷೋತ್ತಮೇ ।**
**ತಥಾ ಮುಕ್ತಿವಿಶೇಷೋಽಪಿ ಜ್ಞಾನಿನಾಂ ಲಿಂಗಭೇದನೇ ॥' ಇತಿ ।**

ಮೋಕ್ಷಾನಂದದಲ್ಲಿ ವೃದ್ಧಿ-ಹ್ರಾಸಗಳಿವೆ ಎಂಬುದಕ್ಕೆ ಏನು ಪ್ರಮಾಣ? ಅದಕ್ಕುತ್ತರ ದರ್ಶನಾಚ್ಚ ಸೂತ್ರ. 'ಅಥಾತ ಆನಂದಸ್ಯ ಮೀಮಾಂಸಾ ಭವತಿ' ಎಂಬ ತೈತ್ತಿರೀಯ ಪ್ರಕರಣದಲ್ಲಿ ಇಲ್ಲಿಂದ ಆರಂಭಿಸಿ ಅಂದರೆ, ಮನುಷ್ಯಚಕ್ರವರ್ತಿಗಳಿಂದ ಆರಂಭಿಸಿ ಬ್ರಹ್ಮಪರ್ಯಂತವಾದ ದೇವತೆಗಳ ಮೋಕ್ಷಸುಖದಲ್ಲಿ ವಿಶೇಷವು ಶ್ರುತವಾಗಿದೆ. (ದರ್ಶನಾತ್) ಸೂತ್ರದ ಚಶಬ್ದದಿಂದ ಈ ವಿಷಯದಲ್ಲಿ ಸ್ಮೃತಿಯೂ

ಸೂಚಿತವಾಗಿದೆ–ಹೇಗೆ ಅಮುಕ್ತರಲ್ಲಿ ಭಕ್ತಿವಿಶೇಷವು ಭಗವಂತನಲ್ಲಿ ದೃಷ್ಟವಾಗಿದೆಯೋ ಅದಕ್ಕನುಗುಣವಾಗಿ ಜ್ಞಾನಿಗಳ ಲಿಂಗದೇಹಭಂಗಾನಂತರದಲ್ಲಿ ದೊರೆಯುವ ಮುಕ್ತಿಯೂ ವಿಭಿನ್ನವಾಗುತ್ತದೆ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ವೃದ್ಧಿಹ್ರಾಸಭಾಕ್ತ್ವಮಂತರ್ಭಾವಾದುಭಯಸಾಮಂಜಸ್ಯಾದೇವಮ್ ಓಂ ॥** (ಅತ್ರ ಪ್ರಾಕ್ ಫಲಹೇತುತಯಾ ಉಕ್ತಭಕ್ತೇಃ ತಾರತಮ್ಯಮ್ ಉಚ್ಯತೇ। ಅಂಬುವದ್ ಅಗ್ರಹಣಪದೋಕ್ತಭಕ್ತಿಃ ಇಹಾನ್ವೇತಿ। ಭಕ್ತೇಃ ವೃದ್ಧಿಹ್ರಾಸಭಾಕ್ತ್ವಮ್= ಆಧಿಕ್ಯನ್ಯೂನತಾವತ್ವಮ್ ಅಸ್ತಿ। ಕುತಃ? ಅಂತರ್ಭಾವಾತ್। ಬ್ರಹ್ಮಾದೀನಾಮ್ ಅಸ್ಮದಾದೀನಾಂ ಚ ಭಕ್ತತ್ವೇ ಅಂತರ್ಭಾವಾತ್। ತೇಷಾಂ ಮಹದಲ್ಪಫಲತ್ವಾತ್ ಇತಿ ಭಾವಃ। ಫಲತಾರತಮ್ಯೇಪಿ ಕುತೋ ಭಕ್ತಿತಾರತಮ್ಯಮ್? ಅತ ಉಕ್ತಮ್– ಉಭಯೇತ್ಯಾದಿ। ಪರಸ್ಯೇತ್ಯಸ್ತಿ। ಏವಂ ಭಕ್ತಿತಾರತಮ್ಯಾಂಗೀಕಾರೇ ಏವ ಈಶಸ್ಯ ಉಭಯಾನ್=ಬ್ರಹ್ಮಾದೀನ್ ಅಸ್ಮದಾದೀನ್ ಪ್ರತಿ ಸಾಮಂಜಸ್ಯಸಂಭವಾತ್ ಇತ್ಯರ್ಥಃ। ಅನ್ಯಥಾ ನಿರ್ಬೀಜಂ ವಿಷಮಫಲದಾತುಃ ಈಶಸ್ಯ ವೈಷಮ್ಯಾಪತ್ತೇಃ। ಫಲವೈಷಮ್ಯಾನುಪಪತ್ತ್ಯಾ ಭಕ್ತಿವೈಷಮ್ಯಮ್, ಇತಿ ಭಾವಃ।)

ಪೂರ್ವದಲ್ಲಿ 'ಅಂಬುವತ್' ಇತ್ಯಾದಿ ಸೂತ್ರದಲ್ಲಿ ಹೇಳಿರುವ ಭಕ್ತಿಗೆ ವೃದ್ಧಿಹ್ರಾಸಭಾಕ್ತ್ವಂ=ವೃದ್ಧಿ–ಹ್ರಾಸಗಳಿವೆ. ಅರ್ಥಾತ್, ತಾರತಮ್ಯವಿದೆ. ಏಕೆಂದರೆ, ಅಂತರ್ಭಾವಾತ್=ಬ್ರಹ್ಮಾದಿ ಉತ್ತಮಾಧಿಕಾರಿಗಳ ಜೊತೆಯಲ್ಲಿ ಮನುಷ್ಯೋತ್ತಮರಾದ ಅಧಮಾಧಿಕಾರಿಗಳೂ ಭಕ್ತವರ್ಗದಲ್ಲಿ ಸೇರಿರುತ್ತಾರೆ, ಆದ್ದರಿಂದ. ಅಂತಹ ಭಕ್ತವರ್ಗದಲ್ಲಿ ಕೆಲವರಿಗೆ ಮಹತ್‌ಫಲವಿದೆ. ಕೆಲವರಿಗೆ ಅಲ್ಪಫಲವಿದೆ. ಹೀಗೆ ಫಲದಲ್ಲಿ ತಾರತಮ್ಯವು ಇರುವುದರಿಂದಾಗಿ ಭಕ್ತಿಯಲ್ಲೂ ತಾರತಮ್ಯವು ಇದೆ. ಹೀಗೆ, ಭಕ್ತಿಯಲ್ಲಿ ತಾರತಮ್ಯವಿದ್ದರೆ ಮಾತ್ರ ಭಗವಂತನಿಗೆ ಉಭಯಸಾಮಂಜಸ್ಯಾತ್, ಉಭಯಾನ್ ಪ್ರತಿ=ಬ್ರಹ್ಮಾದಿ ಉತ್ತಮರನ್ನು ಮನುಷ್ಯಾದಿಅಧಮರನ್ನೂ ಕುರಿತು ಸಾಮಂಜಸ್ಯಾತ್= ಸಮೀಚೀನತೆಯು ಬಂದೀತು. ಭಕ್ತಿಯಲ್ಲಿ ವ್ಯತ್ಯಾಸವಿಲ್ಲದೆಯೂ ಮೋಕ್ಷರೂಪ ಫಲದಲ್ಲಿ ಭಗವಂತನು ವೈಷಮ್ಯವನ್ನು ಮಾಡಿದಲ್ಲಿ ಅವನಿಗೆ ವೈಷಮ್ಯ–ನೈರ್ಘೃಣ್ಯಾದಿದೋಷಗಳು ಬರಬೇಕಾದೀತು. ಆದ್ದರಿಂದ ಭಕ್ತಿಯಲ್ಲಿ ತಾರತಮ್ಯವಿದೆ.

**॥ ಓಂ ದರ್ಶನಾಚ್ಚ ಓಂ ॥** ('ಅಥಾತ ಆನಂದಸ್ಯ ಮೀಮಾಂಸಾ' ಇತ್ಯಾದೌ

ಫಲತಾರತಮ್ಯದರ್ಶನಾತ್। ಚಶಬ್ದಾತ್ 'ಯಥಾ ಭಕ್ತಿವಿಶೇಷೋऽತ್ರ' ಇತ್ಯಾದಿ ಸ್ಮರಣಾಚ್ಚ ಇತ್ಯರ್ಥಃ। ಫಲೇ ವೈಷಮ್ಯೇऽಪಿ ಭಕ್ತೌ ತತ್ ಕುತಃ ? ಅನ್ಯವೈಷಮ್ಯ ಹೇತುಕತ್ವೋऽಪಪತ್ತೇಃ, ಇತಿ ಶಂಕಾಂ ನಿರಸಿತುಂ ಸ್ಮೃತಿರುಕ್ತೇತಿ ಧ್ಯೇಯಮ್ ।)

'ಅಥಾತಃ ಆನಂದಸ್ಯ' ಇತ್ಯಾದಿ ಶ್ರುತಿಯಲ್ಲಿ (ದರ್ಶನ) ಮೋಕ್ಷಫಲದಲ್ಲಿ ತಾರತಮ್ಯವು ಉಕ್ತವಾಗಿದೆ. ಚಶಬ್ದದಿಂದ ಈ ವಿಷಯದಲ್ಲಿ ಸ್ಮೃತಿಯೂ ಪ್ರಮಾಣವಾಗಿದೆ, ಎಂದು ಸೂಚಿಸಲಾಗಿದೆ. ಹೀಗೆ ಮೋಕ್ಷತಾರತಮ್ಯವು ಪ್ರಮಾಣ ಸಿದ್ಧವಾದುದರಿಂದ ಪೂರ್ವೋಕ್ತಾನುಮಾನಕ್ಕೆ ಅಸಿದ್ಧಿದೋಷವಿಲ್ಲ. ಫಲತಾರತಮ್ಯವು ಅನ್ಯಹೇತುಕವಾಗಿರಬಹುದು, ಎಂಬ ಆಶಂಕೆಯ ಸಮಾಧಾನಕ್ಕಾಗಿ ಸ್ಮೃತಿಯನ್ನು ಸೂಚಿಸಲಾಗಿದೆ.

## ಅದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ನ ಸ್ಥಾನತೋऽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ॥** ಶಾಂಕರಭಾಷ್ಯದಲ್ಲಿ 'ನ ಸ್ಥಾನತಃ' ಎಂಬ ಸೂತ್ರದಿಂದ ಇಲ್ಲಿಯವರೆಗೆ ಒಂದು ಅಧಿಕರಣ. ಸಗುಣಬ್ರಹ್ಮನನ್ನು ಬೋಧಿಸುವ 'ಸರ್ವಕರ್ಮಾ ಸರ್ವಕಾಮಃ' (ಛಾಂ.3.14.2) ಇತ್ಯಾದಿಶ್ರುತಿಗಳೂ ಇವೆ. 'ಅಸ್ಥೂಲಮನಣು' (ಬೃ.3.8.8) ಇತ್ಯಾದಿ ನಿರ್ಗುಣಬ್ರಹ್ಮಬೋಧಕಶ್ರುತಿಗಳೂ ಇವೆ. ಇದರಿಂದ ಬ್ರಹ್ಮನಿಗೆ ಉಭಯಲಿಂಗಂ= ಸವಿಶೇಷತ್ವ–ನಿರ್ವಿಶೇಷತ್ವ ಎರಡೂ ರೂಪಗಳು ಪೃಥಿವ್ಯಾದಿ– ಉಪಾಧಿಭೇದದಿಂದಲೂ (ಸ್ಥಾನತೋऽಪಿ) ನ=ಇಲ್ಲ. ಸರ್ವತ್ರ ಹಿ=ಬ್ರಹ್ಮಸ್ವರೂಪ ಪ್ರತಿಪಾದಕವಾದ ಎಲ್ಲ ಕಡೆಯೂ 'ಅಶಬ್ದಮಸ್ಪರ್ಶಮರೂಪಮವ್ಯಯಮ್' (ಕಠ.3-15. ಮುಕ್ತಿಕೊ. 2-72) ಎಂದು, ನಿರ್ಗುಣ ಬ್ರಹ್ಮನನ್ನೇ ಪ್ರತಿಪಾದಿಸಲಾಗಿದೆ.

**॥ ನ ಭೇದಾದಿತಿ ಚೇನ್ನ ಪ್ರತ್ಯೇಕಮತದ್ವಚನಾತ್ ॥** ನಿರ್ಗುಣತ್ವವೇ ಬ್ರಹ್ಮಸ್ವರೂಪ ಎನ್ನುವುದು ನ=ಯುಕ್ತವಲ್ಲ. ಉಪನಿಷತ್ತಿನ ಒಂದೊಂದು ವಿದ್ಯೆಯಲ್ಲೂ ಚತುಷ್ಪಾದ್ ಬ್ರಹ್ಮ, ಷೋಡಶಕಲಂ ಬ್ರಹ್ಮ, ಎಂದು ಸಾಕಾರಬ್ರಹ್ಮವಾದವನ್ನೇ ಹೇಳಲಾಗಿದೆ. ಆದ್ದರಿಂದ ಸೋಪಾಧಿಕವಾದ ಸಗುಣಸ್ವರೂಪವನ್ನೂ ಬ್ರಹ್ಮನಿಗೆ ಹೇಳಬೇಕಾಗುತ್ತದೆ, ಎಂದರೆ ಇದು ಸರಿಯಲ್ಲ. ಒಂದೊಂದು ಉಪಾಧಿವಿಶಿಷ್ಟನಾದ ಬ್ರಹ್ಮರೂಪಕ್ಕೂ ನಿರ್ಗುಣನಿಂದ ಅಭೇದವನ್ನೇ ಹೇಳಲಾಗಿದೆ—'ಯಶ್ಚಾಯಮಸ್ಯಾಂ ಪೃಥಿವ್ಯಾಂ ತೇಜೋಮಯೋऽಮೃತಮಯಃ ಪುರುಷಃ ಯಶ್ಚಾಯಮಧ್ಯಾತ್ಮಂ ಶಾರೀರಃ, ತೇಜೋಮಯೋऽಮೃತಮಯಃ ಪುರುಷಃ, ಅಯಮೇವ ಸಃ

ಯೋಽಯಮಾತ್ಮಾ' (ಬೃ.2-5-1) (ಭೇದಸ್ಯೋಪಾಸನಾರ್ಥತ್ವಾತ್ ಅಭೇದೇ ತಾತ್ಪರ್ಯಾತ್-ಶಾಂ.ಭಾ.)

**॥ ಅಪಿ ಚೈವಮೇಕೇ ॥** ಕೆಲವು ಶಾಖಿಗಳೂ ಭೇದದರ್ಶನವನ್ನು ನಿರಾಕರಿಸಿ ಅಭೇದಜ್ಞಾನವನ್ನೇ ಪ್ರಶಂಸಿಸುತ್ತಾರೆ—

ಮನಸೈವೇದಮಾಪ್ತವ್ಯಂ ನೇಹ ನಾನಾಸ್ತಿ ಕಿಂಚನ ।
ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ ॥ (ಕಠ4-11)

ಶ್ವೇತಾಶ್ವತರೋಪನಿಷತ್ತೂ ಹೇಳುತ್ತದೆ—

ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ
ಸರ್ವಂ ಪ್ರೋಕ್ತಂ ತ್ರಿವಿಧಂ ಬ್ರಹ್ಮಮೇತತ್ ॥

ಇಲ್ಲಿ ಭೋಗ್ಯ-ಭೋಕ್ತೃ-ನಿಯಂತೃರೂಪವಾದ ಸಕಲಜಗತ್ತೂ ಬ್ರಹ್ಮಾತ್ಮಕವೇ ಆಗಿದೆ, ಎಂದು ಹೇಳಲಾಗಿದೆ.

ಸಾಕಾರ-ನಿರಾಕಾರ ಎರಡೂ ವಿಧದ ಬ್ರಹ್ಮಪ್ರತಿಪಾದಕವಾದ ವಾಕ್ಯಗಳು ಇರುವಾಗ ನಿರಾಕಾರ-ಬ್ರಹ್ಮಬೋಧಕವಾಕ್ಯವು ಹೇಳಿದ್ದನ್ನೇ ಏಕೆ ಅಂಗೀಕರಿಸಬೇಕು?

**॥ ಅರೂಪವದೇವ ಹಿ ತತ್ಪ್ರಧಾನತ್ವಾತ್ ॥** ಬ್ರಹ್ಮನು ರೂಪಾದ್ಯಾಕಾರ ರಹಿತವಾದವನು. 'ಅಶಬ್ದಮಸ್ಪರ್ಶಮರೂಪಮವ್ಯಯಮ್' ಇತ್ಯಾದಿವಾಕ್ಯಗಳಿಗೆ ಅರ್ಥಾಂತರಪರತ್ವವನ್ನು ಹೇಳಲು ಬರುವುದಿಲ್ಲವಾದಕಾರಣ ಅವುಗಳು ನಿರವಕಾಶಗಳಾಗಿವೆ. ತದ್ವಿರೋಧಾತ್ ಸಗುಣವಾಕ್ಯಗಳಿಗೆ ಉಪಾಸನಾಪರತ್ವವನ್ನು ಹೇಳಬೇಕು. ಇದನ್ನು 'ತತ್ತು ಸಮನ್ವಯಾತ್' ಎಂಬ ಸೂತ್ರದಲ್ಲೇ ಹೇಳಲಾಗಿದೆ.

**॥ ಪ್ರಕಾಶವಚ್ಚಾವೈಯರ್ಥ್ಯಮ್ ॥** ಈ ಸೂತ್ರದಲ್ಲಿ ಸಾಕಾರವಾದಿ ಶ್ರುತಿಗಳ ತಾತ್ಪರ್ಯವನ್ನು ಹೇಳಲಾಗಿದೆ. ಆಕಾಶವ್ಯಾಪ್ತವಾದ ಪ್ರಕಾಶವು ಮನೆ-ಮಠಾದಿ ಉಪಾಧಿಗಳಿಂದ ತತ್ತದಾಕಾರವನ್ನು ಪಡೆದುಕೊಳ್ಳುವಂತೆ ವ್ಯಾಪ್ತನಾದ ಬ್ರಹ್ಮನೂ ಪೃಥಿವ್ಯಾದಿ ಉಪಾಧಿಗಳಿಂದಾಗಿ ಸಾಕಾರನಾಗಬಹುದು. ಹಿಂದೆ ಔಪಾಧಿಕವಾದ ಸತ್ಯಭೂತ ಉಭಯರೂಪತ್ವವು ಬ್ರಹ್ಮನಿಗೆ ಇಲ್ಲ, ಎಂದು ನಿರಾಕರಿಸಲಾಗಿದೆ. ಇಲ್ಲಿ ಮಿಥ್ಯಾಭೂತವಾದ ಔಪಾಧಿಕರೂಪವನ್ನು ಅಂಗೀಕರಿಸಲಾಗಿದೆ.

**॥ ಆಹ ಚ ತನ್ಮಾತ್ರಮ್ ॥** 'ಸ ಯಥಾ ಸೈಂಧವಘನಃ ಅನಂತರೋಽಬಾಹ್ಯಃ ಕೃತ್ಸ್ನೋ ರಸಘನ ಏವೈವಂ ವಾ ಅರೇಽಯಮಾತ್ಮಾನಂತರೋಽಬಾಹ್ಯಃ ಕೃತ್ಸ್ನಃ

ಪ್ರಜ್ಞಾನಘನ ಏವ। (ಬೃ.4-5.13) ಹೇಗೆ ಉಪ್ಪಿನ ಕಲ್ಲು ಒಳಗೂ ಹೊರಗೂ ಒಂದೇ ರಸವುಳ್ಳದ್ದೋ ಹಾಗೆ ಆತ್ಮನೂ ಒಳ-ಹೊರಗೆ ಜ್ಞಾನಾನಂದಮಯನಾಗಿದ್ದಾನೆ. ಅತದ್ರೂಪ ಅವನಿಗಿಲ್ಲ.

**॥ ದರ್ಶಯತಿ ಚಾಥೋ ಅಪಿ ಸ್ಮರ್ಯತೇ ॥** ಶ್ರುತಿಯು ರೂಪಾಂತರ ನಿಷೇಧಪೂರ್ವಕ ನಿರ್ವಿಶೇಷಬ್ರಹ್ಮರೂಪವನ್ನು ತಿಳಿಸುತ್ತವೆ-'ಅಥಾತ ಆದೇಶೋ ನೇತಿ ನೇತಿ' (ಬೃ.2-3-6) 'ಅನ್ಯದೇವ ತದ್ವಿದಿತಾದಥೋ ಅವಿದಿತಾದಧಿ' (ಕೇ.1-3) 'ಯತೋ ವಾಚೋ ನಿವರ್ತಂತೇ' (ತೈ.2-4-1). ಸ್ಮೃತಿಗಳಲ್ಲೂ ಸಾಕಾರಬ್ರಹ್ಮ ನಿರಾಕರಣಪೂರ್ವಕನಿರಾಕಾರತ್ವವನ್ನೇ ಹೇಳಲಾಗಿದೆ—

ಜ್ಞೇಯಂ ಯತ್ತತ್ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಮೃತಮಶ್ನುತೇ ।
ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥ (ಗೀ.13-12)

**॥ ಅತ ಏವ ಚೋಪಮಾ ಸೂರ್ಯಕಾದಿವತ್ ॥** ಆತ್ಮನು ನಿರ್ವಿಶೇಷ ಚೈತನ್ಯರೂಪನಾದುದರಿಂದಲೇ ಅವನಿಗೆ ನೀರಿನಲ್ಲಿ ಕಾಣುವ ಸೂರ್ಯಪ್ರತಿಬಿಂಬದ ಸಾದೃಶ್ಯವನ್ನು ಕೊಡಲಾಗುತ್ತದೆ—

ಏಕ ಏವ ಹಿ ಭೂತಾತ್ಮಾ ಭೂತೇ ಭೂತೇ ವ್ಯವಸ್ಥಿತಃ ।
ಏಕಧಾ ಬಹುಧಾ ಚೈವ ದೃಶ್ಯತೇ ಜಲಚಂದ್ರವತ್ ॥ (ಬ್ರಹ್ಮ.ಬಿ.)

**॥ ಅಂಬುವದಗ್ರಹಾಣಾತ್ತು ನ ತಥಾತ್ವಮ್ ॥** ನೀರಿನಲ್ಲಿ ಪ್ರತಿಬಿಂಬದಂತೆ ಬ್ರಹ್ಮನ ಸಾಕಾರರೂಪ ಎಂದು ತಿಳಿಯುವುದು ಸರಿಯಲ್ಲ. ನೀರು ಆಕಾಶದ ಸೂರ್ಯನಿಗಿಂತ ಭಿನ್ನವಾಗಿ ದೂರದಲ್ಲಿದೆ. ಸೂರ್ಯನೂ ಮೂರ್ತರೂಪನಾಗಿದ್ದಾನೆ. ಅವನ ಪ್ರತಿಬಿಂಬ ಮೂಡಬಹುದು. ಆದರೆ, ಬ್ರಹ್ಮನು ಸರ್ವವ್ಯಾಪ್ತ. ಅವನಿಗಿಂತ ದೂರದಲ್ಲಿ ಉಪಾಧಿಯು ಇರಲು ಸಾಧ್ಯವಿಲ್ಲ. ಅಲ್ಲದೆ, ಬ್ರಹ್ಮ ಅಮೂರ್ತ-ಜ್ಞಾನಾದ್ಯಾತ್ಮಕ. ಅವನ ಪ್ರತಿಬಿಂಬ ಮೂಡಲು ಹೇಗೆ ಸಾಧ್ಯ? ಈ ಆಕ್ಷೇಪಕ್ಕೆ ಉತ್ತರ—

**॥ ವೃದ್ಧಿಹ್ರಾಸಭಾಕ್ತ್ವಮಂತರ್ಭಾವಾದುಭಯ ಸಾಮಂಜಸ್ಯಾದೇವಮ್ ॥** ನ ಹಿ ದೃಷ್ಟಾಂತೇ ಸರ್ವಸಾಮ್ಯಮ್—ಸೂರ್ಯನ ಪ್ರತಿಬಿಂಬ ನೀರನಲ್ಲಿ ಬಿದ್ದಾಗ ನೀರು ವೃದ್ಧಿಯಾದರೆ ವೃದ್ಧಿಯಾಗುವುದು, ನೀರು ಚಲಿಸಿದರೆ ಚಲಿಸುವುದು. ಹೀಗೆ ಪ್ರತಿಬಿಂಬಕ್ಕೆ ಜಲಧರ್ಮವು ಬರುವಂತೆ ಸರ್ವತ್ರ ವ್ಯಾಪ್ತನಾದ ಆತ್ಮನೂ ದೇಹಾನುಗುಣವಾಗಿ ವೃದ್ಧಿ-ಹ್ರಾಸಗಳನ್ನು ಹೊಂದುತ್ತಾನೆ. (ಹಾಗೆ ಭಾಸವಾಗುತ್ತದೆ)

ಉಪಾಧಿಧರ್ಮಗಳಾದ ವೃದ್ಧಿ-ಹ್ರಾಸಗಳು ಅವನಲ್ಲೂ ಕಾಣುತ್ತವೆ. ಈ ಅಂಶದಲ್ಲಿ ಸಾಮ್ಯವಿರುವುದರಿಂದ ಸೂರ್ಯಪ್ರತಿಬಿಂಬದ ಉದಾಹರಣೆಯನ್ನು ಕೊಡಲಾಗುತ್ತದೆ.

**॥ ದರ್ಶನಾಚ್ಚ ॥** ಪರಬ್ರಹ್ಮನಿಗೆ ದೇಹಾದ್ಯುಪಾಧಿಗಳಲ್ಲಿ ಅಂತಃಪ್ರವೇಶವನ್ನು ಶ್ರುತಿಯು ಹೇಳುತ್ತದೆ—ಪುರಶ್ಚಕ್ರೇ ದ್ವಿಪದಃ, ಪುರಶ್ಚಕ್ರೇ ಚತುಷ್ಪದಃ। ಪುರಸ್ಸ ಪಕ್ಷೀ ಭೂತ್ವಾ ಪುರಃ ಪುರುಷ ಆವಿಶತ್॥ (ಬೃ.2.5.18)

## ಶೇಷತಾತ್ಪರ್ಯಚಂದ್ರಿಕಾದಲ್ಲಿ ವಿಮರ್ಶೆ

ಹೀಗೆ ಅದ್ವೈತಭಾಷ್ಯದಲ್ಲಿ ಹನ್ನೊಂದು ಸೂತ್ರಗಳ ಒಂದೇ ಅಧಿಕರಣ ಇದಾಗಿದೆ. ಜೀವನಿಗೆ ಬರುವ ಜಾಗ್ರದಾದಿ ಅವಸ್ಥಾವಿಶೇಷನಿರೂಪಣೆ ಹಿಂದಿನ ಅಧಿಕರಣಗಳಲ್ಲಿ ನಡೆದಿದೆ. ಅದರ ನಂತರ ಈ ಅಧಿಕರಣದಲ್ಲಿ ಸಗುಣ-ನಿರ್ಗುಣ ಬ್ರಹ್ಮವಿಚಾರವು ಅಪ್ರಸ್ತುತವೆನಿಸುತ್ತದೆ. ಶಾಂಕರಭಾಷ್ಯದಲ್ಲಿ ಇದಕ್ಕೆ ಸಂಗತಿಯನ್ನು ಹೀಗೆ ಹೇಳಲಾಗಿದೆ—ಯಾವ ಬ್ರಹ್ಮನೊಂದಿಗೆ ಜೀವನ ಜಾಗ್ರದಾದಿ ಉಪಾಧಿಗಳು ನಿವೃತ್ತವಾದಾಗ ಜೀವನು ಐಕ್ಯವನ್ನು ಪಡೆಯುವನೋ ಅಂತಹ ಬ್ರಹ್ಮಸ್ವರೂಪವನ್ನು ಇಲ್ಲಿ ನಿರೂಪಿಸಲಾಗಿದೆ. (ಯೇನ ಬ್ರಹ್ಮಣಾ ಜೀವಃ ಸುಷುಪ್ತ್ಯಾದಿರೂಪೋಪಾಧ್ಯು-ಪಶಮಾತ್ ಸಂಪದ್ಯತೇ ತಸ್ಯೇದಾನೀಂ ಸ್ವರೂಪಂ ನಿರೂಪ್ಯತೇ-ಶಾಂ.ಭಾ.) ಆದರೆ, ಈ ವಿಷಯವೂ 'ತದನನ್ಯತ್ವಂ' ಇತ್ಯಾದಿ ಆರಂಭಣಾಧಿಕರಣದಲ್ಲಿ (2.1) ಬಂದಿದೆ. ಅದನ್ನು ಮತ್ತೆ ಹೇಳಬೇಕಾದ ಅಗತ್ಯವಿಲ್ಲ. ಭಾಮತೀಟೀಕೆಯಲ್ಲಿ ಈ ಆಕ್ಷೇಪಕ್ಕೆ ಹೀಗೆ ಸಮಾಧಾನವನ್ನು ಕೊಡಲಾಗಿದೆ. ಅಲ್ಲಿ ಪ್ರಪಂಚಮಿಥ್ಯಾತ್ವವನ್ನು ಹೇಳಿದ್ದರೂ ಸತ್ಯತ್ವಪ್ರತಿಪಾದಕವಾದ ಶ್ರುತಿಗಳು ಅನೇಕವಿರುವುದರಿಂದ ಮತ್ತೆ ಸಂದೇಹ ಬರುತ್ತದೆ. ಅದರ ಪರಿಹಾರಕ್ಕಾಗಿ ಈ ಅಧಿಕರಣ ಸಾರ್ಥಕ ಎಂದು. ಆದರೆ ಈ ಸಂದೇಹಕ್ಕೆ ನೇರ ಪರಿಹಾರವನ್ನು ಹೇಳುವ 'ಪ್ರಕಾಶವಚ್ಚಾವೈಯರ್ಥ್ಯಮ್' ಇತ್ಯಾದಿ ಸೂತ್ರಗಳು ಮಾತ್ರ ಸಾಕು. ಅದರ ಹಿಂದಿನ ಸೂತ್ರಗಳ ಅಗತ್ಯವಿಲ್ಲ.

**ರಾಮಾನುಜ ಭಾಷ್ಯದಲ್ಲಿ** 'ಅತೋಽನಂತೇನ' ಎಂಬ ಸೂತ್ರದವರೆಗಿನ ಹದಿನಾರು ಸೂತ್ರಗಳು ಒಂದೇ ಅಧಿಕರಣವೆಂದು ಪರಿಗಣಿಸಲ್ಪಟ್ಟಿದೆ. ಆದ್ದರಿಂದ ಆ ಭಾಷ್ಯದಂತೆ ಸೂತ್ರವ್ಯಾಖ್ಯಾನವನ್ನು ಮುಂದೆ ಮಾಡಲಾಗಿದೆ.

**ಇಲ್ಲಿಗೆ ವೃದ್ಧಿಹ್ರಾಸಾಧಿಕರಣವು ಮುಗಿಯಿತು.**

## ೧೩. ಪಾಲಕತ್ವಾಧಿಕರಣಮ್

ಸೃಷ್ಟಿಸಂಹಾರಕರ್ತೃತ್ವಮೇವಾಸ್ಯ ನ ಪಾಲಕತ್ವಂ ಸ್ವತಃಸಿದ್ಧೇರಿತಿ; ಅತ ಆಹ-

**॥ ಓಂ ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ**
**ತತೋ ಬ್ರವೀತಿ ಚ ಭೂಯಃ ಓಂ ॥ ೨೨ ॥**

ಉಕ್ತಂ ಸೃಷ್ಟಿಸಂಹಾರಕರ್ತೃತ್ವಮಾತ್ರಂ ಪ್ರತಿಷಿಧ್ಯ ತತೋऽಧಿಕಂ ಬ್ರವೀತಿ-

'ನೈತಾವದೇನಾ ಪರೋ ಅನ್ಯದಸ್ತ್ಯುಕ್ಷಾ ಸ ದ್ಯಾವಾಪೃಥಿವೀ ಬಿಭರ್ತಿ' (ಋ. 10.31.8) ಇತಿ ।

ಚಶಬ್ದಾತ್ ಸ್ಮೃತಿಶ್ಚ-

'ಸೃಷ್ಟಿಂ ಚ ಪಾಲನಂ ಚೈವ ಸಂಹಾರಂ ನಿಯಮಂ ತಥಾ ।
ಏಕ ಏವ ಕರೋತೀಶಃ ಸರ್ವಸ್ಯ ಜಗತೋ ಹರಿಃ ॥'

ಇತಿ ಬ್ರಹ್ಮಾಂಡೇ ।

ಪರಮಾತ್ಮ ಸೃಷ್ಟಿ ಮತ್ತು ಸಂಹಾರಗಳನ್ನಷ್ಟೇ ಮಾಡುತ್ತಾನೆ. ಪಾಲನೆಯನ್ನು ಮಾಡುವುದಿಲ್ಲ. ಸೃಷ್ಟಿಗೊಂಡ ಜಗತ್ತು ಸಂಹಾರವಾಗುವವರೆಗೆ ತಾನಾಗಿಯೇ ಇರುತ್ತದೆ. ಅದಕ್ಕಾಗಿ ಮತ್ತೊಬ್ಬರ ಅಗತ್ಯವಿಲ್ಲ. ಅಕಾಲದಲ್ಲಿ ಸಂಹಾರ ನಿವಾರಣೆಗೂ ದೇವರ ಅಗತ್ಯವಿಲ್ಲ. ಏಕೆಂದರೆ, ಸಂಹಾರ ಮಾಡುವವನೂ ಅವನೇ. ಹೀಗಿರುವಾಗ ಅಕಾಲದಲ್ಲಿ ಮತ್ತೊಬ್ಬರಿಂದ, ಅವನ ಇಚ್ಛೆಗೆ ಮೀರಿ, ಸಂಹಾರವಾಗುವುದು ಹೇಗೆ? ಆದ್ದರಿಂದ ಪರಮಾತ್ಮನು ಪಾಲನೆ ಮಾಡುವ ಅಗತ್ಯವೇ ಇಲ್ಲ. ಹೀಗೆ ಆಕ್ಷೇಪ ಬಂದಾಗ ಅದರ ಪರಿಹಾರಕ್ಕಾಗಿ ಈ ಸೂತ್ರವಿದೆ.

ಶ್ರುತಿಯು ತಾನು ಹೇಳಿದ ಸೃಷ್ಟಿ–ಸಂಹಾರಕರ್ತೃತ್ವ ಮಾತ್ರವನ್ನು ನಿರಾಕರಿಸಿ ಅವೆರಡಕ್ಕಿಂತ ಅಧಿಕವಾದುದನ್ನೂ (ಪಾಲಕತ್ವವನ್ನೂ) ಪರಮಾತ್ಮನಿಗೆ ಹೇಳುತ್ತದೆ. ಹಾಗೆ ಹೇಳುವ ಋಗ್ವೇದ ಮಂತ್ರವಿದೆ.

ಮಂತ್ರದ ಅರ್ಥ–1. ಏನಾ=ಈ ಪರಮಾತ್ಮನಿಂದ ನಡೆಯುವ ಕಾರ್ಯವು ಏತಾವತ್‌ನ=ಸೃಷ್ಟಿ–ಸಂಹಾರಗಳು ಮಾತ್ರವೇ ಅಲ್ಲ. ಅನ್ಯದಸ್ತಿ=ಇನ್ನೂ ಬೇರೆಯೂ ಇದೆ. ಉಕ್ಷಾಸಃ=ಭಕ್ತಾಭಿಲಷಿತವರ್ಷಕನಾದ ಆ ಪರಮಾತ್ಮನು ದ್ಯಾವಾಪೃಥಿವ್ಯೌ=

ಸ್ವರ್ಗಲೋಕ ಮತ್ತು ಈ ಭೂಮಿಯನ್ನು ಬಿಭರ್ತಿ=ಧರಿಸುತ್ತಾನೆ, ಪೋಷಿಸುತ್ತಾನೆ. (ಋಗ್ವೇದದ ಈ ಮಂತ್ರವು ಮೊದಲು ತಾನೇ ಪರಮಾತ್ಮನಿಗೆ ಸೃಷ್ಟಿಕರ್ತೃತ್ವವನ್ನೂ ಸಂಹಾರಕರ್ತೃತ್ವವನ್ನೂ ಹೇಳಿ ಪಾಲನಕರ್ತೃತ್ವವನ್ನು ಹೇಳಿದೆ.)

ಸೂತ್ರದ ಚಶಬ್ದದಿಂದ ಸ್ಮೃತಿಯೂ ಸೂಚಿತವಾಗಿದೆ–ಸೃಷ್ಟಿಯನ್ನೂ ಪಾಲನೆಯನ್ನೂ ಸಂಹಾರವನ್ನೂ ನಿಯಂತ್ರಣವನ್ನೂ ಈ ಸಕಲಜಗತ್ತಿಗೂ ಆ ಈಶನೊಬ್ಬನೇ ಮಾಡುತ್ತಾನೆ. ಇದು ಬ್ರಹ್ಮಾಂಡಪುರಾಣದ ವಚನ.

## ದ್ವೈತದರ್ಶನದಲ್ಲಿಸೂತ್ರದ ಅರ್ಥ

**।। ಓಂ ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ ಓಂ ।।** (ಅತ್ರ ಈಶಸ್ಯ ಜನ್ಮಾದಿಸೂತ್ರೋಕ್ತಂ ವಿಶ್ವಪಾತೃತ್ವಂ ಸಾಧ್ಯತೇ । ಪರ ಇತ್ಯಸ್ತಿ । ವಿಶ್ವಪಾಲಕಃ ಇತಿ ಯೋಗ್ಯತಯಾ ಅನ್ವೇತಿ । ಪರಃ ವಿಶ್ವಪಾಲಕಃ । ನ ಸ್ವಭಾವಾತ್ ಪಾಲನಸಿದ್ಧಿಃ । ಕುತಃ ? ಹಿ=ಯಸ್ಮಾತ್ ಪ್ರಕೃತಸ್ಯ='ಅಸ್ಯೇದೇಷಾ ಸುಮತಿಃ' ಇತ್ಯಾದಿನಾ ಪ್ರಕೃತಸ್ಯ ಸೃಷ್ಟಿ–ಲಯಕರ್ತೃತ್ವಸ್ಯ ಏತಾವತ್ತ್ವಂ=ತಾವನ್ಮಾತ್ರತ್ವಂ ಪ್ರತಿಷೇಧತಿ, ತತಃ=ಸೃಷ್ಟ್ಯಾದಿಕರ್ತೃತ್ವಾತ್ ಭೂಯಃ=ಅಧಿಕಂ ಪಾತೃತ್ವಮಪಿ ಬ್ರವೀತಿ= 'ನೈತಾವದೇನಾ...' ಇತಿ ಶ್ರುತಿಃ । ಚ ಶಬ್ದಾತ್ 'ಸೃಷ್ಟಿಂ ಚ ಪಾಲನಂ ಚೈವ' ಇತಿ ಸ್ಮೃತಿಶ್ಚ । ಅತ ಇತ್ಯರ್ಥಃ ।)

ಪರಮಾತ್ಮನು ಪಾಲಕನೂ ಆಗಿದ್ದಾನೆ. ಹಿ=ಏಕೆಂದರೆ ಶ್ರುತಿಯು ಪ್ರಕೃತೈತಾವತ್ತ್ವಂ ಪ್ರಕೃತಸ್ಯ=ಋಗ್ವೇದ ಮಂತ್ರದಲ್ಲೇ ಪೂರ್ವದಲ್ಲಿ ಪ್ರಕೃತವಾದ ಸೃಷ್ಟಿ–ಲಯಕರ್ತೃತ್ವಕ್ಕೆ ಏತಾವತ್ತ್ವಂ=ತನ್ಮಾತ್ರತ್ವವನ್ನು ಪ್ರತಿಷೇಧತಿ=ನಿಷೇಧ ಮಾಡುತ್ತದೆ. ತತಃ=ಅದಕ್ಕಿಂತಲೂ ಭೂಯಃ=ಹೆಚ್ಚಿನದನ್ನು ಬ್ರವೀತಿ ಚ=ಹೇಳುತ್ತದೆ. ಚಶಬ್ದದಿಂದ ಈ ಬಗ್ಗೆ ಸ್ಮೃತಿಯೂ ಸೂಚಿತವಾಗಿದೆ.

**ಇಲ್ಲಿಗೆ ಪಾಲಕತ್ವಾಧಿಕರಣವು ಮುಗಿಯಿತು.**

# ೧೪. ಅವ್ಯಕ್ತಾಧಿಕರಣಮ್

**ಪರಮಾತ್ಮಾಪರೋಕ್ಷ್ಯಂ ಚ ತತ್ಪ್ರಸಾದಾದೇವ ನ ಜೀವಶಕ್ತ್ಯೇತಿ ವಕ್ತುಮುಚ್ಯತೇ–**

**।। ಓಂ ತದವ್ಯಕ್ತಮಾಹ ಹಿ ಓಂ ।। ೨೩ ।।**

**ಅವ್ಯಕ್ತಮೇವ ತದ್ ಬ್ರಹ್ಮ ಸ್ವತಃ ।**

**'ಅರೂಪಮಕ್ಷರಂ ಬ್ರಹ್ಮ ಸದಾಽವ್ಯಕ್ತಂ ಚ ನಿಷ್ಕಳಮ್ ।**

**ಯಜ್ಜ್ಞಾತ್ವಾ ಮುಚ್ಯತೇ ಜಂತುರಾನಂದಶ್ಚಾವ್ಯಯೋ ಭವೇತ್ ॥'**

**ಇತಿ ಹಿ ಕೌಂಠರವ್ಯಶ್ರುತಿಃ ।**

ಪರಮಾತ್ಮನ ಅಪರೋಕ್ಷವಾದರೂ ಅವನ ಪ್ರಸಾದದಿಂದಲೇ ಆಗಬೇಕು, ಜೀವನ ಪ್ರಯತ್ನದಿಂದ ಅದು ಸಾಧ್ಯವಿಲ್ಲ, ಎಂದು ಮುಂದೆ 'ಅತೋಽನಂತೇನ' ಎಂಬ ಸೂತ್ರದಲ್ಲಿ ಹೇಳಲು ಅದಕ್ಕೆ ಕಾರಣವಾಗಿರುವ ವಿಷಯವನ್ನು (ಈಶ್ವರಾವ್ಯಕ್ತತ್ವವನ್ನು) ಇಲ್ಲಿ ಹೇಳಲಾಗಿದೆ—ಪರಮಾತ್ಮನು ಸ್ವಾಭಾವಿಕವಾಗಿಯೇ ಅದೃಶ್ಯನಾಗಿದ್ದಾನೆ. ಕೌಂಠರವ್ಯಶ್ರುತಿಯು ಇದನ್ನು ಹೇಳುತ್ತದೆ—ಬ್ರಹ್ಮನಿಗೆ ಪ್ರಾಕೃತದೇಹವಿಲ್ಲ, ಆದರಿಂದಾಗಿಯೇ ಅವನು ಅಕ್ಷರ=ನಾಶರಹಿತ. ವಿಗ್ರಹವಿಲ್ಲದಿರುವುದರಿಂದಾಗಿಯೇ ಅವನು ಅವ್ಯಕ್ತಂ ಚ=ಕಣ್ಣಿಗೆ ಕಾಣುವುದಿಲ್ಲ. ನಿಷ್ಕಲಂ=ಷೋಡಶಕಲಾಹೀನನಾಗಿದ್ದಾನೆ. ಯತ್=ಯಾವ ಇಂತಹ ಬ್ರಹ್ಮನನ್ನು ಜ್ಞಾತ್ವಾ=ನೋಡಿಯೇ ಜಂತುಃ=ಜೀವನು ಮುಚ್ಯತೇ=ಬಿಡುಗಡೆಯನ್ನು ಹೊಂದುತ್ತಾನೆ. ಅವನಿಗೆ ಅಕ್ಷಯವಾದ ಸುಖವೂ ದೊರಕುವುದು.

ವಿವರಣೆ—ಮೋಕ್ಷಕ್ಕೆ ಕಾರಣವಾದ ಭಗವಂತನ ದರ್ಶನವು ಆಗಬೇಕಾದರೆ ಅವನು ನಮ್ಮಲ್ಲಿ ಪ್ರಸನ್ನನಾಗಬೇಕು. ಅದಿಲ್ಲದೆ, ನಾವು ಎಷ್ಟು ಪ್ರಯತ್ನಪಟ್ಟರೂ ಅವನ ದರ್ಶನವಾಗುವುದಿಲ್ಲ. ಇದನ್ನು ಈ ಅಧಿಕರಣದ 'ಅತೋಽನಂತೇನ' ಎಂಬ ಸೂತ್ರದಲ್ಲಿ ಹೇಳುತ್ತಾರೆ. ಅದಕ್ಕೆ ಸಾಧಕವಾಗಿ ಮೊದಲು, ಪರಮಾತ್ಮ ಅವ್ಯಕ್ತೈಕಸ್ವಭಾವನೆಂದು ಹೇಳುತ್ತಾರೆ.

ಪರಮಾತ್ಮನು ಮನೆ–ಮಠಗಳಂತೆ ಕಣ್ಣಿಗೆ ಕಾಣುತ್ತಾನೆಂದಾದರೆ ಜೀವನ ಪ್ರಯತ್ನವೇ ಅವನ ದರ್ಶನಕ್ಕೆ ಸಾಕು, ಭಕ್ತ್ಯಾದಿಗಳ ಅಗತ್ಯವಿಲ್ಲ. ಅವನು ಗಾಳಿಯಂತೆ ಅದೃಶ್ಯನಾದರೂ ಅವನನ್ನು ಸರ್ವಥಾ ನೋಡಲು ಸಾಧ್ಯವಿಲ್ಲವಾದ ಕಾರಣ ಭಕ್ತ್ಯಾದಿಗಳು ವ್ಯರ್ಥ. ಹೀಗೆ ಈ ಅಧಿಕರಣದ ಪೂರ್ವಪಕ್ಷ. ಅವನು ಗಾಳಿಯಂತೆ ಅದೃಶ್ಯನಾದರೂ ಜೀವನು ಮಾಡಿರುವ ಭಕ್ತ್ಯಾದಿಗಳಿಂದ ಪ್ರಸನ್ನನಾಗಿ, ತನ್ನ ಅಚಿಂತ್ಯಶಕ್ತಿಯಿಂದ, ಜೀವನಿಗೆ ಕಾಣಿಸುತ್ತಾನೆ, ಎಂದು ಸಿದ್ಧಾಂತ.

**॥ ಓಂ ಅಪಿ ಸಂರಾಧನೇ ಪ್ರತ್ಯಕ್ಷಾನುಮಾನಾಭ್ಯಾಮ್ ಓಂ ॥ ೨೪ ॥**

**ಆರಾಧನೇಽಪ್ಯವ್ಯಕ್ತಮೇವ । ಜ್ಞಾನಿಪ್ರತ್ಯಕ್ಷೇಣೇತರೇಷಾಮತಿಸೂಕ್ಷ್ಮತ್ವ ಲಿಂಗಾದನುಮಾನೇನ ।**

**'ನ ತಮಾರಾಧಯಿತ್ವಾಽಪಿ ಕಶ್ಚಿದ್ ವ್ಯಕ್ತೀಕರಿಷ್ಯತಿ ।**
**ನಿತ್ಯಾವ್ಯಕ್ತೋ ಯತೋ ದೇವಃ ಪರಮಾತ್ಮಾ ಸನಾತನಃ ॥'**

**ಇತಿ ಚ ಬ್ರಹ್ಮವೈವರ್ತೇ ।**

ಜ್ಞಾನಿಗಳ ಪ್ರತ್ಯಕ್ಷಾನುಭವದಿಂದ, ಇತರರಿಗೆ ಅತಿಸೂಕ್ಷ್ಮತ್ವಹೇತುಕಾನುಮಾನ ದಿಂದ ಸಿದ್ಧವಾದ ವಿಷಯ ಇದು—ಭಕ್ತಿರಹಿತವಾಗಿ ಎಷ್ಟು ಆರಾಧನೆಯನ್ನು ಮಾಡಿದರೂ ಪರಮಾತ್ಮನು ಅವ್ಯಕ್ತನೇ ಎಂದು. ಬ್ರಹ್ಮವೈವರ್ತಪುರಾಣದ ಈ ಮಾತಿನಿಂದ ಜ್ಞಾನಿಗಳಿಗೆ ಈಶ್ವರನ ಅವ್ಯಕ್ತತ್ವವು ಪ್ರತ್ಯಕ್ಷಸಿದ್ಧವೆಂದು ತಿಳಿಯುತ್ತದೆ. ಯತಃ=ಯಾವಕಾರಣದಿಂದ ದೇವಃ, ಪರಮಾತ್ಮಾ=ಕ್ರೀಡಾದಿಗುಣವಿಶಿಷ್ಟನಾದ ಪರಮಾತ್ಮನು ನಿತ್ಯಾವ್ಯಕ್ತಃ=ಸದಾ ಅವ್ಯಕ್ತನೋ, ಸನಾತನಃ=ಸದಾ ಏಕರೂಪನೋ ಆದ್ದರಿಂದ ಕಶ್ಚಿತ್=ಯಾರೇ ಆಗಲಿ ತಂ=ಅವನನ್ನು ಆರಾಧಯಿತ್ವಾಽಪಿ=ಭಕ್ತಿ ಇಲ್ಲದೆ ಆರಾಧಿಸಿದರೂ ನ ವ್ಯಕ್ತೀಕರಿಷ್ಯತಿ=ನೋಡಲಾರ.

**ವಿವರಣೆ**—ಯಕ್ಷ-ಪಿಶಾಚಾದಿಗಳು ಕಣ್ಣಿಗೆ ಕಾಣದಿದ್ದರೂ ನಿರಂತರಾರಾಧನೆ ಯಿಂದ ಕಾಣುವಂತೆ ಪರಮಾತ್ಮನನ್ನೂ ಅತಿಪ್ರಯತ್ನದಿಂದ ನೋಡಬಹುದು, ಎಂಬ ಜಿಜ್ಞಾಸೆಗೆ ಇಲ್ಲಿ ಸಮಾಧಾನವಿದೆ. ಪರಮಾತ್ಮನು ಅವ್ಯಕ್ತರೂಪನೆಂದು ಜ್ಞಾನಿಗಳು ಕಂಡಿದ್ದಾರೆ. (ಅವನ ಅನುಗ್ರಹದಿಂದಲೇ ಜ್ಞಾನಿಗಳಿಗೆ ಅವನ ಅವ್ಯಕ್ತತ್ವವೂ ಕಾಣುತ್ತದೆ.) ಇತರರಿಗೆ 'ಪರಮಾತ್ಮಾ ಅವ್ಯಕ್ತಃ, ಅತಿಸೂಕ್ಷ್ಮತ್ವಾತ್, ಭೂತಸೂಕ್ಷ್ಮವತ್' ಎಂಬ ಅನುಮಾನದಿಂದ ಅದು ತಿಳಿಯುತ್ತದೆ. ಆದ್ದರಿಂದ ಎಷ್ಟು ಆರಾಧನೆ ಮಾಡಿದರೂ ಭಕ್ತಿ ಇಲ್ಲದೆ ಅವನನ್ನು ನೋಡಲಾಗದು. ಭಗವಂತನು ಹಸಿದ ಯಕ್ಷನಂತೆ ಭಕ್ತಿ ಇಲ್ಲದ ಅನ್ನ-ಪಾನಾದಿದಾನದಿಂದ ಪ್ರಸನ್ನನಾಗುವುದಿಲ್ಲ. ಆದ್ದರಿಂದಲೇ ದುರ್ಯೋಧನನ ಭಕ್ತಿಹೀನವಾದ ಸಮಾರಾಧನೆಯನ್ನು ಉಪೇಕ್ಷೆ ಮಾಡಿ ವಿದುರನ ಮನೆಗೆ ಹೋದ.(ವಾದಿರಾಜರು)

**ನಿತ್ಯಾವ್ಯಕ್ತೇನ ರೂಪೇಣ ತಥೈವ ತಿಷ್ಠತಿ; ವ್ಯಕ್ತಂ ಕಿಂಚಿದ್ ರೂಪಂ ಗೃಹೀತ್ವಾ ದೃಶ್ಯತೇ; ಯಥಾಽಗ್ನ್ಯಾದಯಸ್ತನ್ಮಾತ್ರಾರೂಪೇಣಾದೃಶ್ಯಾ ಅಪಿ ಸ್ಥೂಲ-ರೂಪೇಣ ದೃಶ್ಯಂತೇ । ಏವಮಿತಿ ಚೇತ್, ನ-**

**॥ ಓಂ ಪ್ರಕಾಶವಚ್ಚಾವೈಶೇಷ್ಯಮ್ ಓಂ ॥ ೨೫ ॥**

**ಅಗ್ನ್ಯಾದಿವತ್ ಸ್ಥೂಲಸೂಕ್ಷ್ಮತ್ವವಿಶೇಷಾಭಾವಾತ್ ।**
**'ನಾಸೌ ಸೂಕ್ಷ್ಮೋ ನ ಸ್ಥೂಲಃ ಪರ ಏವ ಸದಾ ಭವತಿ**
**ತಸ್ಮಾದಾಹುಃ ಪರಮ ಇತಿ' ಇತಿ ಮಾಂಡವ್ಯಶ್ರುತೇಃ ।**

**'ಸ್ಥೂಲಸೂಕ್ಷ್ಮವಿಶೇಷೋಽತ್ರ ನ ಕ್ವಚಿತ್ ಪರಮೇಶ್ವರೇ ।**
**ಸರ್ವತ್ರೈಕಪ್ರಕಾರೋಽಸೌ ಸರ್ವರೂಪೇಷ್ವಜೋ ಯತಃ ॥'**

**ಇತಿ ಚ ಗಾರುಡೇ ।**

**'ಅವ್ಯಕ್ತವ್ಯಕ್ತಭಾವೌ ಚ ನ ಕ್ವಚಿತ್ ಪರಮೇಶ್ವರೇ ।**
**ಸರ್ವತ್ರಾವ್ಯಕ್ತರೂಪೋಽಯಂ ಯತ ಏವ ಜನಾರ್ದನಃ ॥'**

**ಇತಿ ಚ ಕೌರ್ಮೇ ।**

ಪರಮಾತ್ಮನಿಗೆ ಸ್ಥೂಲ ಮತ್ತು ಸೂಕ್ಷ್ಮ ಹೀಗೆ ಎರಡು ರೂಪಗಳಿವೆ. ಅವುಗಳಲ್ಲಿ ನಿತ್ಯ ಸೂಕ್ಷ್ಮವಾದ ಮೂಲರೂಪದಿಂದ ಅವನು ಅದೃಶ್ಯನಾಗಿಯೇ ಇರುತ್ತಾನೆ. ಸ್ಥೂಲವಾದ ಇನ್ನೊಂದು ರೂಪವನ್ನು ಸ್ವೀಕರಿಸಿ ಆ ರೂಪದಿಂದ ಸಾಧಕರಿಗೆ ಕಾಣಿಸಿಕೊಳ್ಳುತ್ತಾನೆ. ಇದಕ್ಕೆ ಉದಾಹರಣೆ–ಪೃಥಿವೀ, ಅಪ್ ಮತ್ತು ಅಗ್ನಿ. ಅವುಗಳು ತನ್ಮಾತ್ರಾರೂಪದಲ್ಲಿ ಅದೃಶ್ಯಗಳಾದರೂ ಪ್ರಕೃತ್ಯಂಶಗಳಿಂದ ಉಪಚಿತರೂಪದಿಂದ ದೃಶ್ಯಗಳಾಗಿವೆ. ಅದರಂತೆ ಪರಮಾತ್ಮನೂ ಒಂದು ರೂಪದಿಂದ ದೃಶ್ಯನಾಗಬಹುದು. ಹೀಗೆ ಆಕ್ಷೇಪ ಬಂದರೆ ಅದರ ಪರಿಹಾರಕ್ಕೆ ಈ ಸೂತ್ರವಿದೆ. ಅಗ್ನ್ಯಾದಿಗಳಂತೆ ಪರಮಾತ್ಮನಿಗೆ ಸ್ಥೂಲ–ಸೂಕ್ಷ್ಮಗಳೆಂಬ ವಿವೇಕವಿಲ್ಲ. ಮಾಂಡವ್ಯಶ್ರುತಿಯು ಹಾಗೆ ಹೇಳುತ್ತದೆ—ಪರಮಾತ್ಮನು ಒಂದು ರೂಪದಿಂದ ಸೂಕ್ಷ್ಮ ಇನ್ನೊಂದು ರೂಪದಿಂದ ಸ್ಥೂಲನಾಗಿರುವುದಿಲ್ಲ. ಅವನು ಎಲ್ಲಾ ರೂಪಗಳಲ್ಲೂ ಪರಮಸೂಕ್ಷ್ಮರೂಪದಿಂದಲೇ ಇರುತ್ತಾನೆ. ಆದ್ದರಿಂದಲೇ ಅವನನ್ನು ಜ್ಞಾನಿಗಳು ಪರಮನೆನ್ನುವರು.

ಗಾರುಡದಲ್ಲಿ ಹೀಗಿದೆ—ಈ ಪರಮಾತ್ಮನಲ್ಲಿ ಸ್ಥೂಲ–ಸೂಕ್ಷ್ಮಗಳೆಂಬ ವಿಶೇಷಗಳು ಎಂದೂ ಇಲ್ಲ. ಎಲ್ಲ ಕಡೆಗಳಲ್ಲೂ ಎಲ್ಲ ರೂಪಗಳಲ್ಲೂ ಅಜನಾದ ಅವನು ಒಂದೇ ರೂಪನಾಗಿರುತ್ತಾನೆ. ಹುಟ್ಟುವ ವಸ್ತುಗಳಾದರೆ ಮೂಲರೂಪದಿಂದ ಸೂಕ್ಷ್ಮವಾಗಿಯೂ ಕಾರ್ಯರೂಪದಿಂದ ಸ್ಥೂಲವಾಗಿಯೂ ಇರುತ್ತವೆ. ಆದರೆ, ಪರಮಾತ್ಮನು

ಸರ್ವರೂಪಗಳಲ್ಲೂ ಅಜ=ಉತ್ಪತ್ತಿ ಇಲ್ಲದವನು. ಹೀಗಾಗಿ ಅವನಿಗೆ ಸ್ಥೂಲ–ಸೂಕ್ಷ್ಮ ಗಳೆಂಬ ರೂಪಭೇದಗಳಿಲ್ಲ. ಅವನು ಪರಮ–ಈಶ್ವರನಾದುದರಿಂದ ಇತರ ಪದಾರ್ಥ ಗಳಲ್ಲಿ ಇಲ್ಲದ ಈ ವೈಚಿತ್ರ್ಯವು ಅವನಲ್ಲಿದೆ.

ಕೂರ್ಮಪುರಾಣದಲ್ಲಿ ಹೀಗಿದೆ—ಪರಮೇಶ್ವರನಲ್ಲಿ ಅವ್ಯಕ್ತತ್ವ ವ್ಯಕ್ತತ್ವ ಎಂಬ ಧರ್ಮಗಳು ಎಂದೂ ಇಲ್ಲ. ಏಕೆಂದರೆ, ಜನಾರ್ದನನಾದ ಅವನು ಎಲ್ಲ ಕಾಲದೇಶಗಳಲ್ಲೂ ಅವ್ಯಕ್ತರೂಪನೇ ಆಗಿರುತ್ತಾನೆ.

**ವಿವರಣೆ**—ಪಂಚಭೂತಗಳ ಮೂಲರೂಪ ಶಬ್ದಾದಿ ತನ್ಮಾತ್ರೆಗಳು. ಸೃಷ್ಟಿಕಾಲದಲ್ಲಿ ಅವುಗಳೊಂದಿಗೆ ಪ್ರಕೃತ್ಯಂಶಗಳು ಸೇರಿದಾಗ ಅವುಗಳು ಸ್ಥೂಲರೂಪವನ್ನು ಪಡೆಯುತ್ತವೆ. ಅವುಗಳಲ್ಲಿ ಆಕಾಶ ಮತ್ತು ಗಾಳಿಗಳು ಸ್ಥೂಲರೂಪದಲ್ಲೂ ಅದೃಶ್ಯಗಳೇ ಆಗಿರುತ್ತವೆ. ಪೃಥಿವ್ಯಾದಿಗಳು ದೃಶ್ಯವಾಗುತ್ತವೆ.

**ತರ್ಹಿ ಕಿಂ ಯತ್ನೇನೇತ್ಯತ ಆಹ-**

**॥ ಓಂ ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್ ಓಂ ॥ ೨೬ ॥**

**ವಿಷಯಭೂತೇ ತಸ್ಮಿನ್ನೇವ ಶ್ರವಣಾದ್ಯಭ್ಯಾಸಾತ್ ಪ್ರಕಾಶಶ್ಚ ಭವತಿ । 'ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' (ಬೃ.ಉ. 4.4.5) ಇತಿ ಶ್ರುತೇಃ ।**

ಪರಮಾತ್ಮನು ಅವ್ಯಕ್ತೈಕಸ್ವಭಾವನಾದರೆ ಅವನ ಅಪರೋಕ್ಷಕ್ಕಾಗಿ ಮಾಡುವ ಶ್ರವಣ–ಮನನಾದಿ ಪ್ರಯತ್ನ ಏಕೆ? ಈ ಶಂಕೆಗೆ ಪರಿಹಾರ ಪ್ರಕೃತ ಸೂತ್ರ. ಕರ್ಮಣಿ=ಜ್ಞಾನಕ್ಕೆ ವಿಷಯೀಭೂತನಾದ ಬ್ರಹ್ಮನ ವಿಷಯದಲ್ಲಿ ಮತ್ತೆ ಮತ್ತೆ ಶ್ರವಣಾದಿಗಳನ್ನು ಮಾಡುವುದರಿಂದ ಪ್ರಕಾಶಶ್ಚ=ಅವನ ಅಪರೋಕ್ಷಜ್ಞಾನವೂ ಆಗುತ್ತದೆ. ಈ ಬಗ್ಗೆ ಸೂತ್ರದ ಚಶಬ್ದದಿಂದ ಸೂಚಿತವಾದ ಶ್ರುತಿ ಇದೆ— 'ಪರಮಾತ್ಮನನ್ನು ನೋಡಬೇಕಾದರೆ ಶ್ರವಣ, ಮನನ, ಧ್ಯಾನಗಳನ್ನು ಮಾಡಬೇಕು.'

**ವಿವರಣೆ**—ಸೂತ್ರದಲ್ಲಿರುವ ಕರ್ಮಣಿ ಎಂಬ ಶಬ್ದಕ್ಕೆ ಕರ್ಮಕಾರಕ ಎಂದರ್ಥ. ಜ್ಞಾನಕರ್ಮತ್ವವು ವಿಷಯತ್ವರೂಪವಾದುದು. ಅದರ ಅರ್ಥವನ್ನು ಭಾಷ್ಯದಲ್ಲಿ 'ವಿಷಯಭೂತೇ ತಸ್ಮಿನ್' ಎಂದು ತಿಳಿಸಲಾಗಿದೆ. ಭಗವದ್ವಿಷಯಕವಾದ ಶ್ರವಣ ಮನನ ಧ್ಯಾನಾದಿಗಳ ಅಭ್ಯಾಸ ಎಂದರೆ ಮತ್ತೆ ಮತ್ತೆ ಅವುಗಳನ್ನು ಮಾಡುವುದು. ಅದರಿಂದಾಗಿ ಅಪ್ರಕಾಶರೂಪನಾದ ಭಗವಂತನು ಪ್ರಕಾಶನಾಗುತ್ತಾನೆ.

ನಿತ್ಯಾವ್ಯಕ್ತಸ್ಯ ಕಥಂ ಪ್ರಕಾಶ ಇತ್ಯತ ಉಚ್ಯತೇ-

**॥ ಓಂ ಅತೋಽನಂತೇನ ತಥಾ ಹಿ ಲಿಂಗಮ್ ಓಂ ॥ ೨೭ ॥**

ಉಭಯತ್ರ ಪ್ರಮಾಣಭಾವಾತ್ ತತ್ಪ್ರಸಾದಾದೇವ ಪ್ರಕಾಶೋ ಭವತಿ ।

'ತಸ್ಯಾಭಿಧ್ಯಾನಾದ್ ಯೋಜನಾತ್ ತತ್ತ್ವಭಾವಾದ್
ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ ॥' (ಶ್ವೇ.ಉ. 1.10)

ಇತಿ ಲಿಂಗಾತ್ ।

ಯುಜ್ಯತೇ ಚ ತಸ್ಯಾನಂತಶಕ್ತಿತ್ವಾತ್ ।

'ನಿತ್ಯಾವ್ಯಕ್ತೋಽಪಿ ಭಗವಾನೀಕ್ಷ್ಯತೇ ನಿಜಶಕ್ತಿತಃ ।
ತಮೃತೇ ಪರಮಾತ್ಮಾನಂ ಕಃ ಪಶ್ಯೇತಾಮಿತಂ ಪ್ರಭುಮ್ ॥'

ಇತಿ ಚ ನಾರಾಯಣಾಧ್ಯಾತ್ಮೇ ।

ಪರಮಾತ್ಮ ನಿತ್ಯವಾಗಿ ಅವ್ಯಕ್ತನಾದ ಮೇಲೆ ಅವನು ಭಕ್ತನಿಗೆ ಕಾಣಿಸಿಕೊಳ್ಳುವುದಾದರೂ ಹೇಗೆ? ಅದಕ್ಕುತ್ತರ ಈ ಸೂತ್ರ.

ಪರಮಾತ್ಮನು ಅವ್ಯಕ್ತಸ್ವಭಾವ ಹಾಗೂ ಅವನು ಅಪರೋಕ್ಷನಾಗುತ್ತಾನೆ ಎನ್ನುವ ಈ ಎರಡೂ ವಿಷಯದಲ್ಲಿ ಹಿಂದೆ ಹೇಳಿದಂತೆ ಪ್ರಮಾಣವು ಇರುವುದರಿಂದಾಗಿ ಭಗವಂತನ ಪ್ರಸಾದದಿಂದಾಗಿಯೇ ಅವನ ಪ್ರಕಾಶವೂ ಆಗುವುದು. ಅದಕ್ಕೆ ಪ್ರಬಲವಾದ ಲಿಂಗವೂ(ಅನುಮಾನವೂ) ಇದೆ—

'ತಸ್ಯಾಭಿಧ್ಯಾನಾತ್' ಎಂಬ ಶ್ರುತಿಯಲ್ಲಿ ಪರಮಾತ್ಮನ ಪ್ರಸಾದದಿಂದ ಮೋಕ್ಷವು, 'ದೃಷ್ಟ್ವೈವ' ಎಂಬ ಶ್ರುತಿಯಲ್ಲಿ ಭಗವತ್ಪ್ರಸಾದದಿಂದ ದರ್ಶನವೂ ಹೇಳಲ್ಪಟ್ಟಿದೆ. ಪ್ರಸಾದವು ದರ್ಶನದಿಂದಲೇ ಆಗುವುದು. ಹೀಗೆ ಮೋಕ್ಷಹೇತುವಾದ ಪ್ರಸಾದ ರೂಪಲಿಂಗದಿಂದ ಅದಕ್ಕೆ ಕಾರಣವಾದ ಪ್ರಸಾದಲಭ್ಯದರ್ಶನವು ಸಿದ್ಧವಾಗುತ್ತದೆ.

(ಅವ್ಯಕ್ತಸ್ವಭಾವನಾದ ಭಗವಂತನ ದರ್ಶನವು ಅವನ ಪ್ರಸಾದದಿಂದಾದರೂ ಆಗುವುದು ಹೇಗೆ? ಯಾರ ಪ್ರಸಾದದಿಂದಲೂ ನರನು ವಾನರನಾಗಲಾರ ತಾನೇ, ಎಂಬ ಆಕ್ಷೇಪಕ್ಕೆ ಉತ್ತರವಾಗಿ 'ಅನಂತೇನ' ಎಂಬ ಸೂತ್ರಪದದ ಭಾವವನ್ನು 'ಯುಜ್ಯತೇ ಚ' ಎಂಬ ಭಾಷ್ಯವಾಕ್ಯದಲ್ಲಿ ವಿವರಿಸಲಾಗಿದೆ.)

ಅವ್ಯಕ್ತೈಕಸ್ವಭಾವನಾದರೂ ಭಗವಂತನ ದರ್ಶನವು ಅವನ ಪ್ರಸಾದದಿಂದ ಯುಜ್ಯತೇ=ಯುಕ್ತವಾಗುತ್ತದೆ. ಏಕೆಂದರೆ, ಭಗವಂತನಿಗೆ ಅನಂತಶಕ್ತಿ ಇದೆ. ನಾರಾಯಣಾಧ್ಯಾತ್ಮದಲ್ಲಿ ಇದನ್ನು ಹೇಳಲಾಗಿದೆ—ಭಗವಂತನು ನಿತ್ಯಾವ್ಯಕ್ತನಾದರೂ ತನ್ನ ಶಕ್ತಿಯಿಂದಾಗಿ ಭಕ್ತರಿಗೆ ದೃಶ್ಯನಾಗುತ್ತಾನೆ. ತಂ ಪರಮಾತ್ಮಾನಂ ವಿನಾ=ಆ ಪರಮಾತ್ಮನ ಪ್ರಸಾದದ ಹೊರತಾಗಿ ಅಮಿತಂ ಪ್ರಭುಂ=ಅನಂತನಾದ ಆ ಸ್ವಾಮಿಯನ್ನು ಕಃ ಪಶ್ಯೇತ=ಯಾರು ತಾನೇ ನೋಡಿಯಾನು?

**ಶ್ರುತ್ಯರ್ಥ**—ತಸ್ಯ=ಮನಸ್ಸಿನ ಯೋಜನಾತ್=ಭಗವಂತನಲ್ಲಿ ನೆಲೆಗೊಳಿಸುವುದರಿಂದ ಭೂಯಃ=ಮತ್ತೆ ಮತ್ತೆ ತತ್ತ್ವಭಾವಾತ್=ಭಗವಂತನ ಧ್ಯಾನದಿಂದ ಉಂಟಾಗುವ ಅಭಿಧ್ಯಾನಾಚ್ಚ=ಭಗವಂತನ ಇಚ್ಛಾವಿಶೇಷರೂಪವಾದ ಪ್ರಸಾದದಿಂದ ಅಂತೇ= ಪ್ರಾರಬ್ಧಾವಸಾನಕಾಲದಲ್ಲಿ ವಿಶ್ವಮಾಯಾನಿವೃತ್ತಿಃ=ಜಗದ್‌ಬಂಧಕವಾದ ಅವಿದ್ಯೆಯು ನಿವೃತ್ತಿಯಾಗುತ್ತದೆ. ಈ ಶ್ರುತಿಯು ಭಗವತ್ ಪ್ರಸಾದದಿಂದ ಬಂಧನಿವೃತ್ತಿಯನ್ನು ಹೇಳುತ್ತದೆ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ತದವ್ಯಕ್ತಮಾಹ ಹಿ ಓಂ ॥** (ಅತ್ರ ಈಶಾಪರೋಕ್ಷಸ್ಯ ತದ್ಭಕ್ತಿಜನ್ಯ-ಪ್ರಸಾದೈಕಸಾಧ್ಯತ್ವಮ್ ಉಚ್ಯತೇ। ತದರ್ಥಂ ಚತುರ್ಭಿಃ ಸೂತ್ರೈಃ ತಸ್ಯಾವ್ಯಕ್ತತ್ವಮುಚ್ಯತೇ। ತತ್=ಬ್ರಹ್ಮ ಅವ್ಯಕ್ತಮ್। ಕುತಃ ? ಹಿ=ಯಸ್ಮಾತ್ 'ಅರೂಪಮಕ್ಷರಂ ಬ್ರಹ್ಮ ಸದಾವ್ಯಕ್ತಂ ಚ ನಿಷ್ಕಲಮ್' ಇತಿ ಶ್ರುತಿರಾಹ ಅವ್ಯಕ್ತತ್ವಮ್ ಅತ ಇತ್ಯರ್ಥಃ। ಕ್ಲೀಬೋಕ್ತಿಃ ಶ್ರುತ್ಯನುಸಾರಾತ್ ।)

ಈ ಅಧಿಕರಣದಲ್ಲಿ ಭಗವಂತನ ದರ್ಶನವು ಅವನ ಪ್ರಸಾದದಿಂದ ಮಾತ್ರ ಲಭ್ಯವೆಂದು ಹೇಳಲಾಗುತ್ತದೆ. ಮೊದಲ ನಾಲ್ಕು ಸೂತ್ರಗಳಲ್ಲಿ ಭಗವಂತನು ಅವ್ಯಕ್ತೈಕರೂಪ, ಎಂದು ಹೇಳಲಾಗಿದೆ.

ಹಿ=ಯಾವ ಕಾರಣದಿಂದ ಆಹ='ಅರೂಪಮಕ್ಷರಂ' ಎಂಬ ಶ್ರುತಿಯು ಪರಮಾತ್ಮನು ಅವ್ಯಕ್ತರೂಪನೆಂದು ಹೇಳುವುದೋ ಅದರಿಂದಾಗಿ ತತ್= ಆ ಬ್ರಹ್ಮನು ಅವ್ಯಕ್ತಮ್=ಅದೃಶ್ಯನಾಗಿದ್ದಾನೆ.

**॥ ಓಂ ಅಪಿ ಸಂರಾಧನೇ ಪ್ರತ್ಯಕ್ಷಾನುಮಾನಾಭ್ಯಾಮ್ ಓಂ॥** (ತದವ್ಯಕ್ತಮಿತ್ಯಸ್ತಿ। ಭಕ್ತಿಹೀನಾರಾಧನೇಽಪಿ ತತ್=ಬ್ರಹ್ಮ ಅವ್ಯಕ್ತಮೇವ, ನ ವ್ಯಜ್ಯತೇ। ಕುತಃ ?

ಆರಾಧನೇಽಪಿ ಅವ್ಯಕ್ತತ್ವಸ್ಯ ಇತ್ಯನ್ವೇತಿ। ತಸ್ಯ ಜ್ಞಾನಿಪ್ರತ್ಯಕ್ಷೇಣ, ಸೂಕ್ಷ್ಮತ್ವಹೇತುಕಾನುಮಾನೇನ ಚ, ಸಿದ್ಧತ್ವಾತ್ ಇತಿ ಶೇಷಃ। ಅಜ್ಞಾಪೇಕ್ಷಯಾ ಅನುಮಾನೋಕ್ತಿಃ। ಜ್ಞಾನಿಪ್ರತ್ಯಕ್ಷಮಪ್ಯಸ್ತೀತ್ಯೇತಚ್ಚ 'ನ ತಮಾರಾಧಯಿತ್ವಾಪಿ' ಇತ್ಯಾದಿಸ್ಮೃತ್ಯಾ ಬೋದ್ಧವ್ಯಮ್। ಅವ್ಯಕ್ತಸ್ಯಾಪೀಶಸ್ಯ ಸ್ವಶಕ್ತ್ಯಾ ಜ್ಞಾನಿನಂ ಪ್ರತಿ ಪ್ರತ್ಯಕ್ಷತ್ವಸ್ಯಾಗ್ರೇ ವ್ಯಕ್ತತ್ವಾತ್ 'ಅವ್ಯಕ್ತತ್ವಂ ಪ್ರತ್ಯಕ್ಷಂ' ಇತಿ ವ್ಯಾಹತಂ ಇತಿ ನ ಶಂಕ್ಯಮ್।)

ಸಂರಾಧನೇಽಪಿ=ಭಕ್ತಿರಹಿತವಾಗಿ ಆರಾಧನೆ ಮಾಡಿದರೂ ತತ್ ಅವ್ಯಕ್ತಮ್=ಬ್ರಹ್ಮನು ಅವ್ಯಕ್ತನಾಗಿಯೇ ಇರುತ್ತಾನೆ, ವ್ಯಕ್ತನಾಗುವುದಿಲ್ಲ. ಆರಾಧನೇಽಪಿ ಅವ್ಯಕ್ತತ್ವಸ್ಯ=ಆರಾಧಿಸಿದರೂ ಅವ್ಯಕ್ತತ್ವವು ಪ್ರತ್ಯಕ್ಷಾನುಮಾನಾಭ್ಯಾಂ=ಜ್ಞಾನಿಗಳ ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಸಿದ್ಧವಾಗುತ್ತದೆ. 'ನ ತಮ್ ಆರಾಧಯಿತ್ವಾಪಿ' ಎಂಬ ಪುರಾಣವಾಕ್ಯದಿಂದ ಜ್ಞಾನಿಗಳ ಪ್ರತ್ಯಕ್ಷವು ಅವ್ಯಕ್ತತ್ವದ ವಿಷಯದಲ್ಲಿ ಸಿದ್ಧವಾಗುತ್ತದೆ. ಸೂಕ್ಷ್ಮತ್ವಹೇತುಕಾನುಮಾನದಿಂದಲೂ ಅವನಿಗೆ ಅವ್ಯಕ್ತತ್ವವು ತಿಳಿಯುತ್ತದೆ.

**॥ ಓಂ ಪ್ರಕಾಶವಚ್ಚಾವೈಶೇಷ್ಯಮ್ ಓಂ ॥** (ತದವ್ಯಕ್ತಮಿತ್ಯಸ್ತಿ। ಚೋ ನಞರ್ಥಃ। ತತ್=ಬ್ರಹ್ಮ ಪ್ರಕಾಶವಚ್ಚ=ಪ್ರಕಾಶವತ್‌ನ। ಅಗ್ನಿವತ್ ಸೂಕ್ಷ್ಮರೂಪೇಣ ಅವ್ಯಕ್ತಂ, ಸ್ಥೂಲರೂಪೇಣ ವ್ಯಕ್ತಮಿತಿ ನ। ಕಿಂತು ಅವ್ಯಕ್ತಮೇವ। ಕುತಃ ? ಅವೈಶೇಷ್ಯಂ, ತಸ್ಯ ಬ್ರಹ್ಮಣಃ ಅವಿಶೇಷತ್ವಂ, ಯತಃ ಇತಿ ಯೋಜ್ಯಮ್। ತಾದೃಶವಿಶೇಷಾಭಾವಾತ್, ಇತ್ಯರ್ಥಃ। 'ನಾಸೌ ಸೂಕ್ಷ್ಮೋ ನ ಸ್ಥೂಲಃ' ಇತ್ಯಾದೇಃ ಸರ್ವತ್ರ ಏಕರೂಪವತ್ವಾದಿತಿ ಭಾವಃ।)

ತದವ್ಯಕ್ತಮಾಹ ಹಿ, ಸೂತ್ರದಿಂದ ತದವ್ಯಕ್ತಂ ಎಂಬ ಭಾಗವನ್ನು ಈ ಸೂತ್ರಕ್ಕೆ ಸೇರಿಸಿಕೊಳ್ಳಬೇಕು. ಸೂತ್ರದ ಚಕಾರ ನಿಷೇಧಾರ್ಥಕ. ತತ್=ಆ ಬ್ರಹ್ಮನು ಪ್ರಕಾಶವಚ್ಚನ=ಅಗ್ನ್ಯಾದಿಗಳಂತೆ ಅಲ್ಲ. ಅಗ್ನಿಯು ತನ್ಮಾತ್ರಾರೂಪೇಣ ಅವ್ಯಕ್ತ, ಸ್ಥೂಲರೂಪೇಣ ವ್ಯಕ್ತವಾಗಿರುವಂತೆ ಬ್ರಹ್ಮನೂ ಒಂದು ರೂಪದಿಂದ ವ್ಯಕ್ತ, ರೂಪಾಂತರದಿಂದ ಅವ್ಯನಲ್ಲ. ಅವನು ಸರ್ವಥಾ ಅವ್ಯಕ್ತ. ಅವನಿಗೆ ವ್ಯಕ್ತಾವ್ಯಕ್ತರೂಪದ್ವಯಗಳು ಇಲ್ಲ. ಅವೈಶೇಷ್ಯಂ=ಬ್ರಹ್ಮನಿಗೆ ಸಕಲರೂಪಗಳಲ್ಲೂ ಅವಿಶೇಷತ್ವವು ಇದೆ. ಅವನ ಒಂದು ರೂಪದಿಂದ ಇನ್ನೊಂದು ರೂಪಕ್ಕೆ ಯಾವ ವಿಶೇಷವೂ ಇಲ್ಲ. ಎಲ್ಲ ರೂಪಗಳೂ ಅವ್ಯಕ್ತಗಳೇ ಆಗಿವೆ.

**॥ ಓಂ ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್ ಓಂ ॥** (ಕರ್ಮಣೀತಿ ಕರ್ಮಕಾರಕ ಮುಚ್ಯತೇ। ತದಿತಿ ಸಪ್ತಮ್ಯಂತತಯಾ ಅನುವರ್ತತೇ। ಕರ್ಮಣಿ=ಕರ್ಮಕಾರಕೇ–

ವಿಷಯೀಭೂತೇ ತಸ್ಮಿನ್=ಬ್ರಹ್ಮಣಿ ಅಭ್ಯಾಸಾತ್, ಶ್ರವಣಾದೇಃ ಇತಿ ಯೋಗ್ಯತಯಾ ಅನ್ವೇತಿ । ಬ್ರಹ್ಮವಿಷಯಕ ಶ್ರವಣಾದೇಃ ಪೌನಃಪುನ್ಯೇನ ಕರಣಾತ್ ಪ್ರಕಾಶ್ಚ= ತದಪರೋಕ್ಷಜ್ಞಾನಂ ಚ ಭವತಿ, ಇತ್ಯರ್ಥಃ । 'ದ್ರಷ್ಟವ್ಯಃ ಶ್ರೋತವ್ಯಃ' ಇತ್ಯಾದೇರಿತಿ ಭಾವಃ । ಕರ್ಮಣೀತ್ಯುಕ್ತಿಃ ಅವಾಚ್ಯಸ್ಯ ಶಾಸ್ತ್ರಾವಿಷಯತ್ವಾತ್ ನ ಶ್ರವಣಾದೀತಿ ಶಂಕ್ಯಮ್ । ಈಕ್ಷತಿನಯೇ ವಾಚ್ಯತ್ವೋಕ್ತ್ಯಾ ವಿಷಯತ್ವಸಾಧನಾತ್, ಇತಿ ತನ್ನ್ಯಾಯಸ್ಮರಣಾರ್ಥಾ । ಸ್ಮರಣಂ ಚ ಅತ್ರ ಅವ್ಯಕ್ತತ್ವೋಕ್ತ್ಯಾ ಅವಿಷಯತ್ವಶಂಕೋತ್ಥಾನಾತ್, ಇತ್ಯುಕ್ತಂ ತತ್ತ್ವಪ್ರದೀಪೇ ।)

ಸೂತ್ರದ ಕರ್ಮಣಿ ಎಂದರೆ ಕರ್ಮಕಾರಕೇ ಎಂದರ್ಥ. ಜ್ಞಾನಕ್ಕೆ ವಿಷಯ ಯಾವುದೋ ಅದೇ ಕರ್ಮಕಾರಕ. ಕರ್ಮಣಿ ತಸ್ಮಿನ್=ಶ್ರವಣಾದಿವಿಷಯನಾದ ಬ್ರಹ್ಮನ ಬಗ್ಗೆ ಅಭ್ಯಾಸಾತ್=ಶ್ರವಣಾದಿಗಳನ್ನು ಪುನಃಪುನಃ ಮಾಡುವುದರಿಂದ ಪ್ರಕಾಶಶ್ಚ=ಅಪರೋಕ್ಷಜ್ಞಾನವು ಬರುತ್ತದೆ. 'ಕರ್ಮಣಿ' ಎಂಬ ವಕ್ರಪದ ಪ್ರಯೋಗದ ಉದ್ದೇಶ ಇದು–ಈಕ್ಷತ್ಯಧಿಕರಣದಲ್ಲಿ ಹೇಳಿದ ನ್ಯಾಯದಿಂದ ಬ್ರಹ್ಮನಿಗೆ ವಿಷಯತ್ವರೂಪವಾದ ಕರ್ಮತ್ವ ಇದೆ. ಹಿಂದಿನ ಸೂತ್ರಗಳಲ್ಲಿ ಅವ್ಯಕ್ತತ್ವವನ್ನು ಹೇಳಿರುವ ಮಾತ್ರಕ್ಕೆ ವಿಷಯತ್ವರೂಪ ಕರ್ಮತ್ವವು ಇಲ್ಲವೆಂದು ತಿಳಿಯಬಾರದು, ಎಂದು. ಇದನ್ನು ತತ್ತ್ವಪ್ರದೀಪದಲ್ಲಿ ತಿಳಿಸಲಾಗಿದೆ.

**॥ ಓಂ ಅತೋಽನಂತೇನ ತಥಾಹಿ ಲಿಂಗಮ್ ಓಂ ॥** (ಪ್ರಕಾಶ ಇತ್ಯಸ್ತಿ । ಅತ ಇತಿ 'ಆಹ ಹಿ' ಇತಿ, 'ಪ್ರಕಾಶಶ್ಚ' ಇತ್ಯತ್ರ ಚ ಅಭಿಪ್ರೇತಶ್ರುತಿದ್ವಯಂ ಪರಾಮೃಶ್ಯತೇ । ಅವ್ಯಕ್ತತ್ವೇ ಪ್ರತ್ಯಕ್ಷತ್ವೇ ಚ ಪ್ರಮಾಣಸತ್ವಾತ್ ಇತ್ಯರ್ಥಃ । ಅನಂತೇನ=ಅಪರಿಚ್ಛಿನ್ನ ಶಕ್ತಿಕೇನ ಈಶೇನ, ತತ್‌ಪ್ರಸಾದೇನ ಇತಿ ಯಾವತ್ । ಅತಃ ಅವ್ಯಕ್ತಸ್ಯಾಪಿ ಪ್ರಕಾಶಃ ಭವತಿ ಇತಿ ಜ್ಞಾಯತೇ ಇತಿ ಯೋಜ್ಯಮ್ । ಅನ್ಯಥಾ ಶ್ರುತಿದ್ವಯಾಯೋಗಾತ್, ಇತಿ ಭಾವಃ । ಬಲವದ್ಯುಕ್ತ್ಯಾ ಚೈವಮ್ ಇತ್ಯುಕ್ತಮ್–ತಥಾಹಿ ಲಿಂಗಮಿತಿ । ತಥೇತಿ ಸಮುಚ್ಚಯೇ । ಹಿರ್ಹೇತೌ । 'ತಸ್ಯಾಭಿಧ್ಯಾನಾತ್' ಇತ್ಯಾದಿ ಶ್ರುತ್ಯುಕ್ತಂ ಈಶಪ್ರಸಾದ ಸಾಧ್ಯ–ಬಂಧನಿವೃತ್ತಿರೂಪಂ ಲಿಂಗಂ ಚ ಪ್ರಸಾದಹೇತುಪ್ರಕಾಶಜ್ಞಾಪಕಂ, ಹಿ=ಯಸ್ಮಾದಸ್ತಿ ತಸ್ಮಾದಪ್ಯೇತತ್ ಜ್ಞಾಯತೇ ಇತ್ಯರ್ಥಃ ।)

ಸೂತ್ರದಲ್ಲಿರುವ ಅತಃ ಎಂದರೆ ಹಿಂದೆ 'ಆಹ ಹಿ' ಎಂಬ ಸೂತ್ರದಲ್ಲಿ ವಿವಕ್ಷಿತವಾದ ಅವ್ಯಕ್ತತ್ವಪ್ರತಿಪಾದಕಶ್ರುತಿ ಮತ್ತು 'ಪ್ರಕಾಶಶ್ಚ' ಇತ್ಯಾದಿಸೂತ್ರವಿವಕ್ಷಿತವಾದ ಬ್ರಹ್ಮಪ್ರತ್ಯಕ್ಷಪ್ರತಿಪಾದಕಶ್ರುತಿ ಈ ಎರಡು ಶ್ರುತಿಗಳೂ ಇರುವುದರಿಂದಾಗಿ ಅನಂತೇನ=

ಅಪ್ರತಿರುದ್ಧಶಕ್ತಿಯುಳ್ಳ ಭಗವಂತನ ಪ್ರಸಾದದಿಂದ ಅವ್ಯಕ್ತನಾದರೂ ಭಗವಂತನು ದೃಶ್ಯನಾಗುತ್ತಾನೆ, ಎಂದು ಅರ್ಥ. ತಥಾ=ಅದರಂತೆ ಪ್ರಬಲವಾದ ಲಿಂಗಂ=ಹೇತುವೂ ಇರುವ ಕಾರಣದಿಂದ ಭಗವಂತನು ದೃಶ್ಯನಾಗಿದ್ದಾನೆ. ಯುಕ್ತಿ ಇದು– 'ತಸ್ಯಾಭಿಧ್ಯಾನಾತ್' ಎಂಬ ಶ್ರುತಿಯು ಭಗವತ್‌ಪ್ರಸಾದದಿಂದ ಮೋಕ್ಷವಾಗುತ್ತದೆ, ಎನ್ನುತ್ತದೆ. ಪ್ರಸಾದವಾಗಬೇಕಾದರೆ ಅವನ ಅಪರೋಕ್ಷ ಇರಲೇಬೇಕು. ಹೀಗೆ ಮೋಕ್ಷಕ್ಕೆ ಪ್ರಸಾದಸಾಧ್ಯತ್ವವು ಭಗವಂತನು ಅಪರೋಕ್ಷನಾಗುತ್ತಾನೆ, ಎನ್ನುವುದಕ್ಕೆ ಲಿಂಗ.

## ವಿಶಿಷ್ಟಾದ್ವೈತ ದರ್ಶನದಲ್ಲಿ ಸೂತ್ರಗಳ ಅರ್ಥ

ರಾಮಾನುಜಭಾಷ್ಯದಂತೆ 'ನ ಸ್ಥಾನತೋಽಪಿ' ಇತ್ಯಾದಿಸೂತ್ರದಿಂದ ಪ್ರಾರಂಭಿಸಿ (ರಾ.ಭಾ.ದಂತೆ 12ನೆಯ ಸೂತ್ರ) ಇಲ್ಲಿಯವರೆಗೆ (ರಾ.ಭಾ.ದಂತೆ 25ನೆಯ ಸೂತ್ರ) ಒಂದು ಅಧಿಕರಣ. ಉಭಯಲಿಂಗಾಧಿಕರಣ ಎಂದು ಈ ಅಧಿಕರಣಕ್ಕೆ ಹೆಸರು.

**॥ ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ॥** ಇದುವರೆಗೆ ಜೀವನಿಗೆ ಜಾಗ್ರದಾದಿಅವಸ್ಥಾಗಳನ್ನು ನಿರೂಪಿಸಲಾಗಿದೆ. ಈ ಅಧಿಕರಣದಲ್ಲಿ ಬ್ರಹ್ಮನಿಗೆ ನಿರ್ದೋಷತ್ವ ಹಾಗೂ ಕಲ್ಯಾಣಗುಣಗಳನ್ನು ನಿರೂಪಿಸಲಾಗಿದೆ. ಜೀವನಿಗೆ ಜಾಗ್ರದಾದಿ ಸ್ಥಾನಪ್ರಯುಕ್ತವಾಗಿ ಯಾವ ದೋಷಗಳು ಬರುವವೋ ಜೀವಶರೀರದ ಒಳಗಿರುವ ಬ್ರಹ್ಮನಿಗೂ ಆ ದೋಷಗಳು ಬರಬೇಕು ಎಂದು ಪೂರ್ವಪಕ್ಷ. ಈ ಆಕ್ಷೇಪಕ್ಕೆ 'ಸಂಭೋಗ ಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್' (1.2.8) ಎಂಬ ಸೂತ್ರದಲ್ಲಿ ಹಿಂದೆ ಸಮಾಧಾನವನ್ನು ಹೇಳಲಾಗಿದೆ. ಬ್ರಹ್ಮನು ಕರ್ಮಾಧೀನನಲ್ಲದುದರಿಂದ ಅವನಿಗೆ ಜೀವನೊಳಗೆ ಇದ್ದರೂ ದುಃಖಾನುಭವ ಇಲ್ಲ, ಎಂದು. ಆದರೆ, ಸ್ವೇಚ್ಛೆಯಿಂದಲೇ ಕೆಸರಿನ ಹೊಂಡದಲ್ಲಿ ಮುಳುಗಿದರೂ ದುಃಖವಾಗುವಂತೆ ಬ್ರಹ್ಮನಿಗೂ ಜೀವಶರೀರದ ದುಃಖವು ಆಗಲೇಬೇಕು ಎಂದು ಅಧಿಕಾಶಂಕೆಗೆ ಇಲ್ಲಿ ಸಮಾಧಾನವಿದೆ. ಸ್ಥಾನತೋಽಪಿ=ದುಃಖಸ್ಥಾನಪ್ರಯುಕ್ತವಾಗಿಯೂ ಬ್ರಹ್ಮನಿಗೆ ದುಃಖವಿಲ್ಲ. ಅವನು ಸರ್ವತ್ರ=ಎಲ್ಲ ಶ್ರುತಿಗಳಲ್ಲೂ ಉಭಯಲಿಂಗಂ=ನಿರ್ದೋಷ ಮತ್ತು ಕಲ್ಯಾಣ ಗುಣಪೂರ್ಣ ಎಂದು ಹೇಳಲ್ಪಟ್ಟಿದ್ದಾನೆ.

**॥ ನ ಭೇದಾದಿತಿ ಚೇನ್ನ ಪ್ರತ್ಯೇಕಮತದ್ವಚನಾತ್ ॥** ಜೀವನಿಗೂ ಉಪನಿಷತ್ತಿನಲ್ಲಿ ಬರುವ ಪ್ರಜಾಪತಿವಾಕ್ಯದಲ್ಲಿ ಬ್ರಹ್ಮನಂತೆ ನಿರ್ದೋಷ–ಗುಣಪೂರ್ಣತ್ವ ರೂಪ ಉಭಯಲಿಂಗತ್ವವನ್ನು ಹೇಳಲಾಗಿದೆ. ಆದರೂ ದೇಹಸಂಬಂಧ ಪ್ರಯುಕ್ತವಾದ ಸುಖದುಃಖಗಳು ಅವನಿಗಿವೆ. ಅದರಂತೆ ಬ್ರಹ್ಮನಿಗೂ ಏಕೆ ಇರಬಾರದು?

ಭೇದಾತ್=ಶರೀರವಿಶೇಷದಿಂದಾಗಿ ಬ್ರಹ್ಮನಿಗೂ ದುಃಖಸಂಬಂಧ ಎನ್ನುವುದು ಇತಿ ಚೇನ್ನ=ಯುಕ್ತವಲ್ಲ. ಉಪನಿಷತ್ತಿನಲ್ಲಿ 'ಯಃ ಪೃಥಿವ್ಯಾಂ ತಿಷ್ಠನ್...'' 'ಯಃ ಅಗ್ನೌ ತಿಷ್ಠನ್...' ಹೀಗೆ ಒಂದೊಂದು ಪರ್ಯಾಯದಲ್ಲಿ 'ಏಷ ತೇ ಅಂತರ್ಯಾಮೀ ಅಮೃತಃ' ಎಂದು ಬ್ರಹ್ಮನಿಗೆ ಅಮೃತತ್ವವನ್ನು ಹೇಳಲಾಗಿದೆ. (ಪ್ರತ್ಯೇಕಂ ಅತದ್ವಚನಾತ್) ಆದರೆ ಜೀವನ ಸ್ವರೂಪವು 'ಪರಾಭಿಧ್ಯಾನಾತ್ ತಿರೋಹಿತಂ' ಎಂದು ಹಿಂದೆ ಸೂತ್ರದಲ್ಲಿ ಹೇಳಿರುವುದರಿಂದ ಅವನಿಗೆ ತತ್ತತ್‌ಸ್ಥಾನ ಪ್ರಯುಕ್ತವಾದ ಸುಖ–ದುಃಖಾದಿ ಪ್ರಾಪ್ತಿಯಾಗುತ್ತದೆ.

ಸ್ವೇಚ್ಛೆಯಿಂದ ಕೆಸರಿನ ಹೊಂಡದಲ್ಲಿ ಮುಳುಗಿದರೂ ದುಃಖವಾಗುವಂತೆ ಬ್ರಹ್ಮನು ಸ್ವೇಚ್ಛೆಯಿಂದಲೇ ಜೀವಾದಿದೇಹದಲ್ಲಿದ್ದರೂ ಸುಖ–ದುಃಖಗಳು ಆಗಬೇಕು, ಎನ್ನುವುದೂ ಸರಿಯಲ್ಲ. ಸುಖದುಃಖದತ್ವವು ವಸ್ತುಸ್ವಭಾವವಲ್ಲ. ಅದು ಕರ್ಮಪ್ರಯುಕ್ತವಾದ ಪುರುಷಾಭಿಪ್ರಾಯವಿಶೇಷನಿಮಿತ್ತ. ಒಂದೇ ವಸ್ತು ಒಬ್ಬನಿಗೆ ಸುಖದಾಯಕ ಮತ್ತೊಬ್ಬನಿಗೆ ದುಃಖದಾಯಕವಾಗುತ್ತದೆ. ವಸ್ತುಸ್ವಭಾವವಾದರೆ ಅದು ಎಲ್ಲರಿಗೂ ಸುಖದಾಯಕವೇ ಆಗಬೇಕು. ಹಾಗಿಲ್ಲದಿದ್ದಮೇಲೆ ಪುರುಷಮತಿಭೇದೇನ ವಸ್ತುಗಳು ಸುಖಾದಿಪ್ರದ. ಬ್ರಹ್ಮನು ಅಕರ್ಮವಶ್ಯನಾದ ಕಾರಣ ಅವನಿಗೆ ಯಾವ ವಸ್ತುಗಳೂ ದುಃಖದಾಯಕವಾಗುವುದಿಲ್ಲ.

**॥ ಅಪಿ ಚೈವಮೇಕೇ ॥** ಕೆಲವು ಶಾಖಿಗಳು ಒಂದೇ ದೇಹದಲ್ಲಿರುವ ಜೀವೇಶರಿಗೆ ವೈಲಕ್ಷಣ್ಯವನ್ನು ಹೇಳುತ್ತಾರೆ—

ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ಅನಶ್ನನ್ನನ್ಯಃ ಅಭಿಚಾಕಶೀತಿ ॥

ಎಂದು.

**॥ ಅರೂಪವದೇವ ಹಿ ತತ್‌ಪ್ರಧಾನತ್ವಾತ್ ॥** 'ಅನೇನ ಜೀವೇನ ಆತ್ಮನಾ' ಎಂದು ಒಬ್ಬನೇ ಬ್ರಹ್ಮನು ದೇವ–ಮನುಷ್ಯಾದಿರೂಪದಿಂದ ಇದ್ದರೂ ಆ ಬ್ರಹ್ಮನು ಅರೂಪವದೇವ=ತತ್ತಚ್ಛರೀರಕೃತ ಪುಣ್ಯ–ಪಾಪರಹಿತನಾಗಿಯೇ ಇರುತ್ತಾನೆ. ಪ್ರಧಾನತ್ವಾತ್=ಅವನು ನಾಮ–ರೂಪಗಳ ನಿರ್ವಾಹಕನಾದ ಪ್ರಧಾನನಾಗಿರುವುದರಿಂದ. ಅಂತರ್ಯಾಮಿಯಾಗಿದ್ದರೂ ಅವನಿಗೆ ತತ್ತಚ್ಛರೀರಕೃತವಾದ ಪುಣ್ಯಪಾಪಲೇಪವಿಲ್ಲ.

**॥ ಪ್ರಕಾಶವಚ್ಚಾವೈಯರ್ಥ್ಯಮ್ ॥** 'ಸತ್ಯಂ ಜ್ಞಾನಂ' ಎಂಬ ಶ್ರುತಿ

ಪ್ರಮಾಣದಿಂದಾಗಿ ಬ್ರಹ್ಮನು ಪ್ರಕಾಶಾತ್ಮಕನಾಗಿರುವಂತೆ (ಪ್ರಕಾಶವಚ್ಚ) 'ಯಃ ಸರ್ವಜ್ಞಃ' ವಾಕ್ಯಗಳೂ, ಅವ್ಯೆಯ್ಯರ್ಥ್ಯಾಯ, ಬ್ರಹ್ಮನು ಸರ್ವಜ್ಞಸರ್ವಕರ್ತಾ ಎಂದೂ ಹೇಳುತ್ತವೆ. ಆದ್ದರಿಂದ ಬ್ರಹ್ಮನು ನಿರ್ದೋಷ–ಗುಣಪೂರ್ಣರೂಪಉಭಯಲಿಂಗನೇ ಆಗಿದ್ದಾನೆ. ಅನ್ಯತರಪರಿತ್ಯಾಗಕ್ಕೆ ಕಾರಣವಿಲ್ಲ.

**॥ ಆಹ ಚ ತನ್ಮಾತ್ರಮ್ ॥** 'ಸತ್ಯಂ ಜ್ಞಾನಂ' ಎಂಬ ವಾಕ್ಯವು ತನ್ಮಾತ್ರಂ=ಬ್ರಹ್ಮನು ಜ್ಞಾನಾತ್ಮಕ ಎಂದಿಷ್ಟೇ ಹೇಳುತ್ತದೆ, ಹೊರತು ಸತ್ಯಸಂಕಲ್ಪತ್ವಾದಿಗಳನ್ನು ನಿಷೇಧ ಮಾಡುತ್ತಿಲ್ಲ. 'ನೇತಿ ನೇತಿ' ಎಂಬ ನಿಷೇಧವೂ ಅನ್ಯವಿಷಯಕವಾಗಿದೆ. ಆದ್ದರಿಂದ ಬ್ರಹ್ಮನಿಗೆ ಉಭಯಲಿಂಗತ್ವವು ಅಬಾಧಿತ.

**॥ ದರ್ಶಯತಿ ಚಾಥೋ ಅಪಿ ಸ್ಮರ್ಯತೇ ॥** 'ಯತೋ ವಾಚೋ ನಿವರ್ತಂತೇ' 'ನಿಷ್ಕಲಂ ನಿಷ್ಕ್ರಿಯಂ ಶಾಂತಂ' ಇತ್ಯಾದಿಶ್ರುತಿಗಳೂ ಬ್ರಹ್ಮನು ಗುಣಪೂರ್ಣ–ದೋಷದೂರ ಎಂದು ಉಭಯರೂಪತ್ವವನ್ನು ಬ್ರಹ್ಮನಿಗೆ ತಿಳಿಸುತ್ತವೆ. ಸ್ಮೃತಿಯೂ ಇದೆ–'ಯೋ ಮಾಮಜಮನಾದಿಂ ಚ' ಇತ್ಯಾದಿ.

**॥ ಅತ ಏವ ಚೋಪಮಾ ಸೂರ್ಯಕಾದಿವತ್ ॥** ನಾನಾ ಸ್ಥಾನಗಳಲ್ಲಿ ಇದ್ದರೂ ಬ್ರಹ್ಮನಿಗೆ ತತ್ತತ್‌ಸ್ಥಾನಗತ–ದೋಷಲೇಪವಿಲ್ಲ. ಆದ್ದರಿಂದಲೇ ಜಲಸೂರ್ಯ– ದರ್ಪಣ ಪ್ರತಿಬಿಂಬಗಳನ್ನು ಬ್ರಹ್ಮನಿಗೆ ದೃಷ್ಟಾಂತವನ್ನಾಗಿ ಕೊಡಲಾಗುತ್ತದೆ.

ತಥಾತ್ಮೈಕೋ ಹ್ಯನೇಕಸ್ಥೋ ಜಲಧಾರೇಷ್ವಿವಾಂಶುಮಾನ್ ।
ಏಕ ಏವ ಹಿ ಭೂತಾತ್ಮಾ ಭೂತೇ ಭೂತೇ ವ್ಯವಸ್ಥಿತಃ ।
ಏಕಧಾ ಬಹುಧಾ ಚೈವ ದೃಶ್ಯತೇ ಜಲಚಂದ್ರವತ್ ॥

**॥ ಅಂಬುವದಗ್ರಹಣಾತ್ತು ನ ತಥಾತ್ವಮ್ ॥** ಸೂತ್ರದ ತುಶಬ್ದವು ಈ ಸೂತ್ರದಲ್ಲಿ ಹಿಂದಿನ ಸಿದ್ಧಾಂತದ ಮೇಲೆ ಆಕ್ಷೇಪವನ್ನು ಮಾಡಲಾಗಿದೆ, ಎಂದು ಸೂಚಿಸುತ್ತದೆ. ಅಂಬು=ನೀರು. ನೀರಿನಲ್ಲಿ ಪ್ರತಿಬಿಂಬ ಕಾಣುವಂತೆ ಪೃಥಿವ್ಯಾದಿ ಸ್ಥಾನಗಳಲ್ಲಿ ಪರಮಾತ್ಮ ಕಾಣುವುದಿಲ್ಲ. ಸೂರ್ಯನ ಪ್ರತಿಬಿಂಬ ಮಾತ್ರ ನೀರಿನಲ್ಲಿ ಕಾಣುತ್ತದೆ. ಸೂರ್ಯನೇ ನೀರಿನೊಳಗೆ ಇಲ್ಲ. ಆದರೆ ಪೃಥಿವ್ಯಾದಿಗಳಲ್ಲಿ ಸ್ವಯಂ ಬ್ರಹ್ಮನೇ ಇದ್ದಾನೆ. ಆದ್ದರಿಂದ, ನ ತಥಾತ್ವಂ=ದಾರ್ಷ್ಟಾಂತಿಕವು ದೃಷ್ಟಾಂತಕ್ಕೆ ತುಲ್ಯವಾಗಿಲ್ಲ. (ಇದು ಆಕ್ಷೇಪ ಸೂತ್ರ.)

**॥ ವೃದ್ಧಿಹ್ರಾಸಭಾಕ್ತ್ವಮಂತರ್ಭಾವಾದುಭಯ–ಸಾಮಂಜಸ್ಯಾದೇವಮ್ ದರ್ಶನಾಚ್ಚ ॥** ವೃದ್ಧಿ–ಹ್ರಾಸಗಳು ಇಲ್ಲ ಎಂಬ ಅಂಶದಲ್ಲಿ ಮಾತ್ರ ಸೂರ್ಯಕಾದಿ

ದೃಷ್ಟಾಂತವನ್ನು ಕೊಡಲಾಗಿದೆ. ಹಾಗೆ ಹೇಳಿದಾಗ ಮಾತ್ರ ಉಭಯಸಾಮಂಜಸ್ಯವು ಆಗುತ್ತದೆ. ಆಕಾಶ ಮತ್ತು ಸೂರ್ಯಕ ಎಂದು ಎರಡು ದೃಷ್ಟಾಂತಗಳನ್ನು ಕೊಡಲಾಗಿದೆ. ಆಕಾಶವು ಮಡಿಕೆ–ಕುಡಿಕೆ ಹೀಗೆ ಚಿಕ್ಕ–ದೊಡ್ಡ ವಸ್ತುಗಳ ಒಳಗೆ ಇದೆ. ಸೂರ್ಯನು ನೀರಿನ ಒಳಗೆ ಇಲ್ಲ. ಆದರೆ, ಅವನ ಪ್ರತಿಬಿಂಬವು ಅಲ್ಪ ಹಾಗೂ ಬೃಹತ್‌ಪ್ರಮಾಣದ ನೀರುಗಳಲ್ಲೂ ಇದೆ. ಈ ಎರಡೂ ದೃಷ್ಟಾಂತಗಳಲ್ಲಿ ಸಮಾನವಾದ ಅಂಶ–ಉಪಾಧಿಗಳಲ್ಲಿ ವೃದ್ಧಿ–ಹ್ರಾಸಗಳಿದ್ದರೂ ಬಿಂಬವು ಒಂದೇ ತೆರನಾಗಿರುತ್ತದೆ, ಎಂದು. ಈ ಅಂಶದಲ್ಲಿ ಮಾತ್ರ ದೃಷ್ಟಾಂತ. ಬಿಂಬವೇ ಉಪಾಧಿಯ ಒಳಗಿದೆ ಎಂಬ ಅಂಶ ಇಲ್ಲಿ ವಿವಕ್ಷಿತವಲ್ಲ. ದರ್ಶನಾಚ್ಚ=ಸರ್ವವಿಧದ ಸಾಮ್ಯವಿಲ್ಲದಿದ್ದರೂ ವಿವಕ್ಷಿತಾಂಶದಲ್ಲಿ ಸಾಮ್ಯಪ್ರಯುಕ್ತವಾಗಿ ದೃಷ್ಟಾಂತವನ್ನು ಕೊಡುವುದು 'ಸಿಂಹೋ ದೇವದತ್ತಃ' ಎಂಬಲ್ಲಿ ಕಂಡಿದೆ.

'ದ್ವೇ ವಾವ ಬ್ರಹ್ಮಣೋ ರೂಪೇ ಮೂರ್ತಂ ಚಾಮೂರ್ತಮೇವಚ' ಎಂದು ಪ್ರಸ್ತಾಪ ಮಾಡಿ 'ಅಥಾತ ಆದೇಶೋ ನೇತಿನೇತಿ' ಎಂದು ಬ್ರಹ್ಮನ ಗುಣಧರ್ಮಗಳನ್ನೆಲ್ಲ ಉಪನಿಷತ್ತುಗಳು ನಿರಾಕರಿಸುತ್ತವೆ. ಹೀಗಿರುವಾಗ ಬ್ರಹ್ಮನು 'ಉಭಯಲಿಂಗ' ಎನ್ನುವುದು ಹೇಗೆ? ಇದಕ್ಕೆ ಮುಂದಿನ ಸೂತ್ರದಲ್ಲಿ ಸಮಾಧಾನವಿದೆ—

**।। ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ ।।** 'ನೇತಿ ನೇತಿ' ಎಂದು ಪೂರ್ವೋಕ್ತಗುಣಗಳಷ್ಟೇ ಪರಮಾತ್ಮನಲ್ಲಿ ಇವೆ, ಎಂಬುದನ್ನು ನಿಷೇಧ ಮಾಡಲಾಗಿದೆ. ಸಕಲಗುಣಗಳನ್ನೂ ನಿಷೇಧಿಸುವುದು ಅಸಂಗತವಾಗುತ್ತದೆ. ಏಕೆಂದರೆ, ಸಕಲಗುಣಗಳಲ್ಲಿ ನಾವು ತಿಳಿಯದ ಗುಣಗಳೂ ಸೇರಿವೆ. ಅಂತಹ ಗುಣಗಳನ್ನು ಶ್ರುತಿಯೇ ಹೇಳಬೇಕು. ಶ್ರುತಿ ತಾನೇ ಗುಣಗಳನ್ನು ಹೇಳಿ ನಿಷೇಧ ಮಾಡಿದರೆ ಹುಚ್ಚರ ಮಾತೆನಿಸುತ್ತದೆ. ಆದ್ದರಿಂದ ಗುಣಗಳ ಪರಿಮಿತಿಯನ್ನು ಮಾತ್ರ 'ನೇತಿ ನೇತಿ' ಎಂದು ನಿಷೇಧಿಸುತ್ತದೆ. ಹಾಗೆ ನಿಷೇಧಿಸಿ—ನ ಹ್ಯೇತಸ್ಮಾದಿತಿ ನೇತ್ಯನ್ಯತ್ ಪರಮಸ್ತಿ, ಅಥ ನಾಮಧೇಯಂ ಸತ್ಯಸ್ಯ ಸತ್ಯಮಿತಿ । ಪ್ರಾಣಾ ವೈ ಸತ್ಯಂ, ತೇಷಾಮೇಷ ಸತ್ಯಮ್' । ಎಂದು ಮತ್ತೆ ಗುಣಗಳನ್ನು ಉಪನಿಷತ್ತು ಹೇಳುತ್ತದೆ. (ತತೋ ಬ್ರವೀತಿ ಚ ಭೂಯಃ) ಇದರ ಅರ್ಥ—ನೇತಿ ನೇತಿ ಎಂದು ಏನು ನಿಷೇಧವಿದೆಯೋ ಅದಕ್ಕಿಂತ ಭಿನ್ನವಾದ ಉತ್ತಮವಸ್ತು ಬ್ರಹ್ಮ. ಅವನಿಗಿಂತಲೂ ಉತ್ತಮವಾದುದು ಬೇರೊಂದಿಲ್ಲ. ಆ ಬ್ರಹ್ಮನಿಗೆ 'ಸತ್ಯಸ್ಯ ಸತ್ಯಂ' ಎಂದು ಹೆಸರು. ಪ್ರಾಣಾಃ=ಜೀವಿಗಳೆಲ್ಲರೂ ಸತ್ಯಂ=ನಿತ್ಯರು. ಅವರಿಗಿಂತಲೂ ನಿತ್ಯನಾದವನು ಬ್ರಹ್ಮ. ಜೀವನ ಧರ್ಮಭೂತಜ್ಞಾನಕ್ಕೆ ಕರ್ಮಪ್ರಯುಕ್ತ

ವಾದ ಸಂಕೋಚ ವಿಕಾಸಗಳಿವೆ. ಆದರೆ ಬ್ರಹ್ಮ ಕರ್ಮಲೇಪವರ್ಜಿತನಾಗಿದ್ದಾನೆ. ಅವನ ಜ್ಞಾನಕ್ಕೆ ಸಂಕೋಚ-ವಿಕಾಸಗಳಿಲ್ಲ. ಆದ್ದರಿಂದ ಅವನು 'ಸತ್ಯಸ್ಯಸತ್ಯ'.

**II ತದವ್ಯಕ್ತಮಾಹ ಹಿ II** ತತ್=ಆ ಬ್ರಹ್ಮನು ಅವ್ಯಕ್ತಂ=ಯಾರಿಗೂ ಕಾಣುವುದಿಲ್ಲವೆಂದು ಆಹ ಹಿ-'ನ ಸಂದೃಶೇ ತಿಷ್ಠತಿ ರೂಪಮಸ್ಯ' ಎಂಬ ಶ್ರುತಿಯು ಹೇಳುತ್ತದೆ. ಅಂದಮೇಲೆ ಅವನಲ್ಲಿರುವ ಗುಣ-ಧರ್ಮಗಳು ನಮ್ಮ ದೃಷ್ಟಿಗೋಚರ ವಲ್ಲ. ಶ್ರುತಿನಿಷೇಧ ಮಾಡುವುದು ಹೇಗೆ? ಆದ್ದರಿಂದ ಬ್ರಹ್ಮನ ಗುಣಗಳನ್ನು 'ನೇತಿ ನೇತಿ' ಎಂದು ನಿಷೇಧ ಮಾಡಲಾಗುವುದಿಲ್ಲ.

**II ಅಪಿ ಸಂರಾಧನೇ ಪ್ರತ್ಯಕ್ಷಾನುಮಾನಾಭ್ಯಾಮ್ II** ಭಕ್ತಿರೂಪಾಪನ್ನವಾದ ಧ್ಯಾನದಲ್ಲಿ ಮಾತ್ರ ಭಗವಂತನ ಸಾಕ್ಷಾತ್ಕಾರವಾಗುತ್ತದೆ. ಪ್ರತ್ಯಕ್ಷ ಮತ್ತು ಅನುಮಾನಗಳಿಂದ ಅವನನ್ನು ತಿಳಿಯಲಾಗದು. ಆದ್ದರಿಂದ 'ದ್ವೇ ವಾವ ಬ್ರಹ್ಮಣೋ ರೂಪೇ' ಎಂಬ ಶ್ರುತಿಯು ಬ್ರಹ್ಮರೂಪವನ್ನು ನಿಷೇಧಕ್ಕಾಗಿ ಅನುವಾದ ಮಾಡುತ್ತಿಲ್ಲ. ಧ್ಯಾನಕ್ಕಾಗಿ ವಿಧಾನ ಮಾಡುತ್ತದೆ.

**II ಪ್ರಕಾಶವಚ್ಚಾವೈಶೇಷ್ಯಮ್ ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್ II** ಬ್ರಹ್ಮನನ್ನು ಅಪರೋಕ್ಷೀಕರಿಸಿಕೊಂಡ ವಾಮದೇವಾದಿಗಳು ಬ್ರಹ್ಮನ ಜ್ಞಾನಾನಂದಾದಿಗಳಂತೆ ಅವನ ಮೂರ್ತಾಮೂರ್ತವಿಶಿಷ್ಟರೂಪವನ್ನೂ ನೋಡಿದ್ದಾರೆ- 'ತದ್ವೈತತ್ ಪಶ್ಯನ್ ಋಷಿರ್ವಾಮದೇವಃ ಪ್ರತಿಪೇದೇ ಅಹಂ ಮನುರಭವಂ ಸೂರ್ಯಶ್ಚ II'

ಪ್ರಕಾಶಶ್ಚ=ಬ್ರಹ್ಮನ ಜ್ಞಾನಾನಂದಾತ್ಮಕತ್ವವೂ ಕರ್ಮಣಿ=ನಿದಿಧ್ಯಾಸನಾಖ್ಯ ಕರ್ಮದಲ್ಲಿ ಅಭ್ಯಾಸಾತ್=ಮತ್ತೆ ಮತ್ತೆ ತೊಡಗುವುದರಿಂದ ಪ್ರತ್ಯಕ್ಷವಾಗಿದೆ. ಆದ್ದರಿಂದ ಮೂರ್ತಾಮೂರ್ತಾದಿ ವಿಶಿಷ್ಟ ಬ್ರಹ್ಮರೂಪವನ್ನು 'ನೇತಿನೇತಿ' ಎಂದು ನಿರಾಕರಿಸ ಲಾಗುವುದಿಲ್ಲ.

**II ಅತೋಽನಂತೇನ ತಥಾಹಿ ಲಿಂಗಮ್ II** ಆದ್ದರಿಂದ ಅನಂತೇನ= ಅನಂತಗುಣಗಳಿಂದ ಬ್ರಹ್ಮನು ವಿಶಿಷ್ಟನಾಗಿದ್ದಾನೆ. ತಥಾಹಿ ಲಿಂಗಮ್= ಆದರಿಂದಾಗಿ ಅವನಿಗೆ ಉಭಯಲಿಂಗತ್ವವು ಉಪಪನ್ನವಾಗಿದೆ.

ಹೀಗೆ ದ್ವೈತಭಾಷ್ಯದಂತೆ 11ನೇ ಸೂತ್ರದಿಂದ 27ನೆಯ ಸೂತ್ರದ ವರೆಗಿನ 17 ಸೂತ್ರಗಳನ್ನು 15 ಸೂತ್ರಗಳನ್ನಾಗಿ ಪರಿಗಣಿಸಿ ರಾಮಾನುಜಭಾಷ್ಯದಲ್ಲಿ ಒಂದು ಅಧಿಕರಣವನ್ನಾಗಿ ಮಾಡಲಾಗಿದೆ. ದ್ವೈತಭಾಷ್ಯದಂತೆ 25 ಮತ್ತು 26ನೇ

ಸೂತ್ರಗಳೆರಡನ್ನು ಒಂದಾಗಿ ಪರಿಗಣಿಸಿ ಇಲ್ಲಿನ 14ನೇ ಸೂತ್ರವಿದೆ. ಅದರಂತೆ, ದ್ವೈತಭಾಷ್ಯದ 20 ಮತ್ತು 21ನೆಯ ಸೂತ್ರಗಳು 10ನೇ ಸೂತ್ರವಾಗಿ ಪರಿಗಣಿಸಲ್ಪಟ್ಟಿವೆ.

**ವಿಮರ್ಶೆ**—ಪರಬ್ರಹ್ಮನು ನಿರ್ದೋಷನೆಂದು ಪ್ರಥಮಾಧ್ಯಾಯದಲ್ಲಿ ಅನೇಕ ವಿಧದಿಂದ ಸಮರ್ಥಿಸಲಾಗಿದೆ. ಪುನಃ ಇಲ್ಲಿ ಸ್ಥಾನಪ್ರಯುಕ್ತದೋಷಶಂಕೆ ಅದಕ್ಕೆ ನಿರ್ದೋಷತ್ವೇನ ಪರಿಹಾರ ಅನಗತ್ಯ. ಸ್ವೇಚ್ಛಯಾ ಕೆಸರಿನ ಹೊಂಡದಲ್ಲಿ ಮುಳುಗಿದರೂ ದುಃಖ ತಪ್ಪಿದ್ದಲ್ಲ, ಎಂದು ಅಧಿಕಶಂಕೆ ಮಾಡಬಹುದಾದರೂ ಅದಕ್ಕೆ ಪರಿಹಾರವಿಶೇಷವನ್ನೇನೂ ಇಲ್ಲಿ ಹೇಳಲಾಗಿಲ್ಲ. 'ಉಭಯಲಿಂಗಂ' ನಿರ್ದೋಷತ್ವ-ಕಲ್ಯಾಣಗುಣತ್ವ ಎಂಬ ಉಭಯಲಕ್ಷಣವುಳ್ಳವನು ಬ್ರಹ್ಮ ಎನ್ನುವ ಪರಿಹಾರ ಸಾಮಾನ್ಯವಾದುದರಿಂದ "ಆತ್ಮನಿ ಚೈವಂ ವಿಚಿತ್ರಾಶ್ಚಹಿ" ಎಂಬ ಸೂತ್ರದಲ್ಲಿ ಇದಕ್ಕಿಂತಲೂ ಸಮರ್ಪಕವಾದ ಪರಿಹಾರವನ್ನು ಹಿಂದೆಯೇ ಹೇಳಲಾಗಿದೆ. ಈ ಸೂತ್ರದಲ್ಲಿ ಅನಂತಗುಣತ್ವವನ್ನು ಹೇಳಿರುವುದು ಅಸಂಗತವೂ ಆಗಿದೆ.

ಶಾಂಕರಭಾಷ್ಯದಲ್ಲಿ 'ಪ್ರಕೃತೈತಾವತ್ವಂ...' ಎಂಬ ಸೂತ್ರದಿಂದ (22ನೇ ಸೂತ್ರ) 'ಪರಮತಃ...' ಸೂತ್ರದವರೆಗೆ (31ನೇ ಸೂತ್ರ) ಒಂದು ಅಧಿಕರಣ. ಆದ್ದರಿಂದ ಅದ್ವೈತದರ್ಶನದಂತೆ ಈ ಸೂತ್ರಗಳ ಅರ್ಥವನ್ನು ಮುಂದೆ ಹೇಳಲಾಗಿದೆ.

**ಇಲ್ಲಿಗೆ ಅವ್ಯಕ್ತಾಧಿಕರಣವು ಮುಗಿಯಿತು.**

## ೧೫. ಉಭಯವ್ಯಪದೇಶಾಧಿಕರಣಮ್
## (ಅಹಿಕುಂಡಲಾಧಿಕರಣಮ್)

**ಸ್ವರೂಪೇಣಾऽನಂದಾದಿನಾ ಕಥಮಾನಂದಿತ್ವಾದಿರಿತಿ । ಅ(ತ)ತ್ರೋಚ್ಯತೇ-**

**॥ ಓಂ ಉಭಯವ್ಯಪದೇಶಾತ್ತ್ವಹಿಕುಂಡಲವತ್ ಓಂ ॥ ೨೮ ॥**

**'ಆನಂದಂ ಬ್ರಹ್ಮಣೋ ವಿದ್ವಾನ್' (ತೈ.ಉ. 2.4), 'ಅಥೈಷ ಏವ ಪರಮ ಆನಂದಃ' (ಬೃ.ಉ. 6.3.33) ಇತ್ಯುಭಯವ್ಯಪದೇಶಾತ್, ಅಹಿಕುಂಡಲವದೇವ ಯುಜ್ಯತೇ । ಯಥಾऽಹಿಃ ಕುಂಡಲೀ ಕುಂಡಲಂ ಚ । ತುಶಬ್ದಾತ್ ಕೇವಲಶ್ರುತಿಗಮ್ಯತ್ವಂ ದರ್ಶಯತಿ ॥**

ಭಗವಂತನ ಸ್ವರೂಪವೇ ಆಗಿದೆ ಆನಂದ. ಹೀಗಿದ್ದರೂ ಅವನು 'ಆನಂದೀ' ಆನಂದವುಳ್ಳವನೆಂದೂ ಹೇಳಲ್ಪಡುತ್ತಾನೆ, ಎಂದು ಈ ಅಧಿಕರಣದಲ್ಲಿ ಹೇಳಲಾಗಿದೆ.

'ಆನಂದಂ ಬ್ರಹ್ಮಣಃ' ಎಂಬ ತೈತ್ತಿರೀಯಶ್ರುತಿಯಲ್ಲಿ 'ಬ್ರಹ್ಮನ ಆನಂದ' ಎನ್ನುವ ಮೂಲಕ ಬ್ರಹ್ಮನಿಗೂ ಆನಂದಕ್ಕೂ ಭೇದವನ್ನು ಹೇಳಲಾಗಿದೆ. 'ಅಥೈಷ ಏವ ಪರಮ ಆನಂದಃ' ಎಂದು ಬೃಹದಾರಣ್ಯಕಶ್ರುತಿಯಲ್ಲಿ ಬ್ರಹ್ಮನೂ ಆನಂದವೂ ಒಂದೇ ಎಂದೂ ಹೇಳಲಾಗಿದೆ. ಹೀಗೆ ಆನಂದರೂಪವಾದ ಗುಣಕ್ಕೂ ಗುಣಿಯಾದ ಪರಮಾತ್ಮನಿಗೂ ಭೇದೇನ ಮತ್ತು ಅಭೇದೇನ ವ್ಯಪದೇಶವು ಅಹಿಕುಂಡಲದಂತೆ=ಹಾವು ವೃತ್ತಾಕಾರವಾಗಿ ತನ್ನ ದೇಹವನ್ನು ಸುತ್ತಿಕೊಂಡಿರುವಂತೆ ಯುಕ್ತವಾಗಿದೆ. ಅಂತಹ ಹಾವನ್ನು ಕುಂಡಲೀ ಎಂದೂ ಕುಂಡಲ ಎಂದೂ ಭೇದೇನ, ಅಭೇದೇನ ವ್ಯಪದೇಶ ಮಾಡಲಾಗುತ್ತದೆ.

**ವಿವರಣೆ**—ಭಗವಂತನಿಗೂ ಅವನ ಗುಣಗಳಿಗೂ ಭೇದವಿಲ್ಲ. ಆನಂದರೂಪವಾದ ಗುಣವು ಅವನ ಸ್ವರೂಪವೇ ಆಗಿದೆ. ಆದರೂ ಅವನನ್ನು ಆನಂದರೂಪಗುಣವುಳ್ಳವನು ಎಂದು ಹೇಳಲಾಗುತ್ತದೆ. ಹಣವುಳ್ಳವನು ಶ್ರೀಮಂತ, ಎಂದು ಹೇಳಬೇಕಾದರೆ ಹಣ ಬೇರೆ ವ್ಯಕ್ತಿ ಬೇರೆಯಾಗಿರಬೇಕು. ಹೀಗೆ ಗುಣಕ್ಕೂ ಭಗವಂತನಿಗೂ ಭೇದವನ್ನೂ ಅಭೇದವನ್ನೂ ಶ್ರುತಿಗಳಲ್ಲಿ ಹೇಳಿರುವುದರಿಂದ ಯಾವುದು ತತ್ತ್ವ? ಎಂಬ ಸಂದೇಹ ಬರುತ್ತದೆ. ಅದಕ್ಕಾಗಿ, ಈ ಸೂತ್ರದಲ್ಲಿ ಅಭೇದವನ್ನೇ ಒಪ್ಪಿಕೊಂಡು ಉಭಯವ್ಯಪದೇಶವನ್ನು ಸಮರ್ಥಿಸಲಾಗಿದೆ. ಹಾವು ಸುತ್ತಿಕೊಂಡು ಬಿಲದೊಳಗೆ ಮಲಗಿರುತ್ತದೆ. ಆಗ 'ಇದು ಹಾವಿನ ಕುಂಡಲ' ಎಂದೂ 'ಹಾವೇ ಕುಂಡಲಾಕಾರ'ವೆಂದೂ ಹೇಳಲಾಗುತ್ತದೆ. ವಾಸ್ತವತತ್ತ್ವ ಹಾವು ಬೇರಲ್ಲ, ಕುಂಡಲ ಬೇರಲ್ಲ. ಆದರೂ ಭೇದಾಭೇದಪ್ರಯುಕ್ತವಾಗಿ ಹಾವಿನ ಕುಂಡಲ ಎನ್ನುವಂತೆ ಬ್ರಹ್ಮನೇ ಆನಂದರೂಪನಾದರೂ ವಿಶೇಷಬಲಾತ್ 'ಬ್ರಹ್ಮನ ಆನಂದ' ಎಂಬ ವ್ಯವಹಾರವೂ ಯುಕ್ತವಾಗುತ್ತದೆ.

'ಸೂತ್ರದಲ್ಲಿ ಅಹಿಕುಂಡಲವತ್' ಎಂದರೆ ಕುಂಡಲಾಕಾರದಲ್ಲಿರುವ ಅಹಿಯಂತೆ ಎಂದು ಅರ್ಥ. ಸುಧಾದಲ್ಲಿ 'ಅಹೇಃ ಅವಯವಾನಾಮ್ ಅನ್ಯೋನ್ಯಸಂಯೋಗ ವಿಶೇಷಃ ಅಹಿಕುಂಡಲಮ್' ಎಂದು ಹೇಳಲಾಗಿದೆ.

## ॥ ಓಂ ಪ್ರಕಾಶಾಶ್ರಯವದ್ ವಾ ತೇಜಸ್ತ್ವಾತ್ ಓಂ ॥ ೨೮ ॥

**ಯಥಾಽಽದಿತ್ಯಸ್ಯ ಪ್ರಕಾಶತ್ವಂ ಪ್ರಕಾಶಿತ್ವಂ ಚ, ಏವಂ ವಾ ದೃಷ್ಟಾಂತಃ । ತೇಜೋರೂಪತ್ವಾದ್ ಬ್ರಹ್ಮಣಃ ॥**

ಹೇಗೆ ಸೂರ್ಯನು ಪ್ರಕಾಶರೂಪನೂ ಪ್ರಕಾಶವುಳ್ಳವನೂ ಆಗಿದ್ದಾನೋ ಹಾಗೆಯೇ ಭಗವಂತ ಆನಂದರೂಪನೂ ಆನಂದವುಳ್ಳವನೂ ಆಗಿದ್ದಾನೆ. ಈ ಎರಡನೆಯ ದೃಷ್ಟಾಂತ ಹೆಚ್ಚು ಸಮಂಜಸ. ಬ್ರಹ್ಮನೂ ಪ್ರಕಾಶರೂಪ, ಆದಿತ್ಯನೂ ಪ್ರಕಾಶರೂಪನಾದುದರಿಂದ. (ಪ್ರಕಾಶಶಬ್ದಕ್ಕೆ ಬಿಳಿರೂಪ ಎಂದು ಅರ್ಥವನ್ನು ಹೇಳಿದಾಗ ರೂಪ ಮತ್ತು ಸೂರ್ಯ ಒಂದೇ ಆದರೂ ಭೇದವ್ಯವಹಾರ ಇದೆ, ಎಂದು ತಿಳಿಯಬೇಕು.)

## ॥ ಓಂ ಪೂರ್ವವದ್ ವಾ ಓಂ ॥ ೩೦ ॥

**ಯಥೈಕ ಏವ ಕಾಲಃ ಪೂರ್ವ ಇತ್ಯವಚ್ಛೇದಕೋಽವಚ್ಛೇದ್ಯಶ್ಚ ಭವತಿ । ಅತಿಸೂಕ್ಷ್ಮತ್ವಾಪೇಕ್ಷಯೈಷ ದೃಷ್ಟಾಂತಃ । ಸ್ಥೂಲಮತೀನಾಂ ಚ ಪ್ರದರ್ಶನಾರ್ಥಮಹಿಕುಂಡಲದೃಷ್ಟಾಂತಃ ।**

**'ಪ್ರಕಾಶವತ್ ಕಾಲವದ್ ವಾ ಯಥಾಽಂಗೇ ಶಯನಾದಿಕಮ್ ।**
**ಬ್ರಹ್ಮಣಶ್ಚೈವ ಮುಕ್ತಾನಾಮಾನಂದೋಽಭಿನ್ನ ಏವ ತು ॥'**
**ಇತಿ ನಾರಾಯಣಾಧ್ಯಾತ್ಮೇ ।**

**'ಆನಂದೇನ ತ್ವಭಿನ್ನೇನ ವ್ಯವಹಾರಃ ಪ್ರಕಾಶವತ್ ।**
**ಕಾಲವದ್ ವಾ ಯಥಾ ಕಾಲಃ ಸ್ವಾವಚ್ಛೇದಕತಾಂ ವ್ರಜೇತ್ ॥'**
**ಇತಿ ಬ್ರಾಹ್ಮೇ ।**

ಹೇಗೆ ಅಖಂಡವಾದುದರಿಂದ 'ಪೂರ್ವ' (ಹಿಂದಿನ)ವೂ ಕಾಲವೂ ಒಂದೇ ಆದರೂ 'ಪೂರ್ವಃ ಕಾಲಃ' ಎಂದು ಭೇದೇನ ವ್ಯವಹಾರವಿದೆಯೋ (ವಿಶೇಷಣ–ವಿಶೇಷ್ಯಭಾವೇನ) ಅದರಂತೆ ಬ್ರಹ್ಮನಲ್ಲಿ ಆನಂದವ್ಯವಹಾರ. 'ಪೂರ್ವಃ ಕಾಲಃ' ಎಂದಾಗ 'ಪೂರ್ವ' ರೂಪವಾದ ಸೂಕ್ಷ್ಮಕಾಲವು ಅವಚ್ಛೇದಕ, (ವಿಶೇಷಣ) ಕಾಲವು ಅವಚ್ಛೇದ್ಯ. ಅವಚ್ಛೇದ್ಯ–ಅವಚ್ಛೇದಕಗಳಿಗೆ ಭೇದವಿರಬೇಕು. ಆದರೆ, ಪೂರ್ವರೂಪವಾದ ಕಾಲಾಂಶಕ್ಕೂ ಅಂಶಿಯಾದ ಕಾಲಕ್ಕೂ ಭೇದವಿಲ್ಲ. ಆದರೂ 'ವಿಶೇಷ'ವನ್ನು ಅವಲಂಬಿಸಿ 'ಪೂರ್ವಃ ಕಾಲಃ' ಎಂದು ಹೇಳಲಾಗುತ್ತದೆ.

ಮೊದಲನೆಯ ಅಹಿಕುಂಡಲದೃಷ್ಟಾಂತ ಸ್ಥೂಲಬುದ್ಧಿಯ ಜಿಜ್ಞಾಸುಗಳ ತಿಳುವಳಿಕೆಗಾಗಿ ಇದೆ. ಈ ದೃಷ್ಟಾಂತವನ್ನು ಕಾಲದ ಅಂಶಗಳು ಬ್ರಹ್ಮನಂತೆ ಸೂಕ್ಷ್ಮವಾಗಿರುವುದರಿಂದ, ಕೊಡಲಾಗಿದೆ.

ಭಗವಂತನ ಉಭಯರೂಪತ್ವಕ್ಕೆ ಕೊಟ್ಟ ದೃಷ್ಟಾಂತಗಳನ್ನು ನಾರಾಯಣಾಧ್ಯಾತ್ಮ ಗ್ರಂಥದಲ್ಲಿ ಹೇಳಲಾಗಿದೆ—ಪ್ರಕಾಶದಂತೆ, ಕಾಲದಂತೆ ಅಥವಾ ತನ್ನ ಕಾಲಮೇಲೆ ತಾನೇ ಮಲಗಿದಂತೆ ಬ್ರಹ್ಮನ ಮತ್ತು ಮುಕ್ತರ ಆನಂದವು ಅಭಿನ್ನವೇ ಆಗಿದೆ. ಬ್ರಾಹ್ಮವಚನದಲ್ಲೂ ಹೀಗಿದೆ—ತನಗಿಂತ ಅಭಿನ್ನವಾದ ಆನಂದದಿಂದ ಬ್ರಹ್ಮನಿಗೆ ಭೇದವ್ಯವಹಾರವು ಪ್ರಕಾಶದಂತೆ ಅಥವಾ ಕಾಲದಂತೆ. ಕಾಲವು ತನಗೆ ತಾನೇ ಅವಚ್ಛೇದಕವಾಗುತ್ತದೆ.

## ॥ ಓಂ ಪ್ರತಿಷೇಧಾಚ್ಚ ಓಂ ॥ ೩೧ ॥

**'ಏಕಮೇವಾದ್ವಿತೀಯಮ್' (ಛಾಂ.ಉ. 6.2.1), 'ನೇಹ ನಾನಾಽಸ್ತಿ ಕಿಂಚನ' (ಕ.ಉ. 2.4.11) ಇತಿ ಭೇದಸ್ಯ ॥**

'ಏಕಮೇವಾದ್ವಿತೀಯಮ್' ಇತ್ಯಾದಿಶ್ರುತಿಗಳಲ್ಲಿ ಬ್ರಹ್ಮನಿಗೂ ಅವನ ಗುಣಗಳಿಗೂ ಭೇದವನ್ನು ನಿಷೇಧ ಮಾಡಿರುವುದರಿಂದಾಗಿಯೂ ಅವೆರಡಕ್ಕೆ ಭೇದವಿಲ್ಲ.

**ವಿವರಣೆ**—ಮೊದಲನೆಯ ಛಾಂದೋಗ್ಯಶ್ರುತಿಯಲ್ಲಿ ಬ್ರಹ್ಮನು ಒಬ್ಬನೇ, ಅವನಿಗೆ ಸಮರಿಲ್ಲ (ಅದ್ವಿತೀಯಂ) ಎನ್ನಲಾಗಿದೆ. ಅನೇಕ ನೂಲುಗಳಿಂದ ಸಿದ್ಧವಾದ ಬಟ್ಟೆಯೂ ಒಂದೇ–ಏಕಂ. ಆದರೆ, ಬಟ್ಟೆಗೂ ನೂಲಿಗೂ ಭೇದಾಭೇದವಿದೆ. ಅದರ ನಿಷೇಧಕ್ಕಾಗಿ ಏವ, ಎಂಬ ಪದವಿದೆ. ಬ್ರಹ್ಮನಿಗೂ ಅವನ ಗುಣಕ್ರಿಯಾದಿಗಳಿಗೂ ಹೀಗೆ ಭೇದಾಭೇದವೂ ಇಲ್ಲ, ಎಂದು ಏವ ಶಬ್ದದ ಅರ್ಥ.

ಇಹ=ಬ್ರಹ್ಮನಲ್ಲಿ ನಾನಾ=ಗುಣಕ್ರಿಯಾದಿಭೇದವು ನ ಅಸ್ತಿ=ಇಲ್ಲ ಎಂದು ಕಠಶ್ರುತಿಯ ಅರ್ಥ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ಉಭಯವ್ಯಪದೇಶಾತ್ ತ್ವಹಿಕುಂಡಲವತ್ ಓಂ ॥** (ಅತ್ರೇಶಸ್ಯ ಗುಣತ್ವಂ ಗುಣಿತ್ವಂ ಚ ಸಾಧ್ಯತೇ। ಉಭಯಸ್ಯ=ಗುಣಿತ್ವಸ್ಯ ಗುಣಾತ್ಮಕತ್ವಸ್ಯ ಚ 'ಆನಂದಂ

ಬ್ರಹ್ಮಣಃ' 'ಏಷ ಪರಮ ಆನಂದಃ' ಇತ್ಯಾದೌ ವ್ಯಪದೇಶಾತ್, ಗುಣಿತ್ವಂ ಗುಣತ್ವಂ ಚೇತ್ಯರ್ಥಃ ಶ್ರೌತಮಪಿ ಕಥಮೇತತ್ ? ಕ್ವಾಪ್ಯದೃಷ್ಟೇಃ ಇತ್ಯತ ಉಕ್ತಮ್–ಅಹೀತಿ। ಅಹಿಶ್ಚ ಕುಂಡಲಂ ಚ ತಯೋರಿವ। ಅಹಿ–ಕುಂಡಲಯೋಃ ತಾದಾತ್ಮ್ಯೇಽಪಿ ವಿಶೇಷಶಕ್ತ್ಯಾ ಕುಂಡಲ–ಕುಂಡಲಿಭಾವೋ ಯಥಾ ತಥೈವೇತಿ।

ಅಹಿನಾ ಕುಂಡಲಸ್ಯ ಭೇದಾಭೇದವತ್ವೇಽಪಿ ಮಂದಾನಾಮ್ ಅಭೇದೇ ಬುದ್ಧಿಮ್ ಅವತಾರಯಿತುಮ್ ಇದಮ್। 'ಯಥಾ ಪೃಥಿವ್ಯಾಂ ಓಷಧಯಃ ಸಂಭವಂತಿ' ಇತಿವದಿತ್ಯುಕ್ತಂ ಸುಧಾಯಾಮ್। ಭಾಷ್ಯೇ ಚ, ತುಶಬ್ದಃ ಶ್ರುತ್ಯೇಕಗಮ್ಯತ್ವ ರೂಪವಿಶೇಷಾರ್ಥಃ। ತೇನ 'ನೇಶೋ ಗುಣವಾನ್ ತದಾತ್ಮಕತ್ವಾತ್' ಇತ್ಯಾದಿ ಯುಕ್ತಿವಿರೋಧೋ ನ ಶಂಕ್ಯಃ।)

ಈ ಅಧಿಕರಣದಲ್ಲಿ ಪರಮಾತ್ಮನಿಗೆ ಗುಣಾತ್ಮಕತ್ವ, ಗುಣಾಶ್ರಯತ್ವ ಈ ಎರಡು ವಿರುದ್ಧ ಧರ್ಮಗಳನ್ನು ಸಮರ್ಥಿಸಲಾಗಿದೆ. ಉಭಯ–ವ್ಯಪದೇಶಾತ್=ಪರಮಾತ್ಮನು ಆನಂದವುಳ್ಳವನೆಂದೂ, ಅವನೇ ಆನಂದರೂಪನೆಂದೂ ಶ್ರುತಿಗಳಲ್ಲಿ ಹೇಳಿರುವುದರಿಂದ ಅವನಿಗೆ ಎರಡೂ ಧರ್ಮಗಳೂ ಇವೆ. ಇಂತಹ ವಿರುದ್ಧ ಧರ್ಮಗಳು ಬೇರೆಲ್ಲೂ ಕಂಡಿಲ್ಲ ಎನ್ನಬಾರದು. ಹಾವು ಮತ್ತು ಅದರ ಕುಂಡಲ (ಸುರುಳಿಯಾಗಿ ಇರುವಿಕೆ) ಎರಡೂ ಒಂದೇ ಆದರೂ 'ಹಾವಿನ ಸುರುಳಿ' ಎನ್ನುವಂತೆ ಭಗವಂತನಲ್ಲೂ ವಿರುದ್ಧ ಧರ್ಮಗಳು ಕೂಡಬಹುದು.

**॥ ಓಂ ಪ್ರಕಾಶಾಶ್ರಯವದ್ ವಾ ತೇಜಸ್ತ್ವಾತ್ ಓಂ ॥** ('ಪ್ರಕಾಶೇತಿ ಭಾಸ್ವರ ರೂಪಂ ವಿವಕ್ಷ್ಯತೇ। ಪ್ರಕಾಶಾಶ್ರಯಸ್ಯ ಆದಿತ್ಯಸ್ಯ ಯಥಾ ಪ್ರಕಾಶತ್ವಂ, ಪ್ರಕಾಶಿತ್ವಂ ತದ್ವತ್ ಗುಣಾತ್ಮಕಸ್ಯ ಈಶಸ್ಯ ಗುಣಿತ್ವಮ್ ಇತ್ಯರ್ಥಃ। ಅನ್ಯದ್ ಹಿತ್ವಾ ಆದಿತ್ಯ ದೃಷ್ಟಾಂತೇ ಕೋ ಹೇತುಃ? ಇತ್ಯತ ಉಕ್ತಮ್–ತೇಜಸ್ತ್ವಾದಿತಿ। ತೇಜೋರೂಪತ್ವೇ–ನಾಂತರಂಗತ್ವಾತ್ ಇತ್ಯರ್ಥಃ।)

ಸೂತ್ರದಲ್ಲಿರುವ ಪ್ರಕಾಶಶಬ್ದಕ್ಕೆ 'ಭಾಸ್ವರೂಪ' ಎಂದರ್ಥ. ಸೂರ್ಯನೂ ಈ ರೂಪವೂ ಅಭಿನ್ನವಾದರೂ 'ಸೂರ್ಯನ ಬಿಳಿರೂಪ' ಎಂದಂತೆ ತೇಜಸ್ತ್ವಾತ್= ಬ್ರಹ್ಮನೂ ತೇಜೋರೂಪನಾದರೂ 'ರೂಪವುಳ್ಳವನು' ಎಂದೂ ಹೇಳಬಹುದು.

**॥ ಓಂ ಪೂರ್ವವದ್ ವಾ ಓಂ ॥** (ಯಥಾಕಾಲಃ ಪೂರ್ವೇಣ ಅಭೇದೇಽಪಿ ಪೂರ್ವಃ ಇತಿ ವಿಶಿಷ್ಯತೇ ತಥಾ ಗುಣಾತ್ಮಕಂ ಬ್ರಹ್ಮ ಗುಣೀತಿ ವಿಶಿಷ್ಯತೇ ಇತ್ಯರ್ಥಃ।

ದೃಷ್ಟಾಂತತ್ರಯಮ್ ಆದರಾರ್ಥಂ ವಾ ಸ್ಥೂಲ–ಸೂಕ್ಷ್ಮಮತ್ಯಪೇಕ್ಷಯಾ ಆದ್ಯತೃತೀಯೇ, ದ್ವಿತೀಯಂ ಅಂತರಂಗತ್ವಾತ್ ಇತಿ ವಾ ಬೋಧ್ಯಮ್ ।)

ಹೇಗೆ ಪೂರ್ವಕ್ಷಣವು ಕಾಲವೇ ಆದರೂ 'ಪೂರ್ವಃ ಕಾಲಃ' ಎಂದು ಕಾಲಕ್ಕೆ ವಿಶೇಷಣವಾಗಿ ತೋರುವುದೋ ಅದರಂತೆ ಬ್ರಹ್ಮನು ಗುಣರೂಪನಾದರೂ 'ಬ್ರಹ್ಮಣಃ ಆನಂದಃ' ಎಂದು ಸಂಬಂಧವು ತೋರುತ್ತದೆ.

**॥ ಓಂ ಪ್ರತಿಷೇಧಾಚ್ಚ ಓಂ ॥** (ಭೇದಸ್ಯೇತಿ ಶೇಷಃ । 'ನೇಹ ನಾನಾऽಸ್ತಿ ಕಿಂಚನ' ಇತ್ಯಾದಿಶ್ರುತೌ ಕಿಂಚನ ಗುಣಾದಿ, ನಾನಾ=ಭಿನ್ನಂ ನಾಸ್ತಿ, ಇತಿ ಗುಣಗುಣ್ಯಾದಿಭೇದಸ್ಯ ಪ್ರತಿಷೇಧಾಚ್ಚ ನ ಭೇದಃ ಇತ್ಯರ್ಥಃ ।)

'ನೇಹ ನಾನಾ' ಎಂಬ ಶ್ರುತಿಯು ಗುಣಾದಿಗಳಿಗೆ ಬ್ರಹ್ಮನೊಂದಿಗೆ ಭೇದವನ್ನು ನಿಷೇಧ ಮಾಡಿರುವ ಕಾರಣದಿಂದಾಗಿಯೂ ಆನಂದಾದಿಗುಣಗಳಿಗೆ ಬ್ರಹ್ಮನಿಂದ ಭೇದವಿಲ್ಲ.

## ಅದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

ಅದ್ವೈತಭಾಷ್ಯದಲ್ಲಿ 'ಪ್ರಕೃತೈತಾವತ್ತ್ವಂ...'' ಇತ್ಯಾದಿ 22ನೆಯ ಸೂತ್ರದಿಂದ ಈ ಸೂತ್ರದವರೆಗೆ ಒಟ್ಟು ಒಂಭತ್ತು ಸೂತ್ರಗಳು ಒಂದು ಅಧಿಕರಣವೆಂದು ಪರಿಗಣಿಸಲಾಗಿದೆ. ನಾಲ್ಕು ಮತ್ತು ಐದನೆಯ ಸೂತ್ರವನ್ನು ಸೇರಿಸಿ ಒಂದೇ ಎಂದು ಪರಿಗಣಿಸಲಾಗಿದೆ.

**॥ ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ ॥** ಬೃಹದಾರಣ್ಯಕದಲ್ಲಿ (2.3.1) 'ದ್ವೇ ವಾವ ಬ್ರಹ್ಮಣೋ ರೂಪೇ ಮೂರ್ತಂ ಚೈವಾಮೂರ್ತಂ ಚ' ಎಂದು ಬ್ರಹ್ಮನಿಗೆ ಮೂರ್ತ ಮತ್ತು ಅಮೂರ್ತಗಳೆಂಬ ಎರಡು ರೂಪಗಳನ್ನು ಹೇಳಲಾಗಿದೆ. ಪೃಥಿವೀ ಅಪ್, ತೇಜಸ್ಸು ಇವು ಮೂರು ಬ್ರಹ್ಮನ ಮೂರ್ತರೂಪಗಳು. ವಾಯು ಮತ್ತು ಆಕಾಶ ಇವೆರಡು ಅಮೂರ್ತರೂಪಗಳು. ಆಮೇಲೆ 'ಯ ಏಷ ಸೂರ್ಯಮಂಡಲೇ ತಪತಿ ಪುರುಷೋ, ಯಶ್ಚಾಯಂ ದಕ್ಷಿಣೇऽಕ್ಷಿಣಿ ಪುರುಷಃ' ಎಂದು ಪಂಚಭೂತಗಳಿಗೆ ಕಾರಣವಾದ ಪುರುಷನನ್ನು ಹೇಳಿ 'ಅಥಾತ ಆದೇಶೋ ನೇತಿ ನೇತಿ, ನಹಿ ಏತಸ್ಮಾದಿತಿ ನೇತ್ಯನ್ಯತ್ ಪರಮಸ್ತಿ' ಹೀಗೆ ಈ ವಾಕ್ಯದಲ್ಲಿ 'ನೇತಿ ನೇತಿ' ಎಂದು ನಿಷೇಧ ಮಾಡಲಾಗಿದೆ. ಈ ನಿಷೇಧ ಪೂರ್ವಪ್ರಸಕ್ತವಾದ ಮೂರಕ್ಕೂ ಅನ್ವಯಿಸಿದರೆ ಶೂನ್ಯವಾದಾಪತ್ತಿ. ಆದ್ದರಿಂದ ಆ

ನಿಷೇಧವು ಪ್ರಕೃತ–ಏತಾವತ್ವಂ=ಪ್ರಕೃತವಾಗಿರುವ ಇಯತ್ತಾಪರಿಚ್ಛೇದವಿರುವ ಮೂರ್ತಾಮೂರ್ತಗಳನ್ನು ಮಾತ್ರ ನಿಷೇಧತಿ=ನಿಷೇಧ ಮಾಡುತ್ತದೆ. ತತಃ=ಹೀಗೆ ನಿಷೇಧ ಮಾಡಿದ ಮೇಲೆ ಭೂಯಃ ಬ್ರವೀತಿ ಚ=ಅನ್ಯತ್ ಪರಮಸ್ತಿ ಎಂದು ಮೂರ್ತಾಮೂರ್ತಕ್ಕಿಂತ ಬೇರೆಯಾದ ಬ್ರಹ್ಮನನ್ನು ಹೇಳುತ್ತದೆ. ಆದ್ದರಿಂದ ಸ್ವರೂಪ ನಿಷೇಧವನ್ನು ಮಾಡುವ ಉದ್ದೇಶವಿದ್ದಲ್ಲಿ ಅವನ ಪ್ರಸ್ತಾವವೇ ವ್ಯರ್ಥ. ಅವನು ಪ್ರತ್ಯಕ್ಷಸಿದ್ಧನಲ್ಲ. ಹಾಗಿರುವ ಬ್ರಹ್ಮನನ್ನು ಶ್ರುತಿಯು ತಾನೇ ಇದ್ದಾನೆಂದು ಹೇಳಿ, ನಿಷೇಧ ಮಾಡುವುದು ಕೆಸರನ್ನು ಮುಟ್ಟಿ ಕೈತೊಳೆದಂತೆ ಆದೀತು. ಆದರೆ, ಮೂರ್ತಾಮೂರ್ತಗಳು ಪ್ರಮಾಣಾಂತರಸಿದ್ಧವಾದುದರಿಂದ ಅವುಗಳನ್ನು ಅನುವಾದ ಮಾಡಿ ನಿಷೇಧ ಮಾಡಬಹುದು.

**॥ ತದವ್ಯಕ್ತಮಾಹ ಹಿ ॥** ಅಂತಹ ಬ್ರಹ್ಮನೊಬ್ಬನು ಇದ್ದರೂ ಅವನು ಅವ್ಯಕ್ತನೆಂದು ಶ್ರುತಿಗಳು ಹೇಳುತ್ತವೆಯಾದುದರಿಂದ ಅದು ಕಾಣುವುದಿಲ್ಲ. ಅವ್ಯಕ್ತ ಎಂದರೆ ಇಂದ್ರಿಯಾಗೋಚರ ಎಂದರ್ಥ.

ನ ಚಕ್ಷುಷಾ ಗೃಹ್ಯತೇ ನಾಪಿ ವಾಚಾ
ನಾನ್ಯೈರ್ದೇವೈಸ್ತಪಸಾ ಕರ್ಮಣಾ ಚ ॥ (ಮುಂ.)

'ಯತ್ತದದ್ರೇಷ್ಯಮ್' ಇತ್ಯಾದಿ ಶ್ರುತಿಗಳು ಆತ್ಮನು ಅವ್ಯಕ್ತನೆಂದು ಹೇಳುತ್ತವೆ.

**॥ ಅಪಿ ಸಂರಾಧನೇ ಪ್ರತ್ಯಕ್ಷಾನುಮಾನಾಭ್ಯಾಮ್ ॥** ಅಪಿ=ಅಲ್ಲದೆ, ಪರಮಾತ್ಮನನ್ನು ಸಾಧಕರು ಸಂಸಾರಧನೇ=ಭಕ್ತಿ–ಧ್ಯಾನ–ಪ್ರಣಿಧಾನಗಳಲ್ಲಿ ಕಾಣುತ್ತಾರೆ. ಇದು ಪ್ರತ್ಯಕ್ಷಾನುಮಾನಾಭ್ಯಾಂ=ಶ್ರುತಿ–ಸ್ಮೃತಿಗಳಿಂದ ಸಿದ್ಧವಾಗಿದೆ.

ಕಶ್ಚಿದ್ ಧೀರಃ ಪ್ರತ್ಯಗಾತ್ಮಾನಮೈಕ್ಷದಾವೃತ್ತಚಕ್ಷುರಮೃತತ್ವಮಿಚ್ಛನ್॥
ಇದು ಶ್ರುತಿ.
ಯೋಗಿನಸ್ತಂ ಪ್ರಪಶ್ಯಂತಿ ಭಗವಂತಂ ಸನಾತನಮ್॥ ಇದು ಸ್ಮೃತಿ.

**॥ ಪ್ರಕಾಶವಚ್ಚಾವೈಶೇಷ್ಯಮ್ ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್ ॥** ಹೇಗೆ ಸೂರ್ಯ, ಆಕಾಶ ಮುಂತಾದ ವಸ್ತುಗಳು ನೀರು ಕನ್ನಡಿ ಮುಂತಾದ ವಸ್ತುಗಳಲ್ಲಿ ಪ್ರತಿಬಿಂಬಿತವಾಗಿ ಅನೇಕವಾಗಿ ತೋರುತ್ತವೋ ಹಾಗೆ ಅದ್ವಿತೀಯನಾದ ಆತ್ಮನೂ ಉಪಾಧಿಭೇದದಿಂದ ಅನೇಕವಾಗಿ ಕಾಣುತ್ತಾನೆ. ಅವನಿಗೆ ಸೂರ್ಯಾದಿಗಳಂತೆ ಅವೈಶೇಷ್ಯಂ=ಉಪಾಧಿಕೃತವಾದ ಯಾವ ವಿಶೇಷವೂ ಇಲ್ಲ. ಪ್ರಕಾಶಶ್ಚ=ಪ್ರಕಾಶರೂಪನಾದ ಬ್ರಹ್ಮನು ಕರ್ಮಣಿ=ಧ್ಯಾನಾದಿ ಕ್ರಿಯಾರೂಪವಾದ ಉಪಾಧಿಯಲ್ಲಿ ಭಿನ್ನನಾಗಿ

ಕಾಣುತ್ತಾನೆ. ಅಭ್ಯಾಸಾತ್=ವೇದಾಂತಗಳಲ್ಲಿ ಮತ್ತೆ ಮತ್ತೆ ಜೀವಬ್ರಹ್ಮರಿಗೆ ಅಭೇದವನ್ನು ಹೇಳಲಾಗಿದೆ. (ಇಲ್ಲಿ ಎರಡು ಸೂತ್ರಗಳನ್ನು ಒಂದೇ ಸೂತ್ರವಾಗಿ ಪರಿಗಣಿಸಲಾಗಿದೆ.)

**॥ ಅತೋಽನಂತೇನ ತಥಾ ಹಿ ಲಿಂಗಮ್ ॥** ಅಭೇದವಿರುವುದರಿಂದಲೇ ಶ್ರುತಿಯು ಅನಂತೇನ=ಬ್ರಹ್ಮನೊಂದಿಗೆ 'ಬ್ರಹ್ಮವಿದ್ ಬ್ರಹ್ಮೈವ ಭವತಿ' ಎಂದು ಐಕ್ಯವನ್ನು ಹೇಳುತ್ತವೆ. ತಥಾಹಿ ಲಿಂಗಂ='ಸ ಯೋ ಹ ವೈ ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ' ಇತ್ಯಾದಿಶ್ರುತಿಗಳು. ಬ್ರಹ್ಮಾತ್ಮಕತ್ವಫಲಶ್ರುತಿಯೇ ಅಭೇದಕ್ಕೆ ಲಿಂಗ.

**॥ ಉಭಯವ್ಯಪದೇಶಾತ್ ತ್ವಹಿಕುಂಡಲವತ್ ॥** ಶ್ರುತಿಗಳಲ್ಲಿ ಉಭಯ ವ್ಯಪದೇಶಾತ್=ಭೇದೇನ ಅಭೇದೇನ ಬ್ರಹ್ಮನನ್ನು ಹೇಳಿರುವುದರಿಂದ ಅಹಿ–ಕುಂಡಲವತ್=ಹಾವು ಮತ್ತು ಕುಂಡಲಾಕಾರಗಳಿಗಿರುವಂತೆ ಜೀವ–ಬ್ರಹ್ಮರಿಗೆ ಭೇದ ಮತ್ತು ಅಭೇದ ಎರಡೂ ಇವೆ. ಸರ್ಪವು ವಲಯಾಕಾರದಲ್ಲಿದ್ದಾಗ ಸರ್ಪದ ವಲಯ ಎಂದೂ, ಸರ್ಪದ ವಕ್ರಾಕಾರ ಎಂದೂ, ನೀಳವಾಗಿದ್ದಾಗ ದೀರ್ಘತ್ವ, ದಂಡಾಕಾರತ್ವ ಎಂದು ಹಾವಿನ ಒಂದೇ ಶರೀರವನ್ನು ಅನೇಕ ರೀತಿಯಾಗಿ ಹೇಳುವಂತೆ ಉಪನಿಷತ್ತಿನಲ್ಲಿ 'ತಂ ಪಶ್ಯತೇ ನಿಷ್ಕಲಂ ಧ್ಯಾಯಮಾನಃ' ಇತ್ಯಾದಿಶ್ರುತಿಗಳಲ್ಲಿ ಧ್ಯಾತೃ–ಧ್ಯೇಯ, ಉಪಾಸ್ಯ–ಉಪಾಸಕಾದಿರೂಪದಿಂದ ಭೇದವನ್ನೂ ಹೇಳಲಾಗಿದೆ. 'ಅಹಂ ಬ್ರಹ್ಮಾಸ್ಮಿ' ಇತ್ಯಾದಿಶ್ರುತಿಗಳಲ್ಲಿ ಅಭೇದವನ್ನೂ ಹೇಳಲಾಗಿದೆ. ಆದ್ದರಿಂದ ಭೇದಾಭೇದಗಳು ಎರಡೂ ಇವೆ. ಇದು ಏಕದೇಶಿಮತದ ಅನುವಾದ. (ಅಹಿತ್ವೇನ ಕುಂಡಲಾದಿಗಳಿಗೆ ಅಭೇದ, ಕುಂಡಲಾದಿತ್ವೇನ ಭೇದ. ಅದರಂತೆ ಧರ್ಮಭೇದೇನ ಒಂದೇ ವಸ್ತುವಿನಲ್ಲಿ ಭೇದಾಭೇದಗಳು ವಿರುದ್ಧಗಳಲ್ಲ.)

**॥ ಪ್ರಕಾಶಾಶ್ರಯವದ್ ವಾ ತೇಜಸ್ತ್ವಾತ್ ॥** ಪ್ರಕಾಶಕ್ಕೂ ಸೂರ್ಯನಿಗೂ ಭೇದವಿಲ್ಲ. ಆದರೂ 'ಸೂರ್ಯನ ಪ್ರಕಾಶ' ಎಂದು ಸೂರ್ಯತ್ವೇನ ಪ್ರಕಾಶತ್ವೇನ ಭೇದವಿದೆ. ಅದರಂತೆ ಜೀವತ್ವೇನ ಈಶ್ವರತ್ವೇನ ಭೇದ, ಆತ್ಮತ್ವೇನ ಅಭೇದ.

**॥ ಪೂರ್ವವದ್ ವಾ ॥** ಹೇಗೆ 'ಪ್ರಕಾಶವಚ್ಚಾವೈಶೇಷ್ಯಂ' ಎಂಬ ಪೂರ್ವಸೂತ್ರದಲ್ಲಿ ಒಬ್ಬ ಆತ್ಮನಿಗೆ ಅನೇಕತ್ವವು ಉಪಾಧಿಯಿಂದಾಗಿ ಪ್ರತಿಭಾಸ ಮಾತ್ರ ಎಂದು ಹೇಳಲಾಗಿದೆಯೋ ಅದೇ ಸರಿಯಾದ ಸಿದ್ಧಾಂತ. ಅಭೇದದಂತೆ ಭೇದವೂ ಸತ್ಯವಾದಲ್ಲಿ ಅದು ಸ್ವಾಭಾವಿಕವಾದುದರಿಂದ ನಿವೃತ್ತಿಯೇ ಆಗಲಿಕ್ಕಿಲ್ಲ. ಹೀಗೆ ಬಂಧನಿವೃತ್ತಿರೂಪವಾದ ಮೋಕ್ಷಾನುಪಪತ್ತಿ ಇರುವುದರಿಂದ ಅಭೇದವೇ ಸಿದ್ಧಾಂತ.

**॥ ಪ್ರತಿಷೇಧಾಚ್ಚ ॥** 'ನಾನ್ಯೋಽತೋಽಸ್ತಿ ದ್ರಷ್ಟಾ' ಎಂಬ ಶ್ರುತಿಯು

ಭೇದವನ್ನು ನಿಷೇಧ ಮಾಡುತ್ತಿರುವುದರಿಂದಲೂ ಭೇದವು ಅಸತ್ಯ. ಈ ಎರಡು ಸಿದ್ಧಾಂತ ಸೂತ್ರಗಳು.

**ವಿಮರ್ಶೆ**—ಈ ಅಧಿಕರಣದ ಪೂರ್ವಪಕ್ಷ 'ನೇತಿನೇತಿ' ಎಂಬ ಶ್ರುತಿ ಪೂರ್ವಪ್ರಸಕ್ತವಾದ ಎಲ್ಲವನ್ನೂ ನಿಷೇಧ ಮಾಡಿದರೆ ಬ್ರಹ್ಮನೇ ಇಲ್ಲವೆಂದಾದೀತು, ಎಂದು. ಈ ಪೂರ್ವಪಕ್ಷ ಮೊದಲನೆಯ ಸೂತ್ರದಲ್ಲಿ ಬ್ರಹ್ಮಜಿಜ್ಞಾಸೆಯನ್ನು ಹೇಳಿದ ಕೂಡಲೇ ಮಾಡಬೇಕು. ಇಲ್ಲಿ ಮಾಡುವುದು ಉಚಿತವಲ್ಲ. ಸಿದ್ಧಾಂತದಲ್ಲೂ ಬ್ರಹ್ಮನೇ ಇಲ್ಲವಾದರೆ ಶೂನ್ಯವಾದಾಪತ್ತಿಯನ್ನು ಆಪಾದಿಸಲಾಗಿದೆ. ಅದು ಪೂರ್ವಪಕ್ಷಿಗೆ ಇಷ್ಟಾಪತ್ತಿ.

## ವಿಶಿಷ್ಟಾದ್ವೈತ ದರ್ಶನದಲ್ಲಿ ಸೂತ್ರಗಳ ಅರ್ಥ

ವಿಶಿಷ್ಟಾದ್ವೈತಭಾಷ್ಯದಲ್ಲಿ 'ಉಭಯವ್ಯಪದೇಶಾತ್...' ಎಂಬ ಸೂತ್ರದಿಂದ ಪ್ರಾರಂಭಿಸಿ 'ಪ್ರತಿಷೇಧಾಚ್ಚ' ಎಂಬ ಸೂತ್ರದವರೆಗಿನ ನಾಲ್ಕು ಸೂತ್ರಗಳು ಒಂದು ಅಧಿಕರಣ.

**II ಉಭಯವ್ಯಪದೇಶಾತ್ ತ್ವಹಿಕುಂಡಲವತ್ II** ಬೃಹದಾರಣ್ಯಕದಲ್ಲಿ 'ದ್ವೇ ವಾವ ಬ್ರಹ್ಮಣೋ ರೂಪೇ' ಎಂದು ಮೂರ್ತಾಮೂರ್ತಪ್ರಪಂಚವು ಬ್ರಹ್ಮನ ರೂಪವೆಂದು ಹೇಳಲಾಗಿದೆ. ಮುಂದೆ 'ನೇತಿ ನೇತಿ' ಎಂದು ಅಚಿದ್ವಸ್ತುಗಳಲ್ಲಿರುವ ಪರಿಮಿತಿಯ ನಿಷೇಧವನ್ನು ಮಾಡಲಾಗಿದೆ. ಇದರಿಂದ ಜಡ–ಚೇತನಗಳಿಗೂ ಬ್ರಹ್ಮನಿಗೂ ವಿಲಕ್ಷಣವಾದ ಒಂದು ಸಂಬಂಧವನ್ನು ತಿಳಿಸಲಾಗಿದೆ. ಆ ಸಂಬಂಧ ಅಹಿಕುಂಡಲದಂತೆ. ಸರ್ಪವು ಕುಂಡಲಾಕಾರವೂ ಆಗಿರುತ್ತದೆ. ಋಜುರೂಪದಲ್ಲೂ ಇರುತ್ತದೆ. ಆ ಎರಡೂ ರೂಪಗಳು ಸರ್ಪವೇ ಆಗಿರುವಂತೆ ಚೇತನಾಚೇತನಾತ್ಮಕವಾದ ಪ್ರಪಂಚವೂ ಬ್ರಹ್ಮಾತ್ಮಕವಾಗಿದೆ. ಉಭಯವ್ಯಪದೇಶಾತ್='ಬ್ರಹ್ಮೈವೇದಂ ಸರ್ವಂ' ಎಂದು ಜಗದಭೇದೇನ 'ಹಂತಾಹಮಿಮಾಃ ತಿಸ್ರೋ ದೇವತಾಃ ಅನೇನ ಜೀವೇನ ಆತ್ಮನಾಽನುಪ್ರವಿಶ್ಯ' ಎಂದು ಭೇದೇನ (ಪ್ರವೇಶೋಕ್ತ್ಯಾ) ವ್ಯಪದೇಶಾತ್. ಕಾರ್ಯ ಕಾರಣಗಳಿಗೆ ಭೇದಾಭೇದವಿರುತ್ತದೆ. ಅಹಿಕುಂಡಲಗಳಿಗೆ ಇರುವಂತೆ. ಅದರಂತೆ ಕಾರಣನಾದ ಬ್ರಹ್ಮನಿಗೂ ಕಾರ್ಯವಾದ ಜಗತ್ತಿಗೂ ಭೇದಾಭೇದವಿದೆ.

**II ಪ್ರಕಾಶಾಶ್ರಯವದ್ ವಾ ತೇಜಸ್ತ್ವಾತ್ II** ಇಲ್ಲಿರುವ ವಾಶಬ್ದವು ಹಿಂದಿನ ಸೂತ್ರದಲ್ಲಿ ಹೇಳಿದ ವಿಷಯವನ್ನು ನಿರಾಕರಿಸುತ್ತದೆ. ಬ್ರಹ್ಮನ ಕಾರ್ಯ ಜಗತ್ತಾದರೆ, ಬ್ರಹ್ಮನಿಗೆ ಪರಿಣಾಮವನ್ನು ಹೇಳಬೇಕಾಗುತ್ತದೆ. ಆಗ ನಿರ್ವಿಕಾರತ್ವ ಶ್ರುತಿವಿರೋಧ

ಬರುತ್ತದೆ. ಆದಕ್ಕಾಗಿ ಪ್ರಕಾಶ ಮತ್ತು ಅದಕ್ಕೆ ಆಶ್ರಯವಾದ ವಸ್ತುಗಳಿಗೆ ಇರುವಂತಹ ಸಂಬಂಧವನ್ನು ಬ್ರಹ್ಮ ಮತ್ತು ಜಗತ್ತಿಗೆ ಹೇಳಬೇಕು. ಪ್ರಕಾಶ-ದೀಪಗಳು ವ್ಯಕ್ತಿಶಃ ಭಿನ್ನಗಳಾದರೂ ತೇಜಸ್ತ್ವೇನ ಎರಡೂ ಒಂದೇ. ಅದರಂತೆ, ಬ್ರಹ್ಮ ಮತ್ತು ಜಗತ್ತುಗಳು ಬೇರೆ ಆದರೂ ಬ್ರಹ್ಮತ್ವೇನ ಅಭೇದ.

**॥ ಪೂರ್ವವದ್ ವಾ ॥** ಇಲ್ಲಿಯೂ ವಾಶಬ್ದದಿಂದ ಹಿಂದಿನ ವಾದವನ್ನು ನಿರಾಕರಿಸಲಾಗಿದೆ. ಬ್ರಹ್ಮತ್ವೇನ ಜಗತ್ತಿನ ಅಭೇದ ಬರಬೇಕಾದರೆ ಜಗತ್ತಿನಲ್ಲೂ ಬ್ರಹ್ಮತ್ವವನ್ನು ಅಂಗೀಕರಿಸಬೇಕಾಗುತ್ತದೆ. ಹೀಗೆ ಹೇಳಿದರೂ ಶ್ರುತಿ ಸ್ಮೃತಿಗಳ ವಿರೋಧವಿದ್ದದ್ದೆ. ಅದಕ್ಕಾಗಿ ಪೂರ್ವವತ್='ಅಂಶೋ ನಾನಾವ್ಯಪದೇಶಾತ್' ಎಂದು ಹಿಂದೆ ಸೂತ್ರದಲ್ಲಿ ಹೇಳಿರುವಂತೆ ಚಿದಚಿದ್ವಸ್ತುಗಳು ಬ್ರಹ್ಮನ ಅಪೃಥಕ್ ಸಿದ್ಧವಾದ ಅಂಶಗಳು. ಚಿದಚಿದ್ವಸ್ತುಗಳು ವಿಶೇಷಣಗಳು, ಬ್ರಹ್ಮನು ವಿಶೇಷ್ಯ. ಅವೆರಡಕ್ಕೂ ಸ್ವರೂಪಭೇದವಿದೆ. ಅದರಿಂದಾಗಿ ಭೇದವ್ಯವಹಾರ ಮುಖ್ಯ, ಬ್ರಹ್ಮನು ನಿರ್ದೋಷನೂ ಆಗುತ್ತಾನೆ. ಆದರೂ ರೂಪವಿಶಿಷ್ಟಪಟದ ಅಂಶ ರೂಪವಾದುದರಿಂದ ಪಟಾಭೇದ ರೂಪಕ್ಕಿರುವಂತೆ ಚಿದಚಿದ್ವಿಶಿಷ್ಟಬ್ರಹ್ಮನ ಅಂಶವಾದ ಕಾರಣ ಚಿದಚಿದ್ವಸ್ತುಗಳಿಗೆ ಬ್ರಹ್ಮನಿಂದ ಅಭೇದವೂ ಇದೆ. ಹೀಗೆ ಭೇದ-ಅಭೇದ ವ್ಯವಹಾರಗಳು ಯುಕ್ತವಾಗಿವೆ.

**॥ ಪ್ರತಿಷೇಧಾಚ್ಚ ॥** 'ಸ ವಾ ಏಷ ಮಹಾನಜ ಆತ್ಮಾ ಅಜರೋಽಮರಃ' 'ನಾಸ್ಯ ಜರಯೈತಜ್ಜೀರ್ಯತಿ' ಇತ್ಯಾದಿಶ್ರುತಿಗಳಲ್ಲಿ ಬ್ರಹ್ಮನಲ್ಲಿ ಚಿದಚಿದ್ಧರ್ಮಗಳನ್ನು ನಿಷೇಧ ಮಾಡಿರುವುದರಿಂದಲೂ ಚಿದಚಿದ್ವಸ್ತುಗಳು ಅಂಶಮಾತ್ರ.

**ವಿಮರ್ಶೆ**—ಬ್ರಹ್ಮ ಮತ್ತು ಚಿದಚಿತ್‌ಪ್ರಪಂಚಕ್ಕೆ ತಂತು-ಪಟಗಳಂತೆ ಅಂಶಾಂಶಿಭಾವವಿಲ್ಲ. ವಿಶೇಷಣವಿಶೇಷ್ಯಭಾವವನ್ನು ಹೇಳಬೇಕು. ಬ್ರಹ್ಮನು ಚಿತ್-ಅಚಿತ್ ರೂಪವಾದ ವಿಶೇಷಣಗಳಿಂದ ವಿಶಿಷ್ಟ. ವಿಶಿಷ್ಟವು ವಿಶೇಷಣ-ವಿಶೇಷ್ಯ-ತತ್‌ಸಂಬಂಧ ಸಮುದಾಯಾತ್ಮಕ ಎಂದು ಒಂದು ಸಿದ್ಧಾಂತ. ಈ ಸಿದ್ಧಾಂತವನ್ನು ಅನುಸರಿಸಿದರೆ ಚಿದಚಿದ್ವಿಶಿಷ್ಟವೇ ಬ್ರಹ್ಮವೆಂದಾದೀತು. ಆದರೆ, 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಶ್ರುತಿಗಳಲ್ಲಿ ವಿಶೇಷ್ಯನಲ್ಲಿ ಮಾತ್ರವೇ ಬ್ರಹ್ಮಶಬ್ದವನ್ನು ಪ್ರಯೋಗಿಸಲಾಗಿದೆ. ಇನ್ನು ವಿಶಿಷ್ಟವು ವಿಶೇಷಣ-ವಿಶೇಷ್ಯೋಪಾದಾನಕವಾದ ವಸ್ತ್ವಂತರ ಎಂಬ ಮತವನ್ನು ಅವಲಂಬಿಸಿದರೆ ವಿಶೇಷಣವಾದ ಚಿದಚಿತ್‌ಗಳಿಗೆ ವಿಶಿಷ್ಟವಸ್ತುವಿನ ಅಭೇದವು ಬರಬಹುದಾದರೂ ವಿಶೇಷ್ಯವಾದ ಬ್ರಹ್ಮನಿಗೂ ವಿಶೇಷಣವಾಗಿರುವ ಚಿದಚಿದ್ವಸ್ತುಗಳಿಗೂ ಅಭೇದವು ಬರಲು ಸಾಧ್ಯವಿಲ್ಲ. ಆದರೆ

ಉಪನಿಷತ್ತುಗಳು 'ಆತ್ಮೈವೇದಂ ಸರ್ವಮ್' ಎಂದು ಚಿದಚಿದಾತ್ಮಕವಾದ ಜಗತ್ತಿಗೆ ಬ್ರಹ್ಮಾಭೇದವನ್ನು ಹೇಳಿದೆ. ಇದನ್ನು ಸಮರ್ಥಿಸಿದಂತಾಗುವುದಿಲ್ಲ. ಆದ್ದರಿಂದ ಇಂತಹ ವಿಶೇಷ್ಯ–ವಿಶೇಷಣಭಾವಕಲ್ಪನೆ ವ್ಯರ್ಥ.

ಇಲ್ಲಿಗೆ ಉಭಯವ್ಯಪದೇಶಾಧಿಕರಣವು ಮುಗಿಯಿತು.

## ೧೬. ಪರಾನಂದಾಧಿಕರಣಮ್

### ॥ ಓಂ ಪರಮತಃ ಸೇತೂನ್ಮಾನಸಂಬಂಧಭೇದ- ವ್ಯಪದೇಶೇಭ್ಯಃ ಓಂ ॥ ೩೨ ॥

ನಚಾऽನಂದಾದಿತ್ವಾಲ್ಲೋಕಾನಂದಾದಿವತ್ ।

'ಏಷ ಸೇತುರ್ವಿಧೃತಿಃ' (ಛಾಂ.ಉ. 8.4.1) 'ಯ ಏಷ ಆನಂದಃ ಪರಸ್ಯ' 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' (ಬೃ.ಉ. 6.4.23) ಇತಿ ಸೇತುತ್ವಂ ಹ್ಯುಚ್ಯತೇ । 'ಯತೋ ವಾಚೋ ನಿವರ್ತಂತೇ' (ತೈ.ಉ. 2.4) ಇತ್ಯುನ್ಮಾನತ್ವಮ್ । 'ಏತಸ್ಯೈವಾऽನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ' (ಬೃ.ಉ.6.3.32)ಇತಿ ಸಂಬಂಧಃ।

'ಅನ್ಯಜ್ಜ್ಞಾನಂ ತು ಜೀವಾನಾಮನ್ಯಜ್ಜ್ಞಾನಂ ಪರಸ್ಯ ಚ ।
ನಿತ್ಯಾನಂದಾವ್ಯಯಂ ಪೂರ್ಣಂ ಪರಜ್ಞಾನಂ ವಿಧೀಯತೇ ॥'

ಇತಿ ಭೇದಃ ।

ಅತೋऽಲೌಕಿಕತ್ವಾಪರಮೇವ ಬ್ರಹ್ಮಾನಂದಾದಿಕಮ್ ॥

ಭಗವಂತನ ಆನಂದಾದಿಗುಣಗಳು 'ಆನಂದ, ಜ್ಞಾನ' ಮೊದಲಾದ ಶಬ್ದಗಳಿಂದ ವಾಚ್ಯಗಳಾದುದರಿಂದ ನಮ್ಮ ಮನೋವೃತ್ತಿರೂಪವಾದ ಆನಂದದಂತೆ ಎಂದು ತಿಳಿಯಬಾರದು. 'ಏಷ ಸೇತುರ್ವಿಧೃತಿಃ, ಯ ಏಷ ಆನಂದಃ ಪರಸ್ಯ' (ಛಾಂ.8.4.1) ಎಂದು ಬ್ರಹ್ಮಾನಂದವು ಜಗದ್ಧಾರಕ ಎನ್ನಲಾಗಿದೆ. 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂದು ಬೃಹದಾರಣ್ಯಕದಲ್ಲಿ ನಿತ್ಯವಾದ ಸೇತುರೂಪವಾದ ಆನಂದವು ಬ್ರಹ್ಮನದು ಎಂದು ಹೇಳಿದೆ. ಹೀಗೆ ಈ ಎರಡು ಶ್ರುತಿಗಳಿಂದ ಬ್ರಹ್ಮಾನಂದದಲ್ಲಿ 'ಸೇತುತ್ವ' (ಜಗದ್ಧಾರಕತ್ವ) ಧರ್ಮ ಇದೆ, ಎಂದು ತಿಳಿಯುತ್ತದೆ. 'ಯತೋ ವಾಚೋ

ನಿವರ್ತಂತೇ' ಎಂಬ ತೈತ್ತಿರೀಯಶ್ರುತಿಯು ಬ್ರಹ್ಮಾನಂದವು ಮಾತಿಗೆ ಸಿಗುವುದಿಲ್ಲ, ಎನ್ನುತ್ತಾ ಅದು ಅಪರಿಮಿತ (ಉನ್ಮಾನ) ಎಂದಿದೆ. 'ಏತಸ್ಯೈವಾನಂದಸ್ಯ' ಇತ್ಯಾದಿ ಬೃಹದಾರಣ್ಯಕಶ್ರುತಿಯು ಇತರ ಎಲ್ಲಾ ಜೀವರ ಆನಂದವು ಬ್ರಹ್ಮಾನಂದದ ಒಂದು ಅಂಶ ಮಾತ್ರ ಎಂದು ಹೇಳುವ ಮೂಲಕ ಬ್ರಹ್ಮಾನಂದ ಮತ್ತು ಇತರಾನಂದಗಳಿಗೆ ಬಿಂಬ–ಪ್ರತಿಬಿಂಬಭಾವರೂಪವಾದ ಸಂಬಂಧವನ್ನು ಹೇಳಿದೆ. ಹೀಗೆ ಆಧಾರತ್ವ–ಅಮಿತತ್ವ–ಉಪಜೀವ್ಯತ್ವಧರ್ಮಗಳಿಂದಾಗಿ ಬ್ರಹ್ಮಾನಂದವು ಅತಃ ಪರಂ=ಜೀವಾನಂದ ವಿಲಕ್ಷಣವಾದುದು.

'ಜೀವರ ಜ್ಞಾನವೇ ಬೇರೆ, ಪರಮಾತ್ಮನ ಜ್ಞಾನವೇ ವಿಲಕ್ಷಣ. ಪರಮಾತ್ಮನ ಜ್ಞಾನವು ನಿತ್ಯವಾದುದು, ಆನಂದಾತ್ಮಕವಾದುದು. ಅದಕ್ಕೆ ನಾಶವಿಲ್ಲ. ಅದು ಪೂರ್ಣವಾದುದು. ಹೀಗೆ ಅತಃ=ಅಲೌಕಿಕವಾಗಿರುವ ಕಾರಣದಿಂದಾಗಿ ಬ್ರಹ್ಮನ ಆನಂದಾದಿಗುಣಗಳು ಪರಮೇವ=ವಿಲಕ್ಷಣವೇ ಆಗಿವೆ.

**ವಿವರಣೆ**—ಬ್ರಹ್ಮನಲ್ಲಿ ಭಕ್ತ್ಯತಿಶಯಕ್ಕಾಗಿ ಅವನ ಗುಣಗಳೆಲ್ಲವೂ ಅಲೌಕಿಕ ಎಂದು ಈ ಅಧಿಕರಣದಲ್ಲಿ ಹೇಳಲಾಗಿದೆ. ಅದಕ್ಕೆ ಸೂತ್ರದಲ್ಲಿ ಹೇಳಿರುವ ಕಾರಣಗಳು–ಸೇತು–ಉನ್ಮಾನ–ಸಂಬಂಧವ್ಯಪದೇಶ. ಬ್ರಹ್ಮನ ಆನಂದವನ್ನು ಸೇತು=ಧಾರಕ ಎಂದಿದೆ ಉಪನಿಷತ್ತು. ಅದು ಮಾನಾತೀತ. ಅಂದರೆ ಅಳತೆ ಮೀರಿದ್ದು. ಅದು ಬಿಂಬವಾದರೆ ಇತರ ಎಲ್ಲ ಜೀವರ ಆನಂದಗಳು ಪ್ರತಿಬಿಂಬಗಳು, ಎಂದು ನಿರೂಪಿಸಲಾಗಿದೆ. ಈ ಕಾರಣಗಳಿಂದ ಬ್ರಹ್ಮಾನಂದ ಅಲೌಕಿಕವಾದುದು.

ಭಾಷ್ಯದಲ್ಲಿ ಸೇತುತ್ವ ವ್ಯಪದೇಶಕ್ಕೆ ಛಾಂದೋಗ್ಯಶ್ರುತಿಯನ್ನು ಉಲ್ಲೇಖಿಸಲಾಗಿದೆ. 'ಏಷ ನಿತ್ಯೋ ಮಹಿಮಾ' ಎಂಬ ಬೃಹದಾರಣ್ಯಕಶ್ರುತಿಯನ್ನು ಉಲ್ಲೇಖ ಮಾಡುವುದಕ್ಕೆ ಭಾಷ್ಯದೀಪಿಕಾದಲ್ಲಿ ಹೀಗೆ ಕಾರಣ ಕೊಡಲಾಗಿದೆ. 'ನನ್ವತ್ರ ಆನಂದಸ್ಯ ವಿಷ್ಣುಸಂಬಂಧಿತ್ವಂ ನ ಪ್ರತೀಯತೇ, ಪರಶಬ್ದಸ್ಯ ಅನೇಕಾರ್ಥತ್ವಾತ್'–ಛಾಂದೋಗ್ಯ ಶ್ರುತಿಯಲ್ಲಿ ಆನಂದವು 'ಪರಸ್ಯ' ಎಂದು ಹೇಳಿದ್ದರೂ ವಿಷ್ಣುವಿನದ್ದು ಎಂದು ಸ್ಫುಟವಾಗಿ ತಿಳಿಯುವುದಿಲ್ಲ. ಅದಕ್ಕಾಗಿ ಬೃಹದಾರಣ್ಯಕ ಶ್ರುತಿಯನ್ನು ಉದಾಹರಿಸಲಾಗಿದೆ.

ಅತಃ ಅಲೌಕಿಕತ್ವಾಪರಮೇವ, ಎಂಬ ಭಾಷ್ಯವಾಕ್ಯಕ್ಕೆ ಅಲೌಕಿಕತ್ವರೂಪವಾದ ವೈಲಕ್ಷಣ್ಯವುಳ್ಳದ್ದು, ಎಂದು ಅರ್ಥ. ಅಥವಾ, ಲೌಕಿಕತ್ವಾತ್ ಎಂದು ಪದವಿಭಾಗ ಮಾಡಿ ಲೌಕಿಕತ್ವಾತ್ ಪರಂ=ಅಲೌಕಿಕಂ ಎಂದು ಅರ್ಥ.

## ।। ಓಂ ದರ್ಶನಾತ್ತು ಓಂ ।। ೩೩ ।।

ದರ್ಶನಾದೇವ ಚಾನ್ಯಾನಂದಾದೀನಾಮ್ ।

'ಅದೃಷ್ಟಮವ್ಯವಹಾರ್ಯಮವ್ಯಪದೇಶ್ಯಂ ಸುಖಂ ಜ್ಞಾನಮೋಜೋ ಬಲಮಿತಿ ಬ್ರಹ್ಮಣಸ್ತಸ್ಮಾದ್ ಬ್ರಹ್ಮೇತ್ಯಾಚಕ್ಷತೇ ತಸ್ಮಾದ್ ಬ್ರಹ್ಮೇತ್ಯಾಚಕ್ಷತೇ' ಇತಿ ಹಿ ಕೌಂಡಿನ್ಯಶ್ರುತಿಃ ।

ಜೀವರ ಆನಂದವು ಪ್ರತ್ಯಕ್ಷವೂ ಮನೋವಾಗ್ಗೋಚರವೂ ಆಗಿದೆ. ಆದರೆ, ಬ್ರಹ್ಮಾನಂದವು ಮನೋವಾಗತೀತವಾದುದು. ಆದ್ದರಿಂದಲೂ ಅದು ವಿಲಕ್ಷಣವಾದ ಆನಂದ. ಕೌಂಡಿನ್ಯಶ್ರುತಿಯು ಹೇಳುತ್ತದೆ—"ಬ್ರಹ್ಮಾನಂದ ಅನ್ಯರಿಂದ ಅದೃಷ್ಟವಾದುದು, ಅನ್ಯರಿಂದ ಹೇಯ ಅಥವಾ ಉಪಾದೇಯವಲ್ಲ, ಮಾತಿನಿಂದ ಹೇಳಲಾಗದು, ಅವನ ಜ್ಞಾನ, ಓಜಸ್ಸು, ಬಲ ಇವೆಲ್ಲವೂ ಹೀಗೆಯೇ. ಇದರಿಂದಾಗಿಯೆ ಅವನನ್ನು ಬ್ರಹ್ಮ ಎನ್ನುತ್ತಾರೆ."

ಅಪ್ರಸಿದ್ಧಸ್ಯ ಕಥಮಾನಂದ ಇತ್ಯಾದಿವ್ಯಪದೇಶ ಇತ್ಯತೋ ವಕ್ತಿ-

## ।। ಓಂ ಬುದ್ಧ್ಯರ್ಥಃ ಪಾದವತ್ ಓಂ ।। ೩೪ ।।

ಜೀವೇಶ್ವರಸಂಬಂಧಜ್ಞಾಪನಾರ್ಥಮಪ್ರಸಿದ್ಧೋಽಪಿ ಪಾದೋ ಯಥಾ ಪಾದಶಬ್ದೇನ ವ್ಯಪದಿಶ್ಯತೇ 'ಪಾದೋಽಸ್ಯ ವಿಶ್ವಾ ಭೂತಾನಿ'(ಋ. 10.90.3) ಇತಿ, ತಥಾ ।।

'ಅಲೌಕಿಕೋಽಪಿ ಜ್ಞಾನಾದಿಸ್ತಚ್ಛಬ್ದೈರೇವ ಭಣ್ಯತೇ ।
ಜ್ಞಾಪನಾರ್ಥಾಯ ಲೋಕಸ್ಯ ಯಥಾ ರಾಜೇವ ದೇವರಾಟ್ ।।'

ಇತಿ ಪಾದ್ಮೇ ।

ಅಲೌಕಿಕವಾದುದರಿಂದಲೇ ಅಪ್ರಸಿದ್ಧವಾದ ಬ್ರಹ್ಮಾನಂದವನ್ನು ಆನಂದ, ಎಂದು ಕರೆಯುವುದಾದರೂ ಹೇಗೆ? ಅದಕ್ಕಾಗಿ ಸೂತ್ರಕಾರರು—'ಬುದ್ಧ್ಯರ್ಥಃ' ಎಂದಿದ್ದಾರೆ. ಜೀವ ಮತ್ತು ಈಶನ ಸಂಬಂಧ ಅಂಶಾಂಶಿಭಾವ. ಲೋಕದಲ್ಲಿ ಪಟವು ಅಂಶಿ, ತಂತು ಅಂಶ. ಆದರೆ ಇಂತಹ ಸಂಬಂಧ ಜೀವೇಶರಲ್ಲಿ ಇಲ್ಲ. ಆದರೂ ಅದನ್ನು ಅಜ್ಞರಿಗೆ ತಿಳಿಸುವುದಕ್ಕಾಗಿ 'ಪಾದೋಽಸ್ಯ ವಿಶ್ವಾ ಭೂತಾನಿ' ಎಂದು ಪುರುಷಸೂಕ್ತವು

ಪಾದಶಬ್ದವನ್ನು ಪ್ರಯೋಗ ಮಾಡಿದೆ. ಪಾದಶಬ್ದದ ಮುಖ್ಯಾರ್ಥ ಕಾಲು, (ಅಥವಾ 'ತ್ರಿಪಾದಸ್ಯಾಮೃತಂ ದಿವಿ' ಎಂದಂತೆ ಭಗವಂತನ ಧಾಮತ್ರಯಗತ ರೂಪಗಳು.) ಕಾಲು ದೇಹದ ಒಂದು ಅಂಶ, ದೇಹ ಅಂಶಿ. ಜೀವರು ಕಾಲು ಅಲ್ಲದಿದ್ದರೂ ಕಾಲಿನಂತೆ ಪರಮಾತ್ಮನ ಅಂಶರಾಗಿದ್ದಾರೆ ಎಂದು ಅಲೌಕಿಕವಾದ ಅಂಶತ್ವಜ್ಞಾನಕ್ಕಾಗಿ ಲೌಕಿಕವಾದ ಪಾದಶಬ್ದದ ಪ್ರಯೋಗವನ್ನು ಮಾಡಲಾಗಿದೆ. ಅದರಂತೆ ಅಲೌಕಿಕವಾದ ಆನಂದವನ್ನು ತಿಳಿಸಲು ಲೌಕಿಕವಾದ ಆನಂದಪದ. ಪಾದ್ಮವಚನ ಹೀಗಿದೆ—ಈಶನ ಜ್ಞಾನಾದಿಗಳು ಅಲೌಕಿಕವಾದರೂ ಜ್ಞಾನ ಮುಂತಾದ ಲೌಕಿಕವಾಚಕಪದಗಳಿಂದಲೇ ಅವುಗಳನ್ನು ಕರೆಯಲಾಗುವುದು. ಹೇಗೆ, ಭಗವಂತನ ಸಾರ್ವಭೌಮತ್ವ ವಿಲಕ್ಷಣವಾದರೂ ಲೌಕಿಕ ರಾಜಶಬ್ದದಿಂದ 'ದೇವರಾಟ್' ಎಂದು ಕರೆಯಲಾಗುವುದೋ ಅದರಂತೆ. ಸಾಮಾನ್ಯ ಜನರ ಕಲ್ಪನೆಗಾಗಿ ಹೀಗೆ ಮಾಡಲಾಗುತ್ತದೆ. (ಮಣ್ಣಿನ ಪಾತ್ರೆಯು 'ಘಟ'. ಅದರ ಆಕಾರ ಸಾದೃಶ್ಯವು ಬಂಗಾರದ ಪಾತ್ರೆಗೂ ಇರುವುದರಿಂದ ಅದನ್ನೂ ಘಟಶಬ್ದದಿಂದಲೇ ವ್ಯವಹರಿಸಲಾಗುವುದು.)

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**II ಓಂ ಪರಮತಃ ಸೇತೂನ್ಮಾನಸಂಬಂಧಭೇದವ್ಯಪದೇಶೇಭ್ಯಃ ಓಂ II** (ಅತ್ರ ಈಶಗುಣಾನಾಮ್ ಅಲೌಕಿಕತ್ವಮ್ ಉಚ್ಯತೇ। ಗುಣಜಾತಮಿತಿ ಪ್ರಕೃತಮನ್ವೇತಿ। ಆನಂದಾದಿಗುಣಜಾತಮ್ ಅತಃ=ಲೌಕಿಕಾನಂದಾದೇಃ ಪರಂ=ವಿಲಕ್ಷಣಮ್। ಕುತಃ ? ಸೇತೂನ್ಮಾನೇತಿ ಭಾವಪ್ರಧಾನಮ್। ವ್ಯಪದೇಶಪದಮ್ ಪ್ರತ್ಯೇಕಮನ್ವೇತಿ। 'ಏಷ ಸೇತುರ್ವಿಧೃತಿರ್ಯ ಏಷ ಆನಂದಃ।' ಇತಿ ಸೇತುತ್ವವ್ಯಪದೇಶಾತ್। 'ಯತೋ ವಾಚೋ ನಿವರ್ತಂತೇ' ಇತಿ ಉನ್ಮಾನತ್ವಸ್ಯ=ಪೂರ್ಣತ್ವಸ್ಯ ಉಕ್ತೇಃ, 'ಏತಸ್ಯೈವಾನಂದಸ್ಯ ಅನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ' ಇತಿ ಬಿಂಬ-ಪ್ರತಿಬಿಂಬ ಸಂಬಂಧೋಕ್ತೇಃ।' ಮಾತ್ರಾಮ್ ಇತ್ಯಸ್ಯ ಪ್ರತಿಬಿಂಬಾಂಶಮ್ ಇತ್ಯರ್ಥತ್ವಾತ್।

ಅನ್ಯಜ್ಞಾನಂ ತು ಜೀವಾನಾಮ್ ಅನ್ಯಜ್ಞಾನಂ ಪರಾತ್ಮನಃ।
ಇತಿ ಭೇದೋಕ್ತೇಃ ಇತ್ಯರ್ಥಃ।)

ಈ ಅಧಿಕರಣದಲ್ಲಿ ಪರಮಾತ್ಮನ ಗುಣಗಳು ಅಲೌಕಿಕವಾಗಿವೆ, ಎಂದು ಹೇಳಲಾಗಿದೆ. ಪರಮಾತ್ಮನ ಗುಣಗಳು ಅತಃ=ಲೌಕಿಕವಾದ ಆನಂದಾದಿಗುಣಗಳಿಗಿಂತ ಪರಮ್=ವಿಲಕ್ಷಣವಾಗಿವೆ. ಅದಕ್ಕೆ ನಾಲ್ಕು ಕಾರಣಗಳು.

೧. **ಸೇತುತ್ವವ್ಯಪದೇಶಾತ್**='ಏಷ ಸೇತುಃ' ಎಂಬ ಉಪನಿಷದ್ವಾಕ್ಯದಲ್ಲಿ ಭಗವಂತನ ಆನಂದವು ಲೋಕಕ್ಕೆ ಆಧಾರ, ಎಂದು ಹೇಳಿರುವುದರಿಂದ.

೨. **ಉನ್ಮಾನತ್ವವ್ಯಪದೇಶಾತ್**–'ಯತೋ ವಾಚೋ ನಿವರ್ತಂತೇ' ಎಂದು ಮನೋವಾಕ್ಕುಗಳಿಗೆ ಅಗೋಚರ ಎಂದು ಜ್ಞಾನಾವಿಷಯತ್ವವನ್ನು ಅರ್ಥಾತ್ ಪೂರ್ಣತ್ವವನ್ನು ಹೇಳಿರುವುದರಿಂದ.

೩. **ಸಂಬಂಧವ್ಯಪದೇಶಾತ್**—'ಏತಸ್ಯೈವ' ಎಂದು ಬ್ರಹ್ಮಾನಂದ ಮತ್ತು ಜೀವಾನಂದಗಳಿಗೆ ಬಿಂಬ–ಪ್ರತಿಬಿಂಬಭಾವವನ್ನು ಹೇಳಿರುವುದರಿಂದ.

೪. **ಭೇದವ್ಯಪದೇಶಾತ್**—ಬ್ರಹ್ಮಾನಂದವು ಜೀವನ ಆನಂದಕ್ಕಿಂತ ವಿಲಕ್ಷಣ ವಾದುದು, ಎಂದು ಹೇಳಿರುವುದರಿಂದ.

ಈ ನಾಲ್ಕು ಹೇತುಗಳಿಂದ ಅಲೌಕಿಕತ್ವವು ಸಿದ್ಧವಾಗುವುದರಿಂದ ಬ್ರಹ್ಮಾನಂದವು ನಮ್ಮ ಆನಂದಕ್ಕಿಂತ ವಿಲಕ್ಷಣವಾಗಿದೆ.

॥ **ದರ್ಶನಾತ್ತು** ॥('ಅತ' ಇತಿ ಪ್ರಕೃತಾನಾಮ್ ಅನ್ಯಾನಂದಾದೀನಾಮ್ ವಿಪರಿಣಾಮೇನ ಅನ್ವಯಃ । ದರ್ಶನಮ್ ಉಪಲಕ್ಷಣಮ್ । ಮನೋವಾಗ್ಗೋಚರ-ತ್ವಾದನ್ಯಾನಂದಾದೀನಾಮ್ ಏತದೀಯಾನಾಂ ತದಭಾವತಃ, ಪರಂ ಈಶಗುಣಜಾತಮ್ ಇತ್ಯರ್ಥಃ ।)

ಹಿಂದಿನ ಸೂತ್ರದಲ್ಲಿ ಅತಃ ಎಂಬ ಶಬ್ದದಿಂದ ಪ್ರಕೃತವಾದ ಜೀವರ ಆನಂದಾದಿಗುಣಗಳು ದರ್ಶನಾತ್=ಅನುಭವ, ಮಾತುಗಳಿಗೆ ನಿಲುಕುತ್ತವೆ. ಆದರೆ, ಬ್ರಹ್ಮಾನಂದವು ಅನುಭವಾದ್ಯತೀತ. ಆದ್ದರಿಂದಲೂ ಅದು ವಿಲಕ್ಷಣವಾಗಿದೆ.

॥ **ಬುದ್ಧ್ಯರ್ಥಃ ಪಾದವತ್** ॥ (ಪಾದವತ್=ಪಾದಸ್ಯೇವ ಆನಂದಾದಿ ಪದಪ್ರಯೋಗ ಇತ್ಯರ್ಥಃ । ಯಥಾ ಲೌಕಿಕಪಾದವಿಲಕ್ಷಣೇಷ್ವಪಿ ಭೂತೇಷು 'ಪಾದೋಽಸ್ಯ ವಿಶ್ವಾ ಭೂತಾನಿ' ಇತಿ ಪಾದಪದಪ್ರಯೋಗಃ ಬುದ್ಧ್ಯರ್ಥಃ= ಭೂತಾನಾಮ್ ಈಶಾಂಶತ್ವಜ್ಞಾಪನಾರ್ಥಃ, ತಥಾ ಅಲೌಕಿಕೇಽಪಿ ಆನಂದಾದಿ ಪದಪ್ರಯೋಗಃ ಬುದ್ಧ್ಯರ್ಥಃ=ಅನುಕೂಲವೇದ್ಯತ್ವಾರ್ಥಾದಿಜ್ಞಾಪನಾರ್ಥಃ ಯುಕ್ತಃ ಇತ್ಯರ್ಥಃ । ಬುದ್ಧ್ಯರ್ಥ ಇತ್ಯುಕ್ತಿಃ ಆನಂದಾದಿ ಪದಪ್ರಯೋಗೇ ಪ್ರಯೋಜನೋಕ್ತ್ಯರ್ಥಾ । ಸಾಪಿ ಸ್ವರ್ಣಘಟೇ ಘಟಪದಸ್ಯೇವ ಕಿಂಚಿತ್ ಸಾದೃಶ್ಯಮಾತ್ರೇಣ ವ್ಯುತ್ಪತ್ತಿರ್ಯುಕ್ತೇತಿ ಸೂಚನಾರ್ಥಾ ॥)

ಪಾದಶಬ್ದಕ್ಕೆ ಕಾಲು ಎಂದರ್ಥ. ಈ ಪದವನ್ನು ಕಾಲಿಗಿಂತ ವಿಲಕ್ಷಣಾಂಶವಾದ ಚೇತನ ವರ್ಗದಲ್ಲಿ 'ಪಾದೋಸ್ಯ ವಿಶ್ವಾ ಭೂತಾನಿ' ಎಂದು ಪುರುಷಸೂಕ್ತದಲ್ಲಿ ಪ್ರಯೋಗಿಸಲಾಗಿದೆ. ಇದರಿಂದ ಜೀವರು ಕಾಲಿನಂತೆ ಪರಮಾತ್ಮನ ಅಂಶರು ಎಂದು ತಿಳಿಯಲು ಅನುಕೂಲವಾಗುತ್ತದೆ. ಅದರಂತೆ ಈಶಾನಂದವು ನಮ್ಮ ಆನಂದಕ್ಕಿಂತ ವಿಲಕ್ಷಣವಾದರೂ ನಮ್ಮ ಆನಂದದಂತೆ ಆ ಆನಂದವೂ ಅನುಕೂಲವೇದನೀಯ ವಾಗಿದೆ, ಎಂದು ತಿಳಿಯಲು ಸುಲಭವಾಗುತ್ತದೆ, ಎನ್ನುವ ಕಾರಣಕ್ಕಾಗಿ 'ಆನಂದ' ಎಂಬ ಶಬ್ದವನ್ನು ಪ್ರಯೋಗಿಸಲಾಗುತ್ತದೆ. ತಾವತಾ ಬ್ರಹ್ಮಾನಂದವು ನಮ್ಮ ಆನಂದದಂತೆ ಎಂದು ತಿಳಿಯಬಾರದು.

ಇಲ್ಲಿಗೆ ಪರಾನಂದಾಧಿಕರಣವು ಮುಗಿಯಿತು.

## ೧೭. ಸ್ಥಾನವಿಶೇಷಾಧಿಕರಣಮ್

**ಪರಾನಂದಮಾತ್ರತ್ವೇ ಕಥಂ ಬ್ರಹ್ಮಾದ್ಯಾನಂದಾದೀನಾಂ ವಿಶೇಷ ಇತಿ; ಅತ್ರೋಚ್ಯತೇ-**

**|| ಓಂ ಸ್ಥಾನವಿಶೇಷಾತ್ ಪ್ರಕಾಶಾದಿವತ್ ಓಂ || ೩೫ ||**

**ಯಥಾಽಽದಿತ್ಯಸ್ಯ ದರ್ಪಣಾದಿಸ್ಥಾನವಿಶೇಷಾತ್ ಪ್ರತಿಬಿಂಬವಿಶೇಷಃ ಏವಮಾನಂದಾದೇರಪಿ ||**

**'ಬ್ರಹ್ಮಾದಿಗುಣವೈಶೇಷ್ಯಾದಾನಂ(ದಾದಿಃ ಪರಸ್ಯ ಚ)ದಃ ಪರಮಸ್ಯ ಚ।**
**ಪ್ರತಿಬಿಂಬತ್ವಮಾಯಾತಿ ಮಧ್ಯೋಚ್ಚಾದಿವಿಭೇದ(ಶೇಷ)ತಃ ||'**

**ಇತಿ ಚ ವಾರಾಹೇ ।**

ಜೀವರ ಆನಂದಗಳು ಬ್ರಹ್ಮಾನಂದದ ಪ್ರತಿಬಿಂಬಗಳಾದರೆ ಬ್ರಹ್ಮಾದಿ ಅನಂತ ಜೀವರ ಆನಂದಗಳಲ್ಲಿ ವೈಚಿತ್ರ್ಯಗಳು ಬರುವುದು ಹೇಗೆ? ಒಂದು ಬಿಂಬದ ಪ್ರತಿಬಿಂಬವು ಒಂದೇ ರೀತಿಯಾಗಿರಬೇಕಲ್ಲವೆ? ಈ ಆಕ್ಷೇಪದ ಪರಿಹಾರಕ್ಕಾಗಿ ಸೂತ್ರಕಾರರು ಸ್ಥಾನವಿಶೇಷಾತ್, ಎಂದಿರುತ್ತಾರೆ. ಹೇಗೆ ಸೂರ್ಯನು ಒಬ್ಬನೇ ಆದರೂ

ಅವನ ಪ್ರತಿಬಿಂಬವು ಕನ್ನಡಿಯಲ್ಲಿ ಒಂದು ರೀತಿ, ಸೂರ್ಯಕಾಂತಮಣಿಯಲ್ಲಿ ಇನ್ನೊಂದು ರೀತಿಯಾಗಿ ಇರುವುದೋ ಅದರಂತೆ ಜೀವರ ಸ್ವರೂಪವೈಚಿತ್ರ್ಯದಿಂದಾಗಿ ಅವರ ಉಪಾಸನಾವೈಚಿತ್ರ್ಯ. ಅದರಿಂದಾಗಿ ಅವರು ಮುಕ್ತರಾದಾಗ ಅವರ ಸ್ವರೂಪನಂದಾನುಭವದಲ್ಲೂ ವೈಚಿತ್ರ್ಯವು ಬರುತ್ತದೆ. ವಾರಾಹವಚನ ಹೇಳುತ್ತದೆ—ಬ್ರಹ್ಮಾದಿದೇವತೆಗಳೆಂಬ ಸ್ಥಾನಗುಣವಿಶೇಷಕ್ಕೆ ಅನುಗುಣವಾಗಿ ಪರಮಾತ್ಮನ ಆನಂದವೂ ಮಧ್ಯಮ-ಉಚ್ಚ ಎಂಬ ಅಭಿವ್ಯಕ್ತಿತಾರತಮ್ಯದಿಂದ ಪ್ರತಿಬಿಂಬಿತವಾಗುತ್ತದೆ.

**ವಿವರಣೆ**—ಹಿಂದೆ 'ಪರಮತಃ' ಎಂಬ ಸೂತ್ರದಲ್ಲಿ ಜೀವಪರಮಾತ್ಮರ ಆನಂದಗಳಿಗೆ ಬಿಂಬ-ಪ್ರತಿಬಿಂಬಭಾವಸಂಬಂಧವನ್ನು ಹೇಳಲಾಗಿದೆ. ಪರಾನಂದ ಬಿಂಬ, ಜೀವರ ಆನಂದ ಪ್ರತಿಬಿಂಬ. ಹೀಗಾದರೆ ಜೀವರ ಆನಂದದಲ್ಲಿ ತಾರತಮ್ಯ ಬರಲು ಸಾಧ್ಯವಿಲ್ಲ. ಒಂದು ವಸ್ತುವಿನ ಪ್ರತಿಬಿಂಬ ಒಂದೇ ತೆರನಾಗಿರುತ್ತದೆ. ಸಂಸಾರದಲ್ಲಿ ಅದೃಷ್ಟವೈಚಿತ್ರ್ಯದಿಂದಾಗಿ ಆನಂದದ ವೈಲಕ್ಷಣ್ಯವು ಇರಬಹುದಾದರೂ ಮುಕ್ತರ ಆನಂದದಲ್ಲಿ ವೈಷಮ್ಯ ಬರುವುದು ಹೇಗೆ? ಅದಕ್ಕುತ್ತರ—ಪ್ರತಿಬಿಂಬದ ವೈಲಕ್ಷಣ್ಯಕ್ಕೆ ಬಿಂಬದ ವೈಚಿತ್ರ್ಯವು ಹೇಗೆ ಕಾರಣವೋ, ಅದರಂತೆ ಉಪಾಧಿಯ ವೈಲಕ್ಷಣ್ಯವೂ ಕಾರಣವಾಗಿದೆ. ಸೂರ್ಯನ ಪ್ರತಿಬಿಂಬ ನೀರಿನಲ್ಲಿ ಬಿದ್ದರೆ ಶಾಂತವಾಗಿರುತ್ತದೆ, ಸೂರ್ಯಕಾಂತ ಮಣಿಯಲ್ಲಿ ಬಿದ್ದರೆ ಬೆಂಕಿ ಬರುತ್ತದೆ. ಅದರಂತೆ ಬ್ರಹ್ಮಾದಿ ದೇವತೆಗಳ ಹಾಗೂ ಇತರ ಜೀವಸ್ವರೂಪಭೂತವಾದ ಉಪಾಧಿಯಲ್ಲಿ ಮೂಲಭೂತವಾದ ವೈಚಿತ್ರ್ಯವಿದೆ. ಹೀಗಾಗಿ ಈಶನ ಪ್ರತಿಬಿಂಬರೂಪವಾದ ಪ್ರತಿಬಿಂಬದಲ್ಲೂ ವೈಲಕ್ಷಣ್ಯ ಬರುತ್ತದೆ.

ತತ್ತ್ವಪ್ರದೀಪದಲ್ಲಿ—ಅತಶ್ಚೈತತ್ ಸಿದ್ಧಮ್ ಯಾವಂತಃ ಗುಣಾಃ ಉಪಾಸ್ಯಂತೇ ತಾವಂತಃ ಸ್ವಸ್ಮಿನ್ನಪಿ ಲಭ್ಯಂತೇ—ಯಾವ ಜೀವರು ಬ್ರಹ್ಮನ ಎಷ್ಟು ಗುಣಗಳನ್ನು ಉಪಾಸನೆ ಮಾಡುತ್ತಾರೋ ಅದಕ್ಕನುಗುಣವಾಗಿ ಅವರ ಅಷ್ಟು ಗುಣಗಳು ಮೋಕ್ಷದಲ್ಲಿ ಅಭಿವ್ಯಕ್ತವಾಗುತ್ತವೆ. ಹೀಗೆ ಇಲ್ಲಿ ಮುಕ್ತಾನಂದ ವೈಚಿತ್ರ್ಯವನ್ನು ಸಮರ್ಥಿಸಲಾಗಿದೆ. ಹಿಂದೆ 'ಅದೃಷ್ಟಾನಿಯಮಾತ್' ಎಂಬ ಸೂತ್ರದಲ್ಲಿ ಸಾಂಸಾರಿಕಆನಂದದಲ್ಲಿ ಅದೃಷ್ಟಭೇದಪ್ರಯುಕ್ತವಾದ ವೈಚಿತ್ರ್ಯವನ್ನು ಹೇಳಲಾಗಿದ್ದರೂ ಸ್ವರೂಪಾನಂದದ ವೈಚಿತ್ರ್ಯವನ್ನು ಹೀಗೆ ಸಮರ್ಥಿಸಲು ಸಾಧ್ಯವಿಲ್ಲ. ಅದು ಅನಾದಿಯಾದುದರಿಂದ ಸಾದಿಯಾದ ಅದೃಷ್ಟವು ಅದರಲ್ಲಿ ವೈಚಿತ್ರ್ಯವನ್ನು ಉಂಟುಮಾಡಲಾರದು. ಆದ್ದರಿಂದ ಆ ಸೂತ್ರದಿಂದ ಈ ಸೂತ್ರವು ಗತಾರ್ಥವಲ್ಲ.

**|| ಓಂ ಉಪಪತ್ತೇಶ್ಚ ಓಂ || ೩೬ ||**

**'ಐಶ್ವರ್ಯಾತ್ ಪರಮಾದ್ ವಿಷ್ಣೋರ್ಭಕ್ತ್ಯಾದೀನಾಮನಾದಿತಃ |**
**ಬ್ರಹ್ಮಾದೀನಾಂ ಸೂಪಪನ್ನಾ ಹ್ಯಾನಂದಾದೇರ್ವಿಚಿತ್ರತಾ ||'**

**ಇತಿ ಹಿ ಪಾದ್ಮೇ |**

ಬ್ರಹ್ಮಾದಿ ಜೀವರ ಆನಂದದ ವೈಚಿತ್ರ್ಯಕ್ಕೆ ಅವರ ಸ್ವರೂಪಭೂತವಾದ ಭಕ್ತ್ಯಾದಿ ವೈಚಿತ್ರ್ಯಗಳು ಮಾತ್ರವಲ್ಲದೆ ಬಿಂಬಭೂತನಾದ ಭಗವಂತನ ಸಾಮರ್ಥ್ಯವಿಶೇಷವೂ ಕಾರಣವಾಗಿದೆ. ಪಾದ್ಮವಚನ ಹೀಗಿದೆ—ಪರಮಾತ್ಮನ ಶಕ್ತಿವಿಶೇಷದಿಂದಲೂ ಬ್ರಹ್ಮಾದಿ ಜೀವರ ಅನಾದಿಯಾದ ಭಕ್ತ್ಯಾದಿ ಗುಣವಿಶೇಷದಿಂದಲೂ ಬ್ರಹ್ಮಾದಿದೇವತೆಗಳ ಆನಂದ ವೈಚಿತ್ರ್ಯವು ಉಪಪನ್ನವಾಗುತ್ತದೆ.

**ವಿವರಣೆ**—ಹಿಂದಿನ ಸೂತ್ರದಲ್ಲಿ ಉಪಾಧಿರೂಪಸ್ಥಾನಸಾಮರ್ಥ್ಯದಿಂದ ಪ್ರತಿಬಿಂಬ ವೈಚಿತ್ರ್ಯವನ್ನು ಸಾಧಿಸಲಾಗಿದೆ. ಈ ಸೂತ್ರದಲ್ಲಿ ಬಿಂಬ ಸಾಮರ್ಥ್ಯವೂ ಅದಕ್ಕೆ ಕಾರಣ ಎನ್ನಲಾಗಿದೆ. ಸೂರ್ಯನ ಪ್ರತಿಬಿಂಬ ಮಾತ್ರ ಸೂರ್ಯಕಾಂತಮಣಿಯಲ್ಲಿ ಅಗ್ನಿಜನಕವಾಗುತ್ತದೆ, ಇತರ ವಸ್ತುಗಳ ಪ್ರತಿಬಿಂಬವಲ್ಲ. ಹೀಗೆ, ಪ್ರತಿಬಿಂಬ ವೈಚಿತ್ರ್ಯಕ್ಕೆ ಬಿಂಬ ಮತ್ತು ಉಪಾಧಿ ಎರಡೂ ಕಾರಣ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**|| ಓಂ ಸ್ಥಾನವಿಶೇಷಾತ್ ಪ್ರಕಾಶಾದಿವತ್ ಓಂ ||** (ಅತ್ರ ಬ್ರಹ್ಮಾನಂದಾದೀನಾಮ್ ಈಶಾನಂದಾದಿಪ್ರತಿಬಿಂಬತ್ವಮುಚ್ಯತೇ | ಪ್ರಕಾಶಾದಿವತ್=ಸೂರ್ಯಾದಿಪ್ರತಿಬಿಂಬ ಇವ | ಯಥಾ ಸೂರ್ಯಾದಿಪ್ರತಿಬಿಂಬೇ ಸೂರ್ಯಕಾಂತಾದಿಸ್ಥಾನವಿಶೇಷಾತ್ ಸ್ಥಾನಗುಣಾತ್ ಅಗ್ನಿಜನಕತ್ವಾದಿವೈಚಿತ್ರ್ಯಂ ತದ್ವತ್ ಬ್ರಹ್ಮಾದಿಸ್ಥಾನಗತಾನಾದಿ ಭಕ್ತ್ಯಾದಿಗುಣವಿಶೇಷಾತ್ ಪ್ರತಿಬಿಂಬವೈಚಿತ್ರ್ಯಸಂಭವೇನ ಬ್ರಹ್ಮಾನಂದಾದಿಕಮ್ ಈಶಾನಂದಾದಿಪ್ರತಿಬಿಂಬಮ್ ಇತಿ ಯೋಜ್ಯಮ್ ||)

ಈ ಅಧಿಕರಣದಲ್ಲಿ ಬ್ರಹ್ಮಾದಿಜೀವರಲ್ಲಿರುವ ಆನಂದಾದಿಸದ್ಗುಣಗಳು ಪರಮಾತ್ಮನ ಆನಂದಾದಿಗಳ ಪ್ರತಿಬಿಂಬಗಳಾಗಿವೆ, ಎಂದು ಸಮರ್ಥಿಸಲಾಗಿದೆ. ಹೇಗೆ ಸೂರ್ಯಾದಿಪ್ರತಿಬಿಂಬಗಳಿಗೆ ಸ್ಥಾನವಿಶೇಷಾತ್=ಸೂರ್ಯಕಾಂತಮಣಿಯೇ ಮುಂತಾದ ಸ್ಥಾನವಿಶೇಷಗಳಿಂದ ಅಗ್ನಿಜನಕತ್ವಾದಿವೈಚಿತ್ರ್ಯವು ಇದೆಯೋ ಪ್ರಕಾಶಾದಿವತ್=ಸೂರ್ಯಪ್ರತಿಬಿಂಬದಂತೆಯೇ ಬ್ರಹ್ಮಾದಿಸ್ಥಾನಗತವಾದ ಜ್ಞಾನ-ಭಕ್ತ್ಯಾದಿವೈಚಿತ್ರ್ಯದಿಂದ ಆನಂದಾದಿ ಗುಣವೈಚಿತ್ರ್ಯವೂ ಮೋಕ್ಷದಲ್ಲಿ ಉಂಟಾಗುತ್ತದೆ.

॥ ಓಂ ಉಪಪತ್ತೇಶ್ಚ ಓಂ ॥ (ಚಃ ಸಮುಚ್ಚಯೇ ನ ಕೇವಲಂ ಸ್ಥಾನಗುಣೇನ ಕಿಂತು ಬಿಂಬಸಾಮರ್ಥ್ಯಾಚ್ಚ ಇತಿ। ವೈಚಿತ್ರ್ಯಸ್ಯ ಇತ್ಯನ್ವೇತಿ। ಬಿಂಬಭೂತ-ಈಶಸಾಮರ್ಥ್ಯಾಚ್ಚ ಬ್ರಹ್ಮಾನಂದಾದೌ ವೈಚಿತ್ರ್ಯಸ್ಯ ಉಪಪತ್ತೇಃ ಪ್ರತಿಬಿಂಬಮ್ ಅನ್ಯಾನಂದಾದಿಕಮ್। ಜಲೇ ಸೂರ್ಯಪ್ರತಿಬಿಂಬಾತ್ ಅಗ್ನಿಜನ್ಮಾದೃಷ್ಟೇಃ, ಸೂರ್ಯಕಾಂತೇ ಮುಖಪ್ರತಿಬಿಂಬಾತ್ ತದದೃಷ್ಟೇಃ ಸೂತ್ರದ್ವಯಮ್ ಅರ್ಥವತ್। ಅದೃಷ್ಟಾನಿಯಮಾದಿತ್ಯತ್ರ ಜೀವಾನಾಂ ವಿಚಿತ್ರತ್ವಾತ್ ಅವಿಚಿತ್ರಬ್ರಹ್ಮಪ್ರತಿಬಿಂಬತ್ವಂ ನೇತಿ ಚೋದ್ಯಂ ನಿರಸ್ತಮ್। ಅತ್ರ ತು ಪ್ರತಿಬಿಂಬೇ ಇವ ಬಿಂಬೇಽಪಿ ವೈಚಿತ್ರ್ಯಂ ಸ್ಯಾದಿತಿ ಚೋದ್ಯಂ ವಿಶೇಷಯುಕ್ತ್ಯಾ ಚ ನಿರಸ್ಯತೇ ಇತಿ ಭೇದಃ।)

ಉಪಾಧಿರೂಪವಾದ ಸ್ಥಾನವಲ್ಲದೆ ಬಿಂಬಭೂತನಾದ ಬ್ರಹ್ಮನ ಶಕ್ತಿವಿಶೇಷ ದಿಂದಾಗಿಯೂ ಆನಂದಕ್ಕೆ ಪ್ರತಿಬಿಂಬತ್ವವು ಯುಕ್ತವೇ ಆಗಿದೆ. ಪ್ರತಿಬಿಂಬದಲ್ಲಿ ವೈಚಿತ್ರ್ಯ ಇರಲು ಬಿಂಬವೈಚಿತ್ರ್ಯವೂ ಕಾರಣವಾಗಿದೆ. ಸೂರ್ಯನ ಪ್ರತಿಬಿಂಬ ಮಾತ್ರ ಸೂರ್ಯಕಾಂತದಲ್ಲಿ ಅಗ್ನಿಜನಕವಾಗುತ್ತದೆ, ಮುಖದ ಪ್ರತಿಬಿಂಬವು ಅಗ್ನಿಜನಕವಲ್ಲ. ಆದ್ದರಿಂದ ಬಿಂಬವೈಚಿತ್ರ್ಯವೂ ಕಾರಣ. ಬಿಂಬ ಒಂದೇ ಆದರೂ ಸೂರ್ಯನ ಪ್ರತಿಬಿಂಬ ಕೆಲವೆಡೆ ಅಗ್ನಿಜನಕ, ಕೆಲವೆಡೆ ಅಗ್ನಿಜನಕವಲ್ಲ. ಆದ್ದರಿಂದ ಉಪಾಧಿವೈಚಿತ್ರ್ಯವೂ ಕಾರಣವಾಗಿದೆ.

ಇಲ್ಲಿಗೆ ಸ್ಥಾನವಿಶೇಷಾಧಿಕರಣವು ಮುಗಿಯಿತು.

## ೧೮. ಪ್ರತಿಷೇಧಾಧಿಕರಣಮ್ (ತಥಾನ್ಯತ್ವಾಧಿಕರಣಮ್)

**ಧ್ಯಾನಕಾಲೇ ಯಚ್ಚಿತ್ತೇ ಪ್ರದೃಶ್ಯತೇ ತದೇವ ಹಿ ಬ್ರಹ್ಮರೂಪಮ್ । ಅತಃ ಕಥಮವ್ಯಕ್ತತೇತ್ಯತ ಆಹ-**

**॥ ಓಂ ತಥಾಽನ್ಯತ್ ಪ್ರತಿಷೇಧಾತ್ ಓಂ ॥ ೩೭ ॥**

**ಯಥಾ ಜೀವಾನಂದಾದೇರನ್ಯದ್ ಬ್ರಹ್ಮ ತಥೋಪಾಸಾಕೃತಾದಪಿ ।**
**'ಯನ್ಮನಸಾ ನ ಮನುತೇ ಯೇನಾಽಹುರ್ಮನೋ ಮತಮ್ ।**
**ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥'**
**(ಕೇನ. 1.6) ಇತಿ ಪ್ರತಿಷೇಧಾತ್ ॥**

**'ಪಶ್ಯಂತಿ ಪರಮಂ ಬ್ರಹ್ಮ ಚಿತ್ತೇ ಯತ್ ಪ್ರತಿಬಿಂಬಿತಮ್ ।**
**ಬ್ರಹ್ಮೈವ ಪ್ರತಿಬಿಂಬೇ ಯದತಸ್ತೇಷಾಂ ಫಲಪ್ರದಮ್ ॥**
**ತದುಪಾಸನಂ ಚ ಭವತಿ ಪ್ರತಿಮೋಪಾಸನಂ ಯಥಾ ।**
**ದೃಶ್ಯತೇತ್ವಾಪರೋಕ್ಷೇಣ ಜ್ಞಾನೇನೈವ ಪರಂ ಪದಮ್ ।**
**ಉಪಾಸನಾ ತ್ವಾಪರೋಕ್ಷ್ಯಂ ಗಮಯೇತ್ ತತ್ಪ್ರಸಾದತಃ ॥'**
**ಇತಿ ಚ ಬ್ರಹ್ಮತರ್ಕೇ ॥**

ಧ್ಯಾನಕಾಲದಲ್ಲಿ ಮನಸ್ಸಿನಲ್ಲಿ ತೋರುವ ರೂಪವೇ ಬ್ರಹ್ಮನದು. ಹೀಗಾಗಿ ಬ್ರಹ್ಮನು ಅವ್ಯಕ್ತನೆಂದುದು ಹೇಗೆ? ಅದಕ್ಕುತ್ತರ—ತಥಾಽನ್ಯತ್, ಎಂದು. ಹೇಗೆ ಬ್ರಹ್ಮಾನಂದವು ಜೀವಾನಂದಕ್ಕಿಂತ ಭಿನ್ನವೋ ತಥಾ=ಹಾಗೆಯೇ ಉಪಾಸಾಕೃತಾತ್=ಉಪಾಸನಾಕಾಲದಲ್ಲಿ ಕಾಣುವ ಬ್ರಹ್ಮನಿಗಿಂತಲೂ ಬ್ರಹ್ಮನು ಭಿನ್ನನಾಗಿದ್ದಾನೆ. ಏಕೆಂದರೆ, ಕೇನೋಪನಿಷತ್ತಿನಲ್ಲಿ 'ನೇದಂ ಯದಿದಮುಪಾಸತೇ' ಎಂದು ಧ್ಯಾನದಲ್ಲಿ ತೋರುವ ವಾಸನಾಮಯ ಬ್ರಹ್ಮರೂಪವು ವಾಸ್ತವಬ್ರಹ್ಮನಲ್ಲ ಎಂದು ಪ್ರತಿಷೇಧಾತ್=ನಿಷೇಧಮಾಡಲ್ಪಟ್ಟಿದೆ. ಬ್ರಹ್ಮತರ್ಕದಲ್ಲಿ ಈ ವಿಷಯವಿದೆ.

ಶ್ರುತ್ಯರ್ಥ—ಯತ್=ಯಾವ ಬ್ರಹ್ಮನನ್ನು (ಸಾಧಕನು) ಮನಸಾ=ಮನಸ್ಸಿನಿಂದ ನ ಮನುತೇ=ತಿಳಿಯುವುದಿಲ್ಲವೋ ಯೇನ=ಯಾವ ಬ್ರಹ್ಮನಿಂದಲೇ ಮನಃ=ಮನಸ್ಸು ಮತಂ=ತಿಳಿಯಲ್ಪಟ್ಟದ್ದಾಗಿ ಆಗುವುದೋ ತದೇವ=ಅದನ್ನೇ ತ್ವಂ=ನೀನು ಬ್ರಹ್ಮ=ಬ್ರಹ್ಮನೆಂದು ವಿದ್ಧಿ=ತಿಳಿ. ಯತ್=ಯಾವುದನ್ನು ಉಪಾಸತೇ=ಸಾಧಕನು ಧ್ಯಾನದಲ್ಲಿ ಕಾಣುವನೋ ನೇದಂ ಬ್ರಹ್ಮ=ಅದು ಬ್ರಹ್ಮನಲ್ಲ. ಅದು ವಾಸನಾಮಯವಾದ ಬ್ರಹ್ಮನ ಪ್ರತಿಕೃತಿ ಮಾತ್ರ.

ಬ್ರಹ್ಮತರ್ಕ—ಚಿತ್ತೇ=ಧ್ಯಾನ ಮಾಡುವವನ ಮನಸ್ಸಿನಲ್ಲಿ ಯತ್ ಪ್ರತಿಬಿಂಬಿತಂ=ಯಾವುದು ಪ್ರತಿಕೃತಿಯಾಗಿ ಕಾಣುವುದೋ ಪ್ರತಿಬಿಂಬೇ=ಆ ಪ್ರತಿಕೃತಿಯಲ್ಲಿ ಯತ್=ಯಾವುದು ಇದೆಯೋ ತದೇವ=ಅದೇ ಪರಮಂ ಬ್ರಹ್ಮ=ಪರಬ್ರಹ್ಮನು. ಅತಃ=ಆ ಪ್ರತಿಬಿಂಬದಲ್ಲಿ ಸನ್ನಿಹಿತನಾಗಿರುವುದರಿಂದಾಗಿಯೇ ತೇಷಾಂ=ಧ್ಯಾನಿಸುವವರಿಗೆ ಫಲಪ್ರದಂ=ಫಲದಾಯಕವಾಗಿದೆ. ಯಥಾ=ಹೇಗೆ ಪ್ರತಿಮೋಪಾಸನಂ=ಕಲ್ಲಿನ ಪ್ರತಿಮೆಯ ಉಪಾಸನೆಯೋ ಅದರಂತೆಯೇ ತದುಪಾಸನಂ ಚ ಭವತಿ=ಧ್ಯಾನದಲ್ಲಿ ಬ್ರಹ್ಮೋಪಾಸನೆಯೂ ಆಗಿದೆ. ಜ್ಞಾನೇನೈವ=ಅಪರೋಕ್ಷಜ್ಞಾನದಿಂದಾಗಿಯೇ ಪರಂ ಪದಂ=ಮೋಕ್ಷವಾಗುವ ಕಾರಣದಿಂದ ಬ್ರಹ್ಮನು ಆಪರೋಕ್ಷ್ಯೇಣ=ಅಪರೋಕ್ಷವಾಗಿ

ದೃಶ್ಯತೇ=ಕಾಣಲ್ಪಡುತ್ತಾನೆ. ಉಪಾಸನಾ ತು=ಧ್ಯಾನವೇ ತತ್ಪ್ರಸಾದತಃ=ಬ್ರಹ್ಮಪ್ರಸಾದ ದಿಂದ ಆಪರೋಕ್ಷ್ಯಂ=ಅಪರೋಕ್ಷಜ್ಞಾನವನ್ನು ಗಮಯೇತ್=ಉಂಟುಮಾಡುತ್ತದೆ.

(ಅಲ್ಪವಾದ ಪಿಶಾಚಾದಿಗಳೇ ಅವುಗಳ ಆಕಾರಮಾತ್ರಧ್ಯಾನದಿಂದ ಕ್ಷುದ್ರಫಲ ಕೊಡುತ್ತವೆ. ಹೀಗಿರುವಾಗ ಸರ್ವಜ್ಞ ಬ್ರಹ್ಮನು ಫಲವನ್ನು ಕೊಡಲಾರನೇ. ತ.ಪ್ರ.)

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಓಂ ತಥಾಽನ್ಯತ್ ಪ್ರತಿಷೇಧಾತ್ ಓಂ ॥** (ಅತ್ರ ಈಶಸ್ಯ ಪ್ರಾಗುಕ್ತಾವ್ಯಕ್ತತ್ವಮೇವ ಸಾಧ್ಯತೇ । ತದಿತ್ಯಸ್ತಿ । ಧ್ಯಾನಪ್ರತೀತಾದಿತಿ ಶೇಷಃ । ಏತದರ್ಥೇ ಅತ ಇತ್ಯನುವೃತ್ತಿರ್ವಾ । ತದ್=ಬ್ರಹ್ಮ, ಧ್ಯಾನಪ್ರತೀತಾತ್ ಅನ್ಯತ್, ತಥಾ ಬ್ರಹ್ಮ ಆನಂದಾದಿವತ್ ಅನ್ಯತ್=ವಿಲಕ್ಷಣಮ್ । ನತು ತದೇವ । ಯೇನ ವ್ಯಕ್ತಂ ಸ್ಯಾದಿ ತ್ಯರ್ಥಃ । ಕುತಃ ? ಪ್ರತಿಷೇಧಾತ್='ಯನ್ಮನಸಾ ನ ಮನುತೇ' 'ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ' ಇತಿ ಧ್ಯಾನೇ ಪ್ರತೀತಸ್ಯ ಬ್ರಹ್ಮತ್ವಪ್ರತಿಷೇಧಾತ್, ಇತ್ಯರ್ಥಃ । ಅನ್ಯದಿತ್ಯೇವ ಪೂರ್ತೌ ತಥೇತ್ಯುಕ್ತಿಃ ಯಥಾ ಜೀವಾನಂದಾದೇಃ ಅಲ್ಪತ್ವಾದಿ ಹೇತೋಃ ತತೋಽನ್ಯದ್ ಬ್ರಹ್ಮಾನಂದಾದಿ, ತಥಾ ಉಪಾಸಾಕೃತಸ್ಯ ದುರ್ಲಕ್ಷಣಾದಿಹೇತೋಃ ತತೋಽನ್ಯತ್ ಬ್ರಹ್ಮೇತಿ ಪ್ರಾಗುಕ್ತನ್ಯಾಯಸೂಚನಾರ್ಥಾ । ತದನ್ವಯಾಯೈವ ಪರಮಿತ್ಯನುವೃತ್ತಾವಪಿ ಅನ್ಯದಿತ್ಯುಕ್ತಿಃ ।)

'ಅನ್ಯತ್' ಎಂಬ ಭೇದವಾಚಕಶಬ್ದಕ್ಕೆ ಪ್ರತಿಯೋಗಿವಾಚಕವಾದ ಧ್ಯಾನಪ್ರತೀತಾತ್, ಎಂಬ ಶಬ್ದವನ್ನು ಅಧ್ಯಾಹಾರ ಮಾಡಬೇಕು. ಆಗ ತತ್=ಆ ಬ್ರಹ್ಮನು ಧ್ಯಾನಪ್ರತೀತಾತ್ ಅನ್ಯತ್=ಧ್ಯಾನದಲ್ಲಿ ತೋರುವ ವಾಸನಾಮಯ ವಸ್ತುವಿಗಿಂತ ಭಿನ್ನವಾದುದು. ಏಕೆಂದರೆ, ಪ್ರತಿಷೇಧಾತ್=ಧ್ಯೇಯವಸ್ತುವಿಗೆ ಬ್ರಹ್ಮತ್ವವನ್ನು 'ನೇದಂ ಯದಿದಮುಪಾಸತೇ' ಎಂದು ನಿಷೇಧಿಸಲಾಗಿದೆ.

**ಇಲ್ಲಿಗೆ ಪ್ರತಿಷೇಧಾಧಿಕರಣವು ಮುಗಿಯಿತು.**

# ೧೯. ಸರ್ವಗತತ್ವಾಧಿಕರಣಮ್

**ದೇಶಕಾಲಾಂತರೇಽನ್ಯತೋಽಪಿ ಸೃಷ್ಟ್ಯಾದಿರ್ಯುಕ್ತಾ ಇತಿ; ಅತೋ ಬ್ರೂತೇ-**

**॥ ಓಂ ಅನೇನ ಸರ್ವಗತತ್ವಮಾಯಾಮಯಶಬ್ದಾದಿಭ್ಯಃ ಓಂ ॥ ೩೮॥**

**ಸರ್ವದೇಶಕಾಲವಸ್ತುಷ್ವನೇನೈವ ಸೃಷ್ಟ್ಯಾದಿಕಂ ಪ್ರವರ್ತತೇ ।**

**'ಏಷ ಸರ್ವ ಏಷ ಸರ್ವಗತ ಏಷ ಈಶ್ವರ(ಸರ್ವೇಶ್ವರ) ಏಷೋಽಚಿಂತ್ಯ ಏಷ ಪರಮಃ' ಇತಿ ಹಿ ಭಾಲ್ಲವೇಯಶ್ರುತಿಃ ।**

**'ಸರ್ವತ್ರ ಸರ್ವಮೇತಸ್ಮಾತ್ ಸರ್ವದಾ ಸರ್ವವಸ್ತುಷು ।**
**ಸ್ವರೂಪಭೂತಯಾ ನಿತ್ಯಶಕ್ತ್ಯಾ ಮಾಯಾಖ್ಯಯಾ ಯತಃ ।**
**ಅತೋ ಮಾಯಾಮಯಂ ವಿಷ್ಣುಂ ಪ್ರವದಂತಿ ಸನಾತನಮ್ ॥'**
**ಇತಿ ಹಿ ಚತುರ್ವೇದಶಿಖಾಯಾಮ್ ॥**

**ಆದಿಶಬ್ದಾದನ್ಯತ್ರ ಪ್ರಮಾಣಾಭಾವಾಚ್ಚ ॥**

ಕೆಲವೊಂದು ಕಡೆ ಅಥವಾ ಕೆಲವು ಕಾಲದಲ್ಲಿ ಪರಮಾತ್ಮನು ಲೀಲೆಗಾಗಿ ಅನ್ಯರಿಗೂ ಸ್ವಾತಂತ್ರ್ಯವನ್ನು ಕೊಡುತ್ತಾನೆ. ಅವರಿಂದಲೂ ಸೃಷ್ಟ್ಯಾದಿಗಳು ಆಗಬಹುದು, ಎಂದು ಸಂದೇಹವನ್ನು ನಿವಾರಿಸಲು ಸೂತ್ರಕಾರರು 'ಅನೇನ' ಎಂಬ ಸೂತ್ರವನ್ನು ಹೇಳಿದ್ದಾರೆ. ಸರ್ವದೇಶ–ಕಾಲಗಳಲ್ಲಿ ಸಕಲವಸ್ತುಗಳಿಗೂ ಬ್ರಹ್ಮನಿಂದಲೇ ಸೃಷ್ಟ್ಯಾದಿಗಳು ನಡೆಯುತ್ತವೆ. ಏಕೆಂದರೆ, ಅವನು ಸರ್ವಗತ–ಏಷ ಸರ್ವಃ, ಎಂಬ ಶ್ರುತಿ ಹೇಳುವಂತೆ. ಭಾಲ್ಲವೇಯಶ್ರುತಿಯು ಅದಕ್ಕೆ ಪ್ರಮಾಣವಾಗಿದೆ. (ಸರ್ವಸೃಷ್ಟಿಗಾಗಿಯೇ ಅವನು ಸರ್ವದೇಶ–ಕಾಲಗತನಾಗಿದ್ದಾನೆ. 'ಅನುಪ್ರವಿಶ್ಯ ನಾಮರೂಪೇ ವ್ಯಾಕರೋತ್' ಎಂದು ಸರ್ವವಸ್ತುಗಳ ಒಳಗೆ ಪ್ರವೇಶಿಸಿ ನಾಮ–ರೂಪಾತ್ಮಕವಾದ ಪ್ರಪಂಚವನ್ನು ಸೃಷ್ಟಿಮಾಡಲು ಅವನು ಸರ್ವಗತನಾಗಬೇಕು.)

'ಮಾಯಾಮಯಶಬ್ದಾದಿಭ್ಯಃ' ಎಂದರೆ ಮಾಯಾಮಯ ಶಬ್ದವನ್ನು ವಿವರಿಸುವ ಶ್ರುತಿಯೂ ಇದಕ್ಕೆ ಆಧಾರವಾಗಿದೆ. ಅಂತಹ ಶ್ರುತಿ ಚತುರ್ವೇದ ಶಿಖೆಯಲ್ಲಿದೆ–ಎಲ್ಲೆಡೆಯೂ ಎಲ್ಲಾ ಕಾಲದಲ್ಲೂ ಎಲ್ಲವೂ ಬ್ರಹ್ಮನಿಂದಲೇ ಸೃಷ್ಟಿಯಾಗುತ್ತದೆ. ಅವನ ಸ್ವರೂಪಭೂತವಾದ ಮಾಯಾ ಎಂಬ ಹೆಸರಿನ ಶಕ್ತಿಯು ಸರ್ವವಸ್ತುವಿಷಯಕವಾಗಿದೆ. ಅದರಿಂದಾಗಿಯೇ ಸನಾತನನಾದ ವಿಷ್ಣುವನ್ನು ಮಾಯಾಮಯ, ಎನ್ನುತ್ತಾರೆ.

ಸೂತ್ರದ ಆದಿಶಬ್ದದಿಂದ ಬೇರೆ ದೇಶಕಾಲಗಳಲ್ಲಿ ಅನ್ಯರಿಂದ ಸೃಷ್ಟಿಯು ನಡೆಯುತ್ತದೆ ಎನ್ನಲು ಪ್ರಮಾಣವೂ ಇಲ್ಲ, ಎಂದು ಸೂಚಿಸಲಾಗಿದೆ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ಅನೇನ ಸರ್ವಗತತ್ವಮಾಯಾಮಯಶಬ್ದಾದಿಭ್ಯಃ ಓಂ ॥** (ಅತ್ರೇಶಸ್ಯ ಜಗತ್‌ಕರ್ತೃತ್ವಂ ಸಾಧ್ಯತೇ। ಸರ್ವಸೃಷ್ಟ್ಯಾದೀತಿ ಶೇಷಃ । ಅನೇನೇತಿ ಸಾವಧಾರಣಮ್ । ಅನೇನ=ಪ್ರಕೃತೇನ ಈಶೇನೈವ ಸರ್ವಸೃಷ್ಟ್ಯಾದಿ। ನ ದೇಶಾಂತರಾದೌ ಅನ್ಯೇನ।

ಕುತಃ ? ಸರ್ವಗತತ್ವಾತ್='ಏಷ ಸರ್ವಃ, ಏಷ ಸರ್ವಗತಃ' ಇತಿ ಸರ್ವಗತತ್ವ ಶ್ರವಣಾತ್। 'ಮಾಯಾಮಯ' ಇತಿ ವಿಷ್ಣೌ ಮಾಯಾಮಯಶಬ್ದಂ ವ್ಯಾಕುರ್ವತೀ ಶ್ರುತಿಃ ಗೃಹ್ಯತೇ । 'ಸರ್ವತ್ರ ಸರ್ವಮೇತಸ್ಮಾತ್' ಇತಿ ಮಾಯಾಮಯಶಬ್ದವ್ಯಾಖ್ಯಾಶ್ರುತೇಃ । ಆದಿಪದಸ್ಯ ಅನ್ಯತ್ರ ಪ್ರಮಾಣಾಭಾವಾದಿತ್ಯರ್ಥಃ ।)

ಸರ್ವಕ್ಕೂ ಸೃಷ್ಟ್ಯಾದಿಗಳು ಅನೇನ–ಅನೇನೈವ=ವಿಷ್ಣುವಿನಿಂದಲೇ ಆಗುತ್ತವೆ, ಎಲ್ಲೂ ಎಂದೂ ಇತರರಿಂದ ಆಗುವುದಿಲ್ಲ. ಏಕೆಂದರೆ, ಅವನು ಸರ್ವಗತನಾಗಿದ್ದಾನೆ. ಎಲ್ಲೆಡೆಯೂ ಅವನಿರುವುದರಿಂದ ಎಲ್ಲದರೊಳಗೂ ಪ್ರವೇಶ ಮಾಡಿ ಅವನೇ ಸೃಷ್ಟಿ ಮಾಡುತ್ತಾನೆ. ವಿಷ್ಣುವಿಗೆ ಮಾಯಾಮಯನೆಂಬ ನಾಮವನ್ನು ಅನ್ವರ್ಥಗೊಳಿಸುವ ಶ್ರುತಿಯೂ ಇದಕ್ಕೆ ಆಧಾರವಾಗಿದೆ. ಆದಿಶಬ್ದದಿಂದ ಇತರರಿಗೆ ಸೃಷ್ಟಿಕರ್ತೃತ್ವವನ್ನು ಹೇಳಲು ಆಧಾರಗಳೂ ಇಲ್ಲ, ಎಂದು ಹೇಳಲಾಗಿದೆ.

## ಅದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

ಅದ್ವೈತಭಾಷ್ಯ ಮತ್ತು ರಾಮಾನುಜಭಾಷ್ಯದಂತೆ 'ಪರಮತಃ...' ಇತ್ಯಾದಿ 32ನೆಯ ಸೂತ್ರದಿಂದ ಮೂವತ್ತೆಂಟನೆಯ ಈ ಸೂತ್ರದವರೆಗೆ ಒಟ್ಟು ಏಳು ಸೂತ್ರಗಳು ಒಂದು ಅಧಿಕರಣ. ಎರಡನೆಯ ಸೂತ್ರ ಅಂದರೆ 33ನೇ ಸೂತ್ರ 'ದರ್ಶನಾತ್' ಎಂದು ದ್ವೈತಭಾಷ್ಯದಲ್ಲಿದ್ದರೆ, ಅದರ ಬದಲು 'ಸಾಮಾನ್ಯಾತ್ತು' ಎಂದು ಆ ಎರಡು ಭಾಷ್ಯಗಳಲ್ಲಿ ಇದೆ.

**॥ ಪರಮತಃ ಸೇತೂನ್ಮಾನಸಂಬಂಧಭೇದವ್ಯಪದೇಶೇಭ್ಯಃ ॥** ಇದು ಪೂರ್ವಪಕ್ಷಸೂತ್ರ. ಬ್ರಹ್ಮನಿಗಿಂತ ಭಿನ್ನವಾದ ವಸ್ತು ಇದೆ ಎನ್ನಲು ನಾಲ್ಕು ಕಾರಣಗಳನ್ನು ಇಲ್ಲಿ ಕೊಡಲಾಗಿದೆ. ಅತಃ ಪರಂ=ಬ್ರಹ್ಮಭಿನ್ನವಾದುದೂ ಇದೆ.

೧. **ಸೇತುತ್ವವ್ಯಪದೇಶಾತ್**–'ಅಥ ಯ ಆತ್ಮಾ ಸ ಸೇತುರ್ವಿಧೃತಿಃ' (ಛಾಂ.8.4.1) ಎಂದು ಆತ್ಮನನ್ನು ಸೇತು ಎನ್ನಲಾಗಿದೆ. ನೀರನ್ನು ಹರಿಯದಂತೆ ತಡೆಯುವ ಮಣ್ಣು–ಮರಗಳಿಂದ ತಯಾರಿಸಿದ ಪಾತ್ರೆಗಳು ಸೇತುಗಳು. ಅಂತಹ ಪಾತ್ರೆಗಳಿಂದ ಭಿನ್ನವಾದ ವಸ್ತುಗಳು ಇರುವುದರಿಂದ ಆತ್ಮರೂಪಸೇತುಭಿನ್ನವಾದ ವಸ್ತುವೂ ಇರಬೇಕು.

೨. **ಉನ್ಮಾನತ್ವವ್ಯಪದೇಶಾತ್**–ಬ್ರಹ್ಮನನ್ನು ಚತುಷ್ಪಾದ, ಅಷ್ಟಶಫ, ಷೋಡಶಕಲ ನೆಂದು ಮುಂತಾಗಿ ಪರಿಮಿತನನ್ನಾಗಿ ಹೇಳಲಾಗಿದೆ. ಪರಿಮಿತವಸ್ತುಗಳು ಲೋಕದಲ್ಲಿ ಸದ್ವಿತೀಯವಾಗಿ ಕಂಡಿವೆ.

೩. **ಸಂಬಂಧವ್ಯಪದೇಶಾತ್**—'ಸತಾ ಸೋಮ್ಯ ತದಾ ಸಂಪನ್ನೋ ಭವತಿ' (ಛಾ.6.8.1) ಹೀಗೆ ಜೀವೇಶರಿಗೆ ಸಂಬಂಧವನ್ನು ಹೇಳಲಾಗಿದೆ. ಪರಿಮಿತ ವಸ್ತುಗಳಿಗೆ ಪರಸ್ಪರಸಂಬಂಧವು ಸಾಧ್ಯ—'ಯಥಾ ನರಾಣಾಂ ನಗರೇಣ' ಇದರಿಂದಲೂ ಬ್ರಹ್ಮಾನ್ಯವು ಇದೆ, ಎಂದು ತಿಳಿಯಬಹುದು.

೪. **ಭೇದವ್ಯಪದೇಶಾತ್**—'ಅಥ ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ'(ಛಾಂ.1.6.6) ಎಂದು ಆದಿತ್ಯನೊಳಗಿರುವ ಪುರುಷನ ಉಲ್ಲೇಖ ಮಾಡಿ 'ಅಥ ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ' (1.7.5) ಎಂದು ಅಕ್ಷಿಸ್ಥ ಪುರುಷನ ಪ್ರಸ್ತಾವ ಇದೆ. ಇದು ಮಾಗಧನ ರಾಜ್ಯ, ಇದು ವಿದೇಹನ ರಾಜ್ಯ, ಎಂದಂತೆ ಇಲ್ಲಿ ವಿಭಿನ್ನ ಸ್ಥಾನಗತ ಪುರುಷರನ್ನು ಭೇದೇನ ಉಲ್ಲೇಖ ಮಾಡಲಾಗಿದೆ.

ಈ ಕಾರಣಗಳಿಂದ ಆತ್ಮಭಿನ್ನವಾದುದೂ ಇದೆ.

ಈ ಪೂರ್ವಪಕ್ಷಕ್ಕೆ ಉತ್ತರ—

**॥ ಸಾಮಾನ್ಯಾತ್ತು ॥** ಇಲ್ಲಿನ ತುಶಬ್ದದಿಂದ ಪೂರ್ವಪಕ್ಷವನ್ನು ನಿರಾಕರಿಸಲಾಗಿದೆ. ಸೇತುವ್ಯಪದೇಶದಿಂದ ಸೇತುಭಿನ್ನವಾದುದನ್ನು ಕಲ್ಪಿಸಬಾರದು. ಧಾರಕತ್ವಸಾಮಾನ್ಯ ದಿಂದಾಗಿ ಬ್ರಹ್ಮನಿಗೆ ಸೇತು ಸಾಮ್ಯವು ಉಪಪನ್ನವಾಗುತ್ತದೆ. ಸೇತುವಿನಂತೆ ಸರ್ವಸಾಮ್ಯವು ವಿವಕ್ಷಿತವಲ್ಲ. ಏಕೆಂದರೆ 'ಸದೇವ ಸೋಮ್ಯ' ಎಂಬ ಶ್ರುತಿಯು ಸೃಷ್ಟಿಪೂರ್ವದಲ್ಲಿ ಆತ್ಮಾತಿರಿಕ್ತವನ್ನು ನಿರಾಕರಿಸಿದೆ.

**॥ ಬುದ್ಧ್ಯರ್ಥಃ ಪಾದವತ್ ॥** ವ್ಯಾಪ್ತನಾದ ಬ್ರಹ್ಮನ ಉಪಾಸನೆಗಾಗಿ ಅವನ ಕಲ್ಪಿತ ಪರಿಮಿತರೂಪಗಳನ್ನು ಹೇಳಲಾಗಿದೆ. ಬುದ್ಧ್ಯರ್ಥಃ=ಉಪಾಸನಾರ್ಥಃ, ಪಾದವತ್–ಮನಸ್ಸು ಹೊರಪ್ರಪಂಚದ ಸಂಪರ್ಕ ಹೊಂದಲು ಮಾರ್ಗವಾದುದರಿಂದ ಮೂಗು, ನಾಲಿಗೆ, ಕಣ್ಣು, ಕಿವಿಗಳು ಕಾಲಿನಂತಿವೆ, ಎಂದು ಪಾದತ್ವೇನ ನಿರೂಪಣೆ ಹೇಗೆ ಕಲ್ಪನೆಯೋ ಅದರಂತೆ ಬ್ರಹ್ಮನ ಪರಿಮಿತತ್ವ ನಿರೂಪಣೆ.

**॥ ಸ್ಥಾನವಿಶೇಷಾತ್ ಪ್ರಕಾಶಾದಿವತ್ ॥** ಈ ಸೂತ್ರದಲ್ಲಿ ಸಂಬಂಧವ್ಯಪದೇಶ ಮತ್ತು ಭೇದವ್ಯಪದೇಶ ಎಂಬ ಎರಡು ಕಾರಣಗಳನ್ನು ನಿರಾಕರಿಸಲಾಗಿದೆ. ಜಾಗ್ರತ್–ಸ್ವಪ್ನಾವಸ್ಥೆಗಳಲ್ಲಿ 'ಬುದ್ಧಿ' ಎಂಬ ಉಪಾಧಿಯ ಸಂಬಂಧದಿಂದಾಗಿ ಅನೇಕ ಜ್ಞಾನಗಳನ್ನು ಪಡೆದುಕೊಳ್ಳುವುದರಿಂದ ಆತ್ಮನು ಭಿನ್ನನಾಗಿ ಕಾಣುತ್ತಾನೆ. ಬುದ್ಧಿಯು ಉಪರತವಾದಾಗ ಅವನು ಸುಷುಪ್ತಿಯಲ್ಲಿ ಶುದ್ಧನಾದ ಆತ್ಮನಾಗುತ್ತಾನೆ. ಹೀಗೆ ಬುದ್ಧಿರೂಪ ಉಪಾಧಿ ಪ್ರಯುಕ್ತವಾಗಿ 'ಸತಾ ಸಂಪನ್ನಃ' ಎಂಬ ಸಂಬಂಧ ವ್ಯಪದೇಶ.

ಅದರಂತೆ, ಸೂರ್ಯನ ಕಿರಣ ಒಂದೇ ಆದರೂ ಕಿಟಕಿಯ ಕಿಂಡಿಗಳ ಮೂಲಕ ಮನೆಯ ಒಳಗೆ ಬಿಸಿಲು ಬಿದ್ದಾಗ ಅನೇಕವಾಗಿ ಕಾಣುತ್ತದೆ. ಅದರಂತೆ ಒಬ್ಬನೇ ಆತ್ಮನು ಆದಿತ್ಯಾದಿಭಿನ್ನಸ್ಥಾನಗತನಾದಾಗ ಭಿನ್ನನಾಗಿ ಕಾಣುತ್ತಾನೆ. ವಸ್ತುತಃ ಆತ್ಮಭೇದವಿಲ್ಲ.

**॥ ಉಪಪತ್ತೇಶ್ಚ ॥** ಈರೀತಿಯ ಸಂಬಂಧವೇ ಉಪಪನ್ನವಾಗುತ್ತದೆ, ಬೇರೆ ರೀತಿಯ ಸಂಬಂಧ ಅನುಪಪನ್ನ. ಶ್ರುತಿಯು ನಿದ್ರಾಕಾಲದಲ್ಲಿ 'ಸ್ವಂ ಅಪೀತೋ ಭವತಿ' (ಛಾಂ.6.8.1) ಎಂದಿದೆ. ಜೀವನು 'ಸ್ವಂ' ತನ್ನ ನಿಜರೂಪದಲ್ಲಿ ಲಯವಾಗುತ್ತಾನೆ, ಎಂದರ್ಥ. ಎಚ್ಚರದ ರೂಪ ಔಪಾಧಿಕರೂಪ. ಬುದ್ಧಿಯ ಉಪರಮರೂಪವಾದ ನಿದ್ರಾಕಾಲದ ರೂಪ 'ಸ್ವಂ' ಸ್ವಸ್ವರೂಪ. ಆದ್ದರಿಂದ ಸಂಬಂಧವ್ಯಪದೇಶ ಔಪಾಧಿಕ, ಸ್ವಾಭಾವಿಕವಲ್ಲ.

**॥ ತಥಾಽನ್ಯಪ್ರತಿಷೇಧಾತ್ ॥** ಪರಪಕ್ಷವನ್ನು ನಿರಾಕರಿಸಿ ಸೂತ್ರಕಾರರು ಸ್ವಪಕ್ಷವನ್ನು ಈ ಸೂತ್ರದಲ್ಲಿ ಹೇಳಿದ್ದಾರೆ. ಅನ್ಯಸ್ಯ=ಬ್ರಹ್ಮಭಿನ್ನದ (ಶ್ರುತಿಗಳಲ್ಲಿ) ಪ್ರತಿಷೇಧಾತ್=ನಿರಾಕರಿಸಿರುವುದರಿಂದಾಗಿ ತಥಾ=ಬ್ರಹ್ಮಭಿನ್ನವಾದುದು ಇಲ್ಲ. 'ಆತ್ಮೈವೇದಂ ಸರ್ವಂ'(ಛಾಂ.7.25.2) 'ನೇಹ ನಾನಾಸ್ತಿ ಕಿಂಚನ'(ಬೃ.4.4.19) ಯಸ್ಮಾತ್ ಪರಂ ನಾಪರಮಸ್ತಿ ಕಿಂಚಿತ್।(ಶ್ವೇ.3.9) ಎಂದು ಬ್ರಹ್ಮಾತಿರಿಕ್ತ ನಿಷೇಧಕ ಶ್ರುತಿಗಳಿವೆ.

**॥ ಅನೇನ ಸರ್ವಗತತ್ವಮಾಯಾಮಶಬ್ದಾದಿಭ್ಯಃ ॥** ಅನೇನ= ಬ್ರಹ್ಮಾನ್ಯವಸ್ತು ಸಾಧಕವಾದ ಸೇತುತ್ವಾದಿಕಾರಣಗಳ ನಿರಾಕರಣೆಯಿಂದ ಬ್ರಹ್ಮನಿಗೆ ಆಯಾಮಶಬ್ದಾದಿಭ್ಯಃ=ಸರ್ವತ್ರ ವ್ಯಾಪ್ತಿವಾಚಕಶಬ್ದಗಳುಳ್ಳ ಶ್ರುತಿಗಳಿಂದ ಅಂದರೆ 'ಯಾವಾನ್ವಾ ಅಯಮಾಕಾಶಃ ತಾವಾನೇಷೋಽಂತರ್ಹೃದಯ ಆಕಾಶಃ' 'ಜ್ಯಾಯಾನಾಕಾಶಾತ್' ಈ ಮುಂತಾದ ಶ್ರುತಿಗಳಿಂದ ಸರ್ವಗತತ್ವಂ=ಸರ್ವತ್ರ ವ್ಯಾಪ್ತಿಯು ಉಪಪನ್ನವಾಗುತ್ತದೆ. ಅವನು ಪರಿಚ್ಛಿನ್ನನಾದರೆ, ಅವನಿಗಿಂತ ಭಿನ್ನವಾದ ಸತ್ಯವಸ್ತುಗಳು ಇದ್ದಿದ್ದರೆ ಅವನಿಗೆ ಸರ್ವಗತತ್ವ ಇರಲು ಸಾಧ್ಯವಾಗುತ್ತಿರಲಿಲ್ಲ. (ಇಲ್ಲಿ ಸೂತ್ರಪದವಿಭಾಗ ಮಾಧ್ವಪದವಿಭಾಗಕ್ಕಿಂತ ಭಿನ್ನವಾಗಿದೆ.)

**ವಿಮರ್ಶೆ**—ಆರಂಭಣಾಧಿಕರಣದಲ್ಲಿ(2.1.15) ಪ್ರಕೃತ್ಯಧಿಕರಣದಲ್ಲಿ(3.2.22) ಬ್ರಹ್ಮಾತಿರಿಕ್ತವಸ್ತು ಮಿಥ್ಯಾ ಎಂದು ಈಗಾಗಲೇ ಹೇಳಲಾಗಿದೆ. ಮತ್ತೆ ಅದನ್ನೇ ಇಲ್ಲಿ ಹೇಳಿರುವುದರಿಂದ ಪುನರುಕ್ತಿ.

ಬ್ರಹ್ಮಾತಿರಿಕ್ತ ಸತ್ಯ ಎಂದು ಸೇತುತ್ವಾದಿಯುಕ್ತಿಗಳಿಂದ ಸಾಧಿಸುವ ಪ್ರಯಾಸ

ವ್ಯರ್ಥ. 'ವಿಶ್ವಂ ಸತ್ಯಂ' ಎಂಬ ಶ್ರುತಿಯೇ ಸ್ಪಷ್ಟವಾಗಿ ವಿಶ್ವಸತ್ಯತ್ವವನ್ನು ಹೇಳುತ್ತದೆ, ಎಂದೇ ಸುಲಭವಾಗಿ ಪೂರ್ವಪಕ್ಷವನ್ನು ಮಾಡಬಹುದಾಗಿತ್ತು.

ಎರಡನೆಯ ಸೂತ್ರ 'ದರ್ಶನಾತ್' ಎಂದಿದ್ದರೂ ಅದನ್ನು 'ಸಾಮಾನ್ಯಾತ್ತು' ಎಂದು ಬದಲಿಸಿ ಸೇತು ಜಲಧಾರಕವಾಗಿರುವಂತೆ ಬ್ರಹ್ಮನೂ ಜಗದ್ಧಾರಕ ಎಂಬ ಸಾಮಾನ್ಯಾಂಶದಲ್ಲಿ ದೃಷ್ಟಾಂತ ಎಂದು ಅರ್ಥಮಾಡಲಾಗಿದೆ. ಹೀಗೆ ಹೇಳಿದರೂ ಲೌಕಿಕ ಸೇತು ಇತರ ಸಾಪೇಕ್ಷವಾದಂತೆ ಬ್ರಹ್ಮನಿಗೂ ಇತರ ಸಾಪೇಕ್ಷತ್ವ ಅನಿವಾರ್ಯ.

## ವಿಶಿಷ್ಟಾದ್ವೈತ ದರ್ಶನದಲ್ಲಿ ಸೂತ್ರಗಳ ಅರ್ಥ

ರಾಮಾನುಜಭಾಷ್ಯದಲ್ಲಿ ಈ ಏಳು ಸೂತ್ರಗಳು ಒಂದು ಅಧಿಕರಣ. ಎರಡನೆಯ ಸೂತ್ರಪಾಠವೂ ಅದ್ವೈತಭಾಷ್ಯದಂತೆಯೇ ಇದೆ. ಕೊನೆಯ ಸೂತ್ರದಲ್ಲೂ 'ಆಯಾಮಶಬ್ದೇಭ್ಯಃ' ಎಂದೇ ಸೂತ್ರಪಾಠ. ಆರನೆಯ ಸೂತ್ರಪಾಠ ದ್ವೈತಭಾಷ್ಯದಲ್ಲಿ 'ತಥಾನ್ಯತ್ ಪ್ರತಿಷೇಧಾತ್' ಎಂದಿದ್ದರೆ ಈ ಭಾಷ್ಯಗಳಲ್ಲಿ 'ತಥಾನ್ಯಪ್ರತಿಷೇಧಾತ್' ಎಂದು.

**॥ ಪರಮತಃ ಸೇತೂನ್ಮಾನಸಂಬಂಧಭೇದವ್ಯಪದೇಶೇಭ್ಯಃ ॥** ಈ ಸೂತ್ರದಲ್ಲಿ ಬ್ರಹ್ಮನಿಗಿಂತಲೂ ಉತ್ತಮಪುರುಷನಿದ್ದಾನೆ, ಎಂದು ಪೂರ್ವಪಕ್ಷವನ್ನು ಮಾಡಲಾಗಿದೆ.

ಅತಃ ಪರಂ ಅಸ್ತಿ=ಬ್ರಹ್ಮನಿಗಿಂತಲೂ ಉತ್ತಮವಾದ ಪ್ರಾಪ್ಯವಸ್ತು ಇದೆ.

೧. **ಸೇತುತ್ವವ್ಯಪದೇಶಾತ್**–ಬ್ರಹ್ಮನು 'ಏಷ ಸೇತುರ್ವಿಧೃತಿಃ' ಎಂದು ಸೇತುವೆ ಎನ್ನಲಾಗಿದೆ. ಸೇತುವೆ ಆಚೆದಡ ಸೇರಲು ಇರುವ ಒಂದು ಸಾಧನ. ಅದರಂತೆ ಬ್ರಹ್ಮನೂ ಮತ್ತೊಂದು ಗಮ್ಯವನ್ನು ಹೊಂದಲು ಸಾಧನ. ಆದ್ದರಿಂದ ಬ್ರಹ್ಮನಾಚೆಗೂ ಗಮ್ಯ ಒಂದಿದೆ.

೨. **ಉನ್ಮಾನತ್ವವ್ಯಪದೇಶಾತ್**–ಉನ್ಮಿತಂ=ಪರಿಮಿತಂ ಮಾನಂ=ಪರಿಮಾಣಂ ಯಸ್ಯ. ''ಚತುಷ್ಪಾದ್ ಬ್ರಹ್ಮ'' ಎಂದು ಬ್ರಹ್ಮನಿಗೆ ಪರಿಮಿತಿಯನ್ನು ಹೇಳಲಾಗಿದೆ. ಆದ್ದರಿಂದ ಅಪರಿಮಿತನಾದ ಇನ್ನೊಬ್ಬನಿದ್ದಾನೆ.

೩. **ಸಂಬಂಧವ್ಯಪದೇಶಾತ್**–'ಅಮೃತಸ್ಯ ಪರಂ ಸೇತುಂ ದಗ್ಧೇಂಧನ-ಮಿವಾನಲಮ್' (ಶ್ವೇ.6.29) 'ಅಮೃತಸ್ಯ ಏಷ ಸೇತುಃ'(ಮುಂ.2.2.5) ಸೇತುವಾದ ಬ್ರಹ್ಮನಿಗೂ ಅಮೃತನಿಗೂ ಪ್ರಾಪ್ಯ-ಪ್ರಾಪಕತ್ವಸಂಬಂಧವನ್ನು ಹೇಳಲಾಗಿದೆ.

೪. **ಭೇದವ್ಯಪದೇಶಾತ್**—'ಪರಾತ್ ಪರಂ ಪುರುಷಮುಪೈತಿ' ಎಂದೂ 'ತತೋ ಯದುತ್ತರತರಂ ತದರೂಪಮವ್ಯಯಮ್'(ಶ್ವೇ.3.10) ಎಂದು ಪರನಿಗೂ ಪರವಾದ, ಭಿನ್ನವಾದ ತತ್ತ್ವವಿದೆ, ಎಂದು ಶ್ರುತವಾಗಿದೆ.

**॥ ಸಾಮಾನ್ಯಾತ್ತು ॥** ಸೇತುಶಬ್ದಕ್ಕೆ ಲೋಕಸಿದ್ಧಸೇತುವೆಂದು ಅರ್ಥವಲ್ಲ. ಸಿನೋತಿ=ಬಧ್ನಾತಿ ಸ್ವಸ್ಮಿನ್ ಸರ್ವಂ= ಚಿದಚಿದ್ವಸ್ತುಜಾತಂ ಇತಿ ಸೇತುಃ । ಚಿದಚಿದಾತ್ಮಕ ಪ್ರಪಂಚವನ್ನು ಅಸಂಕೀರ್ಣವಾಗಿ (ಸಂಕರವಾಗದಂತೆ) ಧರಿಸುವ ಬ್ರಹ್ಮನೇ ಸೇತು. 'ಏಷ ಸೇತುರ್ವಿಧೃತಿಃ' ಎಂದು ಉಪನಿಷತ್ತು ಇದನ್ನೇ ಹೇಳಿದೆ.

**॥ ಬುದ್ಧ್ಯರ್ಥಃ ಪಾದವತ್ ॥** ಬ್ರಹ್ಮನಿಗೆ 'ಚತುಷ್ಪಾದ್' ಎಂದು ಮುಂತಾಗಿ ಪರಿಮಿತಿಯನ್ನು ಹೇಳಿರುವುದು ಉಪಾಸನಾರ್ಥವಾಗಿ. ವಸ್ತುತಃ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಶ್ರುತಿ ಹೇಳುವಂತೆ ಬ್ರಹ್ಮನು ಅಪರಿಚ್ಛಿನ್ನನಾಗಿದ್ದಾನೆ.

**॥ ಸ್ಥಾನವಿಶೇಷಾತ್ ಪ್ರಕಾಶಾದಿವತ್ ॥** ಬ್ರಹ್ಮನಿಗೆ ವಾಗಾದೀಂದ್ರಿಯ ಉಪಾಧಿ ಪ್ರಯುಕ್ತವಾಗಿ ಪರಿಮಿತತ್ವವನ್ನು ಹೇಳಲಾಗಿದೆ. ಪ್ರಕಾಶವು ಘಟಾದಿ ಪರಿಮಿತ ವಸ್ತುಗಳ ಒಳಗೆ ಪರಿಮಿತವಾಗಿರುವಂತೆ.

**॥ ಉಪಪತ್ತೇಶ್ಚ ॥** ಅಮೃತಸ್ಯೈಷ ಸೇತುಃ–ಎಂಬ ವ್ಯಪದೇಶ ಬ್ರಹ್ಮನು ಅನ್ಯಪ್ರಾಪ್ತಿಗೆ ಸೇತು, ಎಂಬ ಅರ್ಥದಲ್ಲಿ ಅಲ್ಲ. ತನ್ನ ಪ್ರಾಪ್ತಿಗೆ ತಾನೇ ಸಾಧನ, ಎಂದು ಅದರ ಅರ್ಥ. 'ನಾಯಮಾತ್ಮಾ ಪ್ರವಚನೇನ ಲಭ್ಯಃ' ಇತ್ಯಾದಿ ಶ್ರುತಿಗಳು ಇದನ್ನೇ ಹೇಳುತ್ತವೆ.

**॥ ತಥಾಽನ್ಯಪ್ರತಿಷೇಧಾತ್ ॥** 'ಪರಾತ್ ಪರಂ' ಎಂದು ಬ್ರಹ್ಮನಿಗಿಂತ ಪರವಿದೆ, ಎನ್ನುವುದೂ ಸೂಕ್ತವಲ್ಲ. 'ಯಸ್ಮಾತ್ ಪರಂ ನಾಪರಮಸ್ತಿ' ಎಂದು ಪರವಸ್ತು ಇಲ್ಲ, ಎಂದು ನಿಷೇಧಿಸಲಾಗಿದೆ.

**॥ ಅನೇನ ಸರ್ವಗತತ್ವಮಾಯಾಮಶಬ್ದಾದಿಭ್ಯಃ ॥** ಅನೇನ= ಬ್ರಹ್ಮನಿಂದ ಸರ್ವಗತತ್ವಂ=ಸರ್ವಜಗದ್ವ್ಯಾಪ್ತತ್ವವು ಆಯಾಮಶಬ್ದಾದಿಭ್ಯಃ= 'ತೇನೇದಂ ಪೂರ್ಣಂ ಪುರುಷೇಣ ಸರ್ವಮ್' ಎಂಬ ಶ್ರುತಿಗಳಿಂದ ತಿಳಿಯುತ್ತದೆ. ಆದ್ದರಿಂದ ಅದೇ ಪರಬ್ರಹ್ಮ, ಅದಕ್ಕಿಂತ ಪರತತ್ತ್ವವಿಲ್ಲ.

**ವಿಮರ್ಶೆ**—ಬ್ರಹ್ಮನಿಗಿಂತ ಉತ್ತಮ ವಸ್ತು ಇಲ್ಲವೆಂದು ಹಿಂದೆ 'ಪ್ರಕೃತೈತಾವತ್ತ್ವಂ' ಎಂಬ ಸೂತ್ರದ(3.2.21) ವಿಷಯಶ್ರುತಿಯಲ್ಲಿ ಸ್ಪಷ್ಟವಿದೆ. ಆ ಸೂತ್ರದ 'ಬ್ರವೀತಿ ಚ

ಭೂಯಃ' ಎಂಬ ಅಂಶವನ್ನು ವ್ಯಾಖ್ಯಾನಿಸುವಾಗ ''ನ ಹ್ಯೇತಸ್ಮಾದಿತಿ ನೇತ್ಯನ್ಯತ್ ಪರಮಸ್ತಿ'' ಎಂಬ ಶ್ವೇತಾಶ್ವತರೋಪನಿಷತ್ತಿನಲ್ಲಿ ಬ್ರಹ್ಮನಿಗಿಂತ ಉತ್ತಮವಾದುದು ಇಲ್ಲ, ಎಂದು ಹೇಳಲಾಗಿದೆ. 'ಅಕ್ಷರಮಂಬರಾಂತಧೃತೇಃ'(1.3.10) ಎಂಬ ಸೂತ್ರದಲ್ಲೂ ಅವ್ಯಾಕೃತಾಕಾಶ (ಭೂತಸೂಕ್ಷ್ಮ) ಪರ್ಯಂತವಾದ ಜಗದ್ಧಾರಕತ್ವವು ಹೇಳಲ್ಪಟ್ಟಿದೆ. ಅದನ್ನು ಹೇಳುವ ಶ್ರುತಿ 'ನಾನ್ಯದತೋಽಸ್ತಿ ವಿಜ್ಞಾತೃ ಏತಸ್ಮಿನ್ ಖಲು ಅಕ್ಷರೇ ಗಾರ್ಗಿ ಆಕಾಶಃ ಓತಶ್ಚ ಪ್ರೋತಶ್ಚ' ಎಂದು. ಇಲ್ಲಿ ಅಕ್ಷರನಿಗಿಂತಲೂ ಅನ್ಯಜ್ಞಾತೃ ಇಲ್ಲ, ಎಂದು ನಿಷೇಧ ಮಾಡಲಾಗಿದೆ. ಹೀಗಾಗಿ ಅಂತಹ ಅಕ್ಷರ, ಬ್ರಹ್ಮನೇ ಆಗಿದ್ದಾನೆ, ಎಂದು 'ಅನ್ಯಭಾವವ್ಯಾವೃತ್ತೇಶ್ಚ' ಎಂದು ಈ ಅಧಿಕರಣದ ಶೇಷಸೂತ್ರ (1.3.11) ಹೇಳುತ್ತದೆ. ಇಷ್ಟಾದರೂ ಯುಕ್ತ್ಯಾಭಾಸಗಳಿಂದ ಬ್ರಹ್ಮನಿಗಿಂತಲೂ ಉತ್ತಮನಿದ್ದಾನೆ, ಎಂದು ಶಂಕೆ ಮಾಡಿ ಸಮಾಧಾನ ಮಾಡುತ್ತಾ ಹೋದರೆ ಇಂತಹ ಅನೇಕ ಯುಕ್ತಿಗಳನ್ನು ಹೇಳಬಹುದಾದ್ದರಿಂದ ಶಾಸ್ತ್ರಾಪರ್ಯವಸಾನ ಪ್ರಸಂಗ.

**ಇಲ್ಲಿಗೆ ಸರ್ವಗತತ್ವಾಧಿಕರಣವು ಮುಗಿಯಿತು.**

## ೨೦. ಫಲೋತ್ಪತ್ತ್ಯಧಿಕರಣಮ್

**ಕರ್ಮಾಪೇಕ್ಷತ್ವಾತ್ ಫಲದಾನಸ್ಯ ತದೇವ ದದಾತೀತಿ ನ ವಾಚ್ಯಮ್ ।ಕುತಃ ?**

**॥ ಓಂ ಫಲಮತ ಉಪಪತ್ತೇಃ ಓಂ ॥ ೩೯ ॥**

**ಅತ ಏವೇಶ್ವರಾತ್ ಫಲಂ ಭವತಿ। ನಹ್ಯಚೇತನಸ್ಯ ಸ್ವತಃ ಪ್ರವೃತ್ತಿರ್ಯುಜ್ಯತೇ ॥**

ವೈಷಮ್ಯ-ನೈರ್ಘೃಣ್ಯಾಧಿಕರಣದಲ್ಲಿ ಈಶನು ನಾವು ಮಾಡಿರುವ ಶುಭಾಶುಭ ಕರ್ಮಗಳನ್ನು ಅವಲಂಬಿಸಿ ಸುಖದುಃಖಗಳನ್ನು ಕೊಡುತ್ತಾನೆ, ಎನ್ನಲಾಗಿದೆ. ಕರ್ಮದ ಅವಲಂಬನೆ ಈಶ್ವರನಿಗೆ ಅನಿವಾರ್ಯವೆಂದಾದ ಮೇಲೆ ಕರ್ಮವೇ ಫಲಕಾರಣ ಎನ್ನಬಹುದು. ಈಶನ ಅಗತ್ಯವೇನು? ಹೀಗೆ ಹೇಳಬಾರದು. ಏಕೆಂದರೆ, ''ಫಲಂ ಅತಃ'' ಅತಃ ಏವ=ಈಶ್ವರನಿಂದಲೇ ಫಲಂ=ಸುಖಾದಿರೂಪಫಲವು ಸಿದ್ಧಿಸುತ್ತದೆ. ಕರ್ಮವು ಜಡ. ಜಡವಾದ ಕರ್ಮಕ್ಕೆ ಕ್ರಿಯೆಯೇ ಇಲ್ಲ, ಅದು ಸ್ವಯಂ ಫಲವನ್ನು ಕೊಡಲಾರದು.

**ವಿವರಣೆ**—ತತ್ತ್ವಪ್ರದೀಪದಲ್ಲಿ ಅತ ಏವ, ಎಂಬ ಭಾಷ್ಯದ ಶಬ್ದಗಳಿಗೆ 'ಸರ್ವತ್ರ ಸರ್ವಮೇತಸ್ಮಾತ್' ಎಂದು 'ಎಲ್ಲವೂ ಈಶನಿಂದಲೇ ಎಂದು ಹೇಳಿರುವುದರಿಂದಲೇ' ಎಂಬ ಅರ್ಥವನ್ನು ಹೇಳಲಾಗಿದೆ. ಉಪಪತ್ತೇಃ ಎಂದರೆ ಈಶನು ಸರ್ವಪ್ರೇರಕನಾದ ಚೇತನನಾದುದರಿಂದ ಅವನಿಗೆ ಫಲದಾತೃತ್ವವು ಉಪಪನ್ನವಾಗುತ್ತದೆ, ಎಂದು ಅರ್ಥ.

## ॥ ಓಂ ಶ್ರುತತ್ವಾಚ್ಚ ಓಂ ॥ ೪೦ ॥

**'ವಿಜ್ಞಾನಮಾನಂದಂ ಬ್ರಹ್ಮ ರಾತಿರ್ದಾತುಃ ಪರಾಯಣಮ್' (ಬೃ.ಉ. 5.9.28) ಇತಿ ॥**

ಈಶನಿಗೆ ಫಲದಾತೃತ್ವವು ಶ್ರುತ್ಯುಕ್ತವಾಗಿದೆ–'ವಿಜ್ಞಾನಮಾನಂದಂ ಬ್ರಹ್ಮ' ಎಂಬ ಬೃಹದಾರಣ್ಯಕ ಶ್ರುತಿಯಲ್ಲಿ ಬ್ರಹ್ಮನೇ ಫಲದಾತೃ ಎಂದು ಹೇಳಲಾಗಿದೆ.

**ವಿವರಣೆ**—ಹಿಂದಿನ ಸೂತ್ರದಲ್ಲಿ ಬ್ರಹ್ಮನು ಚೇತನನಾದುದರಿಂದ ಫಲದಾತೃತ್ವವು ಉಪಪನ್ನವಾಗುತ್ತದೆ ಎಂದಿದ್ದರೆ ಈ ಸೂತ್ರದಲ್ಲಿ ಅವನೇ ಫಲಪ್ರದನೆಂದು ಶ್ರುತಿ ಹೇಳುತ್ತದೆ, ಎನ್ನಲಾಗಿದೆ.

**ಶ್ರುತ್ಯರ್ಥ**—ವಿಜ್ಞಾನಮ್ ಆನಂದಂ ಬ್ರಹ್ಮ ರಾತಿರ್ದಾತುಃ ಪರಾಯಣಮ್ । ತಿಷ್ಠಮಾನಸ್ಯ ತದ್ವಿದಃ ॥ ಬ್ರಹ್ಮನು ಜ್ಞಾನಾನಂದಸ್ವರೂಪನಾಗಿದ್ದಾನೆ. ದಾತುಃ= ಯಜಮಾನನಿಗೆ ರಾತಿಃ=ಫಲದಾಯಕ, ಪರಾಯಣಂ=ಪರಮಪ್ರಾಪ್ಯ.

## ॥ ಓಂ ಧರ್ಮಂ ಜೈಮಿನಿರತ ಏವ ಓಂ ॥ ೪೧ ॥

**ಯತಃ ಫಲಂ ತದೇವ ಕರ್ಮೇಶ್ವರಾದ್ ಭವತಿ । 'ಏಷ ಹ್ಯೇವ ಸಾಧುಕರ್ಮ ಕಾರಯತಿ'(ಕೌ. 3.8) ಇತಿ ಶ್ರುತೇರಿತಿ ಜೈಮಿನಿಃ ॥**

ಯಾವ ಕರ್ಮದಿಂದ ಫಲವು ದೊರಕುವುದೋ ಅಂತಹ ಕರ್ಮವೇ ಈಶನಿಂದಾಗಿ ಆಗುತ್ತದೆ. 'ಏಷ ಹ್ಯೇವ' ಎಂಬ ಕೌಶೀತಕೀಉಪನಿಷತ್ತು ಹಾಗೆಯೇ ಹೇಳುತ್ತದೆ, ಎಂದು ಜೈಮಿನಿ ಋಷಿಗಳ ಅಭಿಪ್ರಾಯ.

**ವಿವರಣೆ**—ಯತಃ ಫಲಂ ತಸ್ಮಾದೇವ ಈಶ್ವರಾತ್ ಕರ್ಮ ಭವತಿ–ಎಂದು ತತ್ತ್ವಪ್ರದೀಪದಲ್ಲಿ ಕರ್ಮ ಮತ್ತು ಅದರ ಫಲ ಎರಡೂ ಈಶನಿಂದ, ಎಂದು ಈ ಸೂತ್ರಕ್ಕೆ ಅರ್ಥವೆಂದು ಹೇಳಲಾಗಿದೆ. ತತ್ತ್ವಪ್ರಕಾಶಿಕಾದಲ್ಲಿ ಫಲದಾತೃ ಈಶ್ವರ ಎನ್ನುವುದು ಔಪಚಾರಿಕ. ಅವನು ಕರ್ಮಗಳನ್ನು ಮಾಡಿಸುವ ಮೂಲಕ ಪುಣ್ಯಾಪಾಪಗಳಿಗೆ ಕಾರಣ

ನೆನಿಸಿ, ಆ ಮೂಲಕ ಸುಖದುಃಖಗಳಿಗೆ ಕಾರಣನಾಗುತ್ತಾನೆ, ಎನ್ನಲಾಗಿದೆ. ಹೀಗೆ ಈಶನಿಗೆ ಕರ್ಮಹೇತುತ್ವ ಮುಖ್ಯ, ಫಲಹೇತುತ್ವ ಕರ್ಮದ್ವಾರಾ, ಎಂದು ಜೈಮಿನಿಸಿದ್ಧಾಂತ.

## ॥ ಓಂ ಪೂರ್ವಂ ತು ಬಾದರಾಯಣೋ ಹೇತುವ್ಯಪದೇಶಾತ್ ಓಂ ॥ ೪೨ ॥

**ಪರಸ್ಯ ಕರ್ಮಣಶ್ಚೋಭಯೋಃ ಫಲಕಾರಣತ್ವೇऽಪಿ ನ ಕರ್ಮ ಪರಪ್ರವರ್ತಕಮ್ । ಪರ ಏವ ಕರ್ಮ ಪ್ರವರ್ತಕಃ ।**
**'ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಮ್' (ಪ್ರ.ಉ. 3.7) ಇತಿ ಹೇತುವ್ಯಪದೇಶಾತ್ । 'ದ್ರವ್ಯಂ ಕರ್ಮ ಚ ಕಾಲಶ್ಚ' (ಭಾಗ. 2.5.14) ಇತಿ ಚ ॥**

ಪರಮಾತ್ಮ ಮತ್ತು ಕರ್ಮ ಇವೆರಡೂ ಫಲಕ್ಕೆ ಹೇತು. ಆದರೂ ಕರ್ಮವು ಪರಮಾತ್ಮನಿಗೆ ಪ್ರವರ್ತಕವಲ್ಲ, ಆದರೆ ಕರ್ಮಕ್ಕೆ ಪರಮಾತ್ಮನು ಪ್ರವರ್ತಕ. 'ಪುಣ್ಯೇನ ಪುಣ್ಯಂ ಲೋಕಂ ನಯತಿ' ಎಂಬ ಶ್ರುತಿಯಲ್ಲಿ ಪುಣ್ಯಲೋಕರೂಪವಾದ ಫಲಪ್ರಾಪ್ತಿಗೆ ಈಶನೂ ಕಾರಣ, ಎಂದು ಹೇಳಿರುವುದರಿಂದ. 'ದ್ರವ್ಯಂ ಕರ್ಮ ಚ' ಎಂಬ ಶ್ರುತಿಯಲ್ಲಿ ಕರ್ಮ ಸತ್ತಾವೂ ಪರಾಧೀನ ಎಂದೂ ಹೇಳಲಾಗಿದೆ.

**ವಿವರಣೆ**—ಇದು ವೇದವ್ಯಾಸರ ಅಭಿಪ್ರಾಯ. ಬ್ರಹ್ಮ ಮತ್ತು ಕರ್ಮ ಇವೆರಡೂ ಫಲಹೇತು. ಎರಡೂ ಫಲಕ್ಕೆ ಕಾರಣವಾದರೂ ಈಶ್ವರ ಸ್ವಾತಂತ್ರ್ಯೇಣ ಫಲಕಾರಣ, ಕರ್ಮ ಈಶಾಧೀನವಾಗಿ ಫಲಕಾರಣ. ಕರ್ಮವು ಈಶೇಚ್ಛೆಗೆ ಅನುಗುಣವಾಗಿಯೇ ಫಲವನ್ನು ಕೊಡುತ್ತದೆ. ದೇಶ–ಕಾಲವ್ಯವಸ್ಥೆಗೆ ಅನುಸಾರವಾಗಿ ಫಲನೀಡುವ ಸಾಮರ್ಥ್ಯ ಕರ್ಮಕ್ಕಿಲ್ಲ. ಈಶೇಚ್ಛೆಯಿಂದ ಮೊದಲು ಮಾಡಿದ ಕರ್ಮಕ್ಕಿಂತ ಆಮೇಲೆ ಮಾಡಿದ ಕರ್ಮ ಮೊದಲಿಗೆ ಫಲ ನೀಡಬಹುದು. ಪುಣ್ಯ–ಪಾಪಗಳ ಫಲದಾನಶಕ್ತಿಯು ಈಶೇಚ್ಛೆಗೆ ಅನುಸಾರವಾಗಿ ಅನಿಯತ. ದೇವರ ಜ್ಞಾನವಿಲ್ಲದವರಿಗೆ ಪುಣ್ಯವು ಪೂರ್ಣಫಲವನ್ನು ಕೊಡುವುದಿಲ್ಲ. ಪರಮಾತ್ಮದ್ವೇಷಿಗಳು ಸಂಪಾದಿಸಿದ ಪುಣ್ಯವು ನಿಷ್ಫಲವೂ ಆಗುತ್ತದೆ. ಭಗವದಪರೋಕ್ಷಿಗಳು ಮಾಡಿದ್ದ ಪಾಪಗಳು ಫಲಕೊಡದೇ ನಾಶವಾಗುತ್ತವೆ, ಮುಂದಿನ ಪಾಪಗಳ ಸಂಪರ್ಕ ಅವರಿಗಿರುವುದಿಲ್ಲ. ಅಪರೋಕ್ಷಾನಂತರ ಮಾಡಿದ ಕರ್ಮಗಳಿಗೆ ಅನಂತಫಲವಿದೆ. ಹೀಗೆ ಕರ್ಮವು

ಪರತಂತ್ರವಾದುದು. ಆದರೆ, ಫಲಪ್ರದನಾದ ಭಗವಂತ ಸ್ವತಂತ್ರ. ಅವನು ಅನಂತಜೀವರ ಅನಂತಕರ್ಮಗಳಿಗೂ ಆ ಕರ್ಮಾಭಿಮಾನಿಗಳ ಅನಂತಕರ್ಮಗಳಿಗೂ ನಿಯಾಮಕಮಾತ್ರವಲ್ಲ, ಸ್ವೇಚ್ಛಾನುಸಾರವಾಗಿ ಫಲವನ್ನು ಕೊಡುತ್ತಾನೆ. ಹೀಗೆ, ಈಶ ಕರ್ಮ ಎರಡೂ ಫಲ ಕಾರಣವಾದರೂ ಈಶನು ಪ್ರಧಾನ, ಕರ್ಮ ಅಪ್ರಧಾನ ಎಂದು ಬಾದರಾಯಣಮತ. ಗಾರುಡದಲ್ಲಿ ಹೀಗೆಯೇ ಇದೆ—

ಕರ್ಮಾಣ್ಯನಂತಾನಿ ಯಥೇಷ್ಟಮೀಶಃ ಸಂಪಾದ್ಯ ತೇಷಾಂ ಫಲಮಿಚ್ಛಯೈವ। ಕ್ವಚಿದ್ದದಾತಿ ಕ್ವಚ ನೋ ದದಾತಿ ನಹ್ಯಾನಂತ್ಯಾತ್ ಕರ್ಮಣಾಂ, ಭೋಗನಾಶಃ॥ ಸ್ವಾತಂತ್ರ್ಯಂ ಚೇತ್ ಕರ್ಮಣಾಂ ಸರ್ವಭೋಗಃ ಸ್ಯಾನ್ನ ಹ್ಯೇವಂ ಕ್ವಾಪಿ ತತ್ ಕೇನ ಚಿತ್ ಸ್ಯಾತ್। ಅತೋಽಪಿ ಸ ಸ್ವೇಚ್ಛಯಾ ಕಿಂಚಿದೇವ ಫಲಂ ಕುರ್ಯಾದ್ ವಿಫಲಂ ಪ್ರಾಯಶಶ್ಚ। ಕ್ವಚಿಜ್ಜ್ಞಾನಂ ಜನಯನ್ ಭಸ್ಮ ಕುರ್ಯಾತ್ ಸ್ವೇಚ್ಛಾವೃತ್ತಿಸ್ತಸ್ಯ ವಿಷ್ಣೋಃ ಸದೈವ॥

ಇದು ತತ್ತ್ವಪ್ರದೀಪಿಕಾದ ಅಭಿಪ್ರಾಯ.

ತತ್ತ್ವಪ್ರಕಾಶಿಕಾದಲ್ಲಿ 'ಏತತ್ ಪರಿಹಾರಾಯ ಸೂತ್ರಮುಪನ್ಯಸ್ಯ ವ್ಯಾಚಷ್ಟೇ' ಎಂದು ಹಿಂದಿನ ಸೂತ್ರವು ಜೈಮಿನಿಯಮತವನ್ನು ಅವಲಂಬಿಸಿ ಮಾಡಿರುವ ಪೂರ್ವಪಕ್ಷ ಎನ್ನಲಾಗಿದೆ. ವಸ್ತುತಃ ಜೈಮಿನಿಗಳು ಹೇಳಿದ ಕರ್ಮಕ್ಕೆ ಫಲಕಾರಣತ್ವವು ಬಾದರಾಯಣರಿಗೂ ಅಭಿಪ್ರೇತವಾಗಿದೆ. ಕರ್ಮವು ಫಲಕ್ಕೆ ಕರಣತಯಾ ಕಾರಣ, ಈಶ್ವರನು ಕರ್ತೃತಯಾ ಕಾರಣ ಎಂದು ಬಾದರಾಯಣಸಿದ್ಧಾಂತ. ಕರ್ಮವು ಈಶಪ್ರೇರಿತವಾಗಿಯೇ ಫಲದಾಯಕ, ಅಷ್ಟೇ ಅಲ್ಲ, ಕರ್ಮಸತ್ತಾವೂ ಈಶಾದೀನ.

ಭಾವಬೋಧಕಾರರು ಈ ಅಧಿಕರಣದ ಮೂರನೆಯ ಸೂತ್ರವು ಪೂರ್ವಪಕ್ಷ ಸೂತ್ರವೆಂದು ಹೇಳಿದ್ದಾರೆ—ತೃತೀಯೇ ತದುಭಯಾಕ್ಷೇಪಃ, ಚತುರ್ಥೇ ತತ್‌ಸಮಾಧಾನಮಿತಿ॥ ಈ ಸೂತ್ರದ ತತ್ತ್ವಪ್ರಕಾಶಿಕಾವೂ ಅದಕ್ಕೆ ಪೂರಕವಾಗಿದೆ— ''ಏತತ್ ಪರಿಹಾರಾಯ ಸೂತ್ರಮುಪನ್ಯಸ್ಯ ವ್ಯಾಚಷ್ಟೇ'' ಇದು ಕೊನೆಯ ಸೂತ್ರದ ಭಾಷ್ಯಕ್ಕೆ ಟೀಕಾದಲ್ಲಿ ಕೊಟ್ಟಿರುವ ಅವತಾರಿಕೆ.

ಹೀಗೆ ಪೂರ್ವಸೂತ್ರವು ಪೂರ್ವಪಕ್ಷದಂತೆ ಕಂಡರೂ ಜೈಮಿನಿಗಳ ಮತ ವ್ಯಾಸರ ಸಿದ್ಧಾಂತಕ್ಕೆ ವಿರುದ್ಧವಲ್ಲ. ಕರ್ಮವೇ ಫಲದಾಯಕ ಎನ್ನುವುದು ಅನ್ವಯವ್ಯತಿರೇಕ ಸಿದ್ಧಮಾತ್ರವಲ್ಲ ಜೈಮಿನಿಗಳೂ ಹಾಗೆಯೇ ಹೇಳುತ್ತಾರೆ, ಎಂದು ಪೂರ್ವಪಕ್ಷಿಯು ತಾನೇ ಮಾಡಿದ ಸಿದ್ಧಾಂತ ಅದು. 'ಫಲಮತಃ' ಎಂಬ ಪ್ರಥಮ ಸೂತ್ರದಿಂದ ಈಶನೇ

ಫಲಪ್ರದ ಎಂದಾಗ ಕರ್ಮಕ್ಕೂ ಫಲದಾತೃತ್ವ ಇದೆ, ಎಂದು ಮೂರನೆಯ ಸೂತ್ರದಲ್ಲಿ ಹೇಳಲಾಯಿತು. ಅದರಿಂದ ಕರ್ಮಕ್ಕೆ ಪ್ರಾಧಾನ್ಯಭ್ರಮೆ ಬಂದಾಗ ಅದರ ನಿರಾಸಕ್ಕಾಗಿ ಕೊನೆಯ ಸೂತ್ರ.

## ದ್ವೈತಸಿದ್ಧಾಂತದಲ್ಲಿ ಸೂತ್ರಗಳ ಅರ್ಥ

**।। ಓಂ ಫಲಮತ ಉಪಪತ್ತೇಃ ಓಂ ।।** (ಅತ್ರೇಶಸ್ಯ ಸ್ವರ್ಗಾದಿಫಲದಾತೃತ್ವ ಮುಚ್ಯತೇ । ಅತಃ=ಪ್ರಸ್ತುತಾದೀಶಾತ್ ಫಲಂ, ನ ಕರ್ಮತಃ । ಕುತಃ ? ಉಪಪತ್ತೇಃ । ಈಶಸ್ಯ ಚೇತನತ್ವೇನ ಫಲದಾನಸಂಭವಾತ್ । ಕರ್ಮಣಃ ಅಚೇತನತ್ವೇನ ತದಯೋಗಾದಿತ್ಯರ್ಥಃ ।

ಅತಃ=ಪ್ರಸ್ತುತನಾದ ಪರಮಾತ್ಮನಿಂದಾಗಿಯೇ ಸ್ವರ್ಗಾದಿಫಲಗಳು ದೊರಕುತ್ತವೆ, ಕರ್ಮದಿಂದಲ್ಲ. ಉಪಪತ್ತೇಃ=ಪರಮಾತ್ಮನು ಚೇತನನಾದುದರಿಂದ ಅವನಿಗೆ ಫಲದಾತೃತ್ವವು ಉಪಪನ್ನವಾಗುತ್ತದೆ, ಕರ್ಮವಾದರೋ ಅಚೇತನವಾದುದರಿಂದ ಅದಕ್ಕೆ ಸ್ವಾತಂತ್ರ್ಯೇಣ ಫಲದಾತೃತ್ವವು ಯುಕ್ತವಲ್ಲ.

**।। ಓಂ ಶ್ರುತತ್ವಾಚ್ಚ ಓಂ ।।** ('ವಿಜ್ಞಾನಮಾನಂದಂ ಬ್ರಹ್ಮ ರಾತಿರ್ದಾತುಃ' ಇತಿ ಫಲದಾತೃತ್ವಸ್ಯ ಶ್ರುತತ್ವಾಚ್ಚ ಅತಃ ಫಲಮ್ ಇತ್ಯರ್ಥಃ।)

ಈಶನಿಗೆ ಫಲದಾತೃತ್ವವು ಚೇತನನಾದುದರಿಂದ ಸಂಭಾವಿತ ಮಾತ್ರ ಅಲ್ಲ. ಶ್ರುತ್ಯುಕ್ತವೂ ಆಗಿದೆ.

**।। ಓಂ ಧರ್ಮಂ ಜೈಮಿನಿರತ ಏವ ಓಂ ।।** (ಫಲಮತ ಇತ್ಯಸ್ತಿ । ಅತ ಏವೇತಿ ತಂತ್ರಮ್ । ಅತಏವ='ಏಷ ಹ್ಯೇವ ಸಾಧುಕರ್ಮ ಕಾರಯತಿ' ಇತ್ಯಾದಿಶ್ರುತೇರೇವ, ಅತ ಏವ=ಈಶಾದೇವ, ಧರ್ಮಮಿತಿ ಕರ್ಮಮಾತ್ರೋಪಲಕ್ಷಣಮ್, ಧರ್ಮಾಧರ್ಮಾಖ್ಯಂ ಕರ್ಮ ಕಾರಿತಮ್ ಜೈಮಿನಿರಾಹ । ಅತಃ ಕರ್ಮಣ ಏವ ಫಲಂ ಭವತೀತ್ಯಾಹ ಇತ್ಯರ್ಥಃ। ಧರ್ಮಾದಿತಿ ವಾಚ್ಯೇ ಅರ್ಥವಿಶೇಷಲಾಭಾಯೈವಂ ವಿನ್ಯಾಸಃ 'ರಾತಿರ್ದಾತುಃ' ಇತಿ ಶ್ರುತಿಃ ಪಾರಂಪರ್ಯಪರೇತಿ ಭಾವಃ ।)

ಈ ಸೂತ್ರದಲ್ಲಿ ಈಶನಿಂದಲೇ ಫಲ, ಎಂದು ಸಿದ್ಧಾಂತವನ್ನು ಆಕ್ಷೇಪಿಸಲಾಗಿದೆ. ಅತ ಏವ='ಏಷ ಹ್ಯೇವ' ಎಂಬ ಶ್ರುತಿಯಿಂದಾಗಿಯೇ ಅತ ಏವ=ಈಶನಿಂದಾಗಿಯೇ ಧರ್ಮಂ=ಸತ್ಕರ್ಮ-ದುಷ್ಕರ್ಮಗಳು ಮಾಡಿಸಲ್ಪಡುತ್ತವೆ, ಎಂದು ಜೈಮಿನಿಗಳು ಹೇಳುತ್ತಾರೆ. ಕರ್ಮದಿಂದ ಸಾಕ್ಷಾತ್ ಫಲವಾಗುತ್ತದೆ. ಸ್ವರ್ಗಾದಿಫಲ ಈಶನಿಂದ

ಸಾಕ್ಷಾತ್ ಸಿಗುವುದಿಲ್ಲ, ಕರ್ಮದ್ವಾರಾ. ಆದ್ದರಿಂದ 'ರಾತಿರ್ದಾತುಃ' ಎಂಬ ಶ್ರುತಿಯು ಈಶನಿಗೆ ಕರ್ಮದ್ವಾರಾ ಫಲದಾತೃತ್ವವು ಇದೆ, ಎಂದಿಷ್ಟೇ ಹೇಳುತ್ತದೆ.

**॥ ಓಂ ಪೂರ್ವಂ ತು ಬಾದರಾಯಣೋ ಹೇತುವ್ಯಪದೇಶಾತ್ ಓಂ ॥** (ಧರ್ಮಮಿತ್ಯಸ್ತಿ । ತುರ್ವಿಶೇಷೇ । ಹೇತ್ವಿತಿ ಭಾವಪ್ರಧಾನಮ್ । ಪೂರ್ವೋಕ್ತಂ ಬ್ರಹ್ಮ, ಧರ್ಮಂ ಚ ಫಲಹೇತುಂ ಬಾದರಾಯಣೋ ಮನ್ಯತೇ । ಬ್ರಹ್ಮ ಕರ್ತೃತ್ವೇನ, ಧರ್ಮಃ ಕರಣತ್ವೇನ, ನತು ಸಾಮ್ಯೇನ ಇತಿ ತೋರರ್ಥಃ । ಕುತಃ ? ಹೇತುವ್ಯಪದೇಶಾತ್ । 'ಪುಣ್ಯೇನ ಪುಣ್ಯಂ ಲೋಕಂ ನಯತಿ' ಇತಿ ಬ್ರಹ್ಮಕರ್ಮಣೋಃ ಕರ್ತೃತ್ವ-ಕರಣತ್ವ ರೂಪಹೇತುವ್ಯಪದೇಶಾದಿತ್ಯರ್ಥಃ । ಸಾಮಾನ್ಯತಃ ಕರ್ಮಣಃ ಫಲಹೇತುತ್ವಂ ಪ್ರಾಗುಕ್ತಂ ತದನುಮತಮೇವ ಇತಿ ಭಾವಃ । ಫಲಮತ ಇತ್ಯುಕ್ತ್ಯಾ, ಕರ್ಮಣಃ ಫಲಹೇತುತ್ವಂ ನೇತಿ ಪ್ರಾಪ್ತಚೋದ್ಯನಿರಾಸಾಯ ತೃತಿಯೋ ಯೋಗಃ । ತಸ್ಯ ಬ್ರಹ್ಮವತ್ ಪ್ರಾಧಾನ್ಯವ್ಯುದಾಸಾಯ ಅಂತ್ಯಃ ।)

ಪೂರ್ವಂ=ಪೂರ್ವಪ್ರಸ್ತುತಗಳಾದ ಬ್ರಹ್ಮ ಮತ್ತು ಕರ್ಮಗಳೆರಡೂ ಫಲಹೇತು ಎಂದು ಬಾದರಾಯಣರು ಹೇಳುತ್ತಾರೆ. ಆದರೆ, ಎರಡಕ್ಕೂ ಒಂದೇ ರೀತಿಯ ಪ್ರಾಧಾನ್ಯವಿಲ್ಲ. ಬ್ರಹ್ಮ ಸ್ವರ್ಗಾದಿಫಲಗಳಿಗೆ ಕರ್ತೃ, ಕರ್ಮ ಕರಣ. ಏಕೆಂದರೆ, ಹೇತುವ್ಯಪದೇಶಾತ್='ಪುಣ್ಯೇನ ಪುಣ್ಯಂ ಲೋಕಂ ನಯತಿ' ಎಂಬ ಶ್ರುತಿಯು ಬ್ರಹ್ಮನು ಕರ್ತೃವೆಂದೂ, ಪುಣ್ಯವು ಕರಣವೆಂದೂ, ಬ್ರಹ್ಮ-ಕರ್ಮಗಳಿಗೆ ವಿಭಿನ್ನರೀತಿಯ ಹೇತುತ್ವವನ್ನು ಹೇಳಿದೆ.

## ಅದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಫಲಮತ ಉಪಪತ್ತೇಃ ॥** ಇಷ್ಟ-ಅನಿಷ್ಟ-ಮಿಶ್ರಫಲಗಳು ಅತಃ=ಈಶ್ವರನಿಂದಲೇ ಆಗುತ್ತವೆ. ಉಪಪತ್ತೇಃ=ಅವನು ದೇಶವಿಶೇಷ-ಕಾಲವಿಶೇಷಗಳನ್ನು ತಿಳಿದಿರುವ ಸರ್ವಾಧ್ಯಕ್ಷ. ಆದ್ದರಿಂದ ಕರ್ಮಕ್ಕೆ ಅನುರೂಪವಾದ ಫಲವನ್ನು ಉಚಿತದೇಶಕಾಲಗಳಲ್ಲಿ ಕೊಡಬಲ್ಲ. ಕರ್ಮವಾದರೋ ಕ್ಷಣಿಕ. ದೇಶಾಂತರ-ಕಾಲಾಂತರಭಾವಿಯಾದ ಫಲವನ್ನು ಅದು ಕೊಡಲಾರದು. ಕರ್ಮಜನ್ಯವಾದ ಪುಣ್ಯ-ಪಾಪಗಳಿಗೆ ಪ್ರಮಾಣವಿಲ್ಲ. ಆದ್ದರಿಂದ ಕರ್ಮಫಲ ಈಶನಿಂದಲೇ ದೊರಕುತ್ತದೆ.

**॥ ಶ್ರುತತ್ವಾಚ್ಚ ॥** ಈಶ್ವರನೇ ಫಲಹೇತು ಎನ್ನುವುದು ಶ್ರುತಿಸಿದ್ಧವೂ ಆಗಿದೆ—'ಸ ವಾ ಏಷಃ ಮಹಾಜನಃ ಆತ್ಮಾನ್ನಾದೋ ವಸುದಾನಃ'

**॥ ಧರ್ಮಂ ಜೈಮಿನಿರತ ಏವ ॥** ಜೈಮಿನಿಆಚಾರ್ಯರಾದರೋ ಕರ್ಮದಿಂದ

ಪುಣ್ಯ-ಪಾಪಗಳು ಹುಟ್ಟುತ್ತವೆ. ಅದರಿಂದಾಗಿ ಕಾಲಾಂತರಭಾವಿ ಸುಖ-ದುಃಖಾದಿ ಫಲಗಳು ಆಗುತ್ತವೆ, ಎನ್ನುತ್ತಾರೆ. ಅತಏವ=ಕರ್ಮವನ್ನು ಕಾರಣ ಎಂದು ಒಪ್ಪುವುದರಿಂದಾಗಿಯೇ 'ಸ್ವರ್ಗಸಾಧನ ಯಾಗ' ಎಂದು ಯಾಗರೂಪ ಕರ್ಮಕ್ಕೆ ಸ್ವರ್ಗಸಾಧನತ್ವವನ್ನು ಹೇಳುವ ಶ್ರುತಿಗಳು ಉಪಪನ್ನವಾಗುತ್ತವೆ. ಕರ್ಮವು ವಿನಾಶಿಯಾದರೂ ಅದಕ್ಕೆ ಫಲಕಾರಣತ್ವವನ್ನು ವೇದವು ಹೇಳಿರುವುದರಿಂದ ಕರ್ಮ-ಫಲಗಳ ಮಧ್ಯದಲ್ಲಿ 'ಅಪೂರ್ವ'ವನ್ನು ಅಂಗೀಕರಿಸಬೇಕು. ಅದು ಒಂದೋ ಯಾಗದ ಸೂಕ್ಷ್ಮರೂಪ, ಅಥವಾ ಫಲದ ಸೂಕ್ಷ್ಮರೂಪ. ಆದ್ದರಿಂದ ಅವೆರಡಕ್ಕೆ ಕಾರ್ಯಕಾರಣಭಾವವು ಉಪಪನ್ನವಾಗುತ್ತದೆ.

**॥ ಪೂರ್ವಂ ತು ಬಾದರಾಯಣೋ ಹೇತುವ್ಯಪದೇಶಾತ್ ॥** ಬಾದರಾಯಣರಾದರೋ ಪೂರ್ವಂ=ಪೂರ್ವೋಕ್ತನಾದ ಈಶನೇ ಫಲಹೇತು ಎಂದು ಹೇಳುತ್ತಾರೆ. ಆದರೆ, ಈಶನು ಕರ್ಮವನ್ನೋ ತಜ್ಜನ್ಯ ಅಪೂರ್ವವನ್ನೋ ಅಪೇಕ್ಷಿಸಿ ಫಲಕೊಡುತ್ತಾನೆ. ಶ್ರುತಿಯಲ್ಲಿ ಈಶನೇ ಹೇತು ಎಂದು ವ್ಯಪದೇಶವಿದೆ—ಏಷ ಹ್ಯೇವ ಸಾಧುಕರ್ಮ ಕಾರಯತಿ ತಂ ಯಮೇಭ್ಯೋ ಲೋಕೇಭ್ಯಃ ಉನ್ನಿನೀಷತೇ॥ ಎಂದು.

ಗೀತೆಯಲ್ಲೂ ಹೀಗಿದೆ—

ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾಽರ್ಚಿತುಮಿಚ್ಛತಿ ।
ಲಭತೇ ಚ ತತಃ ಕಾಮಾನ್ ಮಯ್ಯೈವ ವಿಹಿತಾನ್ ಹಿ ತಾನ್ ॥ ಎಂದು.

ವಿಶಿಷ್ಟಾದ್ವೈತದರ್ಶನದಲ್ಲೂ ಇದೇರೀತಿ ಸೂತ್ರಗಳಿಗೆ ಅರ್ಥವನ್ನು ಹೇಳಲಾಗಿದೆ.

**ವಿಮರ್ಶೆ-ಅದ್ವೈತದರ್ಶನದಲ್ಲಿ-**

ತತ್‌ಪದಾರ್ಥಸ್ತತಃ ಪಶ್ಚಾತ್ ಯಾವತ್ಪಾದಃ ಸಮಾಪ್ಯತೇ ॥

ಎಂದು ಪಾದಸಮಾಪ್ತಿಪರ್ಯಂತವಾಗಿ 'ತತ್ ತ್ವಮಸಿ' ಎಂಬ ಶ್ರುತಿಯಲ್ಲಿರುವ ತತ್‌ಪದದ ಅರ್ಥವಾದ ನಿರ್ವಿಶೇಷ ಬ್ರಹ್ಮನನ್ನು ಹೇಳಬೇಕು. ಅದನ್ನು ಬಿಟ್ಟು ಈ ಅಧಿಕರಣದಲ್ಲಿ ಫಲದಾತೃವಾದ ಸಗುಣಬ್ರಹ್ಮನ ಬಗ್ಗೆ ಹೇಳುವುದು ಅಸಂಗತ.

**ಇಲ್ಲಿಗೆ ಫಲೋಪಪತ್ತ್ಯಧಿಕರಣ ಮುಗಿಯಿತು.**

**ಇಲ್ಲಿಗೆ ತೃತೀಯಾಧ್ಯಾಯದ ದ್ವಿತೀಯಪಾದ ಮುಗಿಯಿತು.**

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ

# ಬ್ರಹ್ಮಸೂತ್ರಭಾಷ್ಯಮ್

## ಮೂರನೆಯ ಅಧ್ಯಾಯ–ಎರಡನೆಯಪಾದ

## (ಉಪಾಸನಾಪಾದ)

॥ ಹರಿಃ ಓಂ ॥

### ಪೀಠಿಕೆ

**ಉಪಾಸನಾಽಸ್ಮಿನ್ ಪಾದ ಉಚ್ಯತೇ । ಸರ್ವಪರಿಜ್ಞಾನಂ ಪ್ರಥಮತ ಉಚ್ಯತೇ-**

ಪ್ರಥಮ ಸೂತ್ರದಲ್ಲಿ ಹೇಳಿರುವ ಬ್ರಹ್ಮಜಿಜ್ಞಾಸೆಯು ಸಾಧಕನ ಕರ್ತವ್ಯ ಎಂದು ಈ ಪಾದದಲ್ಲಿ ಹೇಳಲಾಗಿದೆ. ಜಿಜ್ಞಾಸೆ ಎಂದರೆ ಉಪಾಸನಾ. ಪ್ರಥಮಾಧಿಕರಣದಲ್ಲಿ ಸರ್ವವೇದಗಳ ಅರ್ಥಜ್ಞಾನವು ಆವಶ್ಯಕ ಎಂದು ಹೇಳಲಾಗಿದೆ.

**ವಿವರಣೆ**—ಬ್ರಹ್ಮಜಿಜ್ಞಾಸೆ ಎಂದರೆ ಬ್ರಹ್ಮನ ಶ್ರವಣ–ಮನನ–ಧ್ಯಾನ. ಇವುಗಳನ್ನು ಸಾಧಕನಾದವನು ಹೇಗೆ ಮಾಡಬೇಕೆಂದು ಈ ಪಾದದಲ್ಲಿ ಹೇಳಲಾಗಿದೆ. ಜಿಜ್ಞಾಸೆಗೆ ಉಪಾಸನಾ ಎಂದು ಹೆಸರು. ಅಂತಹ ಉಪಾಸನೆಯನ್ನು ಹೇಳುವುದರಿಂದ ಈ ಪಾದ ಉಪಾಸನಾಪಾದ. ಉಪಾಸನೆಯ ಮೊದಲ ಎರಡು ಅಂಶಗಳು ಅಂದರೆ ಗುರುಮುಖದಿಂದ ಶಾಸ್ತ್ರದ ಶ್ರವಣ ಮತ್ತು ಶ್ರವಣ ಮಾಡಿದ ವಿಷಯಗಳನ್ನು ಯುಕ್ತಿಗಳಿಂದ ದೃಢಮಾಡಿಕೊಳ್ಳುವುದು. ಇದೇ ಶಾಸ್ತ್ರಾಭ್ಯಾಸ ಎನಿಸುತ್ತದೆ. ತತ್ತ್ವವು ದೃಢವಾದ ಮೇಲೆ ಬ್ರಹ್ಮಧ್ಯಾನ ಮಾಡುವುದು ಇನ್ನೊಂದು ವಿಧದ ಉಪಾಸನೆ. ಹೀಗೆ ಉಪಾಸನೆಯು ಎರಡುವಿಧ—ಶಾಸ್ತ್ರಾಭ್ಯಾಸರೂಪವಾದುದು, ಮತ್ತು ಧ್ಯಾನರೂಪವಾದುದು. ಇವೆರಡರಲ್ಲಿ ಮೊದಲನೆಯ ಉಪಾಸನೆಯನ್ನು ಈ ಪಾದದ ಮೊದಲ ಅಧಿಕರಣದಲ್ಲಿ ಹೇಳಲಾಗಿದೆ. ಯಥಾಶಕ್ತಿಸಕಲವೇದಗಳ ಅರ್ಥವನ್ನು ತಿಳಿಯಬೇಕು, ಎಂದು ಮೊದಲ ಅಧಿಕರಣದ ಅಭಿಪ್ರಾಯ.

## ೧. ಸರ್ವವೇದಾಧಿಕರಣಮ್

**॥ ಓಂ ಸರ್ವವೇದಾಂತಪ್ರತ್ಯಯಂ**

**ಚೋದನಾದ್ಯವಿಶೇಷಾತ್ ಓಂ ॥ ೧ ॥**

**ಅಂತೋ ನಿರ್ಣಯಃ । 'ಉಭಯೋರಪಿ ದೃಷ್ಟೋಽಂತಃ' ಇತಿ ವಚನಾತ್ ।**

**ಸರ್ವವೇದವಿನಿರ್ಣಯೋತ್ಪಾದ್ಯಜ್ಞಾನಂ ಬ್ರಹ್ಮ । 'ಆತ್ಮೇತ್ಯೇವೋಪಾಸೀತ' (ಬೃ.ಉ. 3.4.7) ಇತ್ಯಾದಿವಿಧೀನಾಂ ತದುಕ್ತಯುಕ್ತೀನಾಂ ಚಾವಿಶಿಷ್ಟತ್ವಾತ್ ॥**

ಸೂತ್ರದಲ್ಲಿರುವ 'ಅಂತ' ಪದಕ್ಕೆ ನಿರ್ಣಯ ಎಂದರ್ಥ. 'ಉಭಯೋರಪಿ ದೃಷ್ಟೋಽಂತಃ' ಎಂದು ಭಗವದ್ಗೀತೆಯಲ್ಲಿ ಅಂತ ಶಬ್ದವನ್ನು ಈ ಅರ್ಥದಲ್ಲೇ ಪ್ರಯೋಗಿಸಲಾಗಿದೆ. ಅಲ್ಲಿಗೆ, ಸರ್ವವೇದಾಂತಪ್ರತ್ಯಯಂ ಎಂಬ ಸೂತ್ರಾಂಶಕ್ಕೆ ಸಕಲವೇದಗಳ ಪರಾಮರ್ಶೆಯಿಂದ ಉಂಟಾಗುವ ಜ್ಞಾನಕ್ಕೆ ವಿಷಯನಾದವನು ಬ್ರಹ್ಮ ಎಂದರ್ಥ. ಅರ್ಥಾತ್ ಸಕಲವೇದಗಳನ್ನೂ ವಿಮರ್ಶೆ ಮಾಡಿ ಬ್ರಹ್ಮಸ್ವರೂಪವನ್ನು ನಿರ್ಣಯ ಮಾಡಬೇಕು, ಎಂದರ್ಥ.

'ಆತ್ಮೇತ್ಯೇವ ಉಪಾಸೀತ' 'ತಮೇವೈಕಂ ಜಾನಥ' 'ವಿಜ್ಞಾಯ ಪ್ರಜ್ಞಾಂ ಕುರ್ವೀತ' ಈ ವಿಧಧ ಉಪಾಸನಾವಾಕ್ಯಗಳು ಅಧಿಕಾರಿವಿಶೇಷಗಳನ್ನು ಉಲ್ಲೇಖಿಸದೆ ಎಲ್ಲರಿಗೂ ಸಮಾನವಾಗಿವೆ. ಇಂತಹ ವಿಧಿವಾಕ್ಯಗಳಿಂದ ಕೂಡಿರುವ ಕಾಣ್ವ-ಮಾಧ್ಯಂದಿನಾದಿ ಸರ್ವಶಾಖೆಗಳಲ್ಲಿ ಮಾಧ್ಯಂದಿನರು ಇಷ್ಟು ಅಧ್ಯಯನ ಮಾಡಬೇಕು, ಕಾಣ್ವರು ಇಷ್ಟು ಅಧ್ಯಯನ ಮಾಡಬೇಕು, ಎಂಬ ವಿಶೇಷ ಉಲ್ಲೇಖ ಇಲ್ಲ. ಅದರಂತೆ, ಇಂತಹ ಉಪಾಸನಾವಿಧಾಯಕವಾದ ವಾಕ್ಯಗಳ ಜೊತೆಯಲ್ಲಿರುವ 'ಅತ್ರ ಹ್ಯೇತೇ ಸರ್ವ ಏಕೀಭವಂತಿ' ಇತ್ಯಾದಿಯುಕ್ತಿಗಳೂ ಸರ್ವಾಧಿಕಾರಿಕವಾದುವು. ಆದ್ದರಿಂದ ಮುಮುಕ್ಷು, ಸಕಲವೇದಗಳನ್ನೂ ಅಧ್ಯಯನ ಮಾಡಿ ಅರ್ಥವಿಚಾರ ಮಾಡಿ ಬ್ರಹ್ಮತತ್ತ್ವದ ನಿರ್ಣಯವನ್ನು ಮಾಡಬೇಕು.

**ವಿವರಣೆ**—ಆಯಾಯ ಶಾಖೆಯವರು ತಮ್ಮ ತಮ್ಮ ಶಾಖೆಯನ್ನು ಮಾತ್ರ ಅರ್ಥಪೂರ್ವಕವಾಗಿ ಅಧ್ಯಯನ ಮಾಡುವುದಲ್ಲ. ಎಲ್ಲ ಶಾಖೆಯವರೂ ಎಲ್ಲಾ ಶಾಖೆಗಳನ್ನು ಅಧ್ಯಯನ ಮಾಡಬೇಕು. ಏಕೆಂದರೆ, ಚೋದನಾದ್ಯವಿಶೇಷಾತ್—ಆತ್ಮೇತ್ಯೇವೋಪಾಸೀತ, ಇತ್ಯಾದಿ ವಿಧಿವಾಕ್ಯಗಳಿಂದ ಕೂಡಿರುವ ಶಾಖೆಗಳಲ್ಲಿ ಕಾಣ್ವರಷ್ಟೇ ಹೀಗೆ ಅಧ್ಯಯನ ಮಾಡಬೇಕು ಎಂದು ವಿಶಿಷ್ಯ ಹೇಳದೆ, ಎಲ್ಲರಿಗೂ ಸಾಧಾರಣವಾಗಿ ಆ ಶಾಖೆಗಳ ಅಧ್ಯಯನವನ್ನು ಹೇಳಿದೆ. ಆಯಾಯ ಶಾಖೆಯವರು ಬ್ರಹ್ಮವಿಚಾರವನ್ನು ಮಾಡಬೇಕೆಂದು ವಿಧಿಸುವ 'ಆತ್ಮೇತ್ಯೇವೋಪಾಸೀತ' ಇತ್ಯಾದಿವಾಕ್ಯಗಳೂ ಸರ್ವಶಾಖೆಯವರಿಗೂ ಸಮಾನವಾದ ಉಪಾಸನೆಯನ್ನೇ ಹೇಳಿದೆ. ಶಾಖಾಭೇದೇನ ಉಪಾಸನಾಭೇದವನ್ನು ಹೇಳಿಲ್ಲ. ಅಷ್ಟೇ ಅಲ್ಲ. ಕಾಣ್ವಶಾಖೆಗೆ ಸಂಬಂಧಿಸಿದ ಬೃಹದಾರಣ್ಯಕೋಪನಿಷತ್ತಿನಲ್ಲಿ 'ವಿಜ್ಞಾಯ ಪ್ರಜ್ಞಾಂ ಕುರ್ವೀತ' ಎಂಬ ವಿಧಿವಾಕ್ಯದ

ಜೊತೆಯಲ್ಲಿ 'ವಾಚೋ ವಿಗ್ಲಾಪನಂ ಹಿ ತತ್' ಎಂದು ಅರ್ಥವಾದ ವಾಕ್ಯವಿದೆ. ಬ್ರಹ್ಮಜ್ಞಾನದ ಉದ್ದೇಶವಿಲ್ಲದೆ ಇತರಾರ್ಥದ ಜ್ಞಾನೋದ್ದೇಶದಿಂದ ವೇದಗಳ ಅಧ್ಯಯನ ವಾಗಿಂದ್ರಿಯಕ್ಕೆ ನೀಡುವ ಪರಿಶ್ರಮ ಮಾತ್ರ, ಎಂದು ಪ್ರಶಂಸಾಪರವಾದ ಅರ್ಥವಾದ ಇದಾಗಿದೆ. ವೇದವಾಕ್ಯಗಳಿಂದ ಬ್ರಹ್ಮಜ್ಞಾನವನ್ನೇ ಸಂಪಾದನೆ ಮಾಡಬೇಕು, ಎನ್ನುವುದಕ್ಕೆ ಹೇಳಿರುವ ಈ ಯುಕ್ತಿಯೂ ಕೇವಲ ಕಾಣ್ವಶಾಖೆಗೆ ಮಾತ್ರ ಸಂಬಂಧಿಸಿರದೆ ಎಲ್ಲಾ ಶಾಖೆಗಳಿಗೂ ಅನ್ವಯಿಸುತ್ತದೆ. ಇದರಿಂದಲೂ ಸಕಲ ವೇದಗಳ ಅರ್ಥವನ್ನೂ ತಿಳಿದು ಬ್ರಹ್ಮತತ್ತ್ವವನ್ನು ನಿರ್ಣಯಿಸಬೇಕು, ಎಂದು ತಿಳಿಯುತ್ತದೆ. 'ಸ್ವರ್ಗಕಾಮೋ ಯಜೇತ' ಎಂಬ ಕರ್ಮವಿಧಿಯಲ್ಲಿ ಅಧಿಕಾರಿ ವಿಶೇಷದ ಶ್ರವಣ ಇಲ್ಲದಿದ್ದರೂ 'ಸ್ವರ್ಗಕಾಮಃ' ಎಂಬ ಪದದಿಂದಾಗಿ ಕಾಮಿಗಳಾದ ಗೃಹಸ್ಥರೇ ಅಧಿಕಾರಿಗಳೆಂದು ಕಲ್ಪಿಸಬಹುದು. ಇಂತಹ ಕಲ್ಪಕಗಳಾವುವೂ ಜ್ಞಾನವಿಧಿಯ ಸಮೀಪದಲ್ಲಿ ಶ್ರುತವಾಗಿಲ್ಲ; ಆದ್ದರಿಂದ ತತ್ತತ್‌ಶಾಖೋಕ್ತವಾದ ಜ್ಞಾನವಿಧಿಯು ಸರ್ವಾಧಿಕಾರಿಕ.

ಸರ್ವವೇದಾಂತಪ್ರತ್ಯಯಂ ಎಂಬ ಸೂತ್ರಪದ ಬ್ರಹ್ಮನಿಗೆ ವಿಶೇಷಣ. 'ಸರ್ವವೇದಾಂತೈಃ ಪ್ರತ್ಯಯಃ (ನಿರ್ಣಯಃ) ಯಸ್ಯ ತತ್' ಎಂದು ಸಮಾಸ. 'ಸರ್ವವೇದಾಧಿಗಮಾನಂತರೋತ್ಪನ್ನ–ವಿಚಾರಸಾಧ್ಯ–ವೇದಾರ್ಥನಿರ್ಣಯರೂಪಜ್ಞಾನ ವಿಷಯಃ' ಎಂದು ತತ್ತ್ವಪ್ರದೀಪದಲ್ಲಿ ಇದರ ತಾತ್ಪರ್ಯಾರ್ಥವನ್ನು ಹೇಳಲಾಗಿದೆ. ಸಕಲವೇದಗಳ ಅರ್ಥಪೂರ್ವಕ ಅಧ್ಯಯನ ಮೊದಲು. ಅನಂತರ ಸರಿಯಾದ ತಾತ್ಪರ್ಯಾರ್ಥದ ವಿಮರ್ಶೆ ಮಾಡಬೇಕು. ಅದಕ್ಕೆ ಬ್ರಹ್ಮಸೂತ್ರಗಳಲ್ಲಿ ಹೇಳಿರುವ ನ್ಯಾಯಗಳನ್ನು ಬಳಸಬೇಕು. ಇದೇ ವಿಚಾರ. ಇಂತಹ ವಿಚಾರ ಜನ್ಯವಾದ ನಿರ್ಣಯ ಬ್ರಹ್ಮನ ಬಗ್ಗೆ ಬರಬೇಕು. ಅದೇ ಧ್ಯಾನಕ್ಕೆ ಉಪಯೋಗಿ. ತತ್ತ್ವಪ್ರಕಾಶಿಕೆಯಲ್ಲೂ ಹೀಗಿದೆ—'ಧ್ಯಾನಾರ್ಥಿನಾ ಸರ್ವವೇದಾನ್ನಿರ್ಣೀಯ, ಶ್ರವಣಮನನಾಭ್ಯಾಂ ಜ್ಞಾತವ್ಯಂ ಬ್ರಹ್ಮೇತ್ಯನ್ವಯಃ''।

## ॥ ಓಂ ಭೇದಾನ್ನೇತಿ ಚೇದೇಕಸ್ಯಾಮಪಿ ಓಂ ॥ ೨ ॥

**'ವಿಜ್ಞಾನಮಾನಂದಂ ಬ್ರಹ್ಮ' (ಬೃ.ಉ. 5.9.28), 'ಸತ್ಯಂ ಜ್ಞಾನಮನಂತಂ ಬ್ರಹ್ಮ' (ತೈ.ಉ. 2.1) ಇತ್ಯಾದಿಪ್ರತಿಶಾಖಮುಕ್ತಿಭೇದಾನ್ನೈಕಾಧಿಕಾರಿವಿಷಯಾಃ ಸರ್ವಶಾಖಾ ಇತಿ ಚೇತ್; ನ। ಏಕಸ್ಯಾಮಪಿ ಶಾಖಾಯಾಂ 'ಆತ್ಮೇತ್ಯೇವೋಪಾಸೀತ' (ಬೃ.ಉ. 3.5.1) 'ಓಂ ಖಂ ಬ್ರಹ್ಮ ಖಂ ಬ್ರಹ್ಮ' (ಬೃ .7.1.2) ಇತ್ಯಾದಿಭೇದದರ್ಶನಾತ್ ॥**

ವಾಜಸನೇಯಶಾಖೆಯಲ್ಲಿ ಜ್ಞೇಯವಸ್ತುವನ್ನು 'ವಿಜ್ಞಾನಮ್ ಆನಂದಂ ಬ್ರಹ್ಮ' ಎಂದು ನಿರೂಪಿಸಲಾಗಿದೆ. ತೈತ್ತಿರೀಯಶಾಖೆಯಲ್ಲಿ 'ಸತ್ಯಂ ಜ್ಞಾನಮ್ ಅನಂತಂ ಬ್ರಹ್ಮ' ಎಂದು ಜ್ಞೇಯದ ನಿರೂಪಣೆ ಇದೆ. ಐತರೇಯದಲ್ಲಿ 'ಶ್ರೋತಾ ಮಂತಾ' ಎಂದಿದೆ. ಹೀಗೆ ಶಾಖಾಭೇದೇನ ಜ್ಞೇಯಬ್ರಹ್ಮತತ್ತ್ವದ ನಿರೂಪಣೆಯು ಭಿನ್ನವಾಗಿ ಕಾಣುವುದರಿಂದ ಅಧಿಕಾರಿಯೂ ಬೇರೆ ಬೇರೆಯೇ ಆಗಿರಬೇಕು. ಜ್ಞೇಯಭೇದದಿಂದ ಅಧಿಕಾರಿಭೇದವೂ ಆವಶ್ಯಕ. ಈ ವಾದ ಯುಕ್ತವಲ್ಲ. ಒಂದೇ ಶಾಖೆಯಲ್ಲೂ ಈ ರೀತಿಯ ಜ್ಞೇಯಭೇದೋಕ್ತಿ ಇದೆ—ಬೃಹದಾರಣ್ಯಕದಲ್ಲೇ 'ಆತ್ಮೇತ್ಯೇವೋಪಾಸೀತ' ಎಂದು ಆತ್ಮನನ್ನು ಉಪಾಸನಾವಿಷಯನನ್ನಾಗಿ ಹೇಳಿ 'ಖಂ ಬ್ರಹ್ಮ ಖಂ ಬ್ರಹ್ಮ' 'ಪ್ರಕಾಶರೂಪನು, ಸುಖಪೂರ್ಣನು' ಎಂದು ಜ್ಞೇಯವಸ್ತುವಿನ ವಿಭಿನ್ನಗುಣಧರ್ಮಗಳ ನಿರೂಪಣೆ ಇದೆ. ವಿಷಯಭೇದೇನ ಅಧಿಕಾರಿಭೇದವನ್ನು ಹೇಳುವುದಾದಲ್ಲಿ ಒಂದೇ ಶಾಖೆಯಲ್ಲೂ ಅಧಿಕಾರಿಗಳು ಬೇರೆಬೇರೆಯಾಗಬೇಕಾದೀತು. ಆದ್ದರಿಂದ ಒಬ್ಬನೇ ಬ್ರಹ್ಮನು ತತ್ತತ್‌ಶಾಖೋಕ್ತ ಅನೇಕಗುಣವಿಶಿಷ್ಟನಾಗಿ ಒಬ್ಬನಿಂದಲೇ ಜ್ಞೇಯನಾಗಿದ್ದಾನೆ. ಅದಕ್ಕಾಗಿ, ಎಲ್ಲರೂ ಎಲ್ಲಾ ಶಾಖೆಗಳ ಅಧ್ಯಯನವನ್ನು ಮಾಡಬೇಕು.

ಇಲ್ಲಿ ಭಾಷ್ಯವಾಕ್ಯದಲ್ಲಿ 'ಕಂ ಬ್ರಹ್ಮ' ಎಂದೂ 'ಖಂ ಬ್ರಹ್ಮ' ಎಂದೂ ಪಾಠಭೇದವಿದೆ. 'ಆತ್ಮೇತ್ಯೇವ' ಎಂಬ ಬೃಹದಾರಣ್ಯಕ ಶಾಖೆಯ ಪಾಠ 'ಓಂ ಖಂ ಬ್ರಹ್ಮ' ಎಂದು. ಅದನ್ನೇ ಇಲ್ಲಿ ತೆಗೆದುಕೊಳ್ಳಲಾಗಿದೆ. ತಾಮ್ರಪರ್ಣೀ ಟಿಪ್ಪಣಿಯಲ್ಲೂ 'ಖಂ ಬ್ರಹ್ಮೇತಿ ಅನೂದ್ಯ ಪ್ರಕಾಶರೂಪಮಿತ್ಯನ್ಯಧರ್ಮವಿಧಾನಾತ್' ಎಂದೇ ಇದೆ.

**|| ಓಂ ಸ್ವಾಧ್ಯಾಯಸ್ಯ ತಥಾತ್ವೇನ ಹಿ**
**ಸಮಾಚಾರೇಽಧಿಕಾರಾಚ್ಚ ಓಂ || ೩ ||**

**'ಸ್ವಾಧ್ಯಾಯೋಽಧ್ಯೇತವ್ಯಃ' (ತೈ.ಆ.2.15) ಇತಿ ಸಾಮಾನ್ಯವಿಧೇಃ । ಹಿಶಬ್ದಾತ್,**

**'ವೇದಃ ಕೃತ್ಸ್ನೋಽಧಿಗಂತವ್ಯಃ ಸರಹಸ್ಯೋ ದ್ವಿಜನ್ಮನಾ'ಇತಿ ಸ್ಮೃತೇಃ ।**
**'ಸರ್ವವೇದೋಕ್ತಿ(ಕ್ತ)ಮಾರ್ಗೇಣ ಕರ್ಮ ಕುರ್ವೀತ ನಿತ್ಯಶಃ ।**
**ಆನಂದೋ ಹಿ ಫಲಂ ಯಸ್ಮಾತ್ ಶಾಖಾಭೇದೋ ಹ್ಯಶಕ್ತಿಜಃ ।**
**'ಸರ್ವಕರ್ಮಕೃತೌ ಯಸ್ಮಾದಶಕ್ತಾಃ ಸರ್ವಜಂತವಃ ।**
**ಶಾಖಾಭೇದಂ ಕರ್ಮಭೇದಂ ವ್ಯಾಸಸ್ತಸ್ಮಾದಚೀಕ್ಲೃಪತ್ ||'**

**ಇತಿ ಸಮಾಚಾರೇ ಸರ್ವೇಷಾಮಧಿಕಾರಾಚ್ಚ ||**

ಸರ್ವಶಾಖಾಧ್ಯಯನಕ್ಕೆ ಯುಕ್ತ್ಯಂತರವೂ ಇದೆ—'ಸ್ವಾಧ್ಯಾಯೋ ಅಧ್ಯೇತವ್ಯಃ' ಎಂದು ಅಧ್ಯಯನವಿಧಿಯು ಸಾಮಾನ್ಯವಾಗಿದೆ. ಈ ಶಾಖೆಯವರು ಇದನ್ನು ಅಧ್ಯಯನ ಮಾಡಬೇಕು, ಎಂದು ಶಾಖಾಭೇದೇನ ಅಧ್ಯಯನವಿಧಿಭೇದವಿಲ್ಲ. ಸೂತ್ರದ ಹಿಶಬ್ದದಿಂದ ಈ ವಿಷಯದಲ್ಲಿ ಸ್ಮೃತಿಯೂ ಸೂಚಿತವಾಗಿದೆ. (ಸ್ಮೃತಿಯ ಅರ್ಥ) 'ದ್ವಿಜನಿಂದ ಸರಹಸ್ಯಃ=ಉಪನಿಷತ್‌ಸಹಿತವಾಗಿ ಸಕಲವೇದವೂ ತಿಳಿಯಲ್ಪಡಬೇಕು. ಅಧ್ಯಯನ ಅರ್ಥಜ್ಞಾನಕ್ಕಾಗಿ. ಅರ್ಥಜ್ಞಾನ ಕರ್ಮಾಚರಣೆಗಾಗಿ. ಹೀಗೆ ಎಲ್ಲರಿಗೂ ಎಲ್ಲ ವೇದದ ಅಧ್ಯಯನವಿಧಿಯಿಂದಾಗಿ ವೇದೋಕ್ತ ಸರ್ವಕರ್ಮಾಧಿ ಕಾರವು ಸಿದ್ಧವಾಗುತ್ತದೆ. ಕರ್ಮವು ಜ್ಞಾನಸಿದ್ಧಿಗಾಗಿ ಇದೆ. ಆದ್ದರಿಂದ, ಸರ್ವವೇದೋಕ್ತ ವಾದ ಸರ್ವಗುಣಜ್ಞಾನವೂ ಮೋಕ್ಷಾಧಿಕಾರಿಗೆ ಸಿದ್ಧವಾಗುತ್ತದೆ.

'ಎಲ್ಲರೂ ಸಕಲವೇದೋಕ್ತವಿಧಾನದಿಂದ ಪ್ರತಿದಿನವೂ ಕರ್ಮಗಳನ್ನು ಆಚರಿಸಬೇಕು. ಅದಕ್ಕೆ ಮೋಕ್ಷಾನಂದವೇ ಫಲ. ವೇದದಲ್ಲಿ ಕಾಣ್ವ–ಮಾಧ್ಯಂದಿನ ಮುಂತಾದ ಶಾಖಾಭೇದವನ್ನು ಮಾಡಿರುವುದು ಅಶಕ್ತರಿಗಾಗಿ ಮಾತ್ರ. ಏಕೆಂದರೆ, ಎಲ್ಲರಿಗೂ ಎಲ್ಲ ಕರ್ಮಗಳನ್ನೂ ಮಾಡುವ ಶಕ್ತಿಯು ಇರುವುದಿಲ್ಲ. ಆದಕ್ಕಾಗಿ ವ್ಯಾಸರು ಶಾಖಾಭೇದವನ್ನೂ ಕರ್ಮಭೇದವನ್ನೂ ಮಾಡಿದ್ದಾರೆ. (ಭಾಷ್ಯದಲ್ಲಿರುವ ಸಮಾಚಾರೇ=ಎಂಬ ಶಬ್ದಕ್ಕೆ ಕರ್ಮದ ಅನುಷ್ಠಾನದಲ್ಲಿ, ಎಂದು ಅರ್ಥ.)

## ॥ ಓಂ ಸಲಿಲವಚ್ಚ ತನ್ನಿಯಮಃ ಓಂ ॥ ೪ ॥

**ಯಥಾ ಸರ್ವಂ ಸಲಿಲಂ ಸಮುದ್ರಂ ಗಚ್ಛತಿ, ಏವಂ ಸರ್ವಾಣಿ ವಚನಾನಿ ಬ್ರಹ್ಮಜ್ಞಾನಾರ್ಥಾನೀತಿ ನಿಯಮಃ । ಆಗ್ನೇಯೇ ಚ-**

**'ಯಥಾ ನದೀನಾಂ ಸಲಿಲಂ ಶಕ್ತ್ಯೇ ಸಾಗರಗಂ ಭವೇತ್ ।**

**ಏವಂ ವಾಕ್ಯಾನಿ ಸರ್ವಾಣಿ ಪುಂಶಕ್ತ್ಯಾ ಬ್ರಹ್ಮವಿತ್ತಯೇ ॥' ಇತಿ ಚ ।**

ಹೇಗೆ ಭೂಮಿಗೆ ಬಿದ್ದ ಎಲ್ಲ ನೀರೂ ಸಮುದ್ರವನ್ನೇ ಸೇರುತ್ತದೆ ಎಂಬ ನಿಯಮವೋ ಹಾಗೆಯೇ ವೇದದ ಎಲ್ಲಾ ವಚನಗಳೂ ಬ್ರಹ್ಮಜ್ಞಾನಸಂಪಾದನೆ ಗಾಗಿಯೇ ಇವೆ, ಎಂಬ ನಿಯಮವಾಗಿದೆ. ಸೂತ್ರದ ಚಶಬ್ದಸೂಚಿತಸ್ಮೃತಿ ಹೀಗಿದೆ—ಹೇಗೆ ನದಿಗಳ ನೀರು, ತಡೆ ಏನೂ ಇಲ್ಲದಿದ್ದಾಗ, ಸಮುದ್ರವನ್ನು ಸೇರುವುದೋ ಅದರಂತೆ, ವೇದದಲ್ಲಿರುವ ಎಲ್ಲಾ ವಾಕ್ಯಗಳೂ, ಪುರುಷನ ಶಕ್ತಿಗೆ ಅನುಗುಣವಾಗಿ, ಬ್ರಹ್ಮಜ್ಞಾನಕ್ಕಾಗಿ ಇವೆ.

ವಿವರಣೆ—ಸಕಲವೇದಗಳನ್ನೂ ಅರ್ಥಸಹಿತವಾಗಿ ಅಧ್ಯಯನ ಮಾಡಿದವರಿಗೆ ಮಾತ್ರವೇ ಧ್ಯಾನದಲ್ಲಿ ಅಧಿಕಾರವಾದರೆ ಅಲ್ಪಮತಿಗಳು ಧ್ಯಾನಮಾಡುವಂತೆಯೇ ಇಲ್ಲ. ಈ ಆಕ್ಷೇಪದ ಪರಿಹಾರವನ್ನು ಪ್ರಕೃತ ಸೂತ್ರದಲ್ಲಿ ನೀರಿನ ದೃಷ್ಟಾಂತದಿಂದ ಪರಿಹರಿಸಲಾಗಿದೆ. ನೀರೆಲ್ಲಾ ಸಮುದ್ರ ಸೇರುತ್ತದೆ, ಎಂದು ನಿಯಮವಿದ್ದರೂ ಹರಿವ ನೀರಿಗೆ ತಡೆ ಬಂದರೆ, ಒಣಗಿ ಹೋದರೆ, ಅದು ಸಮುದ್ರ ಸೇರುವುದಿಲ್ಲ. ಅದರಂತೆಯೇ ವೇದಗಳೆಲ್ಲವೂ ಧ್ಯಾನಕ್ಕಾಗಿ ಬ್ರಹ್ಮನ ಗುಣಗಳನ್ನು ಹೇಳುತ್ತಿರುವುದ ರಿಂದ ಧ್ಯಾನಮಾಡುವವರೆಲ್ಲರೂ ವೇದೋಕ್ತಾಖಿಲಗುಣಗಳನ್ನೂ ತಿಳಿದಿರಬೇಕು, ಎನ್ನುವ ನಿಯಮವೂ ಸಾಪವಾದ. ಅಶಕ್ತರಾದವರು ತಮ್ಮ ತಮ್ಮ ಶಾಖೋಕ್ತ ಗುಣಗಳನ್ನು ತಿಳಿದರೂ ಸಾಕು.

**॥ ಓಂ ದರ್ಶಯತಿ ಚ ಓಂ ॥ ೫ ॥**

'ಸರ್ವೈಶ್ಚ ವೇದ್ಯೈಃ ಪರಮೋ ಹಿ ದೇವೋ
ಜಿಜ್ಞಾಸ್ಯೋಽಸೌ ನಾಲ್ಪವೇದ್ಯೈಃ ಪ್ರಸಿದ್ಧ್ಯೇತ್ ।
ತಸ್ಮಾದೇನಂ ಸರ್ವವೇದಾನಧೀತ್ಯ
ವಿಚಾರ್ಯ ಚ ಜ್ಞಾತುಮಿಚ್ಛೇನ್ಮುಮುಕ್ಷುಃ ॥'

ಇತಿ ಚತುರ್ವೇದಶಿಖಾಯಾಮ್ ।

'ಸರ್ವಾನ್ ವೇದಾನ್ ಸೇತಿಹಾಸಾನ್ ಸಪುರಾಣಾನ್ ಸಯುಕ್ತಿಕಾನ್ ।
ಸಪಂಚರಾತ್ರಾನ್ ವಿಜ್ಞಾಯ ವಿಷ್ಣುರ್ಜ್ಞೇಯೋ ನಚಾನ್ಯಥಾ ॥'

ಇತಿ ಚ ಬ್ರಹ್ಮತರ್ಕೇ ।

ಸರ್ವವೇದೋಕ್ತಗುಣಗಳನ್ನೂ ಅಧಿಕಾರಿಯು ತಿಳಿದಿರಬೇಕೆಂದು ಶ್ರುತಿ ಮತ್ತು ಸ್ಮೃತಿಗಳೂ ಹೇಳುತ್ತವೆ—ಪರಬ್ರಹ್ಮನು ಸಕಲವೇದೋಕ್ತಗುಣಗಳಿಂದ ತಿಳಿಯಲ್ಪಡ ಬೇಕು. ಅವನ ಜ್ಞಾನವು ಅಲ್ಪವೇದಾಧ್ಯಯನ ಮಾತ್ರದಿಂದ ಬರುವುದಿಲ್ಲ. ಆದ್ದರಿಂದ ಸಮಗ್ರವೇದವನ್ನು ಓದಿ ಬ್ರಹ್ಮಸೂತ್ರೋಕ್ತವಾದ ಯುಕ್ತಿಗಳಿಂದ ಅರ್ಥನಿರ್ಧಾರ ಮಾಡಿ ಮುಮುಕ್ಷುವು ಬ್ರಹ್ಮನನ್ನು ತಿಳಿದುಕೊಳ್ಳಲು ಪ್ರಯತ್ನಿಸಬೇಕು. ಇದು ಚತುರ್ವೇದ ಶಿಖೆಯ ವಚನದ ಅರ್ಥ.

ಇತಿಹಾಸ ಪುರಾಣಗಳ ಜೊತೆಗೆ ಸಕಲವೇದಗಳನ್ನೂ ಯುಕ್ತಿಯುಕ್ತವಾಗಿ

ವಿಚಾರಮಾಡಿ, ಜೊತೆಯಲ್ಲಿ ಪಂಚರಾತ್ರವನ್ನೂ ತಿಳಿದು ವಿಷ್ಣುವಿನ ಜ್ಞಾನವನ್ನು ಗಳಿಸಿಕೊಳ್ಳಬೇಕು. ಅರೆಬರೆ ಅಧ್ಯಯನದಿಂದ ಬಂದ ಜ್ಞಾನ ಸಾಲದು, ಇದು ಬ್ರಹ್ಮತರ್ಕವಚನದ ಅರ್ಥ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್ ಓಂ ॥** (ಅತ್ರ ನಯೇ ಧ್ಯಾನಾಂಗ–ಸರ್ವಸಚ್ಛಾಸ್ತ್ರ–ಶ್ರವಣ–ಮನನ–ಕರ್ತವ್ಯತಾ ಸಾಧ್ಯತೇ । ಪ್ರಾಕ್ ಪೂರ್ವಪದಪ್ರಕೃತಂ ಬ್ರಹ್ಮ ಅನ್ವೇತಿ । ಅಂತೋ ನಿರ್ಣಯಃ 'ಉಭಯೋರಪಿ ದೃಷ್ಟೋಽಂತ' ಇತ್ಯಾದೇಃ । ಸರ್ವವೇದಾನಾಮ್ ಅಂತೇನ=ಸರ್ವವೇದವಿಷಯ–ಶ್ರವಣಮನನ–ಸಾಧ್ಯನಿರ್ಣಯೇನ, ಉತ್ಪಾದ್ಯಃ ಪ್ರತ್ಯಯಃ=ಜ್ಞಾನಂ ಯಸ್ಯ ತತ್=ಬ್ರಹ್ಮ । ಯಥಾಶಕ್ತಿ ಸರ್ವವೇದಾನ್ ಶ್ರವಣಾದಿನಾ ನಿರ್ಣೀಯ ಜ್ಞಾತವ್ಯಂ ಬ್ರಹ್ಮ, ಇತಿ ಯಾವತ್ । ನತು ಸ್ವಶಾಖಾಮಾತ್ರೋಕ್ತರೀತ್ಯಾ ಇತ್ಯರ್ಥಃ । ಕುತಃ ? ಚೋದನಾದ್ಯವಿಶೇಷಾತ್ । ಚೋದನಾ=ವಿಧಿಃ । ಸಃ ಅತ್ರ ತದ್ವತ್ಶಾಖಾಪರಃ । ಚೋದನಾಸು= ತದ್ಯುಕ್ತಕಾಣ್ವಾದಿಶಾಖಾಸು ಅವಿಶೇಷಾತ್=ಕಾಣ್ವೈರೇವಂ ಜ್ಞೇಯಂ, ಮಾಧ್ಯಂದಿನೈರೇವಮ್ ಇತಿ ಅಧಿಕಾರಿವಿಶೇಷಾಭಾವಾತ್ । ಸ ಕಥಂ ಜ್ಞೇಯಃ ? ಇತ್ಯತೋಽಪಿ 'ಚೋದನಾದ್ಯವಿಶೇಷಾತ್' । ಚೋದನಾನಾಮ್='ಆತ್ಮೇತ್ಯೇವೋ ಸೀತ' ಇತ್ಯಾದಿ ವಿಧೀನಾಮ್ ಅವಿಶೇಷಾತ್=ಸರ್ವಾಧಿಕಾರಿಸಾಧಾರಣ್ಯಾತ್ ಇತ್ಯರ್ಥ ಅನ್ಯಥಾ ಕಾಣ್ವೈರೇವಮ್, ಇತಿ ವಿಧಿಸಮೀಪೇ ಶ್ರವಣಂ ಸ್ಯಾತ್ । ತದಭಾವಾತ್ ಜ್ಞಾಯತೇ ಇತಿ ಭಾವಃ । ಆದಿಪದಾತ್ ಯುಕ್ತಿಃ । ಅಧಿಕಾರಿವಿಶೇಷಕಲ್ಪಕಾನಾಂ ಜ್ಞಾನವಿಧ್ಯರ್ಥಂ ತತ್ರತತ್ರೋಕ್ತಾರ್ಥವಾದಾದಿರೂಪಯುಕ್ತೀನಾಮ್ ಅವಿಶೇಷಾತ್ ಇತ್ಯರ್ಥಃ ।)

ಈ ಅಧಿಕರಣದಲ್ಲಿ ಧ್ಯಾನಕ್ಕೆ ಅಂಗವಾಗಿ ಸರ್ವಶಾಸ್ತ್ರಗಳ ಶ್ರವಣ ಮತ್ತು ಮನನಗಳನ್ನು ಮಾಡಬೇಕು, ಎಂದು ಹೇಳಲಾಗಿದೆ. ಬ್ರಹ್ಮ ಎಂದು ವಿಶೇಷ್ಯ ವಾಚಕಪದ. ಅಂತ ಎಂದರೆ ನಿರ್ಣಯ. ಸರ್ವವೇದಾಂತಪ್ರತ್ಯಯಂ ಬ್ರಹ್ಮ–ಸರ್ವವೇದಾನಾಂ ಅಂತೇನ ಪ್ರತ್ಯಯಃ ಯಸ್ಯತತ್ । ಸರ್ವವೇದಗಳ ಶ್ರವಣ ಮತ್ತು ಮನನಗಳನ್ನು ಮಾಡಿ ಉಂಟಾದ ಅಂತ=ನಿರ್ಣಯ, ಅದರಿಂದ ಹುಟ್ಟಿದ ಪ್ರತ್ಯಯ=ಜ್ಞಾನ, ಅಂತಹ ಜ್ಞಾನಕ್ಕೆ ವಿಷಯನಾದವನು ಬ್ರಹ್ಮ. ಶಕ್ಯನುಸಾರವಾಗಿ ಎಲ್ಲಾ ವೇದಗಳನ್ನೂ ಶ್ರವಣಮಾಡಿ ಬ್ರಹ್ಮಸೂತ್ರೋಕ್ತ ಯುಕ್ತಿಗಳಿಂದ ಅರ್ಥವಿಮರ್ಶೆ

ಮಾಡಿ ಬಂದಿರುವ ಜ್ಞಾನಕ್ಕೆ ವಿಷಯನಾದವನು ಬ್ರಹ್ಮ. ಕೇವಲ ಸ್ವಶಾಖಾಧ್ಯಯನ ಮನನಗಳಿಂದ ಬಂದ ಜ್ಞಾನ ಸಾಲದು. ಏಕೆಂದರೆ, 'ಚೋದನಾದ್ಯವಿಶೇಷಾತ್ ।' ಚೋದನಾ ಎಂದರೆ 'ಜ್ಞಾತವ್ಯಃ, ಉಪಾಸೀತ' ಮುಂತಾದ ವಿಧಿ. ಅಂತಹ ವಿಧಿ ವಾಕ್ಯಗಳಿಂದ ಕೂಡಿರುವ ಶಾಖೆಗಳು ಎಂದು ಪ್ರಕೃತದಲ್ಲಿ ಸೂತ್ರಕಾರರಿಗೆ ವಿವಕ್ಷಿತವಾದ ಅರ್ಥ. ಚೋದನಾಸು=ವಿಧಿ ವಾಕ್ಯಗಳಿಂದ ಕೂಡಿರುವ ಶಾಖೆಗಳಲ್ಲಿ ಅವಿಶೇಷಾತ್= ಕಾಣ್ವರು ಇಷ್ಟು, ಮಾಧ್ಯಂದಿನರು ಇಷ್ಟು ಶ್ರವಣಾದಿಗಳನ್ನು ಮಾಡಬೇಕು, ಎಂದು ಅಧಿ ಕಾರಿವಿಶೇಷಣಗಳು ಇಲ್ಲ. ಅದರಂತೆ, ಎಲ್ಲಾ ಶಾಖೆಗಳಲ್ಲೂ 'ತದ್ವಿಜಿಜ್ಞಾಸಸ್ವ' ಎಂದು ಸಾಧಾರಣವಾದ ವಿಧಿಯೇ ಇದೆ. ಕಾಣ್ವಶಾಖೆಯವರು ಇಷ್ಟು ಶ್ರವಣಾದಿಗಳನ್ನು ಮಾಡಬೇಕು, ಎಂಬ ವಿಶೇಷವಿಧಿಗಳು ಇಲ್ಲ, ಎಂದು ತಾತ್ಪರ್ಯಾರ್ಥ. ಸೂತ್ರ ದಲ್ಲಿರುವ ಆದಿಪದದಿಂದ ಅಂತಹ ವಿಧಿವಾಕ್ಯದ ಜೊತೆಯಲ್ಲಿರುವ ಅರ್ಥವಾದ ವಾಕ್ಯ ಗಳಲ್ಲೂ ಅಧಿಕಾರಿವಿಶೇಷಕಲ್ಪಕವಾದುದು ಇಲ್ಲ, ಎಂಬ ಯುಕ್ತಿಯು ಸೂಚಿತವಾಗಿದೆ.

**॥ ಓಂ ಭೇದಾನ್ನೇತಿ ಚೇದೇಕಸ್ಯಾಮಪಿ ಓಂ ॥** ('ವಿಜ್ಞಾನಮಾನಂದಂಬ್ರಹ್ಮ' 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಇತ್ಯಾದಿನಾ ಪ್ರತಿಶಾಖಂ ವಸ್ತುಭೇದಾತ್ ನೈಕಂ ಬ್ರಹ್ಮ ಸರ್ವವೇದಾಂತಪ್ರತ್ಯಯಮ್ । ಕಿಂತು ಸ್ವಸ್ವಶಾಖಾಪ್ರತ್ಯಯಮೇವ । ಏಕಸ್ಯೈವ ವಸ್ತುನಃ ಅಧಿಕಾರಿಣಾ ಜ್ಞೇಯತ್ವಾತ್, ಇತಿ ಚೇತ್ ನೇತಿ ನಞಃ ಆವೃತ್ತಿಃ । ಕುತಃ ? ಏಕಸ್ಯಾಮಪಿ । ಪ್ರಕೃತತ್ವಾತ್ ಶಾಖಾಯಾಮ್ ಇತ್ಯನ್ವೇತಿ । ಭೇದಾತ್ ಇತ್ಯನುಷಂಗಃ । 'ಆತ್ಮೇತ್ಯೇವ ಉಪಾಸೀತ' 'ಖಂ ಬ್ರಹ್ಮ, ಖಂ ಬ್ರಹ್ಮ' ಇತಿ ಏಕಶಾಖಾಯಾಮಪಿ ಅರ್ಥಭೇದೋಕ್ತೇಃ ಏಕಶಾಖೋಕ್ತಮಪಿ ನ ಜ್ಞೇಯಂ ಸ್ಯಾದಿತ್ಯರ್ಥಃ । ತತ್ರ ಧರ್ಮ್ಯನುವಾದೇನ ಅನ್ಯಾನ್ಯಧರ್ಮ ವಿಧಾನಾತ್ ಅಸ್ತು ಐಕ್ಯಮ್, ಇತಿ ಅಂಗೀಕಾರೇ ಸರ್ವಶಾಖಾಸ್ವಪಿ ತಥಾ ಸ್ಯಾದಿತಿ ಭಾವಃ ।)

ಈ ಸೂತ್ರದಲ್ಲಿ ಪೂರ್ವಪಕ್ಷ ಮಾಡಿ ಉತ್ತರ ಕೊಡಲಾಗಿದೆ. ಬೃಹದಾರಣ್ಯಕದಲ್ಲಿ 'ವಿಜ್ಞಾನಮಾನಂದಂ ಬ್ರಹ್ಮ' ಎಂದು ಜ್ಞೇಯಬ್ರಹ್ಮನ ನಿರ್ದೇಶವಿದೆ. ತೈತ್ತಿರೀಯದಲ್ಲಿ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂದಿದೆ. ಹೀಗೆ ಭೇದಾತ್=ಶಾಖಾಭೇದೇನ ಜ್ಞೇಯಬ್ರಹ್ಮನನ್ನೂ, ವಿಭಿನ್ನವಾಗಿ ಹೇಳಿರುವುದರಿಂದ ಬ್ರಹ್ಮನು 'ಸರ್ವವೇದಾಂತ ಪ್ರತ್ಯಯನಲ್ಲ' ಅಂದರೆ, ಸರ್ವವೇದಗಳನ್ನೂ ಶ್ರವಣ–ಮನನ ಮಾಡಿ ಬ್ರಹ್ಮನ ಜ್ಞಾನವನ್ನು ಸಂಪಾದಿಸಬೇಕಾದ ಅಗತ್ಯವಿಲ್ಲ. ಒಂದು ಶಾಖೆಗೆ ಸೇರಿದವನು ಆ ಶಾಖೆಯಲ್ಲಿ ಹೇಳಿರುವ ಬ್ರಹ್ಮನನ್ನು ವಿಮರ್ಶೆ ಮಾಡಿ ತಿಳಿದರೆ ಸಾಕು ಎಂದು. ಈ ಪೂರ್ವಪಕ್ಷವು ಸರಿಯಲ್ಲ. ಈ ಕಾರಣವನ್ನು ಹೇಳಿದರೆ ಏಕಸ್ಯಾಮಪಿ ಹಿ=ಒಂದೇ

ಶಾಖೆಯಲ್ಲೂ ಮತ್ತೆ ಅಧಿಕಾರಿಭೇದ ಬಂದೀತು. ಕಾಣ್ವಶಾಖೆಗೆ ಸೇರಿದ ಬೃಹದಾರಣ್ಯಕ ದಲ್ಲಿ 'ಆತ್ಮೇತ್ಯೇವೋಪಾಸೀತ' ಎಂದು ಆತ್ಮತ್ವೇನ ಬ್ರಹ್ಮನಿಗೆ ಉಪಾಸ್ಯತ್ವವನ್ನು ಹೇಳಿ, ಅವನಿಗೆ ಅನೇಕ ಗುಣಗಳನ್ನು ಹೇಳಲಾಗಿದೆ. ಹೀಗೆ ಉಪಾಸನಾ ವಿಷಯಬೇಧ ಬಂತು. ಅದರಂತೆ ಛಾಂದೋಗ್ಯದಲ್ಲಿ 'ಖಂ ಬ್ರಹ್ಮ=ಪ್ರಕಾಶರೂಪಬ್ರಹ್ಮ' 'ಖಂ ಬ್ರಹ್ಮ=ಸುಖರೂಪಬ್ರಹ್ಮ' ಎಂದು ಉಪಾಸ್ಯಬೇಧದ ನಿರ್ದೇಶವಿದೆ. ಇದರಿಂದ ಒಂದೇ ಶಾಖೆಯಲ್ಲೂ ಅಧಿಕಾರಿಭೇದವು ಬರಬೇಕಾದೀತು. ಆದ್ದರಿಂದ ಆ ಶಾಖೆಗಳಲ್ಲಿ ಮೊದಲು ಹೇಳಿದ ಬ್ರಹ್ಮನಿಗೇ ಅನಂತರ ಗುಣ ವಿಶೇಷಗಳನ್ನು ಹೇಳಲಾಗಿದೆ. ಹೀಗಾಗಿ ಸಮಗ್ರಶಾಖೆಯಲ್ಲಿ ಹೇಳಿದ ಗುಣಗಳಿಂದ ಕೂಡಿರುವ ಒಬ್ಬನೇ ಬ್ರಹ್ಮನು ವಿಷಯ ಎನ್ನುವುದಾದಲ್ಲಿ ಸಮಗ್ರವೇದಕ್ಕೂ ಇದೇ ಸಮಾಧಾನವನ್ನು ಹೇಳಬಹುದು.

**॥ ಓಂ ಸ್ವಾಧ್ಯಾಯಸ್ಯ ತಥಾತ್ವೇನ ಹಿ ಸಮಾಚಾರೇಽಧಿಕಾರಾಚ್ಚ ಓಂ ॥**

(ಸ್ವಾಧ್ಯಾಯಸ್ಯ ತಥಾತ್ವೇನೇತ್ಯಾವರ್ತತೇ । ಸ್ವಾಧ್ಯಾಯಸ್ಯ=ಲಕ್ಷಣಯಾ ಸ್ವಾಧ್ಯಾಯೋ ಅಧ್ಯೇತವ್ಯಃ, ಇತಿ ಸ್ವಾಧ್ಯಾಯಾನಾಧ್ಯಯನವಿಧೇಃ ಇತ್ಯರ್ಥಃ। ತಥಾತ್ವೇನ= ಅವಿಶೇಷೇಣ=ಸರ್ವಾಧಿಕಾರಿಸಾಧಾರಣ್ಯೇನ, ಸರ್ವವೇದಾಧ್ಯಯನವಿಧಾಯಕತ್ವೇನ ಹೇತುನಾ ಇತ್ಯರ್ಥಃ। ಸ್ವಾಧ್ಯಾಯಸ್ಯ ಸರ್ವಶಾಖಾಸಮೂಹಸ್ಯ ತಥಾತ್ವೇನ= ಅವಿಶೇಷೇಣೈವ ಉಕ್ತೇನೈವ ಅಧ್ಯೇತವ್ಯತ್ವೇನೈವ, 'ವೇದಃ ಕೃತ್ಸ್ನೋಽಧಿಗಂತವ್ಯಃ' ಇತಿ ಹಿಶಬ್ದಸೂಚಿತಸ್ಮೃತೇಶ್ಚ ಸರ್ವವೇದಾಂತಪ್ರತ್ಯಯಂ ಬ್ರಹ್ಮ। ಅಧ್ಯಯನಸ್ಯ ಜ್ಞಾನಾರ್ಥತ್ವಾತ್ ಇತಿ ಭಾವಃ । ತಥಾ, ಸಮಾಚಾರೇ ಅಧಿಕಾರಾಚ್ಚ। ಅಸ್ಯಾಪ್ಯಾವೃತ್ತಿಃ । 'ಸರ್ವವೇದೋಕ್ತಮಾರ್ಗೇಣ ಕರ್ಮ ಕುರ್ವೀತ' ಇತಿ ಸ್ಮೃತ್ಯಾ ಸಮಾಚಾರೇ= ಸರ್ವವೇದೋಕ್ತಕರ್ಮಣಃ ಸಮ್ಯಗನುಷ್ಠಾನೇ ಸರ್ವೇಷಾಮಧಿಕಾರಾಚ್ಚ। ಸಮಾಚಾರೇ–ಚರ ಗತೌ, ಸರ್ವವೇದೋಕ್ತ–ಬ್ರಹ್ಮಜ್ಞಾನೇ ಸುತರಾಮ್ ಅಧಿಕಾರಾತ್, ಸರ್ವವೇದಾಂತ ಪ್ರತ್ಯಯಂ ಬ್ರಹ್ಮ, ಇತ್ಯನುವರ್ತ್ಯ ಯೋಜ್ಯಮ್।)

ಸ್ವಾಧ್ಯಾಯಸ್ಯ='ಸ್ವಾಧ್ಯಾಯೋ ಅಧ್ಯೇತವ್ಯಃ' ಎಂಬ ಆದೇಶವು ತಥಾತ್ವೇನ=ಎಲ್ಲ ಶಾಖೆಯವರಿಗೂ ಸಮಾನವಾದ ಕಾರಣ, ಸ್ವಾಧ್ಯಾಯಸ್ಯ=ಸರ್ವಶಾಖಾಸಮುದಾಯ ರೂಪವಾದ ವೇದವು ತಥಾತ್ವೇನ=ಏಕರೀತಿಯಿಂದ ಸಮಾನವಾಗಿ ಅಧ್ಯೇಯವೆಂದು 'ವೇದಃ ಕೃತ್ಸ್ನೋಽಧಿಗಂತವ್ಯಃ' ಎಂಬ ಸ್ಮೃತಿಯಲ್ಲಿ ಹೇಳಿರುವುದರಿಂದಲೂ ಹಾಗೂ ಸಮಾಚಾರೇ=ಸಕಲವೇದೋಕ್ತ ಕರ್ಮದ ಅನುಷ್ಠಾನದಲ್ಲಿ ಅಧಿಕಾರಾಚ್ಚ=ಎಲ್ಲರಿಗೂ ಸಮಾನವಾದ ಅಧಿಕಾರವಿರುವುದರಿಂದ ಸಮಾಚಾರೇ=ಸರ್ವವೇದೋಕ್ತ ಬ್ರಹ್ಮಜ್ಞಾನ

ದಲ್ಲೂ ಸುತರಾಂ ಅಧಿಕಾರವಿರುವುದರಿಂದಾಗಿಯೂ 'ಸರ್ವವೇದಾಂತಪ್ರತ್ಯಯಂ ಬ್ರಹ್ಮ.'

**॥ ಓಂ ಸಲಿಲವಚ್ಚ ತನ್ನಿಯಮಃ ಓಂ ॥** (ಚ ಏವ। ಸ ಚಾಸೌ ನಿಯಮಶ್ಚ। ಸರ್ವವೇದಾಂತಪ್ರತ್ಯಯಂ ಬ್ರಹ್ಮೇತ್ಯೇಷ ನಿಯಮಃ, ಸಲಿಲವತ್=ಸಲಿಲಾನಾಂ ಸಮುದ್ರಪ್ರಾಪ್ತಿನಿಯಮ ಇವ, ಇತ್ಯರ್ಥಃ। 'ಸರ್ವಾಸಾಮಪಾಂ ಸಮುದ್ರ ಏವಾಯತನಮ್' ಇತ್ಯುಕ್ತೋ ನಿಯಮಃ ಸತ್ಯಾಂ ಶಕ್ತೌ। ಏವಮೇವ ಸರ್ವವೇದಾಂತಪ್ರತ್ಯಯಂ ಬ್ರಹ್ಮ, ಇತ್ಯೇಷೋಽಪಿ ತರ್ತತ್–ಪುಂಶಕ್ತಿಮಪೇಕ್ಷ್ಯೈವ ಇತಿ ಭಾವಃ। ಸಲಿಲೇತ್ಯುಕ್ತಿಃ 'ಯಥಾ ನದೀನಾಂ ಸಲಿಲಂ ಶಕ್ಯೇ ಸಾಗರಗಂ' ಇತಿ ಶ್ರುತಿಸೂಚನಾರ್ಥಾ।)

ತನ್ನಿಯಮಃ=ಸರ್ವವೇದಗಳ ಶ್ರವಣ–ಮನನಗಳಿಂದ ನಿರ್ಣೀತವಾದ ಜ್ಞಾನಕ್ಕೆ ಬ್ರಹ್ಮನು ವಿಷಯ ಎಂಬ ನಿಯಮವು ಸಲಿಲವತ್=ಎಲ್ಲಾ ನೀರೂ ಸಮುದ್ರ ಸೇರುತ್ತದೆ ಎಂಬ ನಿಯಮದಂತೆ. ಕೆಲವು ನೀರು ಸಮುದ್ರ ಸೇರುವುದಿಲ್ಲ, ಇದ್ದಲ್ಲೆ ಒಣಗಿ ಹೋಗುತ್ತದೆ. ಅದರಂತೆ ಅಶಕ್ತರು ಸರ್ವವೇದಗಳನ್ನೂ ಓದಿ ತಿಳಿಯಬೇಕಿಲ್ಲ.

**॥ ಓಂ ದರ್ಶಯತಿ ಚ ಓಂ ॥** (ಸರ್ವೈಶ್ಚ ವೇದೈಃ ಪರಮೋ ಹಿ ದೇವಃ ಜಿಜ್ಞಾಸ್ಯಃ' ಇತಿ ಶ್ರುತಿಃ ದರ್ಶಯತಿ ಉಕ್ತಾರ್ಥಂ ಚಶಬ್ದಾತ್ 'ಸರ್ವಾನ್ ವೇದಾನ್ ಸೇತಿಹಾಸಾನ್' ಇತಿ ಸ್ಮೃತಿಶ್ಚ, ಯತಃ ಅತಃ ಸರ್ವವೇದಾಂತಪ್ರತ್ಯಯಂ ಬ್ರಹ್ಮ, ಇತ್ಯರ್ಥಃ।)

'ಸರ್ವೈಶ್ಚ ವೇದೈಃ' ಎಂಬ ಶ್ರುತಿ ಹಾಗೂ 'ಸರ್ವಾನ್ ವೇದಾನ್' ಎಂಬ ಸ್ಮೃತಿ ಬ್ರಹ್ಮನು ಸರ್ವವೇದಾಂತ ಪ್ರತ್ಯಯ ಎಂದು ತಿಳಿಸುತ್ತದೆ.

## ಅದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್ ॥** ಬ್ರಹ್ಮನು ನಿರ್ಗುಣನಾದರೂ ಸಗುಣಬ್ರಹ್ಮನ ಉಪಾಸನೆಯನ್ನು ಉಪನಿಷತ್ತುಗಳಲ್ಲಿ ಹೇಳಲಾಗಿದೆ. ಕೆಲವೊಂದು ಸಗುಣಬ್ರಹ್ಮೋಪಾಸನೆಯಿಂದ ದೃಷ್ಟಫಲ, ಕೆಲವು ಉಪಾಸನೆಗಳಿಂದ ಅದೃಷ್ಟಫಲ, ಮತ್ತೆ ಕೆಲವು ಉಪಾಸನೆಯಿಂದ ಕ್ರಮೇಣ ಸಮ್ಯಗ್‌ಜ್ಞಾನವಾಗುವ ಮೂಲಕ ಮುಕ್ತಿಫಲ. ಈ ಸಗುಣೋಪಾಸನೆಯು ತೈತ್ತಿರೀಯಕ, ವಾಜಸನೇಯಕ, ಕೌಥುಮ, ಶಾಠ್ಯಾಯನಾದಿ ಶಾಖೆಗಳಲ್ಲಿ ಹೇಳಲಾಗಿದ್ದು ಏಕರೂಪವಾದುದು.

ಸರ್ವವೇದಾಂತಪ್ರತ್ಯಯ ಎಂದರೆ ಶಾಖಾಭೇದೇನ ಸಕಲವೇದಾಂತಗಳಲ್ಲಿ ಹೇಳಿದ ಬ್ರಹ್ಮಜ್ಞಾನವೂ ಒಂದೇ ವಿಧವಾದುದು. (ಯಾನಿ ಏಕಸ್ಮಿನ್ ವೇದಾಂತೇ ತಾನ್ಯೇವ ವೇದಾಂತಾಂತರೇಷ್ವಪಿ–ಭಾಮತೀ.) ಚೋದನಾದ್ಯವಿಶೇಷಾತ್–ಚೋದನಾ ಎಂದರೆ ಪುರುಷಪ್ರಯತ್ನ. ಆದಿಪದದಿಂದ ಫಲಸಂಯೋಗ ಮತ್ತು ಉಪಾಸ್ಯ ವಸ್ತು. ಇವು ಅವಿಶೇಷಾತ್=ಏಕವಿಧವಾಗಿವೆಯಾದ್ದರಿಂದ. 'ಯೋ ಹ ವೈ ಜ್ಯೇಷ್ಠಂ ಚ ಶ್ರೇಷ್ಠಂ ಚ ವೇದ' ಹೀಗೆ ಬೃಹದಾರಣ್ಯಕ (ವಾಜಸನೇಯ) ಮತ್ತು ಚ್ಛಾಂದೋಗ್ಯಶಾಖೆಯಲ್ಲಿ ಹೇಳಿರುವ ಪ್ರಾಣೋಪಾಸನೆಯು ಒಂದೇ ವಿಧವಾಗಿದೆ. ಇದರ ಫಲವೂ 'ಜ್ಯೇಷ್ಠಶ್ಚ ಶ್ರೇಷ್ಠಶ್ಚ ಸ್ವಾನಾಂ ಭವತಿ' ಎಂದು ಒಂದೇ ರೀತಿಯಾಗಿದೆ. ಆದ್ದರಿಂದ ಶಾಖಾಭೇದದಿಂದ ಉಪಾಸನೆಯು ಭಿನ್ನವಲ್ಲ.

**॥ ಭೇದಾನ್ನೇತಿ ಚೇದೇಕಸ್ಯಾಮಪಿ ॥** ಗುಣಾದಿಭೇದಾತ್ ವಿದ್ಯಾಭೇದವನ್ನು (ಉಪಾಸನಾಭೇದವನ್ನು) ಅಂಗೀಕರಿಸಬೇಕಾಗುತ್ತದೆ—ಕಾಠಕ, ವಾಜಸನೇಯ ಇತ್ಯಾದಿನಾಮಭೇದದಿಂದ ವಿದ್ಯಾಭೇದವನ್ನು ಅಂಗೀಕರಿಸಬೇಕು. ಅದರಂತೆ ರೂಪಭೇದಾತ್ ವಿದ್ಯಾಭೇದ. ವಾಜಸನೇಯಿೀಶಾಖೆಯವರು (ಬೃಹದಾರಣ್ಯಕ) ದ್ಯು–ಪರ್ಜನ್ಯಾದಿ ಅಗ್ನಿಗಳೊಂದಿಗೆ ಆರನೆಯದಾದ ಚಿತಾಗ್ನಿಯನ್ನೂ ಪರಿಗಣಿಸುತ್ತಾರೆ. ಛಾಂದೋಗ್ಯರು (ಚ್ಛಂದೋಗೇನ ದೃಷ್ಟಾಂ ಅಧೀಯತೇ ಯೈಃ) 'ಅಥ ಹ ಯ ಏತಾನೇವಂ ಪಂಚಾಗ್ನೀನ್ ವೇದ' (ಛಾಂ.5.10.10) ದ್ಯು–ಪರ್ಜನ್ಯಾದಿ ಐದು ಅಗ್ನಿಗಳನ್ನು ಮಾತ್ರ ಪಂಚಾಗ್ನಿವಿದ್ಯೆಯಲ್ಲಿ ಸೇರಿಸುತ್ತಾರೆ. ಹೀಗೆ ಗುಣಭೇದಾತ್ ವಿದ್ಯಾಭೇದ, ಎನ್ನುವುದು ಸರಿಯಲ್ಲ. ಏಕಸ್ಯಾಮಪಿ=ವಿದ್ಯೆ ಒಂದೇ ಆದರೂ ಇಂತಹ ಗುಣಭೇದವು ಉಪಪನ್ನವಾಗುತ್ತದೆ. ಕಾಠಕ ಮುಂತಾದ ನಾಮಗಳು ಶಾಖೆಗಳಿಗೆ ಹೊರತು ವಿದ್ಯೆಗಳಿಗಲ್ಲ. ವಿದ್ಯೆಗಳಿಗೆ ಆ ನಾಮಗಳು ಗೌಣ. ಅದರಂತೆ, ಎರಡೂ ಶಾಖೆಗಳಲ್ಲಿ ಐದಕ್ಕಂತೂ ಅಗ್ನಿತ್ವವು ಉಭಯ ಸಂಮ್ಮತ. ಛಾಂದೋಗ್ಯದಲ್ಲಿ ಈ ಷಷ್ಠಾಗ್ನಿಯ ಉಲ್ಲೇಖ ಇದೆ–ತಂ ಪ್ರೇತಂ ದಿಷ್ಟಮಿತೋಗ್ನಯ ಏವ ಹರಂತಿ'' (5.9.2) ಆದ್ದರಿಂದ ಶಾಖಾಭೇದೇನ ಉಪಾಸನಾಭೇದ ಇಲ್ಲ.

**॥ ಸ್ವಾಧ್ಯಾಯಸ್ಯ ತಥಾತ್ವೇನ ಹಿ ಸಮಾಚಾರೇಽಧಿಕಾರಾಚ್ಚ ಸವವಚ್ಚ ತನ್ನಿಯಮಃ ॥** (ದ್ವೈತಭಾಷ್ಯದ 4ನೇ ಸೂತ್ರವನ್ನೂ ಮೂರನೇ ಸೂತ್ರದಲ್ಲೇ ಸೇರಿಸಲಾಗಿದೆ. ದ್ವೈತಭಾಷ್ಯದ ಸೂತ್ರಪಾಠ 'ಸಲಿಲವಚ್ಚ ತನ್ನಿಯಮಃ' ಎಂದಾದರೆ ಅದ್ವೈತಭಾಷ್ಯದ ಪಾಠ 'ಸವವಚ್ಚ ತನ್ನಿಯಮಃ')

ಆಥರ್ವಣಿಕರು ಶಿರೋವ್ರತವನ್ನು ಬ್ರಹ್ಮವಿದ್ಯಾಧಿಕಾರದಲ್ಲಿ ಸೇರಿಸಿದ್ದಾರೆ— ತೇಷಾಮೇವೈತಾಂ ಬ್ರಹ್ಮವಿದ್ಯಾಂ ವದೇತ ಶಿರೋವ್ರತಂ ವಿಧಿವದ್ ಯೈಸ್ತು ಚೀರ್ಣಮ್॥ (ಮುಂ.3.2.10) ಎಂದು. ಉಳಿದವರಿಗೆ ಈ ನಿಯಮವಿಲ್ಲ. ಹೀಗೆ ಅಧಿಕಾರಿಭೇದಾತ್ ವಿದ್ಯಾಭೇದವನ್ನೂ ಹೇಳಬಾರದು. ಸ್ವಾಧ್ಯಾಯಸ್ಯ=ತಮ್ಮ ಉಪನಿಷತ್ತಿನ (ಮುಂಡಕೋಪನಿಷತ್) ಅಧ್ಯಯನವು ತಥಾತ್ವೇನ=ಶಿರೋವ್ರತಾಖ್ಯ ಧರ್ಮಯುಕ್ತವಾದುದು. ಶಿರೋವ್ರತವು ಅಧ್ಯಯನಧರ್ಮ. ಅದು ಉಪಾಸನಾ ಧರ್ಮವಲ್ಲ. 'ನೈತದ್ ಅಚೀರ್ಣವ್ರತೋಽಧೀತೇ' (ಮುಂ.3.2.11) ಎಂದು ಸ್ಪಷ್ಟವಾಗಿ ಅದು ಅಧ್ಯಯನಧರ್ಮವೆಂದು ತಿಳಿಯುತ್ತದೆ. 'ಏತಾಂ ಬ್ರಹ್ಮವಿದ್ಯಾಂ' ಎಂಬಲ್ಲೂ ಏತಾಂ=ಆಥರ್ವಣ ಗ್ರಂಥವಿಶೇಷೋಕ್ತವಿದ್ಯೆಗೆ ಮಾತ್ರ ಶಿರೋವ್ರತವು ಅಧಿಕಾರ. ಅರ್ಥಾತ್ ಗ್ರಂಥಾಧ್ಯಯನಕ್ಕೆ ಮಾತ್ರ ಅದು ಅಧಿಕಾರ. 'ಸಮಾಚಾರೇ= ವೇದ–ವ್ರತೋಪದೇಶಪರೇ ಗ್ರಂಥೇ ತಥಾತ್ವೇನ=ಸ್ವಾಧ್ಯಾಯಧರ್ಮತ್ವೇನ ವ್ಯಾಖ್ಯಾತಂ ಇತಿ ಆಥರ್ವಣಿಕಾಃ ಸಮಾಮನಂತಿ॥ (ಶಾಂ.ಭಾ.)' ವೇದಾಧ್ಯಯನದ ವ್ರತವನ್ನು ತಿಳಿಸುವ ಆಥರ್ವಣೋಪನಿಷತ್ತಿನಲ್ಲಿ ಅಧ್ಯನಾಂಗತ್ವೇನ ಶಿರೋವ್ರತವು ಹೇಳಲ್ಪಟ್ಟಿದೆ. ಉಪಾಸನಾಂಗತ್ವೇನ ಅಲ್ಲ.

ಅದಕ್ಕೆ ಉದಾಹರಣೆ ಸವವಚ್ಚ–ಸವಾಃ ಹೋಮಾಃ । ಸೌರ್ಯಾದಿ ಸಪ್ತಹೋಮಗಳಿಗೆ ತ್ರೇತಾಗ್ನಿ ಸಂಬಂಧವಿಲ್ಲ, ಏಕಾಗ್ನಿಸಂಬಂಧ ಎಂದು ಹೇಳಲಾಗಿದೆ. ಆಥರ್ವಣರು ಏಕರ್ಷಿನಾಮಕ ಏಕಾಗ್ನಿಯವರು. ಆದ್ದರಿಂದ ಸೌರ್ಯಾದಿ ಸವಗಳಲ್ಲಿ ಅವರಿಗೇ ಅಧಿಕಾರ, ಎಂದು ನಿರ್ಧರಿಸಲಾಗಿದೆ. ಅದರಂತೆ ಪ್ರಕೃತದಲ್ಲೂ ಶಿರೋವ್ರತವು ಅಧ್ಯಯನಾಧಿಕಾರ.

॥ **ದರ್ಶಯತಿ ಚ** ॥ 'ಸರ್ವೇ ವೇದಾ ಯತ್ಪದಮಾಮನಂತಿ' ಎಂಬ ಶ್ರುತಿಯು ವೇದವೇದ್ಯವಾದುದು ಒಂದೇ ಎಂದು ಹೇಳುವ ಮೂಲಕ ವೇದವಿದ್ಯೆಯೂ ಒಂದೇ ಎಂದು ತಿಳಿಸುತ್ತದೆ. ವೇದಾಂತಗಳಲ್ಲಿ ಹೇಳಿರುವ ಸಗುಣಬ್ರಹ್ಮವಿದ್ಯೆಯು ಒಂದೇ ಎಂದು ವೇದವು ಹೇಳದಿದ್ದರೂ ನಿರ್ಗುಣಬ್ರಹ್ಮವಿದ್ಯಾಪ್ರಕರಣದಲ್ಲಿ ಅವುಗಳನ್ನು ಹೇಳಿರುವುದರಿಂದ, ನಿರ್ಗುಣಬ್ರಹ್ಮವಿದ್ಯೆಯಂತೆಯೇ ಸಗುಣಬ್ರಹ್ಮವಿದ್ಯೆಗಳೂ ಒಂದೇ ಎಂದು ತಿಳಿಯುತ್ತದೆ. ಹೀಗೆ ಶಾಖಾಭೇದೇನ ವಿದ್ಯಾಭೇದವು ಇಲ್ಲವಾದುದರಿಂದ ಅವರವರ ಶಾಖೆಗಳನ್ನಷ್ಟೇ ಅಧ್ಯಯನ ಮಾಡಿದರೆ ಸಾಕು. ಸರ್ವಶಾಖಾಧ್ಯಯನದ ಅಗತ್ಯವಿಲ್ಲ.

**ವಿಮರ್ಶೆ—** 'ವೇದಃ ಕೃತ್ಸ್ನೋಽಧಿಗಂತವ್ಯಃ ಸರಹಸ್ಯೋ ದ್ವಿಜನ್ಮನಾ ॥'
''ಸರ್ವೈಶ್ಚ ವೇದೈಃ ಪರಮೋ ಹಿ ದೇವಃ
ಜಿಜ್ಞಾಸ್ಯೋಽಸೌ ನಾಲ್ಪವೇದೈಃ ಪ್ರಸಿದ್ಧ್ಯೇತ್ ॥''

ಇತ್ಯಾದಿಪ್ರಮಾಣಗಳಿಂದ ಉಪಾಸನೆಗಾಗಿ ಸಕಲವೇದಗಳನ್ನೂ ಅಧ್ಯಯನ ಮಾಡಬೇಕೆಂದು ಪ್ರಮಾಣಗಳಿವೆ. ಆದ್ದರಿಂದ ಸ್ವಶಾಖಾಮಾತ್ರಾಧ್ಯಯನವು ಅಶಕ್ತರಿಗೆ ಮಾತ್ರ.

ಪರಮತದಲ್ಲಿ ವೇದ್ಯಭೇದೇನ ವಿದ್ಯಾಭೇದವು ಇರಲೇಬೇಕು. ಸಗುಣವಿದ್ಯೆಗೆ ವಿಶಿಷ್ಟಬ್ರಹ್ಮನು ವಿಷಯ, ನಿರ್ಗುಣವಿದ್ಯೆಗೆ ಶುದ್ಧವಿಷಯ. ಹೀಗೆ ವಿದ್ಯೆಗಳೆರಡಕ್ಕೂ ವಿಷಯವು ಭಿನ್ನವಾದುದು.

ಅಲ್ಲದೆ, ಶಿರೋವ್ರತವು ಆಥರ್ವಣ ಶಾಖಾಧ್ಯಯನಕ್ಕೆ ಮಾತ್ರ ಸಂಬಂಧಿಸಿದೆ ಎಂದು ಸಿದ್ಧಾಂತ ಮಾಡಲಾಗಿದೆ. ಅದರಂತೆ, 'ವಿಜ್ಞಾನಮಾನಂದಂ ಬ್ರಹ್ಮ'ಎಂದು ಬೃಹದಾರಣ್ಯಕ(ವಾಜಸನೇಯ) ಶಾಖೆಯವರಿಗೆ ಬ್ರಹ್ಮೋಪಾಸನೆ, 'ಸತ್ಯಂ ಜ್ಞಾನಮನಂತಮ್' ಎಂದು ತೈತ್ತಿರೀಯಶಾಖೆಯವರಿಗೆ ಉಪಾಸನೆ. ಹೀಗೆ ವಿದ್ಯೈಕ್ಯವಿದ್ದರೂ ತತ್ತತ್‌ಶಾಖೆಯಲ್ಲಿ ಹೇಳಿರುವ ಗುಣವತ್ವೇನ ತತ್ತಶಾಖೆಯವರಿಂದ ಬ್ರಹ್ಮನು ಉಪಾಸ್ಯ, ಎಂದೂ ಹೇಳಬಹುದು. ಆದ್ದರಿಂದ ಶಾಖಾಂತರೋಕ್ತ ಗುಣಗಳನ್ನು ಬೇರೆ ಶಾಖೆಯವರು ಧ್ಯಾನಿಸಬೇಕಾಗಿಲ್ಲ ಎಂದೂ ವಾದ ಮಾಡಬಹುದು.

ಇಲ್ಲಿಗೆ ಸರ್ವವೇದಾಧಿಕರಣ ಮುಗಿಯಿತು.

## ೨. ಉಪಸಂಹಾರಾಧಿಕರಣಮ್

ಸರ್ವೈರ್ವೇದೈರ್ಜ್ಞೇಯಃ, ನೋಪಾಸ್ಯೋಽಶಕ್ಯತ್ವಾದಿತಿ । ಅತ ಆಹ-

**॥ ಓಂ ಉಪಸಂಹಾರೋಽರ್ಥಾಭೇದಾದ್**
**ವಿಧಿಶೇಷವತ್ ಸಮಾನೇ ಚ ಓಂ ॥ ೬ ॥**

**ಸರ್ವವೇದೋಕ್ತಾನ್ ಗುಣಾನ್ ದೋಷಾಭಾವಾಂಶ್ಚೋಪಸಂಹೃತ್ಯೈವ ಪರಮಾತ್ಮೋಪಾಸ್ಯಃ ।**

'ಉಪಾಸ್ಯ ಏಕಃ ಪರತಃ ಪರೋ ಯೋ
ವೇದೈಶ್ಚ ಸರ್ವೈಃ ಸಹ ಚೇತಿಹಾಸ್ಯೈಃ ।
ಸಪಂಚರಾತ್ರೈಃ ಸಪುರಾಣೈಶ್ಚ ದೇವಃ
ಸರ್ವೈರ್ಗುಣೈಸ್ತತ್ರತತ್ರ ಪ್ರತೀತೈಃ ॥' ಇತಿಹಿ ಭಾಲ್ಲವೇಯಶ್ರುತಿಃ ।

ಆಗ್ನೇಯೇ ಚ-

'ವಿಧಿಶೇಷಾಣಿ ಕರ್ಮಾಣಿ ಸರ್ವವೇದೋದಿತಾನ್ಯಪಿ ।
ಯಥಾ ಕಾರ್ಯಾಣಿ ಸರ್ವೈಶ್ಚ ಸರ್ವಾಣ್ಯೇವಾವಿಶೇಷತಃ ॥
ಏವಂ ಸರ್ವಗುಣಾನ್ ಸರ್ವೈ(ರ್ವ)ರ್ದೋಷಾಭಾವಾಂಶ್ಚ ಯತ್ನತಃ ।
ಯೋಜಯಿತ್ವೈವ ಭಗವಾನುಪಾಸ್ಯೋ ನಾನ್ಯಥಾ ಕ್ವಚಿತ್ ॥' ಇತಿ ॥

ಸಮಾನವಿಷಯೇ ಚೋಪಸಂಹಾರಃ । ನತು 'ಸೋಽರೋದೀತ್' (ತೈ.ಸಂ. 1.5.1) ಇತ್ಯಾದೀನಾಮ್ ।

'ಗುಣೈರೇವ ಸ ತೂಪಾಸ್ಯೋ ನೈವ ದೋಷೈಃ ಕಥಂಚನ ।
ಗುಣೈರಪಿ ನತೂಪಾಸ್ಯೋ ಯೇ ಪೂರ್ಣತ್ವವಿರೋಧಿನಃ ॥'

ಇತಿ ಹಿ ಬೃಹತ್ತಂತ್ರೇ ।

ಸಕಲವೇದೋಕ್ತ-ಗುಣವತ್ತಯಾ ವಿಷ್ಣುವನ್ನು ತಿಳಿದುಕೊಳ್ಳಬೇಕು. ಆದರೆ, ಹಾಗೆಂದು ಧ್ಯಾನಮಾಡಲಾಗದು, ಅಷ್ಟು ಗುಣಗಳು ಒಮ್ಮೆಲೇ ಬುದ್ಧ್ಯಾರೂಢವಾಗಲು ಸಾಧ್ಯವಿಲ್ಲವಾದಕಾರಣ ಅಖಿಲಗುಣವತ್ತಯಾ ಧ್ಯಾನವು ಅಶಕ್ಯವಾದುದು. ಆದ್ದರಿಂದ ಆ ರೀತಿಯ ಧ್ಯಾನದ ಅಗತ್ಯವಿಲ್ಲ. ಈ ಪ್ರಶ್ನೆಗೆ ಸೂತ್ರದಲ್ಲಿ ಉತ್ತರವಿದೆ—ಸಕಲವೇದೋಕ್ತವಾದ ಬಲಜ್ಞಾನಾದಿಗುಣಗಳನ್ನೂ ಪಾಪಾದಿದೋಷಾಭಾವಗಳನ್ನೂ ಅಭೇದಾತ್=ಪ್ರತ್ಯೇಕಿಸದೆ ಅವೆಲ್ಲವನ್ನೂ ಒಂದೇ ಬುದ್ಧಿಯಲ್ಲಿ ತಂದುಕೊಂಡು ಪರಮಾತ್ಮನನ್ನು ಧ್ಯಾನಿಸಬೇಕು. ಭಾಲ್ಲವೇಯಶ್ರುತಿಯು ಹೇಳುತ್ತದೆ—ಪರತಃ=ಉತ್ತಮರಾದ ಬ್ರಹ್ಮಾದಿದೇವತೆಗಳಿಂದಲೂ ಪರಃ=ಉತ್ತಮನಾದ ಪರಮಾತ್ಮನು, ಇತಿಹಾಸ್ಯೈಃಸಹ=ಇತಿಹಾಸಗಳಿಂದ ಸಹಿತವಾದ, ಸಪಂಚರಾತ್ರೈಃ=ಪಂಚರಾತ್ರಗಳಿಂದ ಕೂಡಿದ ಸಪುರಾಣೈಶ್ಚ=ಪುರಾಣಗಳಿಂದಲೂ ಸಹಿತವಾದ ಸರ್ವೈಶ್ಚ ವೇದೈಃ=ಸಕಲವೇದಗಳಿಂದಲೂ ತತ್ರತತ್ರ ಪ್ರತೀತೈಃ=ಬೇರೆಬೇರೆ ಶಾಖೆಗಳಲ್ಲಿ

ತಿಳಿಯಲ್ಪಟ್ಟ ಸರ್ವೈಃ ಗುಣೈಃ=ಸಕಲಗುಣಗಳಿಂದಲೂ ಏಕೋ ಹಿ=ಒಬ್ಬನೇ ಉಪಾಸ್ಯಃ= ಧ್ಯಾನಿಸಲ್ಪಡಬೇಕು.

ಅಗ್ನಿಪುರಾಣದ ವಚನವೂ ಹೀಗಿದೆ—'ಯಜೇತ' ಇತ್ಯಾದಿ ಲಿಙ್‌ವಾಚ್ಯವಾದ ವಿಧಿಗೆ ಶೇಷವಾದ, ಸರ್ವವೇದಗಳಿಂದ ವಿಹಿತವಾದ ಕರ್ಮಗಳನ್ನು ಎಲ್ಲರೂ ಹೇಗೆ ಮಾಡಲೇಬೇಕೋ ಅದರಂತೆಯೇ ವೇದೋಕ್ತವಾದ ಸಕಲಗುಣಗಳನ್ನೂ ದೋಷಾಭಾವಗಳನ್ನೂ ಪ್ರಯತ್ನಪೂರ್ವಕವಾಗಿ ಏಕಬುದ್ಧಿಯಲ್ಲಿ ತಂದುಕೊಂಡು ಭಗವಂತನ ಧ್ಯಾನವನ್ನು ಮಾಡಬೇಕು. ಅಲ್ಪಗುಣತ್ವೇನ ಧ್ಯಾನಮಾಡಬಾರದು.

ಸಮಾನವಿಷಯೇ=ಯೋಗ್ಯವಾದ ವಿಷಯದಲ್ಲೆ (ಗುಣಗಳಲ್ಲೇ) ಉಪ ಸಂಹಾರಃ=ಬುದ್ಧಿಯಲ್ಲಿ ಆರೋಹ. ಹೊರತು ವೇದೋಕ್ತವಾದ 'ಸೋಽರೋದೀತ್' ಎಂಬ ರೋದನಾದಿಗುಣಗಳ ಉಪಸಂಹಾರ(ಧ್ಯಾನ) ಕೂಡದು. ಬೃಹತ್ತಂತ್ರದಲ್ಲಿದೆ— ಗುಣಗಳಿಂದಲೇ ಭಗವಂತನು ಧ್ಯೇಯ, ದೋಷಗಳಿಂದ ಧ್ಯೇಯನಲ್ಲ. ಪೂರ್ಣತ್ವಕ್ಕೆ ವಿರೋಧಿಯಾದವುಗಳಿಂದ (ಗುಣಗಳೇ ಆದರೂ) ಭಗವಂತನು ಧ್ಯೇಯನಲ್ಲ.

**ವಿವರಣೆ**—ವೇದವಾಕ್ಯಗಳ ಅರ್ಥಾನುಸಂಧಾನಪೂರ್ವಕ ಅಧ್ಯಯನವನ್ನು ಮಾಡುತ್ತಲೇ ಕ್ರಮೇಣ ಸರ್ವವೇದೋಕ್ತವಾದ ಗುಣಗಳನ್ನು ತಿಳಿದುಕೊಳ್ಳಬಹುದು. ಆದರೆ, ಅಷ್ಟೂ ಗುಣಗಳನ್ನು ಧ್ಯಾನಮಾಡಬೇಕಾದರೆ ಅವಷ್ಟನ್ನೂ ನೆನೆಪಿನಲ್ಲಿಟ್ಟು ಕೊಂಡಿರಬೇಕು. ಅದು ಎಲ್ಲರಿಗೂ ಸಾಧ್ಯವಾಗಲಿಕ್ಕಿಲ್ಲ. ಆದ್ದರಿಂದ ವೇದೋಕ್ತಾ ಶೇಷಗುಣವತ್ತಯಾ ಪರಮಾತ್ಮನು ಜ್ಞೇಯ ಹೊರತು, ಧ್ಯೇಯನಲ್ಲ. ಎಂದು ಈ ಸೂತ್ರಕ್ಕೆ ಪೂರ್ವಪಕ್ಷ. ಅಷ್ಟೂ ಗುಣಗಳ ಧ್ಯಾನವನ್ನೂ ಮಾಡಬೇಕು, ಎಂದು ಸಿದ್ಧಾಂತ. ಅದಕ್ಕೆ ಉದಾಹರಣೆ ವೇದೋಕ್ತಕರ್ಮಗಳು. 'ವಿಧಿಶೇಷವತ್' ಎಂಬ ಪದದಿಂದ ಕರ್ಮಗಳ ದೃಷ್ಟಾಂತವನ್ನು ಸೂತ್ರದಲ್ಲಿ ಕೊಡಲಾಗಿದೆ. ಕರ್ಮಗಳು ವಿಧಿ ಪ್ರತ್ಯಯಗಳಿಂದ ವಾಚ್ಯವಾದ ಅರ್ಥಕ್ಕೆ (ಕಾರ್ಯಕ್ಕೆ) ಶೇಷಗಳು. ಹೀಗೆ ವಿಧಿಶೇಷ ಎಂದರೆ ಕರ್ಮಗಳು. ಸಕಲವೇದಗಳಲ್ಲಿ ಹೇಳಿರುವ ಸಕಲಕರ್ಮಗಳನ್ನೂ ಅಧಿಕಾರ ವಿದ್ದವರು ಎಲ್ಲರೂ ಹೇಗೆ ಮಾಡಬೇಕೋ ಅದರಂತೆಯೆ ಸಕಲವೇದೋಕ್ತ ಸಕಲಗುಣಗಳನ್ನೂ ಧ್ಯಾನಿಸಬೇಕು.

ಉಪಸಂಹೃತ್ಯ=ಏಕಬುದ್ಧ್ಯಾರೂಢಾನ್ ಕೃತ್ವಾ ಎಂದು ಭಾವದೀಪದಲ್ಲಿದೆ. ಗುಣಗಳನ್ನೂ ದೋಷಾಭಾವಗಳನ್ನೂ ಒಂದೇ ಜ್ಞಾನದಲ್ಲಿ ವಿಷಯೀಕರಿಸಿ ಎಂದರ್ಥ. ಅಂದರೆ ಅಷ್ಟೂ ಗುಣಗಳ ಮತ್ತು ದೋಷಾಭಾವಗಳ ಜ್ಞಾನವು ಒಂದೇ ಆಗಿರಬೇಕು.

ಅರ್ಥಾಭೇದಾತ್ ಎನ್ನುವುದಕ್ಕೆ ಐಕ್ಯಾತ್ ಎಂದರ್ಥ. ಸಕಲವೇದಗಳಲ್ಲೂ ಉಪಾಸ್ಯತ್ವೇನ ಉಕ್ತನಾದ ಪರಮಾತ್ಮನು ಏಕನಾದುದರಿಂದ ಯಾವುದೇ ಗುಣಗಳನ್ನೂ ಬಿಡದೇ ಅವನನ್ನು ಗುಣಾಭಿನ್ನತ್ವೇನ ಉಪಾಸನಾ ಮಾಡಬೇಕು, ಎಂದರ್ಥ.

ಅಥವಾ, ಸರ್ವವೇದೋಕ್ತಪರಮಾತ್ಮನಿಗೂ ಗುಣಗಳಿಗೂ ಅಭೇದವಿರುವ ಕಾರಣದಿಂದಾಗಿ (ಅರ್ಥಾಭೇದಾತ್) ಗುಣಗಳನ್ನು ಅವನಿಗಿಂತ ಅಭಿನ್ನವಾಗಿ ಧ್ಯಾನಿಸಬೇಕು.

ಮೊದಲನೆಯ ವ್ಯಾಖ್ಯಾನದಂತೆ 'ಅರ್ಥಾಭೇದಾತ್' ಎಂಬುದು ಹೇತುವಾಚಕ ಪದ. ಎರಡನೆಯ ವ್ಯಾಖ್ಯಾನದಲ್ಲಿ ಉಪಾಸನಾ ಪ್ರಕಾರವಾಚಕಪದ.

ರೋದನಾದಿಗಳು ದೋಷಗಳಾದರೂ ವಿಧಿಮುಖವೇದ್ಯವಾದ ಧರ್ಮಗಳು ಗುಣಗಳು, ನಿಷೇಧಮುಖವೇದ್ಯಗಳು ದೋಷಗಳು, ಎಂಬ ಪರಿಭಾಷೆಯಿಂದ ಅಪಹತಪಾಪ್ಮತ್ವಾದಿಪದಗಳಿಂದ ವೇದ್ಯವಾದ ಪಾಪಾದಿಗಳೇ ದೋಷಗಳು. ರೋದನಾದಿಗಳು ಗುಣಗಳೇ ಆಗುತ್ತವೆ. ಅದರ ವ್ಯಾವೃತ್ತಿಗಾಗಿ ಸೂತ್ರದಲ್ಲಿ 'ಸಮಾನೇ ಚ' ಎಂಬ ಪದವಿದೆ. ರೋದನವು ದೋಷವಾದರದೂ ತದಧೀನತ್ವಾದರ್ಥವತ್ ಎಂಬ ಸೂತ್ರದಲ್ಲಿ ಹೇಳಿರುವಂತೆ ರೋದನಪದಾರ್ಥವಾದ ರೋದನಸ್ವಾತಂತ್ರ್ಯವು ಭಗವಂತನ ಗುಣವೇ ಆಗುತ್ತದೆ.

## ॥ ಓಂ ಅನ್ಯಥಾತ್ವಂ ಶಬ್ದಾದಿತಿ ಚೇನ್ನಾವಿಶೇಷಾತ್ ಓಂ ॥ ೭ ॥

**'ಆತ್ಮೇತ್ಯೇವೋಪಾಸೀತ' (ಬೃ.ಉ. 3.4.7) ಇತಿ ಶಬ್ದಾದುಪಸಂಹಾರಸ್ಯಾನ್ಯಥಾತ್ವಮಿತಿ ಚೇತ್, ನ । ಏತೇ ಗುಣಾ ನೋಪಾಸ್ಯಾ ಇತಿ ವಿಶೇಷವಚನಾಭಾವಾತ್ ।**

**'ಸರ್ವೈರ್ಗುಣೈರೇಕ ಏವೇಶಿತಾಽಸಾ-**

**ವುಪಾಸಿತವ್ಯೋ ನತು ದೋಷೈಃ ಕದಾಚಿತ್' ಇತಿ ವಿಶೇಷವಚನಾಚ್ಚ ।**

**'ಆತ್ಮೇತ್ಯೇವ' ಇತ್ಯವಧಾರಣಮನಾತ್ಮತ್ವನಿವೃತ್ತ್ಯರ್ಥಮ್ ॥**

''ಆತ್ಮೇತ್ಯೇವೋಪಾಸೀತ'(ಬೃ.3.4.7) ಎಂಬ ಶ್ರುತಿಯಲ್ಲಿ 'ಏವ' ಶಬ್ದದಿಂದ ಆತ್ಮತ್ವ ಬಿಟ್ಟು ಇತರ ಗುಣಗಳ ಉಪಾಸನೆಯನ್ನು ನಿಷೇಧ ಮಾಡಲಾಗಿದೆ. ಆದ್ದರಿಂದ

ಉಪಸಂಹಾರವು ನೀವು ಹೇಳಿದಂತೆ ಸಕಲಗುಣಗಳಿಗೆ ಸಂಬಂಧಿಸಿಲ್ಲ. ಅದು ಆತ್ಮತ್ವಗುಣಕ್ಕೆ ಮಾತ್ರ ಸಂಬಂಧಿಸಿದೆ. ಆದ್ದರಿಂದ ಅನ್ಯಥಾತ್ವಂ=ಸರ್ವೋಪ ಸಂಹಾರವನ್ನು ಮಾಡಬೇಕಾಗಿಲ್ಲ ಎಂದು ಹೇಳುವುದು ಸರಿಯಲ್ಲ. (ಅವಿಶೇಷಾತ್=) ಈ ಗುಣಗಳನ್ನು ಉಪಾಸನೆ ಮಾಡಬಾರದು ಎಂದು ಹೇಳುವ ವಿಶೇಷವನ್ನು ತಿಳಿಸುವ ಪ್ರಮಾಣ ಇಲ್ಲದಿರುವುದರಿಂದ ಆತ್ಮತ್ವಗುಣವನ್ನು ಮಾತ್ರ ಉಪಾಸನೆ ಮಾಡಬೇಕು ಎಂದು ನಿರ್ಬಂಧಿಸುವುದು ಸರಿಯಲ್ಲ. ಅಷ್ಟೇ ಅಲ್ಲ, 'ಸರ್ವೈರ್ಗುಣೈರೇಕ ಏವ' ಎಂದು ಸರ್ವಗುಣಗಳನ್ನೂ ಉಪಾಸನೆ ಮಾಡಬೇಕು, ಎಂದು ಹೇಳುವ ವಿಶೇಷವಚನ ಇದೆ. ಆದ್ದರಿಂದ 'ಆತ್ಮೇತ್ಯೇವ' ಎಂಬ ಶ್ರುತಿಯಲ್ಲಿರುವ ಏವಕಾರವು ಅಯೋಗವ್ಯವಚ್ಛೇದಕಾರ್ಥಕವಾಗಿದ್ದು ಅನಾತ್ಮತ್ವವನ್ನು ಉಪಾಸನೆ ಮಾಡಬಾರದು ಎಂದು ನಿಷೇಧಮಾಡುತ್ತದೆ. ಅದಕ್ಕೆ ಆತ್ಮತ್ವಭಿನ್ನಧರ್ಮಗಳಿಂದ ಉಪಾಸನೆ ಮಾಡಬಾರದು, ಎಂಬ ಅನ್ಯಯೋಗವ್ಯವಚ್ಛೇದಾರ್ಥವನ್ನು ಮಾಡಬಾರದು. (ಆತ್ಮೇತ್ಯೇವೋಪಾಸೀತ ಭಗವಂತಂ ನತ್ವನಾತ್ಮೇತ್ಯಯೋಗವ್ಯವಚ್ಛೇದಾರ್ಥತ್ವಾತ್।)

## ।। ಓಂ ನವಾ ಪ್ರಕರಣಭೇದಾತ್ ಪರೋವರೀಯಸ್ತ್ವಾದಿವತ್ ಓಂ ।। ೮ ।।

**ಪ್ರಕರಣಭೇದಾನ್ನವೋಪಸಂಹಾರಃ ಕಾರ್ಯಃ । ಪರೋವರೀಯಸ್ತ್ವಾದಿಷು ತಾವದೇವ ಹ್ಯುಕ್ತಮ್ ।।**

ಉಪಾಸನಾಪ್ರಕರಣಗಳು ಬೇರೆಬೇರೆಯಾಗಿರುವುದರಿಂದ ಸರ್ವಗುಣೋಪ ಸಂಹಾರವನ್ನು ಮಾಡಬೇಕಾಗಿಲ್ಲ, ಎಂದೂ ಹೇಳಬಹುದು. ಪರೋವರೀಯಸ್ತ್ವ ಉಪಾಸನಾಪ್ರಕರಣ, ಉದ್ಗೀಥೋಪಾಸನಾಪ್ರಕರಣಗಳಲ್ಲಿ ಕೆಲವೇ ಗುಣಗಳನ್ನು ಮಾತ್ರ ಉಪಾಸನೆಗಾಗಿ ಹೇಳಲಾಗಿದೆ.

ವಿವರಣೆ—ಅಶಕ್ಯವಾದುದರಿಂದ ಸರ್ವಗುಣೋಪಸಂಹಾರವನ್ನು ಮಾಡಬೇಕಾ ಗಿಲ್ಲ ಎಂಬ ಪೂರ್ವಪಕ್ಷವನ್ನೇ ಇಲ್ಲಿ ಒಪ್ಪಿಕೊಳ್ಳಲಾಗಿದೆ. ಸರ್ವಗುಣೋಪಸಂಹಾರವು ಬ್ರಹ್ಮದೇವರಿಗೆ ಮಾತ್ರ ಸಾಧ್ಯ. ಇತರರಿಗೆ ಅವರವರ ಯೋಗ್ಯತೆಗೆ ತಕ್ಕಂತೆ ಉಪಸಂಹಾರ. ಅದರಿಂದಾಗಿಯೇ ಉಪನಿಷತ್ತಿನಲ್ಲಿ ಬೇರೆಬೇರೆ ಉಪಾಸನಾ ಪ್ರಕರಣ ಗಳನ್ನು ಮಾಡಲಾಗಿದೆ. ಎಲ್ಲರೂ ಸರ್ವಗುಣೋಪಸಂಹಾರವನ್ನು ಮಾಡಬೇಕು ಎನ್ನುವ ಅಭಿಪ್ರಾಯವಿದ್ದಲ್ಲಿ ಈ ಪ್ರಕರಣಭೇದಕ್ಕೆ ಕಾರಣವೇ ಇಲ್ಲ. ಈ ವಿಭಿನ್ನ

ಪ್ರಕರಣಗಳಲ್ಲೂ ಯಾವುದೇ ಒಂದು ಪ್ರಕರಣದಲ್ಲೂ ಸರ್ವಗುಣಗಳ ಉಲ್ಲೇಖವಿಲ್ಲ. ಉದಾಹರಣೆಗೆ ಉದ್ಗೀಥಪ್ರಕರಣ—

1. ಸ ಏಷ ಪರೋವರೀಯಾನುದ್ಗೀಥಃ ಸ ಏಷೋಽನಂತಃ ।

2. ವೈಶ್ವಾನರಪ್ರಕರಣ—ಯಸ್ತ್ವೇತಮೇವ ಪ್ರಾದೇಶಮಾತ್ರಮಭಿವಿಮಾನಂ ವೈಶ್ವಾನರಮುಪಾಸ್ತೇ ॥

ಆದ್ದರಿಂದ ಎಲ್ಲರಿಗೂ ಸರ್ವಗುಣೋಪಸಂಹಾರ ನಿಯಮವಿಲ್ಲ.

## ॥ ಓಂ ಸಂಜ್ಞಾತಶ್ಚೇತ್ ತದುಕ್ತಮಸ್ತಿ ತು ತದಪಿ ಓಂ ॥ ೯ ॥

**ಸರ್ವವಿದ್ಯಾ ಉಕ್ತ್ವಾ 'ಸೋಽಹಂ ನಾಮವಿದೇವಾಸ್ಮಿ ನಾಽತ್ಮವಿತ್' (ಛಾಂ.ಉ. 7.1.3) ಇತಿ ವಚನಾತ್ ಸರ್ವಸ್ಯ ಬ್ರಹ್ಮನಾಮತ್ವಾತ್ ತದುಪಸಂಹಾರಃ ಕಾರ್ಯಃ ॥**

**'ನಾಮತ್ವಾತ್ ಸರ್ವವಿದ್ಯಾನಾಂ ಗುಣಾನಾಮುಪಸಂಹೃತಿಃ ।**
**ಕಾರ್ಯೈವ ಬ್ರಹ್ಮಣಿ ಪರೇ ನಾತ್ರ ಕಾರ್ಯಾ ವಿಚಾರಣಾ ॥'**

**ಇತಿ ಚ ಬ್ರಹ್ಮತರ್ಕೇ । ಇತಿ ಚೇತ್,**

**ಸತ್ಯಮ್ । ಉಕ್ತೋ ಹ್ಯುಪಸಂಹಾರಃ । ತತ್ಪ್ರಮಾಣಮಪ್ಯಸ್ತ್ಯೇವ ।**

**'ನಾಮ ವಾ ಏತಾ ಬ್ರಹ್ಮಣಃ ಸರ್ವವಿದ್ಯಾಸ್ತಸ್ಮಾದೇಕಃ**
**ಸರ್ವಗುಣೈರ್ವಿಚಿಂತ್ಯಃ' ಇತಿ ಕೌಂಡಿನ್ಯಶ್ರುತೌ ॥**

ನಾರದರು ಸನತ್ಕುಮಾರಋಷಿಗಳ ಮುಂದೆ 'ಋಗ್ವೇದಂ ಭಗವೋಽಧ್ಯೇಮಿ' ಎಂದು ಮುಂತಾಗಿ ಉಪನಿಷದಾದಿಸರ್ವವಿದ್ಯೆಗಳ ಅಧ್ಯಯನವನ್ನೂ ಹೇಳಿ 'ಸೋಽಹಂ ನಾಮವಿದೇವಾಸ್ಮಿ ನಾತ್ಮವಿತ್' (ಛಾಂ.7.1.3) 'ನಾನು ಬ್ರಹ್ಮನಾಮಗಳನ್ನಷ್ಟೇ ತಿಳಿದಿದ್ದೇನೆ, ಬ್ರಹ್ಮಜ್ಞಾನ ನನಗಿಲ್ಲ' ಎಂಬ ಮಾತು ಇರುವುದರಿಂದ ವೇದಾದಿ ವಾಙ್ಮಯಗಳೆಲ್ಲವೂ ಬ್ರಹ್ಮನಾಮಗಳೇ ಆಗಿವೆ. ಅಂತಹ ನಾಮಪ್ರತಿಪಾದ್ಯವಾದ ಗುಣಗಳನ್ನು ಉಪಸಂಹಾರ ಮಾಡದಿದ್ದಲ್ಲಿ ಆ ನಾಮಗಳನ್ನು ಹೇಳಿದ್ದು ವ್ಯರ್ಥವಾಗುತ್ತದೆ. ಗುಣೋಕ್ತಿಯು ಉಪಸಂಹಾರಕ್ಕಾಗಿಯೇ ಇದೆ. ಆದ್ದರಿಂದ

ಸರ್ವಗುಣೋಪಸಂಹಾರವನ್ನೇ ಮಾಡಬೇಕು. ಬ್ರಹ್ಮತರ್ಕದಲ್ಲಿ ಹಾಗೆಯೇ ಇದೆ—'ಸರ್ವವಿದ್ಯೆಗಳೂ ಬ್ರಹ್ಮನಾಮಗಳಾಗಿರುವುದರಿಂದ ಸರ್ವಗುಣಗಳ ಉಪಸಂಹಾರವನ್ನೂ ಪರಬ್ರಹ್ಮನಲ್ಲಿ ಮಾಡಲೇಬೇಕು. ಅದರಲ್ಲಿ ವಿಚಾರಮಾಡಬೇಕಾಗಿರುವ ಅಂಶವೇ ಇಲ್ಲ, ಎಂದರೆ, ಹೌದು ಹಿಂದೆ ಸರ್ವಗುಣೋಪಸಂಹಾರವನ್ನೂ ಮಾಡಬೇಕೆಂದೇ ಸೂತ್ರಕಾರರು ಸಾಧಿಸಿದ್ದಾರೆ. ಅದಕ್ಕೆ ಪ್ರಮಾಣವೂ ಇದೆ. (ಅಸ್ತಿತು ತದಪಿ) ಕೌಂಡಿನ್ಯಶ್ರುತಿ ಹೇಳುತ್ತದೆ—'ಸರ್ವವಿದ್ಯೆಗಳೂ ಬ್ರಹ್ಮನಾಮಗಳು. ಆದ್ದರಿಂದ ಬ್ರಹ್ಮನು ಸರ್ವಗುಣಗಳಿಂದಲೂ ಧ್ಯೇಯ' ಎಂದು. ಹೀಗೆ ಸರ್ವವೂ ಬ್ರಹ್ಮನಾಮ ಎಂಬ ಯುಕ್ತಿಮಾತ್ರವಲ್ಲದೆ ಸರ್ವೋಪಸಂಹಾರಕ್ಕೆ ಪ್ರಮಾಣವೂ ಇದೆ.

**ವಿವರಣೆ**—ಒಟ್ಟಿನಲ್ಲಿ ಅಧಿಕಾರಿಭೇದೇನ ಸರ್ವಗುಣೋಪಸಂಹಾರ ಹಾಗೂ ಅಲ್ಪಗುಣೋಪಸಂಹಾರ ಎರಡನ್ನೂ ಅಂಗೀಕರಿಸಲಾಗಿದೆ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ಉಪಸಂಹಾರೋಽರ್ಥಾಭೇದಾದ್ ವಿಧಿಶೇಷವತ್ ಸಮಾನೇ ಚ ಓಂ ॥**

(ಅತ್ರ ಸಾರ್ವತ್ರಿಕ-ಗುಣೋಪಸಂಹಾರೇಣ ಈಶಸ್ಯ ಧ್ಯಾನಂ ಸಾಧ್ಯತೇ । ಸರ್ವವೇದೇತಿ ಷಷ್ಠ್ಯಂತತಯಾ ಅನುವರ್ತತೇ । ಬ್ರಹ್ಮೇತಿ ಚ । ಉಪಸಂಹಾರಃ ಯುಗಪದ್ ಬುದ್ಧ್ಯಾರೋಪಣಮ್ । ತೇನ ತತ್ಪೂರ್ವಕಂ ಧ್ಯಾನಂ ಗೃಹ್ಯತೇ । ಸರ್ವವೇದಾನಾಮ್ ಅರ್ಥಾಭೇದಾತ್ ಸರ್ವವೇದೋಕ್ತಾರ್ಥಾನಾಮ್ ಆನಂದಾದಿಗುಣಾನಾಮ್ ಅಪಹತಪಾಪ್ಮತ್ವಾದಿದೋಷಾಭಾವಾನಾಂ ಚ ಅಭೇದಾತ್ ಅವಿಭಾಗೇನ ಉಪಸಂಹಾರಃ ಕಾರ್ಯಃ । ಅವಿಭಾಗೇನ ತಾನ್ ಉಪಸಂಹೃತ್ಯ ಬ್ರಹ್ಮ ಧ್ಯೇಯಮಿತ್ಯರ್ಥಃ । ಕುತಃ ? ವಿಧಿಶೇಷವತ್ । ಶಿಷ್ಯಂತೇ ಇತಿ ಶೇಷಾಣಿ । ವಿಧಿಭಿಃ ಶಿಷ್ಟಾನಿ=ವಿಧಿಶೇಷಾಣಿ-ಕರ್ಮಾಣೀವ ಇತ್ಯರ್ಥಃ । ಯಥಾ ವಿಹಿತತ್ವಾತ್ ಸಂಧ್ಯಾದಿ ಕರ್ಮ ಕಾರ್ಯಮ್ ಏವಂ 'ಉಪಾಸ್ಯ ಏಕಃ ಪರತಃ ಪರೋ ಯೋ ವೇದೈಶ್ಚ ಸರ್ವೈಃ' ಇತಿ ಶ್ರುತಿವಿಹಿತತ್ವಾತ್ ಉಕ್ತರೂಪಂ ಧ್ಯಾನಂ ಕಾರ್ಯಮ್ । ಅನ್ಯಥಾ ಪ್ರತ್ಯವಾಯಾದಿತಿ ಭಾವಃ ।

ಉಕ್ತಸ್ಯಾಪವಾದಃ ಸಮಾನೇ ಚೇತಿ । ಚ ಏವ । ಸಮಾನೇ ಏವ=ಯೋಗ್ಯಗುಣೇ ಏವ, ಉಕ್ತೋಪಸಂಹಾರೋ ಬೋಧ್ಯಃ । ನತು ಅಯೋಗ್ಯರೋದನಾದಿವಿಷಯೇ ಇತ್ಯರ್ಥಃ । ಕರ್ಮವದಿತಿವಾಚ್ಯೇ ವಿಧಿಶೇಷೇತ್ಯುಕ್ತಿಃ ವಿಹಿತತ್ವಹೇತುಸೂಚನಾರ್ಥಾ । 'ವಿಧಿಶೇಷಾಣಿ' ಇತಿ ಸ್ಮೃತಿಸೂಚನಾರ್ಥಾ ಚ ।

ತತ್ತ್ವಪ್ರದೀಪೇ ತು—ಸರ್ವವೇದೋಪಾಸ್ಯಾರ್ಥಸ್ಯ ಸರ್ವಗುಣಾತ್ಮಕಸ್ಯ ವಿಷ್ಣೋಃ

ಅಭೇದಾತ್=ಏಕತ್ವಾತ್ ಇತ್ಯರ್ಥಃ ಉಕ್ತಃ। ವಿಧಿಶೇಷವತ್ ಇತ್ಯಸ್ಯ ಪ್ರಧಾನವಿಧಿ ಶೇಷಭೂತಾನಿ ಪ್ರಯಾಜಾದೀನಿ ಯಥೇತಿ ವಾರ್ಥಃ, ಇತಿ ಅರ್ಥಾಂತರಮಪ್ಯುಕ್ತಮ್ ।)

ಈ ಅಧಿಕರಣದಲ್ಲಿ ಎಲ್ಲಾ ಸಚ್ಛಾಸ್ತ್ರಗಳಲ್ಲಿ ಹೇಳಿರುವ ಗುಣಗಳನ್ನು 'ಉಪಸಂಹಾರ' ಮಾಡಿ ಬ್ರಹ್ಮಧ್ಯಾನ ಮಾಡಬೇಕೆಂದು ಹೇಳಲಾಗಿದೆ. ಉಪಸಂಹಾರ ಎಂದರೆ ಒಂದೇ ಜ್ಞಾನದಲ್ಲಿ ಎಲ್ಲಾ ಗುಣಗಳನ್ನೂ ತಂದುಕೊಳ್ಳುವುದು. ಇಂತಹ ಅರ್ಥವಾಚಕ ಉಪಸಂಹಾರ ಶಬ್ದಕ್ಕೆ ಪ್ರಕೃತದಲ್ಲಿ ತತ್ಪೂರ್ವಕ ಧ್ಯಾನ ಎಂದು ಅರ್ಥ.

ಸರ್ವವೇದಗಳಲ್ಲಿ ಹೇಳಿರುವ ಅರ್ಥಾಭೇದಾತ್=ಆನಂದಾದಿಗುಣಗಳೂ ಪಾಪಾದಿದೋಷಾಭಾವಗಳೂ ಅಭಿನ್ನಗಳಾದುದರಿಂದ ಅವುಗಳನ್ನು ಪೃಥಕ್ಕರಿಸದೆ ಉಪಸಂಹಾರಪೂರ್ವಕ ಧ್ಯಾನ ಮಾಡಬೇಕು. ವಿಧಿವಿಶೇಷವತ್=ವೈದಿಕ ಸಂಧ್ಯಾದಿ ಕರ್ಮಗಳಂತೆ. ವೇದೋಕ್ತವಾದ ಎಲ್ಲಾ ಕರ್ಮಗಳನ್ನೂ ಹೇಗೆ ಮಾಡಬೇಕೋ ಅದರಂತೆ ಎಲ್ಲ ಗುಣಗಳನ್ನೂ ಧ್ಯಾನಮಾಡಬೇಕು. ಆದರೆ, ಸಮಾನೇ ಚ=ಯೋಗ್ಯ ಗುಣವಿಷಯದಲ್ಲಿ ಮಾತ್ರ ಉಪಾಸನೆ ಮಾಡಬೇಕು. ವೇದೋಕ್ತವಾದ ರೋದನಾದಿ ಗುಣಗಳನ್ನು ಉಪಾಸನೆ ಮಾಡಬಾರದು.

**॥ ಓಂ ಅನ್ಯಥಾತ್ವಂ ಶಬ್ದಾದಿತಿ ಚೇನ್ನಾವಿಶೇಷಾತ್ ಓಂ ॥** (ಶಬ್ದಾತ್= 'ಆತ್ಮೇತ್ಯೇವೋಪಾಸೀತ' ಇತಿ ಶಬ್ದಾತ್ ಅನ್ಯಥಾತ್ವಂ=ಪ್ರಾಗುಕ್ತಾತ್ ಅನ್ಯಥಾತ್ವಂ= ಉಪಸಂಹಾರಸ್ಯ ಅಕರ್ತವ್ಯತ್ವಮ್। ಅವಧಾರಣೇನ ಆತ್ಮತ್ವಾದನ್ಯಗುಣಾಧ್ಯಾನ ಪ್ರತೀತೇಃ ಇತಿ ಚೇನ್ನ। ಅವಿಶೇಷಾತ್। ಏತೇ ಗುಣಾ ನೋಪಾಸ್ಯಾಃ, ಇತಿ ವಿಶೇಷೇ ಮಾನಾಭಾವಾತ್, ಇತ್ಯರ್ಥಃ। ಅವಧಾರಣಂ ತು ಅಯೋಗವ್ಯವಚ್ಛೇದೇನ ಅನಾತ್ಮತ್ವವ್ಯಾವೃತ್ತಿಪರಮ್ ಇತಿ ಭಾವಃ। ಉಪಸಂಹಾರೇ ತು 'ಸರ್ವೈರ್ಗುಣೈರೇಕ ಏವ' ಇತಿ ಶ್ರುತಿರಸ್ತೀತಿ ಆಕೂತಮ್ ।)

ಶಬ್ದಾತ್='ಆತ್ಮೇತ್ಯೇವೋಪಾಸೀತ' ಎಂಬ ಶ್ರುತಿಯಿಂದಾಗಿ ಅನ್ಯಥಾತ್ವಂ= ಹಿಂದಿನ ಸೂತ್ರದಲ್ಲಿ ಹೇಳಿದ್ದಕ್ಕೆ ವಿಪರೀತವಾಗಿ ಉಪಾಸನೆ ಮಾಡಬೇಕು, ಅಂದರೆ ಸರ್ವೋಪಸಂಹಾರವು ಅಕರ್ತವ್ಯ ಇತಿ ಚೇತ್ ನ=ಹೀಗೆ ಹೇಳುವುದು ಸರಿಯಲ್ಲ. ಅವಿಶೇಷಾತ್=ಈ ಗುಣಗಳು ಉಪಾಸನಾಯೋಗ್ಯಗಳಲ್ಲ, ಎಂಬ ವಿಶೇಷ ಪ್ರಮಾಣಗಳಿಲ್ಲ. ಆತ್ಮೇತ್ಯೇವ, ಎಂಬ ಏವಕಾರ ಸಾವಕಾಶ. ಅನಾತ್ಮತ್ವೇನ ಉಪಾಸನೆ ಮಾಡಬಾರದು, ಎಂದೇ ಅದರ ಅರ್ಥ. ಅನ್ಯಥಾತ್ವಕ್ಕೆ ಪ್ರಮಾಣ ಇಲ್ಲ ಎಂದಷ್ಟೇ ಅಲ್ಲ, ಸರ್ವಗುಣೋಪಸಂಹಾರಕ್ಕೆ 'ಸರ್ವೈರ್ಗುಣೈರೇಕ ಏವ' ಎಂಬ ಪ್ರಮಾಣವೂ ಇದೆ.

**॥ ಓಂ ನವಾ ಪ್ರಕರಣಭೇದಾತ್ ಪರೋವರೀಯಸ್ತ್ವಾದಿವತ್ ಓಂ ॥** (ಉಪಸಂಹಾರ ಇತ್ಯಸ್ತಿ । ಷೋಡಶಿಗ್ರಹಣವತ್ ವಾಶಬ್ದಃ ವ್ಯವಸ್ಥಿತವಿಕಲ್ಪಾರ್ಥಃ । ನ ವಾ ಉಪಸಂಹಾರಃ ಕಾರ್ಯಃ । ಕುತಃ ? ಪ್ರಕರಣಭೇದಾತ್=ಪರೋವರೀಯಸ್ತ್ವ–ವೈಶ್ವಾನರಾದಿಪ್ರಕರಣಭೇದಾತ್ । ಅನ್ಯಥಾ ತನ್ನ ಸ್ಯಾದಿತಿ ಭಾವಃ । ಏಕೈಕಪ್ರಕರಣೇಽಪಿ ಸರ್ವಗುಣೋಕ್ತಿಸಂಭವಾತ್ ತದ್ಭೇದೇಽಪಿ ಸ್ಯಾತ್ ಸರ್ವಗುಣೋಪಸಂಹಾರಃ, ಇತ್ಯತ ಉಕ್ತಮ್–ಪರೋವರೀಯಸ್ತ್ವಾದಿವದಿತಿ । 'ಸ ಏಷ ಪರೋವರೀಯಾನುದ್ಗೀಥಃ ಸ ಏಷೋಽನಂತಃ' ಇತ್ಯಾದಿಪ್ರಕರಣೇಷು ಪರೋವರೀಯಸ್ತ್ವಾದಿಕಂ ಯಥಾ ತಾವನ್ಮಾತ್ರಮ್ ಉಪಾಸ್ಯಮುಕ್ತಂ ತಥಾ ತತ್ತದ್‌ವಿದ್ಯೋಕ್ತಮಾತ್ರಮ್ ಉಪಾಸ್ಯಮ್ । ನತು ಉಪಸಂಹೃತ್ಯ ।)

ಈ ಸೂತ್ರದಲ್ಲಿ ಅಶಕ್ತಾಧಿಕಾರಿಭೇದನ ಸರ್ವಗುಣೋಪಸಂಹಾರವು ವೈಕಲ್ಪಿಕ, ನಿಯತವಲ್ಲ, ಎಂದು ಹೇಳಲಾಗಿದೆ. ನವಾ=ಸರ್ವೋಪಸಂಹಾರವು ಬೇಕಾಗಿಲ್ಲ. ಪ್ರಕರಣಭೇದಾತ್=ಉಪನಿಷತ್ತುಗಳಲ್ಲಿ ಪರೋವರೀಯಸ್ತ್ವಪ್ರಕರಣ, ವೈಶ್ವಾನರ ಪ್ರಕರಣ ಹೀಗೆ ಪ್ರಕರಣಭೇದೇನ ವಿದ್ಯಾಭೇದವನ್ನು ಹೇಳಲಾಗಿದೆ. ಸರ್ವೋಪ ಸಂಹಾರವು ನಿಯತವಾದಲ್ಲಿ ಹೀಗೆ ಪ್ರಕರಣಭೇದಕ್ಕೆ ಕಾರಣವಿಲ್ಲ.

ಒಂದೊಂದೂ ಪ್ರಕರಣಗಳಲ್ಲಿ ಸರ್ವಗುಣಗಳನ್ನೂ ಹೇಳಿರಬಹುದು, ಎಂಬ ಸಂದೇಹ ಬೇಡ—ಪರೋವರೀಯಸ್ತ್ವಾದಿವತ್ । ಈ ಪ್ರಕರಣದಲ್ಲಿ ಕೆಲವೇ ಗುಣಗಳನ್ನು ಹೇಳಲಾಗಿದೆ. ಅದರಂತೆ ಇತರ ಪ್ರಕರಣಗಳಲ್ಲೂ. ಆದ್ದರಿಂದ ತತ್ತತ್‌ಪ್ರಕರಣೋಕ್ತವಾದ ಗುಣಗಳನ್ನು ಉಪಾಸನೆ ಮಾಡಿದರೆ ಸಾಕು.

**॥ ಓಂ ಸಂಜ್ಞಾತಶ್ಚೇತ್ ತದುಕ್ತಮಸ್ತಿ ತು ತದಪಿ ಓಂ ॥** (ಸಂಜ್ಞೇತಿ ಭಾವಪ್ರಧಾನಮ್ । ಸರ್ವವಿದ್ಯಾನಾಮ್ ಇತಿ ಪ್ರಕೃತತ್ವಾದನ್ವೇತಿ । 'ಸೋಽಹಂ ನಾಮವಿದೇವ' ಇತಿ ಶ್ರುತ್ಯಾ ಸರ್ವವಿದ್ಯಾನಾಂ ಸಂಜ್ಞಾತಃ=ಸಂಜ್ಞಾತ್ವತಃ–ಈಶನಾಮತ್ವತಃ ತದ್ಗುಣವಾಚಿತ್ವಾತ್, ತಸ್ಯಧ್ಯಾನಾರ್ಥತ್ವಾತ್ ಉಪಸಂಹಾರಃ ಕಾರ್ಯ ಇತಿ ಚೇತ್–ತದುಕ್ತಮ್ । ತತ್=ಉಪಸಂಹಾರಕರ್ತವ್ಯತ್ವಮ್ ಉಕ್ತಮ್ ಅಸ್ಮಾಭಿಃ ಪ್ರಾಗಿತ್ಯರ್ಥಃ । ಇಷ್ಟಮೇವೈತದಸ್ಮಾಕಮ್ ಇತಿ ಭಾವಃ । ಅಸ್ತಿ ತು ತದಪಿ । ತುರೇವ । 'ನಾಮ ವಾ ಏತಾಃ ಬ್ರಹ್ಮಣಃ ಸರ್ವವಿದ್ಯಾಃ' ಇತಿ ಶ್ರುತಿರೂಪ ಪ್ರಮಾಣಮಸ್ತ್ಯೇವ, ನ ಕೇವಲಂ ನಾಮತ್ವಯುಕ್ತಿಮಾತ್ರಮ್।

ಪ್ರಯತ್ನೇನ ಉಪಸಂಹಾರೇ ಫಲಾಧಿಕ್ಯಬೋಧನಾರ್ಥಂ, ಬಹುಪ್ರಮಾಣ ಗ್ರಹಣಾರ್ಥಂ ಚ ಪುನಃ ಪುನಃ ಉಪಸಂಹಾರೋಪನ್ಯಾಸಃ ಇತ್ಯುಕ್ತಂ ತತ್ತ್ವಪ್ರದೀಪೇ)

ಸೂತ್ರದಲ್ಲಿ ಸಂಜ್ಞಾತ ಶಬ್ದ ಭಾವಪ್ರಧಾನ, ಸಂಜ್ಞಾತ್ವತಃ ಎಂದರ್ಥ. ಸರ್ವವಿದ್ಯೆಗಳೂ ಬ್ರಹ್ಮನ ನಾಮಾತ್ಮಕವಾಗಿವೆಯಾದ ಕಾರಣ ಅವೆಲ್ಲವು ಗುಣವಾಚಕಗಳಾಗಿವೆ. ಗುಣೋಕ್ತಿಯು ಧ್ಯಾನಕ್ಕಾಗಿ. ಆದ್ದರಿಂದ ಸರ್ವಗುಣೋಪಸಂಹಾರ ಕರ್ತವ್ಯವಾಗಿದೆ ಎಂದರೆ ಹೌದು. ಹಾಗೆಂದೂ ಹಿಂದೆ ಹೇಳಲಾಗಿದೆ. ಇದು ಯುಕ್ತಿಮಾತ್ರಸಿದ್ಧವಲ್ಲ—ತದಪಿ ಅಸ್ತಿತು=ಸರ್ವವೂ ಬ್ರಹ್ಮನಾಮವಾದುದರಿಂದ ಸರ್ವಗುಣೋಪಸಂಹಾರವನ್ನು ಮಾಡಬೇಕು, ಎನ್ನುವ ಕೌಂಡಿನ್ಯ ಶ್ರುತಿಯೂ ಇದೆ—

ನಾಮ ವಾ ಏತಾ ಬ್ರಹ್ಮಣಃ ಸರ್ವವಿದ್ಯಾಃ
ತಸ್ಮಾದೇಕಃ ಸರ್ವಗುಣೈರ್ವಿಚಿಂತ್ಯಃ ॥

## ಅದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

ಶಾಂಕರಭಾಷ್ಯದಲ್ಲಿ ಈ ಅಧಿಕರಣದ ಮೊದಲನೆಯ ಸೂತ್ರ ಒಂದು ಅಧಿಕರಣ. ಉಳಿದ ಮೂರು ಸೂತ್ರಗಳು ಸೇರಿ ಇನ್ನೊಂದು ಅಧಿಕರಣ.

**॥ ಉಪಸಂಹಾರೋऽರ್ಥಾಭೇದಾದ್ ವಿಧಿಶೇಷವತ್ ಸಮಾನೇ ಚ ॥** ಹಿಂದಿನ ಅಧಿಕರಣದಿಂದ ಸರ್ವಶಾಖೆಗಳಲ್ಲಿ ಹೇಳಿರುವ ವಿದ್ಯೆಗಳೂ ಒಂದೇ ಆಗಿದ್ದರೂ ಒಂದು ಶಾಖೆಯಲ್ಲಿ ಆ ವಿದ್ಯೋಪಾಸನೆಗೆ ಹೇಳಿರುವ ಗುಣಗಳನ್ನು ಇನ್ನೊಂದು ಶಾಖೆಯಲ್ಲಿ ಅನುಸಂಧಾನ ಮಾಡಬೇಕಾದ ಅಗತ್ಯವಿಲ್ಲ. ಆ ವಿದ್ಯೆಯನ್ನು ತತ್ತತ್ ಶಾಖೋಕ್ತಗುಣಾನುಸಂಧಾನದಿಂದಲೇ ಉಪಾಸನೆ ಮಾಡಬಹುದು ಎಂಬ ಶಂಕೆಗೆ ಉತ್ತರ ಈ ಸೂತ್ರ—ವಿದ್ಯೆ ಸಮಾನವಾಗಿದ್ದಾಗ ಶಾಖಾಂತರೋಕ್ತಗುಣಗಳ ಉಪಸಂಹಾರವನ್ನೂ ಮಾಡಬೇಕು. ಅರ್ಥಾಭೇದಾತ್=ಶಾಖಾಂತರೋಕ್ತ ಗುಣಗಳ ಉದ್ದೇಶ ಗುಣವಿಶಿಷ್ಟಬ್ರಹ್ಮವಿಜ್ಞಾನ. ಅದೇ ಉದ್ದೇಶ ಇನ್ನೊಂದು ಶಾಖೆಯಲ್ಲೂ ಸಮಾನವಾಗಿದೆ. ವಿಧಿಶೇಷವತ್ ಅಭೇದಾತ್=ವಿಧಿಶೇಷವಾದ ಅಗ್ನಿಹೋತ್ರಾದಿವತ್। ಸಕಲಶಾಖೆಗಳಲ್ಲಿ ಹೇಳಿರುವ ಅಗ್ನಿಹೋತ್ರಕರ್ಮ ಅಭಿನ್ನವಾದುದು. ಆದ್ದರಿಂದ ಶಾಖಾಂತರೋಕ್ತವಾದ ಅಗ್ನಿಹೋತ್ರದ ಅಂಗಗಳನ್ನೂ ಅನುಷ್ಠಾನಮಾಡಿ ಅಗ್ನಿಹೋತ್ರವನ್ನು ಮಾಡಲಾಗುತ್ತದೆ. ಅದರಂತೆ, 'ವಿದ್ಯೆಯು' ಒಂದೇ ಆದ ಕಾರಣ ಆ ವಿದ್ಯೆಯಲ್ಲಿ ಶಾಖಾಂತರೋಕ್ತಗುಣಗಳನ್ನೂ ಉಪಸಂಹಾರ ಮಾಡಬೇಕು.

**ವಿಮರ್ಶೆ**—ಶಾಖಾಂತರಾಧ್ಯಯನದ ಅಗತ್ಯವಿಲ್ಲ ಎಂದು ಹಿಂದಿನ ಅಧಿಕರಣದಲ್ಲಿ ಹೇಳಿ ಇಲ್ಲಿ ಸರ್ವಶಾಖೋಕ್ತ ಗುಣಗಳನ್ನೂ ಬ್ರಹ್ಮನಲ್ಲಿ ಧ್ಯಾನಿಸಬೇಕು,

ಎಂದು ಸಿದ್ಧಾಂತ ಮಾಡಿದರೆ ಸರ್ವಶಾಖಾಧ್ಯಯನವು ಅಗತ್ಯ ಎಂದಾಗುತ್ತದೆ. ಇದು ಪೂರ್ವಾಧಿಕರಣ ಸಿದ್ಧಾಂತಕ್ಕೆ ವಿರುದ್ಧವಾದುದು.

**॥ ಅನ್ಯಥಾತ್ವಂ ಶಬ್ದಾದಿತಿ ಚೇನ್ನಾವಿಶೇಷಾತ್ ॥** ಶಾಂಕರಭಾಷ್ಯದಂತೆ ಈ ಸೂತ್ರದಲ್ಲಿ ಚಶಬ್ದವಿಲ್ಲ. ಬೃಹದಾರಣ್ಯಕದಲ್ಲಿ (ವಾಜಸನೇಯಕ) ದೇವಾಸುರ ಸಂಗ್ರಾಮವನ್ನು ಪ್ರಸ್ತಾಪಮಾಡಿ (1.3.1) ದೇವತೆಗಳು ವಾಗಾದಿಇಂದ್ರಿಯ ದೇವತೆಗಳನ್ನು ಉದ್ಗೀಥಸಾಮಗಾನದಿಂದ ಅಸುರರನ್ನು ಸೋಲಿಸುವಂತೆ ಪ್ರಾರ್ಥನೆ ಮಾಡುವುದು, ಆವರು ಸಾಮಗಾನ ಆರಂಭಿಸಿದಾಗ ಅಸುರರು ಆಕ್ರಮಣಮಾಡಿ ಸೋಲಿಸುವುದು ಕೊನೆಗೆ ಮುಖ್ಯಪ್ರಾಣ ಅಸುರಬಾಧೆಗೆ ಒಳಗಾಗದಿರುವುದು ಎಂಬ ಇತಿಹಾಸದ ಪ್ರಸ್ತಾಪವಿದೆ. ಇದೇರೀತಿಯ ನಿರೂಪಣೆ ಛಾಂದೋಗ್ಯದಲ್ಲೂ ಇದೆ. (1.2.7) ಇವೆರಡೂ ಪ್ರಕರಣಗಳೂ ಪ್ರಾಣವಿದ್ಯಾಪ್ರಕರಣಗಳು. ಈ ಎರಡು ಪ್ರಕರಣಗಳಲ್ಲಿ ಹೇಳಿದ ಪ್ರಾಣವಿದ್ಯೆ ಒಂದೆಯೋ ಭಿನ್ನವೋ? ಎಂದು ಸಂದೇಹ. ಭಿನ್ನವಾದುದು ಎಂದು ಪೂರ್ವಪಕ್ಷ–ಬೃಹದಾರಣ್ಯಕದಲ್ಲಿ ದೇವತೆಗಳು 'ತ್ವಂ ನ ಉದ್ಗಾಯ' ಎಂದು ಪ್ರಾಣನನ್ನು ಗಾನಕರ್ತೃತ್ವೇನ ಪ್ರಾರ್ಥನೆ ಮಾಡುತ್ತಾರೆ. ಛಾಂದೋಗ್ಯದಲ್ಲಿ 'ತಂ ಉದ್ಗೀಥಂ ಉಪಾಸಾಂಚಕ್ರಿರೇ' ಎಂದು ದೇವತೆಗಳು ಪ್ರಾಣನೇ ಉದ್ಗೀಥನೆಂದು ಧ್ಯಾನಿಸಿದರು ಎಂದಿದೆ. ಆದ್ದರಿಂದ ಈ ಎರಡು ಪ್ರಕರಣಗಳಲ್ಲಿ ಹೇಳಿರುವ ವಿದ್ಯೆಗಳು ಬೇರೆಬೇರೆ. (ಅನ್ಯಥಾತ್ವಂ=ಅನ್ಯಥಾ ಹಿ ಪ್ರಕ್ರಮಂತೇ ವಾಜಸನೇಯಿನೋ ಅನ್ಯಥಾ ಛಂದೋಗಾಃ'(ಶಾಂ.ಭಾ.) ಎರಡೂ ಪ್ರಕರಣಗಳಲ್ಲಿ ವ್ಯತ್ಯಾಸವಿದೆ) ಇದಕ್ಕೆ ಸೂತ್ರದ ನಿರಾಕರಣೆ 'ಅವಿಶೇಷಾತ್' ಎಂದು. ಉಳಿದ ವಿಷಯದಲ್ಲೆಲ್ಲ ಒಂದೇ ರೀತಿಯಿರುವುದರಿಂದಾಗಿ ಎರಡೂ ವಿದ್ಯೆಗಳು ಭಿನ್ನಗಳಲ್ಲ. ಬೃಹದಾರಣ್ಯಕದಲ್ಲೂ ಪ್ರಾಣನೇ ಉದ್ಗೀಥ ಎಂದೂ ಹೇಳಲಾಗಿದೆ—'ಏಷ ಉ ವಾ ಉದ್ಗೀಥಃ' (1.3.23) ಆದ್ದರಿಂದ ಛಾಂದೋಗ್ಯದಲ್ಲಿ ಉದ್ಗೀಥಶಬ್ದಕ್ಕೆ ಉದ್ಗಾನಕರ್ತಾ, ಎಂದು ಲಕ್ಷಣಾ ಮಾಡಬೇಕು. ಆದ್ದರಿಂದ ಎರಡೂ ಪ್ರಕರಣಗಳ ನಿರೂಪಣೆಗಳು ಒಂದೇ ರೀತಿಯಾಗುತ್ತದೆ.

**॥ ನವಾ ಪ್ರಕರಣಭೇದಾತ್ ಪರೋವರೀಯಸ್ತ್ವಾದಿವತ್ ॥** ನವಾ=ಎರಡು ಪ್ರಕರಣಗಳಲ್ಲಿರುವ ವಿದ್ಯೆಗಳು ಒಂದಲ್ಲ ಬೇರೆಬೇರೆ. ಪ್ರಕರಣಭೇದಾತ್= ಪ್ರಕ್ರಮಭೇದಾತ್=ಪ್ರಾರಂಭವು ಬೇರೆಬೇರೆಯಾಗಿವೆ. ಛಾಂದೋಗ್ಯದ ಈ ಪ್ರಕರಣವು 'ಓಮಿತ್ಯೇತದಕ್ಷರಮುದ್ಗೀಥಮುಪಾಸೀತ'' (1.1.1) ಎಂದು ಆರಂಭವಾಗಿದೆ. 'ಉದ್ಗೀಥಸಾಮಭಕ್ತಿಯ' ಪ್ರಾರಂಭದ ಓಂಕಾರಾತ್ಮಕತ್ವೇನ ಪ್ರಾಣನ ಉಪಾಸನೆಯನ್ನು

ಅಲ್ಲಿ ಹೇಳಲಾಗಿದೆ. ಬೃಹದಾರಣ್ಯಕದಲ್ಲಿ 'ತ್ವಂ ನ ಉದ್ಗಾಯ' ಎಂದು ಸಮಗ್ರ ಸಾಮಭಕ್ತಿಯ ಉದ್ಗಾನಕರ್ತೃತ್ವವನ್ನು ಪ್ರಾಣನಿಗೆ ಹೇಳಲಾಗಿದೆ. ಅಲ್ಲಿ ಪ್ರಾಣನು ಋತ್ವಿಕ್ಕುಗಳಲ್ಲಿ ಒಬ್ಬನಾದ 'ಉದ್ಗಾತಾ'. ಹೀಗೆ ಉಪಕ್ರಮಭೇದದಿಂದ ವಿದ್ಯಾಭೇದವಿದೆ. ಅದಕ್ಕೆ ಉದಾಹರಣೆ ಪರೋವರೀಯಸ್ತ್ವಾದಿವತ್, ಎಂದು. ಛಾಂದೋಗ್ಯದಲ್ಲಿ 'ಆಕಾಶೋ ಹ್ಯೇವೇಭ್ಯಃ ಜ್ಯಾಯಾನ್ ಆಕಾಶಃ ಪರಾಯಣಮ್' (1.9.1) ಎಂದು ಹೇಳಿ 'ಸ ಏಷ ಪರೋವರೀಯಾನುದ್ಗೀಥಃ ಸ ಏಷೋಽನಂತಃ' (1.9.2) ಎಂದು ಪರೋವರೀಯಸ್ತ್ವಾದಿಗುಣವಿಶಿಷ್ಟವಾದ ಉದ್ಗೀಥೋಪಾಸನೆಯು 'ಯ ಏಷೋಽಂತರಕ್ಷಿಣಿ' (1.6-6, 7,8) ಎಂದು ಛಾಂದೋಗ್ಯದಲ್ಲಿ ಹೇಳಿರುವ ಅಕ್ಷಿ-ಆದಿತ್ಯಾದಿಗತ ಹಿರಣ್ಯಶ್ಮಶ್ರುತ್ವಾದಿಗುಣವಿಶಿಷ್ಟವಾದ ಉದ್ಗೀಥೋಪಾಸನೆಗಿಂತ ಭಿನ್ನವೋ ಅದರಂತೆ ಪ್ರಕೃತ ವಿದ್ಯೆಗಳೂ ಭಿನ್ನವಾಗಿವೆ.

**॥ ಸಂಜ್ಞಾತಶ್ಚೇತ್ ತದುಕ್ತಮಸ್ತಿ ತು ತದಪಿ ॥** ಎರಡೂ ಪ್ರಕರಣಕ್ಕೆ 'ಉದ್ಗೀಥವಿದ್ಯಾ' ಎಂಬ ಸಂಜ್ಞೆಯು ಒಂದೇ ಆಗಿರುವುದರಿಂದ ಎರಡೂ ವಿದ್ಯೆಗಳು ಒಂದೇ ಆಗಿರಬೇಕು ಎಂದರೆ, ಅದೂ ಯುಕ್ತವಲ್ಲ. ಉಕ್ತಂ ಹಿ='ನ ವಾ, ಪ್ರಕರಣಭೇದಾತ್...॥' ಎಂದು ಈಗಲೇ ಹೇಳಿದ್ದೇವೆ. ಅಸ್ತಿತು ತದಪಿ=ಪರೋವರೀಯಸ್ತ್ವಾದಿ ಉಪಾಸನೆಗಳಲ್ಲೂ ಉದ್ಗೀಥವಿದ್ಯಾ ಎಂಬ ಸಂಜ್ಞೆ ಇದೆ. ಸಂಜ್ಞೈಕತ್ವ ಮಾತ್ರದಿಂದ ವಿದ್ಯೆಗೆ ಏಕತ್ವಸಿದ್ಧವಾಗುವುದಿಲ್ಲ. ಭೇದಕಾರಣವಿಲ್ಲದಿರುವಲ್ಲಿ ಸಂಜ್ಞೆ ಏಕವಾಗಿದ್ದರೆ ಮಾತ್ರ ವಿದ್ಯೈಕತ್ವವು ಸಿದ್ಧವಾಗುತ್ತದೆ. ಪ್ರಕೃತದಲ್ಲಿ ಪೂರ್ವೋಕ್ತವಾದ ಭೇದಕವಿದೆ.

**ವಿಮರ್ಶೆ**—ಎರಡೂ ಪ್ರಕರಣಗಳಲ್ಲಿ ಉಪಕ್ರಮವು ಒಂದೇ ರೀತಿಯಾಗಿರುವುದರಿಂದ 'ತಂ ಉದ್ಗೀಥಂ ಉಪಾಸಾಂಚಕ್ರಿರೇ' ಎಂಬ ಛಾಂದೋಗ್ಯವಾಕ್ಯದಲ್ಲಿ 'ತಂ' ಎಂಬ ಕರ್ಮವಾಚಕ ಪದಕ್ಕೆ ಲಕ್ಷಣಯಾ ಕರ್ತೃ ಎಂದು ಅರ್ಥವನ್ನು ಹೇಳಿ ವಿರೋಧವನ್ನು ಪರಿಹರಿಸಬಹುದು. ಅದರಂತೆ 'ಸಾಮಭಕ್ತಿಯ' ಏಕದೇಶವಾದ ಪ್ರಣವದಲ್ಲಿ ಉದ್ಗೀಥೋಪಾಸನೆಯನ್ನು ಹೇಳುವ 'ಓಮಿತ್ಯೇತದಕ್ಷರಮುದ್ಗೀಥಮುಪಾಸೀತ' ಎಂಬ ಛಾಂದೋಗ್ಯವಾಕ್ಯದಲ್ಲಿ ಪ್ರಣವವಾಚಕವಾದ 'ಓಂ' ಪದಕ್ಕೆ ಸಮಗ್ರ ಸಾಮಭಕ್ತಿಯಲ್ಲಿ ಲಕ್ಷಣಾ ಮಾಡಬೇಕು. ಹೀಗೆ ರೂಪಭೇದಕ್ಕೆ ಪರಿಹಾರ ಹೇಳಿ ವಿದ್ಯೆಯ ಐಕ್ಯವನ್ನು ಸಮರ್ಥಿಸಬೇಕು.

ಯತ್ಕಿಂಚಿತ್ ವ್ಯತ್ಯಾಸದಿಂದ ವಿದ್ಯಾಭೇದವನ್ನು ಅಂಗೀಕರಿಸಿದರೆ ಛಾಂದೋಗ್ಯ-

ಬೃಹದಾರಣ್ಯಕ–ಐತರೇಯಶಾಖೆಗಳಲ್ಲಿ ಹೇಳಿರುವ ಪ್ರಾಣಸಂವಾದ ವಿದ್ಯೆಗಳೂ ಭಿನ್ನಗಳಾಗಬೇಕಾದೀತು. ಛಾಂದೋಗ್ಯದಲ್ಲಿ (5.1.7) 'ತೇ ಹ ಪ್ರಾಣಾಃ ಪ್ರಜಾಪತಿಂ ಪಿತರಮೇತ್ಯೋಚುಃ' ಎಂದು ಇಂದ್ರಿಯಾಭಿಮಾನಿದೇವತೆಗಳು ಪ್ರಜಾಪತಿಯ ಮುಂದೆ 'ಭಗವನ್ ಕೋನು ಶ್ರೇಷ್ಠಃ' ಎಂದು ಕೇಳಿದರು, ಎನ್ನಲಾಗಿದೆ. ಬೃಹದಾರಣ್ಯಕದಲ್ಲಿ (6.1.7) 'ವಿವದಮಾನಾಃ ಬ್ರಹ್ಮ ಜಗ್ಮುಃ' ಎಂದು ಬ್ರಹ್ಮನಲ್ಲಿ ಕೇಳಿದರು, ಎಂದಿದೆ. ಐತರೇಯದಲ್ಲಿ 'ತಾಃ ಅಬ್ರುವನ್ ಹಂತಾಸ್ಮಾಚ್ಛರೀರಾದುತ್ಕ್ರಾಮಾಮ' ಎಂದು ತಾವೇ ವಿವಾದವನ್ನು ಬಗೆಹರಿಸಿಕೊಂಡರು ಎಂದಿದೆ. ಹೀಗೆ ವ್ಯತ್ಯಾಸಕಂಡರೂ ಲಕ್ಷಣಾ ಮಾಡಿ ಭೇದವನ್ನು ಪರಿಹರಿಸುವಂತೆ ಪ್ರಕೃತದಲ್ಲೂ ಭೇದವನ್ನು ಪರಿಹರಿಸಿ ವಿದ್ಯೈಕ್ಯವನ್ನು ಅಂಗೀಕರಿಸಬೇಕು. ಆದ್ದರಿಂದ ವಿದ್ಯಾಭೇದವು ಯುಕ್ತವಲ್ಲ.

## ವಿಶಿಷ್ಟಾದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**ರಾಮಾನುಜಭಾಷ್ಯ**ದಲ್ಲಿ ಈ ಪಾದದ ಮೊದಲ ಐದು ಸೂತ್ರಗಳು ಒಂದು ಅಧಿಕರಣ. ಆಮೇಲಿನ ನಾಲ್ಕು ಸೂತ್ರಗಳು ಒಂದು ಅಧಿಕರಣ. ಮಾಧ್ವಭಾಷ್ಯದಲ್ಲಿ 'ಪ್ರಾಪ್ತೇಶ್ಚ ಅಸಮಂಜಸಂ' ಎಂಬ 10ನೇ ಸೂತ್ರದಲ್ಲಿ ಅಧಿಕರಣಾಂತರಾರಂಭವಾದರೆ ರಾಮಾನುಜಭಾಷ್ಯದಲ್ಲಿ ಅದೇ ಸೂತ್ರ 'ವ್ಯಾಪ್ತೇಶ್ಚಾಸಮಂಜಸಮ್' ಎಂದು ಬದಲಾಗಿ 9ನೇ ಸೂತ್ರವಾಗಿ ಎರಡನೆಯ ಅಧಿಕರಣದಲ್ಲೇ ಸೇರುತ್ತದೆ. ಆ ಭಾಷ್ಯದಂತೆ ಮೊದಲ ಅಧಿಕರಣದಲ್ಲಿರುವ ಸೂತ್ರಗಳ ಅರ್ಥವನ್ನು ಹೇಳಲಾಗಿದೆ.

**॥ ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್ ॥** ಈ ಅಧಿಕರಣದಲ್ಲಿ ವಿದ್ಯಾಭೇದದ ವಿಚಾರವನ್ನು ಮಾಡಲಾಗಿದೆ. ವೈಶ್ವಾನರಾದಿ ವಿದ್ಯೆಗಳು ಅನೇಕ ಶಾಖೆಗಳಲ್ಲಿ ಹೇಳಲ್ಪಟ್ಟರೂ ಭಿನ್ನವಿದ್ಯೆಗಳಲ್ಲ. ಸರ್ವವೇದಾಂತಪ್ರತ್ಯಯಂ (ಸರ್ವವೇದಾಂತೈಃ ಪ್ರತ್ಯಯಃ ಯಸ್ಯ) ಏಕಂ ಉಪಾಸನಂ. ವೈಶ್ವಾನರವಿದ್ಯೆ ಎಲ್ಲಾ ವೇದಾಂತಗಳಲ್ಲಿ ತಿಳಿಯಲ್ಪಡುವ ಒಂದೇ ವಿದ್ಯೆ. ''ಉಪಾಸೀತ'' 'ವಿದ್ಯಾತ್' ಎಂಬ ಚೋದನಾ=ಧಾತ್ವರ್ಥ ವಿಶೇಷ ವಿಧಾನವು ಒಂದೇ ವಿಧವಾಗಿದೆ. ಆದಿಪದದಿಂದ ರೂಪ (ಉಪಾಸನಾವಿಷಯವಾದ ಬ್ರಹ್ಮ) ಫಲಗಳೂ ಒಂದೇ ಎಂದು ತಿಳಿಯಬೇಕು.

**॥ ಭೇದಾನ್ನೇತಿ ಚೇದೇಕಸ್ಯಾಮಪಿ ॥** ಯಾವ ವಿಶೇಷವಿಧಾನವೂ ಇಲ್ಲದೆ ಭಿನ್ನಪ್ರಕರಣಗಳಲ್ಲಿ ಮತ್ತೆ ಮತ್ತೆ ಹೇಳಿರುವುದರಿಂದ ಪ್ರಕರಣಭೇದಾತ್ ವಿದ್ಯೆಯೂ ಭಿನ್ನವಾಗಿದೆ. ಒಂದೇ ಆಗಿದ್ದಲ್ಲಿ ಒಮ್ಮೆ ಹೇಳಿದ್ದರೆ ಸಾಕಾಗಿತ್ತು ಎಂದು ಪೂರ್ವಪಕ್ಷ. ಏಕಸ್ಯಾಮಪಿ=ಒಂದೇ ವಿದ್ಯೆಯಲ್ಲಿ ಶಾಖಾಭೇದೇನ ಅಧಿಕಾರಿಗಳು

ವಿಭಿನ್ನರಾದುದರಿಂದ ಅನೇಕ ಪ್ರಕರಣಗಲ್ಲಿ ಒಂದನ್ನೇ ಹೇಳಲಾಗಿದೆ. ಆದ್ದರಿಂದ ಪ್ರಕರಣಭೇದವು ಅಧಿಕಾರಿಭೇದದಿಂದ ಅನ್ಯಥಾ ಸಿದ್ಧವಾಗಿದೆ. ಅದು ವಿದ್ಯಾಭೇದಕ್ಕೆ ಸಾಧಕವಲ್ಲ.

**॥ ಸ್ವಾಧ್ಯಾಯಸ್ಯ ತಥಾತ್ವೇನ ಹಿ ಸಮಾಚಾರೇಽಧಿಕಾರಾಚ್ಚ ಸವವಚ್ಚತನ್ನಿಯಮಃ ॥** ಶಾಂಕರಭಾಷ್ಯದಂತೆಯೇ ಎರಡು ಸೂತ್ರಗಳನ್ನು ಒಂದುಮಾಡಿ 'ಸಲಿಲವಚ್ಚ' ಎನ್ನುವ ಬದಲು 'ಸವವಚ್ಚ' ಎಂಬ ಪಾಠಾಂತರದೊಂದಿಗೆ ಈ ಸೂತ್ರ ಪಠಿತವಾಗಿದೆ. ಅದರಂತೆ, ತಥಾತ್ವೇನ ಎಂದು ಇತರ ಭಾಷ್ಯಗಳ ಪಾಠ. 'ತಥಾತ್ವೇ' ಎಂದು ಇಲ್ಲಿ ರಾಮಾನುಜ ಭಾಷ್ಯದ ಪಾಠ. ಆಥರ್ವಣದಲ್ಲಿ ''ತೇಷಾಮೇವೈತಾಂ ಬ್ರಹ್ಮವಿದ್ಯಾಂ ವದೇತ ಶಿರೋವ್ರತಂ ವಿಧಿವದ್ ಯೈಸ್ತು ಚೀರ್ಣಮ್' ಎಂದು ಬ್ರಹ್ಮವಿದ್ಯೆಗೆ ಅಧಿಕಾರವನ್ನಾಗಿ ಶಿರೋವ್ರತವನ್ನು ಹೇಳಲಾಗಿದೆ. ಎಲ್ಲ ಬ್ರಹ್ಮವಿದ್ಯೆಯೂ ಸಮಾನವಾದರೆ ಎಲ್ಲರಿಗೂ ಶಿರೋವ್ರತ ಖಡ್ಡಾಯವಾದೀತು. ಆದ್ದರಿಂದ ಶಾಖಾಭೇದೇನ ವಿದ್ಯಾಭೇದವು ಅನಿವಾರ್ಯ, ಎಂಬ ಆಕ್ಷೇಪದ ಪರಿಹಾರಕ್ಕಾಗಿ ಈ ಸೂತ್ರ. ಶಿರೋವ್ರತವು ಅಧ್ಯಯನಾಂಗವೇ ಹೊರತು ವಿದ್ಯಾಂಗವಲ್ಲ. 'ಸ್ವಾಧ್ಯಾಯಸ್ಯ ತಥಾತ್ವಸಿದ್ಧ್ಯರ್ಥಂ= ತಜ್ಜನ್ಯಸಂಸ್ಕಾರಭಾಕ್ತ್ವಸಿದ್ಧ್ಯರ್ಥಂ ಶಿರೋವ್ರತೋಪದೇಶನಿಯಮಃ' ಸಮಾಚಾರೇ ಅಧಿಕಾರಾಚ್ಚ='ಸಮಾಚಾರ' ಎಂಬ ಗ್ರಂಥದಲ್ಲಿ 'ಇದಮಪಿ ವೇದವ್ರತೇನ ವ್ಯಾಖ್ಯಾತಮ್' ಎಂದು ಶಿರೋವ್ರತವನ್ನೂ ಅಧ್ಯಯನಾಂಗವಾಗಿ ಅತಿದೇಶ ಮಾಡಲಾಗಿದೆ. ಸವವಚ್ಚ ತನ್ನಿಯಮಃ=ಏಳು ಸವಹೋಮಗಳನ್ನು ಆಥರ್ವಣರು ಏಕಾಗ್ನಿಯಲ್ಲೇ ಮಾಡುವರು, ತ್ರೇತಾಗ್ನಿಯಲ್ಲಿ ಅಲ್ಲ. ಅದರಂತೆ ಶಿರೋವ್ರತವೂ ಅವರಿಗೇ ಸಂಬಂಧಿಸಿದ ಅಧ್ಯಯನಾಧಿಕಾರ.

**॥ ದರ್ಶಯತಿ ಚ ॥** ಛಾಂದೋಗ್ಯೋಪನಿಷತ್ತಿನಲ್ಲಿ 'ತಸ್ಮಿನ್ ಯದಂತಃ ತದನ್ವೇಷ್ಟವ್ಯಮ್' (ಹೃದಯಾಕಾಶದಲ್ಲಿರುವುದನ್ನು ಧ್ಯಾನಿಸಬೇಕು) ಎಂದು ಹೇಳಿ 'ಕಿಂ ತದತ್ರ ವಿದ್ಯತೇ' (ಹೃದಯಾಕಾಶದಲ್ಲಿ ಇರುವುದೇನು?) ಎಂದು ಪ್ರಶ್ನೆ ಮಾಡಿ ಅಪಹತಪಾಪ್ಮತ್ವಾದಿ ಎಂಟು ಗುಣಗಳಿಂದ ವಿಶಿಷ್ಟವಾದ ಪರಮಾತ್ಮನನ್ನು ಉಪಾಸ್ಯತ್ವೇನ ಹೇಳಿದೆ. ತೈತ್ತಿರೀಯಕದಲ್ಲಿ ಇದನ್ನೇ ಅವಲಂಬಿಸಿ 'ತತ್ರಾಪಿ ದಹ್ರಂ ಗಗನಂ ವಿಶೋಕಂ ತಸ್ಮಿನ್ಯದಂತಃ ತದುಪಾಸಿತವ್ಯಮ್' ಎನ್ನಲಾಗಿದೆ. ಇಲ್ಲೂ ಗುಣಾಷ್ಟಕವಿಶಿಷ್ಟ ಪರಮಾತ್ಮನದೇ ಉಪಾಸನೆ. ಹೀಗೆ ಒಂದುಕಡೆ ಹೇಳಿದ ಗುಣಗಳನ್ನು ಮತ್ತೊಂದು ಶಾಖೆಯಲ್ಲಿ ಉಪಸಂಹಾರ ಮಾಡಿರುವುದರಿಂದ ಶಾಖಾಭೇದೇಽಪಿ ವಿದ್ಯೆಯು (ಉಪಾಸನೆ) ಒಂದೇ ಎಂದು ತಿಳಿಯುತ್ತದೆ.

॥ ಉಪಸಂಹಾರೋಽರ್ಥಾಭೇದಾದ್ ವಿಧಿಶೇಷವತ್ ಸಮಾನೇ ಚ ॥

ಸರ್ವವೇದಾಂತಗಳಲ್ಲೂ ಪ್ರಾಣಾದ್ಯುಪಾಸನೆಗಳು ಸಮಾನೇ (ಸತಿ)=ಸಮಾನವಾಗಿರಲು ಉಪಸಂಹಾರಃ=ಒಂದು ವೇದಾಂತದಲ್ಲಿ (ಉಪನಿಷತ್ತಿನಲ್ಲಿ) ಹೇಳಿರುವ ಗುಣಗಳನ್ನು ಮತ್ತೊಂದು ವೇದಾಂತದಲ್ಲೂ ಅನುಸಂಧಾನ ಮಾಡಿಕೊಳ್ಳಬೇಕು. ವಿಧಿಶೇಷವತ್ ಅರ್ಥಾಭೇದಾತ್=ಒಂದು ಕಡೆಯಲ್ಲಿರುವ ವೈಶ್ವಾನರ-ದಹರಾದಿವಿಧಿಶೇಷವಾಗಿರುವ ಗುಣವು ಆ ಉಪಾಸನೆಗೆ ಉಪಕಾರಕವಾಗಿರುವುದರಿಂದ ಪ್ರಯೋಜನಸಿದ್ಧಿಗಾಗಿ ಆ ಗುಣವನ್ನು ಅನುಸಂಧಾನ ಮಾಡಲಾಗುವುದೋ ಅದರಂತೆಯೇ ಸ್ಥಳಾಂತರದಲ್ಲೂ ಅದೇ ಉಪಾಸನಾವಿಧಿಗೆ ಶೇಷವಾಗಿರುವ ದಹರಾದಿ ಉಪಾಸನಾಂಗವಾಗಿರುವ ಗುಣಗಳನ್ನೂ ಏತತ್‌ಶಾಖೋಕ್ತವಿದ್ಯೆಯಲ್ಲಿ ಅನುಸಂಧಾನ ಮಾಡಿಕೊಳ್ಳಬೇಕು. (ಎರಡನೆಯ ಅಧಿಕರಣದ ಸೂತ್ರಗಳನ್ನು ಮುಂದೆ ವ್ಯಾಖ್ಯಾನಿಸಲಾಗಿದೆ.)

**ವಿಮರ್ಶೆ**—'ದರ್ಶಯತಿ ಚ' ಎಂಬಲ್ಲಿ ಛಾಂದೋಗ್ಯದಲ್ಲಿ ಹೇಳಿರುವ ಎಂಟು ಗುಣಗಳನ್ನು ತೈತ್ತಿರೀಯದಲ್ಲೂ ಅನುಸಂಧಾನ ಮಾಡಿಕೊಳ್ಳಬೇಕು ಎನ್ನಲಾಗಿದೆ. ಹೀಗೆ ಅನುಸಂಧಾನಕ್ಕೆ ಕಾರಣಗಳಿಲ್ಲ. ಛಾಂದೋಗ್ಯವನ್ನು ಉಪಜೀವಿಸಿರುವ ಮಾತ್ರದಿಂದ ಅಧ್ಯಾಹಾರಮಾಡಿ ವಿದ್ಯೈಕ್ಯವನ್ನು ಹೇಳುವುದಾದಲ್ಲಿ ಕರ್ಮಕಾಂಡವನ್ನು ಅವಲಂಬಿಸಿ ಬ್ರಹ್ಮಕಾಂಡಪ್ರವೃತ್ತಿ ಎಂದು ನಿಮ್ಮ ಸಿದ್ಧಾಂತವಾಗಿರುವುದರಿಂದ ಅವೆರಡು ಕಾಂಡಗಳಲ್ಲೂ ವಿದ್ಯೈಕ್ಯಸಿದ್ಧಿಯಾದೀತು.

ಶಾಖಾಂತರೋಕ್ತಗುಣಗಳನ್ನು ಶಾಖಾಂತರದಲ್ಲಿ ಅಧ್ಯಾಹಾರಮಾಡಿ ಉಪಸಂಹಾರ ಮಾಡಬೇಕು, ಎಂದು ಅಂತಿಮಸೂತ್ರದ ವ್ಯಾಖ್ಯಾನ ನಿಮ್ಮ ಸಿದ್ಧಾಂತಕ್ಕೆ ಒಗ್ಗುವುದಿಲ್ಲ. ಆಗ ಸರ್ವಶಾಖೆಗಳನ್ನೂ ಅಧ್ಯಯನ ಮಾಡಬೇಕಾಗಿ ಬರುತ್ತದೆ. ಸ್ವಶಾಖಾಧ್ಯಯನ ಮಾತ್ರ ಸಾಕು, ಎನ್ನುವ ನಿಮ್ಮ ಸಿದ್ಧಾಂತಕ್ಕೆ ವಿರೋಧ ಬರುತ್ತದೆ.

**ಇಲ್ಲಿಗೆ ಉಪಸಂಹಾರಾಧಿಕರಣವು ಮುಗಿಯಿತು.**

## ೩. ಪ್ರಾಪ್ತ್ಯಧಿಕರಣಮ್

**॥ ಓಂ ಪ್ರಾಪ್ತೇಶ್ಚ ಸಮಂಜಸಮ್ ಓಂ ॥ ೧೦ ॥**

**ಯುಜ್ಯತೇ ಚೋಪಸಂಹಾರೋಽನುಪಸಂಹಾರಶ್ಚ ಯೋಗ್ಯತಾವಿಶೇಷಾತ್ ।**

**'ಗುಣೈಃ ಸರ್ವೈರುಪಾಸ್ಯೋಽಸೌ ಬ್ರಹ್ಮಣಾ ಪರಮೇಶ್ವರಃ ।**
**ಅನ್ಯೈರ್ಯಥಾಕ್ರಮಂ ಚೈವ ಮಾನುಷೈಃ ಕೈಶ್ಚಿದೇವ ತು ॥'**

**ಇತಿ ಭವಿಷ್ಯತ್ಪರ್ವಣಿ ॥**

ಹಿಂದೆ ಹೇಳಿರುವ ಗುಣೋಪಸಂಹಾರ, ಅನುಪಸಂಹಾರ ಇವೆರಡೂ ಅಧಿಕಾರಿಗಳ ಯೋಗ್ಯತಾಭೇದಾತ್ ಯುಕ್ತವೇ ಆಗಿದೆ. ಭವಿಷ್ಯತ್‌ಪರ್ವದಲ್ಲಿ ಹೀಗೆ ವ್ಯವಸ್ಥೆ ಮಾಡಲಾಗಿದೆ—ಚತುರ್ಮುಖಬ್ರಹ್ಮನಿಂದ ಪರಮಾತ್ಮ ಸರ್ವಗುಣಗಳನ್ನು ಉಪಸಂಹಾರ ಮಾಡಿ ಧ್ಯೇಯನಾಗಿದ್ದಾನೆ. ಇತರ ದೇವ–ಋಷಿ ಅಧಿಕಾರಿಗಳಿಂದ ಅವರವರ ಯೋಗ್ಯತೆಗೆ ಅನುಗುಣವಾಗಿ ಗುಣೋಪಸಂಹಾರ ಮಾಡಿ ಧ್ಯೇಯನಾಗಿದ್ದಾನೆ. ಮನುಷ್ಯರಿಂದ ಮಾತ್ರ ಸೀಮಿತ ನಿರ್ದಿಷ್ಟಗುಣಗಳಿಂದ ಉಪಾಸ್ಯನಾಗಿದ್ದಾನೆ.

**ವಿವರಣೆ—** ಯಸ್ಯ ಯಾವದ್ಗುಣಾಃ ಸ್ಪಷ್ಟಂ ಪ್ರತಿಭಾಸಂತ್ಯುಪಾಸನೇ ।
ಯುಗಪತ್ ಸ್ವಭುಜೌ ಯದ್ವತ್ ಧ್ಯಾಯೇತ್ ತಾವತ ಏವ ಸಃ ॥

ತತ್ತ್ವಪ್ರಕಾಶಿಕಾದಲ್ಲಿ ಈ ಪ್ರಮಾಣವನ್ನು ಉಲ್ಲೇಖಿಸಲಾಗಿದೆ. ಒಂದು ದೇಹದ ಎಡಬಲ ತೋಳುಗಳಂತೆ ಯಾರಿಗೆ ಎಷ್ಟುಗುಣಗಳು ಒಮ್ಮೆಲೇ ಕಾಣುತ್ತವೋ (ಬುದ್ಧ್ಯುಪಾರೂಢವಾಗುತ್ತವೋ) ಅವರು ಅಷ್ಟುಗುಣಗಳನ್ನು ಉಪಾಸನೆ ಮಾಡಬೇಕು. ಬ್ರಹ್ಮದೇವರಿಗೆ ವೇದೋಕ್ತವಾದ ಎಲ್ಲ ಗುಣಗಳೂ ಹೀಗೆ ಏಕಬುದ್ಧಿಯಲ್ಲಿ ಪ್ರತಿಭಾಸವಾಗುತ್ತವೆ. ಹೀಗಾಗಿ ಅವರು ಅಷ್ಟೂ ಗುಣಗಳನ್ನು ಉಪಾಸನೆ ಮಾಡುತ್ತಾರೆ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ಪ್ರಾಪ್ತೇಶ್ಚ ಸಮಂಜಸಮ್ ಓಂ ॥** (ಅತ್ರಪ್ರಾಗುಕ್ತೋಪಸಂಹಾರಾನುಪಸಂಹಾರಯೋಃ ಪುರುಷಭೇದೇನ ಯುಕ್ತತ್ವಂ ಸಾಧ್ಯತೇ । ಪ್ರಕೃತಂ ಉಪಸಂಹಾರಾನುಪಸಂಹಾರಕರ್ತವ್ಯತ್ವಂ ಸಮಂಜಸಂ=ವಕ್ತುಂ ಯುಕ್ತಂ ಚ । ನ ಕೇವಲಂ ಕರ್ತವ್ಯತ್ವಂ ಇತಿ ಚಾರ್ಥಃ । ಕುತಃ ? ಪ್ರಾಪ್ತೇಃ=ಯೋಗ್ಯತಾವಿಶೇಷೇಣ ತಯೋಃ ಪ್ರಾಪ್ತತ್ವಾತ್–ವ್ಯವಸ್ಥಿತತ್ವಾತ್ ಇತ್ಯರ್ಥಃ । ಯೋಗ್ಯತಾವಿಶೇಷಶ್ಚ ಯಾವದಿತ್ಯತ್ರ ವಕ್ಷ್ಯತೇ । ಧ್ಯಾನಕಾಲೇ ಯಸ್ಯ ಯಾವದ್ಗುಣಜಾತಂ ಸ್ಪಷ್ಟಂ ಭಾತಿ ತೇನ ತಾವದುಪಾಸ್ಯಂ ಇತಿ ಭಾವಃ ।)

ಗುಣೋಪಸಂಹಾರ ಮತ್ತು ಅನುಪಸಂಹಾರಗಳ ಕಾರ್ಯತ್ವವನ್ನು ಸಮಂಜಸಂ= ಹೇಳುವುದೂ ಯುಕ್ತವಾಗಿದೆ, ಮಾಡುವುದು ಮಾತ್ರವಲ್ಲ. ಸಾಧಕರ ಯೋಗ್ಯತಾ ಭೇದದಿಂದ ಅವೆರಡೂ ಪ್ರಾಪ್ತೇಃ=ವ್ಯವಸ್ಥಿತವಾಗಿವೆ. ಕೆಲವರಿಗೆ ಸರ್ವಗುಣೋಪ ಸಂಹಾರ, ಮತ್ತೆ ಕೆಲವರಿಗೆ ಅನುಪಸಂಹಾರ, ಹೀಗೆ.

## ಅದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಪ್ರಾಪ್ತೇಶ್ಚ ಸಮಂಜಸಮ್ ॥** ಓ ಮಿತ್ಯೆತದಕ್ಷರಮುದ್ಗೀಥಮುಪಾಸೀತ । (ಛಾಂ.1.1.1) ಈ ಶ್ರುತಿಯಲ್ಲಿ ಒಂದೇ ವಿಭಕ್ತಿಯ ಪದಗಳು ಶ್ರುತವಾಗಿವೆ. ಇಂತಹ ಸಂದರ್ಭದಲ್ಲಿ ವಾಕ್ಯಕ್ಕೆ ನಾಲ್ಕು ವಿಧದ ಅರ್ಥವಾಗಲು ಸಾಧ್ಯವಿದೆ—ಅಧ್ಯಾಸ-ಅಪವಾದ–ಏಕತ್ವ–ವಿಶೇಷಣ.

1. ಅಧ್ಯಾಸ 'ನಾಮ ಬ್ರಹ್ಮೇತ್ಯುಪಾಸೀತ' ಎಂಬಲ್ಲಿ ನಾಮದಲ್ಲಿ ಬ್ರಹ್ಮತ್ವಾರೋಪ, ಪ್ರತಿಮೆಯಲ್ಲಿ ದೇವರ ಆರೋಪ ಮಾಡಿದಂತೆ. ಇಲ್ಲಿ ಪ್ರತಿಮೆ ದೇವರಲ್ಲ ಎಂದು ಗೊತ್ತಿದ್ದೂ ಪ್ರತಿಮೆಯಲ್ಲಿ ದೇವರ ಆರೋಪವನ್ನು ಮಾಡಲಾಗುತ್ತದೆ.

2. ಶುಕ್ತಿಯಲ್ಲಿ ರಜತಾರೋಪ, ದೇಹೇಂದ್ರಿಯಾದಿಸಮೂಹದಲ್ಲಿ ಆತ್ಮಾರೋಪ, ಇವುಗಳು ಅಪವಾದಕ್ಕೆ ನಿದರ್ಶನಗಳು. ಅಂತಹ ಸಂದರ್ಭದಲ್ಲೂ 'ಇದಂ ರಜತಂ' ಎಂದು ಸಮಾನವಿಭಕ್ತಿಯ ಪದದ ಪ್ರಯೋಗವಿದೆ.

3. ದ್ವಿಜೋತ್ತಮೋ ಬ್ರಾಹ್ಮಣೋ ಭೂಮಿದೇವಃ—ಈ ರೀತಿಯ ಸಮಾನಾಧಿ ಕರಣಪ್ರಯೋಗ ಐಕ್ಯವಿದ್ದಾಗ.

4. 'ನೀಲಂ ಉತ್ಪಲಂ' ಇಲ್ಲಿ ವಿಶೇಷಣತ್ವಪ್ರಯುಕ್ತವಾದ ಸಮಾನಾಧಿ ಕರಣಪ್ರಯೋಗ. ಪ್ರಕೃತದಲ್ಲಿ 'ಓಮಿತ್ಯಕ್ಷರಂ ಉದ್ಗೀಥಂ' ಎಂಬುದು ಕೊನೆಯ ''ನೀಲಂ ಉತ್ಪಲಂ'' ಎಂಬ ಪ್ರಯೋಗದಂತೆ. ಉದ್ಗೀಥ ಎಂದರೆ ಗಾನಮಾಡುವ 'ಸಾಮಭಕ್ತಿ'. ಅದರಲ್ಲಿ ಓಂಕಾರವು ಸೇರಿದೆ. ಸಮಗ್ರವೇದದಲ್ಲೂ ಓಂಕಾರವು ಸೇರಿದೆ. ಈ ವ್ಯಾಪ್ತವಾದ ಓಂಕಾರವನ್ನು ವ್ಯಾವೃತ್ತಿ ಮಾಡುವುದಕ್ಕಾಗಿ 'ಉದ್ಗೀಥಂ ಓಂಕಾರ' ಎಂದು ಓಂಕಾರಕ್ಕೆ ವಿಶೇಷಣವನ್ನು ಕೊಡಲಾಗಿದೆ. ಉದ್ಗೀಥ ಶಬ್ದಕ್ಕೆ ಉದ್ಗೀಥಾವಯವ ಎಂದು ಲಕ್ಷಣಯಾ ಅರ್ಥ. ಅಲ್ಲಿಗೆ, ಉದ್ಗೀಥಸಾಮದ ಅವಯವವಾದ ಓಂಕಾರವನ್ನು ಉಪಾಸನೆ ಮಾಡಬೇಕು, ಎಂದರ್ಥ.

**ವಿಮರ್ಶೆ**—ದ್ವೈತಭಾಷ್ಯದಲ್ಲಿ 'ಪ್ರಾಪ್ತೇಶ್ಚ' ಎಂದು ಪಾಠ. ಅದ್ವೈತಭಾಷ್ಯದ

ಪಾಠ 'ವ್ಯಾಪ್ತೇಶ್ಚ' ಎಂದು. ಓಂಕಾರವು ವೇದದ ಪ್ರತಿಮಂತ್ರದಲ್ಲೂ ವ್ಯಾಪ್ತವಾದುದರಿಂದ ಅದರ ವ್ಯಾವೃತ್ತಿಗಾಗಿ 'ಓಮಿತ್ಯಕ್ಷರಮ್ ಉದ್ಗೀಥಂ' ಎಂಬಲ್ಲಿರುವ ಉದ್ಗೀಥಂ ಎಂಬುದು 'ಓಮ್' ಎಂಬುದಕ್ಕೆ ವಿಶೇಷಣ ಎಂದು ಭಾವ. ಆದರೆ ಇಲ್ಲಿ ಹೇತು–ಹೇತುಮದ್ಭಾವವು ಸ್ಫುಟವಾಗುವುದಿಲ್ಲ. ಓಂಕಾರವು ವ್ಯಾಪ್ತವಾಗಿರುವುದಕ್ಕೂ ಉದ್ಗೀಥತ್ವವು ವಿಶೇಷಣವಾಗುವುದಕ್ಕೂ ಸಂಬಂಧವಿಲ್ಲ. 'ಓಂಕಾರ ವ್ಯಾಪ್ತವಾದುದರಿಂದ ಯಾವ ಮಂತ್ರದ ಅಂಗವಾದ ಓಂಕಾರವನ್ನು ಉಪಾಸನೆ ಮಾಡಬೇಕೆಂದು ಜಿಜ್ಞಾಸೆ ಬರುತ್ತದೆ. ಆಗ 'ಉದ್ಗೀಥಂ' ಎಂಬ ವಿಶೇಷಣದಿಂದ ಉದ್ಗೀಥಸಾಮದ 'ಅವಯವವಾದ ಓಂಕಾರ' ಎಂದು ತಿಳಿಸಿದರೆ ಜಿಜ್ಞಾಸೆ ಶಾಂತವಾಗುತ್ತದೆ; ಎಂಬ ಸಮಾಧಾನವು ಯುಕ್ತವಲ್ಲ. ಇದರಿಂದ ವಿಶೇಷಣದ ಪ್ರಯೋಜನವನ್ನು ಹೇಳಿದಂತಾಗುತ್ತದೆ. ವಿಶೇಷಣತ್ವಕ್ಕೆ ಕಾರಣವನ್ನಲ್ಲ.

## ವಿಶಿಷ್ಟಾದ್ವೈತದಲ್ಲಿ ಸೂತ್ರಗಳ ಅರ್ಥ

ಶ್ರೀಭಾಷ್ಯದಲ್ಲಿ 'ಅನ್ಯಥಾತ್ವಂ ಶಬ್ದಾತ್....' ಇತ್ಯಾದಿ ಆರನೆಯ ಸೂತ್ರದಿಂದ ಈ ಸೂತ್ರದವರೆಗೆ ಒಟ್ಟು ನಾಲ್ಕು ಸೂತ್ರಗಳು ಒಂದು ಅಧಿಕರಣ.

**॥ ಅನ್ಯಥಾತ್ವಂ ಶಬ್ದಾದಿತಿ ಚೇನ್ನಾವಿಶೇಷಾತ್ ॥** (ಈ ಸೂತ್ರದಲ್ಲಿ ದ್ವೈತಭಾಷ್ಯದಲ್ಲಿರುವ ಚಶಬ್ದವಿಲ್ಲ.) ಬೃಹದಾರಣ್ಯಕ ಮತ್ತು ಛಾಂದೋಗ್ಯದಲ್ಲಿ ಹೇಳುವ ಉದ್ಗೀಥವಿದ್ಯೆ ಒಂದೋ ಬೇರೆಯೋ ಎಂದು ಇಲ್ಲಿ ವಿಚಾರಮಾಡಲಾಗಿದೆ. ದೇವತೆಗಳು ಅಸುರರನ್ನು ಉದ್ಗೀಥಸಾಮಗಾನದಿಂದ ಪರಾಜಯಗೊಳಿಸಲು ಬಯಸಿದರು. ವಾಗಾದಿಮನಃಪರ್ಯಂತ ಇಂದ್ರಿಯಾಭಿಮಾನಿಗಳು ಗಾನಮಾಡಿದಾಗ ಅಸುರರಿಂದ ದೇವತೆಗಳೇ ಪರಾಭವಗೊಂಡರು. ಪ್ರಾಣನು ಗಾನ ಮಾಡಿದಾಗ ಅಸುರರು ಸೋತರು. ಹೀಗೆ ಹೇಳಿ ಕೊನೆಗೆ ಬೃಹದಾರಣ್ಯಕದಲ್ಲಿ 'ಏಷ ಪ್ರಾಣ ಉದಗಾಯತ್' ಎಂದು ನಿರೂಪಿಸಿ 'ಅಥ ಯ ಏವಂ ವೇದ' ಎಂದು ಪ್ರಾಣನಲ್ಲಿ ಗಾನಕರ್ತೃತ್ವದ ಉಪಾಸನೆಯನ್ನು ಹೇಳಲಾಗಿದೆ. ಆದರೆ, ಛಾಂದೋಗ್ಯದಲ್ಲಿ 'ಅಥ ಹ ಯ ಏವಾಯಂ ಮುಖ್ಯಃ ಪ್ರಾಣಸ್ತಮುದ್ಗೀಥಮುಪಾಸಾಂಚಕ್ರಿರೇ' ಎಂದು ಪ್ರಾಣನಲ್ಲಿ ಉದ್ಗೀಥಾಭೇದೋಪಾಸನೆಯನ್ನು ಹೇಳಲಾಗಿದೆ. ಆದ್ದರಿಂದ ಈ ಎರಡು ವಿದ್ಯೆಗಳು ಭಿನ್ನವಾಗಿವೆ. ಇದು 'ಅನ್ಯಥಾತ್ವಂ ಶಬ್ದಾತ್' ಎಂಬ ಸೂತ್ರಪೂರ್ವಪಕ್ಷಭಾಗದ ಅರ್ಥ. ಇದನ್ನು 'ಇತಿ ಚೇನ್ನ' ಎಂದು ನಿರಾಕರಿಸಿ 'ಅವಿಶೇಷಾತ್' ಎಂದು ಸಿದ್ಧಾಂತಿಸಲಾಗಿದೆ. ಈ ಎರಡೂ ಪ್ರಕರಣಗಳ ಉಪಕ್ರಮವು ಒಂದೇರೀತಿಯಾಗಿದೆ—'ಅಸುರಾನ್' ಯಜ್ಞೇ

ಉದ್ಗೀಥೇನ ಅತ್ಯಾಯಾಮ' (ಬೃಹದಾ.) ದೇವಾ ಉದ್ಗೀಥಮಾಜಹ್ರುಃ ಅನೇನೈವ ಅಭಿಹನಿಷ್ಯಾಮಃ।(ಛಾಂ.) ಎರಡೂ ಕಡೆಗಳಲ್ಲಿ ಉದ್ಗೀಥವು ದೈತ್ಯಹನನಕ್ಕೆ ಸಾಧನವಾಗಿ ಹೇಳಲ್ಪಟ್ಟಿದೆ. ಹೀಗೆ, ಎರಡೂ ಕಡೆಗಳಲ್ಲಿ ಸಾಮ್ಯವಿರುವುದರಿಂದ ವಿದ್ಯೈಕ್ಯವು ತಿಳಿಯುತ್ತದೆ. ಆದ್ದರಿಂದ ಪ್ರಾಣನನ್ನು ಉದ್ಗಾನಕರ್ತೃತ್ವೇನ, ಉದ್ಗೀಥತ್ವೇನ ಎರಡೂ ರೀತಿಯಿಂದ ಉಪಾಸನೆ ಮಾಡಬೇಕು. ಬೃಹದಾರಣ್ಯಕದಲ್ಲಿ ಉದ್ಗಾನಕರ್ತೃತ್ವೇನ ಉಪಾಸನೆಯಂತೆ 'ಏಷ ಉ ವಾ ಉದ್ಗೀಥಃ' ಎಂದು ಉದ್ಗೀಥಾಭೇದೇನ ಉಪಾಸನೆಯೂ ಶ್ರುತವಾಗಿದೆ. ಛಾಂದೋಗ್ಯದಲ್ಲಿ ಕರ್ತೃತ್ವೇನ ಉಪಾಸನೆಯನ್ನು ಅಧ್ಯಾಹಾರ ಮಾಡಿಕೊಳ್ಳಬೇಕು.

**॥ ನವಾ ಪ್ರಕರಣಭೇದಾತ್ ಪರೋವರೀಯಸ್ತ್ವಾದಿವತ್ ॥** ನವಾ=ಅವೆರಡೂ ಒಂದೇ ವಿದ್ಯೆಗಳಲ್ಲ. ಪ್ರಕರಣಭೇದಾತ್, ಛಾಂದೋಗ್ಯದಲ್ಲಿ 'ಓಮಿತ್ಯೇತದಕ್ಷರ ಮುದ್ಗೀಥಮುಪಾಸೀತ' ಎಂದು ಉದ್ಗೀಥಸಾಮದಲ್ಲಿರುವ ಓಂಕಾರರೂಪವಾದ ಒಂದಕ್ಷರವನ್ನು ಪ್ರಸ್ತಾಪ ಮಾಡಿ 'ಏತಸ್ಯ ವಾಽಕ್ಷರಸ್ಯ ಉಪವ್ಯಾಖ್ಯಾನಂ ಭವತಿ' 'ದೇವಾಸುರಾ ಹ ವೈ ಯತ್ರ' ಎಂದು ಪ್ರಕರಣವನ್ನು ಆರಂಭ ಮಾಡಿದೆ. ಅಲ್ಲಿ ಉದ್ಗೀಥಾವಯವವಾದ ಓಂಕಾರದ ವಿಚಾರವನ್ನು ಹೇಳಲಾಗಿದೆ.

ಬೃಹದಾರಣ್ಯಕದಲ್ಲಿ 'ಹಂತಾಸುರಾನ್ ಯಜ್ಞೇ ಉದ್ಗೀಥೇನ ಅತ್ಯಾಯಾಮ' ಎಂದು ಸಮಗ್ರ ಉದ್ಗೀಥಸಾಮವನ್ನು ಹೇಳಲಾಗಿದೆ. ಅಲ್ಲದೆ ಛಾಂದೋಗ್ಯದಲ್ಲಿ ಉದ್ಗೀಥಾವಯವವಾದ ಪ್ರಣವವು ಅಧ್ಯಸ್ತಪ್ರಾಣಭಾವೇನ ಉಪಾಸ್ಯವಾಗಿದೆ. ಬೃಹದಾರಣ್ಯಕದಲ್ಲಿ ಉದ್ಗೀಥಸಾಮಭಕ್ತಿಯನ್ನು ಗಾನ ಮಾಡುವ ಉದ್ಗಾತೃವು ಪ್ರಾಣದೃಷ್ಟ್ಯಾ ಉಪಾಸ್ಯನಾಗಿದ್ದಾನೆ. ಹೀಗೆ 'ರೂಪ' ಭೇದಾದಪಿ ವಿದ್ಯಾಭೇದ.

ಇದಕ್ಕೆ ದೃಷ್ಟಾಂತ ಪರೋವರೀಯಸ್ತ್ವಾದಿವತ್, ಎಂದು. ಹೇಗೆ ಒಂದೇ ಶಾಖೆಯಲ್ಲಿ (ಛಾಂದೋಗ್ಯದಲ್ಲಿ) ಪ್ರಣವದಲ್ಲಿ ಪರಮಾತ್ಮದೃಷ್ಟಿ ಸಮಾನವಾದರೂ ಒಂದೆಡೆ ಹಿರಣ್ಮಯಪುರುಷದೃಷ್ಟಿ ಮತ್ತೊಂದೆಡೆ ಪರೋವರೀಯಸ್ತ್ವಾದಿ ಗುಣವಿಶಿಷ್ಟ ಪರಮಾತ್ಮ ದೃಷ್ಟಿ. ಹೀಗೆ ದೃಷ್ಟಿಭೇದದಿಂದ ವಿದ್ಯಾಭೇದವೋ ಅದರಂತೆ. (ಛಾಂದೋಗ್ಯ 1.9.2)

**॥ ಸಂಜ್ಞಾತಶ್ಚೇತ್ ತದುಕ್ತಮಸ್ತಿ ತು ತದಪಿ ॥** 'ಉದ್ಗೀಥವಿದ್ಯಾ' ಎಂಬ ಸಂಜ್ಞೆಯು ಎರಡೂ ವಿದ್ಯೆಗಳಿಗೆ ಇರುವುದರಿಂದ ಅವೆರಡೂ ಒಂದೇ ಆಗಬೇಕಲ್ಲವೆ? ತತ್=ಒಂದೇ ಹೆಸರು ಉಕ್ತಮಸ್ತಿ=ಅನೇಕ ವಿದ್ಯೆಗಳಿಗೆ ಛಾಂದೋಗ್ಯದ ಪ್ರಥಮಪ್ರಪಾಠಕದಲ್ಲಿ

'ಉದ್ಗೀಥವಿದ್ಯೆ' ಎಂಬ ಒಂದೇ ಹೆಸರನ್ನು ಕೊಡಲಾಗಿದೆ. ಆದ್ದರಿಂದ ಸಂಜ್ಞೈಕತ್ವವು ಪ್ರಯೋಜಕವಲ್ಲ.

**॥ ಪ್ರ್ಯಾಪ್ತೇಶ್ಚ ಸಮಂಜಸಮ್ ॥** ಛಾಂದೋಗ್ಯದ ಪ್ರಥಮ ಪ್ರಪಾಠಕದಲ್ಲಿ ಮತ್ತು ಮುಂದಿನ ಅನೇಕ ವಿದ್ಯೆಗಳಲ್ಲೂ ಪ್ರಣವಕ್ಕೆ ಉಪಾಸ್ಯತ್ವೇನ ವ್ಯಾಪ್ತಿ ಇರುವುದರಿಂದ ಮಧ್ಯದಲ್ಲಿರುವ ಈ ಉದ್ಗೀಥಪ್ರಕರಣದಲ್ಲಿ ಉದ್ಗೀಥಶಬ್ದದಿಂದ ಪ್ರಣವ ಎಂಬ ಅರ್ಥವನ್ನು ಮಾಡುವುದು ಸಮಂಜಸವೂ ಆಗಿದೆ. (ಈ ಸೂತ್ರದಲ್ಲಿ ಪ್ರಾಪ್ತೇಶ್ಚ ಎಂದು ಮಾಧ್ವಭಾಷ್ಯದ ಪಾಠ. ಶಾಂಕರ–ರಾಮಾನುಜ ಭಾಷ್ಯಪಾಠ ''ವ್ಯಾಪ್ತೇಶ್ಚ'' ಎಂದು.)

**ವಿಮರ್ಶೆ**—ಉಪಕ್ರಮಭೇದದಿಂದ ವಿದ್ಯಾಭೇದವನ್ನು ಸಿದ್ಧಾಂತಮಾಡುವುದು ಯುಕ್ತವಲ್ಲ. ಹಾಗೆ ಮಾಡಿದರೆ ಕಾಣ್ವಶಾಖೆ ಮತ್ತು ಮಾಧ್ಯಂದಿನಶಾಖೆಗಳಲ್ಲಿ ಹೇಳಿರುವ ಅಂತರ್ಯಾಮಿ ವಿದ್ಯೆಯೂ ಭಿನ್ನವೆಂದಾದೀತು. ಕಾಣ್ವಶಾಖೆಯಲ್ಲಿ 'ಯ ಆತ್ಮನಿ ತಿಷ್ಠನ್' (14.5.30) ಎಂದು ಉಪಕ್ರಮವಿದೆ. ಮಾಧ್ಯಂದಿನ ಶಾಖೆಯಲ್ಲಿ 'ಯೋ ವಿಜ್ಞಾನೇ ತಿಷ್ಠನ್' (ಬೃ.5.7.22) ಎಂದು ಉಪಕ್ರಮವಿದೆ. ಇಲ್ಲಿ ಉಪಕ್ರಮದಲ್ಲಿ ಭೇದವಿದ್ದರೂ ಮುಂದಿನ ಭಾಗದಲ್ಲಿ ಮತ್ತು ಉಪಸಂಹಾರದಲ್ಲಿ ಐಕ್ಯವಿರುವುದರಿಂದ ವಿದ್ಯೆಯು ಏಕ ಎಂದೇ ನಿರ್ಣಯಿಸಬೇಕು. ಆದರಂತೆ ಪ್ರಕೃತ ಉದ್ಗೀಥೋಪಾಸನೆಯಲ್ಲೂ ವಿದ್ಯೈಕ್ಯವು ಸಿದ್ಧವಾಗುತ್ತದೆ.

**ಇಲ್ಲಿಗೆ ಪ್ರಾಪ್ತ್ಯಧಿಕರಣವು ಮುಗಿಯಿತು.**

## ೪. ಸರ್ವಾಭೇದಾಧಿಕರಣಮ್

### ॥ ಓಂ ಸರ್ವಾಭೇದಾದನ್ಯತ್ರೇಮೇ ಓಂ ॥ ೧೧ ॥

**ಸರ್ವಗುಣಯುಕ್ತತ್ವೇನೋಪಾಸನಾದನ್ಯತ್ರೈವ ಫಲೇ ಬ್ರಹ್ಮಾದಯೋ ಭವಂತಿ ।**

**'ಸಂಪೂರ್ಣೋಪಾಸನಾದ್ ಬ್ರಹ್ಮಾ**
**ಸಂಪೂರ್ಣಾನಂದಭಾಗ್ ಭವೇತ್ ।**
**ಇತರೇ ತು ಯಥಾಯೋಗಂ**
**ಸಮ್ಯಜ್ ಮುಕ್ತೌ ಭವಂತಿ ಹಿ ॥' ಇತಿ ಪಾದ್ಮೇ ।**

ವೇದೋಕ್ತವಾದ ಸರ್ವಗುಣಯುಕ್ತತ್ವೇನ ಉಪಾಸನೆ ಮಾಡುವುದರಿಂದಾಗಿಯೇ ಬ್ರಹ್ಮದೇವ ಮತ್ತು ಸರಸ್ವತಿಯರು ಅನ್ಯತ್ರೈವ ಫಲೇ=ಇತರ ಸಾಧಕರಿಗಿಂತ ವಿಲಕ್ಷಣವಾದ ಮೋಕ್ಷಾಖ್ಯಫಲದಲ್ಲಿ ಸೇರುತ್ತಾರೆ. ಅಂತಹ ಉಪಾಸನೆಯಿಂದಾಗಿಯೇ ಬ್ರಹ್ಮ-ಸರಸ್ವತಿಯರಿಗೆ ಸಂಪೂರ್ಣಾನಂದರೂಪವಾದ ಮೋಕ್ಷಫಲವು ದೊರಕುತ್ತದೆ. ಇತರರಿಗೆ ಅವರವರ ಯೋಗ್ಯತಾನುಸಾರವಾದ ಉಪಾಸನೆ, ಅದಕ್ಕನುಗುಣವಾದ ಫಲವು ದೊರಕುತ್ತದೆ.

**ವಿವರಣೆ**—ತತ್ತ್ವಪ್ರದೀಪದಲ್ಲಿ 'ಬ್ರಹ್ಮಾದಯಃ' ಎಂಬ ಆದಿಪದದಿಂದ ಸರಸ್ವತಿಯನ್ನು ಉಲ್ಲೇಖಿಸಲಾಗಿದೆ. ವಾದಿರಾಜರು ಗುರ್ವರ್ಥದೀಪಿಕಾದಲ್ಲಿ ಬ್ರಹ್ಮಾದಿ ಸಕಲ ಜೀವರನ್ನೂ ಪರಿಗ್ರಹಿಸಿ ಅನ್ಯತ್ರಪದವನ್ನು ಆವೃತ್ತಿಮಾಡಿ 'ಬ್ರಹ್ಮಾದಯಃ ಅನ್ಯತ್ರ ಅನ್ಯತ್ರಫಲೇ ಭವಂತಿ' ಎಂದು ಅರ್ಥ ಹೇಳಿದ್ದಾರೆ. ಬ್ರಹ್ಮಾದಿದೇವತೆಗಳಿಗೆ ಸಿಗುವ ಫಲ ತಾರತಮ್ಯೋಪೇತವಾದುದು, ಎಂದು ಅರ್ಥ.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಓಂ ಸರ್ವಾಭೇದಾದನ್ಯತ್ರೇಮೇ ಓಂ ॥** (ಅತ್ರ ಬಹುಗುಣೋಪಸಂಹಾರಸ್ಯ ಫಲಾಧಿಕ್ಯೋಕ್ತ್ಯಾ ಕರ್ತವ್ಯತೈವ ಸಾಧ್ಯತೇ। ಫಲೇ ಇತಿ ಶೇಷಃ। ಇಮೇ= ಉಪಸಂಹೃತ್ವೇನ ವಿಶಿಷ್ಯಪ್ರಸ್ತುತಾಃ ಬ್ರಹ್ಮಾದಯಃ, ಅನ್ಯತ್ರಫಲೇ=ಅನುಪಸಂಹತ್ರ ವಿಲಕ್ಷಣಫಲೇ ಸಂಪೂರ್ಣಾನಂದಾದ್ಯಾತ್ಮಕೇ ಮೋಕ್ಷಫಲೇ ಭವಂತಿ=ತದ್‌ಭಾಜೋ ಭವಂತಿ। ಕುತಃ ? ಸರ್ವಾಭೇದಾತ್=ಸರ್ವಗುಣಾನಾಂ ಅಭೇದೇನ ಉಪಾಸನಾ ದಿತ್ಯರ್ಥಃ। ಸರ್ವಗುಣಯುಕ್ತತ್ವೇನ ಉಪಾಸನಾದಿತಿ ಯಾವತ್। 'ಉಪಸಂಹಾರ ಲಭ್ಯಫಲೇ' ಇತಿ ನಿರ್ದೇಶ್ಯೇ ಅನ್ಯತ್ರೇತ್ಯುಕ್ತಿಃ ತಸ್ಯ ಅನುಪಸಂಹಾರಾ-ಲಭ್ಯತ್ವಸೂಚನಾಯ।)

ಇಮೇ=ಬಹುಗುಣೋಪಸಂಹಾರಕರಾದ ಬ್ರಹ್ಮಾದಿಗಳು ಅನ್ಯತ್ರಫಲೇ= ಉಪಸಂಹಾರ ಮಾಡದವರ ಫಲಕ್ಕೆ ವಿಲಕ್ಷಣವಾದ ಫಲದಲ್ಲಿ ಸೇರುತ್ತಾರೆ. ಏಕೆಂದರೆ, ಸರ್ವಾಭೇದಾತ್=ಅವರು ಸರ್ವಗುಣಗಳನ್ನು ಅಭೇದೇನ ಉಪಸಂಹಾರ ಮಾಡಿರುವುದರಿಂದ.

## ಅದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಸರ್ವಾಭೇದಾದನ್ಯತ್ರೇಮೇ ॥** ಬೃಹದಾರಣ್ಯಕ ಮತ್ತು ಛಾಂದೋಗ್ಯ

ಉಪನಿಷತ್ತುಗಳ ಪ್ರಾಣಸಂವಾದಪ್ರಕರಣದಲ್ಲಿ ಜ್ಯೇಷ್ಠತ್ವ–ಶ್ರೇಷ್ಠತ್ವ ಗುಣಗಳು ಪ್ರಾಣನಲ್ಲಿ ಉಪಾಸ್ಯತ್ವೇನ ಶ್ರುತವಾಗಿವೆ. 'ಯೋ ಹವೈ ಜ್ಯೇಷ್ಠಂ ಚ ಶ್ರೇಷ್ಠಂ ಚ ವೇದ' ಎಂದು. ಅದರಂತೆ, 'ಯದ್ವಾ ಅಹಂ ವಸಿಷ್ಠಾಸ್ಮಿ ತ್ವಂ ತದ್ವದ್ ವಸಿಷ್ಠೋಽಸಿ' (ಬೃ.6.1.14) ಎಂದು ವಸಿಷ್ಠತ್ವಗುಣವೂ ಶ್ರುತವಾಗಿದೆ. ಆದರೆ ಕೌಶೀತಕೀ ಮೊದಲಾದ ಉಪನಿಷತ್ತುಗಳ ಇದೇ ಪ್ರಕರಣದಲ್ಲಿ ಶ್ರೇಷ್ಠತ್ವಗುಣಮಾತ್ರ ಶ್ರುತವಾಗಿದೆ, ವಸಿಷ್ಠತ್ವವು ಅಶ್ರುತವಾಗಿದೆ. ಆದರೂ 'ಅಥೊ ಯ ಏವಂ ವಿದ್ವಾನ್ ಪ್ರಾಣೇ ನಿಃಶ್ರೇಯಸಂ ವಿದಿತ್ವಾ' ಎಂದು ಕೌಶೀತಕಿಯಲ್ಲಿ ಶ್ರುತವಾದ ಉಪಾಸನಾವಿಧಾಯಕ ವಾಕ್ಯಗತ 'ಏವಂ' ಶಬ್ದದಿಂದ ಬುದ್ಧಿಸನ್ನಿಹಿತವಾದ ವಸಿಷ್ಠತ್ವಾದಿಗುಣಗಳನ್ನೂ ಪರಾವರ್ಶಮಾಡಬೇಕು. ಸರ್ವಾಭೇದಾತ್=ಎಲ್ಲಾ ಪ್ರಾಣವಿದ್ಯೆಗಳೂ ಒಂದೇ ಆದುದರಿಂದ ಅನ್ಯತ್ರ= ಕೌಶೀತಕೀಗತ ಏವಂಶಬ್ದದಿಂದಲೂ ಇಮೇ=ಬೃಹದಾರಣ್ಯಕಾದಿ ತತ್ತತ್ ಪ್ರಕರಣಗತವಾದ ಗುಣಗಳು ಗೃಹೀತವಾಗುತ್ತವೆ. (ನಹಿ ದೇವದತ್ತಃ ಶೌರ್ಯಾದಿ ಗುಣತ್ವೇನ ಸ್ವದೇಶೇ ಪ್ರಸಿದ್ಧಃ ದೇಶಾಂತರಂ ಗತಃ ತದ್ದೇಶ್ಯೈಃ ಅವಿಭಾವಿತ ಶೌರ್ಯಾದಿಗುಣಃ ಅತದ್ಗುಣೋ ಭವತಿ । ಶಾಂ.ಭಾ.) ರಾಮಾನುಜಭಾಷ್ಯದಲ್ಲೂ ಇದೇ ಅರ್ಥವನ್ನು ಹೇಳಲಾಗಿದೆ.

**ವಿಮರ್ಶೆ**—ಎರಡನೆಯ ಅಧಿಕರಣದಲ್ಲಿ ಉಪಾಸನಾರೂಪವಾದ ಅರ್ಥವು ಒಂದೇ ಆಗಿರುವಾಗ ಶಾಖಾಂತರೋಕ್ತವಾದ ಗುಣಗಳ ಉಪಸಂಹಾರವನ್ನೂ ಮಾಡಬೇಕು, ಎಂದು ನಿರ್ಣಯ ಮಾಡಿರುವುದರಿಂದ ಮತ್ತೆ ಇಲ್ಲಿ ಪೂರ್ವಪಕ್ಷಕ್ಕೆ ಅವಕಾಶವೇ ಇಲ್ಲ. ಏಕೆಂದರೆ, ಎರಡೂ ಶಾಖೆಗಳಲ್ಲಿ ಹೇಳಿರುವ ಪ್ರಾಣೋಪಸನೆಯು ಏಕವಾಗಿದೆ. ಆದರೂ 'ಏವಂ' ಎಂಬ ಶಬ್ದವು ಸನ್ನಿಹಿತಪರಾಮರ್ಶಕ, ವಸಿಷ್ಠತ್ವಾದಿ ಗುಣಗಳು ಶಾಖಾಂತರೋಕ್ತವಾಗಿರುವುದರಿಂದ ಅಸನ್ನಿಹಿತವಾಗಿವೆ. ಆದ್ದರಿಂದ ವಿದ್ಯಾಭೇದಕ್ಕೆ ಅವಕಾಶವಿದೆ, ಎಂದು ಅಧಿಕಾಶಂಕೆ ಮಾಡುವುದೂ ಯುಕ್ತವಲ್ಲ. 'ಯ ಏವಂ ವಿದ್ವಾನ್' ಎಂದು ಕೌಶೀತಕೀಶಾಖೆಯಲ್ಲಿ 'ಏವಂ' ಎಂದಿಷ್ಟೇ ಇದೆ, 'ಏವಮೇವ' ಎಂದು ಅವಧಾರಣವಿಲ್ಲ. ಹಾಗಿದ್ದಿದ್ದಲ್ಲಿ ಪೂರ್ವಪಕ್ಷ ಮಾಡಬಹುದಿತ್ತು. ಅವಧಾರಣವಿಲ್ಲದಿರುವುದರಿಂದ 'ವಸಿಷ್ಠತ್ವಾದಿಗಳನ್ನೂ' ಉಪಲಕ್ಷಣಯೂ ತೆಗೆದು ಕೊಳ್ಳಬಹುದು. ಆದ್ದರಿಂದ ಪೂರ್ವಪಕ್ಷಕ್ಕೆ ಅವಕಾಶವಿಲ್ಲ.

**ಇಲ್ಲಿಗೆ ಸರ್ವಾಭೇದಾಧಿಕರಣವು ಮುಗಿಯಿತು.**

## ೫. ಆನಂದಾದ್ಯಧಿಕರಣಮ್

**ಸರ್ವೇಷಾಂ ಮುಮುಕ್ಷೂಣಾಂ ಕಿಯನ್ನಿಯಮೇನ ಉಪಾಸ್ಯಮಿತಿ । ಅತ ಆಹ-**

**॥ ಓಂ ಆನಂದಾದಯಃ ಪ್ರಧಾನಸ್ಯ ಓಂ ॥ ೧೨ ॥**

**ಪ್ರಧಾನಫಲಸ್ಯ ಮೋಕ್ಷಸ್ಯಾರ್ಥೇ ಆನಂದೋ ಜ್ಞಾನಂ ಸದಾತ್ಮೇತ್ಯುಪಾಸ್ಯಾ ಏವ ।**

**'ಸಚ್ಚಿದಾನಂದ ಆತ್ಮೇತಿ ಬ್ರಹ್ಮೋಪಾಸಾ ವಿನಿಶ್ಚಿತಾ ।**
**ಸರ್ವೇಷಾಂ ಚ ಮುಮುಕ್ಷೂಣಾಂ ಫಲಸಾಮ್ಯಾದಪೇಕ್ಷಿತಾ ॥'**

**ಇತಿ ಬ್ರಹ್ಮತರ್ಕೇ ।**

ಸಕಲಮುಮುಕ್ಷುಗಳೂ ಪರಮಾತ್ಮನಲ್ಲಿ ಎಷ್ಟು ಗುಣಗಳನ್ನು ನಿಯಮೇನ ಉಪಾಸನೆ ಮಾಡಬೇಕು? ಇದನ್ನು ಈ ಸೂತ್ರದಲ್ಲಿ ಹೇಳಲಾಗಿದೆ. ಪ್ರಧಾನಸ್ಯ=ಪ್ರಧಾನ ಫಲವಾದ ಮೋಕ್ಷಸಿದ್ಧಿಗಾಗಿ ಆನಂದ, ಜ್ಞಾನ, ಸತ್, ಆತ್ಮಾ ಈ ನಾಲ್ಕು ಗುಣಗಳನ್ನು ಉಪಾಸನೆ ಮಾಡಲೇಬೇಕು. ಬ್ರಹ್ಮತರ್ಕದಲ್ಲಿ ಹೇಳಿದೆ—ಸತ್‌ಚಿತ್-ಆನಂದ-ಆತ್ಮಾ ಎಂದು ಬ್ರಹ್ಮನ ಉಪಾಸನೆಯು ನಿರ್ಧಾರಿತವಾದುದು. ಎಲ್ಲಾ ಮುಮುಕ್ಷುಗಳಿಗೂ ಆನಂದಾದಿರೂಪಫಲವು ಸಮಾನವಾದುದರಿಂದ ಈ ಉಪಾಸನೆಯು ಅಪೇಕ್ಷಿತ ವಾದುದು.

**ವಿವರಣೆ**—ತತ್ವಪ್ರದೀಪದಲ್ಲಿ ಈ ಸೂತ್ರವ್ಯಾಖ್ಯಾನವನ್ನು ಹೀಗೆ ಆರಂಭಿಸಲಾಗಿದೆ—'ಯೇ ಸಮ್ಯಕ್ ಮುಕ್ತಿಮಾತ್ರಮ್ ಇಚ್ಛಂತಿ, ನ ತತ್ರ ವಿಶೇಷಾನ್ ತೇಷಾಂ ಯೇ ಗುಣಾಃ ಉಪಾಸ್ಯಾಃ ತೇ ಕಿಯಂತಃ ಇತಿ ಅಧುನಾ ನಿರೂಪ್ಯತೇ ।' ಯಾರು ಮೋಕ್ಷದಲ್ಲಿ ಆನಂದಾತಿಷಯವನ್ನು ಬಯಸದೇ ಮೋಕ್ಷವಾದರೆ ಸಾಕು ಎಂದು ಬಯಸುತ್ತಾರೋ ಅಂತಹವರಿಂದ ಉಪಾಸ್ಯವಾದ ಗುಣಗಳನ್ನು ಹೇಳುತ್ತಾರೆ.

ಮೋಕ್ಷವೆಂದರೆ ಸರ್ವದುಃಖನಿವೃತ್ತಿಪೂರ್ವಕಸುಖಪ್ರಾಪ್ತಿ. ಆ ಸುಖವೂ ನಿರ್ದುಷ್ಟವಾಗಿರಬೇಕು. ಇದಲ್ಲದೆ ಮೋಕ್ಷದಲ್ಲಿ ಜ್ಞಾನವೂ ಬೇಕು. ಸ್ವಾವರ ನಿಯಾಮಕತ್ವವೂ ನಮಗಿರಬೇಕು. ಇದರ ಲಾಭಕ್ಕಾಗಿ 'ಸತ್ ಚಿದಾನಂದ-ಆತ್ಮಾ' ಎಂದು ಭಗವಂತನನ್ನು ಧ್ಯಾನಿಸಬೇಕು. ಸತ್ ಎಂದರೆ ನಿರ್ದೋಷತ್ವ, ಜ್ಞಾನ ಆನಂದಗಳು. ಆತ್ಮಾ ಎಂದರೆ ಸ್ವಾಮಿ. 'ತಂ ಯಥಾಯಥಾ ಉಪಾಸತೇ ತದೇವ ಭವತಿ'

ಭಗವಂತನನ್ನು ನಾವು ಹೇಗೆ ಹೇಗೆ ಉಪಾಸನೆ ಮಾಡುತ್ತೇವೋ ನಾವೂ ಅದರಂತೆಯೇ ಆಗುತ್ತೇವೆ.

ಆತ್ಮತ್ವೋಪಾಸನೆಗೆ ತತ್ತ್ವಪ್ರಕಾಶಿಕಾದಲ್ಲಿ ಹೀಗೆ ಕಾರಣವನ್ನು ಕೊಡಲಾಗಿದೆ— ಸ್ವಸಂಬಧಾನುಸ್ಮರಣಸ್ಯ ಭಗವತ್‌ಪ್ರೀತಿಸಾಧನತ್ವಾತ್–ಜೀವನಿಗೂ ಪರಮಾತ್ಮನಿಗೂ ಇರುವ ಸಂಬಂಧ ನಿಯಮ್ಯ–ನಿಯಾಮಕಭಾವ. ಅದರ ಸ್ಮರಣೆಯನ್ನು ಮೋಕ್ಷದಲ್ಲಿ ಮಾಡಿಕೊಳ್ಳುವುದು ಭಗವಂತನಿಗೆ ಪ್ರೀತಿಕರವಾದುದು. ಅದಕ್ಕಾಗಿ ಆತ್ಮತ್ವೇನ 'ಸ್ವಾಮಿತ್ವೇನ' ಉಪಾಸನೆ ಮಾಡಬೇಕು.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಓಂ ಆನಂದಾದಯಃ ಪ್ರಧಾನಸ್ಯ ಓಂ ॥** (ಅತ್ರ ಸರ್ವಮುಮುಕ್ಷುಸಾಧಾರಣ ಗುಣೋಪಾಸನಾ ನಿರ್ಣೀಯತೇ। ಪ್ರಧಾನಸ್ಯ=ಮೋಕ್ಷಸ್ಯಾರ್ಥೇ ಆನಂದ–ಜ್ಞಾನ– ನಿರ್ದೋಷತ್ವಾತ್ಮತ್ವರೂಪಾಃ ಚತ್ವಾರೋ ಗುಣಾಃ ಧ್ಯೇಯಾಃ। ಅನ್ಯಥಾ ತನ್ನ ಸ್ಯಾತ್ ಇತಿ ಭಾವಃ। ಮೋಕ್ಷಸ್ಯೇತಿ ವಾಚ್ಯೇ ಪ್ರಧಾನಸ್ಯ ಇತ್ಯುಕ್ತಿಃ 'ಸುಖಮೇವ ಮೇ ಸ್ಯಾತ್, ದುಃಖಂ ಮನಾಗಪಿ ಮಾ ಭೂತ್' ಇತಿ ನಿಖಿಲಾಶಾಸ್ಯತ್ವೇನ ಪ್ರಧಾನ–ನಿರ್ದೋಷಾನು ಭವರೂಪತ್ವಾತ್ ತಸ್ಯ, ತದರ್ಥಂ ಏತೇ ಏವ ಉಪಾಸ್ಯಾಃ ನಾನ್ಯೇ ಇತಿ ತದುಪಪಾದಕಂ ಸೂಚಯಿತುಮ್। 'ತಂ ಯಥಾಯಥೋಪಾಸತೇ' ಇತ್ಯಾದೇಃ। ಸ್ವಾಮಿತ್ವಂ ತು ತತ್‌ಪ್ರೀತ್ಯರ್ಥತ್ವಾದುಪಾಸ್ಯಂ ಇತಿ 'ಆತ್ಮೇತಿ ತೂಪಗಚ್ಛಂತಿ' ಇತ್ಯಗ್ರೇ ವ್ಯಕ್ತಮ್।)

ಈ ಅಧಿಕರಣದಲ್ಲಿ ಸಕಲ ಮೋಕ್ಷಾರ್ಥಿಗಳೂ ಮಾಡಲೇಬೇಕಾಗಿರುವ ಗುಣೋಪಾಸನೆಯನ್ನು ನಿರ್ಣಯಿಸಲಾಗಿದೆ. ಪ್ರಧಾನಸ್ಯ=ಮೋಕ್ಷಕ್ಕಾಗಿ ಆನಂದಾದಯಃ=ಆನಂದಾದಿ ನಾಲ್ಕು ಗುಣಗಳು ಉಪಾಸ್ಯವಾಗಿವೆ. ಸೂತ್ರದಲ್ಲಿ ಮೋಕ್ಷವನ್ನು ಪ್ರಧಾನಶಬ್ದದಿಂದ ಉಲ್ಲೇಖಿಸಲು ಕಾರಣ ಇದು—ಎಲ್ಲರಿಗೂ ಪ್ರಧಾನವಾದುದು–ಸುಖ ಬರಬೇಕು, ದುಃಖ ಹೋಗಬೇಕು, ಎಂಬುದು. ಈ ಪ್ರಧಾನವು ಸಿಗಬೇಕಾದರೆ ಪರಮಾತ್ಮನನ್ನು ಸತ್=ನಿರ್ದೋಷ, ಚಿತ್=ಜ್ಞಾನರೂಪ, ಆನಂದ=ಸುಖರೂಪನೆಂದು ಉಪಾಸನೆ ಮಾಡಬೇಕು. ಆಗ ನಾವೂ ಹಾಗೆಯೇ ಆಗುತ್ತೇವೆ. ಹೀಗೆ, ಈ ಗುಣಗಳನ್ನೇ ಉಪಾಸನೆ ಮಾಡಬೇಕು ಎನ್ನುವುದಕ್ಕೆ ಯುಕ್ತಿಯನ್ನು ತೋರಿಸುವುದಕ್ಕಾಗಿ 'ಪ್ರಧಾನ' ಶಬ್ದವನ್ನು ಹೇಳಲಾಗಿದೆ. ಆತ್ಮತ್ವಗುಣದ (ಸ್ವಾಮಿತ್ವಗುಣದ) ಉಪಾಸನೆ ಭಗವತ್ಪ್ರೀತಿಸಂಪಾದನೆಗಾಗಿ.

**ಇಲ್ಲಿಗೆ ಆನಂದಾದ್ಯಧಿಕರಣವು ಮುಗಿಯಿತು.**

## ೬. ಪ್ರಿಯಶಿರಸ್ತ್ವಾಧಿಕರಣಮ್

### ॥ ಓಂ ಪ್ರಿಯಶಿರಸ್ತ್ವಾದ್ಯಪ್ರಾಪ್ತಿರುಪಚಯಾಪಚಯೌ ಹಿ ಭೇದೇ ಓಂ ॥ ೧೩ ॥

**ಫಲಭೇದಾರ್ಥಮುಪಚಯಾಪಚಯಯೋರ್ಭಾವಾನ್ನ ಸರ್ವೇಷಾಂ ಪ್ರಿಯಶಿರಸ್ತ್ವಾದಿಗುಣೋಪಾಸಾಪ್ರಾಪ್ತಿಃ ।**

**'ನೈವ ಸರ್ವಗುಣಾಃ ಸರ್ವೈರುಪಾಸ್ಯಾ ಮುಕ್ತಿಭೇದತಃ ।**
**ವಿರಿಂಚಸ್ಯೈವ ಯನ್ಮುಕ್ತಾವಾನಂದಸ್ಯ ಸುಪೂರ್ಣತಾ ॥'**

**ಇತಿ (ಹಿ) ವಾರಾಹೇ ।**

ಮೋಕ್ಷದಲ್ಲಿ ಆನಂದಾನುಭವರೂಪಫಲದಲ್ಲಿ ತಾರತಮ್ಯವಿರುವುದರಿಂದ (ಭೇದಾತ್) ಉಪಾಸನೆಯಲ್ಲೂ ಉಪಚಯ=ಗುಣವಿಶೇಷದ ಉಪಾಸನೆ ಕೆಲವರಿಗೆ, ಅಪಚಯ=ಗುಣವಿಶೇಷೋಪಾಸನಾಭಾವ ಮತ್ತೆ ಕೆಲವರಿಗೆ ಹೀಗೆ ತಾರತಮ್ಯವು ಇರಲೇಬೇಕಾದುದರಿಂದ ಪ್ರಿಯಶಿರಸ್ತ್ವಾದಿ ಗುಣಗಳು ಸರ್ವೋಪಾಸ್ಯಗಳಲ್ಲ.

**ವಿವರಣೆ**—ಭಗವಂತನು ಆನಂದರೂಪ, ಎಂಬ ಉಪಾಸನೆಯನ್ನು ಎಲ್ಲರೂ ಮಾಡಬೇಕು. ಆನಂದದ ವೈಚಿತ್ರ್ಯಗಳೇ ಪ್ರಿಯ, ಮೋದ, ಪ್ರಮೋದ ಮತ್ತು ಆನಂದಗಳು. ಆದ್ದರಿಂದ ಭಗವಂತನ ಶಿರಸ್ಸು ಪ್ರಿಯರೂಪ, ದಕ್ಷಿಣಬಾಹು ಮೋದರೂಪ, ಪ್ರಮೋದ ಉತ್ತರಬಾಹು, ಆನಂದವೇ ಹೃದಯ ಎಂದು 'ತಸ್ಯ ಪ್ರಿಯಮೇವ ಶಿರಃ' ಇತ್ಯಾದಿಯಾಗಿ ತೈತ್ತಿರೀಯದಲ್ಲಿ ಹೇಳಿರುವಂತೆ ಎಲ್ಲರೂ ಉಪಾಸನೆ ಮಾಡಬೇಕು, ಎಂಬ ಈ ಅಭಿಪ್ರಾಯವನ್ನು ನಿರಾಕರಿಸಲು ಪ್ರಕೃತ ಸೂತ್ರವಿದೆ. ಪ್ರಿಯಾದಿಗಳು ಆನಂದದ ಅವಾಂತರವಿಶೇಷಗಳಾದರೂ ಅವುಗಳ ಉಪಾಸನೆ ಎಲ್ಲರಿಗೂ ಇಲ್ಲ. ಹಾಗೆ ವಿಶೇಷಧರ್ಮಗಳನ್ನು ಪರಿಗಣಿಸಿದರೆ ಆತ್ಮತ್ವಗುಣದಲ್ಲೇ ಎಲ್ಲ ಗುಣಗಳನ್ನೂ ಅಂತರ್ಭಾವ ಮಾಡಬಹುದು. ಅದರಿಂದ ಎಲ್ಲರಿಗೂ ಎಲ್ಲ ಗುಣಗಳ ಜ್ಞಾನದಲ್ಲೂ ಅಧಿಕಾರಸಿದ್ಧವಾಗಿ ಮುಕ್ತಿಯಲ್ಲಿ ಆನಂದತಾರತಮ್ಯವೇ ಇಲ್ಲವೆಂದಾದೀತು.

ಪ್ರಿಯವೆಂದರೆ ಒಳ್ಳೆಯ ವಿಷಯಗಳನ್ನು ಕೇಳಿ ಉಂಟಾಗುವ ಸಂತೋಷ. ಮೋದವೆಂದರೆ ವಸ್ತುಗಳನ್ನು ನೋಡಿದಾಗ ಆಗುವ ಸುಖ. ಸಾತ್ವಿಕವಸ್ತುಗಳನ್ನು

ಭೋಗಿಸಿ ಅಂದರೆ ಉಂಡು, ತಿಂದು, ಕುಡಿದು ಬರುವ ಸುಖ ಪ್ರಮೋದ. ಸ್ವರೂಪಸುಖ ಆನಂದ. ಇದು ತತ್ತ್ವಪ್ರದೀಪದಲ್ಲಿರುವ ವಿವರಣೆ.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಓಂ ಪ್ರಿಯಶಿರಸ್ತ್ವಾದ್ಯಪ್ರಾಪ್ತಿರುಪಚಯಾಪಚಯೌ ಹಿ ಭೇದೇ ಓಂ ॥** (ಅತ್ರ ಪಿಯಶಿರಸ್ತ್ವಾದಿಗುಣಾನಾಂ ಸರ್ವೋಪಾಸ್ಯತಾ ನೇತ್ಯುಚ್ಯತೇ । ಪ್ರಿಯಶಿರಸ್ತ್ವಾದಿಶಬ್ದಃ ತದುಪಾಸ್ತಿಪರಃ । ಭೇದ ಇತಿ ನಿಮಿತ್ತಸಪ್ತಮೀ । ಪ್ರಧಾನಸ್ಯ ಇತ್ಯಸ್ತಿ । 'ತಸ್ಯ ಪ್ರಿಯಮೇವ ಶಿರಃ' ಇತ್ಯಾದ್ಯುಕ್ತ-ಪ್ರಿಯಶಿರಸ್ತ್ವಾದಿಗುಣೋಪಾಸ್ತಿಃ ಅಪ್ರಾಪ್ತಿಃ=ನ ಸರ್ವೇಷಾಮ್ । ಕುತಃ ? ಪ್ರಧಾನಸ್ಯ=ಮೋಕ್ಷಾಖ್ಯಫಲಸ್ಯ ಭೇದೇ=ಭೇದಾರ್ಥಂ, ತಾರತಮ್ಯಾರ್ಥಮ್ ಉಪಚಯಾಪಚಯೌ । ಪ್ರಸ್ತಾವಾತ್ ಗುಣೋಪಾಸನಾಯಾಃ ಇತ್ಯನ್ವೇತಿ । ಗುಣೋಪಾಸನಾಯಾಃ ಉಪಚಯಾಪಚಯೌ=ವೃದ್ಧಿ-ಹ್ರಾಸೌ, ತಾರತಮ್ಯಮ್ ಇತಿ ಯಾವತ್ । ಉಪೇಯೌ ಇತ್ಯರ್ಥಃ । ಹಿರ್ಹೇತೌ । ಯಸ್ಮಾದೇವಂ ತಸ್ಮಾದಿತಿ । ಭೇದ ಇತ್ಯುಕ್ತ್ಯಾ 'ನೈವ ಸರ್ವೇ ಗುಣಾಃ ಸರ್ವೈರುಪಾಸ್ಯಾ ಮುಕ್ತಿಭೇದತಃ ।' ಇತಿ ಸ್ಮೃತಿಃ ಸೂಚಿತಾ । ಅಪ್ರಾಪ್ತಿರಿತ್ಯುಕ್ತ್ಯಾ ಯೋಗ್ಯತಾಽಪಿ ತಾವತೀತಿ ಸೂಚಿತಮ್ ।)

'ತಸ್ಯ ಪ್ರಿಯಮೇವ ಶಿರಃ' ಎಂದು ತೈತ್ತಿರೀಯದಲ್ಲಿ ಆನಂದಮಯನಿಗೆ ಹೇಳಿರುವ ಪ್ರಿಯಶಿರಸ್ತ್ವಾದಿಗುಣಗಳ ಉಪಾಸನೆಯು ಎಲ್ಲರಿಗೂ ಅಪ್ರಾಪ್ತಿಃ=ಪ್ರಾಪ್ತಿ ಇಲ್ಲ. ಏಕೆಂದರೆ, ಪ್ರಧಾನಸ್ಯ=ಮೋಕ್ಷರೂಪಫಲದ ಭೇದೇ=ತಾರತಮ್ಯಕ್ಕಾಗಿ (ಎಲ್ಲರಿಗೂ ಉಪಾಸ್ಯಗಳಾದರೆ ಮೋಕ್ಷದಲ್ಲಿ ತಾರತಮ್ಯವೇ ಇಲ್ಲವೆಂದಾದೀತು.) ಗುಣೋಪಾಸನೆಯ ಉಪಚಯಾಪಚಯೌ=ತಾರತಮ್ಯವು ಹಿ=ಯಾವ ಕಾರಣ ದಿಂದಾಗಿ ಇದೆಯೋ ಆದ್ದರಿಂದ ಪ್ರಿಯಶಿರಸ್ತ್ವಾದಿಉಪಾಸನೆಯು ಎಲ್ಲರಿಗೂ ಇಲ್ಲ.

**ಇಲ್ಲಿಗೆ ಪ್ರಿಯಶಿರಸ್ತ್ವಾಧಿಕರಣವು ಮುಗಿಯಿತು.**

## ೭. ಇತರಾಧಿಕರಣಮ್

**॥ ಓಂ ಇತರೇ ತ್ವರ್ಥಸಾಮಾನ್ಯಾತ್ ಓಂ ॥ ೧೪ ॥**

**ಇತರೇ ಗುಣಾಃ ಫಲಸಾಮ್ಯಾಪೇಕ್ಷಯೋಪಸಂಹರ್ತವ್ಯಾಃ ॥**

ಚತುರ್ಮುಖನಿಂದ ಉಪಾಸ್ಯಗಳಾದ ಸರ್ವಗುಣಗಳು ಮತ್ತು

ಸರ್ವೋಪಾಸ್ಯವಾದ ಚತುರ್ಗುಣಗಳಲ್ಲದೆ ಮಧ್ಯದ ಇತರ ಗುಣಗಳು ದೇವತೆಗಳಿಂದ ಉಪಾಸ್ಯಗಳಾಗಿವೆ. ಅರ್ಥಸಾಮಾನ್ಯಾತ್=ಅವರವರಿಗೆ ಯೋಗ್ಯವಾದ ಮೋಕ್ಷರೂಪ ವಾದ ಫಲದ ಸಾಮ್ಯವನ್ನು ಅಪೇಕ್ಷಿಸಿ ದೇವತೆಗಳು ಇತರ ಗುಣಗಳನ್ನೂ ಉಪಾಸನೆ ಮಾಡಬಹುದು.

**ವಿವರಣೆ**—ಬ್ರಹ್ಮದೇವರು ವೇದೋಕ್ತಸಕಲಗುಣಗಳನ್ನೂ ಉಪಾಸನೆ ಮಾಡ ಬೇಕು. 'ಸಚ್ಚಿದಾನಂದಆತ್ಮಾ' ಈ ನಾಲ್ಕನ್ನು ಎಲ್ಲರೂ ಉಪಾಸನೆ ಮಾಡಬೇಕು. ಸರ್ವಗುಣಗಳು ಮತ್ತು ಎಲ್ಲಕ್ಕಿಂತ ಕಡಿಮೆಯಾದ ನಾಲ್ಕು ಗುಣಗಳು ಇವುಗಳ ಮಧ್ಯದ ಗುಣಗಳನ್ನು ದೇವತೆಗಳು ಅವರವರಿಗೆ ಸಿಗುವ ಮೋಕ್ಷಫಲಕ್ಕೆ ಅನುಗುಣವಾಗಿ ಉಪಾಸನೆ ಮಾಡಬೇಕು. ಅವರಿಗೆ ಸಿಗುವ ಫಲದ ಪರಿಚಯವು ಅವರಿಗೆ ಇಲ್ಲದಿದ್ದರೂ ಬ್ರಹ್ಮದೇವರು ದೇವತೆಗಳ ಯೋಗ್ಯತೆಯನ್ನು ತಿಳಿದು ಅದನ್ನು ಹೇಳುತ್ತಾರೆ—

ಯೋ ಯೋ ಭಾವೋ ದೇವತಾನಾಂ ವಿಮುಕ್ತೌ
ತತ್ತತ್ಪ್ರಾಪ್ತೌ ಸುಗುಣಾನೀಶಿತುಶ್ಚ ।
ಬ್ರಹ್ಮಾ ದಿಶತ್ಯಥ ತಾಂಸ್ತೇ ವಿಚಿಂತ್ಯ
ತತ್ತದ್‌ಭಾವಂ ಪ್ರಾಪ್ನುವಂತ್ಯಾತ್ಮಶಕ್ತ್ಯಾ ॥ ಇತಿ ಶ್ರುತೇಃ –ನ್ಯಾಯವಿವರಣ

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಓಂ ಇತರೇ ತ್ವರ್ಥಸಾಮಾನ್ಯಾತ್ ಓಂ ॥** (ಅತ್ರ ದೇವಾದೀನಾಂ ಬಹುಗುಣೋಪಾಸನಂ ಸಾಧ್ಯತೇ । ತುರೇವ । ಶೇಷೇಣಾನ್ವೇತಿ । ಇತರೇ=ಸರ್ವಾ ಭೇದಾದಿತ್ಯುಕ್ತಸರ್ವಗುಣೇಭ್ಯಃ, ಆನಂದಾದಯ ಇತ್ಯುಕ್ತಚತುರ್ಭಿಶ್ಚ ಇತರೇ ಗುಣಾಃ, ಮಧ್ಯಮಗುಣಾ ಇತ್ಯರ್ಥಃ । ದೇವಾದಿಭಿರುಪಸಂಹಾರ್ಯಾ ಏವ ಇತಿ ಶೇಷಃ । ನೈತಚ್ಛಕ್ಯಂ, ಯೋಗ್ಯತಾನಿರ್ಣಯಾತ್ ಇತ್ಯತ ಉಕ್ತಮ್–ಅರ್ಥೇತಿ ॥ ಲ್ಯಬ್‌ಲೋಪೇ ಪಂಚಮೀ । ಸ್ವ–ಸ್ವಪ್ರಾಪ್ಯಫಲಸಾಮ್ಯಮ್ ಅಪೇಕ್ಷ್ಯ, ಇತ್ಯರ್ಥಃ । ಪ್ರಾಪ್ಯಫಲಾನುರೋಧೇನ ಉಪಸಂಹಾರ್ಯಗುಣಾನ್ ಪ್ರತಿ ಯೋಗ್ಯತಾ ನಿಶ್ಚಯೋಪಪತ್ತೇಃ । ಭಾವಿಫಲೋತ್ಕರ್ಷಜ್ಞೇನ ಸರ್ವಜ್ಞಗುರುಣಾ ತದನುಸಾರಿಗುಣ ನಿಯಮೋಪದೇಶೋಪಪತ್ತೇಃ, ಇತಿ ಭಾವಃ । ಅರ್ಥಾದಿತ್ಯೇವ ಪೂರ್ತೌ ಸಾಮಾನ್ಯಾ–ದಿತ್ಯುಕ್ತಿಃ ಫಲೋಪಾಸನಯೋಃ ಸಾಮ್ಯಾತ್, ಇತಿ ಯುಕ್ತಿಂ ಸೂಚಯಿತುಮ್ ।)

ಈ ಅಧಿಕರಣದಲ್ಲಿ ದೇವ–ಪಿತೃ–ಋಷಿಗಳಿಗೆ ಬಹುಗುಣೋಪಾಸನೆಯನ್ನು

ಯುಕ್ತಿಯಿಂದ ಸಾಧಿಸಲಾಗಿದೆ. ಇತರೇ=ಸರ್ವಗುಣ ಮತ್ತು ಆನಂದಾದಿಚತುರ್ಗುಣ ಈ ಎರಡರ ಮಧ್ಯದ ಸಂಖ್ಯೆಯ ಗುಣಗಳು ದೇವತೆಗಳಿಂದ ಉಪಾಸನಾ ಯೋಗ್ಯವಾಗಿವೆ. ಯಾರಿಗೆ ಎಷ್ಟು ಎಂದು ನಿರ್ಧರಿಸುವುದು ಹೇಗೆ? ಅರ್ಥಸಾಮಾನ್ಯಾತ್=ಅವರವರಿಗೆ ಸಿಗಬೇಕಾಗಿರುವ ಫಲಸಾಮ್ಯವನ್ನು ಅವಲಂಬಿಸಿ ಅದಕ್ಕೆ ಯೋಗ್ಯವಾದಷ್ಟು ಗುಣಗಳನ್ನು ಅವರು ಉಪಾಸನೆ ಮಾಡಬೇಕು. ಅವರಿಗೆ ಸಿಗಬೇಕಾಗಿರುವ ಫಲಗಳನ್ನು ತಿಳಿದ ಗುರುಗಳು ಅದಕ್ಕೆ ಯೋಗ್ಯವಾದ ಗುಣಗಳನ್ನು ಉಪಾಸನೆ ಮಾಡುವಂತೆ ಆದೇಶಿಸುತ್ತಾರೆ.

## ಅದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಆನಂದಾದಯಃ ಪ್ರಧಾನಸ್ಯ ॥** ಉಪನಿಷತ್ತಿನಲ್ಲಿ ಪ್ರಧಾನಸ್ಯ=ಬ್ರಹ್ಮನಿಗೆ ಯಾವ ಪ್ರಕರಣದಲ್ಲಿ ಯಾವ ಗುಣಗಳನ್ನು ಹೇಳಲಾಗಿದೆಯೋ ಅವಷ್ಟನ್ನೇ ತಿಳಿದುಕೊಳ್ಳಬಾರದು. ಪ್ರಕರಣಾಂತರದಲ್ಲಿ ಹೇಳಿರುವ ಆನಂದಾದಯಃ= ಆನಂದರೂಪತ್ವ, ವಿಜ್ಞಾನಘನತ್ವ, ಸರ್ವಗತತ್ವ, ಸರ್ವಾತ್ಮತ್ವ ಈ ರೀತಿಯ ಎಲ್ಲ ಗುಣಗಳನ್ನು ತಿಳಿದುಕೊಳ್ಳಬೇಕು. ಏಕೆಂದರೆ, ಪ್ರಧಾನನಾದ ಆ ಬ್ರಹ್ಮನು ಎಲ್ಲ ಪ್ರಕರಣಗಳಲ್ಲೂ ಒಬ್ಬನೇ ಆಗಿರುತ್ತಾನೆ.

**॥ ಪ್ರಿಯಶಿರಸ್ತ್ವಾದ್ಯಪ್ರಾಪ್ತಿರುಪಚಯಾಪಚಯೌ ಹಿ ಭೇದೇ ॥** ತೈತ್ತಿರೀಯದಲ್ಲಿ ಹೇಳಿರುವ 'ತಸ್ಯ ಪ್ರಿಯಮೇವ ಶಿರಃ' ಇತ್ಯಾದಿಗುಣಗಳಿಗೆ ಅಪ್ರಾಪ್ತಿಃ= ಪ್ರಕರಣಾಂತರಗಳಲ್ಲಿ ಆನಂದಾದಿ ಗುಣಗಳಂತೆ ಪ್ರಾಪ್ತಿ ಇಲ್ಲ. ಏಕೆಂದರೆ, ಪ್ರಿಯ, ಮೋದ, ಪ್ರಮೋದ, ಆನಂದ ಈ ಗುಣಗಳಲ್ಲಿ ಒಂದರಿಂದ ಮತ್ತೊಂದಕ್ಕೆ ಹಾಗೂ ಒಬ್ಬ ವ್ಯಕ್ತಿಯಿಂದ ಮತ್ತೊಬ್ಬ ವ್ಯಕ್ತಿಯಲ್ಲಿ ಉಪಚಯ–ಅಪಚಯಗಳಿವೆ (ಹೆಚ್ಚು–ಕಡಿಮೆ ಎಂಬ ವ್ಯತ್ಯಾಸವಿದೆ) ವ್ಯಕ್ತಿಭೇದವಿದ್ದಾಗ ಮಾತ್ರ ಏಕಕಾಲದಲ್ಲಿ ಈ ಉಪಚಯಾಪಚಯಗಳನ್ನು ಹೇಳಬಹುದು. ಬ್ರಹ್ಮನಾದರೋ ಏಕಮೇವಾದ್ವಿತೀಯ. ಆದ್ದರಿಂದ ಅವುಗಳು ಕೋಶಧರ್ಮಗಳೇ ಹೊರತು ಬ್ರಹ್ಮಧರ್ಮಗಳಲ್ಲ. ಅವುಗಳ ಅನುಸಂಧಾನ ಪ್ರಕರಣಾಂತರಗಳಲ್ಲಿ ಇಲ್ಲ. ಈ ನ್ಯಾಯವನ್ನು ಉಪಾಸನಾರ್ಥವಾಗಿ ಹೇಳಿರುವ ಸಂಯದ್ವಾಮತ್ವ, ಸತ್ಯಕಾಮತ್ವಾದಿಧರ್ಮಗಳಿಗೂ ಅನ್ವಯಿಸಬೇಕು. ಅವುಗಳಿಂದ ಉಪಾಸ್ಯನಾದ ಬ್ರಹ್ಮನು ಒಬ್ಬನೇ ಆದರೂ ಉಪಾಸನಾ ಭಿನ್ನವಾದುದು. ಒಬ್ಬ ರಾಜನನ್ನು ಛತ್ರ ಮತ್ತು ಚಾಮರಗಳಿಂದ ಇಕ್ಕೆಲಗಳಲ್ಲಿ ಇಬ್ಬರು ಸ್ತ್ರೀಯರು ಸೇವೆ ಮಾಡುತ್ತಿರುವಾಗ ಸೇವ್ಯಮಾನ ರಾಜ ಒಬ್ಬನೇ ಆದರೂ ಸೇವೆ ಭಿನ್ನವಾದುದು. ಅದರಂತೆ ಪ್ರಕೃತದಲ್ಲಿ ಬ್ರಹ್ಮ ಒಬ್ಬನೇ ಆದರೂ ಸತ್ಯಕಾಮತ್ವಾದಿನಾ ಉಪಾಸನೆ

ಭಿನ್ನವಾದ ಕಾರಣ, ಒಂದರ ಉಪಾಸನೆಯಲ್ಲಿ ಮತ್ತೊಂದು ಗುಣದ ಅನುಸಂಧಾನ ಇಲ್ಲ.

**॥ ಇತರೇ ತ್ವರ್ಥಸಾಮಾನ್ಯಾತ್ ॥** ಇತರೇ ತು=ಪ್ರಿಯ ಶಿರಸ್ತ್ವಾದಿಭಿನ್ನವಾದ ಆನಂದಾದಿಗಳು ಬ್ರಹ್ಮಸ್ವರೂಪಭೂತವಾದ ಧರ್ಮಗಳಾದುದರಿಂದ ಅರ್ಥ ಸಾಮಾನ್ಯಾತ್=ಪ್ರತಿಪಾದ್ಯಬ್ರಹ್ಮನು ಏಕನಾದುದರಿಂದ ಅವುಗಳಿಗ ಸರ್ವತ್ರ ಅನುಸಂಧಾನವಿದೆ. ಸತ್ಯಕಾಮತ್ವಾದಿಗಳು ಬ್ರಹ್ಮಸ್ವರೂಪಭೂತವಾದ ಧರ್ಮಗಳಲ್ಲ. ಅವುಗಳನ್ನು ವೇದ ಹೇಳಿರುವ ಕಾರಣದಿಂದ ಬ್ರಹ್ಮನಲ್ಲಿ ಆರೋಪ್ಯ ಉಪಾಸನೆ. ಆದ್ದರಿಂದ ಅವುಗಳಿಗೆ ಸರ್ವತ್ರಾನುಗತಿ ಇಲ್ಲ.

**ವಿಮರ್ಶೆ**—ಹಿಂದೆ ವೇದ್ಯವು ಒಂದಾಗಿರುವಾಗ ವಿದ್ಯೆಯೂ ಒಂದು ಎಂದು ಸಿದ್ಧಾಂತ ಮಾಡಲಾಗಿದೆ. ಉಪಕೋಸಲ ವಿದ್ಯೆ ಮತ್ತು ದಹರವಿದ್ಯೆಗಳಿಂದ ವೇದ್ಯನಾದ ಬ್ರಹ್ಮನು ಒಬ್ಬನೇ ಆಗಿರುವುದರಿಂದ ಎರಡೂ ವಿದ್ಯೆಗಳೂ ಒಂದೇ ಆಗಿವೆ. ಆದ್ದರಿಂದ ಉಪಕೋಸಲ ವಿದ್ಯೆಯಲ್ಲಿ ಹೇಳಿರುವ ಸಂಯದ್ವಾಮತ್ವಗುಣ ಮತ್ತು ದಹರ ವಿದ್ಯೆಯಲ್ಲಿ ಹೇಳಿರುವ ಸತ್ಯಕಾಮತ್ವಾದಿಗುಣಗಳಿಗೆ ಸಾಂಕರ್ಯವೇ ಇದೆ. ಅವುಗಳಲ್ಲಿ ಸಾಂಕರ್ಯವಿರುವಂತೆ ಆನಂದಾದಿಗುಣಗಳಿಗೆ ಶಾಖಾಂತರೋಕ್ತವಾಗಿರುವ ವಿಭುತ್ವಾದಿಗುಣಗಳಿಂದ ಸಾಂಕರ್ಯಾಭಾವ ಪೂರ್ವಪಕ್ಷವು ಯುಕ್ತವಲ್ಲ.

ಆನಂದಾದಿಗಳು ವಾಸ್ತವ ಸತ್ಯಕಾಮತ್ವಾದಿಗಳು ಅವಾಸ್ತವ ಎಂದು ವ್ಯತ್ಯಾಸ ಮಾಡಲು ಕಾರಣವಿಲ್ಲ. ಬ್ರಹ್ಮನು ನಿರ್ಗುಣನಾದರೆ ಎರಡೂ ಗುಣಗಳೂ ಅವಾಸ್ತವ ವಾಗಬೇಕು. ಸಗುಣನಾದರೆ ಎರಡೂ ವಾಸ್ತವವಾಗಬೇಕು.

**ಇಲ್ಲಿಗೆ ಇತರಾಧಿಕರಣವು ಮುಗಿಯಿತು.**

## ೮. ಆಧ್ಯಾನಾಧಿಕರಣಮ್

**ಉಪಸಂಹಾರಾನುಪಸಂಹಾರಪ್ರಮಾಣಮಾಹ-**

**॥ ಓಂ ಆಧ್ಯಾನಾಯ ಪ್ರಯೋಜನಾಭಾವಾತ್ ಓಂ ॥ ೧೫ ॥**

**ಆಧ್ಯಾನಾರ್ಥಂ ಹಿ ಸರ್ವೇ ಗುಣಾ ಉಚ್ಯಂತೇ। ಪ್ರಯೋಜನಾಂತರಾ-ಭಾವಾತ್ ।**

'ಜ್ಞಾನಾರ್ಥಮಥ ಧ್ಯಾನಾರ್ಥಂ ಗುಣಾನಾಂ ಸಮುದೀರಣಾತ್(ಣಾ)।
ಜ್ಞಾತವ್ಯಾಶ್ಚೈವ ಧ್ಯಾತವ್ಯಾ ಗುಣಾಃ ಸರ್ವೇಽಪ್ಯತೋ ಹರೇಃ ॥
ನಾನ್ಯತ್ ಪ್ರಯೋಜನಂ ಜ್ಞಾನಾದ್ ಧ್ಯಾನಾತ್ ಕರ್ಮಕೃತೇರಪಿ ।
ಶ್ರವಣಾಚ್ಚಾಥ ಪಾಠಾದ್ ವಾ ವಿದ್ಯಾಭಿಃ ಕಿಂಚಿದಿಷ್ಯತೇ ॥'

ಇತಿ ಪರಮಸಂಹಿತಾಯಾಮ್ ।

'ಗುಣಾಃ ಸರ್ವೇಽಪಿ ವೇತ್ತವ್ಯಾಃ ಧ್ಯಾತವ್ಯಾಶ್ಚ ನ ಸಂಶಯಃ ।
ನಾನ್ಯತ್ ಪ್ರಯೋಜನಂ ಮುಖ್ಯಂ ಗುಣಾನಾಂ ಕಥನೇ ಭವೇತ್ ॥'

'ಜ್ಞಾನಧ್ಯಾನಸಮಾಯೋಗಾದ್ ಗುಣಾನಾಂ ಸರ್ವಶಃ ಫಲಮ್ ।
ಮುಖ್ಯಂ ಭವೇನ್ನಚಾನ್ಯೇನ ಫಲಂ ಮುಖ್ಯಂ ಕ್ವಚಿದ್ ಭವೇತ್ ॥'

ಇತಿ ಬೃಹತ್ತಂತ್ರೇ ।

ಸರ್ವಗುಣೋಪಸಂಹಾರ ಮತ್ತು ಅನುಪಸಂಹಾರಗಳಿಗೆ ಪ್ರಮಾಣವನ್ನು ಹೇಳುತ್ತಾರೆ—'ಆಧ್ಯಾನಾಯ ಪ್ರಯೋಜನಾಭಾವಾತ್' ಎಂದು. ಸರಿಯಾದ ಧ್ಯಾನಕ್ಕಾಗಿ ವೇದಗಳಲ್ಲಿ ಎಲ್ಲಾ ಗುಣಗಳನ್ನು ಹೇಳಲಾಗಿದೆ. ಅದನ್ನು ಬಿಟ್ಟರೆ ಬೇರೆ ಪ್ರಯೋಜನ ಅದಕ್ಕಿಲ್ಲ. ಪರಮಸಂಹಿತೆಯಲ್ಲಿ ಹೀಗಿದೆ—ಶಾಸ್ತ್ರಗಳಲ್ಲಿ ಬ್ರಹ್ಮನ ಗುಣಗಳನ್ನು ಹೇಳಿರುವುದು ಜ್ಞಾನಕ್ಕಾಗಿ ಮತ್ತು ಧ್ಯಾನಕ್ಕಾಗಿ. ಆದ್ದರಿಂದ ಹರಿಯ ಎಲ್ಲಾ ಗುಣಗಳನ್ನೂ ತಿಳಿಯಬೇಕು, ಧ್ಯಾನಿಸಬೇಕು. ಆದ್ದರಿಂದ ಶಾಸ್ತ್ರಗಳ ಶ್ರವಣ ಮತ್ತು ಪಾಠಗಳಿಂದ ಜ್ಞಾನ, ಧ್ಯಾನ, ಸತ್ಕರ್ಮಾಚರಣೆಗಳನ್ನು ಬಿಟ್ಟರೆ ಬೇರೆ ಯಾವ ಪ್ರಯೋಜನಗಳೂ ಇಲ್ಲ.

ಬೃಹತ್ತಂತ್ರದಲ್ಲೂ ಹೀಗಿದೆ—ಎಲ್ಲಾ ಗುಣಗಳನ್ನು ತಿಳಿದಿರಬೇಕು, ಧ್ಯಾನಿಸಬೇಕು. ಇದರಲ್ಲಿ ಸಂದೇಹವಿಲ್ಲ. ಶಾಸ್ತ್ರಗಳು ಗುಣಗಳನ್ನು ಹೇಳುವುದಕ್ಕೆ ಇದನ್ನು ಬಿಟ್ಟರೆ ಬೇರೆ ಯಾವ ಮುಖ್ಯಪ್ರಯೋಜನವೂ ಇಲ್ಲ. ಜ್ಞಾನ ಮತ್ತು ಧ್ಯಾನಗಳ ಸಮಾಗಮವೇ ಗುಣಕಥನದ ಫಲ. ಹೊರತು, ಜ್ಞಾನವು ಮುಖ್ಯಫಲವಲ್ಲ. ಅನ್ಯೇನ=ಕೇವಲ ಜ್ಞಾನದಿಂದ ಮುಖ್ಯಂ ಫಲಂ=ಮೋಕ್ಷಫಲವು ನ ಕ್ವಚಿದ್ ಭವೇತ್= ಎಂದೂ ಆಗುವುದಿಲ್ಲ. (ಹೀಗೆ ಗುಣಕಥನದ ಅವಾಂತರಫಲ ಶ್ರವಣ, ಪಾಠನ. ಮುಖ್ಯಫಲ ಜ್ಞಾನ. ಜ್ಞಾನದ ಮುಖ್ಯಫಲ ಧ್ಯಾನ.)

**ವಿವರಣೆ**—ಗುಣೋಪಸಂಹಾರವನ್ನು ಮಾಡಬೇಕು ಎಂಬುದನ್ನು ಶ್ರುತ್ಯುಕ್ತ ನ್ಯಾಯದಿಂದ ಇಲ್ಲಿ ಸಮರ್ಥನೆ ಮಾಡಲಾಗಿದೆ. ಸಕಲವಿದ್ಯೆಗಳೂ ಬ್ರಹ್ಮನಾಮಗಳು. ಆದ್ದರಿಂದ ತತ್ತತ್ಪ್ರಕರಣದಲ್ಲಿ ಹೇಳಿರುವ ಬ್ರಹ್ಮವಿದ್ಯೆಗಳೆಲ್ಲ ಹರಿಯ ಗುಣಗಳನ್ನು ಹೇಳುತ್ತವೆ. ಗುಣೋಕ್ತಿಯು ಉಪಾಸನೆಗಾಗಿ. ಸರ್ವಗುಣೋಪಾಸನೆಯ ಅಗತ್ಯವಿಲ್ಲ ವೆನ್ನುವುದಾದಲ್ಲಿ ಗುಣೋಕ್ತಿಯೇ ವ್ಯರ್ಥವಾದೀತು. ಆದ್ದರಿಂದ ಸರ್ವಗುಣೋಪ ಸಂಹಾರಪೂರ್ವಕ ಧ್ಯಾನವು ಶಾಸ್ತ್ರಸಮ್ಮತ. ಒಂದೇ ಕಡೆಯಲ್ಲಿ ಗುಣಗಳೆಲ್ಲವನ್ನೂ ಹೇಳದೆ ಪ್ರಕರಣಭೇದೇನ ಹೇಳಿರುವುದಕ್ಕೆ ಕಾರಣ ವಿಪ್ರಕೀರ್ಣವಾದ ಗುಣಗಳನ್ನು ಉಪಸಂಹಾರ ಮಾಡುವುದರಿಂದ ಮುಕ್ತಿಯಲ್ಲಿ ಆನಂದಾತಿಶಯ ಲಾಭ.

**ಯಾವತ್ ಸೇವಾ ಪರೇ ತತ್ತ್ವೇ ತಾವತ್ ಸುಖವಿಶೇಷತಾ ॥**

ಶಾಸ್ತ್ರಗಳಲ್ಲಿ ಹೆಚ್ಚು ಪರಿಶ್ರಮಪಟ್ಟು ಭಗವಂತನ ಗುಣಗಳನ್ನು ಉಪಸಂಹಾರ ಮಾಡುವುದೇ ಹರಿಸೇವಾ. ಅದಕ್ಕೆ ಮುಕ್ತಿಯಲ್ಲಿ ಸುಖವಿಶೇಷವೇ ಫಲ. ಶಾಸ್ತ್ರಗಳ ಕೇವಲ ಶ್ರವಣ ಮತ್ತು ಮನನಗಳಿಂದ ಜನಲೋಕಾದಿಪ್ರಾಪ್ತಿಯು ಫಲ. ಜ್ಞಾನಪೂರ್ವಕ ಉಪಾಸನೆಯಿಂದ ಮೋಕ್ಷಫಲ.

ಹೀಗೆ ಚತುರ್ಗುಣೋಪಾಸನೆಯಿಂದ ಮೋಕ್ಷವು ಲಭ್ಯವಾದರೂ ಅನಂತಗುಣ ಗಳನ್ನು ವೇದಗಳಲ್ಲಿ ಹೇಳಿರುವುದರಿಂದ ಅವೆಲ್ಲವನ್ನೂ ತಿಳಿದು ಉಪಸಂಹಾರ ಮಾಡಿ ಧ್ಯಾನಿಸಬೇಕು. ಇದರಿಂದ ಮೋಕ್ಷದಲ್ಲಿ ಫಲಾತಿಶಯವಿದೆ. ಇದು ಸರ್ವಗುಣೋಪ ಸಂಹಾರಕ್ಕೆ ಪ್ರಮಾಣ. ಆದರೆ, ಇದು ಅಲ್ಪಬುದ್ಧಿಯವರಿಗೆ ಅಸಾಧ್ಯವಾದುದರಿಂದ ಅವರು ಸರ್ವಗುಣಗಳನ್ನು ಉಪಸಂಹಾರ ಮಾಡಬೇಕಿಲ್ಲ. ಸ್ವಯೋಗ್ಯಗುಣಗಳನ್ನಷ್ಟೇ ಉಪಸಂಹಾರ ಮಾಡಿದರೆ ಸಾಕು.

## ॥ ಓಂ ಆತ್ಮಶಬ್ದಾಚ್ಚ ಓಂ ॥ ೧೬ ॥

**'ಆತ್ಮೇತ್ಯೇವೋಪಾಸೀತ' (ಬೃ.ಉ.6.4.7) ಇತ್ಯನುಪಸಂಹಾರೇ ಪ್ರಮಾಣಮ್ ॥**

'ಆತ್ಮೇತ್ಯೇವೋಪಾಸೀತ' ಈ ಶ್ರುತಿಯು ಸರ್ವಗುಣಾನುಪಸಂಹಾರಕ್ಕೆ ಪ್ರಮಾಣ.

**ವಿವರಣೆ**—ಅತ್ಯಂತಾಧಮಾಧಿಕಾರಿಗಳಿಗೆ ಆತ್ಮತ್ವೋಪಾಸನೆ. ಅಧಿಕಾರಿಗಳ

ಯೋಗ್ಯತಾವಿಶೇಷಾನುಸಾರವಾಗಿ ಇನ್ನೂ ಹೆಚ್ಚುಹೆಚ್ಚು ಗುಣೋಪಾಸನೆ. ಬ್ರಹ್ಮ ದೇವರು ಅತ್ಯಂತಾಧಿಕಗುಣೋಪಾಸಕರು.

ಹಿಂದೆ 'ಆತ್ಮೇತ್ಯೇವ' ಎಂಬಲ್ಲಿರುವ ಏವಕಾರಕ್ಕೆ ಅಯೋಗವ್ಯವಚ್ಛೇದಾರ್ಥವನ್ನು ಮಾಡಿ ಎಲ್ಲರೂ 'ಆತ್ಮಾ' ಎಂದು ಉಪಾಸನೆ ಮಾಡಲೇಬೇಕು ಎಂಬ ಅರ್ಥವನ್ನು ಮಾಡಲಾಗಿದೆ. ಆದರೆ, ಇಲ್ಲಿ ಏವಕಾರಕ್ಕೆ ಅನ್ಯಯೋಗವ್ಯವಚ್ಛೇದವನ್ನು ಇಟ್ಟುಕೊಂಡು ಅಧಮಾಧಿಕಾರಿವಿವಕ್ಷಯಾ 'ಆತ್ಮ' ಎಂದಿಷ್ಟೇ ಉಪಾಸನೆ ಮಾಡಬೇಕು, ಎಂದು ಅಭಿಪ್ರಾಯವನ್ನು ಹೇಳಲಾಗಿದೆ. ಅಧಿಕಾರಿಭೇದೇನ ಎರಡೂ ಅರ್ಥಗಳು ಯುಕ್ತವಾಗಿವೆ. (ಆತ್ಮೇತ್ಯೇವೋಪಾಸೀತ ಇತ್ಯೇತದ್ ವಾಕ್ಯಂ ಚತುರ್ಗುಣೋ ಪಾಸನೇऽಪಿ ಅಶಕ್ತಾನ್ ಅತ್ಯಂತಾವರಾನ್ ಮುಮುಕ್ಷೂನುಪಕ್ರಮ್ಯ ಉತ್ತರೋತ್ತರಾಧಿ ಕಾರಿಣಃ ಬ್ರಹ್ಮಪರ್ಯಂತಾನ್ ಪ್ರತಿ ಸ್ವಸ್ವಯೋಗ್ಯ-ಗುಣೋಪಾಸ್ತಿ-ವಿಧಿ ಪರ್ಯವಸಾಯಕಮ್...ತ.ಪ್ರದೀ.)

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ಆಧ್ಯಾನಾಯ ಪ್ರಯೋಜನಾಭಾವಾತ್ ಓಂ ॥** (ಅತ್ರ ಪ್ರಾಗುಕ್ತೋಪಸಂಹಾರಾನುಪಸಂಹಾರಯೋಃ ಪ್ರಮಾಣಮುಚ್ಯತೇ । ಸಂಜ್ಞಾತ ಇತ್ಯತ್ರ ಪ್ರಕೃತಾ ಸರ್ವಗುಣೋಕ್ತಿರನ್ವೇತಿ । 'ಸಂಜ್ಞಾತಃ' ಇತ್ಯುಕ್ತನ್ಯಾಯೇನ ಸರ್ವವೇದಾದಿಷು ಈಶಸ್ಯ ಸರ್ವಗುಣೋಕ್ತಿಃ, ಆ ಸಮಂತಾತ್ ಸರ್ವಗುಣೋಪಸಂಹಾರಪೂರ್ವಕ ಧ್ಯಾನಾರ್ಥಾ । ಆ=ಸಮ್ಯಕ್ ಅನುರೂಪಫಲಜನಕ-ಧ್ಯಾನಾರ್ಥಾ ಚ, ಇತ್ಯರ್ಥಃ। ಕುತಃ? ಪ್ರಯೋಜನಾಭಾವಾತ್-ಉಕ್ತರೂಪಧ್ಯಾನಾದನ್ಯಪ್ರಯೋಜನಾಭಾವಾ-ದಿತ್ಯರ್ಥಃ। ಸರ್ವವೇದಾದೇಃ ಈಶನಾಮತ್ವೇನ ತದ್ಗುಣಾಭಿಧಾಯಕತ್ವಮೇವ ಉಪಸಂಹಾರೇ ಮಾನಮ್, ಇತ್ಯುಕ್ತಂ ಭವತಿ ।)

'ಸಂಜ್ಞಾತಃ' ಎಂಬ ಸೂತ್ರದಲ್ಲಿ ಹೇಳಿರುವ ನ್ಯಾಯದಿಂದ ಸರ್ವವೇದಗಳೂ ಈಶನಾಮಗಳಾದುದರಿಂದ ವೇದಗಳಲ್ಲಿ ಒಂದೊಂದು ನಾಮಗಳಿಂದಲೂ ಈಶನ ಗುಣಕಥನವು ಆಧ್ಯಾನಾಯ=ಆಸಮಂತಾತ್ ಸರ್ವಗುಣೋಪಸಂಹಾರಪೂರ್ವಕ ಧ್ಯಾನಕ್ಕಾಗಿ. ಆ=ಚೆನ್ನಾಗಿ ಅನುರೂಪವಾದ ಮೋಕ್ಷರೂಪ ಫಲಕ್ಕೆ ಕಾರಣವಾದ ಧ್ಯಾನಕ್ಕಾಗಿ. (ಸರ್ವಗುಣಗಳ ಉಪಾಸನೆ ಮಾಡುವ ಬ್ರಹ್ಮದೇವರಿಗೆ ಸಿಗುವ ಉತ್ಕೃಷ್ಟವಾದ ಮೋಕ್ಷರೂಪಫಲವು ಬೇರಾರಿಗೂ ಸಿಗುವುದಿಲ್ಲ.) ಸರ್ವಗುಣವನ್ನು ಹೇಳಿದ ಮಾತ್ರಕ್ಕೆ ಸರ್ವಗುಣೋಪಸಂಹಾರವು ಹೇಗೆ ಸಿದ್ಧವಾಗುತ್ತದೆ?

ಪ್ರಯೋಜನಾಭಾವಾತ್=ಸರ್ವಗುಣೋಪಸಂಹಾರಪೂರ್ವಕಧ್ಯಾನಕ್ಕಿಂತ ಬೇರೆಯಾದ ಪ್ರಯೋಜನವು ಸರ್ವಗುಣೋಕ್ತಿಗೆ ಇಲ್ಲವಾದುದರಿಂದ. ಇದರಿಂದ ಸಕಲವೇದಗಳೂ ಈಶನ ನಾಮಗಳಾದುದರಿಂದ ವೇದೋಕ್ತವಾದ ಅನಂತನಾಮಗಳಿಂದ ಅನಂತ ಈಶಗುಣಗಳನ್ನು ಹೇಳಿರುವುದೇ ಸರ್ವಗುಣೋಪಸಂಹಾರಕ್ಕೆ ಪ್ರಮಾಣ.

**॥ ಓಂ ಆತ್ಮಶಬ್ದಾಚ್ಚ ಓಂ ॥** (ಆತ್ಮೇತಿ ಭಾವಪ್ರಧಾನಂ ಸಾವಧಾರಣಂ ಚ। ಆತ್ಮತ್ವಮಾತ್ರೋಪಾಸ್ತಿವಿಧಾಯಕಃ ಶಬ್ದಃ=ಆತ್ಮಶಬ್ದಃ। 'ಆತ್ಮೇತ್ಯೇವೋಪಾಸೀತ' ಇತಿ ಶಬ್ದಃ। ತಸ್ಮಾತ್ ಗುಣಾಂತರ–ವ್ಯಾವೃತ್ತಿಪೂರ್ವಕಂ ಆತ್ಮತ್ವೋಪಾಸ್ತಿವಿಧಾಯಕಶಬ್ದಾತ್ ಅನುಪಸಂಹಾರಶ್ಚ ಸಿದ್ಧ್ಯತೀತಿ ಚಾರ್ಥಃ।)

ಸೂತ್ರದಲ್ಲಿ ಆತ್ಮಶಬ್ದಕ್ಕೆ ಆತ್ಮತ್ವ ಎಂದರ್ಥ. ಆತ್ಮತ್ವಗುಣವನ್ನು ಉಪಾಸನೆ ಮಾಡುವಂತೆ ಹೇಳುವ ಶಬ್ದವೇ ಆತ್ಮಶಬ್ದ. ಅರ್ಥಾತ್ ಅಂತಹ ಉಪಾಸನಾ ವಿಧಾಯಕವಾದ 'ಆತ್ಮೇತ್ಯೇವೋಪಾಸೀತ' ಎಂಬ ವಾಕ್ಯ. ಈ ಶ್ರುತಿವಾಕ್ಯದಿಂದಾಗಿ ಅಶಕ್ತರು ಆತ್ಮತ್ವಗುಣವನ್ನಷ್ಟೇ ಉಪಾಸನೆ ಮಾಡಬೇಕೆಂದು ತಿಳಿಯುತ್ತದೆ. ಆ ಶ್ರುತಿಯಲ್ಲಿರುವ ಏವಕಾರದಿಂದ ಇತರ ಗುಣಗಳ ಉಪಾಸನೆಯನ್ನು ನಿಷೇಧ ಮಾಡಲಾಗಿದೆ. ಆದ್ದರಿಂದ ಸರ್ವಗುಣಾನುಪಸಂಹಾರವೂ ಪ್ರಮಾಣಸಿದ್ಧವಾಗಿದೆ.

## ಅದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಆಧ್ಯಾನಾಯ ಪ್ರಯೋಜನಾಭಾವಾತ್ ॥**'ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ' ಎಂಬ ಕಠಶ್ರುತಿಯಲ್ಲಿ ಅರ್ಥವು ಪರ, ಮನಸ್ಸು ಪರ ಎಂದು ಎಲ್ಲದಕ್ಕೂ ಪರತ್ವವನ್ನು ಪ್ರತಿಪಾದಿಸುವ ಅಭಿಪ್ರಾಯವಲ್ಲ. ಅವುಗಳಿಗೆ ಪರತ್ವವನ್ನು ತಿಳಿಯುವುದರಿಂದ ಪ್ರಯೋಜನಾಭಾವಾತ್=ಯಾವ ಲಾಭವೂ ಇಲ್ಲ. ಆದರೆ, ಕೊನೆಯಲ್ಲಿ ಹೇಳಿರುವ 'ಬುದ್ಧೇರಾತ್ಮಾ ಮಹಾನ್ ಪರಃ' ಎಂದು ತಿಳಿಯುವುದರಿಂದ ಮೋಕ್ಷರೂಪವಾದ ಪ್ರಯೋಜನವು ಇದೆ. ಆಧ್ಯಾನಾಯ=ಧ್ಯಾನಪೂರ್ವಕವಾದ ಸರಿಯಾದ ಜ್ಞಾನಕ್ಕಾಗಿ ಪುರುಷನಿಗೆ ಪರತ್ವವನ್ನು ತಿಳಿಸುವಲ್ಲೇ ಇದಕ್ಕೆ ತಾತ್ಪರ್ಯ.

**॥ ಆತ್ಮಶಬ್ದಾಚ್ಚ ॥** ಕಠಶ್ರುತಿಯಲ್ಲಿ ಇಂದ್ರಿಯಾದಿಗಳ ಪ್ರಸ್ತಾವ ಪುರುಷಜ್ಞಾನಕ್ಕಾಗಿಯೇ ಹೊರತು ಇಂದ್ರಿಯಾದಿಜ್ಞಾನಕ್ಕಾಗಿ ಅಲ್ಲ. ಇದಕ್ಕೆ ಇನ್ನೊಂದು ಸಮರ್ಥನೆಯೂ ಇದೆ. ಇದೇ ಪುರುಷನನ್ನು ಮುಂದಿನ ಮಂತ್ರ (3.12)

ಏಷ ಸರ್ವೇಷು ಭೂತೇಷು ಗೂಢೋತ್ಮಾ ನ ಪ್ರಕಾಶತೇ ॥

ಎಂದು ಆತ್ಮಶಬ್ದದಿಂದ ಕರೆದಿದೆ. ಇದರಿಂದ ಉಳಿದ ಇಂದ್ರಿಯಾದಿಗಳು ಅನಾತ್ಮಗಳು ಎಂದು ತಿಳಿಯುತ್ತದೆ. 'ತಮೇವೈಕಂ ಜಾನಥ ಆತ್ಮಾನಂ' ಎಂದಂತೆ ಆತ್ಮಜ್ಞಾನವೇ ಉಪನಿಷತ್ತಿನ ಗುರಿ. ಆದ್ದರಿಂದ ಅನಾತ್ಮಗಳಾದ ಇಂದ್ರಿಯಾದಿಗಳಲ್ಲಿ ಉಪನಿಷತ್ತಿಗೆ ತಾತ್ಪರ್ಯವಿಲ್ಲ.

**ವಿಮರ್ಶೆ**—'ಇಂದ್ರಿಯೇಭ್ಯಃ' ಎಂಬಲ್ಲಿ ಅರ್ಥಾದಿಗಳಿಗೆ ಪರತ್ವವರ್ಣನೆಯು ಅನರ್ಥಕ ಎಂದು ಹೇಳುವುದು ಯುಕ್ತವಲ್ಲ. ಕಾಠಕದಲ್ಲಿ—

ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್ ||(3.9)

ಎಂದು ವಿಷ್ಣುವಿಗೆ 'ಅಧ್ವಪಾರತ್ವ' (ಗಮನದ ಗುರಿ) ಎಂದರೇನು? ಹೇಗೆ? ಎಂಬ ಪ್ರಶ್ನೆಗಳಿಗೆ ಉತ್ತರವಾಗಿ 'ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ' ಎಂದು ಹೇಳಲಾಗಿದೆ. ಇದರಿಂದ ವಿಷ್ಣುವೇ ಪರಮಪ್ರಾಪ್ಯ ಎಂದು ತಿಳಿಯಲು ಸಹಾಯವಾಗುತ್ತದೆ. ಅದು ವ್ಯರ್ಥವಲ್ಲ.

ಅರ್ಥಾದಿಗಳಿಗೆ ಪರತ್ವಜ್ಞಾನವು ದೃಷ್ಟಫಲಕ. ನಿರ್ಗುಣಜ್ಞಾನ ಅದೃಷ್ಟಫಲಕ.

ದಶಮನ್ವಂತರಾಣೀಹ ತಿಷ್ಠಂತೀಂದ್ರಿಯಚಿಂತಕಾಃ |
ಪುರುಷಂ ನಿರ್ಗುಣಂ ಪ್ರಾಪ್ಯ ಕಾಲಸಂಖ್ಯಾ ನ ವಿದ್ಯತೇ ||

ಹೀಗೆ ಫಲಭೇದಪ್ರಯುಕ್ತವಾಗಿ ಅವೆರಡಕ್ಕೆ ವೈಷಮ್ಯವನ್ನು ಹೇಳುವುದು ಯುಕ್ತವಲ್ಲ. ಪುರುಷನಿಗೆ ಪರತ್ವಜ್ಞಾನವು ನಿರ್ಗುಣತ್ವಜ್ಞಾನಕ್ಕೆ ವಿರೋಧಿಯಾದುದರಿಂದ ಅದೂ ಅದೃಷ್ಟಫಲಕವಲ್ಲ.

**ಇಲ್ಲಿಗೆ ಆಧ್ಯಾನಾಧಿಕರಣವು ಮುಗಿಯಿತು.**

## ೯. ಆತ್ಮಗೃಹೀತ್ಯಧಿಕರಣಮ್

### || ಓಂ ಆತ್ಮಗೃಹೀತಿರಿತರವದುತ್ತರಾತ್ ಓಂ || ೧೭ ||

**ನಚ 'ಆನಂದಾದಯಃ ಪ್ರಧಾನಸ್ಯ' (ಬ್ರ.ಸೂ. 3.3.12) ಇತ್ಯುಕ್ತಿವಿರೋಧಃ | ಯತಃ 'ಸತ್ಯಂ ಜ್ಞಾನಮನಂತಂ ಬ್ರಹ್ಮ' (ತೈ.ಉ. 2.1), 'ವಿಜ್ಞಾನಮಾನಂದಂ ಬ್ರಹ್ಮ' (ಬೃ. 5.9.28) ಇತಿವದೇವಾಽತ್ಮಶಬ್ದಗೃಹೀತಿಃ | 'ಅತ್ರ ಹ್ಯೇತೇ ಸರ್ವ ಏಕೀಭವಂತಿ' (ಬೃ.ಉ. 3.4.7) ಇತ್ಯುತ್ತರಾತ್ |**

'ಆನಂದಾನುಭವತ್ವಾಚ್ಚ ನಿರ್ದೋಷತ್ವಾಚ್ಚ ಭಣ್ಯತೇ ।
ನಿತ್ಯತ್ವಾಚ್ಚ ತಥಾಽಽತ್ಮೇತಿ ವೇದವಾದಿಭಿರೀಶ್ವರಃ ॥'
ಇತಿ (ಹಿ) ಬೃಹತ್ತಂತ್ರೇ ।

'ಆನಂದಾದಯಃ ಪ್ರಧಾನಸ್ಯ' ಎಂಬ ಹಿಂದಿನ ಸೂತ್ರದಲ್ಲಿ ಆನಂದಾದಿ ನಾಲ್ಕು ಗುಣಗಳನ್ನು ಉಪಾಸನೆ ಮಾಡಬೇಕು, ಎಂದಿರುವುದು 'ಆತ್ಮೇತ್ಯೇವ ಉಪಾಸೀತ' ಎಂಬ ಶ್ರುತಿಯಲ್ಲಿ ಆತ್ಮತ್ವಮಾತ್ರವೇ ಉಪಾಸ್ಯ, ಎಂದಿರುವ ಶ್ರುತಿಗೆ ವಿರುದ್ಧವಾಗಿದೆ, ಎನ್ನುವುದು ಸರಿಯಲ್ಲ. 'ವಿಜ್ಞಾನಮಾನಂದಂ ಬ್ರಹ್ಮ' ಎಂಬ ಬೃಹದಾರಣ್ಯಕ ಶ್ರುತಿಯಲ್ಲಿ ಹೇಗೆ ಅಷ್ಟೇ ಗುಣಗಳ ಪರಿಗ್ರಹವಲ್ಲವೋ ಅದರಂತೆ, ಇತರ ಗುಣಗಳನ್ನು ಸೇರಿಸಿಕೊಂಡೇ ಶ್ರುತಿಯಲ್ಲಿ ಆತ್ಮಶಬ್ದವನ್ನು ಗ್ರಹಣ ಮಾಡಲಾಗಿದೆ. ಅದು 'ಅತ್ರ ಹ್ಯೇತೇ ಸರ್ವ ಏಕೀಭವಂತಿ' ಎಂಬ 'ಆತ್ಮೇತ್ಯೇವ' ವಚನದ ಉತ್ತರವಾಕ್ಯದಿಂದ ತಿಳಿಯುತ್ತದೆ. ಬೃಹತ್ತಂತ್ರದಲ್ಲಿ ಹೀಗಿದೆ—ಆನಂದವನ್ನು ಅನುಭವಿಸುವುದರಿಂದಲೂ, ನಿರ್ದೋಷ, ನಿತ್ಯನಾದುದರಿಂದಲೂ ವೇದಾದಿಗಳು ಈಶನನ್ನು ಆತ್ಮಾ ಎಂದು ಹೇಳುತ್ತವೆ.

**ವಿವರಣೆ**—'ಸಚ್ಚಿದಾನಂದ ಆತ್ಮಾ' ಈ ನಾಲ್ಕು ಗುಣಗಳು ಎಲ್ಲಾ ಮುಮುಕ್ಷುಗಳಿಂದ ಧ್ಯೇಯವಾಗಿವೆ, ಎಂದು 'ಆನಂದಾದಯಃ ಪ್ರಧಾನಸ್ಯ' ಎಂಬ ಸೂತ್ರದಲ್ಲಿ ಹೇಳಲಾಗಿದೆ. ಆದರೆ, 'ಆತ್ಮೇತ್ಯೇವ ಉಪಾಸೀತ' ಎಂಬ ಶ್ರುತಿಯಲ್ಲಿ ಆತ್ಮತ್ವಮಾತ್ರ ಉಪಾಸ್ಯ ಎಂದಿದೆ. ಅದಕ್ಕೆ ವಿರುದ್ಧವಾಗಿ ಸೂತ್ರ ಹೇಳಿದೆ, ಎಂದು ಪೂರ್ವಪಕ್ಷ. 'ಆತ್ಮೇತ್ಯೇವ' ಎಂಬ ಆತ್ಮಶಬ್ದದಿಂದಲೇ ಆ ಎಲ್ಲಾ ಗುಣಗಳೂ ಗೃಹೀತವಾಗಿವೆಯಾದ ಕಾರಣ ಶ್ರುತಿ ವಿರೋಧವಿಲ್ಲ, ಎಂದು ಸಮಾಧಾನ.

ಬೃಹದಾರಣ್ಯಕದಲ್ಲಿ 'ಪ್ರಾಣನ್ನೇವ ಪ್ರಾಣೋ ನಾಮ ಭವತಿ, ವದನ್ ವಾಕ್, ಪಶ್ಯಂಶ್ಚಕ್ಷುಃ ಶೃಣ್ವನ್ ಶ್ರೋತ್ರಂ, ಮನ್ವಾನೋ ಮನಃ' ಎಂದು ಹೇಳಿ 'ಅತ್ರ ಹ್ಯೇತೇ ಸರ್ವ ಏಕೀಭವಂತಿ' ಎನ್ನಲಾಗಿದೆ. ಪ್ರಕೃಷ್ಟಾನಂದರೂಪತ್ವಾತ್ ಪ್ರಾಣ ಇತ್ಯಭಿಧೀಯತೇ—ಎಂಬಂತೆ ಆನಂದರೂಪನಾದ ಭಗವಂತ ಪ್ರಾಣನೆನಿಸು ತ್ತಾನೆ. ಪ್ರಶಬ್ದದಿಂದ ನಿರ್ದೋಷತ್ವ (ಸತ್‌ಶಬ್ದದ ಅರ್ಥ.), ಚಕ್ಷುಷ್‌ಶಬ್ದದಿಂದ ಜ್ಞಾನ(ಚಿತ್) ಇವೆಲ್ಲವೂ ಆತ್ಮಶಬ್ದದ ಅರ್ಥದಲ್ಲೇ ಸೇರಿವೆ, ಎಂದು 'ಅತ್ರ ಹ್ಯೇತೇ' ಶ್ರುತಿಯ ಅರ್ಥ. ಆದ್ದರಿಂದ 'ಆತ್ಮೇತ್ಯೇವೋಪಾಸೀತ' ಎಂದರೆ ಈ ನಾಲ್ಕು ಗುಣಗಳನ್ನೂ ಧ್ಯಾನಿಸಬೇಕೆಂದೇ ಅರ್ಥ.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಓಂ ಆತ್ಮಗೃಹೀತಿರಿತರವದುತ್ತರಾತ್ ಓಂ ॥** ಅತ್ರ ಪ್ರಾಗುಕ್ತ-ಚತುರ್ಗುಣೋಪಾಸ್ತಿಃ ಸಾಧ್ಯತೇ। ಆತ್ಮೇತಿ ಶಬ್ದಾತ್ ಪರಂ 'ಆನಂದಾದೀನಾಮ್' ಇತಿ ಷಷ್ಠ್ಯಂತತ್ವೇನಾನ್ವೇತಿ। ಆತ್ಮನಾ=ಆತ್ಮಶಬ್ದೇನ ಆನಂದಾದೀನಾಂ ಚತುರ್ಗುಣಾನಾಂ ಗೃಹೀತಿಃ=ಗ್ರಹಣಂ-ಉಕ್ತಿಃ ಅಸ್ತಿ। ಯೇನ ಪ್ರಾಗುಕ್ತದಿಶಾ ಆತ್ಮತ್ವಮೇಕಮೇವ ಉಪಾಸ್ಯಂ ಸ್ಯಾತ್, ಇತ್ಯರ್ಥಃ। ಕಥಮ್ ಏಕೇನ ಅನೇಕಗ್ರಹಣಮ್ ? ಇತರವತ್। 'ಸತ್ಯಂ ಜ್ಞಾನಮ್ ಅನಂತಂ ಬ್ರಹ್ಮ' ಇತ್ಯಾದಿವಾಕ್ಯೇನ ಇವ ಅನೇಕಸತ್ಯತ್ವಾದ್ಯುಕ್ತಿಃ ತಥೇತ್ಯರ್ಥಃ। ಕುತಃ ? ಉತ್ತರಾತ್='ಅತ್ರ ಹ್ಯೇತೇ ಸರ್ವ ಏಕೀಭವಂತಿ' ಇತ್ಯುತ್ತರವಾಕ್ಯಾದಿತ್ಯರ್ಥಃ।

ಈ ಅಧಿಕರಣದಲ್ಲಿ 'ಆನಂದಾದಯಃ' ಇತ್ಯಾದಿಸೂತ್ರೋಕ್ತಚತುರ್ಗುಣೋಪಾಸನೆಯನ್ನು ಸಾಧಿಸಲಾಗಿದೆ. ಆತ್ಮನಾ='ಆತ್ಮೇತ್ಯೇವ' ಎಂಬ ಶ್ರುತಿಯಲ್ಲಿರುವ ಆತ್ಮ ಎಂಬ ಶಬ್ದದಿಂದ ಗೃಹೀತಿಃ=ಆನಂದಾದಿ ನಾಲ್ಕೂ ಗುಣಗಳ ಉಕ್ತಿಯು ಇದೆ. (ಆತ್ಮನಾ ಗೃಹೀತಿಃ=ಆತ್ಮಗೃಹೀತಿಃ) ಹೇಗೆಂದರೆ, ಇತರವತ್='ಸತ್ಯಂ ಜ್ಞಾನಮ್ ಅನಂತಂ ಬ್ರಹ್ಮ' ಎಂಬ ಶ್ರುತಿಯಂತೆ. ಆ ಶ್ರುತಿಯಲ್ಲಿ ಸತ್ಯಶಬ್ದದಿಂದ ಅನೇಕಗುಣಗಳನ್ನು ಹೇಳಲಾಗಿದೆ. ಏಕೆಂದರೆ, ಉತ್ತರಾತ್='ಆತ್ಮೇತ್ಯೇವ ಉಪಾಸೀತ' ಎಂಬ ಬೃಹದಾರಣ್ಯಕಶ್ರುತಿಯ ಮುಂದುವರಿದ ವಾಕ್ಯದಿಂದ. ಆ ವಾಕ್ಯದಲ್ಲಿ 'ಸತ್, ಚಿತ್, ಆನಂದ' ಈ ಮೂರೂ ಗುಣಗಳು ಆತ್ಮಶಬ್ದದ ಅರ್ಥದಲ್ಲಿ ಸೇರಿವೆ, ಎಂದು ಹೇಳಲಾಗಿದೆ. ಆದ್ದರಿಂದ 'ಆತ್ಮೇತ್ಯೇವ ಉಪಾಸೀತ' ಎಂದರೆ ಸದಾದಿ ಚತುರ್ಗುಣಗಳನ್ನೂ ಉಪಾಸನೆ ಮಾಡಬೇಕೆಂದು ಅರ್ಥ.

ಇಲ್ಲಿಗೆ ಆತ್ಮಗೃಹೀತ್ಯಧಿಕರಣವು ಮುಗಿಯಿತು.

## ೧೦. ಅನ್ವಯಾಧಿಕರಣಮ್

**॥ ಓಂ ಅನ್ವಯಾದಿತಿ ಚೇತ್ ಸ್ಯಾದವಧಾರಣಾತ್ ಓಂ ॥ ೧೮ ॥**

**ಸರ್ವಗುಣಾನಾಮನ್ವಯ ಆತ್ಮಶಬ್ದೇ ಭವತಿ। 'ಆಪ್ತವ್ಯಾಪ್ತೇರಾತ್ಮಶಬ್ದಃ ಪರಮಸ್ಯ ಪ್ರಯುಜ್ಯತೇ' ಇತಿ ವಚನಾದಿತಿ ಚೇತ್, ಸತ್ಯಮ್।**

**ಸ್ಯಾಚ್ಚೈವಮ್ । 'ಆತ್ಮೇತ್ಯೇವ' (ಬೃ.ಉ. 3.4.7) ಇತ್ಯವಧಾರಣಾತ್ । ಅನ್ಯಥಾ ಸರ್ವೋಪಸಂಹಾರವಚನವಿರೋಧಾತ್ ॥**

ಎಲ್ಲಾ ಗುಣಗಳ ಸಂಗ್ರಹವು ಆತ್ಮಶಬ್ದದಲ್ಲಿದೆ. 'ಆಪ್ತವ್ಯಾಪ್ತೇಃ' ಎಂಬ ವಚನವು ಸರ್ವಗುಣಗಳೂ ಆತ್ಮಶಬ್ದದಿಂದ ಸಂಗೃಹೀತವಾಗಿವೆ, ಎಂದು ಹೇಳುತ್ತಿದೆಯಾದುದರಿಂದ. ಹೀಗೆ 'ಆತ್ಮೇತ್ಯೇವ ಉಪಾಸೀತ' ಎಂಬ ಶ್ರುತಿಯು ಅನುಪಸಂಹಾರಕ್ಕೆ ಪ್ರಮಾಣ, ಎಂದು ಹಿಂದೆ ಹೇಳಿರುವುದು ಸರಿಯಲ್ಲ. ಹೌದು, ಆತ್ಮಶಬ್ದವು ಸರ್ವಗುಣಾಭಿಧಾಯಕ ಎನ್ನುವ ಅಂಶ ಯುಕ್ತವೆ ಆಗಿದೆ. (ಸ್ಯಾಚ್ಚೈವಮ್) ಏಕೆಂದರೆ ಬ್ರಹ್ಮಾದಿಗಳನ್ನೂ ಕುರಿತು 'ಆತ್ಮೇತ್ಯೇವ' ಎಂದು ಅವಧಾರಣವಿರುವುರಿಂದ. ಆತ್ಮಶಬ್ದವು ಬ್ರಹ್ಮಾದಿಗಳಿಗೂ ಸರ್ವಾರ್ಥಾಭಿಧಾಯಕವಾಗದೆ, ಚತುರ್ಗುಣಮಾತ್ರಾಭಿಧಾಯಕವಾದರೆ 'ಸರ್ವೈರ್ಗುಣೈರುಪಾಸ್ಯೋಽಸೌ ಬ್ರಹ್ಮಣಾ ಪರಮೇಶ್ವರಃ' ಎಂಬ ಸರ್ವೋಪಸಂಹಾರ ವಚನಕ್ಕೆ ವಿರೋಧ ಬರುತ್ತದೆ.

**ವಿವರಣೆ**—ಆತ್ಮಶಬ್ದವು ಪರಮಾತ್ಮನ ಸರ್ವಗುಣಾಭಿಧಾಯಕವಾಗಿದೆ. ಆಪ್ತವ್ಯ–ಆಪ್ತೇಃ=ಪಡೆಯಬೇಕಾದುದೆಲ್ಲವನ್ನೂ ಹೊಂದಿರುವುದರಿಂದ ಪರಮಾತ್ಮನಿಗೆ ಆತ್ಮ ಎಂಬ ಹೆಸರು ಅನ್ವರ್ಥವಾಗಿದೆ. ಅರ್ಥಾತ್ ಉತ್ಕರ್ಷಪ್ರಾಪಕವಾದ ಎಲ್ಲಾ ಧರ್ಮಗಳೂ ದೇವರಲ್ಲಿ ಇವೆ, ಎಂದು ಆ ಶಬ್ದ ಹೇಳುತ್ತದೆ. ಹಿಂದೆ 'ಆತ್ಮೇತ್ಯೇವ ಉಪಾಸೀತ' ಎಂಬ ಶ್ರುತಿಯಲ್ಲಿ ಏವಕಾರವು ಸರ್ವಗುಣೋಪಸಂಹಾರಾಭಾವಕ್ಕೆ ಪ್ರಮಾಣ ಎಂದು ಹೇಳಲಾಗಿದೆ. (ಸೂ.3.3.16) ಅದು ಯುಕ್ತವಲ್ಲ. ಆತ್ಮಶಬ್ದವು ಸರ್ವಗುಣಾಭಿಧಾಯಕವಾದುದರಿಂದ ಸರ್ವೋಪಸಂಹಾರವೇ ಅದರಿಂದ ಸಿದ್ಧವಾಗುತ್ತದೆ, ಅನುಪಸಂಹಾರ ಸಿದ್ಧವಾಗುವುದಿಲ್ಲ, ಎಂದು ಈ ಸೂತ್ರದಲ್ಲಿ ಮಾಡಿರುವ ಆಕ್ಷೇಪಾಂಶ. 'ಸತ್ಯಂ, ಸ್ಯಾಚ್ಚೈವಂ' ಎಂದು ಪೂರ್ವಪಕ್ಷದ ಸರ್ವಗುಣಾಭಿಧಾಯಕತ್ವವನ್ನೂ ಸರ್ವಗುಣೋಪಾಸನೆಯನ್ನೂ ಒಪ್ಪಿ 'ಅನುಪಸಂಹಾರಕ್ಕೆ ಪ್ರಮಾಣವಾಗಲಿಕ್ಕಿಲ್ಲ' ಎಂಬ ಪೂರ್ವಪಕ್ಷಾಂಶವನ್ನು ನಿರಾಕರಿಸಲಾಗಿದೆ. ಅಂದರೆ, 'ಆತ್ಮೇತ್ಯೇವ' ಎಂಬ ಶ್ರುತಿಯು ಸರ್ವಗುಣೋಪಸಂಹಾರಕ್ಕೂ ಅನುಪಸಂಹಾರಕ್ಕೂ ಎರಡಕ್ಕೂ ಪ್ರಮಾಣವಾಗಿದೆ. ಹೇಗೆಂದರೆ, ಅದು ಅಧಿಕಾರಿಭೇದೇನ ಅರ್ಥವಿಶೇಷಗಳನ್ನು ಹೇಳುತ್ತದೆ. ಬ್ರಹ್ಮನಿಗೆ ಸರ್ವಗುಣಗಳನ್ನೂ ದೇವತೆಗಳಿಗೆ ತತ್ತದುಪಾಸನಾಯೋಗ್ಯವಾದ ಗುಣಗಳನ್ನು, ಅಧಮಾಧಿಕಾರಿಗಳಿಗೆ ನಾಲ್ಕೇ ಗುಣಗಳನ್ನು ಹೇಳುತ್ತದೆ. 'ಆತ್ಮೇತ್ಯೇವ ಉಪಾಸೀತ' ಎಂಬ ವಿಧಿಯು ಬ್ರಹ್ಮದೇವರಿಗೂ ಅನ್ವಯಿಸುತ್ತದೆ. ಅದಕ್ಕೆ ಸರ್ವಗುಣಾಭಿಧಾಯಕತ್ವವನ್ನು ಅಂಗೀಕರಿಸದೆ, ಅದು ಕೆಲವೇ ಗುಣಗಳಿಗೆ

ಅಭಿಧಾಯಕ ಎಂದು ಹೇಳಿದರೆ 'ಏವ' ಎಂಬ ಅನ್ಯಯೋಗವ್ಯವಚ್ಛೇದಕಶಬ್ದವು ಅಯುಕ್ತವಾದೀತು. ಆಗ ಬ್ರಹ್ಮದೇವರೂ ಸೀಮಿತಗುಣಗಳನ್ನಷ್ಟೇ ಉಪಾಸನೆ ಮಾಡಬೇಕು, ಎಂದಂತಾಗುತ್ತದೆ. ಅದು ಪ್ರಮಾಣಕ್ಕೆ ವಿರುದ್ಧ. ಆದ್ದರಿಂದ ಆತ್ಮಶಬ್ದವು ಸರ್ವಗುಣಾಭಿಧಾಯಕವೆಂದೂ ಹೇಳಬೇಕು.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಓಂ ಅನ್ವಯಾದಿತಿ ಚೇತ್ ಸ್ಯಾದವಧಾರಣಾತ್ ಓಂ ॥** (ಆತ್ರಾತ್ಮಶಬ್ದಾತ್, ಇತ್ಯುಕ್ತಾನುಪಸಂಹಾರಮಾನತ್ವಮ್ ಆತ್ಮಶಬ್ದಸ್ಯ, ಆಕ್ಷಿಪ್ಯ ಸಮಾಧೀಯತೇ। 'ಆತ್ಮಶಬ್ದೇ' ಇತಿ ಸಪ್ತಮ್ಯಂತತಾನುವರ್ತತೇ। 'ಆಪ್ತವ್ಯಾಪ್ತೇರಾತ್ಮಶಬ್ದಃ ಪರಸ್ಯ' ಇತ್ಯುಕ್ತ್ಯಾ ಆತ್ಮಶಬ್ದೇ ಸರ್ವಗುಣಾನಾಮ್ ಅನ್ವಯಾತ್, ತಸ್ಯ ಸರ್ವಗುಣವಾಚಿತ್ವಾತ್ ಇತಿ ಯಾವತ್, ಅನುಪಸಂಹಾರಮಾನತ್ವಂ ತಸ್ಯ ಅಯುಕ್ತಮಿತಿ ಚೇತ್, ಸ್ಯಾತ್=ಸರ್ವಗುಣವಾಚಿತ್ವಮಾತ್ಮಶಬ್ದಸ್ಯ ಸ್ಯಾತ್=ಅಂಗೀಕ್ರಿಯತೇ ಏವ। ಕುತಃ ? ಅವಧಾರಣಾತ್='ಆತ್ಮೇತ್ಯೇವ' ಇತ್ಯವಧಾರಣಾದಿತ್ಯರ್ಥಃ। ಅಸ್ಯ ವಿಧೇಃ ಬ್ರಹ್ಮಾದಿ ಸರ್ವಾಧಿಕಾರಿಕತ್ವಾತ್ ಆತ್ಮಪದೇನ ಸರ್ವಗುಣಾನುಕ್ತೌ ಅವಧಾರಣೇನ ಅನ್ಯವ್ಯಾವೃತ್ಯುಕ್ತ್ಯಾ 'ಗುಣೈಃ ಸರ್ವೈರುಪಾಸ್ಯೋಽಸೌ ಬ್ರಹ್ಮಣಾ' ಇತ್ಯಾದಿವಿರೋಧಃ ಸ್ಯಾತ್। ಅತಃ ಸರ್ವಗುಣಾನ್ ಬ್ರಹ್ಮಾದೀನ್ ಪ್ರತಿ ಅಭಿಧತ್ತೇ। ಅನ್ಯಾನ್ ಪ್ರತಿ ತು ತತ್ತದ್‌ಯೋಗ್ಯಾನೇವ ಇತಿ ಜ್ಞಾಯತೇ ಏವ, ಇತಿ ಯುಕ್ತಂ ಪ್ರಾಗುಕ್ತಮ್ ಇತಿ ॥)

ಈ ಅಧಿಕರಣದಲ್ಲಿ 'ಆತ್ಮಶಬ್ದವು ಗುಣಾನುಪಸಂಹಾರಕ್ಕೆ ಪ್ರಮಾಣ' ಎಂದು ಹಿಂದೆ ಹೇಳಿರುವುದನ್ನು ಆಕ್ಷೇಪಿಸಿ ಸಮಾಧಾನವನ್ನು ಕೊಡಲಾಗಿದೆ. 'ಆತ್ಮ' ಎಂಬ ಶಬ್ದದಲ್ಲಿ ಅನ್ವಯಾತ್=ಸರ್ವಗುಣಗಳೂ ಸೇರಿರುವುದರಿಂದ ಅರ್ಥಾತ್ ಆತ್ಮಶಬ್ದವು ಸರ್ವಗುಣಾಭಿಧಾಯಕವಾದುದರಿಂದ ಅದು ಅನುಪಸಂಹಾರಕ್ಕೆ ಪ್ರಮಾಣ, ಎಂದು ಹಿಂದೆ ಹೇಳಿರುವುದು (3.3.16) ಸರಿಯಲ್ಲ, ಎಂದು ಆಕ್ಷೇಪ. ಉತ್ತರ–ಸ್ಯಾತ್= ಆತ್ಮಶಬ್ದಕ್ಕೆ ಸರ್ವಗುಣಾಭಿಧಾಯಕತ್ವವನ್ನು ಅಂಗೀಕರಿಸಲಾಗಿದೆ. ಏಕೆಂದರೆ, ಅವಧಾರಣಾತ್='ಆತ್ಮೇತ್ಯೇವ' ಎಂದು ಅವಧಾರಣವಿರುವುದರಿಂದಾಗಿ. 'ಆತ್ಮೇತ್ಯೇವೋಪಾಸೀತ' ಎಂಬ ವಿಧಿಯು ಬ್ರಹ್ಮಾದಿದೇವತೆಗಳಿಗೂ ಅನ್ವಯಿಸುತ್ತದೆ. ಹೀಗಾಗಿ ಆತ್ಮಶಬ್ದವು ಸರ್ವಗುಣಾಭಿಧಾಯಕವಾಗದಿದ್ದರೆ, ನಾಲ್ಕೇ ಗುಣಗಳನ್ನು ಹೇಳಿದರೆ, ಅವಧಾರಣವು (ಏವಶಬ್ದವು) ತಪ್ಪಾದೀತು. ಬ್ರಹ್ಮಾದಿಗಳೂ ನಾಲ್ಕೇ ಗುಣಗಳನ್ನು ಉಪಾಸನೆ ಮಾಡಬೇಕು, ಎಂದಂತಾಗಿ ಬ್ರಹ್ಮದೇವರಿಗೆ

ಸರ್ವಗುಣೋಪಾಸಕತ್ವವನ್ನು ಹೇಳುವ ಪ್ರಮಾಣಕ್ಕೆ ವಿರುದ್ಧವಾದೀತು. ಆದ್ದರಿಂದ ಅದು ಸರ್ವಾಗುಣಾಭಿಧಾಯಕವೂ ಹೌದು. ಆದರೆ, ಎಲ್ಲ ಅಧಿಕಾರಿಗಳಿಗೂ ಅವರವರಿಗೆ ಯೋಗ್ಯವಾದ ಗುಣಗಳು ಅದರಿಂದ ತಿಳಿಯುತ್ತದೆ. ಆದ್ದರಿಂದ ಆ ವಿಧಿಯು ಅನುಪಸಂಹಾರಕ್ಕೂ ಪ್ರಮಾಣವಾಗುತ್ತದೆ.

## ಅದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಆತ್ಮಗೃಹೀತಿರಿತರವದುತ್ತರಾತ್ ॥** ಐತರೇಯೋಪನಿಷತ್ತಿನ ಸೃಷ್ಟಿಪ್ರಕರಣ ಆತ್ಮಪರ ಹೊರತು ಆತ್ಮಾಧಿಷ್ಠಿತ–ಹಿರಣ್ಯಗರ್ಭಪರವಲ್ಲ, ಎಂದು ಈ ಅಧಿಕರಣದಲ್ಲಿ ಹೇಳಲಾಗಿದೆ.

''ಆತ್ಮಾ ವಾ ಇದಮೇಕ ಏವಾಗ್ರ ಆಸೀತ್ ನಾನ್ಯತ್ ಕಿಂಚನಮಿಷತ್ ।
ಸ ಈಕ್ಷತ, ಲೋಕಾನ್ನು ಸೃಜಾ ಇತಿ ।
ಸ ಇಮಾಂಲೋಕಾನ್ ಅಸೃಜತಾಂಭೋ ಮರೀಚಿರ್ಮರಮಾಪಃ ॥ (ಐ.1.1,2)

ಈ ಮಂತ್ರದಲ್ಲಿ ಹೇಳಿರುವ ಆತ್ಮ ಬ್ರಹ್ಮನಲ್ಲ, ಹಿರಣ್ಯಗರ್ಭ. ಬ್ರಹ್ಮ ಸೃಷ್ಟಿಮಾಡಿರುವುದು 'ಆತ್ಮನ ಆಕಾಶಃ ಸಂಭೂತಃ' ಎಂದಿರುವಂತೆ ಆಕಾಶಾದಿಗಳನ್ನು. ಇಲ್ಲಿ ಲೋಕಸೃಷ್ಟಿಯನ್ನು ಹೇಳಲಾಗಿದೆ. ಅದು ಚತುರ್ಮುಖನ ಕೆಲಸ. ಆದ್ದರಿಂದ ಈ ಸೃಷ್ಟಿಪ್ರಕರಣ ಬ್ರಹ್ಮಪರವಲ್ಲ, ಎಂದು ಪೂರ್ವಪಕ್ಷ. ಅದಕ್ಕುತ್ತರ–ಆತ್ಮಗೃಹೀತಿಃ. ಈ ಪ್ರಕರಣದಲ್ಲೂ ಆತ್ಮಶಬ್ದದಿಂದ ಪರನಾದ ನಿರ್ಗುಣಆತ್ಮನದೇ ಗ್ರಹಣ. ಇತರವತ್=ಸೃಷ್ಟಿಯನ್ನು ನಿರೂಪಿಸುವ 'ಆತ್ಮನ ಆಕಾಶಃ ಸಂಭೂತಃ' ಎಂಬ ಇತರ ವಾಕ್ಯದಂತೆ. ಅದು ಪರಾತ್ಮಪರ ಆದಂತೆ ಈ ವಾಕ್ಯವೂ ತತ್ಪರ. ಎಲ್ಲಿ ಸೃಷ್ಟಿ ಮಾಡುವ ಆತ್ಮನಿಗೆ ಪುರಾಷಾಕಾರವನ್ನು ಹೇಳಲಾಗಿದೆಯೋ ಅಲ್ಲಿ ಮಾತ್ರ ಹಿರಣ್ಯಗರ್ಭನು ಆತ್ಮಶಬ್ದವಾಚ್ಯ. ಬೃಹದಾರಣ್ಯಕದಲ್ಲಿ 'ಆತ್ಮೈವೇದಮಗ್ರ ಆಸೀತ್' ಎಂದು ಹೇಳಿ 'ಪುರುಷವಿಧಃ' (1.4.1) ಎನ್ನಲಾಗಿದೆ. ಅಲ್ಲಿ ಆತ್ಮಶಬ್ದಕ್ಕೆ ಹಿರಣ್ಯಗರ್ಭನೆಂದು ಅರ್ಥ. ಪ್ರಕೃತ ಐತರೇಯದಲ್ಲಿ ಅಂತಹಶಬ್ದಗಳಿಲ್ಲ. ಅಷ್ಟೇ ಅಲ್ಲ, ಉತ್ತರಾತ್=ಉತ್ತರ ವಾಕ್ಯಗಳಿಂದ ಪರಬ್ರಹ್ಮಸೂಚಕವಾದ ಗುಣಗಳನ್ನೇ ತಿಳಿಯಬಹುದಾಗಿದೆ—'ಸ ಈಕ್ಷತ, ಲೋಕಾನ್ನು ಸೃಜಾ ಇತಿ' (ಐ.1.1.) 'ಸ ಇಮಾಂಲ್ಲೋಕಾನಸೃಜತ' (ಐ.1.2.). ಆದ್ದರಿಂದ ಐತರೇಯದಲ್ಲಿ ಶ್ರುತನಾದ ಆತ್ಮ ಪರಬ್ರಹ್ಮ.

**॥ ಅನ್ವಯಾದಿತಿ ಚೇತ್ ಸ್ಯಾದವಧಾರಣಾತ್ ॥** ಐತರೇಯದ ಈ ಪ್ರಕರಣದಲ್ಲಿ ಲೋಕಸೃಷ್ಟಿಯನ್ನು ಹೇಳಲಾಗಿದೆ. ಇದನ್ನು ಹೇಳುವ 'ಸ ಇಮಾನ್ ಲೋಕಾನಸೃಜತ'

ಇತ್ಯಾದಿವಾಕ್ಯಗಳ ಅನ್ವಯವು ಹಿರಣ್ಯಗರ್ಭನಿಗೆ ಅನ್ವಯಿಸುವುದರಿಂದ ಅವನೇ ಈ ಪ್ರಕರಣದಿಂದ ಪ್ರತಿಪಾದ್ಯ ಎನ್ನುವುದು ಯುಕ್ತವಲ್ಲ. ಅವಧಾರಣಾತ್=ಈ ಪ್ರಕರಣದಲ್ಲಿ 'ಆತ್ಮಾ ವಾ ಇದಮೇಕ ಏವಾಗ್ರ ಆಸೀತ್' ಎಂದು 'ಏಕ ಏವ' ಎಂದು ಅವಧಾರಣ ಮಾಡಲಾಗಿದೆ. ಹಿರಣ್ಯಗರ್ಭ ಒಬ್ಬನೇ ಅಲ್ಲ. ನಿರ್ಗುಣ ಆತ್ಮ ಒಬ್ಬನೇ ಇದ್ದ. ಆದ್ದರಿಂದ ಅವಧಾರಣವು ನಿರ್ಗುಣಾತ್ಮನಿಗೆ ಹೊಂದುತ್ತದೆ. ಈ ಪ್ರಕರಣದಲ್ಲಿ ಲೋಕಸೃಷ್ಟಿಗೆ ಮೊದಲು ಆಗಿರುವ ಭೂತಸೃಷ್ಟಿಯನ್ನು ಉಪಲಕ್ಷಣಯಾ ಸೇರಿಸಿ ಕೊಳ್ಳಬೇಕು. 'ತತ್ತೇಜೋಽಸೃಜತ' ಎಂಬ ಛಾಂದೋಗ್ಯವಾಕ್ಯದಲ್ಲಿ 'ಆತ್ಮನ ಆಕಾಶಃ ಸಂಭೂತಃ, ಆಕಾಶಾದ್ ವಾಯುಃ' ಎಂಬ ಎರಡು ಭೂತಗಳ ಸೃಷ್ಟಿಯನ್ನು ಉಪಲಕ್ಷಣಯಾ ಸೇರಿಸಿಕೊಳ್ಳುವಂತೆ.

(ಐತರೇಯದಲ್ಲಿ ಮುಂದೆ ಹೇಳಿರುವ 'ತಾಭ್ಯೋಽಶ್ವಮಾನಯತ್' ಇತ್ಯಾದಿ ಕಥೆಗಳು ಅವಿವಕ್ಷಿತ. ಅದರಿಂದ ಯಾವ ಪುರುಷಾರ್ಥವೂ ಇಲ್ಲ, ಎಂದು ಶಾಂಕರಭಾಷ್ಯದಲ್ಲಿದೆ– ನ ಹ್ಯಯಂ ಸಕಲಃ ಕಥಾಪ್ರಬಂಧಃ ವಿವಕ್ಷಿತಃ, ಇತಿ ಶಕ್ಯತೇ ವಕ್ತುಮ್–ತತ್ಪ್ರತಿಪತ್ತೌ ಪುರುಷಾರ್ಥಾಭಾವಾತ್.)

**ವಿಮರ್ಶೆ**—ಈ ವಿಷಯ ಈ ಪಾದದಲ್ಲಿ ಅಪ್ರಸ್ತುತ. ಬೃಹದಾರಣ್ಯಕವಾಕ್ಯದಲ್ಲಿ (ಆತ್ಮೈವೇದಮಗ್ರ ಆಸೀತ್ ಪುರುಷವಿಧಃ') ಹಿರಣ್ಯಗರ್ಭನನ್ನು ಸೃಷ್ಟಿಕರ್ತನನ್ನಾಗಿ ಹೇಳಲಾಗಿದೆ, ಎಂದು ಪೂರ್ವಪಕ್ಷಭಾಷ್ಯದಲ್ಲಿ ಹೇಳಿರುವುದು ಅನುಚಿತ. ಹಾಗೆ ಹೇಳಿದರೆ ಜನ್ಮಾಧಿಕರಣದಲ್ಲಿ ಹೇಳಿರುವ ಬ್ರಹ್ಮಲಕ್ಷಣಕ್ಕೆ ಅತಿವ್ಯಾಪ್ತಿ ಬಂದೀತು. ಚತುರ್ಮುಖನೂ ಈಶಾಧಿಷ್ಠಿತನಾಗಿಯೇ ಸೃಷ್ಟಿ ಮಾಡುತ್ತಾನೆ, ಎಂದು ಹೇಳಿ ಅತಿವ್ಯಾಪ್ತಿಯನ್ನು ಪರಿಹರಿಸುವುದಾದಲ್ಲಿ ಪ್ರಕೃತದಲ್ಲೂ ಹಾಗೆಯೇ ಮಾಡಬಹುದು.

## ವಿಶಿಷ್ಟಾದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**ರಾಮಾನುಜಭಾಷ್ಯ**ದಲ್ಲಿ ಆನಂದಾದಯಃ ಪ್ರಧಾನಸ್ಯ (ಸೂ.11) ಎಂಬ ಸೂತ್ರದಿಂದ 'ಅನ್ವಯಾತ್'(ಸೂ.17) ಎಂಬ ಸೂತ್ರದವರೆಗಿನ ಒಟ್ಟು ಏಳು ಸೂತ್ರಗಳು ಒಂದು ಅಧಿಕರಣ.

**॥ ಆನಂದಾದಯಃ ಪ್ರಧಾನಸ್ಯ ॥** ಪ್ರಧಾನಸ್ಯ=ಗುಣಿಯಾದ ಬ್ರಹ್ಮನು ಎಲ್ಲಾ ಉಪಾಸನಾಪ್ರಕರಣಗಳಲ್ಲೂ ಅಭೇಧಾತ್=ಅಭಿನ್ನನಾದುದರಿಂದ ಅವನ ಜೊತೆಯಲ್ಲೇ ಎಂದಿಗೂ ಇರುವ ಆನಂದಾದಿಗುಣಗಳನ್ನೂ ಉಪಸಂಹಾರ ಮಾಡಬೇಕು.

**॥ಪ್ರಿಯಶಿರಸ್ತ್ವಾದ್ಯಪ್ರಾಪ್ತಿರುಪಚಯಾಪಚಯೌ ಹಿ ಭೇದೇ ॥** ಬ್ರಹ್ಮಾಪೃಥಗ್ ಭೂತವಾದ ಆನಂದಾದಿಗುಣಗಳನ್ನು ಹೇಳುವಾಗ 'ತಸ್ಯ ಪ್ರಿಯಮೇವ ಶಿರಃ' ಇತ್ಯಾದಿಯಾಗಿ ತೈತ್ತಿರೀಯೋಪನಿಷತ್ತಿನಲ್ಲಿ ಹೇಳಿರುವ ಪ್ರಿಯಶಿರಸ್ತ್ವಾದಿಗುಣಗಳಿಗೆ ಪ್ರಾಪ್ತಿ ಇಲ್ಲ. ಅವುಗಳು ಬ್ರಹ್ಮಗುಣಗಳಾದಲ್ಲಿ ಭೇದೇ=ಶಿರಃ, ಪಕ್ಷ, ಪುಚ್ಛಾದಿ ಅವಯವಗಳಲ್ಲಿ ಭೇದವು ಪ್ರಸಕ್ತವಾಗುತ್ತದೆ. ಆಗ ಅವುಗಳ ಉಪಚಯಾಪಚಯಗಳಿಂದ ಬ್ರಹ್ಮನಿಗೂ ಉಪಚಯಾದಿಗಳು ಬಂದೀತು.

**॥ ಇತರೇ ತ್ವರ್ಥಸಾಮಾನ್ಯಾತ್ ॥** ಇತರೇ= ಆನಂದ, ಜ್ಞಾನಾದಿಗಳು ಅರ್ಥಸಾಮಾನ್ಯಾತ್=ಬ್ರಹ್ಮಸ್ವರೂಪನಿರೂಪಣಾವಸರದಲ್ಲೇ ನಿರೂಪಿಸಲ್ಪಟ್ಟಿರುವ ಅರ್ಥಪ್ರತೀತ್ಯನುಬಂಧಿಯಾದ ಗುಣಗಳಾದುದರಿಂದ ಅವುಗಳು ಅರ್ಥಸ್ವರೂಪದಂತೆ (ಬ್ರಹ್ಮನು ಸರ್ವೋಪಾಸನೆಗಳಲ್ಲೂ ಅನುವೃತ್ತನಾಗುವಂತೆ) ಸರ್ವ ಉಪಾಸನೆಗಳಲ್ಲೂ ಅನುವೃತ್ತವಾಗುತ್ತವೆ. ತೈತ್ತಿರೀಯದಲ್ಲಿ 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಎಂದು ಜಗತ್ಕಾರಣತ್ವೇನ ಲಕ್ಷಿತನಾದ ಬ್ರಹ್ಮನನ್ನು 'ಸತ್ಯಂ ಜ್ಞಾನಮನಂತಂ ಬ್ರಹ್ಮ' 'ಆನಂದೋ ಬ್ರಹ್ಮ' ಎಂದು ನಿರೂಪಿಸಲಾಗಿದೆ. ಹೀಗಾಗಿ ಬ್ರಹ್ಮಸ್ವರೂಪ ದೊಂದಿಗೇ ನಿರೂಪಿಸಲಾಗಿರುವ ಆನಂದಾದಿಗುಣಗಳನ್ನು ಬ್ರಹ್ಮೋಪಾಸನೆಯನ್ನು ಹೇಳುವ ಎಲ್ಲಾ ಪ್ರಕರಣಗಳಲ್ಲೂ ಉಪಸಂಹಾರ ಮಾಡಬೇಕು. ಕಾರುಣ್ಯಾದಿ ಗುಣಗಳನ್ನು ಯಾವ ಪ್ರಕರಣದಲ್ಲಿ ಹೇಳಲಾಗಿದೆಯೋ ಅಲ್ಲಿ ಮಾತ್ರ ಉಪಾಸನೆ ಮಾಡಬೇಕು. ಹೀಗೆ ಬ್ರಹ್ಮನ ಅನಂತಗುಣಗಳನ್ನು ಎಲ್ಲಾ ಶಾಖೆಯವರೂ ತಿಳಿದು ಉಪಾಸನೆ ಮಾಡಬೇಕಾಗಿಲ್ಲ.

**॥ ಆಧ್ಯಾನಾಯ ಪ್ರಯೋಜನಾಭಾವಾತ್ ॥** ಪ್ರಿಯಶಿರಸ್ತ್ವಾದಿಗುಣಗಳ ನಿರೂಪಣೆಗೆ ಬೇರಾವ ಪ್ರಯೋಜನವೂ ಇಲ್ಲದಿರುವುದರಿಂದ ಕೇವಲ ಶಿರಃ ಪುಚ್ಛಾದಿ ಅವಯವಯುಕ್ತನಾಗಿ ಪುರುಷವಿಧ ಆನಂದಮಯ ಎಂದು ಧ್ಯಾನ ಮಾಡುವುದ ಕ್ಕಾಗಿಯೇ ಆ ಗುಣಗಳ ನಿರೂಪಣೆ. ಹೇಗೆ ಅನ್ನಮಯಪುರುಷನನ್ನು ಈ ದೇಹದ ಶಿರಃಪಾಣ್ಯಾದಿ ಅಂಗಯುಕ್ತನನ್ನಾಗಿ ತಿಳಿಯಬೇಕೋ ಹಾಗೆ ಆನಂದಮಯನಾದ ಬ್ರಹ್ಮನನ್ನೂ ಪ್ರಿಯ–ಮೋದ–ಮೊದಲಾದ ಆನಂದ ಪ್ರಭೇದಗಳನ್ನು ಅವನ ತಲೆ ಮೊದಲಾದ ಅವಯಗಳೆಂದು ತಿಳಿಯಬೇಕು. ಆನಂದಗುಣೋಪಾಸನೆ ಮಾಡುವಲ್ಲೆಲ್ಲ ಅವುಗಳನ್ನೂ ಅನುಸಂಧಾನ ಮಾಡಬೇಕಾಗಿಲ್ಲ.

**॥ ಆತ್ಮಶಬ್ದಾಚ್ಚ ॥** 'ಅನ್ಯೋಽಂತರ ಆತ್ಮಾನಂದಮಯಃ' ಎಂದು ಆನಂದ

ಮಯನು ಆತ್ಮನೆಂದು ಹೇಳಿರುವುದರಿಂದ, ಆತ್ಮನಿಗೆ ತಲೆ ಮೊದಲಾದ ಅವಯವಗಳು ಇಲ್ಲದಿರುವುದರಿಂದ, ಆನಂದಮಯನ ಸುಲಭ ಪ್ರತೀತಿಗಾಗಿ ಮಾತ್ರ ಪ್ರಿಯಶಿರಸ್ತ್ವಾದಿ ನಿರೂಪಣೆ.

**॥ ಆತ್ಮಗೃಹೀತಿರಿತರವದುತ್ತರಾತ್ ॥** 'ಅನ್ಯೋಽಂತರ ಆತ್ಮಾನಂದಮಯಃ' ಎಂದು ತೈತ್ತಿರೀಯದಲ್ಲಿ ಆತ್ಮಶಬ್ದದಿಂದ ಪರಮಾತ್ಮನನ್ನೇ ಅರ್ಥವನ್ನಾಗಿ ತಿಳಿಯಬೇಕು. ಏಕೆಂದರೆ, ಉತ್ತರಾತ್=ಆನಂದಮಯನಿರೂಪಣೆಯ ಅನಂತರ ಬರುವ 'ಸೋಽಕಾಮಯತ' ಇತ್ಯಾದಿ ಜಗತ್‌ಸೃಷ್ಟ್ಯಾದಿಗಳನ್ನು ಹೇಳುವ ಉತ್ತರವಾಕ್ಯವಿರುವುದರಿಂದ. ಇತರವತ್='ಆತ್ಮಾ ವಾ ಇದಮೇಕ ಏವಾಗ್ರೇ' ಎಂಬ ವಾಕ್ಯದ ಆತ್ಮಶಬ್ದಕ್ಕೆ ಪರಮಾತ್ಮ ಅರ್ಥವಾಗಿರುವಂತೆ.

**॥ ಅನ್ವಯಾದಿತಿ ಚೇತ್ ಸ್ಯಾದವಧಾರಣಾತ್ ॥** ಅನ್ನಮಯಾದಿ ಅನಾತ್ಮಗಳಲ್ಲೂ ಆತ್ಮಶಬ್ದವನ್ನು ಪ್ರಯೋಗ ಮಾಡಲಾಗಿದೆ. ಹೀಗೆ ಅನಾತ್ಮರಲ್ಲಿ ಆತ್ಮಶಬ್ದದ ಅನ್ವಯವು ಇರುವುದರಿಂದ ಆನಂದಮಯನೂ ಅನಾತ್ಮ ಎನ್ನುವುದು ಸರಿಯಲ್ಲ. ಅವಧಾರಣಾತ್='ಆತ್ಮನ ಆಕಾಶಃ ಸಂಭೂತಃ' ಎಂಬಲ್ಲಿ ಆತ್ಮನೆಂದರೆ ಪರಮಾತ್ಮ. ಅನಂತರ ಅನ್ನಮಯನ ಒಳಗಿರುವ ಪ್ರಾಣಮಯನಲ್ಲಿ ಆತ್ಮಶಬ್ದದ ಪ್ರಯೋಗವಿದೆ. ಅದೂ ಮುಖ್ಯಾರ್ಥದಲ್ಲೇ. ''ಅಂತಃ ಪ್ರವಿಷ್ಟಃ ಶಾಸ್ತಾ ಜನಾನಾಮ್' ಎಂಬುದು ಆತ್ಮಶಬ್ದಾರ್ಥ. ಪ್ರಾಣಮಯನೂ ಅನ್ನಮಯನ ಅಂತಃಪ್ರವಿಷ್ಟ. ಅದರಿಂದಾಗಿ ಅವನಲ್ಲಿ ಆತ್ಮಬುದ್ಧಿಯು ಪ್ರಸಕ್ತವಾಯಿತು. ಅವನಿಗೂ ಅಂತರನಾಗಿ ಮನೋಮಯನ ನಿರೂಪಣೆಯಾದಾಗ ಪ್ರಾಣಮಯನಲ್ಲಿ ಬಾಧಿತವಾದ ಆತ್ಮಬುದ್ಧಿ ಮನೋಮಯನಲ್ಲಿ ಉಂಟಾಯಿತು. ಕೊನೆಗೆ ಆನಂದಮಯನಲ್ಲಿ ಅದು ಅಬಾಧಿತವಾಗಿ ಪ್ರತಿಷ್ಠಿತವಾಗುತ್ತದೆ. ಏಕೆಂದರೆ, ಅವನ ಅಂತರಪುರುಷನ ನಿರೂಪಣೆ ಇಲ್ಲ. ಮಾತ್ರವಲ್ಲ 'ಸೋಽಕಾಮಯತ' ಎಂದು ಅವನಿಗೆ ಸೃಷ್ಟಿಕರ್ತೃತ್ವವು ಶ್ರುತವಾಗಿದೆ. ಆದ್ದರಿಂದ ಆನಂದಮಯನೇ ಅನುಪಚರಿತಆತ್ಮಶಬ್ದವಾಚ್ಯ.

**ಇಲ್ಲಿಗೆ ಅನ್ವಯಾಧಿಕರಣವು ಮುಗಿಯಿತು.**

## ೧೧. ಕಾರ್ಯಾಖ್ಯಾನಾಧಿಕರಣಮ್

**॥ ಓಂ ಕಾರ್ಯಾಖ್ಯಾನಾದಪೂರ್ವಮ್ ಓಂ ॥ ೧೯ ॥**

**'ಅಲೌಕಿಕಾಸ್ತಸ್ಯ ಗುಣಾ ಹ್ಯುಪಾಸ್ಯಾ ಅಲೌಕಿಕಂ ಮುಕ್ತಿಕಾರ್ಯಂ ಯತೋಽಸ್ಯ' ಇತಿ ಕಾರ್ಯಾಖ್ಯಾನಾದನ್ಯತ್ರಾದೃಷ್ಟಾ ಏವ ಗುಣಾ ಉಪಾಸ್ಯಾಃ ॥**

'ಉಪಾಸನೆಯ ಫಲ ಮುಕ್ತಿ. ಅದು ಅಲೌಕಿಕವಾದುದು. ಅದರಿಂದಾಗಿ ಅಂತಹ ಮುಕ್ತಿಗೆ ಕಾರಣವಾಗಿರುವ ಉಪಾಸನಾಕ್ಕೆ ವಿಷಯವಾದ ಗುಣಗಳೂ ಅಲೌಕಿಕಗಳೇ ಆಗಿವೆ.' ಹೀಗೆ ಅಲೌಕಿಕವಾದ ಮೋಕ್ಷಕಾರ್ಯರೂಪ ಫಲವನ್ನಾಗಿ ಹೇಳಿರುವುದರಿಂದ ಲೋಕದಲ್ಲಿ ಅದೃಷ್ಟವಾದ ಅಲೌಕಿಕಗುಣಗಳೇ ಬ್ರಹ್ಮನಲ್ಲಿ ಉಪಾಸ್ಯವಾಗಿವೆ.

**ವಿವರಣೆ**—ಧ್ಯಾನವು ಜ್ಞಾನಸಾಧ್ಯ. ನಾವು ತಿಳಿಯುವ ಗುಣಗಳು ಪ್ರಾಕೃತಗುಣಗಳು. ಜ್ಞಾನಾನುಸಾರವಾಗಿ ಪ್ರಾಕೃತಗುಣಗಳನ್ನೇ ಧ್ಯಾನಿಸಬಹುದು, ಎಂದು ಈ ಅಧಿಕರಣದ ಪೂರ್ವಪಕ್ಷ. ಅದಕ್ಕೆ ಉತ್ತರ–ಕಾರ್ಯಕ್ಕೆ ಅನುರೂಪವಾದ ಕಾರಣವು ಇರಬೇಕು. ಧ್ಯಾನದ ಕಾರ್ಯ ಮೋಕ್ಷ. ಅದು ಅಲೌಕಿಕವಾದುದು. ಸ್ವರೂಪಭೂತವಾದ, ಅಪ್ರಾಕೃತವಾದ ಆನಂದಾನುಭವವೇ ಮೋಕ್ಷ. ಅದಕ್ಕನುಗುಣ ವಾಗಿ ನಾವು ಧ್ಯಾನಿಸಬೇಕಾಗಿರುವ ಗುಣಗಳೂ ಅಲೌಕಿಕಗಳೇ ಆಗಿರಬೇಕು.

ಅಲೌಕಿಕಗುಣಗಳ ಜ್ಞಾನವೇ ಇಲ್ಲದಿರುವುದರಿಂದ ಸಂಸ್ಕಾರವಿಲ್ಲ. ಸಂಸ್ಕಾರವಿಲ್ಲದೆ ಧ್ಯಾನ ಹೇಗೆ ಸಾಧ್ಯ? ಇದಕ್ಕೆ ವಾದಿರಾಜರು ಕೊಟ್ಟ ಉತ್ತರ—ಭಗವಂತನೂ ಆಲೌಕಿಕ. ಆದರೆ, ಶಾಸ್ತ್ರಗಳಿಂದ ಅಥವಾ ಗುರುಗಳ ಉಪದೇಶದಿಂದ ಧ್ಯೇಯಮೂರ್ತಿಯನ್ನು ತಿಳಿದು ಅದರ ಧ್ಯಾನವನ್ನು ಮಾಡುತ್ತೇವೆ. ಇಲ್ಲಿ ಧ್ಯೇಯವಾದುದು ಸಂಸ್ಕಾರಮಯ ವಾದ ವಿಗ್ರಹ. ಅದು ಅಲೌಕಿಕವಲ್ಲ. ಅದರೊಳಗೆ ಉಪಾಸ್ಯಗುಣವಿಶಿಷ್ಟವಾದ ಅಲೌಕಿಕವಾದ ಬಿಂಬಮೂರ್ತಿ ಇದೆ ಎಂಬ ಅನುಸ್ಮರಣೆ (ಚಿಂತನೆಯೇ) ಧ್ಯಾನ. ಅದಕ್ಕಾಗಿ ಅಲೌಕಿಕವಾದ ಗುಣಗಳ ಪರೋಕ್ಷಜ್ಞಾನವಿದ್ದರೂ ಸಾಕು. 'ಇಂದ್ರಾದಾವಿವ' (ಟೀಕಾ) ಇಂದ್ರನನ್ನು ನೋಡಿರುವ ಗುರುಗಳಿಂದ ಇಂದ್ರನನ್ನು ತಿಳಿಯುವಂತೆ ನಾವೂ ಸ್ವರೂಪಗುರುಗಳಿಂದ ಭಗವದ್‌ಗುಣಗಳನ್ನು ತಿಳಿಯಬೇಕು. ಭಗವಂತನ ಸಾಕ್ಷಾತ್ಕಾರ ಬಂದರೂ ಅವನ ಅಪ್ರಾಕೃತವಾದ ಗುಣಗಳು ಪ್ರತ್ಯಕ್ಷವಾಗುವುದಿಲ್ಲ. ಅಂದಮೇಲೆ, ಧ್ಯಾನಕಾಲದಲ್ಲಿ ಅವುಗಳ ಪ್ರತ್ಯಕ್ಷ ಹೇಗೆ ಸಾಧ್ಯ?

'ಇಂದ್ರಾದಾವಿವ ಉಪದೇಶೋಪಪತ್ತೇಃ' ಎಂಬ ಟೀಕಾವಾಕ್ಯಕ್ಕೆ ರಾಯರು ಹೀಗೆ ಅರ್ಥ ಹೇಳಿದ್ದಾರೆ. 'ಸಹಸ್ರಾಕ್ಷಃ ಇಂದ್ರಃ' 'ಪಾಶಹಸ್ತಃ ವರುಣಃ' ಹೀಗೆ ವಾಕ್ಯಾರ್ಥರೂಪದಿಂದ ಇಂದ್ರಶಬ್ದಕ್ಕೆ ಶಕ್ತಿಗ್ರಹವಾಗುವಂತೆ 'ಅನುಕೂಲವೇದನೀಯಃ

ಭಗವದ್ಗುಣಃ ಯಃ ಸಃ ಆನಂದಃ' ಹೀಗೆ ಭಗವದ್ದರ್ಶನವನ್ನು ಪಡೆದ ಮಹಾತ್ಮರ ಉಪದೇಶದಿಂದ ಆನಂದಾದಿಶಬ್ದಗಳಿಗೆ ಅಲೌಕಿಕಾನಂದದಲ್ಲಿ ಶಕ್ತಿಗ್ರಹವಾಗಿ ಅದರ ಶಾಬ್ದಬೋಧವು ಬರುತ್ತದೆ. ಇದನ್ನು ಆಚಾರ್ಯರು 'ಯುಜ್ಯತೇ ಚೋಪದೇಶತಃ' ಎಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಕಾರ್ಯಾಖ್ಯಾನಾದಪೂರ್ವಮ್ ॥** (ಅತ್ರ 'ಪರಮತಃ' ಇತ್ಯುಕ್ತಾಲೌಕಿಕ ಗುಣಾನಾಂ ಧ್ಯೇಯತ್ವಮುಚ್ಯತೇ। ಗುಣಜಾತಮಿತ್ಯನ್ವೇತಿ। ಧ್ಯೇಯಮ್ ಇತಿ ಚ ಪ್ರಸ್ತಾವಾತ್। ಕಾರ್ಯೇಽಪಿ ಅಪೂರ್ವತ್ವಮ್ ಅರ್ಥಾದನ್ವೇತಿ। ಗುಣಜಾತಮ್ ಅಪೂರ್ವಮ್=ಅಲೌಕಿಕಮ್ ಉಪಸಂಹೃತ್ಯ ಧ್ಯೇಯಮ್। ಕುತಃ ? ಕಾರ್ಯಾಖ್ಯಾನಾತ್=ಮೋಕ್ಷಾಖ್ಯಾಪೂರ್ವಕಾರ್ಯಸ್ಯೋಕ್ತೇಃ। 'ಅಲೌಕಿಕಾ...'' ಇತಿ ಶ್ರುತಾವಿತ್ಯರ್ಥಃ। ಫಲಾನುಸಾರಿಧ್ಯಾನಸ್ಯೈವ ಕರ್ತವ್ಯತ್ವಾದಿತಿ ಭಾವಃ।) ಕಾರ್ಯಾಖ್ಯಾನಾತ್= ಮೋಕ್ಷರೂಪವಾದ ಅಲೌಕಿಕ ಕಾರ್ಯವನ್ನು 'ಅಲೌಕಿಕಾಸ್ತಸ್ಯ ಗುಣಾಃ' ಎಂಬ ಶ್ರುತಿಯಲ್ಲಿ ಧ್ಯಾನದ ಫಲವನ್ನಾಗಿ ಹೇಳಿರುವುದರಿಂದ ಅದಕ್ಕೆ ಕಾರಣವಾದ ಉಪಾಸನೆಗೆ ವಿಷಯವಾದ ಗುಣಗಳೂ ಅಪೂರ್ವಂ=ಅಲೌಕಿಕ ವಾದವುಗಳು.

## ಅದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಕಾರ್ಯಾಖ್ಯಾನಾದಪೂರ್ವಮ್ ॥** ಛಾಂದೋಗ್ಯ ಮತ್ತು ಬೃಹದಾರಣ್ಯಕ ದಲ್ಲಿ ಹೀಗೊಂದು ಪ್ರಕರಣವಿದೆ—'ಮೇ ಕಿಮನ್ನಂ ಕಿಂ ವಾಸಃ' ಎಂದು ಪ್ರಾಣನು ವಾಗಾದಿದೇವತೆಗಳಲ್ಲಿ ಕೇಳುತ್ತಾನೆ. ಆಗ ಆ ದೇವತೆಗಳು— ''ಯದಿದಂ ಕಿಂಚ ಆಶ್ವಭ್ಯಃ ಆ ಕೃಮಿಭ್ಯಃ ತತ್ತೇ ಅನ್ನಮ್, ಆಪೋ ವಾಸಃ' ನಾಯಿ–ಕೃಮಿಗಳಿಂದ ಆರಂಭಿಸಿ ಯಾರು ಏನು ಉಣ್ಣುತ್ತಾರೋ ಅವೆಲ್ಲವೂ ನಿನಗೆ ಅನ್ನ, ನೀರೇ ನಿನಗೆ ಬಟ್ಟೆ' ಎಂದು. ಅದರನಂತರ ಛಾಂದೋಗ್ಯದಲ್ಲಿ 'ತಸ್ಮಾದ್ವಾ ಏತದಶಿಷ್ಯಂತಃ ಪುರಸ್ತಾಚ್ಚೋಪರಿಷ್ಟಾಚ್ಚಾದ್‌ಭಿಃ ಪರಿದಧತಿ' (5.2.3) ಎಂದಿದೆ. ಊಟಮಾಡುವ ಮೊದಲು ಮತ್ತು ಆಮೇಲೆ ತೆಗೆದುಕೊಳ್ಳುವ ಆಪೋಶನದ ಮೂಲಕ ಪ್ರಾಣನನ್ನು ಬಟ್ಟೆಯಿಂದ ಮುಚ್ಚಬೇಕು, ಎಂದು ಅದರ ಅರ್ಥ. ಬೃಹದಾರಣ್ಯಕದಲ್ಲಿ— ತದ್ವಿದ್ವಾಂಸಃ ಶ್ರೋತ್ರಿಯಾಃ ಅಶಿಷ್ಯಂತಃ ಆಚಾಮಂತಿ, ಅಶಿತ್ವಾ ಆಚಾಮಂತಿ, ಏತಮೇವ

ತದನ್ನಮ್ ಅನಗ್ನಂ ಕುರ್ವಂತೋ ಮನ್ಯಂತೇ'–ಶ್ರೋತ್ರಿಯರು ಊಟದ ಪೂರ್ವೋತ್ತರಗಳಲ್ಲಿ ಆಪೋಶನ ತೆಗೆದುಕೊಳ್ಳುವಾಗ ಪ್ರಾಣನ ನಗ್ನತೆಯನ್ನು ಮುಚ್ಚುವ ಅನುಸಂಧಾನ ಮಾಡಬೇಕು, ಎಂದು ಅರ್ಥ. ಇಲ್ಲಿ ಛಾಂದೋಗ್ಯದಲ್ಲಿ ಹೇಳಿರುವಂತೆ ಆಪೋಶನ ವಿಧಾನವೋ ಅಥವಾ ಬೃಹದಾರಣ್ಯಕದಲ್ಲಿ ಹೇಳಿರುವಂತೆ ಆಚಮನವನ್ನು ಅನುವಾದ ಮಾಡಿ ಅದು ಪ್ರಾಣನಿಗೆ ಮಾನಮುಚ್ಚುವ ವಸ್ತ್ರ ಎಂದು ಅನುಸಂಧಾನದ ವಿಧಾನವೋ? ಎಂದು ಸಂದೇಹ ಬಂದಾಗ ಈ ಸೂತ್ರ ನಿರ್ಣಯ ಮಾಡುತ್ತದೆ. 'ದ್ವಿಜೋ ನಿತ್ಯಮ್ ಉಪಸ್ಪೃಶೇತ್' ಎಂದು ಸ್ಮೃತಿಪ್ರಾಪ್ತವಾದ ಆಚಮನವನ್ನೇ ಅನುವಾದ ಮಾಡಿ ಅದರಲ್ಲಿ ಅಪ್ರಾಪ್ತವಾದ ಪ್ರಾಣವಸ್ತ್ರತ್ವ ವಿಧಾನ. ಕಾರ್ಯಾಖ್ಯಾನಾತ್, ಕಾರ್ಯವಾದ ಆಚಮನದ ಆಖ್ಯಾನಾತ್=ಅನುವಾದದಿಂದ ಅಪೂರ್ವಂ=ಅಪೂರ್ವವಾದ ಅರ್ಥಾತ್ ಅಪ್ರಾಪ್ತವಾದ ಅನುಸಂಧಾನವನ್ನು ಇಲ್ಲಿ ವಿಧಿಸಲಾಗಿದೆ.

**ವಿಮರ್ಶೆ**—'ದ್ವಿಜೋ ನಿತ್ಯಮ್ ಉಪಸ್ಪೃಶೇತ್' ಎಂಬ ಸ್ಮಾರ್ತಾಚಮನೆಯು ಪ್ರತ್ಯವಾಯಪರಿಹಾರಕ್ಕಾಗಿ ವಿಹಿತವಾಗಿದೆ. ಪ್ರಕೃತ ಭೋಜನಾಂಗಾಚಮನೆಯು 'ಆಚಾಮೇತ್' ಎಂದು ವಿಧಿವಿಹಿತವಾದುದರಿಂದ ಪುರುಷಾರ್ಥಸಾಧನ. ಸಾರ್ವತ್ರಿಕವಾದ ಅನೃತವಚನಾಭಾವವನ್ನು ಜ್ಯೋತಿಷ್ಟೋಮಾಂಗವಾಗಿ 'ನಾನೃತಂ ವದೇತ್' ಎಂದು ವಿಧಾನಮಾಡಿದಂತೆ. ಹೀಗೆ ವಿಧಿವಾಕ್ಯಕ್ಕೆ ಸಾರ್ಥಕ್ಯವನ್ನು ಹೇಳಲು ಬರುವಾಗ ಅದಕ್ಕೆ ಅನುವಾದಾರ್ಥವನ್ನು ಹೇಳಿ ಆಪೋಶನದಲ್ಲಿ ಇಲ್ಲದಿರುವ ಪ್ರಾಣವಸ್ತ್ರತ್ವದ ಅಸದುಪಾಸನೆಯ ವಿಧಾನವು ಯುಕ್ತವಲ್ಲ.

**ರಾಮಾನುಜಭಾಷ್ಯದಲ್ಲೂ** ಈ ಸೂತ್ರಕ್ಕೆ ಇದೇ ರೀತಿಯ ಅರ್ಥವನ್ನು ಹೇಳಲಾಗಿದೆ. ಈ ಅರ್ಥ ಪಾದಕ್ಕೆ ಸಂಗತವೂ ಆಗುವುದಿಲ್ಲ.

**ಇಲ್ಲಿಗೆ ಕಾರ್ಯಾಖ್ಯಾನಾಧಿಕರಣವು ಮುಗಿಯಿತು.**

## ೧೨. ಸಮಾನಾಧಿಕರಣಮ್

### ॥ ಓಂ ಸಮಾನ ಏವಂಚಾಭೇದಾತ್ ಓಂ ॥ ೨೦ ॥

**ಅಪೂರ್ವತ್ವೇಽಪಿ ಸಮಾನಾನಾಮೇವೋಪಸಂಹಾರಃ। ನತು ತ್ರಿವಿಕ್ರಮತ್ವಾದೀನಾಂ ಕಾದಾಚಿತ್ಕಾನಾಂ ಪೃಥಕ್ತ್ವೇನ। ನಿತ್ಯವಿಕ್ರಾಂತ್ಯಾದಿಷ್ವಂತರ್ಭಾವಾತ್ ॥**

ಅಲೌಕಿಕವಾದ ಗುಣಗಳನ್ನು ಉಪಾಸನೆ ಮಾಡುವುದು ಉಚಿತವಾದರೂ ಸಮಾನಾನಾಮೇವ=ತಮಗೆ ಯೋಗ್ಯವಾದ ಗುಣಗಳನ್ನೇ ಸರಸ್ವತೀದೇವಿಯು ಉಪಾಸನೆ ಮಾಡಬೇಕು. ಹೊರತು, ಕೆಲವೊಮ್ಮೆ ವ್ಯಕ್ತವಾಗುವ ತ್ರಿವಿಕ್ರಮತ್ವಾದಿ ಕ್ರಿಯಾವಿಶೇಷಗಳನ್ನು ಪೃಥಕ್ಕಾಗಿ ಸರಸ್ವತೀದೇವಿಯು ಉಪಾಸನೆ ಮಾಡುವಂತಿಲ್ಲ. ಅದನ್ನು ಬ್ರಹ್ಮದೇವರೇ ವಿಶಿಷ್ಯ ಉಪಾಸನೆ ಮಾಡಬೇಕು. ಸರಸ್ವತೀದೇವಿ ಉಪಾಸನೆ ಮಾಡುವ ನಿತ್ಯವೂ ಭಗವಂತನ ಅನಂತರೂಪಗಳಲ್ಲಿ ಅನಂತಕ್ರಿಯೆಗಳಲ್ಲಿ ತ್ರಿವಿಕ್ರಮತ್ವಾದಿ ಕ್ರಿಯಾವಿಶೇಷಗಳೂ ಸೇರಿಕೊಳ್ಳುತ್ತವೆ.

**ವಿವರಣೆ**—ಬ್ರಹ್ಮಸರಸ್ವತಿಯರು ಸಮಸ್ಥಾನದಲ್ಲಿರುವುದರಿಂದ ಅವರ ಉಪಾಸನೆಯೂ ಒಂದೇರೀತಿಯಾಗಿರುತ್ತದೆ. ಆದರೆ ಅವರಿಗೆ ಸಿಗುವ ಮೋಕ್ಷಫಲದಲ್ಲಿ ತಾರತಮ್ಯವಿದೆ. ಆದ್ದರಿಂದ ಉಪಾಸನೆಗೆ ಅನುಗುಣವಾಗಿ ಫಲವು ದೊರಕುತ್ತದೆ, ಎನ್ನುವುದು ಸರಿಯಲ್ಲ, ಎಂದು ಆಕ್ಷೇಪ. ಅದಕ್ಕೆ ಸಮಾಧಾನ—ಅವರ ಉಪಾಸನೆಯಲ್ಲೂ ತಾರತಮ್ಯವಿದೆ. ಬ್ರಹ್ಮದೇವ ಭಗವಂತನ ತ್ರಿವಿಕ್ರಮ ಕ್ರಿಯೆಯನ್ನು ವಿಶಿಷ್ಯ ಉಪಾಸನೆ ಮಾಡುತ್ತಾನೆ. ಸರಸ್ವತೀದೇವಿ ಅದನ್ನು ಕ್ರಿಯಾತ್ವೇನ ಉಪಾಸನೆ ಮಾಡುತ್ತಾಳೆ. ಆಚಾರ್ಯರು ಅನುವ್ಯಾಖ್ಯಾನದಲ್ಲಿ ಇದನ್ನು ಸ್ಪಷ್ಟಪಡಿಸಿದ್ದಾರೆ—

ಯಥಾಶಕ್ತಿಸ್ಮೃತಾನ್ ಧಾತ್ರಾ ಗುಣಾನ್ ವಿಷ್ಣೋಃ ಸರಸ್ವತೀ ।
ಸ್ಮರೇತ್, ತ್ರೈವಿಕ್ರಮಾದ್ಯಾಸ್ತು ನಿತ್ಯವಿಕ್ರಾಂತಿಪೂರ್ವಿಕಾಃ ॥
ಕದಾಚಿಲ್ಲೋಪಯೇದ್ದೇವೀ ಸ್ಥಾನೈಕ್ಯಂ, ನ ಗುಣೈಸ್ತತಃ ।
ಸಾಮ್ಯಂ ತಯೋರ್ಯಥಾವಿಷ್ಣೋರ್ಗುಣೋಪಾಸಾಫಲಂ ಭವೇತ್ ॥

## ॥ ಓಂ ಸಂಬಂಧಾದೇವಮನ್ಯತ್ರಾಪಿ ಓಂ ॥ ೨೧ ॥

**ಪರಮಾತ್ಮಸಂಬಂಧಿತ್ವೇನ ನಿತ್ಯತ್ವಾತ್ ತ್ರಿವಿಕ್ರಮತ್ವಾದಿಷ್ವಪ್ಯುಪಸಂಹಾರ್ಯತ್ವಂ ಯುಜ್ಯತೇ ।**

**'ಗುಣಾಸ್ತ್ರೈವಿಕ್ರಮಾದ್ಯಾಶ್ಚ ಸಂಹರ್ತವ್ಯಾ ನ ಸಂಶಯಃ ।**
**ವಿರಿಂಚಸ್ಯೈವ ನಾನ್ಯೇಷಾಂ ಸ ಹಿ ಸರ್ವಗುಣಾಧಿಕಃ ॥'**

**ಇತಿ ಹಿ ಬೃಹತ್ತಂತ್ರೇ ।**

ತ್ರಿವಿಕ್ರಮತ್ವಾದಿಕ್ರಿಯೆಗಳು ಬ್ರಹ್ಮಸ್ವರೂಪಗಳಾದುದರಿಂದ ಬ್ರಹ್ಮನಂತೆ ಅವುಗಳೂ ನಿತ್ಯವಾಗಿವೆ. ಆದ್ದರಿಂದ ಬ್ರಹ್ಮದೇವರು ಅವುಗಳನ್ನು ಧ್ಯಾನಿಸುವುದು ಯುಕ್ತವಾಗಿದೆ.

ಬೃಹತ್ತಂತ್ರದಲ್ಲಿ ಇದು ಇದೆ—ತ್ರಿವಿಕ್ರಮತ್ವಾದಿಗುಣಗಳೂ ಬ್ರಹ್ಮದೇವರಿಂದ ಮಾತ್ರ ಧ್ಯಾನಿಸಲ್ಪಡಬೇಕು. ಅವರು ಎಲ್ಲರಿಗಿಂತಲೂ ಗುಣದಲ್ಲಿ ಶ್ರೇಷ್ಠರು. ಇತರರಿಗೆ ಆ ಕ್ರಿಯೆಗಳು ವಿಶಿಷ್ಟ ಧ್ಯೇಯಗಳಲ್ಲ.

**ವಿವರಣೆ**—ತ್ರಿವಿಕ್ರಮತ್ವವು ಭಗವಂತನ ಅವತಾರವಿಶೇಷದಲ್ಲಿ ನಡೆದ ಕ್ರಿಯೆ. ಅದು ಸಾರ್ವಕಾಲಿಕವಲ್ಲ. ಬ್ರಹ್ಮನು, ಧ್ಯಾನ ಮಾಡುವ ಕಾಲದಲ್ಲಿ ಅದು ಇರುವುದಿಲ್ಲ. ಆದರಿಂದಾಗಿ ಬ್ರಹ್ಮದೇವ ಅವಿದ್ಯಮಾನಗುಣವನ್ನು ಧ್ಯಾನಮಾಡಿದಂತಾಗುತ್ತದೆ, ಎಂದು ಪೂರ್ವಪಕ್ಷ. ಪರಮಾತ್ಮನ ಗುಣಕ್ರಿಯೆಗಳು ಅವನ ಸ್ವರೂಪವೇ ಆಗಿರುವುದರಿಂದ ನಿತ್ಯವಾಗಿವೆ. ಅವುಗಳಲ್ಲಿ ಶಕ್ತಿ–ವ್ಯಕ್ತಿ ಅವಸ್ಥೆಗಳಿರುವುದರಿಂದ ಕದಾಚಿತ್ ಕಾಣುತ್ತವೆ. ಆದ್ದರಿಂದ ನಿತ್ಯವಾದ ಕ್ರಿಯೋಪಾಸನೆಯಿಂದ ಬ್ರಹ್ಮನಿಗೆ ದೋಷವಿಲ್ಲ, ಎಂದು ಸಮಾಧಾನ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**ll ಓಂ ಸಮಾನ ಏವಂ ಚಾಭೇದಾತ್ ಓಂ ll** (ಅತ್ರ ವಾಣ್ಯಾಃ ಸರ್ವಗುಣೋಪ ಸಂಹಾರೇऽಪಿ ಕ್ರಿಯಾಣಾಂ ನ ವಿಶಿಷ್ಯ ಸಃ, ಕಿಂತು ಸಮಾನ್ಯೇನ ಇತ್ಯುಚ್ಯತೇ। ಚೋऽಪ್ಯರ್ಥೇ, ಅವಧಾರಣೇ ಚ। ಏವಂಚ–ಏವಮಪಿ=ಈಶಧರ್ಮಾಣಾ ಮಪೂರ್ವತ್ವೇऽಪಿ, ಸಮಾನೇ ಚ=ಯೋಗ್ಯವಿಷಯೇ ಏವ ಉಪಸಂಹಾರಃ ಕಾರ್ಯಃ। ನತ್ವಯೋಗ್ಯೇ। ವಾಣ್ಯಾಶ್ಚ

'ಯಥಾಶಕ್ತಿ ಸ್ಮೃತಾನ್ ಧಾತ್ರಾ ಗುಣಾನ್ ವಿಷ್ಣೋಃ ಸರಸ್ವತೀ''

ಇತ್ಯಾದಿಸ್ಮೃತ್ಯಾ ಸರ್ವಗುಣೇಷು ಕ್ರಿಯಾಸಾಮಾನ್ಯೇನ ಚ ಯೋಗ್ಯತ್ವಂ, ನತು ವಿರಿಂಚವತ್ ತದ್ವಿಶೇಷೇ ಇತಿ ಭಾವಃ।

ತರ್ಹಿ ತ್ರಿವಿಕ್ರಮತ್ವಾದಿಧ್ಯಾನಂ ನ ಸ್ಯಾತ್ ಇತ್ಯತ ಉಕ್ತಮ್–ಅಭೇದಾತ್। ನಿತ್ಯವಿಕ್ರಾಂತ್ಯಾದಿಸಾಮಾನ್ಯಕ್ರಿಯಾಸು ಅಂತರ್ಭಾವಾತ್, ಇತ್ಯರ್ಥಃ। ಸಮಾನ ಇತ್ಯುಕ್ತಿಃ ಯೋಗ್ಯತಾ–ಫಲಾಭ್ಯಾಂ ಸಾಮಾನ್ಯಮ್ ಉಪಸಂಹಾರಸ್ಯ ದ್ಯೋತಯಿತುಂ।)

ಏವಂಚ–ಏವಮಪಿ=ಭಗವಂತನ ಧರ್ಮಗಳು ಅಪೂರ್ವವಾದರೂ ಸಮಾನೇ ಚ=ಯೋಗ್ಯವಿಷಯದಲ್ಲಿ ಮಾತ್ರ ಯೋಗ್ಯರಾದವರು ಉಪಾಸನೆ ಮಾಡಬೇಕು. ಎಲ್ಲಾ ಅಪೂರ್ವ ಧರ್ಮಗಳನ್ನು ಎಲ್ಲರೂ ಉಪಾಸನೆ ಮಾಡುವಂತಿಲ್ಲ. ಸರಸ್ವತೀದೇವಿಯು ಬ್ರಹ್ಮಪತ್ನಿಯಾದರೂ ಬ್ರಹ್ಮದೇವ ಮಾಡುವ ತ್ರಿವಿಕ್ರಮತ್ವಾದಿ ಅಪೂರ್ವಗುಣಗಳನ್ನು

ವಿಶಿಷ್ಟ ಉಪಾಸನೆ ಮಾಡುವಂತಿಲ್ಲ. ಅಭೇದಾತ್=ಅವಳು ಉಪಾಸನೆ ಮಾಡುವ ಭಗವಂತನ ಕ್ರಿಯಾಸಾಮಾನ್ಯದಲ್ಲೇ ಈ ವಿಶೇಷಕ್ರಿಯೆಯೂ ಸೇರುತ್ತದೆ. ಹೀಗೆ ಯೋಗ್ಯತೆ–ಉಪಾಸನೆ–ಮೋಕ್ಷಫಲ ಇವುಗಳಲ್ಲಿ ಸಮಾನತೆ ಇದೆ, ಎಂದು ತಿಳಿಸಲು ಸೂತ್ರದಲ್ಲಿ 'ಯೋಗ್ಯೇ' ಎಂಬ ಶಬ್ದದ ಬದಲಾಗಿ 'ಸಮಾನೇ' ಎಂಬ ಪದವನ್ನು ಪ್ರಯೋಗಿಸಲಾಗಿದೆ.

**॥ ಓಂ ಸಂಬಂಧಾದೇವಮನ್ಯತ್ರಾಪಿ ಓಂ ॥** (ಸಂಬಂಧಃ ತಾದಾತ್ಮ್ಯಮ್। ಅನ್ಯತ್ರಾಪಿ=ತ್ರಿವಿಕ್ರಮತ್ವಾದಿಕ್ರಿಯಾವಿಷಯೇಽಪಿ ಉಪಸಂಹಾರಃ ಕಾರ್ಯಃ। ಸಂಬಂಧಾತ್=ಈಶತಾದಾತ್ಮ್ಯಾತ್, ತಾಸಾಂ ನಿತ್ಯತ್ವಾದಿತಿ ಭಾವಃ। ನಿತ್ಯತ್ವಾದಿತಿ ವಾಚ್ಯೇ ಏವಮುಕ್ತಿಃ ತತ್ರ ಯುಕ್ತಿಸೂಚನಾಯ।)

ಅನ್ಯತ್ರಾಪಿ=ತ್ರಿವಿಕ್ರಮತ್ವಾದಿವಿಶೇಷಕ್ರಿಯೆಗಳ ವಿಷಯದಲ್ಲೂ ಏವಂ= ಬ್ರಹ್ಮದೇವ ಉಪಾಸನೆ ಮಾಡಬೇಕು. ಏಕೆಂದರೆ, ಆ ಕ್ರಿಯೆಗಳೂ ನಿತ್ಯವಾಗಿವೆ. ಹೇಗೆಂದರೆ, ಸಂಬಂಧಾತ್=ಆ ಕ್ರಿಯೆಗಳಿಗೂ ಬ್ರಹ್ಮನಿಗೂ ತಾದಾತ್ಮ್ಯ (ಅಭೇದ) ಸಂಬಂಧವಿದೆ.

## ಅದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಸಮಾನ ಏವಂ ಚಾಭೇದಾತ್ ॥** ವಾಜಸನೇಯಶಾಖೆಯ ಅಗ್ನಿರಹಸ್ಯದಲ್ಲಿ 'ಸ ಆತ್ಮಾನಮುಪಾಸೀತ, ಮನೋಮಯಂ, ಪ್ರಾಣಶರೀರಂ ಭಾರೂಪಮ್' ಎಂದಿದೆ. ಅದೇ ಶಾಖೆಯ ಬೃಹದಾರಣ್ಯಕದಲ್ಲಿ—ಮನೋಮಯಃ ಪುರುಷೋ ಭಾಃ ಸತ್ಯಃ ತಸ್ಮಿನ್ನಂತರ್ಹೃದಯೇ ಯದಾ ವ್ರೀಹಿರ್ವಾ ಯವೋ ವಾ ಸ ಏಷ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ, ಸರ್ವಮಿದಂ ಪ್ರಶಾಸ್ತಿ ಯದಿದಂ ಕಿಂಚ'' (5.6.1) ಎಂದಿದೆ. ಶಾಂಡಿಲ್ಯನಾಮಾಂಕಿತವಾದ ಇವೆರಡೂ ವಿಭಿನ್ನವಿದ್ಯೆಗಳು ಎಂದು ಪೂರ್ವಪಕ್ಷ. ಪ್ರಾಣಸಂವಾದಾದಿಗಳು ವಿಭಿನ್ನ ಶಾಖೆಯಲ್ಲಿರುವುದರಿಂದ ಅಧ್ಯೇತೃಭೇದಾತ್ ವಿದ್ಯೆ ಒಂದೇ ಎಂದು ಪರಿಗಣಿಸಿ ಅನೇಕ ಶಾಖೆಗಳಲ್ಲಿ ಪುನರುಕ್ತಿಗೆ ಸಮಾಧಾನ ಹೇಳಬಹುದು. ಆದರೆ, ಪ್ರಕೃತ ಒಂದೇ ಶಾಖೆಯಾದುದರಿಂದ ಒಂದೆಡೆ ಹೇಳಿದ್ದನ್ನೇ ಮತ್ತೊಂದೆಡೆ ಹೇಳುವುದು ಪುನರುಕ್ತಿಯಾಗುತ್ತದೆ. ಆದ್ದರಿಂದ ವಿದ್ಯಾಭೇದವಿದೆ. ಇದು ಪೂರ್ವಪಕ್ಷ. ಸಿದ್ಧಾಂತ—ಎರಡೂ ವಿದ್ಯೆಗಳೂ ಅಭಿನ್ನ. ಸಮಾನೇ ಚ=ಸಮಾನೇಽಪಿ= ಎರಡೂ ಶಾಖೆಗಳಲ್ಲಿ ಸಮಾನತೆ ಇದ್ದರೂ, ಅಭೇದಾತ್=ಉಪಾಸ್ಯನಾದ ಮನೋಮಯ ಭಾರೂಪಬ್ರಹ್ಮನು ಒಬ್ಬನೇ ಆಗಿರುವುದರಿಂದ ಬೃಹದಾರಣ್ಯಕದಲ್ಲಿ

ಹೇಳಿದ್ದನ್ನೇ ಅಗ್ನಿರಹಸ್ಯದಲ್ಲೂ ಹೇಳಿದಾಗ ಅದರ ಅನುವಾದ ಇದು ಎಂದು ತಿಳಿಯುತ್ತದೆ. ಹಾಗೆ ಅನುವಾದ ಮಾಡಿ 'ಆಕಾಶಾತ್ಮಾನಂ, ಕಾಮರೂಪಿಣಂ ಸತ್ಯಸಂಕಲ್ಪಂ' ಎಂದು ಮುಂತಾಗಿ ಉಪಾಸನೆಗಾಗಿ ಅಧಿಕಗುಣಗಳನ್ನು ಬೃಹದಾರಣ್ಯಕದಲ್ಲಿ ವಿಧಾನ ಮಾಡಲಾಗಿದೆ.

(ಅದ್ವೈತಭಾಷ್ಯದಲ್ಲಿ ಇದು ಒಂದು ಸೂತ್ರದ ಪ್ರತ್ಯೇಕಾಧಿಕರಣ.)

**ವಿಮರ್ಶೆ**—'ಉಪಸಂಹಾರಃ ಅರ್ಥಾಭೇದಾತ್'(3.3.6) ಎಂಬ ಸೂತ್ರದಲ್ಲಿ ಉಪಾಸ್ಯಾಭೇದವಿದ್ದರೆ ಉಪಾಸನೆಯು ಅಭಿನ್ನ, ಎಂದು ಹೇಳಿರುವುದರಿಂದಲೇ ಪ್ರಕೃತದಲ್ಲೂ ವಿದ್ಯೈಕ್ಯ ಸಿದ್ಧವಾಗುತ್ತದೆ. ಅದಕ್ಕಾಗಿ ಈ ಅಧಿಕರಣದ ಅಗತ್ಯವಿಲ್ಲ. ಆ ಸೂತ್ರದಲ್ಲಿ, ಶಾಖಾಭೇದೇನ ವಿದ್ಯೈಕ್ಯಕ್ಕೆ 'ಅರ್ಥಾಭೇದವು' ಕಾರಣ ಎಂದು ಹೇಳಲಾಗಿದೆ. ಇಲ್ಲಿ ಒಂದೇ ಶಾಖೆಯಲ್ಲಿ ವಿದ್ಯೈಕ್ಯಕ್ಕೂ ಅದೇ ಕಾರಣವೆಂದು ಸೂತ್ರಕಾರರು ಹೇಳಿದ್ದಾರೆ. ವಿಶೇಷಕಾರಣಾಂತರಗಳನ್ನು ಹೇಳಿಲ್ಲ. ಆದ್ದರಿಂದ ಪೂರ್ವಾಧಿಕರಣದಿಂದಲೇ ಈ ಅಧಿಕರಣವು ಗತಾರ್ಥ. ಶಾಖಾಭೇದವಿದ್ದಾಗ ಒಂದೇ ವಿದ್ಯೆಯನ್ನು ಎರಡು ಶಾಖೆಗಳಲ್ಲಿ ಹೇಳುವುದಕ್ಕೆ ಕಾರಣವಿದೆ. ಒಂದು ಶಾಖೆಗೆ ಸೇರಿದವನು ಇನ್ನೊಂದು ಶಾಖೆಯನ್ನು ಅಧ್ಯಯನ ಮಾಡುವುದಿಲ್ಲ. ಎಲ್ಲರೂ ಆ ವಿದ್ಯೋಪಾಸನೆಯನ್ನು ಮಾಡಬೇಕು. ಈ ಕಾರಣಕ್ಕಾಗಿ ಶಾಖಾಭೇದೇನ ಒಂದೇ ವಿದ್ಯೆಯನ್ನು ಎರಡುಶಾಖೆಗಳಲ್ಲಿ ಹೇಳಬೇಕಾಗುತ್ತದೆ. ಪ್ರಕೃತ ಒಂದೇ ಶಾಖೆಯಲ್ಲಿ ಒಂದೇ ವಿದ್ಯೆಯನ್ನು ಹೇಳಿರುವುದು ವ್ಯರ್ಥ, ಎಂಬ ಅಧಿಕಾಶಂಕೆ ಬಂದಾಗ ಅದರ ಪರಿಹಾರಕ್ಕಾಗಿ ಈ ಅಧಿಕರಣದ ಅಗತ್ಯವಿದೆ, ಎನ್ನುವುದೂ ಸರಿಯಲ್ಲ. ಪ್ರಕೃತ ವಿದ್ಯೆಯನ್ನೂ ಒಂದೇಕಡೆ ಹೇಳಲಾಗಿಲ್ಲ. ವಾಜಸನೇಯಶಾಖೆಯ ಅಗ್ನಿರಹಸ್ಯದಲ್ಲಿ ಮತ್ತು ಅದೇ ಶಾಖೆಯ ಬೃಹದಾರಣ್ಯಕದಲ್ಲಿ ಈ ಶಾಂಡಿಲ್ಯನಾಮಾಂಕಿತ ವಿದ್ಯೆಯನ್ನು ಹೇಳಲಾಗಿದೆ. ಅದನ್ನು ಓದದವರಿಗೆ ಅದೇ ವಿದ್ಯೆಯನ್ನು ಬೃಹದಾರಣ್ಯಕದಲ್ಲಿ ಹೇಳಲಾಗಿದೆ, ಎನ್ನುವ ಸಮಾಧಾನ ಇಲ್ಲಿಯೂ ಸಮಾನವಾಗಿದೆ. ಆದ್ದರಿಂದ ಈ ಅಧಿಕರಣದ ಅಗತ್ಯವಿಲ್ಲ.

ರಾಮಾನುಜಭಾಷ್ಯದಲ್ಲೂ ಇದೇ ಅರ್ಥವನ್ನು ಈ ಸೂತ್ರಕ್ಕೆ ಹೇಳಲಾಗಿದೆ.

**ಇಲ್ಲಿಗೆ ಸಮಾನಾಧಿಕರಣವು ಮುಗಿಯಿತು.**

# ೧೩. ನವಾಧಿಕರಣಮ್ (ವಿಶೇಷಾಧಿಕರಣಮ್)

## ॥ ನವಾ ವಿಶೇಷಾತ್ ॥ ೨೨ ॥

**ನವಾऽತ್ಮಶಬ್ದೇನ ಸರ್ವಗುಣಗೃಹೀತಿಃ । ಅಧಿಕಾರಿವಿಶೇಷಾತ್ ॥**

ಆತ್ಮಶಬ್ದದಿಂದ ಸರ್ವಗುಣಗಳ ಗ್ರಹಣವು ಎಲ್ಲರಿಗೂ ಇಲ್ಲ. ಅಧಿಕಾರಿ ವಿಶೇಷರಿಗೆ ಮಾತ್ರ ಅದು ಸರ್ವಗುಣವಾಚಕವಾಗಿರುವುದರಿಂದ.

ವಿವರಣೆ—ಆತ್ಮಶಬ್ದವು ಸರ್ವಗುಣಾಭಿಧಾಯಕ. ಸರ್ವಗುಣಗಳ ಉಪಾಸನೆಗೆ ಬ್ರಹ್ಮದೇವರು ಮಾತ್ರ ಅಧಿಕಾರಿಗಳು. ಇತರರಿಗೆ ಅಧಿಕಾರವಿಲ್ಲ. ಆದ್ದರಿಂದ ಎಲ್ಲರಿಗೂ ಆತ್ಮಶಬ್ದೋಕ್ತಗುಣಗಳ ಉಪಾಸನೆಗೆ ಅಧಿಕಾರವು ಇಲ್ಲದಿರುವುದರಿಂದ ಹಿಂದೆ (ಸೂತ್ರ.16) ಅನುಪಸಂಹಾರಕ್ಕೆ ಆತ್ಮಶಬ್ದವನ್ನು ಪ್ರಮಾಣವನ್ನಾಗಿ ಹೇಳಿರುವುದು ಯುಕ್ತವಲ್ಲ ಎಂದು ಪೂರ್ವಪಕ್ಷ. ಆತ್ಮಶಬ್ದಕ್ಕೆ ಸರ್ವಗುಣಗಳನ್ನು ಹೇಳುವ ಶಕ್ತಿ ಇದ್ದರೂ ಅದು ಎಲ್ಲರಿಗೂ ಸರ್ವಗುಣಗಳನ್ನು ತಿಳಿಸುವುದಿಲ್ಲ. ಯಾರಿಗೆ ಎಷ್ಟು ಗುಣಗಳು ಆತ್ಮಶಬ್ದದಿಂದ ಯುಗಪತ್ ಪ್ರತೀತವಾಗುವುದೋ ಅವರು ಅಷ್ಟೇ ಗುಣಗಳನ್ನು ಉಪಾಸನೆ ಮಾಡಬೇಕು, ಎಂದು ಸಿದ್ಧಾಂತ.

## ॥ ಓಂ ದರ್ಶಯತಿ ಚ ಓಂ ॥ ೨೩ ॥

**'ಸರ್ವಾನ್ ಗುಣಾನಾತ್ಮಶಬ್ದೋ ಬ್ರವೀತಿ ಬ್ರಹ್ಮಾದೀನಾಮಿತರೇಷಾಂ ನ ಚೈವ' ಇತಿಚ ಭಾಲ್ಲವೇಯಶ್ರುತಿಃ ॥**

ಭಾಲ್ಲವೇಯ ಶ್ರುತಿಯು ಹೀಗೆಯೇ ಹೇಳುತ್ತದೆ—ಬ್ರಹ್ಮಾದಿಗಳಿಗೆ ಆತ್ಮಶಬ್ದವು ಪರಮಾತ್ಮನ ಎಲ್ಲಾ ಗುಣಗಳನ್ನೂ (ಯೋಗ್ಯವಾಗಿರುವ) ಹೇಳುತ್ತದೆ, ಇತರರಿಗೆ ಹೇಳುವುದಿಲ್ಲ.

### ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ನ ವಾ ವಿಶೇಷಾತ್ ॥** (ಅತ್ರ 'ಆತ್ಮಶಬ್ದಾಚ್ಚ' ಇತ್ಯುಕ್ತಾನುಪಸಂಹಾರ ಮಾನತ್ವಮ್ ಆತ್ಮಶಬ್ದಸ್ಯ ಸಾಧ್ಯತೇ । ಆತ್ಮಗೃಹೀತಿರಿತ್ಯಸ್ತಿ । ಅನ್ವಯಾದಿತ್ಯತಃ ಸರ್ವಗುಣಾನಾಮಿತಿ ಚ । ವಾಶಬ್ದಃ ವ್ಯವಸ್ಥಿತವಿಕಲ್ಪಾರ್ಥಃ । ನ ವಾ ಸರ್ವಗುಣಾನಾಮ್ ಆತ್ಮಪದೇನ ಗೃಹೀತಿಃ । ಕುತಃ ? ವಿಶೇಷಾತ್=ಯೋಗ್ಯತಾ

ವಿಶೇಷಾತ್, ಇತ್ಯರ್ಥಃ। ಆತ್ಮಪದಸ್ಯ ಸರ್ವಗುಣೋಕ್ತಿಶಕ್ತಾಮಪಿ ಅಧಿಕಾರಿ ವಿಶೇಷಾನುರೋಧೇನ ತತ್ತದ್ಯೋಗ್ಯಬೋಧಕತ್ವಾತ್। ತೇನ, ಯಸ್ಯ ಯಾವಂತೋ ಗುಣಾಃ ಯುಗಪದ್ ಭಾಂತಿ ತೇನ ತಾವಂತೋ ಧ್ಯೇಯಾಃ, ಇತಿ ನಾವ್ಯವಸ್ಥಿತಿರಿತಿ ಭಾವಃ।)

ನವಾ=ಆತ್ಮಪದದಿಂದ ಸರ್ವಗುಣಗಳ ಗ್ರಹಣ ಇಲ್ಲ. ವಿಶೇಷಾತ್=ಯೋಗ್ಯತಾ ವಿಶೇಷಾತ್–ಅಧಿಕಾರಿಗಳ ಯೋಗ್ಯತಾವಿಶೇಷಕ್ಕೆ ಅನುಗುಣವಾಗಿ ಆತ್ಮಶಬ್ದವು ಗುಣಗಳನ್ನು ಹೇಳುತ್ತದೆ, ಎಲ್ಲರಿಗೂ ಎಲ್ಲ ಗುಣಗಳನ್ನೂ ಬೋಧಿಸುವುದಿಲ್ಲ.

**॥ ಓಂ ದರ್ಶಯತಿ ಚ ಓಂ ॥**

(ಸರ್ವಾನ್ ಗುಣಾನಾತ್ಮಶಬ್ದೋ ಬ್ರವೀತಿ
ಬ್ರಹ್ಮಾದೀನಾಂ ಇತರೇಷಾಂ ನ ಚೈವ ॥
ಇತಿ ಶ್ರುತಿಃ ದರ್ಶಯತಿ। ನ ವಾ ಸರ್ವೇಷಾಮ್ ಆತ್ಮಶಬ್ದೇನ ಗೃಹೀತಿರಿತ್ಯರ್ಥಃ। ನ ಕೇವಲಂ 'ವಿಶೇಷಾತ್' ಇತಿ ಯುಕ್ತ್ಯಾ ಏಷೋಽರ್ಥಃ ಸಿದ್ಧ ಇತಿ ಚಾರ್ಥಃ।)

ಬಾಲ್ಲವೇಯ ಶ್ರುತಿಯೂ ಪೂರ್ವಸೂತ್ರದ ಯುಕ್ತಿಯಿಂದ ಸಿದ್ಧವಾದ ಅರ್ಥವನ್ನೇ ಹೇಳುತ್ತದೆ.

## ಅದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

ಅದ್ವೈತ ಭಾಷ್ಯದಲ್ಲಿ ಹಿಂದಿನ ಅಧಿಕರಣದ 'ಸಂಬಂಧಾದೇವಮನ್ಯತ್ರಾಪಿ' ಎಂಬ ಸೂತ್ರವನ್ನು ಸೇರಿಸಿ ಒಟ್ಟು ಮೂರು ಸೂತ್ರಗಳು ಒಂದು ಅಧಿಕರಣ. ಮೊದಲನೆಯ ಸೂತ್ರ ಪೂರ್ವಪಕ್ಷಸೂತ್ರ. ಉಳಿದೆರಡು ಸಿದ್ಧಾಂತಸೂತ್ರಗಳು.

**॥ ಸಂಬಂಧಾದೇವಮನ್ಯತ್ರಾಪಿ ॥** ಬೃಹದಾರಣ್ಯಕದಲ್ಲಿ 'ತದ್ಯತ್ ಸತ್ಯಮ್ ಅಸೌ ಸ ಆದಿತ್ಯಃ। ಸ ಏಷ ಏತಸ್ಮಿನ್ ಮಂಡಲೇ ಪುರುಷೋ ಯಶ್ಚಾಯಂ ದಕ್ಷಿಣೇಽಕ್ಷನ್ ಪುರುಷಃ' (5.5.3) ಎಂದು ಸತ್ಯನಾಮಕಆತ್ಮನಿಗೆ ಅಧಿದೈವದಲ್ಲಿ ಸೂರ್ಯನನ್ನೂ ಅಧ್ಯಾತ್ಮದಲ್ಲಿ ಬಲಗಣ್ಣನ್ನೂ ಸ್ಥಾನವನ್ನಾಗಿ ಕಲ್ಪಿಸಿ ಎರಡು ರಹಸ್ಯನಾಮಗಳನ್ನು ಹೇಳಲಾಗಿದೆ—'ತಸ್ಯೋಽಪನಿಷದಹರಿತ್ಯಧಿದೈವತಮ್। ತಸ್ಯೋಪನಿಷದಹಮಿತ್ಯ ಧ್ಯಾತ್ಮಮ್' ಎಂದು. ಅಧಿದೈವದಲ್ಲಿ ಅವನಿಗೆ ಅಹಃ ಎಂದೂ ಅಧ್ಯಾತ್ಮದಲ್ಲಿ 'ಅಹಂ' ಎಂದೂ ಹೆಸರು. ಈ ಎರಡೂ ನಾಮಗಳನ್ನು ಎರಡೂ ಅಧಿಷ್ಠಾನಗಳಲ್ಲಿ ಉಪಾಸನೆ ಮಾಡಬೇಕು. ಈ ವಿದ್ಯೆಗೆ ಸತ್ಯವಿದ್ಯಾ ಎಂದು ಹೆಸರು. ಏಕವಿದ್ಯಾಸಂಬಂಧವು ಎರಡೂ

ನಾಮಗಳಿಗೆ ಇರುವುದರಿಂದ ಎರಡೂ ಅಧಿಷ್ಠಾನಗಳಲ್ಲಿ ಉಭಯನಾಮಗಳನ್ನೂ ಉಪಾಸನೆ ಮಾಡಬೇಕು. ಸಂಬಂಧಾತ್=ಏಕವಿದ್ಯಾಸಂಬಂಧಾತ್ ಅನ್ಯತ್ರಾಪಿ ಏವಮ್=ಒಂದು ಸ್ಥಾನದಲ್ಲಿ ಹೇಳಿರುವ ನಾಮವನ್ನು ಇನ್ನೊಂದು ಅಧಿಷ್ಠಾನದಲ್ಲೂ ಉಪಾಸನೆ ಮಾಡಬೇಕು, ಇದು ಪೂರ್ವಪಕ್ಷ. ಇದಕ್ಕೆ ಉತ್ತರ—

**॥ ನ ವಾ ವಿಶೇಷಾತ್ ॥** ನವಾ=ಎರಡೂ ನಾಮಗಳಿಗೂ ಎರಡೂ ಸ್ಥಾನಗಳಲ್ಲಿ ಪ್ರಾಪ್ತಿಯು ಇಲ್ಲ. ವಿಶೇಷಾತ್=ಉಪನಿಷತ್ತಿನಲ್ಲಿ 'ಯ ಏಷ ಏತಸ್ಮಿನ್ ಮಂಡಲೇ ಪುರುಷಃ' ಎಂದು ಆಧಿದೈವಿಕ ಪುರುಷನನ್ನು ಏತಚ್ಛಬ್ದದಿಂದ ಪರಾಮರ್ಶ ಮಾಡಿ 'ತಸ್ಯೋಪನಿಷದಹರಿತಿ'ಎಂದು ಅವನಿಗೇ 'ಅಹಃ' ಎಂಬ ನಾಮವನ್ನು ಹೇಳಲಾಗಿದೆ. ಅದರಂತೆ, 'ಯೋಽಯಂ ದಕ್ಷಿಣೇಽಕ್ಷನ್ ಪುರುಷಃ' ಎಂದು ಹೇಳಿ 'ತಸ್ಯೋಪನಿಷದಹಮಿತಿ' ಎಂದು ಹೇಳಲಾಗಿದೆ. ಇದರಿಂದ ಸ್ಥಾನವಿಶೇಷದಲ್ಲೇ ನಾಮವಿಶೇಷಗಳನ್ನು ಉಪಾಸನೆ ಮಾಡಬೇಕೆಂದು ತಿಳಿಯುತ್ತದೆ.

**॥ ದರ್ಶಯತಿ ಚ ॥** ವಿದ್ಯಾಭೇದವಿದ್ದಾಗ ಒಂದೆಡೆ ಹೇಳಿದ ಗುಣಗಳನ್ನು ಇನ್ನೊಂದು ಕಡೆ ಅತಿದೇಶ ಮಾಡಿದ್ದರೆ ಮಾತ್ರ ಉಪಸಂಹಾರ. ಪ್ರಕೃತ ನಾಮಗಳನ್ನು ಪರಸ್ಪರ ಅತಿದೇಶ ಮಾಡಿಲ್ಲವಾದ ಕಾರಣ ಸ್ಥಾನಭೇದೇನ ನಾಮಭೇದ, ಎಂದು ತಿಳಿಯುತ್ತದೆ. ಛಾಂದೋಗ್ಯದಲ್ಲಿ ಆದಿತ್ಯಪುರುಷ ಮತ್ತು ಅಕ್ಷಿಸ್ಥಪುರುಷರಿಗೆ 'ತಸ್ಯೈತಸ್ಯ ತದೇವ ರೂಪಂ ಯದಮುಷ್ಯ' ಎಂದು ರೂಪಗುಣಗಳನ್ನು ಅತಿದೇಶ ಮಾಡುವ ಅಗತ್ಯವಿಲ್ಲ. ವಿದ್ಯೆ ಒಂದೇ ಆದುದರಿಂದ ಅತಿದೇಶ ಸ್ವತಃಸಿದ್ಧ. ಹಾಗಿದ್ದರೂ ಅತಿದೇಶ ಮಾಡಿರುವುದರಿಂದ 'ಸತ್ಯ' ಎಂಬ ನಾಮವು ಮಾತ್ರ ಉಭಯ ಸಮಾನ, 'ಅಹಂ, ಅಹಃ' ಎಂಬ ನಾಮಗಳು ವ್ಯವಸ್ಥಿತ ಎಂದು ತಿಳಿಯುತ್ತದೆ.

**ವಿಮರ್ಶೆ**—ಛಾಂದೋಗ್ಯದ ಅತಿದೇಶವಾಕ್ಯದಲ್ಲಿ 'ಯನ್ನಾಮ ತನ್ನಾಮ' ಎಂದು ಆದಿತ್ಯಗತಪುರುಷನ ನಾಮವನ್ನೂ ಅಕ್ಷಿಸ್ಥಪುರುಷನಿಗೆ ಅತಿದೇಶ ಮಾಡಲಾಗಿದೆ. ಬಾಧಕಾಭಾವಾತ್ 'ಸತ್ಯ' ಎಂಬ ನಾಮದಂತೆ 'ಅಹಃ' ಎಂಬ ನಾಮವೂ ಅಕ್ಷಿಸ್ಥಪುರುಷನಿಗೆ ಅತಿದೇಶದಿಂದ ಸಿದ್ಧವಾಗುವಾಗ ನಾಮಕ್ಕೆ ವ್ಯವಸ್ಥಿತತ್ವವನ್ನು ಹೇಳುವುದು ಉಚಿತವಲ್ಲ.

ರಾಮಾನುಜಭಾಷ್ಯದಲ್ಲಿ ಅಧಿಕರಣವ್ಯವಸ್ಥೆ ಮತ್ತು ಸೂತ್ರಗಳ ಅರ್ಥವು ಇದರಂತೆಯೇ ಇದೆ.

**ಇಲ್ಲಿಗೆ ನವಾಧಿಕರಣ (ವಿಶೇಷಾಧಿಕರಣ)ವು ಮುಗಿಯಿತು.**

# ೧೪. ಸಂಭೃತ್ಯಧಿಕರಣಮ್

## ॥ ಓಂ ಸಂಭೃತಿದ್ಯುವ್ಯಾಪ್ತ್ಯಪಿ ಚಾತಃ ಓಂ ॥ ೨೪ ॥

**ಸಂಭೃತಿದ್ಯುವ್ಯಾಪ್ತೀ ಅಪಿ ದೇವಾದೀನಾಮುಪಸಂಹರ್ತವ್ಯೇ । ನಾನ್ಯೇಷಾಮ್। ಅತ ಏವ ಯೋಗ್ಯತಾವಿಶೇಷಾತ್ ।**

**'ದೇವಾದೀನಾಮುಪಾಸ್ಯಾಸ್ತು ಭೃತಿವ್ಯಾಪ್ತ್ಯಾದಯೋ ಗುಣಾಃ ।**
**ಆನಂದಾದ್ಯಾಸ್ತು ಸರ್ವೇಷಾಮ್ ಅನ್ಯಥಾऽನರ್ಥಕೃದ್ ಭವೇತ್ ॥'**
**ಇತಿ ಚ ಬ್ರಹ್ಮತರ್ಕೇ ।**

ಸ್ವರ್ಗಾದಿಲೋಕಗಳ ಭರಣ ಮತ್ತು ಪ್ರಕಾಶತಃ ವ್ಯಾಪ್ತಿ ಇಂತಹ ಗುಣಗಳೂ ದೇವಾದಿಗಳಿಗೆ ಮಾತ್ರವೇ ಉಪಾಸನಾಯೋಗ್ಯವಾಗಿವೆ, ಇತರರಿಗೆ ಅವುಗಳು ಧ್ಯಾನಾರ್ಹಗಳಲ್ಲ. ಅತಏವ=ಅಂತಹ ಗುಣಗಳ ಉಪಾಸನೆಗೆ ಯೋಗ್ಯತಾವಿಶೇಷವು ಅಪೇಕ್ಷಿತವಾದುದರಿಂದಲೇ (ಈ ನಿಯಮ.) ಬ್ರಹ್ಮತರ್ಕದಲ್ಲಿ ಇದನ್ನು ಹೇಳಿದೆ—

'ಲೋಕಭರಣ, ವ್ಯಾಪ್ತ್ಯಾದಿಗುಣಗಳು ದೇವತೆ ಮೊದಲಾದವರಿಗೆ ಮಾತ್ರವೇ ಉಪಾಸನಾಯೋಗ್ಯವಾಗಿವೆ. ಆನಂದ-ಜ್ಞಾನಾದಿ ಗುಣಗಳು ಎಲ್ಲರಿಗೂ ಉಪಾಸನಾಯೋಗ್ಯವಾಗಿವೆ. ಈ ವ್ಯವಸ್ಥೆಯನ್ನು ಉಲ್ಲಂಘಿಸಿದರೆ ಅನರ್ಥವಿದೆ.

**ವಿವರಣೆ**—'ಉಕ್ಷಾ ಸ ದ್ಯಾವಾಪೃಥಿವೀ ಬಿಭರ್ತಿ' ಎಂದು ಋಕ್ ಸಂಹಿತೆಯಲ್ಲಿ ಪರಮಾತ್ಮನಿಗೆ ದ್ಯುಲೋಕ-ಪೃಥಿವೀಲೋಕಗಳ ಧಾರಕತ್ವವನ್ನು ಹೇಳಲಾಗಿದೆ. 'ಏಷ ಹಿ ಸರ್ವೇಷು ಲೋಕೇಷು ಭಾತಿ' ಎಂದು ಛಾದೋಗ್ಯೋಪನಿಷತ್ತು ಪ್ರಕಾಶತಃ ವ್ಯಾಪ್ತಿಯನ್ನು ತಿಳಿಸುತ್ತದೆ. ಈ ಗುಣಗಳೂ ಸರ್ವೋಪಾಸ್ಯಗಳಾಗಿವೆ. ಮೊದಲನೆಯ ಗುಣದ ಉಪಾಸನೆಯಿಂದಾಗಿ ಮೋಕ್ಷದಲ್ಲಿ ಸ್ವಾವರಭರಣವು ಸಿದ್ಧವಾಗುತ್ತದೆ. ಎರಡನೆಯಗುಣದ ಉಪಾಸನೆಯಿಂದ ಪ್ರಕಾಶವ್ಯಾಪ್ತಿಯು ಸಿದ್ಧವಾಗುತ್ತದೆ. ಇವೆರಡೂ ಮುಮುಕ್ಷುಗಳಿಗೆ ಅಪೇಕ್ಷಿತವಾಗಿವೆ. ಅದಕ್ಕಾಗಿ ಈ ಗುಣಗಳೂ ಸರ್ವೋಪಾಸ್ಯವಾಗಿವೆ, ಎಂದು ಪೂರ್ವಪಕ್ಷ. ಬ್ರಹ್ಮತರ್ಕದಲ್ಲಿ ನಿಷೇಧ ಮಾಡಿರುವುದರಿಂದ ಅವುಗಳು ದೇವಾದಿಮಾತ್ರೋಪಾಸ್ಯಗಳು, ಎಂದು ಸಿದ್ಧಾಂತ.

ಈ ಗುಣಗಳನ್ನು ಮನುಷ್ಯರು ಉಪಾಸನೆ ಮಾಡದಿದ್ದರೂ ಅವರು 'ಉದ್ಯದ್ ಭಾಸ್ವತ್‌ಸಮಾಭಾಸಃ' 'ಬ್ರಹ್ಮವಾಯುಶಿವಾಹೀಶವಿಪ್ಯೈಃ ಸೇವ್ಯಮಾನಃ' ಎಂದು

ಉಪಾಸನೆ ಮಾಡುವುದರಿಂದಲೇ ಮೋಕ್ಷದಲ್ಲಿ ಪ್ರಕಾಶ ಮತ್ತು ಸ್ವಾವರಭರಣವು ಸಿದ್ಧವಾಗುವುದು.

ಸೂತ್ರದಲ್ಲಿ 'ಸಂಭೃತಿ+ದ್ಯುವ್ಯಾಪ್ತೀ ಅಪಿ' ಎಂದು ಬಿಡಿಸಿ ಪ್ರಯೋಗವೇ ವ್ಯಾಕರಣ ಸಮ್ಮತವಾದುದು. ದ್ವಂದ್ವ ಸಮಾಸದಿಂದ ದ್ವಿವಚನ ಬಂದಾಗ 'ಪ್ಲುತಪ್ರಗೃಹ್ಯಾ ಅಚಿ ನಿತ್ಯಮ್' ಎಂಬ ಸೂತ್ರದಿಂದ ಪ್ರಗೃಹ್ಯಸಂಜ್ಞೆ ಬರುವುದರಿಂದ ಸಂಧಿ ಯಾಗಬಾರದು. ಆದರೂ, ಸಂಧಿ ಮಾಡಿರುವುದರಿಂದ ಈ ಎರಡೇ ಅಲ್ಲದೆ ಇಂತಹ ಇನ್ನೂ ಅನೇಕ ಗುಣಗಳು ದೇವತೆಗಳಿಗೆ ಮಾತ್ರ ಉಪಾಸ್ಯಗಳು ಎಂದು ಸೂತ್ರಕಾರರ ಅಭಿಪ್ರಾಯ. ಬ್ರಹ್ಮತರ್ಕವಚನದಲ್ಲಿ 'ಭೃತಿವ್ಯಾಪ್ತ್ಯಾದಯಃ' ಎಂದು ಆದಿ ಪದಪ್ರಯೋಗದಿಂದ ಇದು ಸ್ಪಷ್ಟವಾಗುತ್ತದೆ. ಈ ವಿಷಯ ತತ್ತ್ವಪ್ರದೀಪದಲ್ಲಿದೆ.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**।। ಓಂ ಸಂಭೃತಿದ್ಯುವ್ಯಾಪ್ತ್ಯಪಿ ಚಾತಃ ಓಂ ।।** (ಅತ್ರ ಸಂಭೃತ್ಯಾದಿಗುಣಸ್ಯ ಸರ್ವೋಪಾಸ್ಯತ್ವಂ ನೇತ್ಯುಚ್ಯತೇ। ಅಪಿಃ ನೇತ್ಯನುಷಂಗಾರ್ಥಃ। ಚ ಏವ। ಸಂಭೃತಿಃ=ಸಮ್ಯಗ್ ಭರಣಮ್। ದ್ಯುವ್ಯಾಪ್ತಿಃ=ಪ್ರಕಾಶ ವ್ಯಾಪ್ತಿಃ ಸಮಾಹಾರದ್ವಂದ್ವಃ।

'ಉಕ್ಥಾಸ ದ್ಯಾವಾಪೃಥಿವೀ ಬಿಭರ್ತಿ' 'ಏಷ ಹಿ ಸರ್ವೇಷು ಲೋಕೇಷು ಭಾತಿ' ಇತ್ಯುಕ್ತ–ಸಂಭೃತಿ–ದ್ಯುವ್ಯಾಪ್ತೀ ನ ಸರ್ವೋಪಾಸ್ಯೇ। ಕಿಂತು ದೇವಾದ್ಯುಪಾಸ್ಯೇ। ಕುತಃ ? ಅತಶ್ಚ=ಅತ ಏವ। ಪ್ರಾಗುಕ್ತಯೋಗ್ಯತಾವಿಶೇಷಾದೇವ, ಇತ್ಯರ್ಥಃ। ಯೋಗ್ಯತೈವ ಉಪಾಸ್ತಿನಿಯಮೇ ಪ್ರಯೋಜಿಕಾ, ನ ಫಲಾಪೇಕ್ಷಾ ಇತಿ ದ್ಯೋತಯಿತುಮ್ ಏವಾರ್ಥಃ ಚಃ। ತೇನ ಮುಕ್ತೌ ಸ್ವಾವರಭರಣ–ಪ್ರಕಾಶವ್ಯಾಪ್ತ್ಯೋಃ ಸರ್ವಾಶಾಸ್ಯತ್ವಾತ್ ಸರ್ವೋಪಾಸ್ಯತ್ವಂ ತಯೋಃ ಇತಿ ನ ಶಂಕ್ಯಮ್ ।।)

ಸಂಭೃತಿ – ದ್ಯುವ್ಯಾಪ್ತ್ಯಾದ್ಯಪಿ = ಲೋಕಧಾರತ್ವ – ಪ್ರಕಾಶವ್ಯಾಪ್ತಿಗುಣಗಳೂ ಎಲ್ಲರಿಂದಲೂ ಧ್ಯೇಯಗಳಲ್ಲ. ಅವುಗಳನ್ನು ಎಲ್ಲರೂ ಭಗವಂತನಲ್ಲಿ ಧ್ಯಾನಿಸ ಬಾರದು. ಅತಶ್ಚ–ಅತ ಏವ=ಹಿಂದೆ ಹೇಳಿದಂತೆ ಅವುಗಳ ಧ್ಯಾನಕ್ಕೆ ಯೋಗ್ಯತಾ ವಿಶೇಷವೇ ಕಾರಣವಾದುದರಿಂದ.

## ಅದ್ವೈತದರ್ಶನದಲ್ಲಿ ಸೂತ್ರದ ಅರ್ಥ

**।। ಸಂಭೃತಿದ್ಯುವ್ಯಾಪ್ತ್ಯಪಿ ಚಾತಃ ।।** 'ಬ್ರಹ್ಮಜ್ಯೇಷ್ಠಾ ವೀರ್ಯಾ ಸಂಭೃತಾನಿ ಬ್ರಹ್ಮಾಗ್ರೇ ಜ್ಯೇಷ್ಠಂ ದಿವಮಾತತಾನ' ಎಂದು ರಾಣಾಯನೀಶಾಖೆಯಲ್ಲಿ

ವೀರ್ಯಸಂಭೃತಿ, ದ್ಯುನಿವೇಶ ಮುಂತಾದ ಗುಣಗಳನ್ನು ಬ್ರಹ್ಮನಿಗೆ ಹೇಳಲಾಗಿದೆ. ವೀರ್ಯವೆಂದರೆ ಆಕಾಶೋತ್ಪಾದನಾದಿಪರಾಕ್ರಮವಿಶೇಷಗಳು. ಸಂಭೃತ ಎಂದರೆ ನಿರ್ವಿಘ್ನವಾಗಿ ಸಮೃದ್ಧವಾಗಿವೆ, ಎಂದರ್ಥ. 'ದಿವಂ ಆತತಾನ' ಎಂದು ಬ್ರಹ್ಮನಿಗೆ ಸ್ವರ್ಗಲೋಕ ಪರ್ಯಂತ ವ್ಯಾಪ್ತಿಯನ್ನು ಹೇಳಲಾಗಿದೆ. ಇಂತಹ ಗುಣಗಳನ್ನು ಶಾಂಡಿಲ್ಯವಿದ್ಯೆ, ಉಪಕೋಸಲವಿದ್ಯೆಗಳ ಉಪಾಸನೆಯಲ್ಲಿ ಸೇರಿಸಿ ಉಪಾಸನೆ ಮಾಡಬೇಕಾಗಿಲ್ಲ. ಏಕೆಂದರೆ, ಶಾಂಡಿಲ್ಯವಿದ್ಯೆಯಲ್ಲಿ 'ಯ ಏಷ ಆತ್ಮಾಂತರ್ಹೃದಯೇ' (ಛಾ.3.14.3) ಎಂದು ಹೃದಯಸ್ಥತ್ವವನ್ನು ಹೇಳಲಾಗಿದೆ. ದಹರವಿದ್ಯೆಯಲ್ಲೂ ಹೀಗೆಯೇ ಇದೆ. ಉಪಕೋಸಲವಿದ್ಯೆಯಲ್ಲಿ 'ಯ ಏಷ ಪುರುಷೋಽಂತರಕ್ಷಿಣಿ ದೃಶ್ಯತೇ' ಎಂದು ಅಕ್ಷಿಸ್ಥತ್ವವನ್ನು ಹೇಳಲಾಗಿದೆ. ಈ ಎಲ್ಲ ವಿದ್ಯೆಗಳು ಅಧ್ಯಾತ್ಮಾಯತನ ವಿದ್ಯೆಗಳು. ಸಂಭೃತ್ಯಾದಿಗಳು ಆಧಿದೈವಿಕವಿದ್ಯೋಪಾಸನೆಯಲ್ಲಿ ಹೇಳಲಾದ ಗುಣಗಳು. ಆದ್ದರಿಂದ ಅವುಗಳನ್ನು ದಹರಾದಿವಿದ್ಯೆಗಳಲ್ಲಿ ಉಪಸಂಹಾರ ಮಾಡಬೇಕಾಗಿಲ್ಲ. ವೀರ್ಯಸಂಭೃತ್ಯಾದಿಗುಣಗಳನ್ನು ಹೇಳುವ ಪ್ರಕರಣದಲ್ಲಿ ಯಾವುದೇ ವಿದ್ಯಾನಾಮವನ್ನು ಹೇಳದಿದ್ದರೂ ಅಲ್ಲಿ ವಿದ್ಯಾವಿಧಿಯನ್ನು ಕಲ್ಪಿಸಿ ಪ್ರಕರಣಭೇದಾತ್ ವಿದ್ಯಾಭೇದವನ್ನು ಹೇಳಬೇಕು.

**ವಿಮರ್ಶೆ**—ಹಿಂದಿನ ಅಧಿಕರಣದಲ್ಲಿ ಸತ್ಯಾಖ್ಯಬ್ರಹ್ಮನಲ್ಲಿ ಅವ್ಯವಹಿತ ಪೂರ್ವೋಕ್ತವಾದ 'ಅಹಃ' ಎಂಬ ನಾಮದ ಉಪಾಸನೆಯನ್ನೇ ನಿಷೇಧಿಸಿರುವಾಗ ರಾಣಾಯನಸಂಹಿತೆಯಲ್ಲಿ ಹೇಳಿರುವ ಗುಣಗಳನ್ನು ಆರಣ್ಯಕೋಕ್ತ ದಹರಾದಿ ವಿದ್ಯೆಗಳಲ್ಲಿ ಉಪಸಂಹಾರದ ಸಂದೇಹವೇ ಬರಲು ಸಾಧ್ಯವಿಲ್ಲವಾದ ಕಾರಣ, ಪೂರ್ವಪಕ್ಷವೇ ಯುಕ್ತವಲ್ಲ.

ಸಾಧಾರಣಬ್ರಹ್ಮಗುಣಗಳು ವಿದ್ಯಾಂತರಗಳಲ್ಲಿ ಉಪಸಂಹೃತವಾಗುತ್ತವೆ, ಅಸಾಧಾರಣಗುಣಗಳಾದ ಸಂಭೃತ್ಯಾದಿಗಳಿಗೆ ಉಪಸಂಹಾರವಿಲ್ಲ, ಎನ್ನುವ ಸಿದ್ಧಾಂತವೂ ಸರಿಯಲ್ಲ. ಬ್ರಹ್ಮವಿದ್ಯಾಗಳಲ್ಲಿ ಎಲ್ಲ ಕಡೆಗಳಲ್ಲೂ ಅನುವೃತ್ತವಾಗುವ ಗುಣಗಳು ಸಾಧಾರಣಗಳು, ಕೆಲವು ವಿದ್ಯೆಗಳಲ್ಲಿ ಮಾತ್ರ ಧ್ಯೇಯವಾದವುಗಳು ಅಸಾಧಾರಣಗಳು, ಎಂದು ವಿಭಾಗ ಮಾಡಬೇಕು. ಆದರೆ, ಬ್ರಹ್ಮವಿದ್ಯೆಗಳು ಅನಂತವಾಗಿರುವುದರಿಂದ ಈ ನಿರ್ಧಾರವನ್ನು ಮಾಡುವುದು ಕಷ್ಟಸಾಧ್ಯ. ಶಾಂಡಿಲ್ಯವಿದ್ಯೆಯಲ್ಲಿ ಹೇಳಿರುವ ಹೃದಯರೂಪವಾದ ಪರಿಚ್ಛಿನ್ನಪ್ರದೇಶಸ್ಥಿತತ್ವಕ್ಕೆ ದ್ಯುವ್ಯಾಪ್ತ್ಯಾದಿಗುಣಗಳು ವಿರುದ್ಧ ವಾಗಿರುವುದರಿಂದ ಅದರ ಉಪಸಂಹಾರ ಶಾಂಡಿಲ್ಯವಿದ್ಯೆಯಲ್ಲಿ ಇಲ್ಲ ಎನ್ನುವುದೂ

ಸರಿಯಲ್ಲ. ಒಂದೇ ವಿದ್ಯೆಯಲ್ಲಿ ಅಣುತ್ವ-ಮಹತ್ವಗಳನ್ನು ಉಪಸಂಹಾರ ಮಾಡುವಂತೆ ಇದೂ ಸಾಧ್ಯವಾಗಬಹುದು. ಅಥವಾ, ವಿರುದ್ಧ ಗುಣಗಳನ್ನು ಬಿಟ್ಟು ಅವಿರುದ್ಧವಾದ ಸಂಭೃತ್ಯಾದಿಗುಣಗಳನ್ನು ಉಪಸಂಹಾರ ಮಾಡಬಹುದು.

ರಾಮಾನುಜಭಾಷ್ಯದಲ್ಲೂ ಇದೇರೀತಿಯ ಅಧಿಕರಣರಚನೆ ಮತ್ತು ಸೂತ್ರಾರ್ಥವನ್ನು ಹೇಳಲಾಗಿದೆ.

ಇಲ್ಲಿಗೆ ಸಂಭೃತ್ಯಧಿಕರಣವು ಮುಗಿಯಿತು.

## ೧೫. ಪುರುಷವಿದ್ಯಾಧಿಕರಣಮ್

**ಯಸ್ಯಾಂ ವಿದ್ಯಾಯಾಂ ಮಹಾಗುಣಾ ಉಚ್ಯಂತೇ ಸೋತ್ತಮಾನಾಮ್, ಇತರಾ ಅನ್ಯೇಷಾಮ್ । ಇತಿ ಚೇತ್, ನ-**

**॥ ಓಂ ಪುರುಷವಿದ್ಯಾಯಾಮಪಿ**
**ಚೇತರೇಷಾಮನಾಮ್ನಾನಾತ್ ಓಂ ॥ ೨೫ ॥**

**ಪುರುಷಸೂಕ್ತೋಕ್ತವಿದ್ಯಾಯಾಮಪಿ ಕೇಷಾಂಚಿದ್ ಗುಣಾನಾಮನಾಮ್ನಾನಾತ್ ।**

**'ಸರ್ವತಃ ಪೌರುಷೇ ಸೂಕ್ತೇ ಗುಣಾ ವಿಷ್ಣೋರುದೀರಿತಾಃ ।**
**ತತ್ರಾಪಿ ನೈವ ಸರ್ವೇಽಪಿ ತಸ್ಮಾತ್ ಕಾರ್ಯೋಽಪಸಂಹೃತಿಃ ॥'**
**ಇತಿ ಬ್ರಹ್ಮತರ್ಕೇ ।**

ಯಾವ ವಿದ್ಯೆಯಲ್ಲಿ ಹೆಚ್ಚಿನ ಸಂಖ್ಯೆಯ ಗುಣವನ್ನು ಹೇಳಲಾಗಿದೆಯೋ ಆ ವಿದ್ಯೆಯಲ್ಲಿ ಉತ್ತಮಾಧಿಕಾರಿಗಳಿಗೆ ಅಧಿಕಾರ, ಅಲ್ಪಗುಣಗಳನ್ನು ಹೇಳಿರುವ ವಿದ್ಯೆಗಳಲ್ಲಿ ಇತರರಿಗೆ ಅಧಿಕಾರ. ಸರ್ವಗುಣೋಪಾಸನೆ ಯಾರಿಗೂ ಇಲ್ಲ. ಹೀಗೆ ಹೇಳಬಾರದು—ಪುರುಷಸೂಕ್ತದಲ್ಲಿ ಹೇಳಿರುವ ಪುರುಷವಿದ್ಯೆಯಲ್ಲೂ ಕೆಲವೇ ಗುಣಗಳನ್ನಷ್ಟೇ ಹೇಳಲಾಗಿದೆ. ಬ್ರಹ್ಮತರ್ಕದಲ್ಲಿ ಹೀಗಿದೆ—ಪುರುಷಸೂಕ್ತದಲ್ಲಿ ವಿಷ್ಣುವಿಗೆ ಇತರ ವಿದ್ಯೆಗಳಿಗಿಂತ ಹೆಚ್ಚು ಗುಣಗಳನ್ನು ಹೇಳಲಾಗಿದೆಯಾದರೂ ಅಲ್ಲೂ ಎಲ್ಲ ಗುಣಗಳನ್ನು ಹೇಳಲಾಗಿಲ್ಲ. ಆದರೆ, ಬ್ರಹ್ಮದೇವರು ಸರ್ವಗುಣಗಳನ್ನೂ ಉಪಾಸನೆ

ಮಾಡಬೇಕು. ಅದಕ್ಕಾಗಿ, ವಿದ್ಯಾಂತರೋಕ್ತಗುಣಗಳನ್ನೂ ಅವರು ಉಪಸಂಹಾರ ಮಾಡಬೇಕು. ಆದ್ದರಿಂದ ಗುಣೋಪಸಂಹಾರ ಯುಕ್ತವಾಗಿದೆ.

**ವಿವರಣೆ**—ಗುರ್ವರ್ಥದೀಪಿಕಾದಲ್ಲಿ ಇನ್ನೊಂದು ಕಾರಣವನ್ನು ತಿಳಿಸಲಾಗಿದೆ—ಮನುಷ್ಯರು ಚತುರ್ಗುಣೋಪಾಸಕರು. ಆದರೆ, ಅವರು ಉಪಾಸನೆ ಮಾಡಬೇಕಾಗಿರುವ ಸತ್, ಚಿತ್, ಆನಂದ, ಆತ್ಮ ಈ ನಾಲ್ಕೂ ಗುಣಗಳೂ ಒಂದೇ ವಿದ್ಯೆಯಲ್ಲಿ ಉಕ್ತವಾಗಿಲ್ಲ. ಅದಕ್ಕಾಗಿ ವಿದ್ಯಾಂತರೋಕ್ತಗುಣಗಳನ್ನು ಉಪಸಂಹಾರ ಮಾಡಲೇಬೇಕಾಗುತ್ತದೆ.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಓಂ ಪುರುಷವಿದ್ಯಾಯಾಮಪಿ ಚೇತರೇಷಾಮನಾಮ್ನಾನಾತ್ ಓಂ ॥** (ಅತ್ರ ಸರ್ವತ್ರ ಗುಣೋಪಸಂಹಾರಃ ಕಾರ್ಯಃ ಇತಿ ಸಾಧ್ಯತೇ। ಸರ್ವವಿದ್ಯೋತ್ತ-ಮಾಯಾಮ್, ಇತಿ ಅಪೇರರ್ಥಃ। ಪುರುಷವಿದ್ಯಾಯಾಂ=ಪುರುಷಸೂಕ್ತಾಖ್ಯ-ವಿದ್ಯಾಯಾಮ್ ಇತರೇಷಾಂ ಕೇಷಾಂಚಿದ್ ಗುಣಾನಾಮ್ ಅನಾಮ್ನಾನಾತ್ ಚಶಬ್ದಾತ್ ಕೇಷಾಂಚಿದಾಮ್ನಾನಾತ್ ಸರ್ವತೋ ಗುಣೋಪಸಂಹಾರಃ ಕಾರ್ಯಃ ಇತಿ ಯೋಜ್ಯಮ್ । ಕಿಮು ವಿದ್ಯಾಂತರೇ ಸರ್ವನಾಮ್ನಾಮ್ ಇತಿ ಕೈಮುತ್ಯಸೂಚನಾರ್ಥಃ ಅಪಿಶಬ್ದಃ। ಏಕತ್ವೈವ ಸರ್ವಗುಣೋಕ್ತ್ಯಭಾವಾತ್ ಸರ್ವವಿದ್ಯಾತಃ ಸರ್ವಗುಣೋಪ ಸಂಹೃತಿಃ ಕಾರ್ಯಾ ಇತಿ ಭಾವಃ।)

ಪುರುಷವಿದ್ಯಾಯಾಂ=ಸರ್ವಶ್ರೇಷ್ಠವಾದ ಪುರುಷಸೂಕ್ತೋಕ್ತವಿದ್ಯೆಯಲ್ಲೂ ಇತರೇಷಾಂ=ಅಲ್ಲಿ ಹೇಳಿರುವ ಗುಣಗಳ ಹೊರತಾದ ಅನೇಕಗುಣಗಳನ್ನು ಅನಾಮ್ನಾನಾತ್=ಹೇಳದಿರುವುದರಿಂದ ಇತರವಿದ್ಯೆಗಳಿಂದ ಗುಣಗಳನ್ನು ಚತುರ್ಮುಖಾದಿಗಳು ಉಪಸಂಹಾರ ಮಾಡಬೇಕು.

## ಅದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಪುರುಷವಿದ್ಯಾಯಾಮಿವ ಚೇತರೇಷಾಮನಾಮ್ನಾನಾತ್ ॥** ತಾಂಡ್ಯ ಮತ್ತು ಪೈಂಗಿ ಬ್ರಾಹ್ಮಣಗಳಲ್ಲಿ 'ಪುರುಷೋ ವಾವ ಯಜ್ಞಃ। ತಸ್ಯ ಯಾನಿ ಚತುರ್ವಿಂಶತಿ ವರ್ಷಾಣಿ ತತ್ ಪ್ರಾತಃಸವನಮ್। ಅಥ ಯಾನ್ಯಷ್ಟಾಚತ್ವಾರಿಂಶದ್ವರ್ಷಾಣಿ ತಾನಿ ತೃತೀಯಮ್ । ಅಥ ಯಾನಿ ಚತುಶ್ಚತ್ವಾರಿಂಶದ್ವರ್ಷಾಣಿ ತನ್ಮಾಧ್ಯಂದಿನಂ ಸವನಮ್ ॥' ಇತ್ಯಾದಿಯಾಗಿ ಪುರುಷಯಜ್ಞದ ನಿರೂಪಣೆ ಇದೆ. ಮನುಷ್ಯನ 116 ವರ್ಷಗಳ

ಪೂರ್ಣಾಯುಷ್ಯವನ್ನು 24, 44, 48 ಎಂದು ಮೂರುಭಾಗ ಮಾಡಿ ಪ್ರಾತಃಸವನ, ಮಾಧ್ಯಂದಿನ ಸವನ, ಸಾಯಂಸವನ ಎಂದು ನಿರೂಪಿಸಲಾಗಿದೆ. ಅವನ ಹಸಿವು ನೀರಡಿಕೆ ದುಃಖಗಳು ಯಜ್ಞದೀಕ್ಷೆ, ತಿನ್ನುವುದು ಕುಡಿಯುವುದು ಯಜ್ಞದ ಉಪಸತ್ತುಗಳು (ಆಜ್ಯಹವಿಷ್ಯಯಜ್ಞಾಂಗಆಹುತಿ). ನಗುವುದು, ಉಂಡು–ತಿಂದು ಸುಖಿಸುವುದು 'ಶಸ್ತ್ರ'ಗಳು. ತಪಸ್ಸು–ದಾನಗಳೇ ಯಜ್ಞದಕ್ಷಿಣೆ, ಮರಣವೇ ಅವಭೃಥ. ಹೀಗೆ ಅಲ್ಲಿ ಯಜ್ಞದ ನಿರೂಪಣೆ ಇದೆ.

ತೈತ್ತಿರೀಯದಲ್ಲಿ ಹೀಗಿದೆ—'ತಸ್ಯೈವಂ ವಿದುಷೋ ಯಜ್ಞಸ್ಯ ಆತ್ಮಾ ಯಜಮಾನಃ । ಶ್ರದ್ಧಾ ಪತ್ನೀ । ಶರೀರಮ್ ಇಧ್ಮಮ್ । ಉರೋ ವೇದಿಃ । ಲೋಮಾನಿ ಬರ್ಹಿಃ । ವೇದಃ ಶಿಖಾ । ಯೂಪಃ ಕಾಮಃ । ಆಜ್ಯಂ ಮನ್ಯುಃ । ಪಶುಸ್ತಪಃ । ದಮಃ ಶಮಯಿತಾ । ದಕ್ಷಿಣಾ ವಾಕ್...॥

ಈ ಎರಡೂ ಯಜ್ಞಗಳಲ್ಲಿ ಒಂದೆಡೆ ಹೇಳಿದ ಅಂಗಾಂಗಗಳನ್ನು ಇನ್ನೊಂದೆಡೆ ಉಪಸಂಹಾರ ಮಾಡಬೇಕಾಗಿಲ್ಲ. ಏಕೆಂದರೆ, ಈ ಎರಡು ಪುರುಷಯಜ್ಞವಿದ್ಯೆಗಳಲ್ಲಿ ವೈಲಕ್ಷಣ್ಯವಿದೆ. ಮೊದಲನೆಯದರಲ್ಲಿ ಪುರುಷನೇ ಯಜ್ಞ, ಎರಡನೆಯದರಲ್ಲಿ ಪುರುಷನ ಯಜ್ಞ. 'ವಿದುಷೋ ಯಜ್ಞಸ್ಯ' ಇದು ಸಮಾನಾಧಿಕರಣ ಷಷ್ಠೀ ಅಲ್ಲ, ಸಂಬಂಧ ಷಷ್ಠೀ. ಹೀಗೆ ಇವೆರಡು ವಿಭಿನ್ನಗಳಾದುದರಿಂದ ಪರಸ್ಪರವಾಗಿ ಅಂಗಗಳ ಉಪಸಂಹಾರವಿಲ್ಲ.

**ವಿಮರ್ಶೆ**—'ವಿದುಷೋ ಯಜ್ಞಸ್ಯ' ಎಂದು 'ನಿಷಾದಸ್ಥಪತಿಂ' ಎಂದಂತೆ ಸಮಾನಾಧಿಕರಣಷಷ್ಠೀ. ಜ್ಞಾನಿಯೇ ಯಜ್ಞ, ಎಂದರ್ಥ. ದೇಹೇಂದ್ರಿಯಾದಿ ಸಮುದಾಯವನ್ನು 'ವಿದುಷಃ' ಎಂಬ ಪದದಿಂದ ಪರಿಗ್ರಹಿಸಿ ಅದರ ಏಕದೇಶವಾದ ಆತ್ಮನು ಯಜಮಾನ, ಎಂದು ಅರ್ಥವನ್ನು ಹೇಳಬಹುದು. ಆದ್ದರಿಂದ ಎರಡೂ ಯಜ್ಞಗಳೂ ಸಮಾನವಾಗಿವೆ. ಒಂದರ ಅಂಗವನ್ನು ಇನ್ನೊಂದೆಡೆ ಉಪಸಂಹಾರ ಮಾಡಬಹುದು.

**ರಾಮಾನುಜಭಾಷ್ಯ**ದಲ್ಲಿ ತೈತ್ತಿರೀಯ ಮತ್ತು ಛಾಂದೋಗ್ಯಗಳಲ್ಲಿ ಹೇಳಿರುವ ಯಜ್ಞನಿರೂಪಣೆಗೆ ವೈಲಕ್ಷಣ್ಯವನ್ನು ತೋರಿಸಿ ಉಪಸಂಹಾರಾಭಾವವನ್ನು ಸಾಧಿಸಲಾಗಿದೆ. ಎರಡೂ ಭಾಷ್ಯಗಳಲ್ಲಿ ಮಾಧ್ವಭಾಷ್ಯದ 'ಅಪಿ' ಶಬ್ದದ ಬದಲಾಗಿ ಇವ ಶಬ್ದವನ್ನು ಸೂತ್ರದಲ್ಲಿ ಪಾಠಾಂತರಿಸಲಾಗಿದೆ.

**ಇಲ್ಲಿಗೆ ಪುರುಷವಿದ್ಯಾಧಿಕರಣವು ಮುಗಿಯಿತು.**

# ೧೬. ವೇಧಾದ್ಯಧಿಕರಣಮ್

## ॥ ಓಂ ವೇಧಾದ್ಯರ್ಥಭೇದಾತ್ ಓಂ ॥ ೨೬ ॥

'ಭಿಂಧಿವಿದ್ಧಿ(ವಿದ್ಧ್ಯ) ಶೃಣೇಹೀತಿ ಫಲಭೇದೇನ ಸರ್ವಶಃ ।
ಯತ್ಯಾದೀನಾಂ ತೇಷ್ವಯೋಗಾತ್ ನಾಧಿಕಾರ್ಯೇಕತಾ ಭವೇತ್ ।
ಅಯೋಗ್ಯೋಪಾಸನಾದೀಯುರನರ್ಥಂ ಚಾರ್ಥನಾಶನಮ್ ॥'

ಇತಿ ಬೃಹತ್ತಂತ್ರೇ ।

ಬೃಹತ್ತಂತ್ರದಲ್ಲಿ—'ಭೇದಿಸು, ಚುಚ್ಚು' ಮೊದಲಾದ ಶತ್ರುಹಿಂಸನೋಪಾಸನೆಯಲ್ಲಿ ಯತಿಗಳಿಗೆ ಅಧಿಕಾರವಿಲ್ಲ, ಎಂದು ಹೇಳಲಾಗಿದೆ. ಆದ್ದರಿಂದ ಉಪಾಸನಾಧಿಕಾರಿಗಳಲ್ಲಿ ಏಕರೂಪತೆ ಇಲ್ಲ. ಅದರಿಂದಾಗಿ ಉಪಾಸನೆಯೂ ಏಕರೂಪವಲ್ಲ.

**ವಿವರಣೆ**—'ಅಗ್ನೇ ತ್ವಚಂ ಯಾತುಧಾನಸ್ಯ ಭಿಂಧಿ ।' 'ತ್ವಂ ಪ್ರತ್ಯಂಚಮ್ ಅರ್ಚಿಷಾ ವಿಧ್ಯ ಮರ್ಮನ್ ।' 'ಪರಾಶೃಣೀಹಿ ತಪಸಾ ಯಾತುಧಾನಾನ್ ॥'

ಇದು ವೇದಮಂತ್ರ. ಇದರ ಅರ್ಥ—ಅಗ್ನೇ=ಪರಮಾತ್ಮನೇ ಯಾತುಧಾನಸ್ಯ ರಾಕ್ಷಸನ ತ್ವಚಂ=ಚರ್ಮವನ್ನು ಭಿಂಧಿ=ಸೀಳು. ಪ್ರತ್ಯಂಚಂ=ನಿನಗೆ ಅಭಿಮುಖವಾಗಿ ಬರುವ ರಾಕ್ಷಸನನ್ನು ಅರ್ಚಿಷಾ=ಪ್ರಕಾಶಮಾನವಾದ ಚಕ್ರದಿಂದ ಮರ್ಮನ್=ಮರ್ಮಸ್ಥಾನದಲ್ಲಿ ವಿದ್ಧಿ=ಚುಚ್ಚು. ಯಾತುಧಾನಾನ್=ರಾಕ್ಷಸರನ್ನು ತಪಸಾ=ಜ್ವಾಲೆಯಿಂದ ಪರಾಶೃಣೀಹಿ= ಭಸ್ಮಮಾಡು.

ಈ ಮಂತ್ರದಲ್ಲಿ 'ಭಿಂಧಿ–ಭಿಂಧಿ' ಎಂದು ಹಿಂಸಕತ್ವೇನ ಭಗವಂತನ ನಿರೂಪಣೆ ಇದೆ. ಈ ರೀತಿಯಲ್ಲಿ ಯತಿಗಳು ಭಗವಂತನನ್ನು ಉಪಾಸನೆ ಮಾಡಬಾರದು, ಎಂದು ಬೃಹತ್ತಂತ್ರದಲ್ಲಿ ನಿಷೇಧಿಸಲಾಗಿದೆ. ಇದರಿಂದ ಉಪಾಸನೆ ಎಲ್ಲರಿಗೂ ಒಂದೇ ರೀತಿಯಲ್ಲ, ಎಂದು ತಿಳಿಯುತ್ತದೆ.

**ಬೃಹತ್ತಂತ್ರದ ಅರ್ಥ**—ಭಿಂಧಿ=ಭೇದಿಸು, ಶೃಣೇಹಿ=ಹಿಂಸೆ ಮಾಡು, ವಿದ್ಧಿ=ಚುಚ್ಚು ಇತ್ಯಾದಿ ಉಪಾಸನೆಯಲ್ಲಿ ಫಲಭೇದಾತ್=ವಿಭಿನ್ನವಾದ ಫಲವು ಇರುವುದರಿಂದ ಸರ್ವಶಃ=ಎಲ್ಲರಿಗೂ ನಾಧಿಕಾರಿತಾ=ಅಧಿಕಾರವಿಲ್ಲ. ಯತ್ಯಾದೀನಾಂ=ಯತಿಗಳಿಗೆ ತೇಷು=ಇಂತಹ ಉಪಾಸನೆಗಳಲ್ಲಿ ಅಯೋಗಾತ್=ಅಧಿಕಾರವಿಲ್ಲದಿರುವುದ

ರಿಂದ. ಅಯೋಗ್ಯೋಪಾಸನಾತ್=ಯೋಗ್ಯವಲ್ಲದ. ಉಪಾಸನೆಯಿಂದ ಅನರ್ಥಂ=ನರಕಾದ್ಯನರ್ಥವನ್ನು, ಅರ್ಥನಾಶನಂ=ದ್ರವ್ಯನಾಶವನ್ನೂ ಈಯುಃ=ಹೊಂದುವರು.

ಯತಿಗಳಿಗೂ ಪಾಪಪುರುಷನಾಶಪ್ರಾರ್ಥನೆಯು ದೋಷಾವಹವಲ್ಲ. ಶ್ರೀರಾಮನನ್ನು ಋಷಿಮುನಿಗಳೂ ಅಸುರನಾಶಕ್ಕೆ ಪ್ರಾರ್ಥನೆ ಮಾಡಿದ್ದಿದೆ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ವೇಧಾದ್ಯರ್ಥಭೇದಾತ್ ಓಂ ॥** (ಅತ್ರ ಭೇದನಾದಿ ಈಶಗುಣಸ್ಯ ಯತ್ಯಾದ್ಯುಪಾಸ್ಯತ್ವಂ ನೇತ್ಯುಚ್ಯತೇ। ನೇತ್ಯಸ್ತಿ। 'ತಂ ಪ್ರತ್ಯಂಚಂ ಅರ್ಚಿಷಾ ವಿಧ್ಯಮರ್ಮಣ್।' 'ಅಗ್ನೇ ತ್ವಚಂ ಯಾತುಧಾನಸ್ಯ ಭಿಂಧಿ' 'ಪರಾಶೃಣೀಹಿ' ಇತಿ ಶ್ರುತವೇಧಾದಿ ನ ಸರ್ವೋಪಾಸ್ಯಮ್। ಕುತಃ? ಅರ್ಥಭೇದಾತ್=ಫಲಭೇದಾತ್। ವೇಧಾದ್ಯುಪಾಸನಸ್ಯ ದುಷ್ಟಜನಹಿಂಸಾದಿರೂಪವಿಲಕ್ಷಣಫಲಕತ್ವಾತ್। ತತ್ರಚ ಯತ್ಯಾದೇಃ ಅನಧಿಕಾರಾತ್ ಇತಿ ಭಾವಃ।)

ವೇದಗಳಲ್ಲಿ 'ಛಿಂದಿ, ಭಿಂಧಿ, ವಿದ್ಧಿ' ಎಂದು ಮುಂತಾಗಿ ಪರಮಾತ್ಮನನ್ನು ಛೇದಕಾದಿಗುಣವಿಶಿಷ್ಟನನ್ನಾಗಿ ಬಣ್ಣಿಸಲಾಗಿದೆ. ಈ ಛೇದಾದಿಗುಣಗಳು ಎಲ್ಲರಿಗೂ ಉಪಾಸನಾಯೋಗ್ಯಗಳಲ್ಲ. ಅರ್ಥಭೇದಾತ್=ಫಲಭೇದವಿರುವುದರಿಂದ. ಆ ರೀತಿಯ ಉಪಾಸನೆಯ ಫಲ ದುಷ್ಟಹಿಂಸೆ. ಅದು ಯತಿಗಳಿಗೆ ನಿಷಿದ್ಧವಾದುದು.

## ಅದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ವೇಧಾದ್ಯರ್ಥಭೇದಾತ್ ॥** ಆಥರ್ವಣಶಾಖೆಯವರು ಉಪನಿಷತ್ತಿನ ಆರಂಭದಲ್ಲಿ 'ಸರ್ವಂ ಪ್ರವಿಧ್ಯ, ಹೃದಯಂ ಪ್ರವಿಧ್ಯ, ಧಮನೀ ಪ್ರವೃಜ್ಯ' ಎಂಬ ಮಂತ್ರವನ್ನು ಪಠಿಸುತ್ತಾರೆ. ತಾಂಡ್ಯಾಯನಶಾಖೆಯವರು 'ದೇವ ಸವಿತಃ ಪ್ರಸುವ ಯಜ್ಞಮ್' ಎಂಬ ಮಂತ್ರವನ್ನು ಪಠಿಸುತ್ತಾರೆ. ತೈತ್ತಿರೀಯರು 'ಶಂನೋ ಮಿತ್ರಃ ಶಂ ವರುಣಃ' ಮಂತ್ರವನ್ನು ಪಠಿಸುತ್ತಾರೆ. ವಾಜಸನೇಯಶಾಖೆಯವರು 'ದೇವಾ ಹ ವೈ ಸತ್ರಂ ನಿಷೇಧುಃ' ಎಂಬ ಪ್ರವರ್ಗ್ಯಬ್ರಾಹ್ಮಣವನ್ನು ಪಠಿಸುತ್ತಾರೆ. ಮೊದಲನೆಯ ಮಂತ್ರ ಅಭಿಚಾರಕ್ರಿಯಾಂಗ, ಪ್ರವರ್ಗ್ಯಕರ್ಮ ಯಜ್ಞಾಂಗ. ಈ ಮಂತ್ರಗಳು ಮತ್ತು ಪ್ರವರ್ಗ್ಯಾದಿಕರ್ಮಗಳು ವಿದ್ಯಾಂಗಗಳಲ್ಲ. ವೇಧಾದಿ='ಹೃದಯಂ ಪ್ರವಿಧ್ಯ' ಇತ್ಯಾದಿ ಮಂತ್ರಗಳಿಂದ ನಡೆಸಲಾಗುವ ಅಭಿಚಾರಕ್ರಿಯೆಗಳಲ್ಲಿ ಮಂತ್ರಗಳ ಅರ್ಥವು

ಭಿನ್ನವಾಗಿದೆ. ಅದಕ್ಕೂ ವಿದ್ಯೋಪಾಸನೆಗೂ ಸಂಬಂಧವಿಲ್ಲ. ಆದ್ದರಿಂದ ಅವುಗಳು ವಿದ್ಯಾಂಗಗಳಲ್ಲ.

ವಿಮರ್ಶೆ—ವಿದ್ಯಾಭೇದವನ್ನು ವಿಚಾರ ಮಾಡುವ ಈ ಪಾದದಲ್ಲಿ ಪ್ರಕೃತ ವಿಚಾರವು ಅಸಂಗತವಾದುದು. ವಿದ್ಯೆಗಳು ಉಪಾಸನಾರೂಪವಾಗಿವೆ. ಉಪಾಸನಾ ಚಿತ್ತೈಕಾಗ್ರ್ಯಸಂಪಾದನೆ. ಅದಕ್ಕೆ ವಿರೋಧಿಯಾದುದು ಕರ್ಮಾಚರಣೆ. ಅದು ವಿದ್ಯಾಂಗವಾಗುವುದಾದರೂ ಹೇಗೆ?

ವಿಶಿಷ್ಟಾದ್ವೈತದ ದರ್ಶನದಲ್ಲೂ ಇದೇ ಅರ್ಥವನ್ನು ಹೇಳಲಾಗಿದೆ.

ಇಲ್ಲಿಗೆ ವೇಧಾದ್ಯಧಿಕರಣವು ಮುಗಿಯಿತು.

## ೧೭. ಹಾನ್ಯಧಿಕರಣಮ್

ಮುಕ್ತಸ್ಯೋಪಾಸನಾ ಕರ್ತವ್ಯಾ ನವೇತಿ । ಅತೋಽಬ್ರವೀತ್-

**॥ ಓಂ ಹಾನೌ ತೂಪಾಯನಶಬ್ದಶೇಷತ್ವಾತ್**

**ಕುಶಾಚ್ಛಂದಸ್ತುತ್ಯುಪಗಾನವತ್ ತದುಕ್ತಮ್ ಓಂ ॥ ೨೭ ॥**

ನಿಯತಸ್ವಾಧ್ಯಾಯಾನಂತರಂ ಸ್ವೇಚ್ಛಯಾ ಕುಶಾಗ್ರಹಣಸ್ತುತ್ಯುಪಗಾನವದೇವ ಮೋಕ್ಷ ಉಪಾಸನಾದಿಃ ।

'ಬ್ರಹ್ಮವಿದಾಪ್ನೋತಿ ಪರಮ್'(ತೈ.ಉ. 2.1.1)ಇತಿ ಮೋಕ್ಷವಾಕ್ಯಶೇಷತ್ವಾದಿ-ತರೇಷಾಮ್ । ತಚ್ಚೋಕ್ತಮ್- 'ಏತತ್ ಸಾಮ ಗಾಯನ್ನಾಸ್ತೇ' (ತೈ.3.10) ಇತ್ಯಾದಿ । ಬ್ರಹ್ಮತರ್ಕೇ ಚ-

'ಮುಕ್ತಾ ಅಪಿ ಹಿ ಕುರ್ವಂತಿ ಸ್ವೇಚ್ಛಯೋಪಾಸನಂ ಹರೇಃ ।
ನಿಯಮಾನಂತರಂ ವಿಪ್ರಾಃ ಕುಶಾದ್ಯೈರಪ್ಯಧೀಯತೇ ॥' ಇತಿ ॥
'ಕೃಷ್ಣೋ ಮುಕ್ತೈರಿಜ್ಯತೇ ವೀತಮೋಹೈಃ' । ಇತಿ ಚ ಭಾರತೇ ।

ಮುಕ್ತರಾದವರು ಬ್ರಹ್ಮೋಪಾಸನೆಯನ್ನು ಮಾಡಬೇಕೋ ಬೇಡವೋ ಎಂಬ ಸಂದೇಹಕ್ಕೆ ಈ ಸೂತ್ರದಲ್ಲಿ ಸಮಾಧಾನ ನೀಡಲಾಗಿದೆ.

ರಿಂದ. ಅಯೋಗ್ಯೋಪಾಸನಾತ್=ಯೋಗ್ಯವಲ್ಲದ. ಉಪಾಸನೆಯಿಂದ ಅನರ್ಥಂ=ನರಕಾದ್ಯನರ್ಥವನ್ನು, ಅರ್ಥನಾಶನಂ=ದ್ರವ್ಯನಾಶವನ್ನೂ ಈಯುಃ=ಹೊಂದುವರು.

ಯತಿಗಳಿಗೂ ಪಾಪಪುರುಷನಾಶಪ್ರಾರ್ಥನೆಯು ದೋಷಾವಹವಲ್ಲ. ಶ್ರೀರಾಮನನ್ನು ಋಷಿಮುನಿಗಳೂ ಅಸುರನಾಶಕ್ಕೆ ಪ್ರಾರ್ಥನೆ ಮಾಡಿದ್ದಿದೆ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ವೇಧಾದ್ಯರ್ಥಭೇದಾತ್ ಓಂ ॥** (ಅತ್ರ ಭೇದನಾದಿ ಈಶಗುಣಸ್ಯ ಯತ್ಯಾದ್ಯುಪಾಸ್ಯತ್ವಂ ನೇತ್ಯುಚ್ಯತೇ। ನೇತ್ಯಸ್ತಿ। 'ತಂ ಪ್ರತ್ಯಂಚಂ ಅರ್ಚಿಷಾ ವಿಧ್ಯಮರ್ಮಣ್।' 'ಅಗ್ನೇ ತ್ವಚಂ ಯಾತುಧಾನಸ್ಯ ಭಿಂಧಿ' 'ಪರಾಶೃಣೀಹಿ' ಇತಿ ಶ್ರುತವೇಧಾದಿ ನ ಸರ್ವೋಪಾಸ್ಯಮ್। ಕುತಃ ? ಅರ್ಥಭೇದಾತ್=ಫಲಭೇದಾತ್। ವೇಧಾದ್ಯುಪಾಸನಸ್ಯ ದುಷ್ಟಜನಹಿಂಸಾದಿರೂಪವಿಲಕ್ಷಣಫಲಕತ್ವಾತ್। ತತ್ರಚ ಯತ್ಯಾದೇಃ ಅನಧಿಕಾರಾತ್ ಇತಿ ಭಾವಃ।)

ವೇದಗಳಲ್ಲಿ 'ಭಿಂದಿ, ಭಿಂಧಿ, ವಿದ್ಧಿ' ಎಂದು ಮುಂತಾಗಿ ಪರಮಾತ್ಮನನ್ನು ಭೇದಕಾದಿಗುಣವಿಶಿಷ್ಟನನ್ನಾಗಿ ಬಣ್ಣಿಸಲಾಗಿದೆ. ಈ ಭೇದಾದಿಗುಣಗಳು ಎಲ್ಲರಿಗೂ ಉಪಾಸನಾಯೋಗ್ಯಗಳಲ್ಲ. ಅರ್ಥಭೇದಾತ್=ಫಲಭೇದವಿರುವುದರಿಂದ. ಆ ರೀತಿಯ ಉಪಾಸನೆಯ ಫಲ ದುಷ್ಟಹಿಂಸೆ. ಅದು ಯತಿಗಳಿಗೆ ನಿಷಿದ್ಧವಾದುದು.

## ಅದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ವೇಧಾದ್ಯರ್ಥಭೇದಾತ್ ॥** ಆಥರ್ವಣಶಾಖೆಯವರು ಉಪನಿಷತ್ತಿನ ಆರಂಭದಲ್ಲಿ 'ಸರ್ವಂ ಪ್ರವಿಧ್ಯ, ಹೃದಯಂ ಪ್ರವಿಧ್ಯ, ಧಮನೀ ಪ್ರವೃಜ್ಯ' ಎಂಬ ಮಂತ್ರವನ್ನು ಪಠಿಸುತ್ತಾರೆ. ತಾಂಡ್ಯಾಯನಶಾಖೆಯವರು 'ದೇವ ಸವಿತಃ ಪ್ರಸುವ ಯಜ್ಞಮ್' ಎಂಬ ಮಂತ್ರವನ್ನು ಪಠಿಸುತ್ತಾರೆ. ತೈತ್ತಿರೀಯರು 'ಶಂನೋ ಮಿತ್ರಃ ಶಂ ವರುಣಃ' ಮಂತ್ರವನ್ನು ಪಠಿಸುತ್ತಾರೆ. ವಾಜಸನೇಯಶಾಖೆಯವರು 'ದೇವಾ ಹ ವೈ ಸತ್ರಂ ನಿಷೇಧುಃ' ಎಂಬ ಪ್ರವರ್ಗ್ಯಬ್ರಾಹ್ಮಣವನ್ನು ಪಠಿಸುತ್ತಾರೆ. ಮೊದಲನೆಯ ಮಂತ್ರ ಅಭಿಚಾರಕ್ರಿಯಾಂಗ, ಪ್ರವರ್ಗ್ಯಕರ್ಮ ಯಜ್ಞಾಂಗ. ಈ ಮಂತ್ರಗಳು ಮತ್ತು ಪ್ರವರ್ಗ್ಯಾದಿಕರ್ಮಗಳು ವಿದ್ಯಾಂಗಗಳಲ್ಲ. ವೇಧಾದಿ='ಹೃದಯಂ ಪ್ರವಿಧ್ಯ' ಇತ್ಯಾದಿ ಮಂತ್ರಗಳಿಂದ ನಡೆಸಲಾಗುವ ಅಭಿಚಾರಕ್ರಿಯೆಗಳಲ್ಲಿ ಮಂತ್ರಗಳ ಅರ್ಥವು

ಭಿನ್ನವಾಗಿದೆ. ಅದಕ್ಕೂ ವಿದ್ಯೋಪಾಸನೆಗೂ ಸಂಬಂಧವಿಲ್ಲ. ಆದ್ದರಿಂದ ಅವುಗಳು ವಿದ್ಯಾಂಗಗಳಲ್ಲ.

ವಿಮರ್ಶೆ—ವಿದ್ಯಾಭೇದವನ್ನು ವಿಚಾರ ಮಾಡುವ ಈ ಪಾದದಲ್ಲಿ ಪ್ರಕೃತ ವಿಚಾರವು ಅಸಂಗತವಾದುದು. ವಿದ್ಯೆಗಳು ಉಪಾಸನಾರೂಪವಾಗಿವೆ. ಉಪಾಸನಾ ಚಿತ್ತೈಕಾಗ್ರ್ಯಸಂಪಾದನೆ. ಅದಕ್ಕೆ ವಿರೋಧಿಯಾದುದು ಕರ್ಮಾಚರಣೆ. ಅದು ವಿದ್ಯಾಂಗವಾಗುವುದಾದರೂ ಹೇಗೆ?

ವಿಶಿಷ್ಟಾದ್ವೈತದ ದರ್ಶನದಲ್ಲೂ ಇದೇ ಅರ್ಥವನ್ನು ಹೇಳಲಾಗಿದೆ.

ಇಲ್ಲಿಗೆ ವೇಧಾದ್ಯಧಿಕರಣವು ಮುಗಿಯಿತು.

## ೧೭. ಹಾನ್ಯಧಿಕರಣಮ್

ಮುಕ್ತಸ್ಯೋಪಾಸನಾ ಕರ್ತವ್ಯಾ ನವೇತಿ । ಅತೋಽಬ್ರವೀತ್-

**॥ ಓಂ ಹಾನೌ ತೂಪಾಯನಶಬ್ದಶೇಷತ್ವಾತ್**

**ಕುಶಾಚ್ಛಂದಸ್ತುತ್ಯುಪಗಾನವತ್ ತದುಕ್ತಮ್ ಓಂ ॥ ೨೭ ॥**

ನಿಯತಸ್ವಾಧ್ಯಾಯಾನಂತರಂ ಸ್ವೇಚ್ಛಯಾ ಕುಶಾಗ್ರಹಣಸ್ತುತ್ಯುಪಗಾನವದೇವ ಮೋಕ್ಷ ಉಪಾಸನಾದಿಃ ।

'ಬ್ರಹ್ಮವಿದಾಪ್ನೋತಿ ಪರಮ್'(ತೈ.ಉ. 2.1.1)ಇತಿ ಮೋಕ್ಷವಾಕ್ಯಶೇಷತ್ವಾದಿ-ತರೇಷಾಮ್ । ತಚ್ಚೋಕ್ತಮ್- 'ಏತತ್ ಸಾಮ ಗಾಯನ್ನಾಸ್ತೇ' (ತೈ.3.10) ಇತ್ಯಾದಿ । ಬ್ರಹ್ಮತರ್ಕೇ ಚ-

'ಮುಕ್ತಾ ಅಪಿ ಹಿ ಕುರ್ವಂತಿ ಸ್ವೇಚ್ಛಯೋಪಾಸನಂ ಹರೇಃ ।
ನಿಯಮಾನಂತರಂ ವಿಪ್ರಾಃ ಕುಶಾದ್ಯೈರಪ್ಯಧೀಯತೇ ॥' ಇತಿ ॥
'ಕೃಷ್ಣೋ ಮುಕ್ತೈರಿಜ್ಯತೇ ವೀತಮೋಹೈಃ' । ಇತಿ ಚ ಭಾರತೇ ।

ಮುಕ್ತರಾದವರು ಬ್ರಹ್ಮೋಪಾಸನೆಯನ್ನು ಮಾಡಬೇಕೋ ಬೇಡವೋ ಎಂಬ ಸಂದೇಹಕ್ಕೆ ಈ ಸೂತ್ರದಲ್ಲಿ ಸಮಾಧಾನ ನೀಡಲಾಗಿದೆ.

ನಿಯತವಾದ ಬ್ರಹ್ಮಯಜ್ಞಾನಂತರದಲ್ಲೂ ಸ್ವೇಚ್ಛೆಯಿಂದ ಕುಶಗ್ರಹಣಪೂರ್ವಕ ವೇದಮಂತ್ರಗಾನ ಮಾಡುವಂತೆ ಮೋಕ್ಷದಲ್ಲಿ ಉಪಾಸನೆ ಐಚ್ಛಿಕ. ''ಬ್ರಹ್ಮವಿದಾಪ್ನೋತಿ ಪರಮ್'' ಎಂಬ ಮೋಕ್ಷವಿಧಾಯಕವಾದ ವಾಕ್ಯದ ಶೇಷವಾದುದು ಉಪಾಸನಾದಿ ವಿಧಾಯಕ ವಾಕ್ಯಗಳು. (ಮೋಕ್ಷರೂಪ ಫಲವು ಲಭ್ಯವಾದ ಮೇಲೆ ಉಪಾಸನಾದಿ ನಿರ್ಬಂಧವಿಲ್ಲ.) ಬ್ರಹ್ಮತರ್ಕದಲ್ಲಿ ಹಾಗೆಯೇ ಇದೆ—ಮುಕ್ತರೂ ಸಹ ಸ್ವೇಚ್ಛೆಯಿಂದ ಶ್ರೀಹರಿಯ ಉಪಾಸನೆಯನ್ನು ಮಾಡುತ್ತಾರೆ. ಬ್ರಹ್ಮಯಜ್ಞನಿಯಮಾನಂತರದಲ್ಲಿ ಬ್ರಾಹ್ಮಣರು ದರ್ಭೆ ಹಿಡಿದು ಅಧ್ಯಯನ ಮುಂದುವರಿಸುವಂತೆ (ಕೈಯಲ್ಲಿ ದರ್ಭೆಗಳನ್ನು ಹಿಡಿದುಕೊಂಡೇ ಬ್ರಹ್ಮಯಜ್ಞವನ್ನು ಮಾಡಬೇಕು)

ಮಹಾಭಾರತದಲ್ಲಿ ಹೀಗಿದೆ—'ಭಗವಂತನು ಅಜ್ಞಾನವನ್ನು ಕಳೆದುಕೊಂಡ ಮುಕ್ತರಿಂದಲೂ ಇಜ್ಯನಾಗಿದ್ದಾನೆ.' ಮುಕ್ತರು ಯಾಗವನ್ನು ಮಾಡುತ್ತಾರೆ.(ತ.ಪ್ರ.)

ವಿವರಣೆ—ಬ್ರಾಹ್ಮಣರು ಪ್ರತಿನಿತ್ಯವೂ ಪೂರ್ವಾಭಿಮುಖವಾಗಿ ಕುಳಿತು ವೇದಪಾರಾಯಣ ಮಾಡಬೇಕು. ಆ ಸಂದರ್ಭದಲ್ಲಿ ಕೈಯಲ್ಲಿ ದರ್ಭೆಯನ್ನು ಹಿಡಿದಿರಬೇಕು. ಇದೇ ಬ್ರಹ್ಮಯಜ್ಞ. ಈ ಬ್ರಹ್ಮಯಜ್ಞ ಮುಗಿದ ಮೇಲೂ ಕೆಲವರು ಸಾಮಗಾನವನ್ನು ಮಾಡುತ್ತಾರೆ. ಅದಕ್ಕೆ ವಿಧಿಯ ನಿರ್ಬಂಧವಿಲ್ಲ. ಸ್ವೇಚ್ಛೆಯಿಂದಲೇ ಮಾಡಲಾಗುತ್ತದೆ. ಅದರಂತೆ, ಮೋಕ್ಷಲಭ್ಯವಾಗುವವರೆಗೆ ಉಪಾಸನೆಯ ನಿರ್ಬಂಧ. ಮೋಕ್ಷದಲ್ಲಿ ಧ್ಯಾನ-ಪ್ರವಚನಾದಿಗಳು ಐಚ್ಛಿಕ. ಅದಕ್ಕೆ ಫಲವಿಲ್ಲ.

**॥ ಓಂ ಸಾಂಪರಾಯೇ ತರ್ತವ್ಯಾಭಾವಾತ್**
**ತಥಾ ಹ್ಯನ್ಯೇ ಓಂ ॥ ೨೮ ॥**

**ಸ್ವೇಚ್ಛಯೇತ್ಯಂಗೀಕರ್ತವ್ಯಮ್ । ಮುಕ್ತಸ್ಯ ತೀರ್ಣತ್ವಾತ್ ।**

**'ತೀರ್ಣೋ ಹಿ ತದಾ ಸರ್ವಾನ್ ಶೋಕಾನ್ ಹೃದಯಸ್ಯ ಭವತಿ' (ಬೃ.ಉ. 3.3.22) ಇತಿ ಹ್ಯನ್ಯೇ ಪಠಂತಿ ॥**

**ವಾಯುಪ್ರೋಕ್ತೇ ಚ-**

**'ಸ್ಥಿತಪ್ರಜ್ಞತ್ವಮಾಪ್ತಾ ಯೇ ಜ್ಞಾನೇನ ಪರಮಾತ್ಮನಃ ।**
**ಬ್ರಹ್ಮಲೋಕಂ ಗತಾಃ ಸರ್ವೇ ಬ್ರಹ್ಮಣಾ ಚ ಪರಂ ಗತಾಃ ।**
**ತೀರ್ಣತರ್ತವ್ಯಭಾಗಾಶ್ಚ ಸ್ವೇಚ್ಛಯೋಪಾಸತೇ ಪರಮ್ ॥' ಇತಿ ॥**

ಮುಕ್ತಿಯಲ್ಲಿ ಉಪಾಸನೆಯು ಸ್ವಚ್ಛೆಯಿಂದಲೇ ಹೊರತು, ಅನಿಷ್ಟ ನಿವಾರಣೆಗಾಗಿ ಅಲ್ಲ, ಏಕೆಂದರೆ, ಮುಕ್ತನಾದವನು ಸಕಲ ಅನಿಷ್ಟಗಳನ್ನೂ ದಾಟಿರುತ್ತಾನೆ. ಬೃಹದಾರಣ್ಯಕ ಶ್ರುತಿ ಹೇಳುತ್ತದೆ—'ಹೃದಯಸನ್ನಿಹಿತನಾದ ಬಿಂಬರೂಪದ ಶೇಷನಾದ ಮುಕ್ತಜೀವನು (ಬಿಂಬರೂಪದ ಅಭಿವ್ಯಕ್ತಿಯೆ ಜೀವನಿಗೆ ಬಿಂಬದ ಶೇಷತ್ವ) ಸರ್ವಾನಿಷ್ಟಗಳನ್ನು ಕಳೆದುಕೊಳ್ಳುತ್ತಾನೆ' ಎಂದು. ವಾಯುಪ್ರೋಕ್ತದಲ್ಲಿ ಹೀಗಿದೆ—ಪರಮಾತ್ಮನ ಪರೋಕ್ಷಜ್ಞಾನದಿಂದ ಅಪರೋಕ್ಷಜ್ಞಾನವನ್ನು ಪಡೆದವರು ಯಾರಿದ್ದಾರೋ ಅವರೆಲ್ಲರೂ ಬ್ರಹ್ಮಲೋಕಕ್ಕೆ ಹೋಗಿ ಪರಾಂತಕಾಲದಲ್ಲಿ ಬ್ರಹ್ಮನೊಂದಿಗೆ ಪರಬ್ರಹ್ಮನನ್ನು ಹೊಂದಿ, ತರ್ತವ್ಯಭಾಗವನ್ನು (ಪಡೆಯಬೇಕಾಗಿದ್ದ ದುಃಖಸಾಗರವನ್ನು) ತೀರ್ಣ=ದಾಟಿದವರಾದರೂ ಸ್ವೇಚ್ಛೆಯಿಂದಲೇ ಉಪಾಸನಾದಿಗಳನ್ನು ಮಾಡುತ್ತಾರೆ.

**ವಿವರಣೆ**—ನಿಷ್ಫಲವಾದ ಕೆಲಸವನ್ನು ಯಾರೂ ಸ್ವೇಚ್ಛೆಯಿಂದಲೂ ಮಾಡುವುದಿಲ್ಲ. ಹಾಗಾಗಿ ಮೋಕ್ಷದಲ್ಲಿ ಮನಸ್ಸಿಗೆ ಬೇಸರವಾದಾಗ ಅದರ ಪರಿಹಾರಕ್ಕಾಗಿ ಮುಕ್ತರು ಬ್ರಹ್ಮಧ್ಯಾನ ಮಾಡುತ್ತಾರೆ, ಎಂಬ ಆಕ್ಷೇಪವನ್ನು ಇಲ್ಲಿ ನಿರಾಕರಿಸುತ್ತಾರೆ.

'ಹೃದಯಸ್ಯ ಭವತಿ' ಎಂಬ ಬೃಹದಾರಣ್ಯಕದ ಶಬ್ದಕ್ಕೆ 'ಹೃದಿ ಅಯನಾತ್ ಹೃದಯಃ=ಪರಮೇಶ್ವರಃ' ಎಂದು ತತ್ತ್ವಪ್ರದೀಪದಲ್ಲಿ ಅರ್ಥವನ್ನು ಹೇಳಲಾಗಿದೆ. ತತ್ತ್ವಪ್ರಕಾಶಿಕಾದಲ್ಲಿ 'ಹೃದ್ಗತಸ್ಯ ವಿಷ್ಣೋಃ ಶೇಷಭೂತೋ ಭವತಿ' ಎಂದು ವಿವರಿಸಲಾಗಿದೆ. ಶೇಷಭೂತಃ ಎಂಬ ಪದಕ್ಕೆ 'ಭೃತ್ಯಭೂತಃ' ಎಂದೂ ವಿವರಣೆ ಟಿಪ್ಪಣಿಯಲ್ಲಿ ಇದೆ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ಹಾನೌ ತೂಪಾಯನಶಬ್ದಶೇಷತ್ವಾತ್ ಕುಶಾಚ್ಛಂದಸ್ತುತ್ಯುಪಗಾನವತ್ ತದುಕ್ತಮ್ ಓಂ ॥** (ಅತ್ರ ಮುಕ್ತಾವಪಿ ಉಪಾಸ್ಯಸ್ತಿತ್ವಮ್ ಉಚ್ಯತೇ। ತುರೇವ। ಗಾನವದೇವ ಇತ್ಯನ್ವೇತಿ ಇತಿ ಭಾಷ್ಯೇ ಭಾತಿ। ಉಪಾಸನಮ್ ಇತಿ ಪ್ರಸ್ತಾವಾದನ್ವೇತಿ। ಸ್ವೇಚ್ಛಯೇತಿ ಚ ದೃಷ್ಟಾಂತಬಲಾತ್। ತೇನ ವಾ ತೋರನ್ವಯಃ।

ಹಾನೌ=ಬಂಧಹಾನಿರೂಪಮುಕ್ತೌ ಉಪಾಸನಮಸ್ತಿ ಮುಕ್ತಾನಾಮ್। ತದಪಿ ಸ್ವೇಚ್ಛಯಾ। ನ ವಿಧಿತಃ। ಆದ್ಯಂ ಕುತಃ ? ತದುಕ್ತಂ–ತತ್=ಉಪಾನಮ್ ಉಕ್ತಮ್। 'ಏತತ್ ಸಾಮ ಗಾಯನ್ನಾಸ್ತೇ' ಇತ್ಯಾದೌ ಯತೋಽತಃ, ಇತಿ ಯೋಜ್ಯಮ್।

ಸ್ವೇಚ್ಛಯೇತಿ ದ್ವಿತೀಯಂ ಕುತಃ? ಉಪಾಯನಶಬ್ದಶೇಷತ್ವಾತ್। ಉಪಾಯನಂ=ಮೋಕ್ಷಃ। ಮೋಕ್ಷವಾಕ್ಯಶೇಷತ್ವಾತ್। ಉಪಾಸನಾವಿಧೀನಾಮ್ ಇತಿ ಶೇಷಃ 'ಬ್ರಹ್ಮವಿದಾಪ್ನೋತಿ ಪರಮ್' ಇತಿ ಮೋಕ್ಷವಾಕ್ಯೇ ಜ್ಞಾನಾತ್ ಮೋಕ್ಷಃ ಇತ್ಯುಕ್ತೇ, ತತ್ ಕಥಂ ಸ್ಯಾತ್, ಇತ್ಯತಃ ಉಪಾಸನಾವಿಧಿಪ್ರವೃತ್ತೇಃ ಮೋಕ್ಷಸಿದ್ಧ್ಯರ್ಥಂ ಪ್ರಕೃತಾ ವಿಧಯಃ ಮುಕ್ತಿವಿಷಯಾಃ ಕಥಂ ಸ್ಯುಃ ? ಇತಿ ಭಾವಃ। ಸ್ವೇಚ್ಛಯಾ ಉಪಾಸ್ತಿಃ ಕಥಮ್ ? ಕುಶಾಚ್ಛಂದಸ್ತುತ್ಯುಪಗಾನವತ್। ಕುಶೈಃ-ಕುಶಗ್ರಹಣೇನ ಇತ್ಯರ್ಥಃ। ಆಚ್ಛಂದೇನ=ಸ್ವೇಚ್ಛಯಾ। ಸ್ತುತಿಃ=ಮಂತ್ರಸಾಧ್ಯ-ಕ್ರಿಯಾವಿಶೇಷಃ। ಉಪಗಾನಂ-ಸಾಮಸಾಧ್ಯಃ। ತದ್ವತ್=ಮಂತ್ರಾಧ್ಯಯನವತ್, ಇತ್ಯರ್ಥಃ। ನಿಯತ-ಬ್ರಹ್ಮಯಜ್ಞಾನಂತರ ಮಪಿ ದ್ವಿಜನ್ಮನಾಂ ಸ್ವೇಚ್ಛಯೈವ ಕುಶಧಾರಣೇನ ಮಂತ್ರಾಧ್ಯಯನಂ ಯಥಾ ತಥೇತಿಭಾವಃ।

ಹಾನೌ ಇತ್ಯುಕ್ತಿಃ-ಸರ್ವಕ್ಲೇಶಬಂಧತ್ಯಾಗೋ ಮುಕ್ತಿರಿತಿ ತತ್‌ಸ್ವರೂಪೋಕ್ತ್ಯರ್ಥಾ। ಸಾಪಿ ಸ್ವೇಚ್ಛಯಾ ಇತ್ಯಸ್ಯ ಉಪಪಾದನಾರ್ಥಾ। ವಿವರಿಷ್ಯತೇ ಚೈತತ್। ಉಪಾಯನೇತ್ಯುಕ್ತಿರಪಿ-ಅಯನಂ=ಜ್ಞಾನಂ ತಸ್ಯ ಉಪ=ಸಮೀಪೇ ಗಮನಂ-ಉಪಾಯನಮ್ ಇತಿ ಮುಕ್ತೇಃ ಜ್ಞಾನಸಾಧ್ಯತ್ವಾರ್ಥಾ। ಸಾ ಚ ತಚ್ಛೇಷತ್ವಮ್ ಉಕ್ತದಿಶಾ ವ್ಯಕ್ತೀಕರ್ತುಮ್। ಆಬಂಧಹಾನೇಃ ವಿಧಿತಃ, ಹಾನೌ ತು ಸ್ವೇಚ್ಛಯಾ ಇತಿ ವಿಶೇಷದ್ಯೋತಕಃ ತುರಿತಿ ತತ್ತ್ವಪ್ರದೀಪೇ ಭಾತಿ।)

ಹಾನೌ=ದುಃಖಹಾನಿರೂಪವಾದ ಮೋಕ್ಷದಲ್ಲಿ, ಉಪಾಸನೆಯು ಐಚ್ಛಿಕ. ಉಪಾಯನ ಶಬ್ದಶೇಷತ್ವಾತ್, ಉಪಾಯನ=ಮೋಕ್ಷ. ಮೋಕ್ಷಶಬ್ದ ಎಂದರೆ ಮೋಕ್ಷವನ್ನು ಹೇಳುವ ಆಗಮ-ಬ್ರಹ್ಮವಿದಾಪ್ನೋತಿ ಪರಮ್-ಎಂಬ ಉಪನಿಷತ್ತು. ಆ ವಿಧಿಯ ಶೇಷವಾಗಿದೆ ಉಪಾಸನಾವಿಧಿಗಳು. ಬ್ರಹ್ಮಜ್ಞಾನಿಯು ಬ್ರಹ್ಮನನ್ನು ಹೊಂದುತ್ತಾನೆ, ಎಂದು ವಿಧಿವಾಕ್ಯವು ಹೇಳಿದಾಗ ಬ್ರಹ್ಮನ ಜ್ಞಾನ(ಅಪರೋಕ್ಷ) ಬರುವುದು ಹೇಗೆ? ಎಂದು ಜಿಜ್ಞಾಸೆ ಬರುತ್ತದೆ. ಅದರ ಶಾಂತಿಗಾಗಿ 'ಆತ್ಮಾ ವಾರೇ ದ್ರಷ್ಟವ್ಯಃ ಶ್ರೋತವ್ಯೋ ನಿಧಿಧ್ಯಾಸಿತವ್ಯಃ' ಎಂಬ ಉಪಾಸನಾವಿಧಿ ಇದೆ. ಹೀಗೆ ಉಪಾಸನಾವಿಧಿಯು ಮೋಕ್ಷಸಾಧನ ಬ್ರಹ್ಮಾಪರೋಕ್ಷವಿಧಿಯ ಶೇಷವಾದುದರಿಂದ ಮೋಕ್ಷವಾಗುವವರೆಗೆ ಮಾತ್ರ ಉಪಾಸನೆಯನ್ನು ಮಾಡಿದರೆ ಸಾಕು. ಆಮೇಲಿನ ಉಪಾಸನೆ ಸ್ವೇಚ್ಛೆಯಿಂದ. ಅದಕ್ಕೆ ಉದಾಹರಣೆ-'ಕುಶಾಚ್ಛಂದ-ಸ್ತುತ್ಯುಪಗಾನವತ್' ಕುಶೈಃ=ದರ್ಭೆಯ ಗ್ರಹಣದಿಂದ ಆಚ್ಛಂದೇನ=ಸ್ವೇಚ್ಛೆಯಿಂದ ಮಾಡುವ ಸ್ತುತಿ ಮತ್ತು ಉಪಗಾನದಂತೆ. ಸ್ತುತಿ ಎಂದರೆ ಮಂತ್ರ, ಉಪಗಾನವೆಂದರೆ ಸಾಮಗಾನ. ವಿಧಿ

ವಿಹಿತವಾದ ಬ್ರಹ್ಮಯಜ್ಞ ಮುಗಿದ ಮೇಲೂ ಕುಶಹಸ್ತರಾಗಿ ಮಾಡುವ ಮಂತ್ರಪಠನ ಮತ್ತು ಸಾಮಗಾನದಂತೆ.

''ತದುಕ್ತಮ್, ತತ್ ಸ್ವೇಚ್ಛಯಾ ಉಪಾಸನೆಯು ಉಕ್ತಮ್=ಮುಕ್ತಾ ಅಪಿಹಿ ಕುರ್ವಂತಿ ಸ್ವೇಚ್ಛಯೋಪಾಸನಂ ಹರೇಃ ॥'' ಎಂಬ ಸ್ಮೃತಿಯಲ್ಲಿ ಹೇಳಲ್ಪಟ್ಟಿದೆ.

**॥ ಓಂ ಸಾಂಪರಾಯೇ ತರ್ತವ್ಯಾಭಾವಾತ್ ತಥಾ ಹ್ಯನ್ಯೇ ಓಂ ॥** (ಸಾಂಪರಾಯೇ=ಮೋಕ್ಷೇ, ತರ್ತವ್ಯಸ್ಯ=ನಿರಸನೀಯಸ್ಯ ಅನಿಷ್ಟಸ್ಯ ಅಭಾವಾತ್। ಕುತಃ? ಹಿ=ಯಸ್ಮಾತ್ ಅನ್ಯೇ ಶಾಖಿನಃ ತಥಾ ಪಠಂತಿ–'ತೀರ್ಣೋ ಹಿ ತದಾ ಸರ್ವಾನ್ ದುಃಖಾನ್ ಹೃದಯಸ್ಯಭವತಿ' ಇತಿ । ತಸ್ಮಾತ್ ಇತ್ಯರ್ಥಃ ।)

ಸಾಂಪರಾಯೇ=ಮೋಕ್ಷದಲ್ಲಿ ತರ್ತವ್ಯಾಭಾವಾತ್–ತರ್ತವ್ಯಸ್ಯ=ಕಳೆದುಕೊಳ್ಳಬೇಕಾದ ಅನಿಷ್ಟಗಳು ಅಭಾವಾತ್=ಇಲ್ಲವಾದ ಕಾರಣ–ಮುಕ್ತರು ಸ್ವೇಚ್ಛೆಯಿಂದಲೇ ಉಪಾಸನಾದಿಗಳನ್ನು ಮಾಡುತ್ತಾರೆ, ಅನಿಷ್ಟಪರಿಹಾರಕ್ಕಾಗಿ ಅಲ್ಲ. ಅನ್ಯೇ= ವಾಜಸನೇಯ ಶಾಖೆಯವರು ತಥಾಹಿ=ಹಾಗೆಯೇ ಹೇಳುತ್ತಾರೆ—ಮೋಕ್ಷದಲ್ಲಿ ಅನಿಷ್ಟಗಳು ಇಲ್ಲವೆಂದೇ ಹೇಳುತ್ತಾರೆ.

## ಅದ್ವೈತದರ್ಶನದಲ್ಲಿ ಸೂತ್ರಾರ್ಥ

ಅದ್ವೈತ ಮತ್ತು ವಿಶಿಷ್ಟಾದ್ವೈತಭಾಷ್ಯಗಳಲ್ಲಿ ಈ ಎರಡು ಸೂತ್ರಗಳನ್ನು ಪ್ರತ್ಯೇಕ ಅಧಿಕರಣಗಳನ್ನಾಗಿ ಪರಿಗಣಿಸಲಾಗಿದೆ. ಎರಡನೆಯ ಸೂತ್ರದೊಂದಿಗೆ ಮುಂದಿನ 29ನೆಯ ಸೂತ್ರವನ್ನು ಸೇರಿಸಿ ಎರಡು ಸೂತ್ರಗಳ ಒಂದು ಅಧಿಕರಣ.

**॥ ಹಾನೌ ತೂಪಾಯನಶಬ್ದಶೇಷತ್ವಾತ್ ಕುಶಾಚ್ಛಂದಸ್ತುತ್ಯುಪಗಾನವತ್ ತದುಕ್ತಮ್ ॥** ಛಾಂದೋಗ್ಯದಲ್ಲಿ ''ಅಶ್ವಾ ಇವ ರೋಮಾಣಿ ವಿಧೂಯ ಪಾಪಂ, ಚಂದ್ರ ಇವ ರಾಹೋರ್ಮುಖಾತ್ ಪ್ರಮುಚ್ಯ, ಧೂತ್ವಾ ಶರೀರಮಕೃತಂ ಕೃತಾತ್ಮಾ ಬ್ರಹ್ಮಲೋಕಮಭಿಸಂಭವಾಮಿ'' ಎಂದು ನಿರ್ಗುಣವಿದ್ಯೆಯ ಫಲವನ್ನು ಸ್ತೋತ್ರ ಮಾಡಲಾಗಿದೆ. ಕುದುರೆಯು ಮೈ ಅಲುಗಿಸಿ ತನ್ನ ರೋಮಗಳನ್ನು ಬೀಳಿಸುವಂತೆ, ಚಂದ್ರನು ರಾಹುಮುಕ್ತನಾಗುವಂತೆ ಜ್ಞಾನಿಯು ಪುಣ್ಯಪಾಪಗಳನ್ನು ಕಳೆದುಕೊಂಡು ಮುಕ್ತನಾಗುತ್ತಾನೆ, ಎಂದು ಅಭಿಪ್ರಾಯ. ಕೌಷೀತಕೀಉಪನಿಷತ್ತಿನಲ್ಲಿ 'ತತ್ ಸುಕೃತ–ದುಷ್ಕೃತೇ ವಿಧೂನುತೇ, ತಸ್ಯ ಪ್ರಿಯಾ ಜ್ಞಾತಯಃ ಸುಕೃತಮುಪಯಂತಿ, ಅಪ್ರಿಯಾ ದುಃಷ್ಕೃತಮ್' ಎಂದಿದೆ. ಜ್ಞಾನಿಯ ಪುಣ್ಯಫಲವು ಬಂಧುಗಳಿಗೆ ಸಿಗುತ್ತದೆ,

ಪಾಪಫಲವು ಶತ್ರುಗಳಿಗೆ ದೊರೆಯುತ್ತದೆ, ಎಂದರ್ಥ. ಇದು ಸಗುಣವಿದ್ಯೆಯ ಫಲ. ಒಂದು ವಿಧಿವಾಕ್ಯದಲ್ಲಿ ಹೇಳಿದ್ದು ಇನ್ನೊಂದು ವಿಧಿಗೆ ಅನ್ವಯಿಸುವುದಿಲ್ಲ. ಪ್ರಕೃತ ವಿದ್ಯೆಯ ಪ್ರಶಂಸೆಗೆ ಹೊರಟ ಅರ್ಥವಾದ ವಾಕ್ಯಗಳಿವು. ಆದ್ದರಿಂದ ಒಂದರಲ್ಲಿ ಹೇಳಿದ್ದನ್ನು ಇನ್ನೊಂದಕ್ಕೂ ಅನ್ವಯಿಸಬಹುದು. ಸಗುಣವಿದ್ಯೆಯ ಅರ್ಥವಾದದಲ್ಲಿ 'ವಿಧೂನುತೇ' ಎಂದು ಹೇಳಿರುವ 'ಹಾನವು' 'ಉಪಯಂತಿ' ಎಂದು ಹೇಳಿದ ಉಪಾಯನಶಬ್ದದ ಜೊತೆಯಲ್ಲಿದೆ. ನಿರ್ಗುಣವಿದ್ಯೆಯಲ್ಲಿ ಅಶ್ವರೋಮದೃಷ್ಟಾಂತ ದಿಂದ ಹಾನವು ತಿಳಿಯಲ್ಪಡುತ್ತದೆ. ಅಶ್ವರೋಮಗಳ ನಾಶವಲ್ಲ, ತ್ಯಾಗಮಾತ್ರ. ಬಿದ್ದ ರೋಮಗಳು ನೆಲದಲ್ಲಿ ಉಳಿಯುತ್ತವೆ. ಹೀಗೆ ಅಲ್ಲಿ ತ್ಯಾಗವು ಶ್ರುತವಾದುದರಿಂದ 'ಉಪಾಯನವೂ' ಲಭ್ಯವಾಗುತ್ತದೆ. ಅರ್ಥಾತ್ ಜ್ಞಾನಿಯ ಪಾಪವೂ ಪ್ರಾಯಶ್ಚಿತ್ತದಿಂದ ನಾಶವಾದಂತೆ ನಾಶವಾಗುವುದಿಲ್ಲ. ಅವನಲ್ಲಿರುವ ಪಾಪ–ಪುಣ್ಯಗಳು ಶತ್ರು–ಮಿತ್ರರಲ್ಲಿ ಫಲಿಸುತ್ತವೆ. ತಂದೆ ಮಾಡಿದ ವೈಶ್ವಾನರೇಷ್ಟ್ಯಾದಿ ಫಲಗಳು ಮಗನಿಗೆ ಸಿಗುವಂತೆ.

ಹೀಗೆ ''ಹಾನೌ ತ್ವೂಯಮಾಣಾಯಾಂ ಉಪಾಯನಂ ಸನ್ನಿಪತೇತ್ । ಉಪಾಯನಶಬ್ದಸ್ಯ ಹಾನಶಬ್ದಶೇಷತ್ವಾತ್'' ಹಾನಶಬ್ದವು ಉಪಾಯನಶಬ್ದಸಹ ಪಠಿತವಾದುದರಿಂದ ಹಾನವನ್ನು ತಿಳಿಸುವ ನಿರ್ಗುಣವಾಕ್ಯದಲ್ಲಿ ಉಪಾಯನವೂ ವಿವಕ್ಷಿತ. ಅದಕ್ಕೆ ಉದಾಹರಣೆ—ಕುಶಾ, ಛಂದಸ್ಸು, ಸ್ತುತಿ, ಉಪಗಾನ. ಬಾಲ್ಲವೇಯ ಶಾಖೆಯಲ್ಲಿ 'ಕುಶಾ ವಾನಸ್ಪತ್ಯಾಃ' ಎಂದಿದೆ. ಮಂತ್ರಸಂಖ್ಯಾಗಣನೆಗೆ ಬಳಸುವ ಕಡ್ಡಿಗಳು 'ಕುಶಾ'. ಅದು ವಾನಸ್ಪತ್ಯಾಃ=ಶ್ರೇಷ್ಠ ಮರದ್ದಾಗಿರಬೇಕು ಎಂದರ್ಥ. ಶಾಟ್ಯಾಯನ ಶಾಖೆಯಲ್ಲಿ 'ಔದುಂಬರ್ಯಃ ಕುಶಾಃ' ಎಂದಿದೆ. ಅತ್ತಿಯ ಮರದ ಕುಶಗಳು ಎಂದು ಅಲ್ಲಿ ತಿಳಿಸಲಾಗಿದೆ. ಇವೆರಡೂ ಏಕವಾಕ್ಯತಾಪನ್ನವಾಗುತ್ತದೆ.

2. 'ಛಂದೋಭಿಸ್ತುವತೇ' ಎಂದು ಸಾಮಾನ್ಯವಾಗಿ ಛಂದಸ್ಸುಗಳಿಂದ ಸ್ತೋತ್ರವು ವಿಹಿತವಾಗಿದೆ. ಛಂದುಸ್ಸು ದೈವ, ಆಸುರ ಎಂದು ಎರಡು ವಿಧವಾಗಿದೆ. ಒಂಭತ್ತು ಅಕ್ಷರದ ಛಂದಸ್ಸು ಆಸುರ. ಉಳಿದಿರುವ ಛಂದಸ್ಸು ದೈವ. ಇವೆರಡರಲ್ಲಿ ಯಾವುದು ಮೊದಲು? ಪೈಂಗಿಶ್ರುತಿ ಹೇಳಿದೆ. 'ದೇವಛಂದಾಸಿ ಪೂರ್ವಾಣಿ' ಎಂದು. ಹೀಗೆ ಈ ಎರಡು ಶ್ರುತಿವಾಕ್ಯಗಳು ಜೊತೆ ಸೇರಿ ಅರ್ಥವನ್ನು ಹೇಳುತ್ತವೆ.

3. ಸ್ತುತಿ–ಅತಿರಾತ್ರದಲ್ಲಿ ಷೋಡಶಿಗ್ರಹಣ (ಪಾತ್ರವಿಶೇಷಗ್ರಹಣ) ಮಾಡುವಾಗ ಹೇಳಬೇಕಾದ ಸ್ತೋತ್ರಕಾಲವನ್ನು 'ಸಮಯಾಧ್ಯುಷಿತೇ ಸೂರ್ಯೇ' ಸೂರ್ಯೋದಯ ಕಾಲ ಎಂದು ಆರ್ಚರು (ಋಚೋ ಯೇ ಅಧೀಯತೇ) ಹೇಳುತ್ತಾರೆ. ಕಾಲವಿಶೇಷ

ಬೋಧಕವಾದ ಈ ವಾಕ್ಯವು 'ಹಿರಣ್ಯೇನ ಷೋಡಶಿನಸ್ತೋತ್ರಮುಪಾಕರೋತಿ' ಎಂಬ ವಾಕ್ಯದೊಂದಿಗೆ ಅನ್ವಯ ಹೊಂದುತ್ತದೆ.

4. ಉಪಗಾನ–'ಋತ್ವಿಜಃ ಉಪಗಾಯಂತಿ' ಎಂಬ ದೇಶಾಂತರಸ್ಥವಾಕ್ಯವು ಋತ್ವಿಕ್ಕುಗಳು ಗಾನ ಮಾಡಬೇಕು, ಎಂದು ಸಾಮಾನ್ಯವಾಗಿ ಹೇಳುತ್ತದೆ. ಇನ್ನೆಲ್ಲೋ ಇರುವ ವಾಕ್ಯವೊಂದು 'ನಾಧ್ವರ್ಯುರುಪಗಾಯತಿ' ಎಂದು ಅಧ್ವರ್ಯು ಎಂಬ ಋತ್ವಿಜನಿಗೆ ಗಾನಕರ್ತೃತ್ವವನ್ನು ನಿಷೇಧ ಮಾಡಿದೆ. ಅವೆರಡಕ್ಕೂ ಏಕವಾಕ್ಯತೆ ಇದೆ.

ಹೀಗೆ ವೇದದಲ್ಲಿ ಎಲ್ಲೋ ಇರುವ ಒಂದು ವಾಕ್ಯವು ಇನ್ನೆಲ್ಲೋ ಇರುವ ಮತ್ತೊಂದು ವಾಕ್ಯದೊಂದಿಗೆ ಅನ್ವಯವಾಗುವುದು ಕಂಡಿದೆ. ಅದರಂತೆ ಪ್ರಕೃತದಲ್ಲೂ 'ಹಾನ–ಉಪಾದನ'ಗಳನ್ನು ಹೇಳುವ ವಾಕ್ಯದ ಉಪಾದಾನವನ್ನು ಸುಕೃತ–ದುಷ್ಕೃತ ಹಾನ ಮಾತ್ರವನ್ನು ತಿಳಿಸುವ ವಾಕ್ಯದಲ್ಲೂ ಅನ್ವಯಿಸಿಕೊಳ್ಳಬೇಕು. ಅದರಿಂದ ಜ್ಞಾನಿಗಳ ಪಾಪ–ಪುಣ್ಯಗಳು ಶತ್ರು–ಮಿತ್ರರಿಗೆ ಸೇರುತ್ತವೆ, ಎಂದೇ ಅರ್ಥ.

ಹೀಗೆ, ಎರಡೂ ವಾಕ್ಯಗಳಿಗೆ ಅರ್ಥ ಹೇಳಲು ಬರುವಾಗ 'ವಿಕಲ್ಪ'ವನ್ನು ಸ್ವೀಕಾರ ಮಾಡಬಾರದು. ವಿಕಲ್ಪವೆಂದರೆ ಹಾಗೂ ಆಗಬಹುದು, ಹೀಗೂ ಆಗಬಹುದು ಎಂದು ಪರಿಗಣಿಸುವುದು. ಜ್ಞಾನಿಗಳ ಪುಣ್ಯನಾಶವೂ ಆಗಬಹುದು, ಮಿತ್ರರಿಗಾದರೂ ಹೋಗಬಹುದು, ಇದು ವಿಕಲ್ಪ. ಹೀಗೆ ವಿಕಲ್ಪ ಸ್ವೀಕಾರಮಾಡುವುದು ಎಲ್ಲ ಕಡೆಯೂ ಉಚಿತವಲ್ಲ ಎಂದು ಪೂರ್ವಮೀಮಾಂಸಾದಲ್ಲಿ ಹೇಳಲಾಗಿದೆ. (ತದುಕ್ತಮ್) '....ಅನ್ಯಾಯ್ಯತ್ವಾದ್ ವಿಕಲ್ಪಸ್ಯ' ಎಂದು ಅಲ್ಲಿನ ಸೂತ್ರಶೇಷ.

**ವಿಮರ್ಶೆ**—ವಿದ್ಯಾಭೇದ–ಅಭೇದಗಳ ಬಗ್ಗೆ ವಿಚಾರಕ್ಕಾಗಿ ಮೀಸಲಾಗಿರುವ ಈ ಪಾದದಲ್ಲಿ ವಿದ್ಯಾಫಲದ ಬಗ್ಗೆ ವಿಚಾರ ಅಸಂಗತ.

ನಿರ್ಗುಣ ವಿದ್ಯೆಯ ಫಲದಲ್ಲಿ ಅಶ್ವರೋಮದ ದೃಷ್ಟಾಂತದಿಂದ ಹಾನವು ಶ್ರುತವಾಗಿದೆ. ದೃಷ್ಟಾಂತದ ಸರ್ವ ಸಾಮ್ಯವು ಅನಪೇಕ್ಷಿತವಾದುದರಿಂದ 'ಅದರಂತೆ ಜ್ಞಾನಿಯೂ ತನ್ನ ಪುಣ್ಯಪಾಪಗಳನ್ನು ಕಳೆದುಕೊಳ್ಳುತ್ತಾನೆ' ಎಂದಿಷ್ಟೇ ಅಂಶದಲ್ಲಿ ಸಾಮ್ಯವನ್ನು ವಿವಕ್ಷೆ ಮಾಡಿದರೂ ಸಾಕು. ಉಪಾದಾನದ ವಿವಕ್ಷೆಯ ಅಗತ್ಯವಿಲ್ಲ. ಸರ್ವ ಸಾಮ್ಯಕ್ಕಾಗಿ ಉಪಾದಾನವನ್ನೂ ವಿವಕ್ಷೆ ಮಾಡಿದರೆ ಅಶ್ವರೋಮವು ಅಶ್ವದಿಂದ ಕಳಚಿ ಬೀಳುವಂತೆ ಜ್ಞಾನಿಯ ಪುಣ್ಯ–ಪಾಪಗಳೂ ಕಳಚಿ ಮಿತ್ರ–ಶತ್ರುಗಳಿಗೆ ಸೇರುತ್ತದೆ, ಎಂದು ಕಲ್ಪಿಸಬೇಕಾದೀತು. ಆದರೆ, ಶತ್ರು–ಮಿತ್ರರಿಗೆ ಪುಣ್ಯಪಾಪಗಳ ಫಲಮಾತ್ರ

ಸಿಗುತ್ತದೆ, ಪುಣ್ಯ–ಪಾಪಗಳ ಅಂಟು ಅವರಿಗಿಲ್ಲ. ಅಷ್ಟೇ ಅಲ್ಲ 'ಕ್ಷೀಯಂತೇ ಚಾಸ್ಯ ಕರ್ಮಾಣಿ' ಎಂದು ಮುಂಡಕೋಪನಿಷತ್ತು ಜ್ಞಾನಿಯ ಪುಣ್ಯ–ಪಾಪಗಳ ಕ್ಷಯವನ್ನೇ ಹೇಳುತ್ತದೆ.

ಶತ್ರುಗಳು ಮತ್ತು ಮಿತ್ರರು ಫಲವನ್ನು ಅನುಭವಿಸಿದ ಮೇಲೆ ಜ್ಞಾನಿಯ ಕರ್ಮವು ಕ್ಷಯವಾಗುತ್ತದೆ–ಎಂದು 'ಕ್ಷೀಯಂತೇ ಚಾಸ್ಯ' ಎಂಬ ಶ್ರುತಿಗೆ ಅರ್ಥ ಎಂದು ಹೇಳುವುದೂ ಉಚಿತವಲ್ಲ. ಹಾಗೆ ಹೇಳಿದರೆ ನಿರ್ಗುಣವಿದ್ಯೆಯ ಮಹತ್ವವನ್ನು ಹೇಳಿದಂತಾಗುವುದಿಲ್ಲ. ನಿರ್ಗುಣವಿದ್ಯೆಯಿಂದ ಭೋಗವಿಲ್ಲದೆಯೇ ಕರ್ಮನಾಶ ವಾಗುತ್ತದೆ ಎಂದು ಹೇಳಿದಾಗ ಮಾತ್ರ ಮಹತ್ವ ಬರುತ್ತದೆ.

ರಾಮಾನುಜಭಾಷ್ಯದಲ್ಲಿ ನಿರ್ಗುಣ ಸಗುಣವಿದ್ಯೆ ಎಂಬ ಶಬ್ದವಿಲ್ಲದೆ ಕೆಲವು ಕಡೆ ಜ್ಞಾನಿಕರ್ಮಕ್ಕೆ ನಾಶ, ಕೆಲವು ಕಡೆ ಶತ್ರು–ಮಿತ್ರರಿಂದ ಉಪಾದಾನ, ಕೆಲವು ಕಡೆ ಹಾನ ಮತ್ತು ಉಪಾದಾನ ಇವೆರಡೂ ಶ್ರುತವಾಗಿವೆ. ಇವುಗಳಲ್ಲಿ ವಿಕಲ್ಪವೋ ಸಮುಚ್ಚಯವೋ ಎಂದುಶಂಕೆ ಮಾಡಿ ಸಮುಚ್ಚಯವನ್ನು ಸಿದ್ಧಾಂತಿಸಲಾಗಿದೆ.

## ಅದ್ವೈತಭಾಷ್ಯದಲ್ಲಿ ಸಾಂಪರಾಯಾಧಿಕರಣ

**॥ ಸಾಂಪರಾಯೇ ತರ್ತವ್ಯಾಭಾವಾತ್ ತಥಾ ಹ್ಯನ್ಯೇ ॥** ಜ್ಞಾನಿಗಳ ಸುಕೃತ ದುಷ್ಕೃತತ್ಯಾಗವು ದೇವಯಾನಮಾರ್ಗದ ಮಧ್ಯದಲ್ಲಿ ಎಂದು ಕೌಶೀತಕೀ ಶಾಖೆಯವರು ಹೇಳುತ್ತಾರೆ—ಸ ಏತಂ ದೇವಯಾನಂ ಪಂಥಾನಮ್ ಆಸಾದ್ಯ ಅಗ್ನಿಲೋಕಮ್ ಆಗಚ್ಛತಿ' 'ಸ ಆಗಚ್ಛತಿ ವಿರಜಾಂ ನದೀಂ ತಾಂ ಮನಸೈವಾತ್ಯೇತಿ ಸುಕೃತ ದುಷ್ಕೃತೇ ವಿಧೂನುತೇ' (ಕೌ.1.14) ಅಗ್ನಿಲೋಕದಲ್ಲಿ ವಿರಜಾನದಿಯನ್ನು ದಾಟಿ ಪುಣ್ಯ–ಪಾಪಗಳನ್ನು ಕಳೆದುಕೊಳ್ಳುತ್ತಾನೆ, ಎಂದು ಅಲ್ಲಿ ಹೇಳಿದೆ. ಆದರೆ, ಸಾಂಪರಾಯೇ=ದೇಹದಿಂದ ಹೊರಬರುವಾಗಲೇ ಜ್ಞಾನಿಯು ಜ್ಞಾನಸಾಮರ್ಥ್ಯದಿಂದ ಪುಣ್ಯ–ಪಾಪಗಳನ್ನು ಕಳೆದುಕೊಳ್ಳುತ್ತಾನೆ. ತರ್ತವ್ಯಾಭಾವಾತ್=ಜ್ಞಾನಿಗೆ ಸುಕೃತ–ದುಷ್ಕೃತಗಳಿಂದ ಹೊಂದಬೇಕಾದುದು ಏನೂ ಇಲ್ಲ. ಅವುಗಳು ಜ್ಞಾನಫಲಕ್ಕೆ ವಿರೋಧಿ ಗಳೂ ಆಗಿವೆ. ಆದ್ದರಿಂದ ದೇಹತ್ಯಾಗಕಾಲದಲ್ಲೇ ಅವುಗಳನ್ನು ಬಿಟ್ಟುಬಿಡುತ್ತಾನೆ. ತಥಾಹಿ ಅನ್ಯೇ=ತಾಂಡಿ–ಶಾಟ್ಯಾಯನ ಶಾಖೆಯವರು 'ಅಶ್ವ ಇವ' ಎಂದು ಹೀಗೆಯೇ ಹೇಳುತ್ತಾರೆ.

**॥ಛಂದತ ಉಭಯಾವಿರೋಧಾತ್ ॥** ಸಾಧಕನು ಛಂದತಃ=ಸುಕೃತ–ದುಷ್ಕೃತಗಳ ಕ್ಷಯದ ಇಚ್ಛೆಯಿಂದಲೇ ಯಮನಿಯಮಾದಿಪೂರ್ವಕ ಪರ್ಯಂಕವಿದ್ಯೆಯನ್ನು

ಪಡೆದಿರುತ್ತಾನೆ. ಯಾವ ದೇಹದಲ್ಲಿ ಪಡೆದಿರುತ್ತಾನೋ ಅದೇ ದೇಹದಲ್ಲಿ ಕರ್ಮಕ್ಷಯವಾದರೆ ನಿಮಿತ್ತ-ನೈಮಿತ್ತಿಕಗಳಿಗೆ ಸಾಮಾನಾಧಿಕರಣ್ಯವು ಕೂಡುತ್ತದೆ. ಪರ್ಯಂಕಸ್ಥಾನಗತಬ್ರಹ್ಮಪ್ರಾಪ್ತಿ ಮಾತ್ರ ದೇಹಹಾನಿಯಾಗದೇ ಸಾಧ್ಯವಿಲ್ಲ. ಹೀಗೆ ಅದೇ ದೇಹದಲ್ಲಿ ಸುಕೃತ-ದುಷ್ಕೃತಗಳನ್ನು ಕಳೆದುಕೊಳ್ಳುತ್ತಾನೆ, ಎಂದು ಹೇಳಿದಾಗ ಉಭಯಾವಿರೋಧಾತ್=ತಾಂಡಿಶಾಖೆ, ಶಾಟ್ಯಾಯನಶಾಖೆಯ ವಾಕ್ಯಗಳಿಗೆ ಅವಿರೋಧವು ಕೂಡುತ್ತದೆ. ಆದ್ದರಿಂದಲೇ 'ವಿಧೂನುತೇ' ಎಂದು ಜ್ಞಾನಿಗೆ ಪಾಪಕ್ಷಯ ಸ್ವಾತಂತ್ರ್ಯವು ಶ್ರುತವಾಗಿದೆ. ದೇಹಪಾತವಾದ ಮೇಲೆ ಈ ಸ್ವಾತಂತ್ರ್ಯ ಅವನಿಗಿಲ್ಲ. ಆದ್ದರಿಂದ ಪೂರ್ವದಲ್ಲೇ ಪಾಪಕ್ಷಯ.

**ವಿಮರ್ಶೆ**—ಕರ್ಮಕ್ಷಯವಾಗದೆಯೂ ದೇವಯಾನಮಾರ್ಗಪ್ರಾಪ್ತಿಯಾಗುವುದರಲ್ಲಿ ಬಾಧಕವೇನೂ ಇಲ್ಲ. ದೇಹನಾಶಸಮಯದಲ್ಲೇ ಸುಕೃತವೂ ನಾಶವಾಗುವುದಾದಲ್ಲಿ ಅದರ ಫಲವಾದ ಅಗ್ನಿಲೋಕಪ್ರಾಪ್ತಿ, ವಿರಜಾಸ್ನಾನಗಳು ಆಗಲಿಕ್ಕಿಲ್ಲ. ಅದು ಕರ್ಮಫಲವೇ ಆಗಿದೆ—

'ಪ್ರಾರಬ್ಧಕರ್ಮಶೇಷಸ್ತು ವಿರಜಾತರಣಾವಧಿ'

ಎಂದು ಅದಕ್ಕೆ ಪ್ರಮಾಣವಿದೆ.

**ಇಲ್ಲಿಗೆ ಹಾನ್ಯಧಿಕರಣವು ಮುಗಿಯಿತು.**

## ೧೮. ಛಂದಾಧಿಕರಣಮ್

**ಕರ್ಮಾಪಿ ಕುರ್ವಂತಿ ನವೇತಿ ? ಅತ ಆಹ-**

### ॥ ಓಂ ಛಂದತ ಉಭಯಾವಿರೋಧಾತ್ ಓಂ ॥ ೨೯ ॥

**ಸ್ವೇಚ್ಛಯಾ ಕುರ್ವಂತಿ ನವಾ । ಬಂಧಪ್ರತ್ಯವಾಯಯೋರಭಾವಾತ್ ॥**

ಕರ್ಮವನ್ನು ಮುಕ್ತರು ಮಾಡುತ್ತಾರೆ ಅಥವಾ ಇಲ್ಲ ಎನ್ನುವುದನ್ನು ''ಛಂದತಃ....'' ಎಂಬ ಸೂತ್ರದಲ್ಲಿ ಹೇಳುತ್ತಾರೆ. ಸ್ವೇಚ್ಛೆಯಿಂದ ಮಾಡುತ್ತಾರೆ ಅಥವಾ ಬಿಡುತ್ತಾರೆ. ಮಾಡಲೇಬೇಕು ಎಂಬ ವಿಧಿಬಂಧ ಅಥವಾ ಮಾಡದಿದ್ದರೆ ಪಾಪ ಇವೆರಡೂ ಅವರಿಗೆ ಇಲ್ಲ.

**ವಿವರಣೆ**—ಮುಕ್ತರು ಸ್ವೇಚ್ಛಯಾ ಉಪಾಸನೆಯನ್ನು ಮಾಡುವಂತೆ

ಕರ್ಮವನ್ನೂ ಮಾಡುತ್ತಾರೆ. ಅದೂ ಸ್ವೇಚ್ಛೆಯಿಂದ. ಮಾಡದಿರುವುದರಿಂದ ಅವರಿಗೆ ಹಾನಿಯಾಗಲೀ ಮಾಡುವುದರಿಂದ ಲಾಭವಾಗಲೀ ಇಲ್ಲ. ಸಂಸಾರಿಗಳಂತೆ ಅವರು ವಿಧಿ ಬದ್ಧರಲ್ಲ.

**॥ ಓಂ ಗತೇರರ್ಥವತ್ತ್ವಮುಭಯಥಾಽನ್ಯಥಾ ಹಿ ವಿರೋಧಃ ಓಂ ॥ ೩೦ ॥**

**ಬಂಧಪ್ರತ್ಯವಾಯಾಭಾವೇ ಹಿ ಮೋಕ್ಷಸ್ಯಾರ್ಥವತ್ತ್ವಮ್ । ಅನ್ಯಥಾ ಮೋಕ್ಷತ್ವಮೇವ ನ ಸ್ಯಾತ್ ।**

**'ಕದಾಚಿತ್ ಕರ್ಮ ಕುರ್ವಂತಿ ಕದಾಚಿನ್ನೈವ ಕುರ್ವತೇ ।**
**ನಿತ್ಯಜ್ಞಾನಸ್ವರೂಪತ್ವಾನ್ನಿತ್ಯಂ ಧ್ಯಾಯಂತಿ ಕೇಶವಮ್ ॥'**
**'ತೀರ್ಣತರ್ತವ್ಯಭಾಗಾ ಯೇ ಪ್ರಾಪ್ತಾನಂದಾಃ ಪರಾತ್ಮನಃ ।**
**ಪ್ರತ್ಯವಾಯಸ್ಯ ಬಂಧಸ್ಯಾಪ್ಯಭಾವಾತ್ ಸ್ವೇಚ್ಛಯಾ ಭವೇತ್ ॥'**

**ಇತಿ ಹಿ ಬ್ರಹ್ಮಾಂಡೇ ।**

ಮುಕ್ತರಿಗೆ ವಿಧಿಬಂಧ ಹಾಗೂ ಅಕರಣೇ ಪ್ರತ್ಯವಾಯ ಇವೆರಡರ ಅಭಾವವಿದ್ದರೆ ಮಾತ್ರವೇ ಮುಕ್ತಿಯು ಪುರುಷಾರ್ಥವೆನಿಸುತ್ತದೆ. ಅವೆರಡೂ ಇದ್ದಲ್ಲಿ ಮೋಕ್ಷವೂ ಸಂಸಾರದಂತೆಯೇ ಆದೀತು. ಮೋಕ್ಷವು ಮೋಕ್ಷವೇ ಆಗಲಿಕ್ಕಿಲ್ಲ. ಗಾರುಡದಲ್ಲಿ ಹೀಗಿದೆ—

ಮುಕ್ತರು ಒಮ್ಮೊಮ್ಮೆ ಕರ್ಮವನ್ನು ಮಾಡುತ್ತಾರೆ, ಕೆಲವೊಮ್ಮೆ ಮಾಡುವುದಿಲ್ಲ. ಆದರೆ ಸದಾ ಜ್ಞಾನಸ್ವರೂಪರಾದುದರಿಂದ ನಿತ್ಯವೂ ಪರಮಾತ್ಮನನ್ನು ಧ್ಯಾನಿಸುತ್ತಾರೆ. ಯಾರು ಭಗವಂತನ ಅನುಗ್ರಹದಿಂದ ದಾಟಬೇಕಾದುದನ್ನು ದಾಟಿದ್ದಾರೋ, ಆನಂದವನ್ನು ಹೊಂದಿರುವರೋ ಅವರು, ಪಾಪದ ಬಂಧನವು ಇಲ್ಲದಿರುವುದರಿಂದ ಸ್ವೇಚ್ಛಯಾ ಕರ್ತವ್ಯವನ್ನು ಮಾಡುತ್ತಾರೆ.

**ವಿವರಣೆ**—ಮುಕ್ತರು ಉಪಾಸನೆಯನ್ನು ಸದಾ ಮಾಡುತ್ತಾರೆ—

''ನಿತ್ಯಜ್ಞಾನಸ್ವರೂಪತ್ವಾತ್ ನಿತ್ಯಂ ಧ್ಯಾಯಂತಿ ಕೇಶವಮ್''

ಸದಾ ಭಗವಂತನನ್ನು ನೋಡುತ್ತಲೇ ಇರುವುದರಿಂದ ಸದಾ ಧ್ಯಾನವನ್ನು

ಮಾಡುತ್ತಿರುತ್ತಾರೆ. ಆದರೆ, ಕರ್ಮವನ್ನು ಹೀಗೆ ನಿರಂತರವಾಗಿ ಮಾಡುವುದಿಲ್ಲ. ಕರ್ಮವನ್ನು ಮಾಡಿದರೂ ಮಾಡದೇ ಇದ್ದರೂ ಯಾವುದೇ ಲಾಭ–ನಷ್ಟಗಳು ಇಲ್ಲದಿದ್ದರೆ ಮಾತ್ರ ಮೋಕ್ಷವು ಪುರುಷಾರ್ಥವಾಗುತ್ತದೆ. ಅವರು ಕರ್ಮವಿಧಿ ಬದ್ಧರಾದರೆ ಬಂಧನದಲ್ಲೇ ಇದ್ದಂತೆ ಆಗುತ್ತದೆ. ಆದ್ದರಿಂದ ಮೋಕ್ಷದಲ್ಲಿ ಕರ್ಮನಿಯಮವಿಲ್ಲ.

ಗುರ್ವರ್ಥದೀಪಿಕಾದಲ್ಲಿ ಹೀಗಿದೆ—ಸಂಸಾರದಲ್ಲೂ ಕರ್ಮವನ್ನು ಮಾಡುವಾಗ ಭಗವಂತನ ಉಪಾಸನೆ ಇಲ್ಲದಿದ್ದರೆ ಆ ಕರ್ಮವು ರಾಕ್ಷಸರಿಗೆ ಸೇರುತ್ತದೆ. ಹೀಗೆ, ಸಂಸಾರದಲ್ಲಿ ಉಪಾಸನೆಯೇ ಪ್ರಬಲ. ಮೋಕ್ಷದಲ್ಲಂತೂ ಮುಕ್ತರು ಅಭಿವ್ಯಕ್ತಜ್ಞಾನ ರೂಪರಾಗಿರುತ್ತಾರೆ. ಅವರ ಜ್ಞಾನಕ್ಕೆ ಪರಮಾತ್ಮ ಸದಾ ವಿಷಯನಾಗಿರುತ್ತಾನೆ. ಅದರಿಂದಾಗಿ ಉಪಾಸನೆ ಅನಿವಾರ್ಯ. ಅಲ್ಲಿ ಕ್ರಿಯೆ ಮಾತ್ರ ಶಕ್ತ್ಯಾತ್ಮನಾ ಇರಬಹುದು, ವ್ಯಕ್ತ್ಯಾತ್ಮನಾ ಇಲ್ಲದಿರಬಹುದು.

ಕರ್ಮದೊಂದಿಗೆ ಶ್ರವಣಾದಿಗಳು ಇರಬೇಕು, ಎಂದು ಭಾಗವತದಲ್ಲಿ ಎರಡು ಸಂದರ್ಭಗಳಲ್ಲಿ ಬಂದಿದೆ—

ನ ಯತ್ರ ಶ್ರವಣಾದೀನಿ ರಕ್ಷೋಘ್ನಾನಿ ಸ್ವಕರ್ಮಸು ।
ಕುರ್ವಂತಿ ಸಾತ್ವತಾಂ ಭರ್ತುಃ ಯಾತುಧಾನ್ಯಶ್ಚ ತತ್ರ ಹಿ ॥ (ಪೂತನಾಸಂಹಾರ)

ಮಂತ್ರತಸ್ತಂತ್ರತಶ್ಛಿದ್ರಂ ದೇಶಕಾಲಾರ್ಹವಸ್ತುತಃ ।
ಸರ್ವಂ ಕರೋತಿ ನಿಶ್ಛಿದ್ರಮ್ ಅನುಸಂಕೀರ್ತನಂ ಹರೇಃ ॥ (ಬಲಿನಿಗ್ರಹ)

## ॥ ಓಂ ಉಪಪನ್ನಸ್ತಲ್ಲಕ್ಷಣಾರ್ಥೋಪಲಬ್ಧೇ ಲೋಕವತ್ ಓಂ ॥ ೩೧ ॥

**ಉಪಪನ್ನಶ್ಚೈವಂಭಾವಃ । ಪ್ರಾಪ್ತತ್ವಾತ್ ತಲ್ಲಕ್ಷಣಸ್ಯ ಫಲಸ್ಯ । ಯಥಾ ಲೋಕೇ ವಿಧ್ಯರ್ಥತ್ವೇನ ವಿಷ್ಣುಕ್ರಮಣಾದಿಕಂ ಕೃತ್ವಾ ಸಮಾಪ್ತಕರ್ಮೇಚ್ಛಯಾ ಕರೋತಿ ನ ಕರೋತಿ ಚ ॥**

ಕರ್ಮವನ್ನು ಮುಕ್ತರು ಇಚ್ಛೆಯಿದ್ದರೆ ಮಾಡುತ್ತಾರೆ, ಎಂಬುದು ಉಪಪನ್ನವೂ ಆಗಿದೆ. ಕರ್ಮದಿಂದ ಜ್ಞಾನದ್ವಾರಾ ಸಿಗಬೇಕಾದ ಫಲವು ಮುಕ್ತರಿಗೆ ಸಿಕ್ಕಿದೆ. ಲೋಕದಲ್ಲೂ ಫಲ ಸಿಕ್ಕಮೇಲೆ ಸಾಧನಾನುಷ್ಠಾನ ಇಲ್ಲವೆನ್ನುವುದು ಸಿದ್ಧವಾಗಿದೆ—

ಯಾಗದ ಸಿದ್ಧಿಗಾಗಿ ವಿಷ್ಣುಕ್ರಮಣವನ್ನು ಅಂದರೆ, ವಿಷ್ಣುವನ್ನು ಉದ್ದೇಶಿಸಿ ಸತ್ಕರ್ಮವನ್ನು ಮಾಡಲಾಗುತ್ತದೆ. ಯಾಗರೂಪವಾದ ಫಲವು ಸಿದ್ಧವಾದ ಮೇಲೆ (ಯಾಗ ಮುಗಿದ ಮೇಲೆ) ಅದನ್ನು ಮಾಡುವುದಿಲ್ಲ. ಇದರಂತೆ ಕರ್ಮಫಲವಾದ ಮೋಕ್ಷವು ದೊರಕಿದ ಮೇಲೆ ಕರ್ಮವನ್ನು ಮಾಡಬೇಕಿಲ್ಲ.

**ವಿವರಣೆ**—ವಿಧಿಬದ್ಧರಲ್ಲ, ಆದ್ದರಿಂದ ಮುಕ್ತರು ಕರ್ಮಮಾಡುವುದಿಲ್ಲ ಎನ್ನುವಂತಿಲ್ಲ. ಪರಮಾತ್ಮನು ವಿಧಿಬದ್ಧನಾಗದಿದ್ದರೂ ನಿಯತವಾಗಿ ತನ್ನ ಕರ್ಮವನ್ನು ಮಾಡುತ್ತಿರುತ್ತಾನೆ. ಅದರಂತೆ ಮುಕ್ತರೂ ಕರ್ಮವನ್ನು ನಿಯತವಾಗಿ ಮಾಡಬಹುದು. ಈ ಆಕ್ಷೇಪಕ್ಕೆ ಸಮಾಧಾನರೂಪವಾಗಿ ಈ ಸೂತ್ರವಿದೆ.

ಸಮಾಪ್ತಕರ್ಮಾ+ಇಚ್ಛಯಾ ಎಂದು ಭಾಷ್ಯದಲ್ಲಿ ಪದವಿಭಾಗ. ಸಮಾಪ್ತಂ ಕರ್ಮ ಯಸ್ಯಸಃ=ಕರ್ಮ ಸಮಾಪ್ತಿ ಮಾಡಿದ ಯಜಮಾನ, ಎಂದರ್ಥ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ಛಂದತ ಉಭಯಾವಿರೋಧಾತ್ ಓಂ ॥** (ಅತ್ರ ಮುಕ್ತಾನಾಂ ಕರ್ಮಕೃತ್ಯನಿಯಮಃ ಸಾಧ್ಯತೇ । ಹಾನೌ ತು ಇತ್ಯಸ್ತಿ । ಕರ್ಮಕರಣಮಿತಿ ಶೇಷಃ । ಅವಿರೋಧಃ ಅಭಾವಃ ।

ಹಾನೌ=ಮುಕ್ತೌ ತು ಕರ್ಮಕರಣಂ ಚಂದತಃ=ಸ್ವೇಚ್ಛಯಾ । ಕುರ್ವಂತಿ ನ ಕುರ್ವಂತಿ ಚೇತ್ಯರ್ಥಃ । ಕುತಃ? ಉಭಯಾವಿರೋಧಾತ್ । ವಿಧಿ–ಪ್ರತ್ಯವಾಯಯೋಃ ಅಭಾವಾತ್ ಇತ್ಯರ್ಥಃ ।)

ಈ ಅಧಿಕರಣದಲ್ಲಿ ಮುಕ್ತರಿಗೆ ಕರ್ಮವಿಧಿ ಇಲ್ಲ, ಎಂದು ಹೇಳಲಾಗಿದೆ. ಹಾನೌ=ದುಃಖಹಾನಿರೂಪವಾದ ಮೋಕ್ಷದಲ್ಲಿ ಛಂದತಃ=ಸ್ವೇಚ್ಛೆಯಿಂದಲೇ ಕರ್ಮವನ್ನು ಮಾಡುತ್ತಾರೆ. ಏಕೆಂದರೆ, ಉಭಯಾವಿರೋಧಾತ್=ವಿಧಿಬದ್ಧತೆ ಮತ್ತು ಪಾಪಗಳು ಇಲ್ಲದಿರುವುದರಿಂದ. ಮುಕ್ತರು ವಿಧಿಬದ್ಧರಲ್ಲ, ಕರ್ಮವನ್ನು ಮಾಡದಿದ್ದಲ್ಲಿ ಪಾಪವೂ ಇಲ್ಲ. ಆದ್ದರಿಂದ ನಿಯತವಾಗಿ ಕರ್ಮವನ್ನು ಮಾಡುವುದಿಲ್ಲ.

**॥ ಓಂ ಗತೇರರ್ಥವತ್ತ್ವಮುಭಯಥಾಽನ್ಯಥಾ ಹಿ ವಿರೋಧಃ ಓಂ ॥** (ಉಭಯಾವಿರೋಧ ಇತ್ಯಸ್ತಿ–ಹಿರ್ಹೇತೌ । ಹಿ=ಯಸ್ಮಾತ್ ಉಭಯಥಾ=ವಿಧಿ –ಪ್ರತ್ಯವಾಯಯೋಃ ಅಭಾವೇನೈವ ಗತೇಃ=ಈಶಪ್ರಾಪ್ತಿರೂಪಮುಕ್ತೇಃ ಅರ್ಥವತ್ತ್ವಂ= ಪುರುಷಾರ್ಥತ್ವಂ, ತಸ್ಮಾತ್ ವಿಧಿ–ಪ್ರತ್ಯವಾಯಾಭಾವಃ ಇತ್ಯರ್ಥಃ । ಅನ್ಯಥಾ ತದ್ವತ್ವೇ

ವಿರೋಧಃ=ಮೋಕ್ಷತ್ವವಿರೋಧಃ, ಇತ್ಯರ್ಥಃ । ಸಂಸಾರ ಸಮಾನಧರ್ಮತಾಪತ್ತೇಃ ಇತಿ ಭಾವಃ ।)

ಹಿ=ಯಾವ ಕಾರಣದಿಂದ ಉಭಯಥಾ=ವಿಧಿಬಂಧ-ಪ್ರತ್ಯವಾಯ ಇವೆರಡೂ ಇಲ್ಲದಿರುವುದರಿಂದಾಗಿಯೇ ಗತೇಃ=ಭಗವತ್‌ಪ್ರಾಪ್ತಿರೂಪವಾದ ಮೋಕ್ಷಕ್ಕೆ ಅರ್ಥವತ್ವಮ್=ಪುರುಷಾರ್ಥತ್ವವು ಸಿದ್ಧವಾಗುವುದೋ ಆದ್ದರಿಂದ ಮುಕ್ತರಿಗೆ ವಿಧಿ ಬಂಧ-ಪ್ರತ್ಯವಾಯಗಳು ಇಲ್ಲ.

**॥ ಓಂ ಉಪಪನ್ನಸ್ತಲ್ಲಕ್ಷಣಾರ್ಥೋಪಲಬ್ಧೇರ್ಲೋಕವತ್ ಓಂ ॥** (ಏವಂಭಾವ ಇತಿ ಶೇಷಃ । ಕರ್ಮ ಕುರ್ವಂತಿ ನ ಕುರ್ವಂತಿ ಇತಿ ಏವಂ ಭಾವಃ ಉಪಪನ್ನಃ=ಯುಕ್ತಃ । ಕುತಃ ? ತಲ್ಲಕ್ಷಣಸ್ಯ=ತನ್ನಿಮಿತ್ತಕಸ್ಯ ಕರ್ಮಸಾಧ್ಯಸ್ಯ ಅರ್ಥಸ್ಯ=ಮೋಕ್ಷಾಖ್ಯಫಲಸ್ಯ ಉಪಲಬ್ಧೇಃ=ಪ್ರಾಪ್ತೇಃ । ಲೋಕವತ್ । ಯಥಾ ಲೋಕೇ ಯಾಗವಿಧಿ ಪೂರ್ತಿಪ್ರಾಪ್ತಿಸಾಧನವಿಷ್ಣುಕ್ರಮಣಾದಿನಿಯಮಃ ನ ಪೂರ್ತ್ಯನಂತರಮಪಿ ತಥೇತ್ಯರ್ಥಃ ।

ತದರ್ಥೇತ್ಯೇವ ಪೂರ್ತೌ ಏವಮುಕ್ತಿಃ ಮುಕ್ತೌ ಕರ್ಮಣಃ ಪರಂಪರಯಾ ಹೇತುತ್ವಮ್ ಇತಿ ದ್ಯೋತನಾಯ । ತದ್ಧೇತುಕೇತ್ಯನುಕ್ತ್ವಾ ಲಕ್ಷಣೇತ್ಯುಕ್ತಿರಪಿ ಫಲಸ್ಯ ಸ್ವಪ್ರಾಪ್ತ್ಯನಂತರಂ ಪುನಃ ಸಾಧನಾನುಷ್ಠಾನನಿವಾರಕತ್ವಂ ಲಕ್ಷಣಮಿತಿ ಸೂಚಯಿತುಮ್ । ವಿಷ್ಣುಕ್ರಮಣಂ ನಾಮ ವಿಷ್ಣುಮುದ್ದಿಶ್ಯ ಕ್ರಿಯಮಾಣಂ ಕರ್ಮ ಇತ್ಯಾಹುಃ ।)

ಏವಂಭಾವಃ=ಕರ್ಮವನ್ನು ಸ್ವೇಚ್ಛೆಯಾ ಮಾಡುತ್ತಾರೆ ಎನ್ನುವುದು, ಉಪಪನ್ನಃ= ಯುಕ್ತವಾಗಿದೆ. ಏಕೆಂದರೆ, ತಲ್ಲಕ್ಷಣಸ್ಯ=ಕರ್ಮನಿಮಿತ್ತವಾದ ಮೋಕ್ಷರೂಪವಾದ ಫಲವು ಉಪಲಬ್ಧೇಃ=ಪ್ರಾಪ್ತವಾಗಿರುವುದರಿಂದ. ಲೋಕವತ್=ಲೋಕದಲ್ಲಿ ಫಲಸಿಕ್ಕ ಮೇಲೆ ಸಾಧನವನ್ನು ಮಾಡದಿರುವಂತೆ.

## ಅದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

ಮಾಧ್ವಭಾಷ್ಯದಂತೆ 30 ಮತ್ತು 31ನೆಯ ಸೂತ್ರಗಳು ಅದ್ವೈತಭಾಷ್ಯದಲ್ಲಿ 29 ಮತ್ತು 30ನೆಯ ಸೂತ್ರಗಳಾಗಿ ಒಂದು ಅಧಿಕರಣವಾಗಿದೆ.

**॥ ಗತೇರರ್ಥವತ್ತ್ವಮುಭಯಥಾಽನ್ಯಥಾ ಹಿ ವಿರೋಧಃ ॥** ಗತೇಃ=ದೇವಯಾನ ಮಾರ್ಗದ ಅರ್ಥವತ್ವಂ ಉಭಯಥಾ=ನಿರ್ಗುಣವಿದ್ಯೆಯಲ್ಲಿ ದೇವಯಾನಗತಿಗೆ ಅರ್ಥವಿಲ್ಲ. ಸಗುಣವಿದ್ಯೆಯಲ್ಲಿ ಅಥವತ್ವಂ=ಪ್ರಯೋಜನವು ಇದೆ.

ಹಿಂದೆ ಪುಣ್ಯ–ಪಾಪಗಳ ಹಾನ ಮತ್ತು ಉಪಾದಾನ ನಿರ್ಗುಣ–ಸಗುಣ ಉಪಾಸನೆಗಳಲ್ಲೂ ಸಮಾನ ಎಂದು ಹೇಳಲಾಗಿದೆ. ಸಗುಣೋಪಾಸಕ ಸುಕೃತ ದುಷ್ಕೃತಗಳನ್ನು ಕಳೆದುಕೊಂಡು ದೇವಯಾನಮಾರ್ಗದಲ್ಲಿ ಹೋಗುತ್ತಾನೆ. ಈ ದೇವಯಾನಮಾರ್ಗಪ್ರಾಪ್ತಿಯು ನಿರ್ಗುಣೋಪಾಸಕನಿಗೆ ಇಲ್ಲ. ಅನ್ಯಥಾ=ಅವನಿಗೂ ಮಾರ್ಗಪ್ರಾಪ್ತಿ ಇದ್ದರೆ, ವಿರೋಧಃ='ನಿರಂಜನಃ ಪರಮಂ ಸಾಮ್ಯಮುಪೈತಿ' ಎಂಬ ಮುಂಡಕಶ್ರುತಿಯ ವಿರೋಧ ಬರುತ್ತದೆ. ನಿರಂಜನ ಎಂದರೆ ಅಸಂಗ ಎಂದರ್ಥ. ಸಾಮ್ಯ ಎಂದರೆ ಬ್ರಹ್ಮ. ಅಸಂಗನಾದ ಜ್ಞಾನಿಯು ಹೋಗುವುದು ಹೇಗೆ ಸಾಧ್ಯ? ಬ್ರಹ್ಮನು ಸರ್ವವ್ಯಾಪ್ತನಾದುದರಿಂದ ಹೋಗುವುದಾದರೂ ಎಲ್ಲಿಗೆ? ಆದ್ದರಿಂದ ನಿರ್ಗುಣೋಪಾಸಕರಿಗೆ ಮಾರ್ಗವಿಲ್ಲ.

**II ಉಪಪನ್ನಸ್ತಲ್ಲಕ್ಷಣಾರ್ಥೋಪಲಬ್ಧೇಃ ಲೋಕವತ್ II** ಗತಿ–ಗತ್ಯಭಾವಗಳು ಉಪಪನ್ನವೂ ಆಗಿವೆ. ತಲ್ಲಕ್ಷಣಾರ್ಥೋಪಪತ್ತೇಃ-ಗತಿಯಿಂದ ಸಿಗುವ ಅರ್ಥ ಸಗುಣಪರ್ಯಂಕವಿದ್ಯೆಯಲ್ಲಿ ಪರ್ಯಂಕಾರೋಹಣ, ಬ್ರಹ್ಮನೊಂದಿಗೆ ಸಂವಾದ, ಅಲ್ಲಿರುವ ವಿಶಿಷ್ಟವಾದ ಗಂಧದ ಪ್ರಾಪ್ತಿ ಇವುಗಳು. ಇವು ಸ್ಥಾನವಿಶೇಷಪ್ರಾಪ್ತಿಯಿಂದ ಸಿಗುತ್ತವೆ. ಆ ಸ್ಥಾನವು ಸಿಗಬೇಕಾದರೆ ಅಲ್ಲಿವರೆಗೆ ಹೋಗಬೇಕು. ಅದಕ್ಕಾಗಿ ಮಾರ್ಗಬೇಕು. ಆದರೆ ನಿರ್ಗುಣೋಪಾಸಕರಿಗೆ ಆತ್ಮೈಕ್ಯಪ್ರಾಪ್ತಿಯೇ ಫಲ. ಅದರ ಪ್ರಾಪ್ತಿಗಾಗಿ ಅವರು ದೇಶಾಂತರಕ್ಕೆ ಹೋಗಬೇಕಾಗಿಲ್ಲ. ಆತ್ಮನು ಸರ್ವಗತನಾಗಿದ್ದಾನೆ. ಅವರಿಗೆ ಮಾರ್ಗದ ಅಗತ್ಯವಿಲ್ಲ. ಲೋಕವತ್–ಲೋಕದಲ್ಲಿ ಹಳ್ಳಿಗೆ ಹೋಗಬೇಕಾದರೆ ಮಾರ್ಗ ಬೇಕು, ಆರೋಗ್ಯಪ್ರಾಪ್ತಿಗೆ ದಾರಿಯ ಅಗತ್ಯವಿಲ್ಲ. ಇದ್ದಲ್ಲೇ ಆರೋಗ್ಯವಂತ ನಾಗಿರಬಹುದು.

ವಿಮರ್ಶೆ—ಸಗುಣೋಪಾಸನೆಯು ಸಮ್ಯಗ್‌ದರ್ಶನಕ್ಕೆ ಕಾರಣವಾಗುವುದೋ, ಇಲ್ಲವೋ? ಆಗುವುದಾದಲ್ಲಿ ಪರ್ಯಂಕಾರೋಹಣಾದ್ಯಪೇಕ್ಷೆಯು ಅವರಿಗೆ ಬರಲಾರದು. ನಿರ್ಗುಣೋಪಾಸಕರು ಕರ್ಮಕ್ಷಯವನ್ನು ಮಾತ್ರ ಅಪೇಕ್ಷಿಸುವಂತೆ ಸಗುಣೋಪಾಸಕರೂ ಅಷ್ಟನ್ನೇ ಅಪೇಕ್ಷಿಸಬೇಕು. ಇಲ್ಲದಿದ್ದರೆ, ನಿರ್ಗುಣೋಪಾಸಕರೂ ಪರ್ಯಂಕಾರೋಹಣಾದಿಗಳನ್ನು ಅಪೇಕ್ಷಿಸಬೇಕಾದೀತು. ಪರ್ಯಂಕಾರೋಹಣಾದಿ ಶ್ರುತಿಯು ಅವರಿಗೆ ಕೇವಲ ಪ್ರರೋಚನ ಮಾತ್ರ. ನಿರ್ಗುಣಜ್ಞಾನರೂಪವಾದ ಸಮ್ಯಗ್ ದರ್ಶನಕ್ಕೆ ಸಗುಣೋಪಾಸನೆಯು ಕಾರಣವಾಗುವುದಿಲ್ಲವೆಂದು ಹೇಳಿದರೆ ಸಗುಣೋಪಾಸನೆಯಿಂದ ಕರ್ಮಕ್ಷಯವಾಗಲು ಸಾಧ್ಯವಿಲ್ಲ. ಸಗುಣಜ್ಞಾನ ಮಿಥ್ಯಾ ಜ್ಞಾನ. ಅದರಿಂದ ಕರ್ಮಕ್ಷಯವಾಗುವುದು ಹೇಗೆ? ಆದ್ದರಿಂದ ಎರಡೂ ವಿದ್ಯೆಗಳು

ಬ್ರಹ್ಮೈಕ್ಯಪ್ರಾಪ್ತಿಗೆ ಕಾರಣವಾದುದರಿಂದ ಒಂದಕ್ಕೆ ಮಾರ್ಗಪ್ರಾಪ್ತಿಫಲ ಇದೆ, ಇನ್ನೊಂದಕ್ಕೆ ಇಲ್ಲ, ಎನ್ನುವ ವ್ಯತ್ಯಾಸ ಸರಿಯಲ್ಲ.

ರಾಮಾನುಜಭಾಷ್ಯದಲ್ಲಿ ಮಾಧ್ವಭಾಷ್ಯದ 28ನೆಯ ಸೂತ್ರದಿಂದ 31ನೆಯ ಸೂತ್ರದವರೆಗೆ ನಾಲ್ಕು ಸೂತ್ರಗಳು ಒಂದು ಅಧಿಕರಣ. ಆದರೆ ಮಧ್ಯದಲ್ಲಿ 'ಯಾವದಧಿಕಾರಮವಸ್ಥಿತಿರಧಿಕಾರಿಣಾಮ್' ಎಂದು 31ನೆಯ ಅಧಿಕ ಸೂತ್ರ ಆ ಭಾಷ್ಯದಲ್ಲಿದೆ. ಆಗ ಒಟ್ಟು ಐದು ಸೂತ್ರಗಳಾಗುತ್ತವೆ. ದ್ವೈತಭಾಷ್ಯದಲ್ಲಿ ಈ ಸೂತ್ರ 33ನೆಯದಾಗಿದೆ.

ಇಲ್ಲಿಗೆ ಛಂದಾಧಿಕರಣವು ಮುಗಿಯಿತು.

## ೧೯. ಅನಿಯಮಾಧಿಕರಣಮ್

### ॥ ಓಂ ಅನಿಯಮಃ ಸರ್ವೇಷಾಮವಿರೋಧಾತ್ ಶಬ್ದಾನುಮಾನಾಭ್ಯಾಮ್ ಓಂ ॥ ೩೨ ॥

**ಪ್ರಾಪ್ತಜ್ಞಾನಾನಾಮಪಿ ಕೇಷಾಂಚಿನ್ಮುಕ್ತಿಪ್ರಾಪ್ತಿಃ । ಕೇಷಾಂಚಿನ್ನ, ಯಥೋಪ-ಸಂಹಾರನಿಯಮ ಇತಿ ನ ಮಂತವ್ಯಮ್ ।**

**'ಸರ್ವೇ ಗುಣಾ ಬ್ರಹ್ಮಣ್ಯೈವ ಹ್ಯುಪಾಸ್ಯಾ**
**ನಾನ್ಯೈರ್ದೇವೈಃ ಕಿಮು ಸರ್ವೈರ್ಮನುಷ್ಯೈಃ'**

**ಇತ್ಯುಪಸಂಹಾರವಿರೋಧಾದ್ ಅ(ನ್ಯ)ತ್ರಾವಿರೋಧಾತ್ ।**

**'ನ ಕಶ್ಚಿತ್ ಬ್ರಹ್ಮವಿತ್ ಸ್ಮೃತಿಮನುಭವತಿ**
**ಮುಕ್ತೋ ಹ್ಯೇವ ಭವತಿ ತಸ್ಮಾದಾಹುಃ ಸ್ಮೃತಿಹೇತಿ'**

**ಇತಿ ಕೌಂಡಿನ್ಯಶ್ರುತೇಶ್ಚ ।**

**ಯಥಾ ಕೇಷಾಂಚಿನ್ಮೋಕ್ಷ ಏವಮನ್ಯೇಷಾಮಿತ್ಯನುಮಾನಾಚ್ಚ ॥**

ಅಪರೋಕ್ಷಜ್ಞಾನವನ್ನು ಪಡೆದರೂ ಕೆಲವರಿಗೆ ಮೋಕ್ಷಪ್ರಾಪ್ತಿ ಮತ್ತೆ ಕೆಲವರಿಗೆ ಮೋಕ್ಷಪ್ರಾಪ್ತಿ ಇಲ್ಲ. ಹೇಗೆ ಸರ್ವಗುಣೋಪಸಂಹಾರ ಕೆಲವರಿಗೆ ಇದೆ, ಮತ್ತೆ ಕೆಲವರಿಗೆ ಇಲ್ಲವೋ, ಅದರಂತೆ. ಹೀಗೆ ತಿಳಿಯುವುದು ಸರಿಯಲ್ಲ. 'ಸರ್ವೇ ಗುಣಾಃ' ಎಂದು

ಉಪಸಂಹಾರ–ಅನುಪಸಂಹಾರಗಳಿಗೆ ಪ್ರಮಾಣವಿದೆ. ಅದಕ್ಕೆ ವಿರೋಧ ಬರುವುದರಿಂದ ಎಲ್ಲರಿಗೂ ಏಕವಿಧವಾದ ಉಪಾಸನೆ ಎನ್ನಬಾರದು. ಆದರೆ, ಅಪರೋಕ್ಷಪಡೆದ ಎಲ್ಲರಿಗೂ ಮೋಕ್ಷವನ್ನು ಹೇಳಿದರೆ ವಿರೋಧವಿಲ್ಲ. ಅಷ್ಟೇ ಅಲ್ಲ, 'ನ ಕಶ್ಚಿದ್ ಬ್ರಹ್ಮವಿತ್ ಸೃತಿಮನುಭವತಿ' ಎಂಬ ಕೌಂಡಿನ್ಯಶ್ರುತಿಯೂ ಬ್ರಹ್ಮಜ್ಞಾನಿಗಳೆಲ್ಲರಿಗೂ ಮೋಕ್ಷವನ್ನು ಹೇಳುತ್ತದೆ. 'ಹೇಗೆ ಅಪರೋಕ್ಷಪಡೆದ ಕೆಲವರಿಗೆ ಮೋಕ್ಷವೊ ಅದರಂತೆ ಅಪರೋಕ್ಷಿಗಳಾದ ಇತರರಿಗೂ ಮೋಕ್ಷವಿದೆ' ಈ ಅನುಮಾನವೂ ಪ್ರಮಾಣವಾಗಿದೆ.

ಶ್ರುತ್ಯರ್ಥ—ಬ್ರಹ್ಮನು ಮಾತ್ರ ಪರಮಾತ್ಮನ ಸರ್ವಗುಣಗಳನ್ನೂ ಉಪಾಸನೆ ಮಾಡಬೇಕು. ಇತರ ದೇವತೆಗಳೂ ಮಾಡಬಾರದು. ಇನ್ನು ಮನುಷ್ಯರು ಮಾಡಬಾರದು, ಎಂದು ಹೇಳಬೇಕಾಗಿಯೇ ಇಲ್ಲ.

2. ಬ್ರಹ್ಮಜ್ಞಾನಿಯಾದ ಯಾರೂ ಸಂಸಾರವನ್ನು ಅನುಭವಿಸುವುದಿಲ್ಲ. ಮುಕ್ತರೇ ಆಗುತ್ತಾರೆ. ಆದ್ದರಿಂದಲೇ ಬ್ರಹ್ಮಜ್ಞಾನಿಗಳನ್ನು 'ಸೃತಿತ್ಯಾಗಿಗಳು' ಎನ್ನಲಾಗುತ್ತದೆ.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಓಂ ಅನಿಯಮಃ ಸರ್ವೇಷಾಮವಿರೋಧಾತ್ ಶಬ್ದಾನುಮಾನಾಭ್ಯಾಮ್ ಓಂ॥**

(ಅತ್ರ ಬ್ರಹ್ಮಜ್ಞಾನಿನಾಂ ಮೋಕ್ಷನೈಯತ್ಯಂ ಸಾಧ್ಯತೇ । ಗತೇಃ, ಇತ್ಯಸ್ತಿ । ಸರ್ವೇಷಾಂ ಬ್ರಹ್ಮದರ್ಶಿನಾಂ ಗತೇಃ=ಮುಕ್ತೇಃ ಅನಿಯಮಃ । ಕೇಶಾಂಚಿದಸ್ತಿ, ಕೇಷಾಂಚಿನ್ನೇತಿ ಉಪಾಸನಾವತ್ ಮುಕ್ತೇಃ ನಿಯಮಃ=ವ್ಯವಸ್ಥಾ ನಾಸ್ತಿ ಕಿಂತು ಅನಿಯಮ ಏವ। ಅವಿರೋಧಾತ್ 'ಸರ್ವೇ ಗುಣಾ ಬ್ರಹ್ಮಣೈವ ಹ್ಯುಪಾಸ್ಯಾಃ, ನಾನ್ಯೈಃ' ಇತಿ ತತ್ರ ಶ್ರುತಿವಿರೋಧವತ್ ಇಹ ತದ್ವಿರೋಧಾಭಾವಾತ್ । ಅವಿರೋಧೇಽಪಿ ಉಕ್ತಾರ್ಥೇ ಮಾನಂ ಕಿಂ ಇತ್ಯತ ಉಕ್ತಂ–ಶಬ್ದೇತಿ ।

ನ ಕಶ್ಚಿದ್ ಬ್ರಹ್ಮವಿದ್ ಸೃತಿಮನುಭವತಿ ಮುಕ್ತೋ ಹ್ಯೇವ ಭವತಿ ॥

ಇತಿ ಶಬ್ದಾತ್, ವಿಮತಾ ಜ್ಞಾನಿನಃ ನಿಯತಮೋಕ್ಷಾಃ, ಜ್ಞಾನಿತ್ವಾತ್ ಸಮ್ಮತವತ್, ಇತ್ಯನುಮಾನಾಚ್ಚ ಇತ್ಯರ್ಥಃ ।)

ಈ ಅಧಿಕರಣದಲ್ಲಿ ಬ್ರಹ್ಮಜ್ಞಾನಿಗಳಿಗೆ ಮೋಕ್ಷವು ನಿಶ್ಚಿತ, ಎಂದು ಹೇಳಲಾಗಿದೆ. 'ಎಲ್ಲಾ ಬ್ರಹ್ಮಜ್ಞಾನಿಗಳಿಗೂ ಗತೇಃ=ಮೋಕ್ಷದ ಬಗ್ಗೆ ಅನಿಯಮಃ=ಉಪಾಸನೆಯಲ್ಲಿ ಇದ್ದಂತೆ ಕೆಲವರಿಗೆ ಮೋಕ್ಷ ಮತ್ತೆ ಕೆಲವರಿಗೆ ಇಲ್ಲ, ಎಂದು ವ್ಯವಸ್ಥೆ ಇಲ್ಲ, ಎಲ್ಲರಿಗೂ ಮೋಕ್ಷ ಇದೆ. ಅವಿರೋಧಾತ್=ಸರ್ವಗುಣೋಪಾಸನೆಗೆ ಪ್ರಮಾಣದ ವಿರೋಧವು

ಇರುವಂತೆ ಇಲ್ಲಿ ವಿರೋಧ ಇಲ್ಲದಿರುವುದರಿಂದ. ಅಷ್ಟೇ ಅಲ್ಲ 'ನ ಕಶ್ಚಿದ್ ಬ್ರಹ್ಮವಿತ್ ಸ್ಮೃತಿಮ್ ಅನುಭವತಿ' ಎಂಬ ಶ್ರುತಿಯೂ ಇದೆ. ಅನುಮಾನವೂ ಇದೆ.

## ಅದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಅನಿಯಮಃ ಸರ್ವೇಷಾಮವಿರೋಧಾತ್ ಶಬ್ದಾನುಮಾನಾಭ್ಯಾಮ್ ॥**
ಉಪನಿಷತ್ತಿನಲ್ಲಿ ಹೇಳಿರುವಂತೆ ಕೆಲವು ಸಗುಣೋಪಾಸನೆಗೆ ದೇವಯಾನ ಮಾರ್ಗವನ್ನು ಹೇಳಲಾಗಿದೆ. ಉದಾಹರಣೆಗೆ—ಪರ್ಯಂಕವಿದ್ಯೆ, ಊಪಕೋಸಲವಿದ್ಯೆ. ಕೆಲವು ಉಪಾಸನೆಗಳಲ್ಲಿ ಹೇಳಲಾಗಿಲ್ಲ, ಉದಾಹರಣೆಗೆ-ಮಧುವಿದ್ಯೆ, ಶಾಂಡಿಲ್ಯವಿದ್ಯೆಗಳು. ಆದರೂ, ದೇವಯಾನಗತಿ ಕೆಲವೇ ಸಗುಣೋಪಾಸನೆಗೆ ಎಂಬ ನಿಯಮವಿಲ್ಲ, ಅನಿಯಮವನ್ನೇ ಹೇಳಬೇಕು. ಸರ್ವೇಷಾಂ=ಎಲ್ಲಾ ಸಗುಣೋಪಾಸನೆಗಳಿಗೂ ಅನಿಯಮಃ=ಅವಿಶೇಷೇಣೈವ ದೇವಯಾನಮಾರ್ಗಪ್ರಾಪ್ತಿ ಇದೆ. ಆ ಎಲ್ಲಾ ಉಪಾಸನೆಯ ಉದ್ದೇಶ ಅಭ್ಯುದಯ, ನಿಃಶ್ರೇಯಸವಲ್ಲ. ಶಬ್ದಾನುಮಾನಾಭ್ಯಾಂ—ಶಬ್ದ=ಶ್ರುತಿ, ಅನುಮಾನ=ಸ್ಮೃತಿ. 'ಯೇ ಚೇಮೇಽರಣ್ಯೇ ಶ್ರದ್ಧಾ, ತಪ ಇತ್ಯುಪಾಸತೇ ತೇಽರ್ಚಿಷಮೇವಾಭಿಸಂವಿಶಂತಿ' ಎಂದು ಸರ್ವಸಾಧಾರಣವಾಗಿ ಅರ್ಚಿರಾದಿ ದೇವಮಾರ್ಗವನ್ನು ಹೇಳಲಾಗಿದೆ. ಆ ವಾಕ್ಯದಲ್ಲಿ 'ಶ್ರದ್ಧಾತಪಃ' ಎಂದಿಷ್ಟೇ ಹೇಳಿದ್ದರೂ ಅವುಗಳ ಜೊತೆಯಲ್ಲಿ ವಿದ್ಯೆಯನ್ನೂ ಸೇರಿಸಿಕೊಳ್ಳಬೇಕು.

ವಿದ್ಯಯಾ ತದಾರೋಹಂತಿ ಯತ್ರ ಕಾಮಾಃ ಪರಾಗತಾಃ ।
ನ ತತ್ರ ದಕ್ಷಿಣಾ ಯಂತಿ ನಾವಿದ್ವಾಂಸಸ್ತಪಸ್ವಿನಃ ॥

ಎಂದು ಅಜ್ಞಾನಿಗಳಾರೂ ದೇವಯಾನಮಾರ್ಗದಲ್ಲಿ ಹೋಗುವುದಿಲ್ಲ ಎಂದು ಪ್ರಮಾಣವಿದೆ. ಹೀಗೆ ವಿದ್ಯೋಪಾಸಕರಾದ ಎಲ್ಲಾ ಸಾಧಕರಿಗೂ ದೇವಯಾನ ಮಾರ್ಗಗಮನ ಇದೆ. ಸ್ಮೃತಿಯೂ ಈ ಬಗ್ಗೆ ಹೀಗೆ ಹೇಳುತ್ತದೆ.

ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಃ ಶಾಶ್ವತೇ ಮತೇ ।
ಏಕಯಾ ಯಾತ್ಯನಾವೃತ್ತಿಮ್ ಅನ್ಯಯಾವರ್ತತೇ ಪುನಃ ॥ (ಗೀ.8.26)

**ವಿಮರ್ಶೆ**—ಸಗುಣವಿದ್ಯೆಯ ಫಲವಾಗಿ ಬ್ರಹ್ಮಲೋಕಕ್ಕೆ ಹೋದವನು ತಿರುಗಿಬರುತ್ತಾನೋ ಇಲ್ಲವೋ? ಬರುತ್ತಾನೆ ಎನ್ನುವುದು ಸ್ಮೃತಿಗೆ ವಿರುದ್ಧ. ಭಗವದ್ಗೀತೆಯಲ್ಲಿ ಅರ್ಚಿರಾದಿಮಾರ್ಗದಿಂದ (ದೇವಯಾನದಿಂದ) ಹೋದವರು ಹಿಂತಿರುಗುವುದಿಲ್ಲ, ಎಂದು ಹೇಳಲಾಗಿದೆ.

''ಏಕಯಾ ಯಾತಿ ಅನಾವೃತ್ತಿಮ್'' ಎಂದು.

ಸಗುಣ ವಿದ್ಯೆಯ ಫಲವೂ ಅನಾವೃತ್ತಿಗೆ ಕಾರಣವಾಗಿದೆ ಎನ್ನುವುದಾದರೆ ಅನಾವೃತ್ತಿ ಫಲವು ಅರ್ಚಿರಾದಿಮಾರ್ಗಗಮನದಿಂದಲೇ ಸಿದ್ಧವಾಗುವುದು, ಎಂಬ ನಿಯಮಮಾಡಿ ನಿರ್ಗುಣವಿದ್ಯಾಫಲವೂ ಮಾರ್ಗಸಾಧ್ಯವೆಂದಾದೀತು. ವಸ್ತುತಃ ನಿರ್ಗುಣವಿದ್ಯೆಯೇ ಅಪ್ರಾಮಾಣಿಕ.

ಇಲ್ಲಿಗೆ ಅನಿಯಮಾಧಿಕರಣ ಮುಗಿಯಿತು.

## ೨೦. ಯಾವದಧಿಕರಣಮ್

**॥ ಓಂ ಯಾವದಧಿಕಾರಮವಸ್ಥಿತಿರಾಧಿಕಾರಿಕಾಣಾಮ್ ಓಂ ॥ ೩೩ ॥**

**ಯಥಾ ಯಥಾಽಧಿಕಾರೋ ವಿಶಿಷ್ಯತ ಏವಂ ಮುಕ್ತಾವಾನಂದೋ ವಿಶಿಷ್ಯತೇ ।**

**'ಮನುಷ್ಯೇಭ್ಯೋ ಗಂಧರ್ವಾಣಾಂ ಗಂಧರ್ವೇಭ್ಯ ಋಷೀಣಾ-ಮೃಷಿಭ್ಯೋ ದೇವಾನಾಂ ದೇವೇಭ್ಯ ಇಂದ್ರಸ್ಯೇಂದ್ರಾದ್ ರುದ್ರಸ್ಯ ರುದ್ರಾದ್ ಬ್ರಹ್ಮಣ ಏಷ ಹ್ಯೇವ ಶತಾನಂದಃ' ಇತಿಹಿ ಚತುರ್ವೇದಶಿಖಾಯಾಮ್ ।**

**ಅಧ್ಯಾತ್ಮೇ ಚ-**

**'ಜ್ಞಾನಂ ಚೋಪಾಸನಂ ಚೈವ ಮುಕ್ತಾವಾನಂದ ಏವ ಚ ।**
**ಯಥಾಧಿಕಾರಂ ದೇವಾನಾಂ ಭವಂತ್ಯೇವೋತ್ತರೋತ್ತರಮ್ ॥' ಇತಿ ॥**

ಸಂಸಾರದಲ್ಲಿ ಎಷ್ಟೆಷ್ಟು ಯೋಗ್ಯತೆಯಲ್ಲಿ (ಅಧಿಕಾರ) ವಿಶೇಷವಿರುವುದೋ ಅದಕ್ಕನುಗುಣವಾಗಿ ಮೋಕ್ಷದಲ್ಲಿ ಆನಂದವೂ ವಿಶೇಷವಾಗಿ ಲಭ್ಯವಾಗುತ್ತದೆ. ಚತುರ್ವೇದಶಿಖೆಯಲ್ಲಿ ಹಾಗಿದೆ—ಮನುಷ್ಯರಿಗಿಂತ ಗಂಧರ್ವರಿಗೆ, ಗಂಧರ್ವರಿಗಿಂತ ಋಷಿಗಳಿಗೆ, ಋಷಿಗಳಿಗಿಂತ ದೇವತೆಗಳಿಗೆ, ದೇವತೆಗಳಿಗಿಂತ ಇಂದ್ರನಿಗೆ, ಇಂದ್ರನಿಗಿಂತ ರುದ್ರನಿಗೆ, ರುದ್ರನಿಗಿಂತ ಬ್ರಹ್ಮನಿಗೆ ಆನಂದವು ಹೆಚ್ಚು. ಬ್ರಹ್ಮನೇ ಶತಾನಂದ= ಅನಂತಪಟ್ಟು ಆನಂದವುಳ್ಳವನು.

'ಅಧ್ಯಾತ್ಮ'ದಲ್ಲೂ ಹೀಗಿದೆ—ಜ್ಞಾನ, ಉಪಾಸನೆ ಮತ್ತು ಮುಕ್ತಿಯಲ್ಲಿ ಆನಂದ ಇವೆಲ್ಲವೂ ಯಥಾಧಿಕಾರಂ=ಅವರವರ ಯೋಗ್ಯತೆಗೆ ಅನುಗುಣವಾಗಿಯೇ ಆಗುತ್ತದೆ. ಅದು ಮನುಷ್ಯ-ದೇವತೆಗಳಿಗೆ ಉತ್ತರೋತ್ತರ ಹೆಚ್ಚಾಗಿರುತ್ತದೆ.

ವಿವರಣೆ—ಮುಕ್ತಿಯಲ್ಲಿ ತಾರತಮ್ಯವೇ ಇಲ್ಲ. ಇದ್ದರೂ ಅದು ಸಾಧಕರ ಪ್ರಯತ್ನಕ್ಕೆ ಅನುಸಾರವಾಗಿ ಒಬ್ಬನಿಗೆ ಹೆಚ್ಚು ಇನ್ನೊಬ್ಬನಿಗೆ ಕಡಿಮೆ ಆನಂದ ವಿರಬಹುದು. ಹೊರತು ಯೋಗ್ಯತೆಗೆ ಅನುಗುಣವಾಗಿ ತಾರತಮ್ಯವಿಲ್ಲ. ಇದು ಪೂರ್ವಪಕ್ಷ. ಮೋಕ್ಷದಲ್ಲಿ ತಾರತಮ್ಯವಿದೆ, ಅದೂ ಜೀವಯೋಗ್ಯತೆಗೆ ಅನುಗುಣ ವಾಗಿಯೇ ಇರುತ್ತದೆ. ಒಂದುವೇಳೆ ಕಡಿಮೆಯೋಗ್ಯತೆಯ ವ್ಯಕ್ತಿಯು ಅಧಿಕ ಸಾಧನೆಯನ್ನು ಮಾಡಿದರೂ ವಿಘ್ನಗಳ ತಡೆಯಿಂದ ಅದು ನಿಲ್ಲುತ್ತದೆ. ಪೃಥುಮಹಾರಾಜ ತನ್ನ ಯೋಗ್ಯತೆ ಮೀರಿ ನೂರು ಅಶ್ವಮೇಧಕ್ಕೆ ಯತ್ನಿಸಿದಾಗ ಅದು ಇಂದ್ರ ಒಡ್ಡಿದ ವಿಘ್ನದಿಂದ ಅರ್ಧಕ್ಕೆ ನಿಂತಿತು.

ಅಸ್ವಾಧಿಕಾರಿಕೋ ಯತ್ನಃ ಪ್ರಾಯಶೋ ನೋಪಪದ್ಯತೇ ।
ಕಥಂಚಿದಧಿಕೇ ಯತ್ನೇ ದೋಷಃ ಕಶ್ಚಿತ್ ಸಮಾಪತೇತ್ ॥

## ॥ ಓಂ ಅಕ್ಷರಧಿಯಾಂ ತ್ವವಿರೋಧಃ ಸಾಮಾನ್ಯ-ತದ್ಭಾವಾಭ್ಯಾಮೌಪಸದವತ್ ತದುಕ್ತಮ್ ಓಂ ॥ ೩೪ ॥

**ನಚಾಸಮತ್ವೇನ ವಿರೋಧೋ ಭವತಿ। ಬ್ರಹ್ಮಧೀತ್ವಾದ್ ದೋಷಾಭಾವ-ಸಾಮ್ಯಾದುತ್ತಮೇಭ್ಯೋಽನ್ಯೇಷಾಂ ಭಾವಾಚ್ಚ। ಔಪಸದವತ್ ಶಿಷ್ಯವತ್। ಉಕ್ತಂ ಹಿ ತುರಶ್ರುತೌ-**

**'ನಾನಾವಿಧಾ ದೇ(ಜೀ)ವಸಂಘಾ ವಿಮುಕ್ತೌ**
**ನಚೈವ ತೇಷಾಂ ಬ್ರಹ್ಮಧಿಯಾಂ ವಿರೋಧಃ।**
**ದೋಷಾಭಾವಾದ್ ಗುರುಶಿಷ್ಯಾದಿಭಾವಾ-**
**ಲ್ಲೋಕೇಽಪಿ ನಾಸೌ ಕಿಮು ತೇಷಾಂ ವಿಮುಕ್ತೇಃ ॥' ಇತಿ ॥**

ಮುಕ್ತಿಯಲ್ಲಿ ಅಸಮಾನತೆ ಇರುವುದರಿಂದ ಮುಕ್ತರಿಗೆ ಪರಸ್ಪರವಿರೋಧವು ಬರುವುದಿಲ್ಲ. ಎಲ್ಲರೂ (ಯಥೇಷ್ಟ ಆನಂದದಾಯಕನಾದ) ಭಗವಂತನ ಜ್ಞಾನ ಪಡೆದಿರುತ್ತಾರೆ. ಅವರಿಗೆ ವಿಷಯಲಾಲಸೆ ಇರುವುದಿಲ್ಲ. ಮಾತ್ಸರ್ಯಾದಿ ದೋಷಭಾವ ಎಲ್ಲರಿಗೂ ಸಮಾನವಾಗಿರುತ್ತದೆ. ಒಬ್ಬರಿಂದ (ಅನ್ಯೇಭ್ಯಃ)ಮತ್ತೊಬ್ಬರಿಗೆ (ಅನ್ಯೇಷಾಂ) ಭಾವಾಚ್ಚ=ಉಪಕಾರವೂ ಇರುವುದರಿಂದ. (ಹೀಗೆ ಈ ಕಾರಣಗಳಿಂದ ಮೋಕ್ಷದಲ್ಲಿ ತಾರತಮ್ಯವಿದ್ದರೂ ವಿರೋಧವಿಲ್ಲ.) ಅದಕ್ಕೆ ಉದಾಹರಣೆ—ಔಪಸದವತ್= ಸಚ್ಛಿಷ್ಯನಂತೆ. ತುರುಶ್ರುತಿಯಲ್ಲಿ ಹೀಗಿದೆ—ಮೋಕ್ಷದಲ್ಲಿ ಮುಕ್ತರ ಗುಂಪು

ನಾನಾವಿಧವಾಗಿರುತ್ತದೆ. ಆದರೂ, ಬ್ರಹ್ಮಜ್ಞಾನಿಗಳಾದ ಅವರಲ್ಲಿ ಪರಸ್ಪರವಿರೋಧ ಇಲ್ಲ. ಏಕೆಂದರೆ, ಅವರಲ್ಲಿ ವಿರೋಧಕ್ಕೆ ಕಾರಣವಾದ ಮಾತ್ಸರ್ಯಾದಿದೋಷಗಳು ಇಲ್ಲ. ಪ್ರತ್ಯುತ, ಗುರುಶಿಷ್ಯಭಾವಸಂಬಂಧವಿರುತ್ತದೆ. ಗುರು–ಶಿಷ್ಯರಲ್ಲಿ ಅಸೂಯಾನಿಮಿತ್ತವಾದ ವಿರೋಧವು ಲೋಕದಲ್ಲೂ ಕಾಣುವುದಿಲ್ಲ. ಹೀಗಿರುವಾಗ ಮೋಕ್ಷದಲ್ಲಿ ವಿರೋಧ ಬರುವುದು ಹೇಗೆ?

**ವಿವರಣೆ**—'ಅಕ್ಷರಧಿಯಾಂ ತ್ವವಿರೋಧಃ' ಎಂಬ ಸೂತ್ರಖಂಡವನ್ನು ತತ್ತ್ವ ಪ್ರದೀಪದಲ್ಲಿ ಹೀಗೆ ವಿವರಿಸಲಾಗಿದೆ—ಅಕ್ಷಯಗುಣ–ಗಣಧಾಮ್ನಿ, ಪರಮಾನಂದ ರೂಪೇ, ಪರಮಾಶ್ಚರ್ಯರೂಪೇ, ಯಥೇಷ್ಟಾನಂದಭೋಜಕೇ ಭಗವತಿ ಸ್ಥಿತಧಿಯಾಂ ಕುತಃ ಅಸಮತ್ವೇಽಪಿ ವಿರೋಧಃ ?

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ಯಾವದಧಿಕಾರಮವಸ್ಥಿತಿರಾಧಿಕಾರಿಕಾಣಾಮ್ ಓಂ ॥** (ಅತ್ರ ಉಪಾಸನಾಯಾಮ್ ಅಸ್ಯ ಏತಾವಾನ್, ಅಸ್ಯ ತು ಏತಾವಾನ್ ಇತಿ ನಿಯಮಃ ಸಾಧ್ಯತೇ । ಗತೇರಿತಿ ವಿಪರಿಣಮ್ಯ ವಾ, ಹಾನೌ ಇತಿ ವಾ ವರ್ತತೇ ।

ಆಧಿಕಾರಿಕಾಣಾಮ್–ಅಧಿಕಾರೋ=ಯೋಗ್ಯತಾ, ತದನುಸಾರ್ಯನುಷ್ಠಾನೇ ಶೀಲಂ ಯೇಷಾಂ ತೇ ಆಧಿಕಾರಿಕಾಃ । ತೇಷಾಂ ಬ್ರಹ್ಮಾದೀನಾಂ, ಯಾವದಧಿಕಾರಂ— 'ಯಾವದವಧಾರಣೇ' ಇತ್ಯವ್ಯಯೀಭಾವಃ, ಅಧಿಕಾರಾನುಸಾರೇಣೈವ, ಗತೌ= ಮುಕ್ತೌ ಅವಸ್ಥಿತಿಃ=ತಾರತಮ್ಯೇನಾವಸ್ಥಾನಮ್ । ನತು ಉಪಾಸನಾಪ್ರಯತ್ನ- ತಾರತಮ್ಯೇನ । ಯೇನ ಪ್ರಾಗಧಿಕಾರನಿಯಮೋ ನ ಸ್ಯಾತ್ ಇತ್ಯರ್ಥಃ । ಮುಕ್ತೌ ಸುಖಾದಿತಾರತಮ್ಯಸ್ಯ ಪ್ರಾಕ್ತನಯೋಗ್ಯತಾತಾರತಮ್ಯೈಕನಿಬಂಧನತ್ವಾತ್, ತದಭಾವೇ ತನ್ನ ಸ್ಯಾತ್ । ಪ್ರಯತ್ನತಾರತಮ್ಯಸ್ಯಾಪಿ ತದಾಯತ್ವಾತ್ ।)

ಸೂತ್ರದ 'ಆಧಿಕಾರಿಕಾಣಾಂ' ಎಂಬ ಪದದಲ್ಲಿರುವ ಅಧಿಕಾರಪದಕ್ಕೆ ಯೋಗ್ಯತಾ ಎಂದರ್ಥ. ತಮ್ಮ ಯೋಗ್ಯತಾನುಸಾರವಾಗಿ ಸಾಧನಾನುಷ್ಠಾನ ಮಾಡುವ ಸ್ವಭಾವ ದವರು ಆಧಿಕಾರಿಗಳು. ಅಂದರೆ ಬ್ರಹ್ಮಾದಿಮೋಕ್ಷಯೋಗ್ಯಜೀವರು. ಅಂತಹವರ, ಯಾವದಧಿಕಾರಂ=ಯೋಗ್ಯತಾನುಸಾರವಾಗಿಯೇ ಮೋಕ್ಷದಲ್ಲಿ ತಾರತಮ್ಯಾನು ಸಾರೇಣ ಅವರು ಆನಂದಾನುಭವದಲ್ಲಿ ಇರುತ್ತಾರೆ. ಹೀಗೆ ಮೋಕ್ಷದ ಆನಂದತಾರತಮ್ಯವು ಜೀವರ ಯೋಗ್ಯತೆಗೆ ಅನುಗುಣವಾಗಿಯೇ ಇರುತ್ತದೆ. ಯೋಗ್ಯತಾನುಸಾರವಾಗಿಯೇ ಅವರು ಸಾಧನಾನುಷ್ಠಾನವನ್ನೂ ಮಾಡುತ್ತಾರೆ.

ಸಂಸಾರದ ಸ್ಥಿತಿ ಯೋಗ್ಯತಾನುಸಾರಿಯಾಗಿರುವುದಿಲ್ಲ. ಅನೇಕ ಯೋನಿಗಳ ಪ್ರಾಪ್ತಿಯಾಗುವುದರಿಂದ ಉಚ್ಚತ್ವ-ನೀಚತ್ವಗಳು ಜೀವಯೋಗ್ಯತೆಗೆ ವ್ಯತ್ಯಾಸವಾಗಿಯೂ ಇರಬಹುದು. ಆದರೆ, ಮೋಕ್ಷದಲ್ಲಿ ಸ್ವರೂಪೇಣ ಸ್ಥಿತಿಯಾದುದರಿಂದ ಯೋಗ್ಯತಾನು ಸಾರವಾಗಿಯೇ ಆ ಸ್ಥಿತಿ ಇರುತ್ತದೆ.

**॥ ಓಂ ಅಕ್ಷರಧಿಯಾಂ ತ್ವವಿರೋಧಃ ಸಾಮಾನ್ಯ- ತದ್ಭಾವಾಭ್ಯಾಮೌಪಸದವತ್ ತದುಕ್ತಮ್ ಓಂ ॥** (ತುರಪ್ಯರ್ಥೇ, ಅಸತ್ವೇಽಪಿ ಇತಿ ಸಮುಚ್ಚಿನೋತಿ। ಗತೌ ಇತಿ, ಆಧಿಕಾರಿಕಾಣಾಮಿತಿ ಚಾಸ್ತಿ– ಅಕ್ಷರಧಿಯಾಮ್ ಇತಿ ಹೇತುಗರ್ಭವಿಶೇಷಣಮ್।

ಬ್ರಹ್ಮಧಿಯಾಂ ಬ್ರಹ್ಮಾದೀನಾಂ ಮುಕ್ತಾನಾಮ್ ಅಸಮತ್ವೇಽಪಿ ಅವಿರೋಧಃ= ವಿರೋಧೋ ನಾಸ್ತಿ। ಕುತಃ ? ಬ್ರಹ್ಮಾಧೀನತ್ವಾತ್। ವಿಷಯಲಂಪಟತ್ವಾಭಾವಾತ್ ಇತಿ ಯಾವತ್। ಸಾಮಾನ್ಯ–ತದ್ಭಾವಾಭ್ಯಾಂ ಸಾಮಾನ್ಯಾತ್=ಮತ್ಸರಾದಿದೋಷಾಭಾವ ಸಾಮ್ಯಾತ್, ತದ್ಭಾವಾತ್-ತದಿತಿ ತಂತ್ರಂ, ತೇಭ್ಯಃ=ಮಾತ್ಸರ್ಯವಿಷಯತಯಾ ಪ್ರಸಂಜಿತೇಭ್ಯಃ ಉತ್ತಮೇಭ್ಯಃ ತಸ್ಯ=ಪ್ರಕೃತ ಬ್ರಹ್ಮಜ್ಞಾನಾದಿಲಕ್ಷಣೋಪಕಾರಸ್ಯ, ಭಾವಾತ್-ಅನ್ಯೇಷಾಮ್ ಅವರಾಣಾಮ್, ಇತ್ಯರ್ಥಃ। ಕಥಂ ? ಔಪಸದವತ್, ಸಚ್ಛಿಷ್ಯಸ್ಯ ಯಥಾ ಗುರೌ ಅವಿರೋಧಃ ತಥಾ ಇತಿ। ಕುತಃ ? ತತ್=ಅಸಮತ್ವೇಽಪಿ ದೋಷಾಭಾವಾದಿನಾ ವಿರೋಧೋ ನೇತ್ಯೇತತ್ ಉಕ್ತಂ='ನಾನಾವಿಧಾ ಜೀವಸಂಘಾ ವಿಮುಕ್ತೌ' ಇತಿ ಶ್ರುತೌ ಇತ್ಯರ್ಥಃ। ಅಕ್ಷರಧಿಯಃ ವೈರಾಗ್ಯಸಾಧ್ಯತ್ವಾತ್ ತೇನ ವೈರಾಗ್ಯಭಾವಃ ಸೂಚ್ಯತೇ।)

ಮೋಕ್ಷದಲ್ಲಿ ತಾರತಮ್ಯವಿದ್ದರೂ ಅಸೂಯೆ, ತನ್ನಿಮಿತ್ತವಾದ ವಿರೋಧಗಳು ಇಲ್ಲ. ಅಕ್ಷರಧಿಯಾಂ=ಬ್ರಹ್ಮಜ್ಞಾನಿಗಳಾದ ಮುಕ್ತರಿಗೆ ಅವಿರೋಧಃ=ತಾರತಮ್ಯ ಪ್ರಯುಕ್ತವಾದ ವಿರೋಧವೂ ಇಲ್ಲ. ಏಕೆಂದರೆ, ಅವರೆಲ್ಲರೂ ಬ್ರಹ್ಮಜ್ಞಾನಿಗಳು (ಅಕ್ಷರಧಿಯಾಂ). ವೈರಾಗ್ಯವಿದ್ದವರಿಗೆ ಮಾತ್ರ ಬ್ರಹ್ಮಜ್ಞಾನ ಬರುತ್ತದೆ. ಹೀಗಾಗಿ ಬ್ರಹ್ಮಜ್ಞಾನಿಗಳು ವಿಷಯಲಂಪಟರಾಗಿರುವುದಿಲ್ಲ. ಅಲ್ಲದೆ, ಸಾಮಾನ್ಯ– ತದ್ಭಾವಾಭ್ಯಾಂ– (1) ಸಾಮಾನ್ಯಾತ್=ಮಾತ್ಸರ್ಯಾದಿ ದೋಷವಿಲ್ಲದಿರುವುದು ಅಲ್ಲಿರುವ ಎಲ್ಲರಿಗೂ ಸಾಮಾನ್ಯಧರ್ಮವಾದುದರಿಂದ (2) ತದ್ಭಾವಾತ್–ತೇಭ್ಯಃ= ಮಾತ್ಸರ್ಯಕ್ಕೆ ಕಾರಣವಾದ ಅಧಿಕಾನಂದ ಇರುವವರಿಂದ ತಸ್ಯ=ಬ್ರಹ್ಮಜ್ಞಾನಾದಿ ರೂಪವಾದ ಉಪಕಾರವು ಕಡಿಮೆ ಆನಂದ ಇರುವವರಿಗೆ ಭಾವಾತ್=ಇರುವುದರಿಂದ. ಅದಕ್ಕೆ ನಿದರ್ಶನ– ಔಪಸದವತ್, ಸಚ್ಛಿಷ್ಯನಂತೆ. ಒಳ್ಳೆಯ ಶಿಷ್ಯನಿಗೆ ಗುರುಗಳಲ್ಲಿ ಹೇಗೆ

ಮಾತ್ಸರ್ಯವು ಇಲ್ಲವೋ ಅದರಂತೆ. ತದುಕ್ತಂ–ತತ್=ಮೋಕ್ಷದಲ್ಲಿ ತಾರತಮ್ಯವಿದ್ದರೂ ವಿರೋಧವು ಇಲ್ಲವೆಂಬುದು ಉಕ್ತಮ್='ನಾನಾವಿಧಾ ಜೀವಸಂಘಾ ವಿಮುಕ್ತೌ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟಿದೆ.

ಸೂತ್ರದ 'ಸಾಮಾನ್ಯ–ತದ್ಭಾವಾಭ್ಯಾಂ' ಎಂಬ ಒಂದು ಶಬ್ದದಿಂದ ಎರಡು ಕಾರಣಗಳನ್ನು ಹೇಳಲಾಗಿದೆ. ಸಾಮಾನ್ಯಾತ್, ತದ್ಭಾವಾತ್. ಸಾಮಾನ್ಯಾತ್= ಮಾತ್ಸರ್ಯಾಭಾವವು ಎಲ್ಲರಿಗೂ ಸಾಮಾನ್ಯವಾದ ಗುಣವಾಗಿದೆ, ಎಂದು ಒಂದು ಕಾರಣ. ತದ್ಭಾವಾತ್, ಎಂದರೆ ಉತ್ತಮರಿಂದ ಅಧಮರಿಗೆ ಉಪಕಾರವೂ ಇದೆ, ಎಂದು ಎರಡನೆಯ ಕಾರಣ. ಅವರರಾದವರಿಗೆ ಉತ್ತಮರು ಗುರುಗಳಾಗಿರುತ್ತಾರೆ. ಗುರುಗಳಲ್ಲಿ ಸಾತ್ವಿಕಶಿಷ್ಯರು ಎಂದೂ ಅಸೂಯೆ ಪಡುವುದಿಲ್ಲ. ಹೀಗೆ ವಿರೋಧವಿಲ್ಲದಿರಲು ಮೂರು ಕಾರಣಗಳನ್ನು ಸೂತ್ರದಲ್ಲಿ ಕೊಟ್ಟಂತಾಗಿದೆ—

(1) ಅಕ್ಷರಧಿಯಾಂ (2) ಸಾಮಾನ್ಯಾತ್, (3)ತದ್ಭಾವಾತ್.

## ಅದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

ಶಾಂಕರಭಾಷ್ಯದಲ್ಲಿ ಈ ಎರಡು ಸೂತ್ರಗಳನ್ನು ಪ್ರತ್ಯೇಕ–ಅಧಿಕರಣಗಳನ್ನಾಗಿ ಪರಿಗಣಿಸಲಾಗಿದೆ.

**॥ ಯಾವದಧಿಕಾರಮವಸ್ಥಿತಿರಾಧಿಕಾರಿಕಾಣಾಮ್ ॥** ಜ್ಞಾನಿಗಳಿಗೆ ಇರುವ ದೇಹವು ಪಾತವಾದ ಮೇಲೆ ದೇಹಾಂತರವು ಇದೆಯೋ ಇಲ್ಲವೋ, ಎಂದು ಇಲ್ಲಿ ವಿಚಾರಮಾಡಲಾಗಿದೆ. ಅಪಾಂತರತಮರೆಂಬ ವೇದಾಚಾರ್ಯರು ವಿಷ್ಣುವಿನ ಆದೇಶದಂತೆ ಕಲಿ–ದ್ವಾಪರಯುಗಗಳ ಸಂಧಿಕಾಲದಲ್ಲಿ ಕೃಷ್ಣದ್ವೈಪಾಯನರಾಗಿ ಹುಟ್ಟಿದರು, ಎಂದು ಪುರಾಣದಲ್ಲಿದೆ. ಬ್ರಹ್ಮಮಾನಸಪುತ್ರರಾದ ಸನತ್‌ಕುಮಾರರು ತಾವೇ ರುದ್ರದೇವರಿಗೆ ಕೊಟ್ಟ ವರದಂತೆ ಸ್ಕಂದರೂಪದಿಂದ ಹುಟ್ಟಿದರು. ಹೀಗೆ ಜ್ಞಾನಿಗಳಿಗೂ ಪುನಃ ದೇಹಪ್ರಾಪ್ತಿಯು ತಿಳಿಯುತ್ತದೆ. ಆದ್ದರಿಂದ ಆಧಿಕಾರಿಕ ಜೀವರು ಜ್ಞಾನಿಗಳಾದರೂ ತಮ್ಮ ಅಧಿಕಾರಾವಧಿ ಮುಗಿಯುವವರೆಗೆ ಮುಕ್ತರಾಗದೇ ಇರುತ್ತಾರೆ. ಅವರ ಸ್ಥಿತಿ ಅಧಿಕಾರ ಪರತಂತ್ರ. ಮತ್ತೆ ಕೆಲವು ಜ್ಞಾನಿಗಳು ಅಪರೋಕ್ಷ ಬಂದ ಮೇಲೆ ಪ್ರಾರಬ್ಧಕರ್ಮಕ್ಷಯವಾಗುವವರೆಗೆ ಅದೇ ದೇಹದಲ್ಲಿದ್ದು ಪ್ರಾರಬ್ಧ ಕ್ಷಯವಾದ ಕೂಡಲೇ ಕೈವಲ್ಯ ಪಡೆಯುತ್ತಾರೆ. ಅಪಾಂತರತಮ ಋಷಿಗಳಂತಹ ಕೆಲವರು ಪರಮೇಶ್ವರನಿಂದ ವಿಭಿನ್ನ ಅಧಿಕಾರಗಳಲ್ಲಿ ನಿಯುಕ್ತರಾಗಿ ಅಪರೋಕ್ಷ ಜ್ಞಾನವಿದ್ದರೂ ಕರ್ಮಕ್ಷಯವಾಗದಿರುವುದರಿಂದ ಅಧಿಕಾರ ಸಮಾಪ್ತಿಪರ್ಯಂತ

ಇರುತ್ತಾರೆ. ತಮ್ಮ ಕರ್ಮದಿಂದ, ಮನೆ ಬದಲಾಯಿಸಿದಂತೆ, ದೇಹ ಬದಲಾಯಿಸುತ್ತಿರುತ್ತಾರೆ. ಸುಲಭಾ ಎಂಬ ಬ್ರಹ್ಮವಾದಿನಿಯು ಜನಕರಾಜನೊಂದಿಗೆ ವಾದಮಾಡಲು ಬಯಸಿ ತನ್ನ ದೇಹವನ್ನು ಬಿಟ್ಟು ಜನಕನ ದೇಹದಲ್ಲಿ ಆವಿಷ್ಟಳಾಗಿ, ಜನಕನೊಂದಿಗೆ ವಾದ ಮಾಡಿ ಮತ್ತೆ ತನ್ನ ದೇಹದಲ್ಲಿ ಸೇರಿಕೊಂಡಳು. ಆದ್ದರಿಂದ ಜ್ಞಾನಿಗಳಿಗೆ ಪ್ರಾರಬ್ಧವಶಾತ್ ದೇಹಾಂತರಪ್ರಾಪ್ತಿ ಇದ್ದರೂ ಕರ್ಮಾಂತರಾರಂಭ ಇಲ್ಲದಿರುವುದರಿಂದ ಕೈವಲ್ಯ ನಿಶ್ಚಿತವಾದುದು.

**ವಿಮರ್ಶೆ**—ಇಲ್ಲಿ ಅಪರೋಕ್ಷಜ್ಞಾನ ಬಂದಮೇಲೆ ಜ್ಞಾನಿಗಳು ಸ್ವೀಕರಿಸುವ ಶರೀರವು ಪ್ರಾರಬ್ಧಕರ್ಮದ ಫಲ ಎಂದು ಪೂರ್ವಪಕ್ಷವಾದರೆ ಅದು ಸಿದ್ಧಾಂತವೇ ಆದುದರಿಂದ ಪೂರ್ವಪಕ್ಷವಾಗಲಾರದು. ಇನ್ನು ಅಪರೋಕ್ಷೋತ್ತರದಲ್ಲಿ ಅಪರೋಕ್ಷ ಪಡೆದ ಶರೀರದಿಂದ ಮಾಡಿದ ಕರ್ಮದ ಫಲ ಎನ್ನುವುದು 'ತದಧಿಗಮೇ ಉತ್ತರ-ಪೂರ್ವಾಘಯೋರಶ್ಲೇಷವಿನಾಶೌ' ಎಂಬ ಸೂತ್ರಕ್ಕೆ ವಿರುದ್ಧ. ಅದು ಕರ್ಮಫಲವೇ ಅಲ್ಲ. ವಿದ್ಯಾಕರ್ಮಗಳಿಂದ ಸಂತುಷ್ಟನಾದ ಬ್ರಹ್ಮನಿಂದ ದತ್ತವಾದ ಐಶ್ವರ್ಯದ ಫಲ ಎಂದು ಹೇಳಿದರೆ ಅರ್ಚಿರಾದಿ ಮಾರ್ಗಗತಿಯೂ ಈಶದತ್ತವಾದ ಐಶ್ವರ್ಯಫಲ ಎಂದು ಹೇಳಬಹುದು. ಆದ್ದರಿಂದ ಹಿಂದಿನ ಅಧಿಕರಣದ ಸಿದ್ಧಾಂತವು ಅಯುಕ್ತವಾದೀತು.

ವ್ಯಾಸರು ಅಪಾಂತರತಮ ಎಂಬ ಋಷಿಯ ಅವತಾರ ಎನ್ನುವುದು ಮಹಾಭಾರತಕ್ಕೆ ವಿರುದ್ಧ—

''ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್॥''

**॥ ಅಕ್ಷರಧಿಯಾಂ ತ್ವವರೋಧಃ ಸಾಮಾನ್ಯತದ್ಭಾವಾಭ್ಯಾಮ್ಔಪಸದವತ್ ತದುಕ್ತಮ್ ॥** ಮಾಧ್ವಭಾಷ್ಯದಲ್ಲಿ 'ಅವಿರೋಧಃ' ಎಂದು ಸೂತ್ರಪಾಠ. ಶಾಂಕರಭಾಷ್ಯ ದಲ್ಲಿ 'ಅವರೋಧಃ' ಎಂದು ಪಾಠ.

ಬೃಹದಾರಣ್ಯಕದಲ್ಲಿ 'ಏತದ್ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತಿ ಅಸ್ಥೂಲಮನಣ್ವಹ್ರಸ್ವಮ್-ಅದೀರ್ಘಮ್-ಅಲೋಹಿತಮ್-ಅಸ್ನೇಹಮ್' ಎಂದು ಅಕ್ಷರತತ್ತ್ವದಲ್ಲಿ ಕೆಲವು ಧರ್ಮಗಳನ್ನು ನಿಷೇಧ ಮಾಡಲಾಗಿದೆ. ಆಥರ್ವಣದಲ್ಲಿ-'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ। ಯತ್ತದ್ ಅದ್ರೇಶ್ಯಮ್-ಅಗ್ರಾಹ್ಯಮ್-ಅವರ್ಣಮ್-ಅಚಕ್ಷುಃ-ಶ್ರೋತ್ರಂ ತದಪಾಣಿಪಾದಮ್' ಎಂದು ಅದೇ ಅಕ್ಷರ ತತ್ತ್ವವನ್ನು ನಿರೂಪಿಸಿ, ಬೇರೆ ಧರ್ಮಗಳನ್ನು ನಿಷೇಧ ಮಾಡಲಾಗಿದೆ. ಆದರೂ ಅಕ್ಷರಧಿಯಾಂ=ಅಕ್ಷರತತ್ತ್ವದ ಬಗ್ಗೆ ಮಾಡಿರುವ ನಿಷೇಧಗಳಿಗೆ ಅವರೋಧಃ=ಒಂದು

ಕಡೆಯಿಂದ ಇನ್ನೊಂದು ಕಡೆಗೆ ಉಪಸಂಹಾರವಿದೆ. ಅರ್ಥಾತ್ ಎರಡೂ ಉಪನಿಷತ್ತುಗಳು ಮಾಡಿರುವ ನಿಷೇಧಗಳನ್ನು ಒಟ್ಟಾಗಿ ತಿಳಿದು ಅಕ್ಷರತತ್ತ್ವವನ್ನು ಧ್ಯಾನಿಸಬೇಕು. ಸಾಮಾನ್ಯ-ತದ್ಭಾವಾಭ್ಯಾಂ=ಎರಡೂ ಉಪನಿಷತ್ತುಗಳಲ್ಲೂ ವಿಶೇಷ ಧರ್ಮಗಳ ನಿರಾಕರಣೆಯೇ ಆಗಿದೆ. ತದ್ಭಾವಾತ್=ಒಂದೇ ಅಕ್ಷರದ ಉಲ್ಲೇಖವಿದೆ. ಅದಕ್ಕೆ ಉದಾಹರಣೆ, ಔಪಸದವತ್. ಜಾಮದಗ್ನ್ಯ ಎಂಬ ನಾಲ್ಕು ದಿನದ ಒಂದು ಯಾಗ. ಅದರ ಉಪಸದ್‌ಯಾಗದಲ್ಲಿ ಆಜ್ಯದ ಬದಲು ಪುರೋಡಾಶವನ್ನು ಹಾಕಲಾಗುತ್ತದೆ. ಪುರೋಡಾಶವನ್ನು ಹಾಕುವ ಮಂತ್ರ ಸಾಮವೇದ. ಆ ವೇದ ಉದ್ಗಾತೃ ಎಂಬ ಹೋತೃವಿನ ವೇದ. ಆದರೆ, ಹವಿಸ್ಸನ್ನು ಹಾಕುವ ಕರ್ಮ ಅಧ್ವರ್ಯುವಿನದು. ಆದ್ದರಿಂದ ಉದ್ಗಾತೃವೇದಮಂತ್ರವನ್ನು ಅಧ್ವರ್ಯು ಹೇಳಿ ಆಹುತಿಯನ್ನು ನೀಡಬೇಕು. ಇದು (ಉಪಸದ್‌ಯಾಗ) ಅಂಗಯಾಗ. ಅಂಗವು ಪ್ರಧಾನಾಧೀನ. ಪ್ರಧಾನದಂತೆ ಈ ಅಂಗಯಾಗದಲ್ಲೂ ಪುರೋಡಾಶಪ್ರದಾನ ಅಧ್ವರ್ಯುಕಾರ್ಯ. ಅದರಂತೆ, ಅಕ್ಷರತತ್ತ್ವಾಧೀನವಾದುದು ಧರ್ಮನಿಷೇಧ. ಆದ್ದರಿಂದ ಅಕ್ಷರತತ್ತ್ವದಲ್ಲಿ ಧರ್ಮನಿಷೇಧ ಮಾಡಿರುವಲ್ಲೆಲ್ಲ, ಎಲ್ಲ ನಿಷೇಧಗಳೂ ಉಪಸ್ಥಿತವಾಗುತ್ತವೆ. 'ಆನಂದಾದಯಃ ಪ್ರಧಾನಸ್ಯ' ಎಂಬ ಸೂತ್ರದಲ್ಲಿ ಆನಂದಾದಿವಿಧಿ ರೂಪವಾದ ಧರ್ಮಗಳ ಉಪಸಂಹಾರವನ್ನು ಹೇಳಲಾಗಿದೆ. ಇಲ್ಲಿ ನಿಷೇಧಧರ್ಮಗಳ ಉಪಸಂಹಾರ.

**ವಿಮರ್ಶೆ**—ಸೂತ್ರಕ್ಕೆ ಈ ಅರ್ಥವು ವಿವಕ್ಷಿತವಾಗಿದ್ದಲ್ಲಿ 'ಅಕ್ಷರಧಿಯಾಂ' ಎನ್ನುವ ಬದಲು 'ಪ್ರತಿಷೇಧಧಿಯಾಂ' ಎಂದು ಹೇಳಬೇಕಾಗಿತ್ತು. ಅವರೋಧಶಬ್ದಕ್ಕೆ ಉಪಸಂಹಾರ, ಎಂಬ ಅರ್ಥ, ತದ್ಭಾವಶಬ್ದಕ್ಕೆ ಪ್ರತ್ಯಭಿಜ್ಞಾನ, ಎಂಬ ಅರ್ಥ ಉಚಿತವಲ್ಲ. ಒಂದು ಕಡೆ ಹೇಳಿದ ಗುಣಗಳನ್ನೋ ನಿಷೇಧಗಳನ್ನೋ ಇನ್ನೊಂದು ಕಡೆ ಉಪಸಂಹಾರ ಮಾಡಬಹುದು. ಆದರೆ, ಜ್ಞಾನಕ್ಕೆ ಈ ರೀತಿಯ ಉಪಸಂಹಾರವನ್ನು ಹೇಳುವುದು ಅನುಚಿತ. ಸೂತ್ರದಲ್ಲಿ 'ಅಕ್ಷರಧಿಯಾಂ' ಎಂದು ಜ್ಞಾನಕ್ಕೆ ಉಪಸಂಹಾರ ವನ್ನು ಹೇಳಲಾಗಿದೆ.

**ರಾಮಾನುಜಭಾಷ್ಯದಲ್ಲೂ** ಎರಡು ಸೂತ್ರಗಳನ್ನು ಪ್ರತ್ಯೇಕವಾದ ಅಧಿಕರಣ ಗಳೆಂದು ಪರಿಗಣಿಸಲಾಗಿದೆ. ಅರ್ಥವೂ ಮುಖ್ಯಾಂಶದಲ್ಲಿ ಸಮಾನ. ಆದರೂ 'ಇಯದಾಮನನಾತ್' ಎಂಬ ಮುಂದಿನ ಸೂತ್ರವೂ ಅಕ್ಷರಾಧಿಕರಣದ ಗುಣಸೂತ್ರ. ಅಸ್ಥೂಲತ್ವಾದಿ ವಿಶಿಷ್ಟವಾದ ಆನಂದಾದಿಗಳು ಬ್ರಹ್ಮನಿಗೆ ಇರುವ ಚಿದಚಿದಾದಿ ಪ್ರಪಂಚವ್ಯಾವರ್ತಕವಾದ ಗುಣಗಳು. 'ಸರ್ವಕರ್ಮಾ ಸರ್ವಗಂಧಃ' ಇತ್ಯಾದಿ

ಗುಣಗಳನ್ನು ಸರ್ವತ್ರ ಉಪಸಂಹಾರ ಮಾಡಬೇಕಾಗಿಲ್ಲ. ಆಮನನಾತ್= ಅನುಚಿಂತನಾತ್. ಗುಣಚಿಂತನೆ ಮಾಡಬೇಕಾದುದರಿಂದ ಎಷ್ಟು ಅಗತ್ಯವೋ ಅಷ್ಟನ್ನು ಮಾತ್ರ ಸರ್ವಬ್ರಹ್ಮವಿದ್ಯೆಗಳಲ್ಲಿ ಉಪಸಂಹಾರ ಮಾಡಬೇಕು. ಎಲ್ಲವನ್ನೂ ಚಿಂತನೆ ಮಾಡುವುದು ಅಸಾಧ್ಯವಾದುದರಿಂದ ಅವುಗಳನ್ನು ತತ್ತದ್ವಿದ್ಯೆಗಳಲ್ಲಿ ಮಾತ್ರ ಚಿಂತನೆ ಮಾಡಬೇಕು.

ವಿಮರ್ಶೆ—ಆನಂದಾದಿ ಗುಣಗಳು ಜೀವಸಾಧಾರಣ. ಆದ್ದರಿಂದ ಅಸ್ಥೂಲತ್ವಾದಿ ಧರ್ಮಗಳನ್ನೂ ಸೇರಿಸಿಕೊಳ್ಳಬೇಕು, ಎನ್ನುವುದು ಸರಿಯಲ್ಲ. ಅಪ್ರತಿಬದ್ಧವಾದ ಆನಂದವು ಜೀವಸಾಧಾರಣವಲ್ಲ. ಕೇವಲಾನಂದವು ಜೀವಸ್ವರೂಪಸಾಧಾರಣವಾದಂತೆ ಅಸ್ಥೂಲತ್ವಾದಿಗಳೂ ಅವನ ಸ್ವರೂಪದಲ್ಲಿ ಇವೆ. ತದ್ವಿಶಿಷ್ಟ ಆನಂದಾದಿಗಳೂ ಜೀವಸಾಧಾರಣವಾಗಿವೆ.

ಇಲ್ಲಿಗೆ ಯಾವದಧಿಕರಣವು ಮುಗಿಯಿತು.

## ೨೧. ಇಯದಾಮನನಾಧಿಕರಣಮ್

### ॥ ಓಂ ಇಯದಾಮನನಾತ್ ಓಂ ॥ ೩೫ ॥

**ನಾಮಾದ್ಯಾರಭ್ಯ ಪ್ರಾಣಾಂತಮುತ್ತರೋತ್ತರಮುತ್ತಮತ್ವಮುಕ್ತಮ್ । ನ ಪ್ರಾಣಾತ್ ಕಿಂಚಿದ್ ಭೂಯ ಉಕ್ತಮ್ । ತಥಾಽಪಿ ಪೂರ್ವವತ್ (ಸ್ಯಾದಿತಿ) ಸ್ಯಾದಪೀತಿ ನ ವಾಚ್ಯಮ್ ।**

> **'ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್ ನಹಿ ಪ್ರಾಣಾದ್ ಭೂಯಾನ್ ಪ್ರಾಣೋ ಹ್ಯೇವ ಭೂಯಾಂಸ್ತಸ್ಮಾದ್ ಭೂಯಾನ್ ನಾಮ' ಇತಿ ಕೌಂಠರವ್ಯಶ್ರುತೇಃ ।**

ಛಂದೋಗಶ್ರುತಿಯಲ್ಲಿ ನಾಮಾಭಿಮಾನಿನಿ–ಉಷೆಯನ್ನು ಪ್ರಾರಂಭಿಸಿ ಪ್ರಾಣ ಪರ್ಯಂತವಾಗಿ ಒಬ್ಬರಿಂದ ಒಬ್ಬರು ಉತ್ತಮರೆಂದು ಹೇಳಲಾಗಿದೆ. ಪ್ರಾಣನಿಗಿಂತ ಉತ್ತಮರನ್ನು ಹೇಳಲಾಗಿಲ್ಲ. ಆದರೂ ಪ್ರಾಣನಿಗಿಂತ ಪೂರ್ವದಲ್ಲಿ, ಒಬ್ಬರಿಗಿಂತ ಇನ್ನೊಬ್ಬರು ಉತ್ತಮರಾಗಿರುವಂತೆ ಪ್ರಾಣನಿಗಿಂತಲೂ ಉತ್ತಮರು ಇರಬಹುದು, ಎಂಬ ಸಂದೇಹ ಸರಿಯಲ್ಲ. ಕೌಂಠರವ್ಯಶ್ರುತಿಯಲ್ಲಿ ಪ್ರಾಣನೇ ಸಾಧಕವರ್ಗದಲ್ಲಿ ಉತ್ತಮನು, ಅವನಿಗಿಂತ ಉತ್ತಮರಾದ ಸಾಧಕರು ಇಲ್ಲ ಎಂದು ಹೇಳಲಾಗಿದೆ.

**ವಿವರಣೆ**—ಈ ಪಾದದಲ್ಲಿ ಪ್ರಾಸಂಗಿಕವಾಗಿ ಬಂದ ಮುಕ್ತರ ಬಗೆಗಿನ ವಿಚಾರವು ಮುಗಿಯಿತು. ಇಲ್ಲಿ ಅಧಿಕಾರಿತಾರತಮ್ಯದ ಕೊನೆಯನ್ನು ಹೇಳಲಾಗಿದೆ.

ಛಾಂದೋಗ್ಯದಲ್ಲಿ ನಾಮ, ವಾಕ್, ಮನಃ, ಸಂಕಲ್ಪ, ಚಿತ್ತ, ಧ್ಯಾನ, ವಿಜ್ಞಾನ, ಬಲ, ಅನ್ನ, ಅಪ್, ತೇಜಃ, ಆಕಾಶ, ಸ್ಮರ, ಆಶಾ, ಪ್ರಾಣ ಈ ತತ್ತ್ವಗಳಲ್ಲಿ ಒಂದಕ್ಕಿಂತ ಒಂದು ಉತ್ತಮ ಎಂದು 'ವಾಗ್ವಾವ ನಾಮ್ನೋ ಭೂಯಸೀ' ಎಂದು ಮುಂತಾಗಿ ಹೇಳಲಾಗಿದೆ. ನಾಮಾದಿಪದಗಳು ಅಭಿಮಾನಿದೇವತಾವಾಚಕಗಳು, ಎಂದು ಅನುವ್ಯಾಖ್ಯಾನದಲ್ಲಿ ಆಚಾರ್ಯರು ಬೃಹತ್ಸಂಹಿತಾವಚನವನ್ನು ಉಲ್ಲೇಖಿಸಿ ಹೇಳಿದ್ದಾರೆ—

ಉಷಾ, ಸ್ವಾಹಾ, ಚ ಪರ್ಜನ್ಯಃ ಮಿತ್ರೋಽಗ್ನಿರ್ವರುಣೋ ವಿಧುಃ ।
ಪ್ರವಹೋಽನಿರುದ್ಧ ಇಂದ್ರೋಮೇ ರುದ್ರೋ ವಾಣೀ ಚ ಮಾರುತಃ ।
ಉತ್ತರೋತ್ತರತಸ್ತ್ವೇತೇ ಗುಣೈಃ ಸರ್ವೈಶ್ಚ ಮುಕ್ತಿಗಾಃ ॥

ಸಾಧಕರ ಈ ಗುಂಪಿನಲ್ಲಿ ಮುಖ್ಯಪ್ರಾಣನೇ ಅತ್ಯುತ್ತಮಸಾಧಕ. ಅವನಿಗಿಂತಲೂ ಎತ್ತರದ ಸಾಧಕರು ಇಲ್ಲ ಎಂದು ಕೌಂಠರವ್ಯಶ್ರುತಿಯಲ್ಲಿ ಹೇಳಲಾಗಿದೆ.

**ಶ್ರುತ್ಯರ್ಥ**—ಪ್ರಾಣೋ ವಾವ=ಮುಖ್ಯಪ್ರಾಣನೇ ಸರ್ವೇಭ್ಯಃ=ಎಲ್ಲಾ ಸಾಧಕರಿಗಿಂತಲೂ ಭೂಯಾನ್=ಶ್ರೇಷ್ಠನು. ಪ್ರಾಣಾತ್=ಮುಖ್ಯಪ್ರಾಣನಿಗಿಂತಲೂ ಭೂಯಾನ್=ಶ್ರೇಷ್ಠನಾದವನು ನಹಿ=ಇಲ್ಲ. ಪ್ರಾಣೋ ಹ್ಯೇವ=ಮುಖ್ಯಪ್ರಾಣನೇ ಭೂಯಾನ್. ತಸ್ಮಾತ್=ಆದಕಾರಣವೇ ಅವನಿಗೆ ಭೂಯಾನ್ನಾಮ='ಭೂಯಾನ್' ಎಂಬ ಹೆಸರಿದೆ.

## ॥ ಓಂ ಅಂತರಾ ಭೂತಗ್ರಾಮವದಿತಿ ಚೇತ್ ತದುಕ್ತಮ್ ಓಂ ॥ ೩೭॥

**ಯಥಾ ಭೂತಗ್ರಾಮ ಏಕಸ್ಮಾದೇಕ ಉತ್ತಮೋಽಸ್ಯೈವ, ಏವಂ ಪ್ರಾಣಾದಪಿ ಪರಮಾತ್ಮಾನಮಂತರಾ ವಿದ್ಯತ ಇತಿ ಚೇತ್, ನ । ಪ್ರಾಣಾದುತ್ತಮಾಭಾವೇ ಪ್ರಮಾಣಮುಕ್ತಮ್ । ಅನ್ಯತ್ರೋತ್ತಮಾಭಾವೇ ನ ಪ್ರಮಾಣಮ್ । ದೃಶ್ಯತೇ ಚಾನ್ಯತ್ರೋತ್ತಮತ್ವಮ್ ॥**

ಹೇಗೆ ಉಷಾದಿ(ನಾಮ) ಭೂತಸಮೂಹದಲ್ಲಿ (ಚೇತನವರ್ಗದಲ್ಲಿ) ಒಂದಕ್ಕಿಂತ ಮತ್ತೊಂದು ಉತ್ತಮವಾದುದು ಇದ್ದೇ ಇದೆಯೋ ಅದರಂತೆ, ಪ್ರಾಣನಿಗಿಂತಲೂ,

ಪರಮಾತ್ಮನನ್ನು ಬಿಟ್ಟು, ಉತ್ತಮನಾದವನು ಅವರಿಬ್ಬರ ಮಧ್ಯದಲ್ಲಿ ಇದ್ದಾನೆ, ಎಂದು ಹೇಳಬಾರದು. ಪ್ರಾಣನಿಗಿಂತ ಉತ್ತಮರಾದ ಸಾಧಕರು ಇಲ್ಲವೆನ್ನಲು ಪ್ರಮಾಣವನ್ನು ಹೇಳಲಾಗಿದೆ. ಆದರೆ, ಉಷಾದಿಚೇತನಸಮೂಹದಲ್ಲಿ ಒಬ್ಬರಿಗೆ ಮತ್ತೊಬ್ಬರು ಉತ್ತಮರಿಲ್ಲ, ಎನ್ನುವುದಕ್ಕೆ ಪ್ರಮಾಣವಿಲ್ಲ. ಅದಕ್ಕೆ ಬದಲಾಗಿ ಪೂರ್ವಪೂರ್ವರಿಗಿಂತ ಮುಂದಿನವರು ಉತ್ತಮರಾಗಿದ್ದಾರೆ ಎಂದು ಹೇಳುವ ಪ್ರಮಾಣವು ಇದೆ– 'ವಾಗ್ ವಾವ ನಾಮ್ನೋ ಭೂಯಸೀ' ಎಂದು.

**|| ಓಂ ಅನ್ಯಥಾ ಭೇದಾನುಪಪತ್ತಿರಿತಿ**

**ಚೇನ್ನೋಪದೇಶವತ್ ಓಂ || ೩೭ ||**

**ಪ್ರಾಣಸ್ಯ ಸರ್ವೋತ್ತಮತ್ವೇ ಪರಮಾತ್ಮನಾ ಭೇದಾನುಪಪತ್ತಿರಿತಿ ಚೇತ್, ನ । ಶ್ರುತ್ಯುಪದಿಷ್ಟವದುಪಪತ್ತೇಃ । ಅನ್ಯೇಭ್ಯಃ ಪ್ರಾಣಸ್ಯೋತ್ತಮತ್ವಂ ತಸ್ಮಾತ್ ಪರಮಾತ್ಮನೋ ಹ್ಯುಪದಿಷ್ಟಮ್ ||**

ಪ್ರಾಣನೇ ಸರ್ವೋತ್ತಮನಾದರೆ (ಇಬ್ಬರು ಸರ್ವೋತ್ತಮರು ಇರಲು ಸಾಧ್ಯವಿಲ್ಲವಾದುದರಿಂದ) ಅವನಿಗೆ ಪರಮಾತ್ಮನಿಂದ ಭೇದವು ಅನುಪಪನ್ನವಾದೀತು ಎನ್ನಬಾರದು. ಛಂದೋಗಶ್ರುತಿಯಲ್ಲಿ ಹೇಳಿದಂತೆ ('ಪ್ರಾಣೋ ವಾ ವ ಆಶಾಯಾಃ ಭೂಯಾನ್' ಎಂಬ ಶ್ರುತಿ.) ''ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್' ಎಂಬ ಕೌಂಡಿನ್ಯಶ್ರುತಿಯಲ್ಲಿರುವ ಸರ್ವಶಬ್ದಕ್ಕೆ ಪರಮಾತ್ಮನ ಹೊರತಾಗಿ ಎಂದು ಅರ್ಥಸಂಕೋಚವು ಯುಕ್ತವಾಗುತ್ತದೆ. ಅಲ್ಲಿ, ಇತರ ಜೀವರಿಗಿಂತ ಪ್ರಾಣನಿಗೆ ಉತ್ತಮತ್ವವನ್ನೂ ಪ್ರಾಣನಿಗಿಂತ ಪರಮಾತ್ಮನಿಗೆ ಉತ್ತಮತ್ವವನ್ನೂ ಹೇಳಲಾಗಿದೆ. (ಶ್ರುತಿಯನ್ನು ಮುಂದಿನ ಅಧಿಕರಣದಲ್ಲಿ ಹೇಳಲಾಗಿದೆ.)

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**|| ಓಂ ಇಯದಾಮನನಾತ್ ಓಂ ||** (ಅತ್ರ ಉಪಾಸಕಾನಾಂ ಪ್ರಾಣಾವಧಿತ್ವಂ ಸಾಧ್ಯತೇ । ಅಧಿಕಾರಿಣಾಮ್, ಇತ್ಯಸ್ತಿ । ಇಯದಿತಿ ಛಂದೋಗಶ್ರುತಿಸ್ಥಂ ಪ್ರಾಣಾವಧಿತ್ವಂ ಪರಾಮೃಶತಿ ।

ಅಧಿಕಾರಿಣಾಂ=ಉಪಾಸಕಾನಾಂ, ಇಯತ್=ಪ್ರಾಣಾವಧಿತ್ವಮೇವ । ನತು ಪ್ರಾಣಾದಧಿಕೋಽಸ್ತಿ। ಕುತಃ ? 'ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್, ನ ಪ್ರಾಣಾದ್ ಭೂಯಾನ್' ಇತಿ ಶ್ರುತೌ ಆಮನನಾತ್, ಇತ್ಯರ್ಥಃ ||)

ಈ ಅಧಿಕರಣದಲ್ಲಿ ಸಾಧಕರಲ್ಲಿ ಪ್ರಾಣನೇ ಉತ್ತರಾವಧಿ ಎಂದು ಸಾಧಿಸಲಾಗಿದೆ. ಅಧಿಕಾರಿಣಾಂ=ಉಪಾಸಕರಿಗೆ ಇಯತ್=ಪ್ರಾಣನೇ ಅಂತಿಮ ಅವಧಿ. ಅವನಿಗಿಂತಲೂ ಉತ್ತಮರಾದ ಸಾಧಕರು ಇಲ್ಲ. ಏಕೆಂದರೆ, ಆಮನನಾತ್=ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್, ಎಂದು ಛಾಂದೋಗ್ಯಶ್ರುತಿಯಲ್ಲಿ ಹೇಳಿರುವುದರಿಂದ.

**।। ಓಂ ಅಂತರಾ ಭೂತಗ್ರಾಮವದಿತಿ ಚೇತ್ ತದುಕ್ತಮ್ ಓಂ ।।** (ದೃಷ್ಟಾಂತ ಬಲಾತ್ 'ಪ್ರಾಣಃ ಸಾಧಿಕಃ, ಅಧಿಕಾರಿತ್ವಾತ್' ಇತಿ ಸಾಧ್ಯಹೇತೂ ಸಂಬಧ್ಯೇತೇ। ಅಕ್ಷರಮಿತಿ ವಿಭಾಗೇನ ಅನ್ವೇತಿ।

ಯಥಾ ಭೂತಗ್ರಾಮೇ=ನಾಮ-ವಾಕ್-ಮನಃ-ಸಂಕಲ್ಪ-ಚಿತ್ತ-ಧ್ಯಾನ-ವಿಜ್ಞಾನ-ಬಲಾತ್ಮಾಪ್-ತೇಜ-ಆಕಾಶ-ಸ್ಮರಾಶಾ-ಪ್ರಾಣಸಮೂಹೇ ಏಕಸ್ಮಾದೇಕೋ ಅಧಿಕಃ ದೃಷ್ಟಃ, ತಥಾ ಅಧಿಕಾರಿತ್ವಾತ್, ಪ್ರಾಣಃ, ಅಕ್ಷರಂ=ಬ್ರಹ್ಮ ಅಂತರಾ=ವಿನಾ, ಸಾಧಿಕಃ ಸ್ಯಾತ್। ಇತಿ ಚೇತ್। ನೇತ್ಯಗ್ರೇತನಮಾಕೃಷ್ಯತೇ। ಕುತಃ ? ತದುಕ್ತಮ್। ತದಿತಿ ತಂತ್ರಮ್। ತತ್ರ=ಪ್ರಾಣಾದಧಿಕಾಭಾವೇ ತತ್=ಪ್ರಮಾಣಮ್ 'ಪ್ರಾಣೋ ವಾವ' ಇತ್ಯುಕ್ತಂ ಯತಃ ಅತಃ, ಇತ್ಯರ್ಥಃ। ತತ್ ಶಬ್ದಬಾಧಿತಮ್ ಅನುಮಾನಮ್ ಇತಿ ಭಾವಃ। ನಚ ಪ್ರಾಣಾದಧಿಕಾಭಾವೇ ನಾಮಾದಿಭ್ಯೋಽಪಿ ಸ ನ ಸ್ಯಾದಿತಿ ವಾಚ್ಯಮ್। ಕುತಃ ? ತತ್=ನಾಮಾದಿಭ್ಯೋ ವಾಗಾದೇಃ ಉತ್ತಮತ್ವಂ ಉಕ್ತಂ='ವಾಗ್ ವಾವ ನಾಮ್ನೋ ಭೂಯಸೀ' ಇತ್ಯಾದೀತಿ ವೃತ್ತ್ಯಂತರಂ ತದುಕ್ತಮಿತ್ಯಸ್ಯ ಬೋಧ್ಯಮ್।)

ಭೂತಗ್ರಾಮವತ್=ಛಾಂದೋಗ್ಯದಲ್ಲಿ ಹೇಳಿರುವ ಸಾಧಕವರ್ಗದಂತೆಯೇ ಪ್ರಾಣನಿಗೂ (ಅಕ್ಷರಮ್) ಅಂತರಾ=ಪರಮಾತ್ಮನನ್ನು ಬಿಟ್ಟು ಇನ್ನೊಬ್ಬನು ಉತ್ತಮನಿದ್ದಾನೆ, ಎಂದು ಹೇಳಬಾರದು. ಏಕೆ? ತದುಕ್ತಮ್ ತತ್=ಪ್ರಾಣನಿಗಿಂತ ಉತ್ತಮರಿಲ್ಲವೆಂಬುವಲ್ಲಿ ತತ್='ಪ್ರಾಣೋ ವಾವ' ಎಂಬ ಪ್ರಮಾಣವು ಉಕ್ತಂ=ಹೇಳಲ್ಪಟ್ಟಿದೆ. ತತ್=ನಾಮಾದಿಗಳಿಗಿಂತ ವಾಗಾದಿಗಳು ಅಧಿಕರೆಂದು ಉಕ್ತಂ='ವಾಗ್ ವಾವ ನಾಮ್ನೋ ಭೂಯಸೀ' ಎಂದು ಪ್ರಮಾಣದಲ್ಲಿ ಉಕ್ತವಾಗಿದೆ.

**।। ಓಂ ಅನ್ಯಥಾ ಭೇದಾನುಪಪತ್ತಿರಿತಿ ಚೇನ್ನೋಪದೇಶವತ್ ಓಂ ।।** (ಅನ್ಯಥಾ=ಪ್ರಾಕ್‌ಪೂರ್ವಪಕ್ಷ್ಯುಕ್ತಾದನ್ಯಥಾ ಪ್ರಾಣಾದಧಿಕಾಭಾವೇ=ಅಸ್ಯೈವ ಸರ್ವೋತ್ತಮತ್ವೇ, ಇತ್ಯರ್ಥಃ। ಭೇದಾನುಪಪತ್ತಿಃ। ಪ್ರಸ್ತುತಬ್ರಹ್ಮಣಾ ಪ್ರಾಣಸ್ಯ ಭೇದಃ ಅಯುಕ್ತಃ ಸ್ಯಾತ್। ದ್ವಯೋಃ ಅಸಂಕುಚಿತ-ಸರ್ವೋತ್ತಮತ್ವಾಯೋಗಾತ್। ಸಂಕೋಚಸ್ತು ಇಯಾನಿತಿ ಅನಿಶ್ಚಿತಃ ಇತಿ ಚೇನ್ನ। ಉಪದೇವತ್। ಅನ್ಯೇಭ್ಯಃ ಪ್ರಾಣಸ್ಯ,

ತತೋ ಹರೇಃ ಆಧಿಕ್ಯಸ್ಯ ಶ್ರುತೌ(ಛಾಂ.7.16) ಉಕ್ತತ್ವಾತ್ ಇತಿ ಭಾವಃ। ಅಂತರೇತ್ಯುಕ್ತೌ ಅಪಿ ಉಕ್ತದಿಶಾ ಶಂಕೋತ್ತರೇ ಯುಕ್ತೇ।)

ಅನ್ಯಥಾ=ಹಿಂದಿನ ಸೂತ್ರದಲ್ಲಿ ಪೂರ್ವಪಕ್ಷದಲ್ಲಿ ಹೇಳಿರುವುದಕ್ಕಿಂತ ಅನ್ಯಥಾ(ಬೇರೆ ರೀತಿಯಾಗಿ) ಪ್ರಾಣನೇ ಸರ್ವೋತ್ತಮನಾದರೆ ಭೇದಾನುಪಪತ್ತಿಃ= ಬ್ರಹ್ಮನಿಂದ ಪ್ರಾಣನಿಗೆ ಭೇದವು ಇಲ್ಲದಾದೀತು, ಇಬ್ಬರು ಸರ್ವೋತ್ತಮರು ಇರಲು ಸಾಧ್ಯವಿಲ್ಲವಾದುದರಿಂದ, ಎಂದರೆ, ಅದು ಸರಿಯಲ್ಲ. ಉಪದೇಶವತ್=ಇತರ ಸಾಧಕರಿಗಿಂತ ಪ್ರಾಣನು ಉತ್ತಮ, ಪ್ರಾಣನಿಗಿಂತ ಪರಮಾತ್ಮನು ಉತ್ತಮ, ಎಂದು ಛಾಂದೋಗ್ಯಶ್ರುತಿಯಲ್ಲೆ ಹೇಳಿರುವಂತೆ ಭೇದವು ಯುಕ್ತವಾಗುತ್ತದೆ.

## ಅದ್ವೈತದರ್ಶನದಲ್ಲಿಸೂತ್ರಾರ್ಥ

**॥ ಇಯದಾಮನನಾತ್ ॥** 'ದ್ವಾ ಸುಪರ್ಣಾ' ಶ್ರುತಿಯು ಆಥರ್ವಣ ಮತ್ತು ಶ್ವೇತಾಶ್ವತರ ಉಪನಿಷತ್ತುಗಳಲ್ಲಿ ಇದೆ. 'ಋತಂ ಪಿಬಂತೌ' ಎಂಬ ಶ್ರುತಿ ಕಾಠಕದಲ್ಲಿದೆ. ಒಂದರಲ್ಲಿ ಋತಪಾನಕರ್ತೃತ್ವವನ್ನು ದ್ವಿತ್ವವಿಶಿಷ್ಟಜೀವೇಶರಿಗೆ ಹೇಳಲಾಗಿದೆ. ಇನ್ನೊಂದರಲ್ಲಿ ಒಬ್ಬನಿಗೆ ಪಿಪ್ಪಲಾತ್ತೃತ್ವ ಮತ್ತೊಬ್ಬನಿಗೆ ಅನಶನವನ್ನು ಹೇಳಲಾಗಿದೆ. ಹೀಗೆ ವಿಭಿನ್ನ ಧರ್ಮಗಳನ್ನು ಹೇಳಿದ್ದರೂ ವಿದ್ಯಾಭೇದವಿಲ್ಲ. ಎರಡೂ ಕಡೆಯೂ ಇಯತ್=ಇಯತ್ತಾಪರಿಚ್ಛಿನ್ನರಾದ, ದ್ವಿತ್ವವಿಶಿಷ್ಟರಾದ ಜೀವೇಶರೇ ವೇದ್ಯರೆಂದು ಆಮನನಾತ್= ಹೇಳಿರುವುದರಿಂದ ವೇದ್ಯಭೇದಾಭಾವಾತ್ ವಿದ್ಯಾಭೇದವಿಲ್ಲ. ಕಾಠಕಮಂತ್ರದಲ್ಲಿ 'ಪಿಬಂತೌ' ಎಂಬಲ್ಲಿ ಜೀವೇಶರಿಬ್ಬರಿಗೂ ಋತಪಾನಕರ್ತೃತ್ವವನ್ನು ಹೇಳಿದ್ದರೂ ಋತಪಾನ ಜೀವನಿಗೆ ಮಾತ್ರ, ಈಶನಿಗಿಲ್ಲ. ಛತ್ರಿನ್ಯಾಯೇನ ದ್ವಿತ್ವವಿಶಿಷ್ಟರಿಗೆ ಋತಪಾನಕರ್ತೃತ್ವವನ್ನು ಹೇಳಬೇಕು. ಇದನ್ನು ಹಿಂದೆ ಗುಹಾಧಿ ಕರಣದಲ್ಲಿ ಹೇಳಲಾಗಿದೆ. ಆದ್ದರಿಂದ ಎರಡೂ ಕಡೆ ಈಶನಿಗೆ ಅನಶನ ಜೀವನಿಗೆ ಪಾನಕರ್ತೃತ್ವವು ವಿವಕ್ಷಿತವಾದುದರಿಂದ ವಿರೋಧವಿಲ್ಲ.

**ವಿಮರ್ಶೆ**—ಗುಹಾಧಿಕರಣದಲ್ಲೇ ಛತ್ರಿನ್ಯಾಯೇನ ಈಶನಿಗೆ ಪಾತೃತ್ವ ಇಲ್ಲವೆಂದೂ ಆ ಮೂಲಕ 'ದ್ವಾ ಸುಪರ್ಣಾ' ಶ್ರುತಿಗೂ 'ಋತಂ ಪಿಬಂತೌ' ಎಂಬ ಶ್ರುತಿಗೂ ಸಮಾನಾರ್ಥವನ್ನೂ ಹೇಳಿರುವುದರಿಂದ ಇಲ್ಲಿ ಪುನಃ ಪೂರ್ವಪಕ್ಷಕ್ಕೆ ಅವಕಾಶವೇ ಇಲ್ಲ. ಆದ್ದರಿಂದಲೇ ಭಾಷ್ಯದಲ್ಲಿ 'ಗುಹಾಂ ಪ್ರವಿಷ್ಟಾವಾತ್ಮಾನೌ' ಇತ್ಯತ್ರ ಸಿದ್ಧೋಽಪ್ಯರ್ಥಃ ಪ್ರಪಂಚ್ಯತೇ' ಎಂದು ಹೇಳಲಾಗಿದೆ.

**॥ ಅಂತರಾ ಭೂತಗ್ರಾಮವತ್ ಸ್ವಾತ್ಮನಃ ॥** ಬೃಹದಾರಣ್ಯಕದಲ್ಲಿ (3.4.1)

'ಉಷಸ್ತಿ'ಯು ಕೇಳುವ ಪ್ರಶ್ನೆ–'ಯತ್ ಸಾಕ್ಷಾದಪರೋಕ್ಷಾದ್ ಬ್ರಹ್ಮ ಯ ಆತ್ಮಾ ಸರ್ವಾಂತರಃ । ತನ್ಮೇ ವ್ಯಾಚಕ್ಷ್ವ' ಎಂದು. ಅದಕ್ಕೆ ಉತ್ತರ—'ಯಃ ಪ್ರಾಣೇನ ಪ್ರಾಣಿತಿ ಸ ಆತ್ಮಾ ಸರ್ವಾಂತರಃ' ಎಂದು. ಪ್ರಾಣಾದಿಭಿನ್ನನಾದ ಸರ್ವಾಂತರ ಆತ್ಮನು ಉಪಾಸ್ಯ, ಎಂದರ್ಥ. ಇದೇ ಪ್ರಶ್ನೆಯನ್ನು ಮುಂದಿನ ಪ್ರಕರಣದಲ್ಲಿ 'ಕಹೋಳನು' ಮಾಡಿದಾಗ ಉತ್ತರ–'ಯೋಽಶನಾಯಾಪಿಪಾಸೇ ಅತ್ಯೇತಿ' (ಬೃ.3.5.9) ಎಂದಿದೆ. ಹಸಿವು–ನೀರಡಿಕೆಗಳನ್ನು ಮೀರಿನಿಂತ ಸರ್ವಾಂತರನಾದ ಆತ್ಮನು ಉಪಾಸ್ಯ ಎಂದು ಅಲ್ಲಿ ಹೇಳಿರುವ ಉಪಾಸನೆ. ಇವೆರಡೂ ವಿದ್ಯೆಗಳನ್ನು ಪ್ರತ್ಯೇಕವಾಗಿ ಹೇಳಿರುವುದರಿಂದ ವೇದ್ಯವು ಒಂದಾದರೂ ವಿದ್ಯಾಭೇದವಿದೆ ಎಂದು ತಿಳಿಯಬಾರದು. ಸ್ವಾತ್ಮನಃ=ಆತ್ಮನಿಗೆ ಅಂತರಾ=ಸರ್ವಾಂತರ್ಯಾಮಿತ್ವವನ್ನು ಎರಡೂ ಪ್ರಶ್ನೋತ್ತರಗಳಲ್ಲಿ ಹೇಳಿರುವುದರಿಂದ ಎರಡೂ ವಿದ್ಯೆಗಳಿಗೆ ಅಭೇದವಿದೆ. ಭೂತಗ್ರಾಮವತ್=ಪೃಥಿವಿಯ ಒಳಗೆ ಆಪಃ, ಅದರೊಳಗೆ ತೇಜಸ್ಸು. ಸರ್ವಾಂತರವಾದುದು ಆಕಾಶ ಒಂದೇ. ಎರಡಕ್ಕೆ ಸರ್ವಾಂತರತ್ವವು ಇರಲು ಸಾಧ್ಯವಿಲ್ಲ. ಆದ್ದರಿಂದ ವೇದ್ಯೈಕ್ಯಾತ್ ವಿದ್ಯೈಕ್ಯ.

ಈ ಸೂತ್ರದ ದ್ವೈತಪಾಠದಲ್ಲಿ ವ್ಯತ್ಯಾಸವನ್ನು ಗಮನಿಸಬಹುದು.

**॥ ಅನ್ಯಥಾ ಭೇದಾನುಪಪತ್ತಿರಿತಿ ಚೇನ್ನೋಪದೇಶಾಂತರವತ್ ॥** ದ್ವೈತ ಭಾಷ್ಯಪಾಠ– ಉಪದೇಶವತ್ । ಅದ್ವೈತಭಾಷ್ಯಪಾಠ ಉಪದೇಶಾಂತರವತ್ ॥

ಅನ್ಯಥಾ=ವಿದ್ಯಾಭೇದವನ್ನು ಅಂಗೀಕರಿಸದಿದ್ದಲ್ಲಿ ಭೇದಾನುಪಪತ್ತಿಃ= ಪ್ರಕರಣಭೇದೇನ ವಿಭಿನ್ನವಾಗಿ ಉಪದೇಶವು ಉಪಪನ್ನವಾಗುವುದಿಲ್ಲ, ಆದ್ದರಿಂದ ವಿದ್ಯಾಭೇದವನ್ನು ಅಂಗೀಕರಿಸಬೇಕು, ಎನ್ನುವುದು ಸರಿಯಲ್ಲ. 'ತತ್ತ್ವಮಸಿ' ಎಂಬ ಉಪದೇಶಾಂತರದಂತೆ ಇದೂ ಉಪಪನ್ನವಾಗುತ್ತದೆ. ಅಲ್ಲಿ ಪ್ರಕರಣಭೇದವಿದ್ದರೂ ವಿದ್ಯಾಭೇದವಿಲ್ಲ. ಅದರಂತೆ, ಪ್ರಕೃತದಲ್ಲೂ.

**ವಿಮರ್ಶೆ**—ಸರ್ವವಿದ್ಯೆಗಳಲ್ಲೂ ವೇದ್ಯವು ಒಂದೇ ಆದರೂ ಉಪಾಸನಾ ಪ್ರಕಾರಗಳು ಭಿನ್ನವಾಗಿರುವಂತೆ ಪ್ರಕೃತ ಉಷಸ್ತಿಬ್ರಾಹ್ಮಣ ಮತ್ತು ಕಹೋಳ ಬ್ರಾಹ್ಮಣಗಳಲ್ಲಿ ಉಪಾಸ್ಯವು ಸರ್ವಾಂತರ್ಯಾಮಿಯೇ ಆದರೂ ಹಿಂದೆ ಹೇಳಿರುವ ಉಪಾಸನಾಧರ್ಮಗಳು ವಿಭಿನ್ನವಾದುದರಿಂದ ವಿದ್ಯಾಭೇದವನ್ನು ಹೇಳಬಹುದು. 'ತತ್ತ್ವಮಸಿ' ಎಂಬ ಛಾಂದೋಗ್ಯಉಪನಿಷತ್ತಿನಲ್ಲಿ ಒಂಭತ್ತು ಪ್ರಕರಣಗಳಲ್ಲಿ ಪ್ರತ್ಯೇಕ ದೃಷ್ಟಾಂತಗಳಿಂದ ಜೀವಬ್ರಹ್ಮಾಭೇದವೇ ಸಾಧ್ಯವಾದುದರಿಂದ ವಿದ್ಯೈಕ್ಯವು ಇರಬಹುದು.

ರಾಮಾನುಜಭಾಷ್ಯದಲ್ಲಿ ಈ ಎರಡೂ ಸೂತ್ರಗಳನ್ನು ಒಂದಾಗಿ ಪರಿಗಣಿಸಿ ಮುಂದಿನ ಸೂತ್ರವನ್ನೂ ಸೇರಿಸಿ ಒಂದು ಅಧಿಕರಣವನ್ನಾಗಿ ಮಾಡಲಾಗಿದೆ.

ಇಲ್ಲಿಗೆ ಇಯದಾಮನನಾಧಿಕರಣವು ಮುಗಿಯಿತು.

## ೨೨. ವ್ಯತಿಹಾರಾಧಿಕರಣಮ್

**ನೇತಿ ಚೇತ್, ನ-**

**॥ ಓಂ ವ್ಯತಿಹಾರೋ ವಿಶಿಂಷಂತಿ ಹೀತರವತ್ ಓಂ ॥ ೩೮ ॥**

**ಉಕ್ತಂ ಪ್ರಾಣಾತ್ ಪರಮಾತ್ಮನ ಉತ್ತಮತ್ವಂ ಪೂರ್ವೋಕ್ತಾಧ್ಯಾಹಾರೇಣ । 'ಏಷ ತು ವಾ ಅತಿವದತಿ' (ಛಾಂ.ಉ. 7.16) ಇತಿ ವಿಶಿಂಷಂತಿ ಹಿ । ಯಥೇತರೇಷು ವಿಶೇಷಣಮ್ ।**

**'ಉತ್ತಮತ್ವಂ ಹಿ ದೇವಾನಾಂ ಮುಕ್ತಾವಪಿ ಹಿ ಮಾನವಾತ್ ।**
**ತೇಭ್ಯಃ ಪ್ರಾಣಸ್ಯ ತಸ್ಮಾಚ್ಚ ನಿತ್ಯಮುಕ್ತಸ್ಯ ವೈ ಹರೇಃ ॥'**
**ಇತಿ ಚ ಬೃಹತ್ತಂತ್ರೇ ॥**

ಛಾಂದೋಗ್ಯಶ್ರುತಿಯಲ್ಲಿ ಪ್ರಾಣನಿಗಿಂತ ಉತ್ತಮ ಪರಮಾತ್ಮ, ಎಂದು ಹೇಳಿಲ್ಲ, ಎನ್ನುವುದು ಸರಿಯಲ್ಲ. ಏಕೆಂದರೆ, ವಾಗಾದಿಪೂರ್ವಪ್ರಕರಣಗಳಿಂದ ಪ್ರಶ್ನೆಪ್ರತಿವಚನ ಗಳನ್ನು ಅಧ್ಯಾಹಾರಮಾಡಿದಾಗ (ಸತ್ಯಪದ ವಾಚ್ಯನಾದ) ಪರಮಾತ್ಮನಿಗೆ ಪ್ರಾಣನಿ ಗಿಂತಲೂ ಉತ್ತಮತ್ವವು ಇಲ್ಲಿ ಹೇಳಲ್ಪಟ್ಟಿದೆ. ಛಂದೋಗರು (ಛಾಂದೋಗ್ಯ ಶಾಖೆಯವರು) 'ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ' ಎಂದು ಸತ್ಯಾಖ್ಯ ಪರಮಾತ್ಮನಿಗೆ ಉತ್ತಮತ್ವಜ್ಞಾನಿಯನ್ನು ವಿಶೇಷವಾಚಕವಾದ 'ತು' ಶಬ್ದದಿಂದ ಪ್ರತ್ಯೇಕಿಸುತ್ತಾರೆ. (ಇತರವತ್=ಯಥೇತರೇಷು ವಿಶೇಷಣಮ್) ಇತರ ವಾಗಾದಿಗಳಲ್ಲಿ 'ವಾಗ್ವಾವ ನಾಮ್ನೋ ಭೂಯಸೀ' ಎಂಬ ವಿಶೇಷಣವು ಹೇಗಿದೆಯೋ ಅದರಂತೆ 'ಸತ್ಯೋ ವಾ ಪ್ರಾಣಾದ್ ಭೂಯಾನ್' ಎಂಬ ವಿಶೇಷಣವನ್ನು ಇಲ್ಲಿಯೂ ಸೇರಿಸಿಕೊಳ್ಳಬೇಕು. ಬೃಹತ್ತಂತ್ರದಲ್ಲಿ ಹಾಗೆ ಹೇಳಿದೆ.

ವಿವರಣೆ—ಹಿಂದಿನ ಸೂತ್ರದಲ್ಲಿ 'ಪ್ರಾಣನಿಗಿಂತ ಪರಮಾತ್ಮನು ಉತ್ತಮ ನಾಗಿದ್ದಾನೆ, ಎನ್ನುವುದನ್ನು ಛಾಂದೋಗ್ಯದಲ್ಲಿ ಹೇಳಲಾಗಿದೆ' ಎಂದಿದೆ. ಆದರೆ ಅಲ್ಲಿ

ಪ್ರಾಣನೇ ಸರ್ವೋತ್ತಮನೆಂದಂತಿದೆ. ಸನತ್ಕುಮಾರನು ನಾರದರ ಬಳಿ ಬ್ರಹ್ಮೋಪದೇಶ ಮಾಡುವಂತೆ ಕೇಳಿಕೊಂಡಾಗ ನಾರದರು 'ನಾಮೋಪಾಸ್ವ' ಎಂದರು. ನಾಮಾಭಿಮಾನಿಯಾದ ಉಷಾದೇವಿಯನ್ನು ಧ್ಯಾನಿಸು, ಎಂದು. ಸನತ್ಕುಮಾರರು ಕೇಳಿದರು 'ಅಸ್ತಿ ಭಗವೋ ನಾಮ್ನೋ ಭೂಯಃ?' ಉಷೆಗಿಂತಲೂ ಶ್ರೇಷ್ಠರಿದ್ದಾರೆಯೇ? ಎಂದು. ಅದಕ್ಕೆ ನಾರದರು 'ವಾಗ್ವಾವ ನಾಮ್ನೋ ಭೂಯಸೀ' ವಾಗಿಂದ್ರಿಯಾಭಿಮಾನಿನಿ ಸ್ವಾಹಾದೇವಿ ಉಷೆಗಿಂತ ಉತ್ತಮಳು ಎಂದರು. ಹೀಗೆ ಗುರುಶಿಷ್ಯರಲ್ಲಿ ಸಂವಾದ ನಡೆದು ಕೊನೆಯಲ್ಲಿ 'ಪ್ರಾಣೋ ವಾ ಆಶಾಯಾ ಭೂಯಾನ್' ಪ್ರಾಣ ಮತ್ತು ಬ್ರಹ್ಮರು ಭಾರತೀ–ಸರಸ್ವತಿಯರಿಗಿಂತ ಉತ್ತಮರು ಎನ್ನುತ್ತಾರೆ, ನಾರದರು. ಆಮೇಲೆ ''ಏವಂ ವಿಜಾನನ್ನತಿವಾದೀ ಭವತಿ । ತಂ ಚೇದ್ ಬ್ರೂಯುರತಿವಾದ್ಯಸೀತಿ, ಅತಿವಾದ್ಯಸ್ಮೀತ್ಯೇವ ಬ್ರೂಯಾತ್ । ನಾಪಹ್ನುವೀತ ।'' ಎಂದಿದೆ. ಪ್ರಾಣನೇ ಶ್ರೇಷ್ಠನೆಂದು ತಿಳಿದು, ಉಪಾಸನೆ ಮಾಡಿ ಸಾಕ್ಷಾತ್ಕರಿಸಿಕೊಂಡವರು ಉತ್ತಮಬೋಧಕರೆನಿಸುತ್ತಾರೆ. ಅವರಿಗೆ ಯಾರಾದರೂ 'ನೀನು ಉತ್ತಮ ಉಪದೇಶಕ' ಎಂದು ಹೇಳಿದರೆ 'ನಾನು ಉತ್ತಮನಾದ ಉಪದೇಶಕನಾಗಿದ್ದೇನೆ' ಎಂದು ಹೇಳಬೇಕು. ಮುಚ್ಚಿಡಬಾರದು, ಎಂದು ಅದರ ಅರ್ಥ. ಹೀಗೆ ಈ ಪ್ರಕರಣದಲ್ಲಿ ಪ್ರಾಣನೇ ಸರ್ವೋತ್ತಮ ಎಂದಂತಿದೆ. ಪ್ರಾಣನಿಗಿಂತ ಬ್ರಹ್ಮನಿಗೆ ಉತ್ತಮತ್ವವನ್ನು ಇಲ್ಲಿ ಹೇಳಿಲ್ಲ, ಎಂದು ಪೂರ್ವಪಕ್ಷ. ಇದನ್ನು ಭಾಷ್ಯದಲ್ಲಿ 'ನೇತಿ ಚೇತ್' ಎಂದು ಸೂಚಿಸಲಾಗಿದೆ. 'ನ' ಎಂದು ಅದನ್ನು ನಿರಾಕರಿಸಿ ಸೂತ್ರಕಾರರು ಹೇಳಿರುವ ಉತ್ತರವನ್ನು ವಿವರಿಸಲಾಗಿದೆ.

ಉತ್ತರ ಹೀಗೆ—ಪ್ರಾಣವಾದಿ ಅತಿವಾದೀ, ಎಂದು ಹೇಳಿದ ಮೇಲೆ ಉಪನಿಷತ್ತು 'ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ । 'ಸತ್ಯಂ ತ್ವೇವ ವಿಜಿಜ್ಞಾಸಿತವ್ಯಮ್' ಎಂದು ನಾರದರ ಉಪದೇಶವನ್ನು ತಿಳಿಸಿದ್ದಾರೆ. ಇಲ್ಲಿ ಸತ್ಯವೆಂದರೆ ಸತ್ಯನಾಮಕನಾದ ಪರಮಾತ್ಮ—

'ಸ ಸತ್ಯೋ ಭಗವಾನ್ ವಿಷ್ಣುಃ ಯನ್ನಿರ್ದೋಷೋ ನಿಯಾಮಕಃ॥

ನಿರ್ದೋಷನೂ ಸರ್ವನಿಯಾಮಕನೂ ಆದುದರಿಂದ ವಿಷ್ಣು ಸತ್ಯನೆನಿಸಿದ್ದಾನೆ. 'ಏಷ ತು' ಎಂದು ಉಪನಿಷತ್ತಿನಲ್ಲಿರುವ ತುಶಬ್ದವು ಪ್ರಕರಣ ಭೇದವನ್ನು ತಿಳಿಸುತ್ತದೆ. 'ಏಷ ತು ವಾ ಅತಿವದತೀತಿ' ತುಶಬ್ದೋ ಅರ್ಥಾಂತರವಾಚೀ' ಎಂದು ಛಾಂದೋಗ್ಯಭಾಷ್ಯ. ಹಿಂದಿನದು ಪ್ರಾಣಪ್ರಕರಣ, ಇದು ಸತ್ಯಪ್ರಕರಣ. ಹಿಂದಿನ ಒಂದೊಂದು ಪ್ರಕರಣದಲ್ಲಿ ಸನತ್ಕುಮಾರರ ಪ್ರಶ್ನೆ ಇರುವಂತೆ ಇಲ್ಲಿಯೂ 'ಅಸ್ತಿ ಭಗವಃ ಪ್ರಾಣಾದ್ ಭೂಯಃ?'

ಎಂಬ ಪ್ರಶ್ನೆಯನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. 'ಇತಿ ಪ್ರಶ್ನೋ ವ್ಯತಿಹಾರ್ಯಃ' ಛಾಂದೋಗ್ಯಭಾಷ್ಯ. ಆಗ ಮುಖ್ಯಪ್ರಾಣಬೋಧಕನಿಗಿಂತಲೂ ಅತ್ಯುತ್ಕೃಷ್ಟನಾದ ಬೋಧಕ, ಸತ್ಯಬೋಧಕ ಎಂದಂತಾಗುತ್ತದೆ. ಇದರಿಂದ ಮುಖ್ಯಪ್ರಾಣನಿಗಿಂತಲೂ ಪರಮಾತ್ಮನು ಉತ್ತಮ, ಎಂದು ತಿಳಿಯುತ್ತದೆ.

ಸೂತ್ರದಲ್ಲಿ ವ್ಯತಿಹಾರಶಬ್ದಪ್ರಯೋಗದ ಔಚಿತ್ಯವನ್ನು ಗುರ್ವರ್ಥದೀಪಿಕಾದಲ್ಲಿ ಶ್ರೀವಾದಿರಾಜರು ತಿಳಿಸಿದ್ದಾರೆ—ವಿ=ವಿಶೇಷೇಣ ಅತಿ=ಅತಿಶಯಿತಾಪೇಕ್ಷಿತವಾಕ್ಯಸ್ಯ (ಆ)ಹಾರಃ=ಯೋಗ್ಯತಯಾ ಅನ್ಯತಃ (ಆ)ಹರಣಂ–ವ್ಯತಿಹಾರಃ। ಏಕಪ್ರಕಾರತ್ವೇ ಪೂರ್ವವಾಕ್ಯಾದಾವೃತ್ತಿಃ ಸ್ಯಾತ್। ಅತ್ರ ತು ಅಪೇಕ್ಷಿತಪ್ರಶ್ನಪ್ರತಿವಚನ–ವಾಕ್ಯಸ್ಯ 'ಅಸ್ತಿ ಭಗವಃ ಪ್ರಾಣಾದ್ ಭೂಯಃ' ಇತ್ಯಾದಿರೂಪೇಣ ಅನ್ಯಾದೃಶತ್ವಾತ್ ಅಧ್ಯಾಹಾರ ಏವ ಇತಿ ಭಾವಃ।

ವ್ಯತಿಹಾರ ಎಂದರೆ ವಿ=ವಿಶೇಷವಾಗಿ ಅತಿ=ಅತ್ಯಂತ ಅಪೇಕ್ಷಿತವಾದ ವಾಕ್ಯದ (ಆ)ಹಾರಃ=ಬೇರೆಡೆಯಿಂದ ತರುವುದು. ಅಲ್ಲಿದ್ದ ವಾಕ್ಯವನ್ನೇ ಇಲ್ಲಿ ತರುವುದು ಅಧ್ಯಾಹಾರ. ಇಲ್ಲಿ ಮೊದಲಿದ್ದ ವಾಕ್ಯದಂತೆ ಇರುವ ವಾಕ್ಯದ ಅಧ್ಯಾಹಾರ. ಆದ್ದರಿಂದ ಇದು 'ವ್ಯತಿಹಾರ'.

''ಯತ್ಕಿಂಚಿದಧಿಕ–ವಾಕ್ಯಾಹರಣಂ ನಿವಾರಯಿತುಂ ವೀತ್ಯುಪಸರ್ಗದಾನಂ। ವಿಶೇಷಶ್ಚ ಪ್ರಕೃತಾರ್ಥಾನುಕೂಲತ್ವಂ। ತಸ್ಮಾತ್ ಅತಿಮೇಧಾವೀ ಅಲೌಕಿಕಃ ಸೂತ್ರಕಾರಃ ನ ಲೌಕಿಕಾನುಸಾರೀತಿ ಜ್ಞೇಯಮ್।''

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ವ್ಯತಿಹಾರೋ ವಿಶಿಂಷಂತಿ ಹೀತರವತ್ ಓಂ ॥** (ಅತ್ರ ಪ್ರಾಣಾತ್ ಈಶಸ್ಯ ಉತ್ತಮತ್ವಂ ಸಾಧ್ಯತೇ। ಪ್ರಸ್ತುತಂ 'ಪ್ರಾಣಾದುತ್ತಮತ್ವಂ ವಿಷ್ಣೋಃ' ಇತ್ಯನ್ವೇತಿ।

ಯುಕ್ತಂ ಪ್ರಾಣಾತ್ ವಿಷ್ಣೋಃ ಉತ್ತಮತ್ವಮ್। ತಯೋರ್ಮಧ್ಯೇ ಪ್ರಶ್ನ–ಪ್ರತಿವಚನಯೋಃ ಅಶ್ರವಣೇಽಪಿ ವ್ಯತಿಹಾರಃ=ಅಧ್ಯಾಹಾರಃ ಕಾರ್ಯಃ। ಕುತಃ ? ಹಿ=ಯಸ್ಮಾತ್ ಇತರವತ್=ಪ್ರಶ್ನಾದಿನಾ ನಾಮಾದಿತೋ ವಾಗಾದೀನಾಮಿವ। 'ತು' ಶಬ್ದೇನ ಪ್ರಾಣಾತ್ ಸತ್ಯಂ ವಿಶಿಂಷಂತಿ=ವ್ಯಾವರ್ತಯಂತಿ ಛಂದೋಗಾಃ। 'ಏಷ ತು ವಾ ಅತಿವದಿತಿ ಯಃ ಸತ್ಯೇನ ಅತಿವದತಿ' ಇತಿ ಪ್ರಾಣವಾದಿನಃ ಸಕಾಶಾತ್ ಸತ್ಯವಾದಿನಂ ತುನಾ ವಿಶಿಂಷಂತಿ ಇತಿ ಆವೃತ್ತ್ಯಾ ಯೋಜ್ಯಮ್। ತೇನ ಪ್ರಾಣಾತ್ ಸತ್ಯಸ್ಯ ಅನ್ಯತ್ವಜ್ಞಾನಾತ್ ತದನ್ಯಥಾನುಪಪತ್ತ್ಯಾ ಅಧ್ಯಾಹಾರೋ ಜ್ಞಾಯತೇ, ಇತ್ಯರ್ಥಃ।)

ಈ ಅಧಿಕರಣದಲ್ಲಿ ವಿಷ್ಣುವಿಗೆ ಪ್ರಾಣನಿಗಿಂತ ಉತ್ತಮತ್ವವನ್ನು ಸಾಧಿಸಲಾಗಿದೆ. ಪ್ರಾಣ ಮತ್ತು ಸತ್ಯಪದವಾಚ್ಯನಾದ ವಿಷ್ಣುವಿನ ಪ್ರಕರಣದ ಮಧ್ಯದಲ್ಲಿ ಪ್ರಶ್ನೆ ಮತ್ತು ಉತ್ತರಗಳು ಇಲ್ಲದಿದ್ದರೂ ಇತರವತ್=ನಾಮಪ್ರಕರಣ ಮತ್ತು ವಾಕ್‌ಪ್ರಕರಣಗಳಂತೆ ಹಿ=ಯಾವ ಕಾರಣದಿಂದ ವ್ಯತಿಹಾರಃ=ಪ್ರಶ್ನೆಪ್ರತಿವಚನವಾಕ್ಯಗಳ ಅಧ್ಯಾಹಾರವು ಮಾಡಲ್ಪಡಬೇಕು. ಆದ್ದರಿಂದಲೇ ಛಾಂದೋಗ್ಯದಲ್ಲಿ 'ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ' ಎಂದು 'ತು' ಶಬ್ದದಿಂದ ವಿಶಿಂಷಂತಿ=ಪ್ರಾಣನಿಗಿಂತ ಸತ್ಯನು ಭಿನ್ನ ಎಂದು ವ್ಯಾವೃತ್ತಿಗೊಳಿಸಿದ್ದಾರೆ, ಛಂದೋಗಶಾಖಿಗಳು. ಆ ಪ್ರಕರಣದಲ್ಲಿ 'ತು' ಎಂಬ ಭೇದವಾಚಕಶಬ್ದದಿಂದ ಪ್ರಾಣವಾದಿಗಳಿಗಿಂತ 'ಸತ್ಯ' ವಾದಿಗಳಿಗೆ ವಿಶಿಂಷಂತಿ= ಭೇದವನ್ನು ಹೇಳಿದ್ದಾರೆ. ಇದರಿಂದಾಗಿ ಅದೇ ತುಶಬ್ದದಿಂದ ಪ್ರಾಣ ಮತ್ತು ಸತ್ಯರಿಗೂ ಭೇದವನ್ನು ಹೇಳಿದಂತಾಗಿದೆ.

## ಶಾಂಕರಭಾಷ್ಯದಲ್ಲಿ ಸೂತ್ರಾರ್ಥ

**॥ ವ್ಯತಿಹಾರೋ ವಿಶಿಂಷಂತಿ ಹೀತರವತ್ ॥** ಐತರೇಯದಲ್ಲಿ 'ತದ್ಯೋಽಹಂ ಸೋಽಸೌ, ಯೋಽಸೌ ಸೋಽಹಮ್' ಎಂದು ಐಕ್ಯೋಪದೇಶ ಇದೆ. ಜಾಬಲೋಪನಿಷತ್ತಿನಲ್ಲಿ 'ತ್ವಂ ವಾ ಅಹಮಸ್ಮಿ ಭಗವೋ ದೇವತೇ, ಅಹಂ ವೈ ತ್ವಮಸಿ' ಎಂದಿದೆ. ಇಲ್ಲಿ 'ಬ್ರಹ್ಮನೇ ನಾನು' ಎಂದಾಗಲೀ 'ನಾನೇ ಬ್ರಹ್ಮ' ಎಂದಾಗಲೀ ಪ್ರತ್ಯೇಕವಾಗಿ ಧ್ಯಾನವಲ್ಲ. ಎರಡೂ ಮಿಳಿತವಾಗಿಯೇ ಧ್ಯೇಯವಾಗಿದೆ. ವ್ಯತಿಹಾರವೆಂದರೆ ಜೀವ ಮತ್ತು ಈಶರಿಗೆ ಪರಸ್ಪರ ವಿಶೇಷಣ-ವಿಶೇಷ್ಯಭಾವ. 'ಈಶನು ಜೀವಾಭಿನ್ನ' ಇಲ್ಲಿ ಈಶ ವಿಶೇಷ್ಯ ಜೀವ ವಿಶೇಷಣ. 'ಜೀವನು ಈಶಾಭಿನ್ನ' ಇಲ್ಲಿ ಜೀವ ವಿಶೇಷ್ಯ, ಈಶ ವಿಶೇಷಣ. ಹೀಗೆ ಉಪಾಸನೆಯು ವಿಹಿತವಾದುದರಿಂದ, ದಾರ್ಢ್ಯಕ್ಕಾಗಿ ಎರಡೂ ಉಪಾಸನೆಗಳನ್ನು ಜೊತೆಯಲ್ಲೇ ಮಾಡಬೇಕು. ಇತರವತ್= ಬ್ರಹ್ಮನಿಗೆ ಸಾರ್ವಾತ್ಮ್ಯ ಚಿಂತನೆಯಂತೆ. ಅದು ಕೇವಲ ಉಪಾಸನೆ. ಅದರಿಂದ ಬ್ರಹ್ಮನಿಗೆ ನಿಕೃಷ್ಟತ್ವಪ್ರಾಪ್ತಿ ಇಲ್ಲ. ವಿಶಿಂಷಂತಿ=ಲೋಕದಲ್ಲೂ ಹೀಗೆಯೇ ವಿಶೇಷಣ-ವಿಶೇಷ್ಯ ಭಾವವನ್ನು ಹೇಳಲಾಗುತ್ತದೆ—'ನೀನೇ ನಾನು, ನಾನೇ ನೀನು' ಎಂದು.

**ವಿಮರ್ಶೆ**—ಪ್ರಕಾಶವನ್ನು ಅಂಧಕಾರ ಎಂದೂ ಅಂಧಕಾರವನ್ನು ಪ್ರಕಾಶ ಎಂದೂ ತಿಳಿಯಲು ಹೇಗೆ ಸಾಧ್ಯವಿಲ್ಲವೋ ಅದರಂತೆ, ದೋಷಪೂರ್ಣನಾದ ಜೀವನನ್ನು ಬ್ರಹ್ಮನೆಂದೂ, ಗುಣಪೂರ್ಣನಾದ ಬ್ರಹ್ಮನನ್ನು ಜೀವನೆಂದೂ ಉಪಾಸನೆ ಮಾಡಲಾಗುವುದಿಲ್ಲ. ಬ್ರಹ್ಮನಲ್ಲಿ ಜೀವಾಭೇದಭಾವನೆಯು ಬ್ರಹ್ಮನಲ್ಲಿರುವ ಗೌರವಕ್ಕೆ

ವಿಘಾತಕವಾಗುವುದರಿಂದ ಆ ರೀತಿಯ ಧ್ಯಾನವೇ ಭಕ್ತನಿಗೆ ಬರಲಾರದು. ಅದರಿಂದ ಬ್ರಹ್ಮನಿಗೂ ಸಂತೋಷವಾಗಲಿಕ್ಕಿಲ್ಲ.

ಇಲ್ಲಿಗೆ ವ್ಯತಿಹಾರಾಧಿಕರಣವು ಮುಗಿಯಿತು.

## ೨೩. ಸತ್ಯಾದ್ಯಧಿಕರಣಮ್

**ಕೃತಿರ್ನಿಷ್ಠಾವಿಜ್ಞಾನಮಿತ್ಯಾದೀನಾಂ ಭೇದಾದ್ ಬಹವ ಉತ್ತಮಾ ಇತಿ ಚೇತ್, ನ–**

**॥ ಓಂ ಸೈವ ಹಿ ಸತ್ಯಾದಯಃ ಓಂ ॥ ೩೯ ॥**

**ಸತ್ಯಾದಿಗುಣಾಸ್ತಸ್ಯಾ ಏವ ಪರದೇವತಾಯಾಃ ಸ್ವರೂಪಭೂತಾಃ । ಬ್ರಹ್ಮತರ್ಕೇ ಚ–**

**'ನಾಮಾದಿಪ್ರಾಣಪರ್ಯಂತಾದ್ ಯೋಽಧಿ(ಹಿ)ಸತ್ಯಾದಿರೂಪವಾನ್।**
**ತಸ್ಮೈ ನಮೋ ಭಗವತೇ ವಿಷ್ಣವೇ ಸರ್ವಜಿಷ್ಣವೇ ॥' ಇತಿ ।**

**'ಸತ್ಯಾದ್ಯಾ ಅಹಮಾತ್ಮಾಂತಾಃ ಯದ್‌ಗುಣಾಃ ಸಮುದೀರಿತಾಃ ।**
**ತಸ್ಮೈ ನಮೋ ಭಗವತೇ ಯಸ್ಮಾದೇವ ವಿಮುಚ್ಯತೇ ॥'**

**ಇತಿ ಚಾಧ್ಯಾತ್ಮೇ ।**

ಸತ್ಯನಾಮಕ ಪರಮಾತ್ಮನ ನಿರೂಪಣೆ ಮಾಡಿ ಉಪನಿಷತ್ತು ಕೃತಿ–ನಿಷ್ಠಾ–ವಿಜ್ಞಾನ–ಮತಿ–ಶ್ರದ್ಧಾ–ಸುಖ–ಭೂಮಾ–ಅಹಂಕಾರ–ಆತ್ಮರನ್ನು ನಿರೂಪಿಸಿದೆ. ಅವುಗಳಲ್ಲೂ ಭೇದವಿರುವುದರಿಂದ ಪ್ರಾಣನಿಗಿಂತ ಉತ್ತಮರು ಅನೇಕರು ಇರಬೇಕಾದೀತು, ಈ ಆಕ್ಷೇಪ ಸರಿಯಲ್ಲ–ಪ್ರಾಣನಿಗಿಂತ ಉತ್ತಮತ್ವೇನ ಹೇಳಿರುವ ಕೃತಿ ಇತ್ಯಾದಿಗಳೆಲ್ಲವೂ ಸೈವ=ಆ ಪರದೇವತೆ ಒಬ್ಬನೇ. ಸತ್ಯ–ಶ್ರದ್ಧಾದಿಗುಣಗಳೆಲ್ಲವೂ ಆ ಪರದೇವತೆಯ ಸ್ವರೂಪಭೂತವೇ ಆಗಿವೆ. ಬ್ರಹ್ಮತರ್ಕದಲ್ಲಿ ಹೀಗೆ ಹೇಳಲಾಗಿದೆ—ನಾಮಾಭಿಮಾನಿ ಉಷಾದೇವಿಯಿಂದಾರಂಭಿಸಿ ಪ್ರಾಣಪರ್ಯಂತರಾದ ದೇವತೆಗಳಿಗಿಂತ ಉತ್ತಮನಾದ, ಯಾವ ಸತ್ಯಾದಿರೂಪದ ಭಗವಂತನಿದ್ದಾನೋ ಅಂತಹ, ಸರ್ವವನ್ನೂ ಗೆಲ್ಲುವ ಭಗವಾನ್ ವಿಷ್ಣುವಿಗೆ ನಮಸ್ಕಾರ.

ಅಧ್ಯಾತ್ಮಗ್ರಂಥದಲ್ಲೂ ಹೀಗಿದೆ—ಸತ್ಯವನ್ನು ಆರಂಭಿಸಿ ಅಹಂಕಾರ ಆತ್ಮ

ಪರ್ಯಂತವಾಗಿ ಯಾರ ಗುಣಗಳು ಹೇಳಲ್ಪಟ್ಟಿವೆಯೋ ಅಂತಹ ಮೋಕ್ಷಕಾರಣನಾದ ಭಗವಂತನಿಗೆ ನಮಸ್ಕಾರಗಳು.

**ವಿವರಣೆ**—ಸನತ್‌ಕುಮಾರರು 'ಸತ್ಯಂ ಭಗವೋ ವಿಜಿಜ್ಞಾಸೇ' ಎಂದು ಸತ್ಯನಾಮಕ ಪರಮಾತ್ಮನ ಗುಣಜಿಜ್ಞಾಸೆಯನ್ನು ಪ್ರಾರ್ಥಿಸಿದಾಗ ನಾರದರು ಸತ್ಯಗುಣದ ಜೊತೆಯಲ್ಲೇ ಇರುವ (ಯದಾ ವೈ ವಿಜಾನಾತಿ ಅಥ ಸತ್ಯಂ ವದತಿ–ಛಾ.ಉ.) ವಿಜ್ಞಾನ ಗುಣವನ್ನು ಹೇಳಿದರು. ಹೀಗೆ ಭೂಮಗುಣಪರ್ಯಂತ ಜಿಜ್ಞಾಸೆಗೆ ಅನುಗುಣವಾಗಿ ಮುಂದುಮುಂದಿನ ಗುಣಗಳನ್ನು ನಾರದರು ಹೇಳುತ್ತಾ ಬಂದಿದ್ದಾರೆ. 'ಭೂಮಾನಂ ಭಗವೋ ವಿಜಿಜ್ಞಾಸೇ' ಎಂದು ಸನತ್ಕುಮಾರರ ಪ್ರಶ್ನೆಗೆ—'ಯತ್ರ ನಾನ್ಯತ್ ಪಶ್ಯತಿ... ಯೋ ವೈ ಭೂಮಾ ತದಮೃತಮ್ । ಅಥ ಯದಲ್ಪಂ ತನ್ಮರ್ತ್ಯಮ್ ।'' ಎಂದು ಉತ್ತರಿಸಿದ್ದಾರೆ. ಆಮೇಲೆ 'ಅಥಾತೋಽಹಂಕಾರಾದೇಶ ಏವ' ಎಂದು ಜೀವಾಂತರ್ಗತನಾದ ಅಹಂನಾಮಕ ಅನಿರುದ್ಧನ ಉಪದೇಶವನ್ನು ಮಾಡಿದ್ದಾರೆ. ಮುಂದೆ 'ಅಥಾತ ಆತ್ಮಾದೇಶ ಏವ ।' ಎಂದು ಸರ್ವತ್ರ ವ್ಯಾಪ್ತನಾದ ವಾಸುದೇವನ ಉಪದೇಶವನ್ನು ಮಾಡುತ್ತಾರೆ. ಈ ಎರಡನ್ನೂ 'ಅಹಮೇವಾಧಸ್ತಾತ್ ಅಹಮುಪರಿಷ್ಟಾತ್' 'ಆತ್ಮೈವಾಧಸ್ತಾತ್ । ಆತ್ಮೋಪರಿಷ್ಟಾತ್ ।' ಎಂದು ಸರ್ವಗತವೆಂದು ಹೇಳಲಾಗಿದೆ. ಕೊನೆಯಲ್ಲಿ 'ಸ ವಾ ಏಷ ಏವಂ ಪಶ್ಯನ್ನೇವಂ ಮನ್ವಾನ, ಏವಂ ವಿಜಾನನ್ ಆತ್ಮರತಿಃ, ಆತ್ಮಕ್ರೀಡಃ ಆತ್ಮಮಿಥುನಃ, ಆತ್ಮಾನಂದಃ' ಎಂದು ಮೋಕ್ಷಫಲವನ್ನು ಹೇಳಲಾಗಿದೆ. ಆದ್ದರಿಂದ, ಅಹಂಕಾರ ಮತ್ತು ಆತ್ಮರೂ ಭಗವಂತನದೇ ರೂಪಗಳು.

ಸೂತ್ರದಲ್ಲಿ 'ಸತ್ಯಾದಯಃ ಸ ಏವ' ಎಂದು ಪುಲ್ಲಿಂಗಪ್ರಯೋಗ ಮಾಡುವ ಬದಲು 'ಸೈವ' ಎಂದು ಸ್ತ್ರೀಲಿಂಗಪ್ರಯೋಗವನ್ನು ಮಾಡಲಾಗಿದೆ. ಪ್ರಾಣಾನಂತರದಲ್ಲಿ 'ಸತ್ಯ' ಎಂಬ ಪುಲ್ಲಿಂಗಪದ, ಕೃತಿ–ನಿಷ್ಠಾ ಎಂಬ ಸ್ತ್ರೀಲಿಂಗಪದ, ವಿಜ್ಞಾನಸುಖಾದಿ ನಪುಂಸಕಲಿಂಗದ ಪದಗಳು ಇವೆ. ಅವುಗಳಲ್ಲಿ ಸ್ತ್ರೀಲಿಂಗಪದಗಳು– ''ಮತಿ–ಶ್ರದ್ಧಾ–ನಿಷ್ಠಾ–ಕೃತಿ'' ಎಂದು ನಾಲ್ಕು ಇವೆ. (ಸ್ತ್ರೀಲಿಂಗ ಪದ ವಾಚ್ಯಗುಣಾನಾಂ ಬಹುತ್ವಾತ್, ತತ ಏವ ಬ್ರಹ್ಮಣಿ ಅಸಂಭವಃ।) ಅದಕ್ಕಾಗಿ 'ಸೈವ' ಎಂದು ಸ್ತ್ರೀಲಿಂಗಶಬ್ದವನ್ನೇ ಹೇಳಲಾಗಿದೆ ಎಂದಿದ್ದಾರೆ ಶ್ರೀವಾದಿರಾಜರು. ತತ್ತ್ವಪ್ರದೀಪದಲ್ಲಿ ಹೀಗಿದೆ— 'ತತ್ತೇಜೋಽಸೃಜತ' ಎಂದು ಹೇಳಿ ಉಪನಿಷತ್ತು 'ಸೇಯಂ ದೇವತೈಕ್ಷತ' ಎಂದು ಸ್ತ್ರೀಲಿಂಗಾಂತಶಬ್ದದಿಂದ ಪರಾಮರ್ಶ ಮಾಡಿದೆ. ಅದರಂತೆ ಪ್ರಕೃತದಲ್ಲಿ 'ಕೃತಿ–ನಿಷ್ಠಾ' ಇತ್ಯಾದಿ ಸ್ತ್ರೀಲಿಂಗಾಂತ ಶಬ್ದಪ್ರತಿಪಾದ್ಯತ್ವ ಸೂಚನೆಗಾಗಿ ಸ್ತ್ರೀಲಿಂಗಾಂತ ಶಬ್ದವಿದೆ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ಸೈವ ಹಿ ಸತ್ಯಾದಯಃ ಓಂ ॥** (ಅತ್ರ ಪ್ರಾಣಾದೀಶಸ್ಯೈವೋತ್ತಮತ್ವಂ ಸಾಧ್ಯತೇ । ಹಿರ್ಹೇತೌ । ಪ್ರಾಣಾದ್ ವಿಷ್ಣೋರೇವೋತ್ತಮತ್ವಮ್ ಇತ್ಯನ್ವೇತಿ । ನತು ಬಹೂನಾಂ । ಹಿ–ಯಸ್ಮಾತ್ ಸತ್ಯಾದಯಃ=ಸತ್ಯ–ವಿಜ್ಞಾನ–ಮತಿ– ಶ್ರದ್ಧಾ–ನಿಷ್ಠಾ–ಕೃತಿ–ಸುಖ–ಭೂಮಾ–ಅಹಮ್–ಆತ್ಮಾನಃ ಪ್ರಾಣಾದ್ ಊರ್ಧ್ವಮ್ ಆಮ್ನಾತಾಃ ಸೈವ=ಪ್ರಕೃತೇಶಾಖ್ಯಾ ಪರದೇವತೈವ, ಅತ ಇತ್ಯರ್ಥಃ ।)

ಹಿ=ಯಾವ ಕಾರಣದಿಂದ ಸತ್ಯಾದಯಃ=ಪ್ರಾಣನ ಅನಂತರ ಹೇಳಿರುವ ಸತ್ಯಾದಿ ನಾಮವಾಚ್ಯಗಳಾದ ಹತ್ತೂ ರೂಪಗಳೂ ಸೈವ=ಪ್ರಕೃತವಾಗಿರುವ ಈಶಾಖ್ಯ ಪರದೇವತೆಯೇ ಆಗಿವೆಯೋ ಆದ್ದರಿಂದ ಪ್ರಾಣನಿಗಿಂತ ಉತ್ತಮನಾದವನು ವಿಷ್ಣು ಒಬ್ಬನೇ, ಅನೇಕರಲ್ಲ.

## ಅದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಸೈವ ಹಿ ಸತ್ಯಾದಯಃ ॥** ಬೃಹದಾರಣ್ಯಕದಲ್ಲಿ (5.4.1) ''ಸ ಯೋ ಹೈತಂ ಮಹದ್ ಯಕ್ಷಂ ವೇದ ಸತ್ಯಂ ಬ್ರಹ್ಮ'' ಎಂದು ಸತ್ಯವಿದ್ಯೆಯನ್ನು (ಉಪಾಸನೆಯನ್ನು) ಹೇಳಲಾಗಿದೆ. ಸ ಯಃ=ಯಾವ ಅಧಿಕಾರಿಯು ಮಹತ್=ವ್ಯಾಪಕವಾದ, ಯಕ್ಷಂ=ಪೂಜ್ಯನಾದ ಸತ್ಯಂ ಬ್ರಹ್ಮ=ಹಿರಣ್ಯಗರ್ಭಾಖ್ಯಬ್ರಹ್ಮನನ್ನು ವೇದ=ಉಪಾಸನೆ ಮಾಡುವನೋ ಅಂತಹವನು ಇಮಾನ್ ಲೋಕಾನ್ ಜಯತಿ=ಈ ಲೋಕಗಳನ್ನು ಗೆಲ್ಲುತ್ತಾನೆ, ಎಂದು ಅದರ ಅರ್ಥ. ಮುಂದೆ (5.5.2) 'ತದ್ ಯತ್ ಸತ್ಯಂ ಸ ಆದಿತ್ಯೋ ಯ ಏಷ ಏತಸ್ಮಿನ್ ಮಂಡಲೇ ಪುರುಷೋ ಯಶ್ಚಾಯಂ ದಕ್ಷಿಣೇಽಕ್ಷನ್' ಎಂದು ಸತ್ಯವಿದ್ಯೆಯನ್ನು ಹೇಳಲಾಗಿದೆ. ಈ ವಿದ್ಯೆಗೆ 'ಹಂತಿ ಪಾಪ್ಮಾನಂ ಜಹಾತಿ ಚ' ಎಂದು ಪಾಪಕ್ಷಯರೂಪವಾದ ಫಲವನ್ನು ಹೇಳಲಾಗಿದೆ. ಹೀಗೆ ಫಲಭೇದದಿಂದ ಪ್ರಸಕ್ತವಾದ ಸತ್ಯವಿದ್ಯಾಭೇದವನ್ನು ಈ ಅಧಿಕರಣದಲ್ಲಿ ನಿರಾಕರಿಸಲಾಗಿದೆ. ಸತ್ಯಾದಯಃ ಸೈವ=ಮೊದಲು ಹೇಳಿದ ವಿದ್ಯೆಯೇ ಮುಂದಿನ ಸತ್ಯವಿದ್ಯೆಯಾಗಿದೆ. ಮುಂದಿನ ವಾಕ್ಯದಲ್ಲಿ 'ತತ್ ಯತ್ ತತ್ ಸತ್ಯಂ' ಎಂದು ಪೂರ್ವೋಕ್ತವಿದ್ಯೆಯನ್ನು ಪರಾಮರ್ಶ ಮಾಡಿ ಸತ್ಯಪದವಾಚ್ಯನಿಗೆ ಆದಿತ್ಯಮಂಡಲದಲ್ಲಿ 'ಅಹಃ' ಶಬ್ದವಾಚ್ಯತ್ವವನ್ನೂ ಕಣ್ಣಿನಲ್ಲಿ 'ಅಹಂ' ಶಬ್ದವಾಚ್ಯತ್ವವನ್ನೂ ಅಧಿಕವಾಗಿ ಹೇಳಲಾಗಿದೆ. ಈ ಶಬ್ದದ್ವಯವಾಚ್ಯತ್ವದ ಪ್ರಶಂಸೆಯೇ ಫಲೋಕ್ತಿರೂಪವಾದ ಅರ್ಥವಾದ. ಅದಕ್ಕೆ ಪ್ರಶಂಸೆಯಲ್ಲಷ್ಟೇ ತಾತ್ಪರ್ಯ.

**ವಿಮರ್ಶೆ**—'ಸೈಹ ಹಿ ಸತ್ಯಾದಯಃ' ಎಂಬ ಸೂತ್ರದಲ್ಲಿ ಸತ್ಯಶಬ್ದಕ್ಕೆ 'ಸತ್ಯವಿದ್ಯಾ' ಎಂದು ಲಾಕ್ಷಣಿಕಾರ್ಥವನ್ನು ಮಾಡಬೇಕಾಗುತ್ತದೆ. ಆದಿಪದ, ಬಹುವಚನಗಳು ವ್ಯರ್ಥ. ಆದ್ದರಿಂದ ಈ ಅರ್ಥ ಸೂತ್ರಾನುಸಾರಿಯಲ್ಲ.

## ವಿಶಿಷ್ಟಾದ್ವೈತದರ್ಶನದಲ್ಲಿ ಸೂತ್ರಾರ್ಥ

ರಾಮಾನುಜಭಾಷ್ಯದಲ್ಲಿ ಅಕ್ಷರಧಿಯಾಂ ಎಂಬ ಸೂತ್ರ ಮತ್ತು ಇಯದಾಮನನಾತ್ ಎಂಬ ಎರಡು ಸೂತ್ರಗಳು ಒಂದಧಿಕರಣ. 'ಅಂತರಾಭೂತ ಗ್ರಾಮವತ್...' (ಸೂ.35) ಎಂಬ ಸೂತ್ರದಿಂದ 'ಸೈವ ಹಿ ಸತ್ಯಾದಯಃ' ಎಂಬ ಮೂರು ಸೂತ್ರಗಳು ಒಂದಧಿಕರಣ. ಇದಕ್ಕೆ ಅಂತರತ್ವಾಧಿಕರಣ, ಎಂದು ಹೆಸರು.

**ಅಂತರಾ ಭೂತಗ್ರಾಮವತ್ ಸ್ವಾತ್ಮನೋಽನ್ಯಥಾ ಭೇದಾನುಪಪತ್ತಿರಿತಿ ಚೇನ್ನ ಉಪದೇಶವತ್ ॥** (ಎರಡೂ ಸೂತ್ರಗಳನ್ನು ಸೇರಿಸಿ ಒಂದೇ ಸೂತ್ರವೆಂದು ಪರಿಗಣಿಸಲಾಗಿದೆ.)

ಬೃಹದಾರಣ್ಯಕದ ಉಷಸ್ತಿಬ್ರಾಹ್ಮಣದಲ್ಲಿ ಹೇಳಿರುವ ವಿದ್ಯೆ ಮತ್ತು ಕಹೋಳ ಬ್ರಾಹ್ಮಣದಲ್ಲಿ ಹೇಳಿರುವ ಅಂತರ್ಯಾಮಿವಿದ್ಯೆಗಳು ರೂಪಭೇದಾತ್ ಬೇರೆ. ಮೊದಲನೆಯದರಲ್ಲಿ 'ಯಃ ಪ್ರಾಣೇನ ಪ್ರಾಣಿತಿ' ಎಂದು ಪ್ರಾಣಾಪಾನಕರ್ತೃತ್ವವನ್ನು ಹೇಳಿರುವುದರಿಂದ ಅದಕ್ಕೆ ವಿಷಯನಾದವನು 'ಭೂತಗ್ರಾಮವತ್ ಸ್ವಾತ್ಮಾ' ಅಂದರೆ ಪಂಚಭೂತಸಮುದಾಯರೂಪವಾದ ಶರೀರವುಳ್ಳ ಜೀವ. ಎರಡನೇ ವಿದ್ಯೆಯಲ್ಲಿ 'ಯೋಽಶನಾಯಾಪಿಪಾಸೇ, ಶೋಕಂ, ಮೋಹಂ, ಜರಾಂ, ಮೃತ್ಯುಂ ಅತ್ಯೇತಿ' ಎಂದಿರುವುದರಿಂದ ಹಸಿವು-ನೀರಡಿಕೆಗಳಿಲ್ಲದ ಪರಮಾತ್ಮ. ಅನ್ಯಥಾ=ಎರಡು ವಿದ್ಯೆಗಳ ಉಪಾಸ್ಯನು ಒಬ್ಬನೇ ಆದಲ್ಲಿ ಭೇದಾನುಪಪತ್ತಿಃ=ಈ ರೀತಿಯ ವಿಭಿನ್ನಧರ್ಮಗಳ ಪ್ರತಿವಚನವು ಕೂಡಲಾರದು. ಇದನ್ನು 'ಇತಿ ಚೇನ್ನ' ಎಂದು ನಿರಾಕರಿಸಿ 'ಉಪದೇಶವತ್' ಎಂದು ಸಿದ್ಧಾಂತಿಸಲಾಗಿದೆ. 'ಉತ ತಮಾದೇಶಮ್' ಇತ್ಯಾದಿ 'ಸದ್ವಿದ್ಯೆಯ ಉಪದೇಶದಂತೆ'. ಅಲ್ಲಿ ಶ್ವೇತಕೇತು 'ಭೂಯ ಏವ ಮಾಂ ವಿಜ್ಞಾಪಯತು' ಎಂದು ಕೇಳುತ್ತಾ ಹೋದಂತೆ ಸತ್‌ಪದಾರ್ಥಕ್ಕೆ ವಿಶೇಷಣಗಳನ್ನು ಉದ್ದಾಲಕರು ಹೇಳುತ್ತಾ ಹೋಗುತ್ತಾರೆ. ಆದರೂ ಒಂದೇ ವಿದ್ಯೆ. ಆದರಂತೆ 'ಯತ್ ಸಾಕ್ಷಾದ್ ಅಪರೋಕ್ಷಾದ್ ಬ್ರಹ್ಮ' ಎಂದು ಇಬ್ಬರ ಪ್ರಶ್ನೆಯಲ್ಲೂ ದೇಶಕಾಲಾದಿ ಅವ್ಯವಧಾನೇನ ಅಪರೋಕ್ಷತ್ವ, ಬ್ರಹ್ಮತ್ವಗಳನ್ನು ಹೇಳಲಾಗಿದೆ. ಪ್ರತಿವಚನದಲ್ಲಿ 'ಪ್ರಾಣನ ಕರ್ತೃತ್ವ'ವನ್ನು ಹೇಳಲಾಗಿದೆ. ನಿದ್ರೆಯಲ್ಲಿ ಜೀವಪ್ರಾಣನಕರ್ತೃವಲ್ಲ.

ಅಶನಾಯಾದ್ಯತೀತತ್ವವೂ ಪ್ರತಿವಚನದಲ್ಲಿ ಇದೆ. ಇವೆಲ್ಲವೂ ಬ್ರಹ್ಮಧರ್ಮಗಳಾದುದರಿಂದ ಉಭಯವಿದ್ಯೆಗಳಿಗೂ ಬ್ರಹ್ಮನೇ ವಿಷಯ.

ಎರಡೂ ವಿದ್ಯೆಗಳೂ ಬ್ರಹ್ಮವಿಷಯಕಗಳೇ ಆಗಲಿ. ಆದರೆ ಪ್ರಶ್ನೆ ಮಾಡುವವರು ಬೇರೆ ಬೇರೆ ವ್ಯಕ್ತಿಗಳು. ಉತ್ತರದಲ್ಲಿ ಹೇಳಿರುವ ಗುಣಗಳೂ ಬೇರೆ ಬೇರೆ. ಆದ್ದರಿಂದ ವಿದ್ಯಾಭೇದವು ವಿವಕ್ಷಿತ, ಎಂದರೆ—

**॥ ವ್ಯತಿಹಾರೋ ವಿಶಿಂಷಂತಿ ಹೀತರವತ್ ॥** ಪ್ರಶ್ನೆ ಮಾಡುವ ವ್ಯಕ್ತಿಗಳು ಬೇರೆಯಾದರೂ ಇಬ್ಬರ ಪ್ರಶ್ನೆಯೂ ಒಂದೇ—''ಯತ್ ಸಾಕ್ಷಾದಪರೋಕ್ಷಾದ್ ಬ್ರಹ್ಮ ಯ ಆತ್ಮಾ ಸರ್ವಾಂತರಃ ತನ್ಮೇ ವ್ಯಾಚಕ್ಷ್ವ'' ಎಂದು. ಆದ್ದರಿಂದ ಪ್ರತಿವಚನದಲ್ಲಿ ಹೇಳಿರುವ ವಿಭಿನ್ನಗುಣಗಳನ್ನು 'ವ್ಯತಿಹಾರ' ಮಾಡಬೇಕು. ಉಷಸ್ತಿಗೆ ಹೇಳಿದ್ದನ್ನು ಉಪಕೋಸಲನೂ, ಉಪಕೋಸಲನಿಗೆ ಹೇಳಿದ್ದನ್ನು ಉಷಸ್ತಿಯೂ ತಿಳಿಯಬೇಕು. ಏಕೆಂದರೆ, ಇಲ್ಲಿ ಆತ್ಮನಿಗೆ ಉಪಾಸ್ಯತ್ವೇನ ಹೇಳಿರುವ ಧರ್ಮ ಸರ್ವಾಂತರತ್ವ. ಅದರ ಸಮರ್ಥನೆಗಾಗಿ ಪ್ರಾಣನ ಕರ್ತೃತ್ವ ಮತ್ತು ಅಶನಾಯಾದ್ಯತೀತತ್ವಗಳನ್ನು ಹೇಳಲಾಗಿದೆ. ಉಪಾಸ್ಯನಾದ ಬ್ರಹ್ಮನಿಗೆ ಸರ್ವತಃ ವ್ಯಾವೃತ್ತಿಸಿದ್ಧಿಗಾಗಿ ಮಾತ್ರ ಈ ಎರಡು ವಿಶೇಷಣಗಳನ್ನು ಹೇಳಲಾಗಿದೆ. ಇತರವತ್=ಸದ್ವಿದ್ಯೆಯಲ್ಲಿ ಮತ್ತೆ ಮತ್ತೆ ಪ್ರಶ್ನೆ ಮತ್ತು ಪ್ರತಿವಚನಗಳಿಂದ ಒಂದೇ ಸತ್‌ಪದಾರ್ಥವು ಹೇಗೆ ಪ್ರತಿಪಾದ್ಯವೋ ಅದರಂತೆ.

ಸದ್ವಿದ್ಯೆಯಲ್ಲಾದರೂ ಪ್ರಶ್ನೆ–ಪ್ರತಿವಚನಭೇದವಿದ್ದರೂ ಏಕವಿಷಯಕತ್ವ ಏಕೆ?

**॥ ಸೈವ ಹಿ ಸತ್ಯಾದಯಃ॥** ಸೈವ='ಸದೇವ ಸೋಮ್ಯ' ಎಂದು ಸರ್ವಕಾರಣತ್ವೇನ ಪ್ರಸ್ತುತವಾದ ಪರದೇವತೆಯೇ ಎಲ್ಲಾ ಪ್ರಕರಣಗಳ ಕೊನೆಯಲ್ಲಿ 'ಐತದಾತ್ಮ್ಯಮಿದಂ ಸರ್ವಂ, ತತ್ ಸತ್ಯಮ್ ಸ ಆತ್ಮಾ' ಎಂದು ಉಪಸಂಹರಿಸಲ್ಪಟ್ಟಿದೆ. ಪ್ರಥಮ ಪ್ರಕರಣದಲ್ಲಿ ಹೇಳಿರುವ ಸತ್ಯತ್ವ=ಆತ್ಮತ್ವಾದಿಗಳನ್ನೇ ಮುಂದಿನ ಪ್ರಕರಣಗಳ ಕೊನೆಯಲ್ಲಿ ಹೇಳಲಾಗಿದೆ. ಆದ್ದರಿಂದ ಒಂಭತ್ತೂ ಪ್ರಕರಣಗಳಲ್ಲೂ ಹೇಳಿರುವ ವಿದ್ಯೆ, ಒಂದೇ.

**ವಿಮರ್ಶೆ**—ಉಪಸಂಹಾರವು ಏಕರೂಪವಾದುದರಿಂದ ಸದ್ವಿದ್ಯೆಯೇ ಒಂಭತ್ತೂ ಪ್ರಕರಣಗಳಲ್ಲಿ ಅನುಸ್ಯೂತವಾಗಿದೆ ಎನ್ನುವ ಅರ್ಥವು ಸೂತ್ರಕಾರರಿಗೆ ಅಭಿಪ್ರೇತವಾಗಿದ್ದಲ್ಲಿ 'ಸೈವ ಹಿ ಸತ್ಯಾದಯಃ' ಎನ್ನುವ ಬದಲು ಪ್ರಥಮಪ್ರಾಪ್ತವಾದ 'ಐತದಾತ್ಮ್ಯ' ಗುಣವನ್ನು ಪರಿಗ್ರಹಿಸಿ 'ಸೈವ ಐತದಾತ್ಮ್ಯಾದಯಃ' ಎಂದು ಹೇಳಬೇಕಾಗಿತ್ತು.

**ಇಲ್ಲಿಗೆ ಸತ್ಯಾಧಿಕರಣವು ಮುಗಿಯಿತು.**

# ೨೪. ಕಾಮಾಧಿಕರಣಮ್

ಪ್ರಕೃತೇರಪಿ ಜನ್ಮಾದೇಃ ಸಂಸಾರಪ್ರಾಪ್ತೇಃ ಕಿಮಿತಿ ನಾಮಾದಿಷ್ವಪಾಠ ಇತಿ । ಅತ್ರೋಚ್ಯತೇ-

**॥ ಓಂ ಕಾಮಾದಿತರತ್ರ ತತ್ರ ಚಾಽಯತನಾದಿಭ್ಯಃ ಓಂ ॥ ೪೦ ॥**

ಸ್ವೇಚ್ಛಯೈವ ಮೂಲಸ್ಥಾನೇ ಸ್ಥಿತಾಽನ್ಯತ್ರ ಚಾವತಾರಾನ್ ಕರೋತೀಶ್ವರೇಚ್ಛಾನುಸಾರೇಣ ।

'ಸರ್ವಾಯತನಾ ಸರ್ವಕಾಲಾ ಸರ್ವೇಚ್ಛಾ (ಸರ್ವಜ್ಞಾ)ನ ಬದ್ಧಾ ಬಂಧ(ಧಿ)ಕಾ ಸೈಷಾ ಪ್ರಕೃತಿರವಿಕೃತಿಃ' ಇತಿ ವತ್ಸಶ್ರುತೇಃ ॥

'ನಾಮಾದಯಸ್ತು ಬದ್ಧತ್ವಾನ್ಮೋಚಕತ್ವಾತ್ ಪರೋಽಪಿ ಚ ।
ಉಭಯೋರಪ್ಯಭಾವೇನ ಯಥಾಽವ್ಯಕ್ತಂ ನತೂದಿತಮ್ ॥

ಶ್ರುತೌ ತಥಾ ಜೀವಪರಾವುಚ್ಯೇತೇ ಕಿಂಚನೇತರತ್ ।
ನೋಚ್ಯತೇ ಚ ತದಾ ತತ್ತ್ವದ್ವಯಂ ವೈ ಸಮುದಾಹೃತಮ್ ॥'

ಇತಿ ಬ್ರಹ್ಮತರ್ಕೇ ॥ 40 ॥

ಲಕ್ಷ್ಮೀದೇವಿಗೂ ಜನ್ಮವಿದೆ, ಸಂಸಾರಪ್ರಾಪ್ತಿ ಇದೆ. ಹೀಗಿದ್ದರೂ ನಾಮಾಭಿಮಾನಿ ದೇವತಾಗಣದಲ್ಲಿ ಅವಳನ್ನೇಕೆ ಸೇರಿಸಿಲ್ಲ? ಈ ಪ್ರಶ್ನೆಗೆ ಉತ್ತರಸೂತ್ರ–ಕಾಮಾದಿತರತ್ರ ।

ಲಕ್ಷ್ಮೀದೇವಿಯು ಸ್ವೇಚ್ಛೆಯಿಂದಲೇ ಮೂಲಸ್ಥಾನದಲ್ಲಿ ಪರಮಾತ್ಮನ ಜೊತೆಯಲ್ಲಿ ಇದ್ದವಳಾಗಿ ಅನ್ಯತ್ರ ಚ=ಭೂಮ್ಯಾದಿಗಳಲ್ಲಿ ಭಗವದಿಚ್ಛಾನುಸಾರವಾಗಿ ಅವತಾರಗಳನ್ನು ಮಾಡುತ್ತಾಳೆ. ಆಯತನಾದಿಭ್ಯಃ=ಆಯತನಾದಿಶಬ್ದಘಟಿತವಾದ ವತ್ಸಶ್ರುತಿ ಇದೆ— ಲಕ್ಷ್ಮೀದೇವಿಯು ಎಲ್ಲೆಡೆಯೂ ಇದ್ದಾಳೆ, ಎಲ್ಲಕಡೆಯಲ್ಲೂ. ಎಲ್ಲ ಇಚ್ಛೆಗಳೂ ಅವಳಿಗೆ ಇವೆ. ಸರ್ವಜ್ಞಳು. ಅವಳು ಬಂಧಕಳಾದರೂ ಬದ್ಧಳಲ್ಲ. ಅವಳೇ ವಿಕೃತಿ ಇಲ್ಲದ ಪ್ರಕೃತಿ.

ಬ್ರಹ್ಮತರ್ಕದಲ್ಲಿ ಹೀಗಿದೆ—ನಾಮಾದ್ಯಭಿಮಾನಿಗಳಾದ ಉಷಾದಿಗಳು ಬದ್ಧರಾದುದರಿಂದ ಛಾಂದೋಗ್ಯದಲ್ಲಿ ಹೇಳಲ್ಪಟ್ಟಿದ್ದಾರೆ. ಪರಮಾತ್ಮನಾದರೋ ಮೋಚಕನಾದುದರಿಂದ ಹೇಳಲ್ಪಟ್ಟಿದ್ದಾನೆ. ಲಕ್ಷ್ಮೀದೇವಿಯು ಈ ಎರಡರಲ್ಲೂ

ಸೇರಿಲ್ಲವಾದ್ದರಿಂದ ಅವಳ ಉಲ್ಲೇಖವಿಲ್ಲ. ಆದರೂ ಲಕ್ಷ್ಮೀತತ್ವವು ಇಲ್ಲವೆಂದು ಶ್ರುತಿಯ ಅಭಿಪ್ರಾಯವಲ್ಲ. ಅದರಂತೆಯೇ 'ದ್ವಾ ಸುಪರ್ಣಾ' ಶ್ರುತಿಯಲ್ಲಿ ಬದ್ಧನಾದ ಜೀವ ಮತ್ತು ಮೋಚಕನಾದ ಈಶರನ ಪ್ರಸ್ತಾವ ಇದೆ. ಕಿಂಚನ ಇತರತ್=ಇವೆರಡರ ಹೊರತಾದ ಜಡದ ಪ್ರಸ್ತಾವ ಇಲ್ಲ. ಅಂದಮಾತ್ರಕ್ಕೆ ಜಡವೇ ಇಲ್ಲವೆಂದಲ್ಲ. ತತ್ತ್ವದ್ವಯ ಇದೆ, ಎಂದಿಷ್ಟೇ ಅರ್ಥ.

**ವಿವರಣೆ**—ಲಕ್ಷ್ಮೀದೇವಿಗೂ ಸೃಷ್ಟಿ-ಲಯಗಳು ಶ್ರುತಿಯಲ್ಲಿ ಹೇಳಲ್ಪಟ್ಟಿದೆ— 'ಯತಃ ಪ್ರಸೂತಾ ಜಗತಃ ಪ್ರಸೂತೀ-ಜಗತ್ತಿನ ಪ್ರಸೂತಿಗಳ ಕಾರಣಳಾದ ಲಕ್ಷ್ಮೀದೇವಿಯೂ ಯಾರ ಪ್ರಸೂತಿಯೋ' 'ಮಮ ಯೋನಿರಪ್ಸ್ವಂತಃಸಮುದ್ರೇ- ನನಗೂ ಕಾರಣನಾದವನು ಕ್ಷೀರಸಮುದ್ರದ ಮಧ್ಯದಲ್ಲಿದ್ದಾನೆ' ಇದು ಲಕ್ಷ್ಮೀದೇವಿ ಹೇಳುವ ಮಾತು. ಇವೆರಡರಿಂದ ಲಕ್ಷ್ಮೀದೇವಿಗೂ ಸೃಷ್ಟಿ ಇದೆ, ಎಂದು ತಿಳಿಯುತ್ತದೆ. 'ಸದೇವ ಸೋಮ್ಯ, ಇದಮಗ್ರ ಆಸೀತ್-ಸೃಷ್ಟಿಗೆ ಮೊದಲು ಬ್ರಹ್ಮಮಾತ್ರನೇ ಇದ್ದ' ಇದರಿಂದ ಲಕ್ಷ್ಮೀದೇವಿಯೂ ಇರಲಿಲ್ಲ ಎಂದು ತಿಳಿಯುವುದರಿಂದ ಅವಳಿಗೂ ಲಯವಿದೆ. ಹೀಗೆ, ಸೃಷ್ಟಿಲಯಗಳಿರುವುದರಿಂದ ಬ್ರಹ್ಮಾದಿಗಳಂತೆ ಲಕ್ಷ್ಮೀದೇವಿಯೂ ಸಂಸಾರಿಯೇ ಆಗಿದ್ದಾಳೆ-ಎಂದು ಪೂರ್ವಪಕ್ಷ.

ಪರಮಾತ್ಮನ ಇಚ್ಛಾಧೀನವಾದ ಸ್ವೇಚ್ಛೆಯಿಂದ ಲಕ್ಷ್ಮೀದೇವಿಯು ಸದಾ ಪರಮಾತ್ಮನ ಜೊತೆಯಲ್ಲೇ ಅವನ ಲೋಕಗಳಲ್ಲಿ ಇರುತ್ತಾಳೆ. ಅಲ್ಲಿದ್ದೇ ಸ್ವೇಚ್ಛೆಯಿಂದಲೇ ಅವತರಿಸುತ್ತಾಳೆ. ಅವಳಿಗೆ ಸ್ವೇಚ್ಛೆಯಿಂದ ಅವತಾರವೇ ಹೊರತು ಜನ್ಮವಿಲ್ಲ. ಆದ್ದರಿಂದ ಅವಳು ಬದ್ಧರ ಗುಂಪಿನಲ್ಲಿ ಸೇರುವುದಿಲ್ಲ. ವತ್ಸಶ್ರುತಿಯಲ್ಲಿ 'ಸರ್ವಾಯತನಾ, ಸರ್ವಕಾಲಾ, ಸರ್ವೇಚ್ಛಾ' ಎಂಬಲ್ಲಿ ಸರ್ವಶಬ್ದಕ್ಕೆ ಪರಮಾತ್ಮ ಎಂದು ಅರ್ಥ. ಸರ್ವನ ಆಯತನವೇ ಅವಳ ಆಯತನ, ಸರ್ವನ ಕಾಮವೇ ಅವಳ ಕಾಮ, ಸರ್ವನ ಕಾಲವೇ ಅವಳ ಕಾಲ. ಇದು ತತ್ತ್ವಪ್ರದೀಪದಲ್ಲಿ ಹೇಳಿದ ಅರ್ಥ. ಹೀಗೆ ಲಕ್ಷ್ಮೀದೇವಿಯು ಬಂಧರಹಿತಳಾದುದರಿಂದ ಅವಳು ಸಾಧಕವರ್ಗದಲ್ಲಿ ಸೇರುವುದಿಲ್ಲ. 'ಸೈವ ಹಿ ಸತ್ಯಾದಯಃ' ಎಂಬ ಸೂತ್ರದಲ್ಲಿ ಸಾ ಎಂದರೆ ಲಕ್ಷ್ಮೀದೇವಿಯೂ ಸೂತ್ರಕಾರರಿಗೆ ಅಭಿಪ್ರೇತವಾಗಿದೆ-'ಸೂತ್ರಂ ಸೈವ ಹಿ ಸತ್ಯಾದಯಃ, ಇತಿ ತದಭಿಮುಖಮಿವ ಚ ಪ್ರತಿಭಾತಿ।' 'ಯಥಾವ್ಯಕ್ತಂ ನತೂದಿತಮ್' ಇತ್ಯಾದಿಕಂ ಉದಾಹರದ್ಭಿಃ ಇಹ ಭಟ್ಟಾರಕೈಶ್ಚ(ಶ್ರೀಮಧ್ವಾಚಾರ್ಯೈಃ) ತಾಂ ಕಟಾಕ್ಷೇಣ ವೀಕ್ಷಮಾಣಾಮ್ ಅಭಿಪ್ರೇಕ್ಷಾಮಹೇ ॥ (ತತ್ತ್ವಪ್ರದೀಪಿಕಾ)

## ॥ ಓಂ ಆದರಾದಲೋಪಃ ಓಂ ॥ ೪೧ ॥

**ಅಬದ್ಧತ್ವೇಽಪಿ ಭಕ್ತಿವಿಶೇಷಾದೇವೋಪಾಸನಾದ್ಯಲೋಪಸ್ತಸ್ಯಾ ಭವತಿ ।**

**'ಯಥಾ ಶ್ರೀರ್ನಿತ್ಯಮುಕ್ತಾಽಪಿ ಪ್ರಾಪ್ತಕಾಮಾಽಪಿ ಸರ್ವದಾ ।**

**ಉಪಾಸ್ತೇ ನಿತ್ಯಶೋ ವಿಷ್ಣುಮೇವಂ ಭಕ್ತೋ ಹರೇರ್ಭವೇತ್ ॥'**

**ಇತಿಹಿ ಬೃಹತ್ತಂತ್ರೇ ॥ 41 ॥**

ಲಕ್ಷ್ಮೀದೇವಿಯು ಅಬದ್ಧಳಾದರೂ ಆದರಾತ್=ಭಕ್ತಿವಿಶೇಷದಿಂದಾಗಿಯೇ ಅವಳ ಭಗವದುಪಾಸನಾದಿಗಳಿಗೆ ಲೋಪವಿಲ್ಲ. ಬೃಹತ್ತಂತ್ರದಲ್ಲಿದೆ– ಹೇಗೆ ಲಕ್ಷ್ಮೀದೇವಿಯು ನಿತ್ಯಮುಕ್ತಳಾದರೂ, ಸದಾ ಪ್ರಾಪ್ತಕಾಮಳಾದರೂ ಪ್ರತಿನಿತ್ಯ ವಿಷ್ಣುವನ್ನು ಉಪಾಸನೆ ಮಾಡುವಳೋ ಅದರಂತೆ ಹರಿಭಕ್ತನೂ ಸದಾ ಉಪಾಸನೆಯನ್ನು ಮಾಡಬೇಕು.

ವಿವರಣೆ—ಲಕ್ಷ್ಮೀದೇವಿ ಅಬದ್ಧಳಾದುದರಿಂದ ಸ್ವಯಂ ಇತರರಿಂದ ಉಪಾಸ್ಯಳು. ಇತರ ಸಾಧಕರಂತೆ ಹರಿಯನ್ನು ಉಪಾಸನೆಯೂ ಮಾಡುವುದಿಲ್ಲ, ಕೃತಕೃತ್ಯಳಾದುದರಿಂದ. ಈ ಆಕ್ಷೇಪಕ್ಕೆ 'ಆದರಾತ್ ಅಲೋಪಃ' ಎಂದು ಸೂತ್ರ ಸಮಾಧಾನ ಹೇಳುತ್ತದೆ. ಆದರ, ಎಂದರೆ ಭಕ್ತಿ, ಅವಳು ಸ್ವಭಾವತಃ ಭಕ್ತಳಾದುದರಿಂದ ಯಾವ ಅಪೇಕ್ಷೆಯೂ ಇಲ್ಲದೆ, ಭಗವಂತನ ಉಪಾಸನೆಯನ್ನು ಮಾಡುತ್ತಾಳೆ. ಭಾಗವತದಲ್ಲಿದೆ–

'ತುಲಸೀಭಿರೀಶಮಭ್ಯರ್ಚತೀ' 'ಯದರ್ಚಿತಂ ಬ್ರಹ್ಮಭವಾದಿಭಿಃ ಸುರೈ ಶ್ರಿಯಾ ಚ ದೇವ್ಯಾ ಮುನಿಭಿಶ್ಚ ಸಾತ್ವತೈಃ ।'

ಈ ಸೂತ್ರದ ಫಲಿತಾರ್ಥವನ್ನು ತತ್ತ್ವಪ್ರದೀಪದಲ್ಲಿ ಹೇಳಲಾಗಿದೆ–ಭಗವಂತನು ಲಕ್ಷ್ಮೀ–ಬ್ರಹ್ಮ–ವಾಯ್ವಾದಿಗಳಿಂದ ಉಪಾಸ್ಯ, ಲಕ್ಷ್ಮ್ಯಾದಿಪರಿವೃತನಾಗಿ ಇತರ ಸಾಧಕರಿಂದ ಉಪಾಸ್ಯ.

## ॥ ಓಂ ಉಪಸ್ಥಿತೇಸ್ತದ್ವಚನಾತ್ ಓಂ ॥ ೪೨ ॥

**ಅನಾದಿಕಾಲ(ಲೇ) ಭಗವತ್ಸಂಬಂಧಿತ್ವಾದ್ ಯುಜ್ಯತೇ ಚ ನಿತ್ಯಮುಕ್ತತ್ವಂ (ತಸ್ಯಾಃ) । 'ದ್ವಾವೇತಾವನಾದಿನಿತ್ಯಾವನಾದಿಯುಕ್ತೌ ನಿತ್ಯಯು(ಮು)ಕ್ತಾವನಾಧಿಕೃತೌ ನಿತ್ಯಕೃತೌ ಯೋಽಯಂ ಪರಮೋ ಯಾ ಚ ಪ್ರಕೃತೀ ರಮತೇ ಹ್ಯಸ್ಯಾಂ ಪರಮೋ ರಮತೇ ಹ್ಯಸ್ಮಿನ್ ಪ್ರಕೃತಿಃ ಸ್ವಸ್ಮಿನ್ ಹಿ ರಮತೇ ಪರಮೋ**

**ನ ಸ್ವಸ್ಮಿನ್ ಪ್ರಕೃತಿರತ ಏನಮಾಹುಃ ಪರಮ ಇತಿ' ಇತಿ ಗೌಪವನಶ್ರುತಿವಚನಾತ್ ॥**

(ಉಪ=ಸಮೀಪೇ ಸ್ಥಿತೇಃ) ಅನಾದಿಕಾಲದಿಂದಲೂ ಭಗವಂತನ ಸಂಬಂಧವಿರುವ ಕಾರಣದಿಂದ ಲಕ್ಷ್ಮೀದೇವಿಗೆ ನಿತ್ಯಮುಕ್ತತ್ವವು ಯುಕ್ತವಾಗಿದೆ. ಗೌಪವನ ಶ್ರುತಿಯಲ್ಲಿ ಹೀಗಿದೆ—ಇವರಿಬ್ಬರೇ ಅನಾದಿ–ನಿತ್ಯರು, ಅನಾದಿಕಾಲದಿಂದ ಜೊತೆಯಾದವರು, ನಿತ್ಯಮುಕ್ತರು, ಅನಾದಿಕೃತೌ ನಿತ್ಯಕೃತೌ=ಸರ್ವಕಾಲದಲ್ಲೂ ಪೂರ್ಣರು, ಅವರಾರೆಂದರೆ–ಯೋಽಯಂ ಪರಮಃ=ಒಬ್ಬ ಪರಮಾತ್ಮ, ಯಾ ಚ ಪ್ರಕೃತಿಃ= ಇನ್ನೊಬ್ಬಳು ಲಕ್ಷ್ಮೀದೇವಿ. ಅಸ್ಯಾಂ=ಲಕ್ಷ್ಮೀದೇವಿಯಲ್ಲಿ ಪರಮಃ ರಮತೇ= ಪರಮಾತ್ಮನು ರಮಿಸುತ್ತಾನೆ. ಅವನಲ್ಲಿ ಪ್ರಕೃತಿಯು ಸುಖಕಾಣುತ್ತಾಳೆ. ಪರಮಾತ್ಮನು ಸ್ವರಮಣ, ಆದರೆ, ಪ್ರಕೃತಿ ಹಾಗಲ್ಲ. ಆದ್ದರಿಂದಲೇ ಇವನನ್ನು ಸರ್ವೋತ್ತಮನೆನ್ನುತ್ತಾರೆ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ಕಾಮಾದಿತರತ್ರ ತತ್ರ ಚಾಽಯತನಾದಿಭ್ಯಃ ಓಂ ॥** (ಅತ್ರ ಉಪಾಸ್ತೌ ಶ್ರಿಯಃ ಅನಧಿಕಾರಃ ಸಾಧ್ಯತೇ । ಕಾಮಾದಿತ್ಯಾವೃತ್ತಿಃ । ಏವಾರ್ಥೇ ಸಮುಚ್ಚಯಾರ್ಥೇ ವಾ ಚಃ । ಪ್ರಾಣ–ವಿಷ್ಣುಪ್ರಸಂಗ ಸನ್ನಿಧಾಪಿತಾ ಶ್ರೀರನ್ವೇತಿ ।

ಕಾಮಃ ಇಚ್ಛಾ। ಕಾಮಾತ್=ಕಾಮಾಧೀನಾತ್ ಕಾಮಾದೇವ=ಈಶೇಚ್ಛಾನುಸಾರಿ ಸ್ವೇಚ್ಛಯೈವ, ನ ಕರ್ಮತಃ। ಶ್ರೀಃ ತತ್ರ=ಈಶಸಮೀಪೇ ಮೂಲರೂಪೇಣ ಸ್ಥಿತಾ ಇತರತ್ರ ಚ=ಭೂಮ್ಯಾದೌ, ಅವತರತೀತಿ ಶೇಷಃ। ಕುತಃ ? ಆಯತನಾದಿಭ್ಯಃ। ಅನೇನ ಆಯತನಾದಿಬೋಧಕಶ್ರುತಿಃ ಗೃಹ್ಯತೇ ।)

ಕಾಮಾತ್=ಈಶಕಾಮಾಧೀನವಾದ ಕಾಮಾಚ್ಚ=ಸ್ವೇಚ್ಛೆಯಿಂದಲೇ, ಹೊರತು ಕರ್ಮದಿಂದಲ್ಲ, ಲಕ್ಷ್ಮೀದೇವಿಯು ತತ್ರ=ಈಶನ ಸಮೀಪದಲ್ಲೇ ಮೂಲರೂಪದಿಂದ ಇದ್ದು ಇತರತ್ರ ಚ=ಭೂಮ್ಯಾದಿಗಳಲ್ಲೂ ಸೀತೆ, ರುಗ್ಮಿಣೀ ಮುಂತಾದ ರೂಪಗಳಿಂದ ಅವತರಿಸುತ್ತಾಳೆ. ಆಯತನಾದಿಭ್ಯಃ=ಆಯತನಾದಿಶಬ್ದ ಘಟಿತವಾದ 'ಸರ್ವಾಯತನಾ ಸರ್ವಕಾಲಾ' ಇತ್ಯಾದಿಶ್ರುತಿ ಇರುವುದರಿಂದ.

**॥ ಓಂ ಆದರಾದಲೋಪಃ ಓಂ ॥** (ಶ್ರಿಯ ಇತ್ಯನುವರ್ತನೀಯಮ್ । ಶ್ರಿಯಃ ಭಗವದುಪಾಸ್ತಿಲೋಪಾಭಾವಃ, ಆದರಾತ್=ನಿರುಪಾಧಿಕಭಕ್ತ್ಯತಿಶಯಾತ್, ನತು ಬದ್ಧತ್ವಾದಿತ್ಯರ್ಥಃ ।)

॥ ಓಂ ಉಪಸ್ಥಿತೇಸ್ತದ್ವಚನಾತ್ ಓಂ ॥ ಲಕ್ಷ್ಮೀದೇವಿಗೆ ಭಗವಂತನ ಉಪಾಸನೆಯ ಅಲೋಪಃ=ಲೋಪಾಭಾವವು ಆದರಾತ್=ಭಗವಂತನಲ್ಲಿ ಅವಳಿಗಿರುವ ನಿರುಪಾಧಿಕವಾದ ಭಕ್ತಿಯ ಅತಿಶಯದಿಂದಾಗಿ ಹೊರತು ಬಂಧನ ಇರುವುದರಿಂದಲ್ಲ.

(ಪ್ರತ್ಯುತ ಈಶಸ್ಯ ಉಪ=ಸಮೀಪೇ ಸ್ಥಿತೇಃ=ನಿತ್ಯಂ ಸ್ಥಿತತ್ವಾತ್। ಶ್ರಿಯಃ ನಿತ್ಯಂ ತತ್ಸಂಬಂಧಿತ್ವೇನ ಅತಿಶಯಿತತತ್ಪ್ರಸಾದಾತ್ ನಿತ್ಯಮುಕ್ತತ್ವಮ್ ಇತ್ಯರ್ಥಃ। ನಿತ್ಯಂ ತದುಪಸ್ಥಿತಿಃ ಕುತಃ? ತದ್ವಚನಾತ್।)

ಈ ಸೂತ್ರದಲ್ಲಿ ಲಕ್ಷ್ಮೀದೇವಿಗೆ ನಿತ್ಯಮುಕ್ತತ್ವವನ್ನು ಸಮರ್ಥಿಸಲಾಗಿದೆ. ಉಪ=ಪರಮಾತ್ಮನ ಸಮೀಪದಲ್ಲೇ ಸರ್ವದಾ ಸ್ಥಿತೇಃ=ಇರುವುದರಿಂದ ಅವನ ಪ್ರಸಾದವು ಅವಳಲ್ಲಿ ಸದಾ ಇದೆ. ಆದ್ದರಿಂದ ಅವಳು ನಿತ್ಯಮುಕ್ತಳು. 'ದ್ವಾವೇತಾವನಾದಿ ನಿತ್ಯೌ' ಎಂಬ ಶ್ರುತಿಯಲ್ಲಿ ಲಕ್ಷ್ಮೀದೇವಿಯು ಸರ್ವದಾ ಭಗವಂತನೊಂದಿಗೆ ಇರುತ್ತಾಳೆ ಎಂದು ಹೇಳಲಾಗಿದೆ.

## ಅದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

॥ ಕಾಮಾದೀತರತ್ರ ತತ್ರ ಚಾಽಯತನಾದಿಭ್ಯಃ ॥ (ದ್ವೈತದರ್ಶನದಲ್ಲಿ ಸೂತ್ರಪಾಠ–ಕಾಮಾತ್–ಇತರತ್ರ, ಎಂದು.) ಛಾಂದೋಗ್ಯದಲ್ಲಿ– 'ದಹರೋಽಸ್ಮಿನ್ ಅಂತರಾಕಾಶಃ' (8.1.1) ಎಂದು ಬ್ರಹ್ಮನನ್ನು ಹೃದಯಕಮಲದಲ್ಲಿ ಹೇಳಿ 'ಏಷ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುಃ ವಿಶೋಕೋ ವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ' (8.1.5) ಎಂದಿದೆ. ಇವೆರಡೂ ವಿದ್ಯೆಗಳಲ್ಲಿ ವೇದ್ಯ ಒಂದೇ ಹಾಗೂ ಪರಸ್ಪರ ಒಂದರಲ್ಲಿ ಹೇಳಿದ ಗುಣಗಳನ್ನು ಇನ್ನೊಂದರಲ್ಲೂ ಅನುಸಂಧಾನ ಮಾಡಿಕೊಳ್ಳಬೇಕು. 'ಕಾಮಾದಿ' ಎಂದರೆ ಸತ್ಯಕಾಮಾದಿಗಳು. ಛಾಂದೋಗ್ಯದಲ್ಲಿ ಹೇಳಿರುವ ಈ ಗುಣಗಳನ್ನು ತತ್ರ=ಅಲ್ಲಿಯೂ ಇತರತ್ರ=ಬೃಹದಾರಣ್ಯಕದಲ್ಲಿಯೂ ಅನುಸಂಧಾನ ಮಾಡಿಕೊಳ್ಳಬೇಕು. ಅದರಂತೆ ಬೃಹದಾರಣ್ಯಕದಲ್ಲಿ ಹೇಳಿರುವ ಗುಣಗಳನ್ನು ಛಾಂದೋಗ್ಯ ವಿದ್ಯೆಯಲ್ಲಿ ಅನುಸಂಧಾನ ಮಾಡಿಕೊಳ್ಳಬೇಕು. ಏಕೆಂದರೆ, ಆಯತನಾದಿಭ್ಯಃ=ಹೃದಯಾತನತ್ವ, ವಿದ್ಯಾವೇದ್ಯ, ಸೇತುತ್ವ–ಇವೆಲ್ಲವೂ ಎರಡರಲ್ಲೂ ಸಮಾನವಾಗಿರುವುದರಿಂದ. ಛಾಂದೋಗ್ಯದಲ್ಲಿ ಹೇಳಿರುವುದು ಸಗುಣಬ್ರಹ್ಮವಿದ್ಯೆ. ಅಲ್ಲಿ ಹೇಳಿರುವ ಗುಣಗಳು ಧ್ಯಾನಕ್ಕಾಗಿ– ಬೃಹದಾರಣ್ಯಕದಲ್ಲಿ ನಿರ್ಗುಣೋಪಾಸನೆ ಯಾದುದರಿಂದ ಸ್ತುತಿಗಾಗಿ ಗುಣೋಕ್ತಿ, ಉಪಾಸನೆಗಾಗಿ ಅಲ್ಲ.

ಹೀಗೆ ಈ ಒಂದೇ ಸೂತ್ರವು ಒಂದು ಅಧಿಕರಣ.

**ವಿಮರ್ಶೆ**—ಈ ಪ್ರಕರಣದಲ್ಲಿ ಹೇಳಿರುವ ಸತ್ಯಕಾಮತ್ವಾದಿಧರ್ಮಗಳು ಧ್ಯೇಯತ್ವೇನ ಶ್ರುತವಾಗಿವೆ. ಅವುಗಳು ಧ್ಯೇಯತ್ವೇನೈವ ಅನ್ಯತ್ರ ಅನ್ವಿತವಾಗುತ್ತವೆ. ಹೀಗಿರುವಾಗ ಸ್ತುತ್ಯರ್ಥತ್ವೇನ ಅವುಗಳನ್ನು ಹೇಳಲಾಗಿದೆ, ಎಂದು ಪರಿಗಣಿಸುವುದು ಉಚಿತವಲ್ಲ. ಧ್ಯಾನದಿಂದ ಸಿಗುವ ಫಲ ಅಲೌಕಿಕವಾದ ಸುಖ. ಅಂತಹ ಸುಖಕ್ಕೆ ಯಾವ ರೀತಿಯ ಧ್ಯಾನವು ಸಾಧನ ಎನ್ನುವುದು ಶಾಸ್ತ್ರೈಕವೇದ್ಯ. ಆದ್ದರಿಂದ ನಿರ್ಗುಣವಿದ್ಯೆಯಲ್ಲಿ ಸತ್ಯಕಾಮತ್ವಾದಿಗಳು ಧ್ಯೇಯವಲ್ಲ, ಎಂದು ಹೇಳುವುದು ಸರಿಯಲ್ಲ. ಏಕೆಂದರೆ ಎರಡೂ ಉಪನಿಷತ್ತುಗಳಲ್ಲಿ ವಿಧಾಯಕವಾಕ್ಯಗಳಿಲ್ಲ. ಆದ್ದರಿಂದ ಸಗುಣವಿದ್ಯೆಯಲ್ಲೂ ಆ ಗುಣಗಳು ಧ್ಯೇಯಗಳಾಗಲಿಕ್ಕಿಲ್ಲ. ಹೀಗಾಗಿ ಒಂದುಕಡೆ (ಛಾಂದೋಗ್ಯದಲ್ಲಿ) ಸತ್ಯಕಾಮತ್ವಾದಿಗಳು ಧ್ಯೇಯ. ಇನ್ನೊಂದೆಡೆ (ಬೃಹದಾರಣ್ಯಕ ದಲ್ಲಿ) ಧ್ಯೇಯವಲ್ಲ, ಎಂದು ಆಗ್ರಹಮಾಡುವುದು ಯುಕ್ತವಲ್ಲ.

**॥ ಆದರಾದಲೋಪಃ ॥** ಇದು ಪೂರ್ವಪಕ್ಷಸೂತ್ರ. 'ತದ್ಯದ್ ಭಕ್ತಂ ಪ್ರಥಮಮಾಗಚ್ಛೇತ್ ತದ್ಧೋಮೀಯಂ ಸ ಯಾಂ ಪ್ರಥಮಾಮಾಹುತಿಂ ಜುಹುಯಾತ್ ಪ್ರಾಣಾಯ ಸ್ವಾಹೇತಿ' (ಛಾಂ.5.19.1) ಊಟಕ್ಕೆ ಮೊದಲು ತೆಗೆದು ಕೊಳ್ಳುವ ಪಂಚಪ್ರಾಣಾಹುತಿಗೆ ಅಗ್ನಿಹೋತ್ರಶಬ್ದವನ್ನು ಪ್ರಯೋಗಿಸಲಾಗಿದೆ—ಯ ಏತದೇವಂ ವಿದ್ವಾನಗ್ನಿಹೋತ್ರಂ ಜುಹೋತಿ' ಎಂದು. ಹಸಿದ ಮಕ್ಕಳು ಹಾಲಿಗಾಗಿ ತಾಯಿಯ ಬಳಿ ಹೋಗುವಂತೆ ಎಲ್ಲ ಪ್ರಾಣಿಗಳೂ ಹಸಿದು ಅಗ್ನಿಹೋತ್ರ ಮಾಡುತ್ತಾರೆ, ಎಂದು ಪಂಚಪ್ರಾಣಾಹುತಿಗಳನ್ನು ಪ್ರಶಂಸೆ ಮಾಡಲಾಗಿದೆ. ಈ ಅಗ್ನಿಹೋತ್ರವು ಭೋಜನಕ್ಕೆ ಸಂಬಂಧಿಸಿರುವುದರಿಂದ ಭೋಜನ ಮಾಡದಿದ್ದರೆ ಅಗ್ನಿಹೋತ್ರವನ್ನು ಮಾಡಬೇಕೋ ಬೇಡವೋ ಎಂದು, ಸಂದೇಹ ಬಂದಾಗ– ಈ ಸೂತ್ರ, ನಾವು ಭೋಜನ ಮಾಡದಿದ್ದರೂ ಅಗ್ನಿಹೋತ್ರವನ್ನು ನೀರು ಅಥವಾ ಹಾಲಿನಿಂದಾಗಲೀ ಮಾಡಲೇಬೇಕು, ಎಂದು ಪೂರ್ವಪಕ್ಷವನ್ನು ಮಂಡಿಸುತ್ತದೆ. ಜಾಬಾಲೋಪನಿಷತ್ತಿನಲ್ಲಿ ಅಗ್ನಿಹೋತ್ರದ ಬಗ್ಗೆ ಆದರವನ್ನು ತೋರಿಸಲಾಗಿದೆ–ಪೂರ್ವೋಽತಿಥಿಭ್ಯೋಽಶ್ನೀಯಾತ್ । ಯಥಾ ಹ ವೈ ಸ್ವಯಮಹುತ್ವಾಽಗ್ನಿಹೋತ್ರಂ ಜಹುಯಾತ್ ಏವಂ ತತ್' ವಸ್ತುತಃ ಅತಿಥಿಗಳಿಗೆ ಭೋಜನ ಮಾಡಿಸಿ 'ಸ್ವಾಮಿಯು' ಭೋಜನ ಮಾಡಬೇಕು. ಆದರೆ ತಾನು ಅಗ್ನಿಹೋತ್ರ ಮಾಡದೆ ಮತ್ತೊಬ್ಬರಿಗೆ ಅಗ್ನಿಹೋತ್ರ ಮಾಡಿಸುವುದು ಉಚಿತವಲ್ಲವಾದ ಕಾರಣ 'ಸ್ವಾಮಿಯೇ' (ಗೃಹಸ್ಥನೇ) ಮೊದಲು ಉಂಡು ಆಮೇಲೆ ಅತಿಥಿಭೋಜನ ಮಾಡಿಸಬೇಕು.' ಇಲ್ಲಿ ಪ್ರಾಣಾಗ್ನಿಹೋತ್ರಕ್ಕೆ ಪ್ರಾಥಮ್ಯಲೋಪವನ್ನೂ ಸಹಿಸದೇ ಇರುವಷ್ಟು ಆದರವನ್ನು ಉಪನಿಷತ್ತು ತೋರಿಸಿದೆ. ಅಂದಮೇಲೆ ಅದರ ಲೋಪವನ್ನು

ಹೇಗೆ ತಾನೇ ಆ ಉಪನಿಷತ್ತು ಸಹಿಸೀತು? ಆದ್ದರಿಂದ ತಾನು ಊಟಬಿಟ್ಟರೂ ಪ್ರಾಣಾಗ್ನಿಹೋತ್ರಕ್ಕೆ ಲೋಪವಾಗಬಾರದು, ಎಂದು ಪೂರ್ವಪಕ್ಷ. ಸಿದ್ಧಾಂತ ಸೂತ್ರ–

**॥ ಉಪಸ್ಥಿತೇತಸ್ತದ್ವಚನಾತ್ ॥** ಭೋಜನವು ಪ್ರಾಪ್ತವಾದಾಗ (ಉಪಸ್ಥಿತೇ) ಅತಃ=ಭೋಜನಕ್ಕಿಂತ ಪೂರ್ವದಲ್ಲಿ ಪ್ರಾಣಾಗ್ನಿಹೋತ್ರವನ್ನು ಮಾಡಬೇಕು. ತದ್ವಚನಾತ್–'ತದ್ಯದ್ ಭಕ್ತಂ ಪ್ರಥಮಮಾಗಚ್ಛೇತ್ ತತ್ ಹೋಮೀಯಮ್' ಎಂಬ ವಚನದಿಂದ ಇದು ತಿಳಿಯುತ್ತದೆ. ಇಲ್ಲಿ 'ತದ್ ಯತ್ ಭಕ್ತಂ' ಎಂದು ಉಣ್ಣುವ ತುತ್ತನ್ನು ಉದ್ದೇಶಿಸಿ 'ತತ್ ಹೋಮಿಯಂ' ಎಂದು ಅದರಲ್ಲಿ ಆಹುತಿಯ ಅನುಸಂಧಾನವನ್ನು ಮಾಡಬೇಕೆಂದು ಉಪನಿಷತ್ತು ಹೇಳಿದೆ. ಇದರಿಂದ ಭೋಜನಾಂಗ ವಾದುದು, ಪ್ರಾಣಾಗ್ನಿಹೋತ್ರ ಎಂದೇ ತಿಳಿಯುತ್ತದೆ. ಅಲ್ಲಿ ಪ್ರಾಣಾಗ್ನಿಹೋತ್ರವೇ ಪ್ರಧಾನವಲ್ಲ. ಪ್ರಾಣಾಗ್ನಿಹೋತ್ರದ್ರವ್ಯವು 'ಪ್ರಥಮ ಭಕ್ತದ್ರವ್ಯ'. ಹೊರತು ಹಾಲು ನೀರುಗಳಲ್ಲ. ಆದ್ದರಿಂದ ಭೋಜನಲೋಪವಾದರೆ ಪ್ರಾಣಾಗ್ನಿಹೋತ್ರವನ್ನು ಮಾಡಬೇಕಾಗಿಲ್ಲ.

**ವಿಮರ್ಶೆ**—ಇಲ್ಲಿ ಪೂರ್ವಪಕ್ಷವೇ ಉಚಿತವಲ್ಲ. ಊಟಕ್ಕೆ ಕೂತವನು ತಿನ್ನುವ ಮೊದಲು ಐದು ತುತ್ತುಗಳನ್ನು ಪ್ರಾಣಾಗ್ನಿಹೋತ್ರವೆಂದು ಅನುಸಂಧಾನ ಮಾಡಬೇಕು. ಅಲ್ಲಿಗೆ, ಪ್ರಾಣಾಗ್ನಿಹೋತ್ರವೂ ಭೋಜನವೇ ಆಗಿದೆ. ಮಂತ್ರಪೂರ್ವಕವಾಗಿ ತುತ್ತನ್ನು ತಿನ್ನುವುದರಿಂದಷ್ಟೇ ಮೊದಲ ತುತ್ತುಗಳು ಅಗ್ನಿಹೋತ್ರವೆನಿಸುತ್ತವೆ. ಹೀಗಿರುವಾಗ ಊಟಮಾಡದಿದ್ದರೂ ಅಗ್ನಿಹೋತ್ರ ಮಾಡಬೇಕು ಎನ್ನುವ ಪೂರ್ವಪಕ್ಷವೇ ಅಸಂಗತ.

## ವಿಶಿಷ್ಟಾದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಕಾಮಾದೀತರತ್ರ ತತ್ರ ಚಾಽಯತನಾದಿಭ್ಯಃ ॥** (ಕಾಮಾತ್–ಇತರತ್ರ ಎಂದು ದ್ವೈತಪಾಠ.) ಛಾಂದೋಗ್ಯದ ದಹರವಿದ್ಯೆಯಲ್ಲಿ ವೇದ್ಯನಾದವನು 'ಆಕಾಶಾತ್ಮಕ ಬ್ರಹ್ಮ'. ಬೃಹದಾರಣ್ಯಕದಲ್ಲಿ 'ಏಷೋಽಂತರ್ಹೃದಯ ಆಕಾಶಃ ತಸ್ಮಿನ್ ಶೇತೇ' ಎಂದಿರುವುದರಿಂದ ಆಕಾಶಶಾಯಿಯಾದ ಬ್ರಹ್ಮ. ಹೀಗೆ, ವೇದ್ಯಭೇದಾತ್ ವಿದ್ಯಾಭೇದ ಎಂಬ ಶಂಕೆಗೆ ಈ ಸೂತ್ರ ಸಮಾಧಾನ ನೀಡುತ್ತದೆ–ವೇದ್ಯಭೇದವಿಲ್ಲ, ಇತರತ್ರ ತತ್ರಚ=ಅಲ್ಲೂ ಇಲ್ಲೂ ಕಾಮಾದಿ=ಸತ್ಯಕಾಮತ್ವಾದಿ ವಿಶಿಷ್ಟವಾದ ಬ್ರಹ್ಮನೇ ಉಪಾಸ್ಯ. ಅದು ಹೇಗೆ ತಿಳಿಯುತ್ತದೆ? ಆಯತನಾದಿಭ್ಯಃ= ಹೃದಯಾಯತನತ್ವ–ಸೇತುತ್ವ ಇತ್ಯಾದಿ ಧರ್ಮಗಳು ಎರಡೂ ಕಡೆಯಲ್ಲಿ ಸಮಾನವಾಗಿರುವುದರಿಂದ. ವಿದ್ಯಾಫಲವೂ ಎರಡೂ ಕಡೆ ಸಮಾನ. ಒಂದೆಡೆ 'ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ'।

ಇನ್ನೊಂದೆಡೆ 'ಅಭಯಂ ವೈ ಬ್ರಹ್ಮ ಭವತಿ'. ಎರಡೂ ಕಡೆ ಬ್ರಹ್ಮಪ್ರಾಪ್ತಿಯೇ ಫಲ. ಛಾಂದೋಗ್ಯದ ಆಕಾಶವೇ ಬ್ರಹ್ಮ, ಎಂದು ದಹರಾಧಿಕರಣದಲ್ಲಿ ಸೂತ್ರಕಾರರು ನಿರ್ಧರಿಸಿದ್ದಾರೆ. ಬೃಹದಾರಣ್ಯಕದಲ್ಲಿ ಅದೇ ಬ್ರಹ್ಮ 'ತಸ್ಯಾಂತೇ ಸುಷಿರಂ ಸೂಕ್ಷ್ಮಂ' ಎಂದಂತೆ ಹೃದಯಾಕಾಶಸ್ಥತ್ವೇನ ಉಕ್ತನಾಗಿದ್ದಾನೆ.

**॥ ಆದರಾದಲೋಪಃ ॥** 'ನೇಹ ನಾನಾಸ್ತಿ ಕಿಂಚನ' ಎಂದು ಬೃಹದಾರಣ್ಯಕದಲ್ಲಿ ಬ್ರಹ್ಮನ ಗುಣಗಳನ್ನು ನಿಷೇಧ ಮಾಡಲಾಗಿದೆ. ಆದ್ದರಿಂದ ಮೋಕ್ಷಾರ್ಥೋಪಾಸನೆಯಲ್ಲಿ ಅವುಗಳನ್ನು ಲೋಪಮಾಡಬೇಕು, ಎಂದರೆ ಇಲ್ಲ. ಆ ಗುಣಗಳಲ್ಲಿ ಉಪನಿಷತ್ತಿಗೆ ಆದರಾತ್=ತಾತ್ಪರ್ಯವಿರುವುದರಿಂದ ಅಲೋಪಃ=ಉಪಾಸನೆಯಲ್ಲಿ ಅವುಗಳ ಲೋಪವಿಲ್ಲ.

('ನಚ ಮಾತಾಪಿತೃ-ಸಹಸ್ರೇಭ್ಯೋಽಪಿ ವತ್ಸಲತರಂ ಶಾಸ್ತ್ರಂ ಪ್ರತಾರಕವತ್ ಅಪಾರಮಾರ್ಥಿಕಾನ್ ನಿರಸನೀಯಾನ್ ಗುಣಾನ್ ಪ್ರಮಾಣಾಂತರಾಪ್ರತಿಪನ್ನಾನ್ ಆದರೇಣ ಉಪದಿಶ್ಯ ಸಂಸಾರಚಕ್ರಪರಿವರ್ತನೇನ ಪೂರ್ವಮೇವ ಬಂಭ್ರಮ್ಯ-ಮಾಣಾನ್ ಮುಮುಕ್ಷೂನ್ ಭೂಯೋಽಪಿ ಭ್ರಮಯಿತುಮ್ ಅಲಮ್। ರಾ.ಭಾ.)

**॥ ಉಪಸ್ಥಿತೇಽತಸ್ತದ್ವಚನಾತ್ ॥**'ಉಪಸ್ಥಿತೇಸ್ತದ್ವಚನಾತ್' ಎಂದು ದ್ವೈತಭಾಷ್ಯದ ಪಾಠ. 'ಉಪನಿಸ್ಥಿತೇಽತಸ್ತದ್ವಚನಾತ್' ಎಂದು ಇತರಭಾಷ್ಯಕಾರರ ಪಾಠ. ಈ ಪಾಠದಲ್ಲಿ 'ಅತಃ' ಎಂಬ ಶಬ್ದವು ಅಧಿಕ. ಛಾಂದೋಗ್ಯದಲ್ಲಿ ಸತ್ಯಕಾಮತ್ವಾದಿ ಗುಣವಿಶಿಷ್ಟನಾದ ಬ್ರಹ್ಮನ ಉಪಾಸನೆಯಿಂದ 'ಸರ್ವೇಷು ಲೋಕೇಷು ಕಾಮಚಾರೋ ಭವತಿ' ಎಂದು ಲೌಕಿಕಫಲವನ್ನು ಹೇಳಿರುವುದರಿಂದ ಅದು ಸಗುಣಬ್ರಹ್ಮವಿದ್ಯೆ. ಬೃಹದಾರಣ್ಯಕದಲ್ಲಿ 'ಪರಂ ಜ್ಯೋತಿಃ ಉಪಸಂಪದ್ಯ' ಎಂದು ಬ್ರಹ್ಮಪ್ರಾಪ್ತಿಯನ್ನು ಫಲವನ್ನಾಗಿ ಹೇಳಿರುವುದರಿಂದ ಅದೇ ಮೋಕ್ಷವಿದ್ಯೆ. ಮೋಕ್ಷಾರ್ಥಿಯು ಸಗುಣವಿದ್ಯೆಯ ಉಪಾಸನೆ ಮಾಡಬಾರದು. ಹೀಗೆ ಹೇಳುವುದು ಸರಿಯಲ್ಲ. ಉಪಸ್ಥಿತೇ=ಬ್ರಹ್ಮನನ್ನು ಹೊಂದಿರುವವನಿಗೆ ಅತ ಏವ=ಬ್ರಹ್ಮಸಂಪತ್ತಿಯಾದುದರಿಂದಲೇ ತದ್ವಚನಾತ್= ಕಾಮಚಾರವನ್ನು ಉಪನಿಷತ್ತು ಹೇಳುತ್ತದೆ. ಅದು ಲೌಕಿಕಫಲವಲ್ಲ.

**ವಿಮರ್ಶೆ**—ಸತ್ಯಕಾಮತ್ವಾದಿಗಳು ಬ್ರಹ್ಮಭಿನ್ನವಾಗಿದ್ದು ಅಸತ್ಯವಾಗಿವೆ, ಎನ್ನುವ ಪೂರ್ವಪಕ್ಷಿಗೆ ಉಪನಿಷತ್ತಿಗೆ ಸತ್ಯಕಾಮತ್ವಾದಿ ಗುಣಗಳಲ್ಲಿ 'ಆದರವಿದೆ' ಎನ್ನುವುದು ಸಮ್ಮತವಲ್ಲ. ಆದ್ದರಿಂದ 'ಆದರಾತ್' ಎಂದು ಹೇತುಮಾಡಿ 'ಅಲೋಪಃ' ಎಂದು ಸಾಧಿಸಿದರೆ ಅಸಿದ್ಧಿದೋಷ.

ಎರಡನೆಯ ಸೂತ್ರಕ್ಕೆ ಈ ಭಾಷ್ಯಕಾರರು ಹೇಳಿದ ಅರ್ಥವು ಸಮ್ಮತವಾಗಿದ್ದಿದ್ದಲ್ಲಿ 'ಉಪಸ್ಥಿತಸ್ಯ' ಎಂದು ಷಷ್ಠೀವಿಭಕ್ತಿಯೇ ಉಚಿತ ಹೊರತು, ಸಪ್ತಮೀವಿಭಕ್ತಿ ಅಸ್ವರಸ.

ಇಲ್ಲಿಗೆ ಕಾಮಾಧಿಕರಣವು ಮುಗಿಯಿತು.

## ೨೫. ನಿರ್ಧಾರಣಾಧಿಕರಣಮ್

**ದರ್ಶನಾರ್ಥಂ ಹ್ಯುಪಾಸನಮ್ । ತಚ್ಚ ಶ್ರವಣಾದೇರೇವ ಭವತಿ । ಅತಃ ಕಿಮರ್ಥಮಿತಿ । ಅತ್ರೋಚ್ಯತೇ–**

**॥ ಓಂ ತನ್ನಿರ್ಧಾರಣಾರ್ಥನಿಯಮಸ್ತದ್ದೃಷ್ಟೇಃ ಪೃಥಗ್ಘ್ಯಪ್ರತಿಬಂಧಃ ಫಲಮ್ ಓಂ ॥ ೪೩ ॥**

**ತತ್ವನಿಶ್ಚಯೋ ವೇದಾರ್ಥನಿಯಮಶ್ಚ ಬ್ರಹ್ಮದೃಷ್ಟೇಃ ಪೃಥಗೇವ । ಹಿಶಬ್ದೇನ 'ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' (ಬೃ.ಉ. 4.4.5) ಇತಿ ಶ್ರುತಿಂ ಸೂಚಯತಿ । ಶ್ರವಣಾದಿಫಲಂ ಚಾಜ್ಞಾನವಿಪರ್ಯಯಾದಿದರ್ಶನಪ್ರತಿಬಂಧನಿವೃತ್ತಿಃ ।**

**ಬ್ರಹ್ಮತರ್ಕೇ ಚ–**

**'ಶ್ರುತ್ವಾ ಮತ್ವಾ ತಥಾ ಧ್ಯಾತ್ವಾ ತದಜ್ಞಾನವಿಪರ್ಯಯೌ ।**
**ಸಂಶಯಂ ಚ ಪರಾಣುದ್ಯ ಲಭತೇ ಬ್ರಹ್ಮದರ್ಶನಮ್ ॥' ಇತಿ ॥**

ತಾರತಮ್ಯಜ್ಞಾನಪೂರ್ವಕವಾಗಿ ಪರಿವಾರಸಹಿತನಾದ ಶ್ರೀಹರಿಯನ್ನು ಉಪಾಸನೆ ಮಾಡಬೇಕು, ಎಂದು ಇದುವರೆಗೆ ಹೇಳಲಾಗಿದೆ. ಉಪಾಸನೆ ಎಂದರೆ ಶ್ರವಣ–ಮನನ–ಧ್ಯಾನ. ಇದರ ಫಲ ಭಗವದ್ದರ್ಶನ. ದರ್ಶನವು ಶಾಸ್ತ್ರ ಶ್ರವಣಮಾತ್ರದಿಂದಲೇ ಆಗುತ್ತದೆ. ಆದ್ದರಿಂದ ಧ್ಯಾನ ಏತಕ್ಕಾಗಿ? ಅದಕ್ಕೆ ಹೇಳುತ್ತಾರೆ— ''ತನ್ನಿರ್ಧಾರಣಾರ್ಥನಿಯಮಃ ತದ್ದೃಷ್ಟೇಃ...'' ಎಂದು.

ತತ್ತ್ವನಿರ್ಧಾರ ಮತ್ತು ತತ್ತ್ವಜ್ಞಾನ ಇವೆರಡೂ ಬ್ರಹ್ಮದರ್ಶನಕ್ಕಿಂತ ಭಿನ್ನವಾದುದು. ಸೂತ್ರದ ಹಿಶಬ್ದದಿಂದ ಶ್ರವಣ–ಮನನ–ಧ್ಯಾನ ಇವು ಮೂರೂ ಅಪರೋಕ್ಷಕ್ಕೆ ಸಾಧನ ಎಂದು ಹೇಳುವ ಶ್ರುತಿಯು ಸೂಚಿತವಾಗಿದೆ—

ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ॥ (ಬೃ.4.4.5) ಶ್ರವಣದ ಫಲ ಅಜ್ಞಾನನಿವೃತ್ತಿ. ಮನನದ ಫಲ ವಿಪರೀತಜ್ಞಾನದ ನಾಶ. ಇವೆರಡೂ ಬ್ರಹ್ಮದರ್ಶನಕ್ಕೆ ಪ್ರತಿಬಂಧಕಗಳು. ಈ ಪ್ರತಿಬಂಧಕನಿವೃತ್ತಿಯೇ ಶ್ರವಣ–ಮನನಗಳ ಫಲ. ಇದನ್ನು ಬ್ರಹ್ಮತರ್ಕದಲ್ಲಿ ಹೇಳಲಾಗಿದೆ. ಆದರ ಅರ್ಥ– ''ಬ್ರಹ್ಮನ ಬಗ್ಗೆ ಶ್ರವಣಮಾಡಿ, ಮನನಮಾಡಿ ಹಾಗೂ ಧ್ಯಾನಮಾಡಿ ಅಜ್ಞಾನ–ವಿಪರೀತಜ್ಞಾನ ಹಾಗೂ ಸಂದೇಹಗಳನ್ನು ಪರಿಹರಿಸಿಕೊಂಡು ಸಾಧಕನು ಬ್ರಹ್ಮದರ್ಶನವನ್ನು ಪಡೆಯುತ್ತಾನೆ.''

**ವಿವರಣೆ**—ಶ್ರವಣ, ಮನನ, ಧ್ಯಾನ ಇವುಗಳೇ ಉಪಾಸನಾ. ಇವುಗಳ ಫಲ ಬ್ರಹ್ಮಾಪರೋಕ್ಷ. ಅದು ಶಾಸ್ತ್ರಶ್ರವಣದಿಂದಲೇ ಆಗುತ್ತದೆ. ಆದ್ದರಿಂದ ಧ್ಯಾನ ಏಕೆ ಬೇಕು? ಧ್ಯಾನವು ಬ್ರಹ್ಮಾಪರೋಕ್ಷಕ್ಕೆ ಸಾಕ್ಷಾತ್ ಸಾಧನ. ಧ್ಯಾನ ಮಾಡಬೇಕಾದರೆ ವಿಷ್ಣುವು ಸಮಸ್ತಗುಣಪೂರ್ಣ, ಎಂಬ ನಿರ್ಧಾರವಿರಬೇಕು. ಈ ನಿರ್ಧಾರಕ್ಕೆ ಶಾಸ್ತ್ರಾರ್ಥದ ಅಜ್ಞಾನ, ಸಂದೇಹ ಮತ್ತು ವಿಪರೀತ ಜ್ಞಾನ ಅಂದರೆ ಬ್ರಹ್ಮನು ನಿರ್ಗುಣ, ಎಂಬ ಜ್ಞಾನವು ಪ್ರತಿಬಂಧಕ. ನಿಯಮಪೂರ್ವಕ ಶಾಸ್ತ್ರಶ್ರವಣದಿಂದ 'ಸಮಸ್ತಗುಣ ಪೂರ್ಣನಾದ ನಾರಾಯಣನೇ ವೇದಾರ್ಥ, ಎಂಬ 'ವೇದಾರ್ಥನಿಯಮ' ಬರುತ್ತದೆ. ಇದರಿಂದ ಬ್ರಹ್ಮನ ಬಗೆಗೆ ಬರುವ ಅಜ್ಞಾನವು ನಾಶವಾಗುತ್ತದೆ. ಈ ಶಾಸ್ತ್ರಾರ್ಥವನ್ನು ಯುಕ್ತಿಯಿಂದ ದೃಢಪಡಿಸಿಕೊಳ್ಳುವುದೇ ಮನನ. ಅದರಿಂದ ಸಂದೇಹ ಮತ್ತು ವಿಪರೀತ ಜ್ಞಾನಗಳು ನಾಶವಾಗುತ್ತವೆ. ಹೀಗೆ ಪ್ರತಿಬಂಧಕನಾಶವಾದಾಗ ಧ್ಯಾನವು ಸಾಧ್ಯವಾಗುತ್ತದೆ. ಧ್ಯಾನದಿಂದ ಅಪರೋಕ್ಷ. ಆದ್ದರಿಂದ ಬ್ರಹ್ಮಾಪರೋಕ್ಷಕ್ಕಾಗಿ ಶ್ರವಣಾದಿತ್ರಯಗಳು ಅಗತ್ಯವಾಗಿವೆ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ತನ್ನಿರ್ಧಾರಣಾರ್ಥನಿಯಮಸ್ತದ್ದೃಷ್ಟೇಃ ಪೃಥಗ್ಘ್ಯಪ್ರತಿಬಂಧಃ ಫಲಮ್ ಓಂ ॥** (ಅತ್ರ ಶ್ರವಣ–ಮನನೋಪಾಸ್ತೀನಾಂ ತಿಸೃಣಾಮಪಿ ಕರ್ತವ್ಯತ್ವಂ ಸಾಧ್ಯತೇ। ಹಿಃ ಶ್ರುತಿಸೂಚಕಃ। ಫಲಮಿತ್ಯಾವರ್ತತೇ ತದ್ದೃಷ್ಟೇರಿತ್ಯಪಿ।

ತನ್ನಿರ್ಧಾರಣಂ–ತದಿತಿ ವೇದಬೋಧ್ಯತತ್ವಪರಾಮರ್ಶಃ। ಭಾವಪ್ರಧಾನಂ ವಾ। ಇಯದಿತ್ಯಾದಿನಾ ಪೂರ್ವಪ್ರಕೃತ–ಪರಾಪರತತ್ತ್ವ–ಪರಾಮರ್ಶೋ ವಾ ಅಯಂ। ಅಸ್ಯಾರ್ಥಃ, ಇತಿ ತತ್ತ್ವನಿಶ್ಚಯಃ ಇತ್ಯರ್ಥಃ। ತೇನ ಸಹಿತೋ ಅರ್ಥನಿಯಮಃ= 'ಅಯಮೇವ ವೇದಾರ್ಥಃ, ನಾನ್ಯಃ' ಇತಿ ನಿಶ್ಚಯಃ ಅರ್ಥನಿಯಮಃ ಶ್ರವಣಮನನ

ಫಲರೂಪಂ, ತದ್ದ್ವಯಮಪಿ। ತದ್ದೃಷ್ಟೇಃ–ಸೇತಿ ಬ್ರಹ್ಮಣೋ ದರ್ಶನಾತ್ ಧ್ಯಾನಸಾಧ್ಯಾತ್ ಪೃಥಕ್। ಅತಃ ತಾಭ್ಯಾಂ ದೃಷ್ಟ್ಯಸಿದ್ಧೇಃ ದೃಷ್ಟ್ಯರ್ಥಂ ಧ್ಯಾನಂ ಕಾರ್ಯಮಿತಿ ಭಾವಃ।

ಮುಕ್ತಿದೃಷ್ಟೇಃ ಧ್ಯಾನಾದೇವ ಸಿದ್ಧೌ ಕಿಂ ತಾಭ್ಯಾಮ್, ಇತ್ಯತ ಉಕ್ತಂ–ಹೀತಿ। ಶ್ರೋತವ್ಯಃ, ಇತಿ ಶ್ರುತೌ ದೃಷ್ಟ್ಯರ್ಥಂ ತ್ರಯಸ್ಯಾಪಿ ವಿಹಿತತ್ವಾತ್। ವಿಧಾನೇಽಪಿ ಕಥಂ ಯುಕ್ತಮ್ ಇತ್ಯತ ಉಕ್ತಂ–ಅಪ್ರತಿಬಂಧಃ ಫಲಮಿತಿ। ತದ್ದೃಷ್ಟೇಃ ಸಂದೇಹ–ವಿಪರ್ಯಯಕೃತಪ್ರತಿಬಂಧಾಭಾವಃ ಫಲಂ ಶ್ರವಣಮನನಯೋಃ ಇತ್ಯರ್ಥಃ।)

ತನ್ನಿರ್ಧಾರಣಂ–ತತ್=ಪೂರ್ವಪ್ರಕೃತವಾದ ಪರಾಪರತತ್ತ್ವಗಳ ನಿರ್ಧಾರ–ಣಂ=ನಿಶ್ಚಯವು. ಇಂತಹ ನಿಶ್ಚಯಸಹಿತವಾದ ಅರ್ಥನಿಯಮಃ=ಇದೇ ವೇದದ ಅರ್ಥ, ಬೇರಲ್ಲ ಎಂಬ ನಿರ್ಧಾರ ಇವೆರಡೂ ಶ್ರವಣ ಮತ್ತು ಮನನಗಳ ಫಲ. ಈ ಫಲವು ತದ್ದೃಷ್ಟೇಃ=ಬ್ರಹ್ಮದರ್ಶನಕ್ಕಿಂತ ಪೃಥಕ್=ಬೇರೆಯೇ ಆಗಿದೆ. ಆದ್ದರಿಂದ ಶ್ರವಣ–ಮನನಗಳಿಂದ ಬ್ರಹ್ಮದರ್ಶನವಾಗುವುದಿಲ್ಲ, ಧ್ಯಾನವೇ ಬೇಕು.

ಹಾಗಾದರೆ ಧ್ಯಾನವೇ ಸಾಕು, ಶ್ರವಣ–ಮನನಗಳೇಕೆ? ಈ ಪ್ರಶ್ನೆಯ ಪರಿಹಾರವನ್ನು ಸೂತ್ರದ 'ಹಿ' ಶಬ್ದವು 'ಶ್ರೋತವ್ಯೋ ಮಂತವ್ಯಃ' ಎಂಬ ಶ್ರುತಿಯನ್ನು ಸೂಚಿಸುವ ಮೂಲಕ, ಕೊಡುತ್ತದೆ. ಶ್ರುತಿ ಹೇಳಿದರೂ ಶ್ರವಣಾದಿಗಳಿಂದ ದರ್ಶನಕ್ಕೆ ಆಗುವ ಉಪಯೋಗವಾದರೂ ಏನು? ಅದಕ್ಕುತ್ತರ—ಅಪ್ರತಿಬಂಧಃ ಫಲಮ್। ದರ್ಶನಕಾರಣವಾದ ಧ್ಯಾನಮಾಡಬೇಕಾದರೆ ಸಂದೇಹ–ಭ್ರಾಂತಿಗಳು ಪ್ರತಿಬಂಧಕಗಳು. ಆ ಪ್ರತಿಬಂಧಕಗಳನ್ನು ನಿರಾಸಮಾಡುವ ಮೂಲಕ ಶ್ರವಣ–ಮನನಗಳು ಬೇಕು.

## ಅದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ತನ್ನಿರ್ಧಾರಣಾನಿಯಮಸ್ತದ್ದೃಷ್ಟೇಃ ಪೃಥಗ್ಘ್ಯಪ್ರತಿಬಂಧಃ ಫಲಮ್ ॥**
ದ್ವೈತಭಾಷ್ಯದ ಪಾಠ 'ತನ್ನಿರ್ಧಾರಣಾರ್ಥನಿಯಮಃ' ಎಂದು. ಇತರ ಭಾಷ್ಯಕಾರರ ಪಾಠ–'ತನ್ನಿರ್ಧಾರಣಾನಿಯಮಃ' ಎಂದು.

ಬ್ರಹ್ಮಕಾಂಡದಲ್ಲಿ ಹೇಳಿರುವ ಉದ್ಗೀಥಾದ್ಯುಪಾಸನೆಗಳು ಕರ್ಮದ ಅನಿತ್ಯಾಂಗಗಳು ಹೊರತು ಅವಶ್ಯಾನುಷ್ಠೇಯವಾದ ನಿತ್ಯಾಂಗಗಳಲ್ಲ. ತನ್ನಿರ್ಧಾರಣಾನಿಯಮಃ, ನಿರ್ಧಾರಣಂ=ಧ್ಯಾನ. ಕರ್ಮ ಮಾಡುವ ಮೊದಲು ಉದ್ಗೀಥಧ್ಯಾನದ ನಿಯಮವಿಲ್ಲ. ಏಕೆಂದರೆ, ತದ್ದೃಷ್ಟೇಃ=ತೇನೋಭೌ ಕುರುತಃ ಯಶ್ಚೈತದೇವಂ ವೇದ, ಯಶ್ಚ ನ ವೇದ ॥ (ಛಾಂ.1.1.10) ಉದ್ಗೀಥವನ್ನು ತಿಳಿದವನೂ ತಿಳಿಯದವನೂ ಕರ್ಮವನ್ನು

ಮಾಡುತ್ತಾನೆ. ಉದ್ಗೀಥವನ್ನು ತಿಳಿಯದೆಯೂ ಕರ್ಮವನ್ನು ಮಾಡುತ್ತಾನೆ, ಎಂದಿರುವುದರಿಂದ ಅದಿಲ್ಲದೆಯೂ ಕರ್ಮವು ಫಲ ನೀಡುತ್ತದೆ, ಎಂದು ತಿಳಿಯುವುದು. ಅಲ್ಲದೆ, ಉದ್ಗೀಥೋಪಾಸನಾಪೂರ್ವಕವಾಗಿ ಕರ್ಮವನ್ನು ಮಾಡಿದರೆ ಪೃಥಕ್‌ಫಲಂ='ಯದೇವ ವಿದ್ಯಯಾ ಕರೋತಿ ಶ್ರದ್ಧಾಯೋಪನಿಷದಾ ತದೇವ ವೀರ್ಯವತ್ತರಂ ಭವತಿ' ಎಂದು ಉದ್ಗೀಥೋಪಾಸನಾಪೂರ್ವಕವಾದ ಕರ್ಮಕ್ಕೆ ವೀರ್ಯವತ್ತರತ್ವವನ್ನು ಹೇಳಿರುವುದರಿಂದ ಅದಿಲ್ಲದೆ ಮಾಡಿದ ಕರ್ಮ 'ವೀರ್ಯವತ್' (ಫಲವತ್) ಎಂದು ತಿಳಿಯುತ್ತದೆ. ವೀರ್ಯವತ್ತರ ಎಂದರೆ ಕರ್ಮಾಂತರಫಲದ ಅಪ್ರತಿಬಂಧ. ಉದ್ಗೀಥೋಪಾಸನಾಪೂರ್ವಕ ಕರ್ಮ ಮಾಡಿದರೆ ಆ ಕರ್ಮ ಕರ್ಮಾಂತರದ ಫಲವನ್ನು ತಡೆದು ಪ್ರಕೃತಕರ್ಮದ ಫಲವನ್ನು ಕೊಡುತ್ತದೆ. ಇದು ಕರ್ಮಫಲಾತಿರಿಕ್ತವಾದ ಉಪಾಸನಾಫಲ. ಉದ್ಗೀಥೋಪಾಸನಾಪೂರ್ವಕ ಕರ್ಮದಿಂದ ಸಮೃದ್ಧವಾದ ಫಲ, ಅದಿಲ್ಲದಿದ್ದರೂ ಕರ್ಮ ನಿಷ್ಫಲವಲ್ಲ; ಸಾಮಾನ್ಯಫಲ ಇದೆ. ಆ ಉಪಾಸನೆಯು ನಿತ್ಯವಾಗಿದ್ದಲ್ಲಿ ಅದಿಲ್ಲದಿದ್ದರೆ ಕರ್ಮದಿಂದ ಫಲವೇ ಸಿಗಬಾರದು. ಆದ್ದರಿಂದ ಅದು ಅನಿತ್ಯವಾಗಿರುವ ಕರ್ಮಾಂಗ.

**ವಿಮರ್ಶೆ**—ಉದ್ಗೀಥವು ಸಾಮಭಕ್ತಿ. ಓಂಕಾರ ಒಂದಕ್ಷರ. ಅವೆರಡಕ್ಕೆ ಸಾಮಾನಾಧಿಕರಣ್ಯವೇ ಇಲ್ಲ. ಅಂದಮೇಲೆ ಒಂದನ್ನು ಇನ್ನೊಂದನ್ನಾಗಿ ಉಪಾಸನೆ ಮಾಡುವುದು ಹೇಗೆ? ಅಸದುಪಾಸನೆ ಯುಕ್ತವಲ್ಲ. ಹೀಗೆ ಈ ಅಧಿಕರಣಕ್ಕೆ ಪರೋಕ್ತವಾದ ವಿಷಯವೇ ಇಲ್ಲ.

ರಾಮಾನುಜಭಾಷ್ಯದಲ್ಲೂ ಈ ಅಧಿಕರಣಕ್ಕೆ ಇದೇ ಅರ್ಥವನ್ನು ಹೇಳಲಾಗಿದೆ.

ಇಲ್ಲಿಗೆ ನಿರ್ಧಾರಣಾಧಿಕರಣವು ಮುಗಿಯಿತು.

## ೨೬. ಪ್ರದಾನಾಧಿಕರಣಮ್

### ॥ ಓಂ ಪ್ರದಾನವದೇವ (ಹಿ) ತದುಕ್ತಮ್ ಓಂ ॥ ೪೪ ॥

**ನಚ ಶ್ರವಣಾದಿಮಾತ್ರೇಣ ಬ್ರಹ್ಮದೃಷ್ಟಿರ್ಭವತಿ ಕಿಂತು ಸೇತಿಕರ್ತವ್ಯೇನ । ಯಥಾ ಗುರುದತ್ತಂ ತಥೈವ ಭವತಿ । 'ಆಚಾರ್ಯವಾನ್ ಪುರುಷೋ ವೇದ' (ಛಾಂ.ಉ. 6.14.2) ಇತಿ ಹ್ಯುಕ್ತಮ್ ॥**

ಶಾಸ್ತ್ರವನ್ನು ಶ್ರವಣಮಾಡಿದ ಮಾತ್ರದಿಂದ ಬ್ರಹ್ಮದರ್ಶನವಾಗುವುದಿಲ್ಲ. ಯಾವ ರೀತಿಯ ಗುರುಗಳು ಹೇಗೆ ಕೊಡುತ್ತಾರೋ ಅದೇರೀತಿ ಫಲವಾಗುತ್ತದೆ. ''ಗುರುಉಳ್ಳ ಪುರುಷನೇ ಬ್ರಹ್ಮನನ್ನು ತಿಳಿಯುತ್ತಾನೆ' ಎಂದು ಛಾಂದೋಗ್ಯದಲ್ಲಿ ಹೇಳಿದೆ.

**ವಿವರಣೆ**—ಶ್ರವಣವು ಅಪರೋಕ್ಷಕ್ಕೆ ಸಾಧನ ಎಂದು ಹೇಳಲಾಗಿದೆ. ಶಾಸ್ತ್ರಶ್ರವಣವನ್ನು ಸರಿಯಾದ ಗುರುಗಳಿಂದ ವಿಧಿಬದ್ಧವಾಗಿ ಮಾಡಬೇಕು. ಮತ್ತೊಬ್ಬರಿಗೆ ಉಪದೇಶ ಮಾಡುವಾಗ ಕದ್ದು ಕೇಳುವುದು, ಅಥವಾ ಗುರುಗಳನ್ನು ಬೆದರಿಸಿ ಶ್ರವಣ ಮಾಡುವುದು. ಇಂತಹ ಶ್ರವಣವು ಸಫಲವಾಗುವುದಿಲ್ಲ. 'ಉತ್ತಮ ಗುರುಂ ಪ್ರಾಪ್ಯ, ಶುಶ್ರೂಷಯಾ ಪ್ರಸಾದ್ಯ ತತಃ ಶ್ರೋತವ್ಯಮ್' ಉತ್ತಮರಾದ ಗುರುಗಳ ಬಳಿ ಹೋಗಿ ಅವರನ್ನು ಪ್ರಸನ್ನಗೊಳಿಸಿ ಅವರಿಂದ ಶ್ರವಣ ಮಾಡಬೇಕು. ಅದೇ ಅಪರೋಕ್ಷಕ್ಕೆ ಕಾರಣವಾಗುತ್ತದೆ.

ನಾತಿಪ್ರಸನ್ನಹೃದಯೋ ಯದ್ ದದ್ಯಾದ್ ಗುರುರಪ್ಯಸೌ ।
ನ ತತ್ ಸತ್ಯಂ ಭವೇತ್ ತಸ್ಮಾದರ್ಚನೀಯಃ ಪರೋ ಗುರುಃ ॥ (ಅನು.)

'ಯಥಾ ಗುರುದತ್ತಂ' ಎಂಬ ಭಾಷ್ಯವಚನಕ್ಕೆ–ಯಥಾಭೂತಗುರುದತ್ತಂ, ತಥೈವ ಭವತಿ, ಯಥಾಚ ಗುರುಣಾ ದತ್ತಂ ಪ್ರಸಾದೇನ ವಾ ಅಪ್ರಸಾದೇನ ವಾ ತದನುರೂಪಂ ಭವತಿ ॥ ಎಂದು ತತ್ತ್ವಪ್ರದೀಪದಲ್ಲಿ ಎರಡು ಅರ್ಥಗಳನ್ನು ಹೇಳಲಾಗಿದೆ.

ಯಾವ ರೀತಿಯ ಗುರುವಿನಿಂದ ಯಾವ ರೀತಿಯಲ್ಲಿ ಅಂದರೆ ಪ್ರಸಾದಪೂರ್ವಕವಾಗಿಯೋ, ಅಪ್ರಸನ್ನತೆಯಿಂದಲೋ ವಿದ್ಯೆಯು ದೊರಕುವದೋ ಅದೇ ರೀತಿ ಫಲವು ಸಿಗುತ್ತದೆ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ಪ್ರದಾನವದೇವ ಹಿ ತದುಕ್ತಮ್ ಓಂ ॥** (ಅತ್ರೋಪಾಸ್ತೌ ಪ್ರೀತಿಪೂರ್ವಕ–ಗುರೂಪದೇಶಾಖ್ಯಾಂಗಮ್ ಉಚ್ಯತೇ । ತದಿತ್ಯಾವೃತ್ತಿಃ ।

ತತ್=ಶ್ರವಣಾದಿತ್ರಯಂ ಪ್ರದಾನವದೇವ, ದಾನಮ್=ಉಪದೇಶಃ, ಪ್ರೀತಿಪೂರ್ವಕತ್ವರೂಪ–ಪ್ರಕೃಷ್ಟದಾನಯುತಮೇವ ದೃಷ್ಟ್ಯಾಖ್ಯಫಲವತ್ ಇತಿ ಯೋಜ್ಯಮ್ । ನ ಶ್ರವಣಾದಿಮಾತ್ರಮ್ ಇತ್ಯರ್ಥಃ । ಕುತಃ ? ತತ್=ಜ್ಞಾನಸ್ಯ ಪ್ರದಾನಾಧೀನತ್ವಮ್ ಉಕ್ತಮ್ 'ಆಚಾರ್ಯವಾನ್ ಪುರುಷೋ ವೇದ' ಇತಿ ಶ್ರುತೌ ಇತ್ಯರ್ಥಃ ।)

ತತ್=ಶ್ರವಣಾದಿಗಳು ಪ್ರದಾನವದೇವ-ದಾನ ಎಂದರೆ ಉಪದೇಶ. ಪ್ರ ಎಂದರೆ ಪ್ರಕರ್ಷ. ಪ್ರಸಾದರೂಪ ಪ್ರಕರ್ಷಯುಕ್ತವಾದ ಉಪದೇಶವುಳ್ಳದ್ದಾದರೆ ಮಾತ್ರ ಫಲಪ್ರದವಾಗುತ್ತದೆ. ತತ್=ಜ್ಞಾನವು ಗುರೂಪದೇಶಾಧೀನ ಎಂಬುದು ಉಕ್ತಂ= ಛಾಂದೋಗ್ಯಶ್ರುತಿಯಲ್ಲಿ ಹೇಳಲ್ಪಟ್ಟಿದೆ.

## ಅದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಪ್ರದಾನವದೇವ ಹಿ ತದುಕ್ತಮ್ ॥** ಬೃಹದಾರಣ್ಯಕದಲ್ಲಿ (1.5.21) ಅಧ್ಯಾತ್ಮದಲ್ಲಿ ವಾಗಾದೀಂದ್ರಿಯಗಳ ಮಧ್ಯದಲ್ಲಿ ಪ್ರಾಣನು ಶ್ರೇಷ್ಠ ಎಂದು ಹೇಳಲಾಗಿದೆ. ಅಧಿದೈವದಲ್ಲಿ ಅಗ್ನ್ಯಾದಿಗಳಲ್ಲಿ ವಾಯು ಶ್ರೇಷ್ಠ ಎಂದು ಹೇಳಲಾಗಿದೆ. ಪ್ರಾಣನೇ ವಾಯು. 'ವಾಯುಃ ಪ್ರಾಣೋ ಭೂತ್ವಾ ನಾಸಿಕೇ ಪ್ರಾವಿಶತ್' ಎಂದಿರುವುದರಿಂದ ಅಧಿದೈವದ ವಾಯುವೇ ಅಧ್ಯಾತ್ಮದ ಪ್ರಾಣ. ಆದ್ದರಿಂದ ಈ ಎರಡೂ ಉಪಾಸನೆ ಒಂದೇ ಎಂದು ಪೂರ್ವಪಕ್ಷ. ಈ ಎರಡೂ ಉಪಾಸನೆಗಳು ಬೇರೆ ಬೇರೆ, ಎಂದು ಸಿದ್ಧಾಂತ. ಧ್ಯಾನಕ್ಕಾಗಿಯೇ ಅಧಿದೈವ ಅಧ್ಯಾತ್ಮ ಎಂಬ ವಿಭಾಗವನ್ನು ಉಪನಿಷತ್ತಿನಲ್ಲಿ ಮಾಡಲಾಗಿದೆ. ವಿದ್ಯಾಭೇದವಿಲ್ಲದಿದ್ದಲ್ಲಿ ಈ ವಿಭಾಗವೇ ಅನುಚಿತವಾದೀತು. ಆದ್ದರಿಂದ ದೇವತೆ ಒಬ್ಬನೇ ಆದರೂ ಅವನಲ್ಲಿ ಅಧಿದೈವತ್ವ ಮತ್ತು ಅಧ್ಯಾತ್ಮತ್ವರೂಪವಾದ ಧರ್ಮಭೇದದಿಂದ ಭೇದವಿದೆ. ಅದಕ್ಕೆ ಉದಾಹರಣೆ— ''ಪ್ರದಾನವತ್'' ಎಂದು. ತ್ರಿಪುರೋಡಾಶಿನೀಇಷ್ಟಿಯಲ್ಲಿ 'ಇಂದ್ರಾಯ ರಾಜ್ಞೇ, ಇಂದ್ರಾಯ ಅಧಿರಾಜಾಯ, ಇಂದ್ರಾಯ ಸ್ವರಾಜ್ಞೇ' ಈ ಮೂರು ಆಹುತಿಗಳೂ ಇಂದ್ರೋದ್ದೇಶ್ಯಕವಾದರೂ ಅಗ್ನಿಯಲ್ಲಿ ಹವಿಸ್ಸಿನ ಪ್ರದಾನ ಕ್ರಮೇಣ ಹೊರತು ಒಂದೇ ಬಾರಿ ಅಲ್ಲ. ಅದರಂತೆ ಪ್ರಕೃತದಲ್ಲಿ. ಆದರೆ, ಪ್ರಕೃತ ಎರಡೂ ವಿದ್ಯೆಗಳಲ್ಲಿ ದೇವತಾಐಕ್ಯವಿರುವುದರಿಂದ ವಿದ್ಯೆಯು ಒಂದೇ ಆದರೂ ಪ್ರವೃತ್ತಿ ಭಿನ್ನ. ಸಾಯಂ-ಪ್ರಾತಃರೂಪವಾದ ಕಾಲಭೇದದಿಂದ ಒಂದೇ ಅಗ್ನಿಹೋತ್ರದಲ್ಲಿ ಪ್ರವೃತ್ತಿಯು ಭಿನ್ನವಾಗಿರುವಂತೆ. ಆದ್ದರಿಂದ ವಾಯು ಮತ್ತು ಪ್ರಾಣರನ್ನು ಪ್ರತ್ಯೇಕವಾಗಿಯೇ ಉಪಾಸನೆ ಮಾಡಬೇಕು.

**ವಿಮರ್ಶೆ**—ಅದ್ವೈತಭಾಷ್ಯದಲ್ಲಿ ಈ ಎರಡೂ ವಿದ್ಯೆಗಳಿಗೆ ಐಕ್ಯವನ್ನು ಹೇಳಿ ಪ್ರವೃತ್ತಿಭೇದವನ್ನು ಸಮರ್ಥಿಸಲಾಗಿದೆ. ಅದಕ್ಕೆ ಉಚಿತ ದೃಷ್ಟಾಂತ ಅಗ್ನಿಹೋತ್ರ. 'ಪ್ರದಾನ'ವಲ್ಲ. ಪ್ರದಾನದಲ್ಲಿ ದ್ರವ್ಯ, ದೇವತಾಭೇದವಿದೆ, ಸೂತ್ರದಲ್ಲಿ 'ತದುಕ್ತಂ' ಎಂಬ ಅಂಶವೂ ವ್ಯರ್ಥ. ತದುಕ್ತಂ ಎಂದರೆ 'ಪ್ರದಾನ'ದಲ್ಲಿ ದೇವತಾನಾನಾತ್ವವನ್ನು ಸಂಕರ್ಷ ಸೂತ್ರದಲ್ಲಿ ಹೇಳಲಾಗಿದೆ, ಎಂದು ಅರ್ಥ.

## ವಿಶಿಷ್ಟಾದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಪ್ರದಾನವದೇವ ಹಿ ತದುಕ್ತಮ್ ॥** ಛಾಂದೋಗ್ಯದ ದಹರವಿದ್ಯೆಯಲ್ಲಿ 'ತದ್ಯ ಇಹಾತ್ಮಾನಮನುವಿದ್ಯ ವ್ರಜಂತ್ಯೇತಾಂಶ್ಚ ಸತ್ಯಾನ್ ಕಾಮಾನ್' ಎಂದು ಪರಮಾತ್ಮನ ಉಪಾಸನೆಯನ್ನೂ ಸತ್ಯಕಾಮತ್ವ, ಅಪಹತಪಾಪ್ಮತ್ವಾದಿಗುಣಗಳ ಉಪಾಸನೆಯನ್ನೂ ಪೃಥಕ್ಕಾಗಿ ಹೇಳಲಾಗಿದೆ. ಆದರೆ, ಗುಣಿಯನ್ನು ಬಿಟ್ಟು ಗುಣಗಳನ್ನು ಮಾತ್ರವೇ ಉಪಾಸನೆ ಮಾಡಲು ಆಗುವುದಿಲ್ಲ. ಆದ್ದರಿಂದ ಇಲ್ಲಿ ಒಂದೇ ಉಪಾಸನೆ, ಪ್ರತ್ಯೇಕ ಉಪಾಸನೆಗಳಲ್ಲ ಎಂಬ ಪೂರ್ವಪಕ್ಷಕ್ಕೆ ಅವೆರಡೂ ಉಪಾಸನೆಗಳೂ ಬೇರೆ. ಸ್ವರೂಪಕ್ಕಿಂತಲೂ ಗುಣವಿಶಿಷ್ಟರೂಪವು ಭಿನ್ನ. ಆದ್ದರಿಂದ ಇಂದ್ರನಿಗೆ ಪ್ರತ್ಯೇಕವಾಗಿ ಆಹುತಿಪ್ರದಾನದಂತೆ ಇಲ್ಲಿ ಉಪಾಸನೆಗಳೂ ಭಿನ್ನ, ಎಂದು ಸಿದ್ಧಾಂತ.

ವಿಮರ್ಶೆ—ಗುಣಭೇದೇನ 'ಪ್ರದಾನ'ಭೇದವಿಲ್ಲ. ಅದರಂತೆ, ಗುಣಭೇದೇನ ಉಪಾಸನಾಭೇದವೂ ಯುಕ್ತವಲ್ಲ.

ಇಲ್ಲಿಗೆ ಪ್ರದಾನಾಧಿಕರಣವು ಮುಗಿಯಿತು.

# ೨೭. ಲಿಂಗಭೂಯಸ್ತ್ವಾಧಿಕರಣಮ್

**ಗುರುಪ್ರಸಾದಃ ಸ್ವಪ್ರಯತ್ನೋ ವಾ ಬಲವಾನಿತಿ ನಿಗದ್ಯತೇ–**

**॥ ಓಂ ಲಿಂಗಭೂಯಸ್ತ್ವಾತ್ ತದ್ಧಿ ಬಲೀಯಸ್ತದಪಿ ಓಂ ॥ ४४ ॥**

**ಋಷಭಾದಿಭ್ಯೋ ವಿದ್ಯಾಂ ಜ್ಞಾತ್ವಾಽಪಿ ಸತ್ಯಕಾಮೇನ 'ಭಗವಾಂಸ್ತ್ವೇವ ಮೇ ಕಾಮಂ ಬ್ರೂಯಾತ್' (ಛಾಂ.ಉ. 4.9.2), 'ಶ್ರುತಂ ಹ್ಯೇವ ಮೇ ಭಗವದ್ದೃಶೇಭ್ಯ ಆಚಾರ್ಯಾದ್ಧ್ಯೇವ(ದ್ಧೈವ) ವಿದ್ಯಾ ವಿದಿತಾ ಸಾಧಿಷ್ಠಂ ಪ್ರಾಪಯತಿ' (ಛಾಂ.ಉ. 4.9.3) ಇತಿ ವಚನಾತ್ । 'ಅತ್ರ ಹ ನ ಕಿಂಚನ ವೀಯಾಯ' (ಛಾಂ.ಉ. 4.9.3) ಇತ್ಯನುಜ್ಞಾನಾದುಪಕೋಸಲವಚನಾಚ್ಚ ಲಿಂಗಭೂಯಸ್ತ್ವಾದ್ ಗುರುಪ್ರದಾನಮೇವ ಬಲವತ್ ('ಗುರುಪ್ರಸಾದ ಏವ ಬಲವಾನ್' ।) ತರ್ಹಿ ತಾವತಾಽಲಮಿತಿ ಚ ನ ಮಂತವ್ಯಮ್ । 'ಶ್ರೋತವ್ಯೋ ಮಂತವ್ಯಃ' (ಬೃ.ಉ. 4.4.5) ಇತ್ಯಾದೇಸ್ತದಪಿ ಕರ್ತವ್ಯಮ್ । ವಾರಾಹೇ ಚ–**

'ಗುರುಪ್ರಸಾದೋ ಬಲವಾನ್ನ ತಸ್ಮಾದ್ ಬಲವತ್ತರಮ್ ।
ತಥಾऽಪಿ ಶ್ರವಣಾದಿಶ್ಚ ಕರ್ತವ್ಯೋ ಮೋಕ್ಷಸಿದ್ಧಯೇ ॥' ಇತಿ ॥

ಭಗವದಪರೋಕ್ಷಕ್ಕೆ ಸಾಧನವಾದ ಶ್ರವಣ–ಮನನಗಳಲ್ಲಿ ಸಾಧಕನ ಪ್ರಯತ್ನ ಪ್ರಧಾನವೋ, ಗುರುಪ್ರಸಾದವು ಪ್ರಬಲವೋ? ಎಂದು ಜಿಜ್ಞಾಸೆ ಬಂದಾಗ ಈ ಸೂತ್ರದಲ್ಲಿ ನಿರ್ಣಯವನ್ನು ಮಾಡಲಾಗಿದೆ. (ತತ್=ಗುರುಪ್ರಸಾದವು ಬಲೀಯಃ= ಪ್ರಯತ್ನಕ್ಕಿಂತಲೂ ಪ್ರಬಲವಾದದು. ಅದನ್ನು ತಿಳಿಯಲು ಉಪನಿಷತ್ತಿನಲ್ಲಿ ಅನೇಕ ಸೂಚನೆಗಳಿವೆ.) ಛಾಂದ್ಯೋಗ್ಯದ ಸತ್ಯಕಾಮಬ್ರಾಹ್ಮಣದಲ್ಲಿ–ಸತ್ಯಕಾಮನು ಋಷಭಾದಿಗಳಿಂದ ಬ್ರಹ್ಮವಿದ್ಯೆಯನ್ನು ತಿಳಿದರೂ ಗುರುಗಳಾದ ಗೌತಮರ ಬಳಿಗೆ ಬಂದು 'ಭಗವಾಂಸ್ತ್ವೇವ ಮೇ ಕಾಮಂ ಬ್ರೂಯಾತ್–ಪೂಜ್ಯರಾದ ತಾವೇ ನನಗೆ ಅನುಜ್ಞೆ ನೀಡಿ' ಎಂದು ಹೇಳಿ 'ಶ್ರುತಂ ಹ್ಯೇವ ಮೇ–ನಿಮ್ಮಂತಹ ಗುರುಗಳಿಂದ ಉಪದೇಶಪಡೆದ ವಿದ್ಯೆಯೇ ಫಲಿಸುತ್ತದೆ, ಎಂದು ಕೇಳಿದ್ದೇನೆ' ಎನ್ನುತ್ತಾನಾದ್ದರಿಂದ ಗುರುಪ್ರಸಾದವೇ ಪ್ರಬಲ. ಆಗ ಗೌತಮರು 'ಅತ್ರ ನ ಕಿಂಚನ ವೀಯಾಯ–ನೀನು ವೃಷಭಸ್ಥನಾದ ವಾಯುದೇವನೇ ಮೊದಲಾದ ದೇವತೆಗಳಿಂದ ಉಪದೇಶ ಪಡೆದಿದ್ದರೂ ಅದರಿಂದೇನೂ ಹಾನಿ ಇಲ್ಲ, ಎಂದು ಸತ್ಯಕಾಮನಿಗೆ ಅನುಜ್ಞೆ ನೀಡುತ್ತಾರೆ.

ಅದರಂತೆ ಉಪಕೋಸಲನಿಗೆ ತ್ರೇತಾಗ್ನಿಗಳು ಹೇಳಿರುವ 'ಆಚಾರ್ಯಸ್ತು ತೇ ಗತಿಂ ವಕ್ತಾ–ಗುರುಗಳೇ ನಿನಗೆ ಯೋಗ್ಯವಾದ ಉಪಾಸನೆಯನ್ನು ಹೇಳುತ್ತಾರೆ, ಎನ್ನುವುದರಿಂದಲೂ ಗುರುಪ್ರಸಾದಕ್ಕೆ ಪ್ರಾಬಲ್ಯವು ತಿಳಿಯುತ್ತದೆ. ಹೀಗೆ, ಅನೇಕ ಲಿಂಗಗಳಿರುವುದರಿಂದ ಗುರುಪ್ರಸಾದವೇ ಪ್ರಬಲವಾದುದು.

ಹಾಗಾದರೆ ಗುರುಪ್ರಸಾದವಷ್ಟೇ ಸಾಕು, ಶಿಷ್ಯನ ಪ್ರಯತ್ನದ ಅಗತ್ಯವಿಲ್ಲ, ಎಂದು ತಿಳಿಯಬಾರದು. 'ಶ್ರೋತವ್ಯೋ ಮಂತವ್ಯಃ' ಎಂದು ವಿಧಿ ಇರುವುದರಿಂದ ಶಿಷ್ಯನು ಪ್ರಯತ್ನವನ್ನು ಮಾಡಬೇಕು. ವಾರಾಹವಚನದಲ್ಲಿ ಹೀಗಿದೆ— ಗುರುಪ್ರಸಾದವೇ ಪ್ರಬಲ, ಅದಕ್ಕಿಂತಲೂ ಪ್ರಬಲವಾದುದು ಮತ್ತೊಂದಿಲ್ಲ. ಆದರೂ, ಮೋಕ್ಷಪ್ರಾಪ್ತಿಗಾಗಿ ಶ್ರವಣಾದಿಗಳನ್ನೂ ಮಾಡಬೇಕು.

**ವಿವರಣೆ**—ಶ್ರವಣಕ್ಕೆ ಇತಿಕರ್ತವ್ಯತಾರೂಪವಾದುದು ಗುರುಪ್ರಸಾದ. ಪ್ರಸನ್ನನಾದ ಗುರುವಿನಿಂದ ಶ್ರವಣ ಮಾಡಿದರೆ ಅಪರೋಕ್ಷವು ಸಿದ್ಧವಾಗುವುದು. ಹೀಗೆ ಗುರುಪ್ರಸಾದ ಅಪ್ರಧಾನ, ಶ್ರವಣವೇ ಪ್ರಧಾನ, ಎಂದು ಪೂರ್ವಪಕ್ಷ. ಕೆಲವೊಮ್ಮೆ ಇತಿಕರ್ತವ್ಯವೂ ಪ್ರಧಾನವಾಗುತ್ತದೆ. ಪಾಪಸಾಧನವಾದ ಹಿಂಸೆಗೆ ಯಾಗಸಂಬಂಧವು

ಇತಿಕರ್ತವ್ಯತಾರೂಪವಾದರೂ ಅದು ಹಿಂಸೆಯಲ್ಲಿರುವ ಪಾಪಜನಕತ್ವಶಕ್ತಿಯನ್ನು ಪ್ರತಿಬಂಧಿಸಿ ಪುಣ್ಯಜನಕವನ್ನಾಗಿ ಮಾಡುವುದರಿಂದ ಅದೇ ಪ್ರಧಾನ. ಅದರಂತೆ, ಶ್ರವಣವು ಸಾಧನ, ಗುರುಪ್ರಸಾದ ಇತಿಕರ್ತವ್ಯತಾರೂಪ. ಆದರೂ, ಅದೇ ಪ್ರಧಾನ. ಅದಕ್ಕೆ ಉಪನಿಷತ್ತಿನಲ್ಲಿ ಅನೇಕ ಗಮಕಗಳಿವೆ. ಛಾಂದೋಗ್ಯದಲ್ಲಿರುವ ಎರಡು ಲಿಂಗಗಳನ್ನು ಭಾಷ್ಯದಲ್ಲಿ ತೋರಿಸಲಾಗಿದೆ—

1. ಸತ್ಯಕಾಮ ಜಾಬಾಲ ಪ್ರಕರಣ—ಜಾಬಾಲ ಸತ್ಯಕಾಮನಿಗೆ ಹಾರಿದ್ರುಮತ ಗೌತಮರು ಉಪನಯನ ಮಾಡಿ 400 ಹಸುಗಳನ್ನು ಕೊಟ್ಟು ಇವುಗಳ ಸಂತತಿ ಸಾವಿರ ಆಗುವವರೆಗೆ ಹಿಂದಿರುಗಬೇಡ, ಎಂದು ಆದೇಶಿಸುತ್ತಾರೆ. ಸತ್ಯಕಾಮ ಗೋವುಗಳ ಜೊತೆಯಲ್ಲಿ ಅನೇಕ ವರ್ಷಗಳವರೆಗೆ ಕಾಡಿನಲ್ಲಿದ್ದ. ಗೋವುಗಳು ಸಾವಿರವಾದಾಗ ವಾಯುದೇವರು ಋಷಭರೂಪದಲ್ಲಿ ಬಂದು ಬ್ರಹ್ಮನ ಒಂದಂಶವನ್ನು ಉಪದೇಶಿಸುತ್ತಾರೆ. 'ಅಗ್ನಿಸ್ತೇ ಪಾದಂ ವಕ್ತಾ' ಎಂದು ಹೇಳಿ ವಾಯುದೇವರು ಅದೃಶ್ಯರಾದರು. ಮರುದಿನ ಸಾಯಂಕಾಲ ಅಗ್ನಿಯನ್ನು ಪ್ರತಿಷ್ಠಾಪಿಸಿ ಪ್ರಾರ್ಥಿಸಿದಾಗ ಅಗ್ನಿದೇವನು ಇನ್ನೊಂದು ಅಂಶವನ್ನು ಉಪದೇಶಿಸುತ್ತಾನೆ. ಹೀಗೆ ಹಂಸರೂಪದ ಬ್ರಹ್ಮನಿಂದ, ಕಾಗೆಯ ರೂಪದ ವರುಣನಿಂದ ನಾಲ್ಕುಕಲೆಯ ಬ್ರಹ್ಮೋಪದೇಶವನ್ನು ಪಡೆದು ಗುರುಗಳ ಬಳಿಗೆ ಬಂದ. ಅವನ ತೇಜಸ್ಸನ್ನು ನೋಡಿ ಗೌತಮರು 'ಯಾರು ನಿನಗೆ ಉಪದೇಶ ನೀಡಿದರು?' ಎಂದು ಕೇಳಿದಾಗ ಜಾಬಾಲ ಹೇಳಿದ 'ಭಗವಾಂಸ್ತ್ವೇವ ಮೇ ಕಾಮೇ ಬ್ರೂಯಾತ್' ಎಂದು. ದೇವತೆಗಳಿಂದ ಕಲಿತರೂ ನಾನು ಅವರನ್ನು ಆಚಾರ್ಯರೆಂದು ಸ್ವೀಕರಿಸಿಲ್ಲ. ಆಚಾರ್ಯರಾಗಿ ನೀವೇ ಉಪದೇಶಿಸಿ. ಗುರುಗಳಿಂದ ಪಡೆದ ಉಪದೇಶವೇ ಸಫಲವಾಗುತ್ತದೆ, ಎಂದ. ಆಮೇಲೆ ಸತ್ಯಕಾಮರು ಉಪದೇಶಿಸಿದರು.

2. ಉಪಕೋಸಲ ಸತ್ಯಕಾಮ ಜಾಬಾಲನ ಶಿಷ್ಯ. ಗುರುಕುಲದಲ್ಲಿದ್ದು ಹನ್ನೆರಡು ವರ್ಷ ಅಗ್ನಿಯ ಉಪಾಸನೆಯನ್ನು ಮಾಡಿದ. ಉಳಿದ ಶಿಷ್ಯರಿಗೆ ವಿದ್ಯಾಭ್ಯಾಸ ಮುಗಿಸಿ ಸಮಾವರ್ತನೆ ಮಾಡಿದರೂ ಗುರುಗಳು ಉಪಕೋಸಲನಿಗೆ ವಿದ್ಯೋಪದೇಶವನ್ನೇ ಮಾಡಲಿಲ್ಲ. ಗುರುಪತ್ನಿ ಆಚಾರ್ಯರ ಗಮನಕ್ಕೆ ತಂದರೂ ಜಾಬಾಲರು ಪ್ರವಾಸಕ್ಕೆ ಹೋದರು. ಉಪಕೋಸಲ ಉಪವಾಸ ಮಾಡಿದ. ಗುರುಪತ್ನಿ ಹೇಳಿದರೂ ಊಟ ಮಾಡಲಿಲ್ಲ. ಆಗ ತ್ರೇತ್ರಾಗ್ನಿಗಳೇ ಕರುಣೆಯಿಂದ ಅವನಿಗೆ ಬ್ರಹ್ಮೋಪದೇಶ ಮಾಡಿದರು. ಗಾರ್ಹಪತ್ಯ, ಅನ್ವಾಹಾರ್ಯಪಚನ, ಆಹವನೀಯ ಈ ಮೂರು ಅಗ್ನಿಗಳು ಪ್ರತ್ಯೇಕವಾಗಿ ಉಪದೇಶ ಮಾಡಿದರು. ಆಮೇಲೆ ಅವರೇ ಹೇಳುತ್ತಾರೆ—

ಆಚಾರ್ಯಸ್ತು ತೇ ಗತಿಂ ವಕ್ತಾ-ಗುರುಗಳೇ ನಿನಗೆ ಉಪಾಸನಾವಿಧಿಯನ್ನು ಹೇಳುತ್ತಾರೆ' ಎಂದು. ಆಚಾರ್ಯರು ಪ್ರವಾಸದಿಂದ ಬಂದು ಅವನ ತೇಜಸ್ಸನ್ನು ನೋಡಿಯೇ ಕೇಳಿದರು. 'ಕೋ ನು ತ್ವಾ ಅನುಶಶಾಸ?' ಯಾರು ನಿನಗೆ ಉಪದೇಶಿಸಿದರು? 'ಕೋ ನು ಮಾ ಅನುಶಿಷ್ಯಾದ್ ಭೋ-ನೀವಲ್ಲದೆ ಇನ್ನಾರು ಉಪದೇಶಿಸಬೇಕು' ಎಂದ. ಆಮೇಲೆ ಸತ್ಯಕಾಮರು, ಅಗ್ನಿಗಳು ಮಾಡಿರುವ ಉಪದೇಶ ಜ್ಞಾನಕ್ಕಾಗಿ ಮಾತ್ರ. ನಿನ್ನ ಉಪಾಸನೆಗೆ ಈ ವಿದ್ಯೆ, ಎಂದು ಹೇಳಿ ಅವನಿಗೆ ವಿದ್ಯೋಪದೇಶ ಮಾಡುತ್ತಾರೆ.

ಈ ಎರಡು ಇತಿಹಾಸಗಳಿಂದ ಗುರುಪ್ರಸಾದವೇ ಶಿಷ್ಯಪ್ರಯತ್ನಕ್ಕಿಂತಲೂ ಪ್ರಬಲ ಎಂದು ತಿಳಿಯುತ್ತದೆ.

'ಉಪಕೋಸಲವಚನಾಚ್ಚ' ಎಂಬ ಭಾಷ್ಯಕ್ಕೆ ನಾಲ್ಕು ವಿವರಣೆಗಳನ್ನು ತತ್ತ್ವಪ್ರದೀಪದಲ್ಲಿ ನೀಡಿ ಸಮಗ್ರಪ್ರಕರಣದ ಅರ್ಥವು ಬರುವಂತೆ ಮಾಡಲಾಗಿದೆ.

1. 'ತಂ ಹೋವಾಚ-ತಪ್ತೋ ಬ್ರಹ್ಮಚಾರೀ...' ಇತಿ ಉಪಕೋಸಲಸ್ಯಾರ್ಥೇ ಜಾಯಾವಚನಾತ್ । ಉಪಕೋಸಲನ ಬಗ್ಗೆ ಗುರುಪತ್ನಿಯು ಹೇಳಿರುವ ವಚನ.

2. 'ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ' ಇತಿ ಉಪಕೋಸಲಾಯ ಅಗ್ನೀನಾಂ ವಚನಂ, ಗುರುಗಳು ಪ್ರವಾಸಕ್ಕೆ ಹೋದಮೇಲೆ ಉಪವಾಸ ಮಾಡಿದ ಉಪಕೋಸನಿಗೆ ಅಗ್ನಿಗಳು ಮಾಡಿರುವ ಉಪದೇಶವಚನ.

3. 'ಅಥ ಹೈನಂ ಗಾರ್ಹಪತ್ಯೋಽನುಶಶಾಸ' ಎಂದು ಅಗ್ನಿಗಳು ಪ್ರತ್ಯೇಕವಾಗಿ ಉಪಕೋಸಲನಿಗೆ ಮಾಡಿದ ಉಪದೇಶವಚನ.

4. 'ಆಚಾರ್ಯಸ್ತು ತೇ ಗತಿಂ ವಕ್ತಾ' ಇತಿ ಆಚಾರ್ಯಾನುಜ್ಞಾರ್ಥಂ ವಚನಾತ್। 'ಗುರುಗಳು ನಿನಗೆ ಉಪಾಸನೆಯನ್ನು ಹೇಳುತ್ತಾರೆ'ಎಂದು, ಉಪಕೋಸನಿಗೆ ಅಗ್ನಿಯು ಹೇಳಿದ ವಚನ.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**।। ಓಂ ಲಿಂಗಭೂಯಸ್ತ್ವಾತ್ತದ್ಧಿ ಬಲೀಯಸ್ತದಪಿ ಓಂ ।।** (ಅತ್ರಗುರುಪ್ರಸಾದಸ್ಯ ಬಲೀಯಸ್ತ್ವಮುಚ್ಯತೇ । ತತ್=ಗುರುಪ್ರಸಾದಪೂರ್ವಕ ಪ್ರದಾನಂ, ಬಲೀಯಃ= ಶ್ರವಣಾದಿ ಸ್ವಪ್ರಯತ್ನಾದಪಿ ಜ್ಞಾನಸಾಧನೇ ಬಲಿಷ್ಠಮ್ । ಕುತಃ ? ಲಿಂಗಭೂಯಸ್ತ್ವಾತ್=ಲಿಂಗಬಾಹುಲ್ಯಾತ್- ಬಾಹುಲ್ಯದರ್ಶನಾತ್ ಇತ್ಯರ್ಥಃ ।)

ಈ ಅಧಿಕರಣದಲ್ಲಿ ಗುರುಪ್ರಸಾದಕ್ಕೆ ಪ್ರಾಬಲ್ಯವನ್ನು ಹೇಳಲಾಗಿದೆ. ತತ್=ಗುರುಗಳಿಂದ ಪ್ರಸಾದಪೂರ್ವಕ ವಿದ್ಯಾಪ್ರದಾನವು ಬಲೀಯಃ=ಶ್ರವಣಮನನ ರೂಪವಾದ ಸಾಧಕನ ಪ್ರಯತ್ನಕ್ಕಿಂತಲೂ ಪ್ರಬಲ. ಏಕೆಂದರೆ, ಲಿಂಗಭೂಯಸ್ತ್ವಾತ್= ಅದಕ್ಕೆ ಸೂಚಕಗಳು ಉಪನಿಷತ್ತಿನಲ್ಲಿ ಅನೇಕ ಕಾಣುತ್ತವೆಯಾದುದರಿಂದ.

ಇಲ್ಲಿಗೆ ಲಿಂಗಭೂಯಸ್ತ್ವಾಧಿಕರಣವು ಮುಗಿಯಿತು.

## ೨೮. ಪೂರ್ವವಿಕಲ್ಪಾಧಿಕರಣಮ್

### ॥ ಓಂ ಪೂರ್ವವಿಕಲ್ಪಃ ಪ್ರಕರಣಾತ್ ಸ್ಯಾತ್ ಕ್ರಿಯಾಮಾನಸವತ್ ಓಂ ॥ ೪೬ ॥

ನಚ ಪೂರ್ವಪ್ರಾಪ್ತ ಏವ ಗುರುರಿತಿ ನಿಯಮಃ । ಸಮಗ್ರಾನುಗ್ರಹಂ ಚೇತ್ ಪಶ್ಚಾತ್ತನಃ ಪ್ರಕರೋತಿ ಸ್ವಯಮೇವ ತದಾ ವಿಕಲ್ಪಃ ಸ್ಯಾತ್ । ಮಾನಸಕ್ರಿಯಾವತ್=ಯಥೋಭಯೋರ್ಧ್ಯಾನಯೋಃ ಸಮಯೋಃ ।

'ಪೂರ್ವಸ್ಮಾದುತ್ತಮೋ ಲಬ್ಧಃ ಸ್ವಯಮೇವ ಗುರುರ್ಯದಿ ।
ಗೃಹ್ಣೀಯಾದವಿಚಾರೇಣ ವಿಕಲ್ಪಃ ಸಮಯೋರ್ಭವೇತ್ ॥

'ಸಮಗ್ರಾನುಗ್ರಹಾಭಾವಾತ್ ಸತ್ಯಕಾಮಃ ಸ್ವಕಂ ಗುರುಮ್ ।
ಋಷಭಾದ್ಯನುಜ್ಞಯಾ ಚೈವ ಪ್ರಾಪ ತಸ್ಮಾದ್ಧಿ ಯುಜ್ಯತೇ ॥'

ಇತಿಹಿ ಬೃಹತ್ತಂತ್ರೇ ॥

'ಸಮಗ್ರಹಾನುಗ್ರಹಂ ಕಶ್ಚಿತ್ ಸ್ವಯಮೇವ ಸಮೋ ಯದಿ ।
ಕುರ್ಯಾತ್ ಪುನಶ್ಚ ಗೃಹ್ಣೀಯಾದವಿರೋಧೇನ ಕಾಮತಃ ॥

ಧ್ಯಾನಯೋಃ ಸಮಯೋರ್ಯದ್ವದ್ ವಿಕಲ್ಪಃ ಕಾಮತೋ ಭವೇತ್ ।
ಏವಂ ಗುರೋರ್ದ್ವಿತೀಯಸ್ಯ ವಿಕಲ್ಪೋ ಗ್ರಹಣೇಽಪಿ ಚ ॥'

ಇತಿ ಮಹಾಸಂಹಿತಾಯಾಮ್ ॥

1. ಮೊದಲ ಗುರುವೇ ಗುರು ಎಂದಾಗಲೀ, ಆಮೇಲೆ ದೊರೆತ ಗುರುವೇ

ಗುರು ಎಂದಾಗಲೀ ನಿಯಮವಿಲ್ಲ. ಆಮೇಲೆ ಸಿಕ್ಕಿದ ಗುರುವು ಪೂರ್ಣಾನುಗ್ರಹವನ್ನು ತಾನೇ ಮಾಡಲು ಸಮರ್ಥನಾದಲ್ಲಿ ವಿಕಲ್ಪಃ ಸ್ಯಾತ್=ವ್ಯವಸ್ಥಿತವಿಕಲ್ಪ ಅಂದರೆ, ಪೂರ್ವಗುರುವನ್ನು ಬಿಟ್ಟು ಅನಂತರದ ಗುರುವನ್ನೇ ಅರಸಬಹುದು.

2. ಅನಂತರ ಸಿಕ್ಕಿದ ಗುರುವೂ ಪೂರ್ಣಾನುಗ್ರಹ ಮಾಡುವಂತಹವನಾಗಿದ್ದು ಪೂರ್ವಗುರುವೂ ಅವನಿಗೆ ಸಮಾನನಾಗಿದ್ದರೆ ಮೊದಲನೆಯವನ ಅನುಮತಿ ಪಡೆದು ಅನಂತರದ ಗುರುವನ್ನು ಪಡೆಯಬಹುದು. ಅದಕ್ಕೆ ಉದಾಹಣೆ-ಕ್ರಿಯಾ ಮಾನಸವತ್, ಎಂದು.

3. ಪ್ರಥಮ, ಗುರು ಪೂರ್ಣಾನುಗ್ರಹ ಸಮರ್ಥನಾಗಿದ್ದು, ಯದೃಚ್ಛಯಾ ದೊರೆತ ಅನಂತರದ ಗುರು ಉತ್ತಮನಾದರೂ ಪೂರ್ಣಾನುಗ್ರಹವನ್ನು ಮಾಡುವುದಿಲ್ಲ ವಾದರೆ ಅವಿಕಲ್ಪಃ=ಮೊದಲನೆಯ ಗುರುವನ್ನು ಬಿಡಬಾರದು.

ಬೃಹತ್ತಂತ್ರದಲ್ಲಿ ಹೀಗಿದೆ—ಮೊದಲಿದ್ದವರಿಗಿಂತ ಉತ್ತಮ ಗುರುಗಳು ಯದೃಚ್ಛಯಾ ಒಂದುವೇಳೆ ಸಿಕ್ಕಿದರೆ ವಿಚಾರವಿಲ್ಲದೆ ಉತ್ತಮ ಗುರುವನ್ನೇ ಅರಸಬೇಕು. ಪೂರ್ವೋತ್ತರಗುರುಗಳು ಸಮಾನರಾಗಿದ್ದರೆ ಯಾರನ್ನು ಬೇಕಾದರೂ ಆರಿಸಬಹುದು. ಸತ್ಯಕಾಮ ಜಾಬಾಲನು ಉತ್ತಮರಾದ ವಾಯುದೇವರಂತಹ ಗುರುಗಳು ಸಿಕ್ಕಿದರೂ ಅವರಿಂದ ಪೂರ್ಣೋಪದೇಶ ಸಿಕ್ಕಿಲ್ಲವಾದುದರಿಂದ ಋಷಭಸ್ಥನಾದ ವಾಯುದೇವನ ಅನುಜ್ಞೆಯಿಂದ ಅಧಮನಾದ ತನ್ನ ಗುರುಗಳಾದ ಗೌತಮರನ್ನೇ ಅರಸಿದ. (ಇಂತಹ ಸಂದರ್ಭದಲ್ಲಿ ಉತ್ತಮರ ಅನುಜ್ಞೆ ಪಡೆದು ಅವರಿಗಿಂತ ಕಡಿಮೆ ಯೋಗ್ಯತೆಯ ಗುರುಗಳನ್ನು ಉಪಸತ್ತಿ ಮಾಡಬಹುದು.)

ಮಹಾಸಂಹಿತೆಯಲ್ಲಿ ಹೀಗಿದೆ- ಪೂರ್ವಗುರುವಿಗೆ ಸಮಕಕ್ಷೆಯ ಗುರುವು ಯದೃಚ್ಛಯಾ ಲಭ್ಯವಾಗಿ ಸಮಗ್ರಾನುಗ್ರಹವನ್ನು ಮಾಡಿದರೆ ಪೂರ್ವಗುರುವಿನ ಅನುಜ್ಞೆಯಿಂದ ಸಮಗ್ರಾನುಗ್ರಹವನ್ನು ಮಾಡುವ ಮತ್ತೊಬ್ಬ ಗುರುವನ್ನೇ ಅರಸಬೇಕು. ಇಬ್ಬರು ಗುರುಗಳು ಜ್ಞಾನದಲ್ಲಿ ಸಮರಾಗಿದ್ದರೆ ಯಾರನ್ನು ಬೇಕಾದರೂ ಅರಸಬಹುದು, ಎಂದು ವಿಕಲ್ಪ. ಸಮಾನ ಫಲವುಳ್ಳ ಎರಡು ಧ್ಯಾನಗಳಲ್ಲಿ ವಿಕಲ್ಪವಿದ್ದಂತೆ.

**ವಿವರಣೆ**—ಗುರುಪರಿಗ್ರಹದಲ್ಲಿ ಈ ಕೆಳಗಿನ ವಿಕಲ್ಪಗಳನ್ನು ಗಮನಿಸಬಹುದು.

1. ಮೊದಲ ಗುರು ಅಧಮನಾಗಿದ್ದರೆ ನಿಃಸ್ಸಂದೇಹವಾಗಿ, ಪೂರ್ವಗುರುವಿನ ಅನುಜ್ಞೆ ಇಲ್ಲದೆಯೂ ಉತ್ತಮಗುರುಗಳ ಬಳಿಗೆ ಹೋಗಬಹುದು.

2. ಅನಂತರದ ಗುರು ಉತ್ತಮನಾಗಿದ್ದರೂ ಸಮಗ್ರಾನುಗ್ರಹವನ್ನು ಮಾಡದಿದ್ದಲ್ಲಿ ಅವರ ಅನುಜ್ಞೆ ಪಡೆದು ಅಧಮಗುರುಗಳನ್ನು ಉಪಸತ್ತಿ ಮಾಡಬೇಕು.

3. ಇಬ್ಬರೂ ಸಮರಾಗಿದ್ದರೂ ಒಬ್ಬರು ಸಮಗ್ರಾನುಗ್ರಹ ಮಾಡುವವರಾದರೆ ಅವರನ್ನೇ ಅರಸಬೇಕು.

4. ಇಬ್ಬರೂ ಸಮರೂ ಸಮಗ್ರಾನುಗ್ರಹಶಕ್ತರೂ ಆಗಿದ್ದರೆ ವಿಕಲ್ಪ.

**॥ ಓಂ ಅತಿದೇಶಾಚ್ಚ ಓಂ ॥ ೪೭ ॥**

**'ಬ್ರಹ್ಮೋಪಾಸ್ವ ಬ್ರಹ್ಮೋಪಚರಸ್ವ ತಚ್ಛೃಣುಹಿ ತತ್ ತ್ವಾಮವತು । ಯಥಾ ಬ್ರಹ್ಮೋಪಚರೇರ್ಯಥಾ ಮಾಮುಪಚರೇರ್ಯೇ ಚಾನ್ಯೇಽಸ್ಮದ್ವಿಧಾಃ ಶ್ರೇಯಸಶ್ಚ ತಾನುಪಾಸ್ವ ತಾನುಪಚರಸ್ವ ತೇಭ್ಯಃ ಶ್ರುಣುಹಿ ತೇ ತ್ವಾಮವಂತು' ಇತಿ ಪೌಷ್ಯಾಯಣಶ್ರುತಾವತಿದೇಶಾಚ್ಚ ॥**

ಅಧಮಗುರುಗಳು ತಮಗೆ ಸಮರಾದ ಮತ್ತು ಉತ್ತಮರಾದ ಗುರುಗಳಲ್ಲಿ ಉಪಾಸನೆಯನ್ನು ಅತಿದೇಶ ಮಾಡಿರುವುದರಿಂದಲೂ ಸಮೋತ್ತಮಗುರುಗಳನ್ನು ಅರಸಬೇಕು. ಪೌಷ್ಯಾಯಣಶ್ರುತಿಯಲ್ಲಿ ಅತಿದೇಶವಾಕ್ಯ ಹೀಗಿದೆ— ''ಬ್ರಹ್ಮನನ್ನು ಉಪಾಸನೆ ಮಾಡು, ಬ್ರಹ್ಮನ ಪೂಜಾದಿಗಳನ್ನು ಮಾಡು. ಬ್ರಹ್ಮನ ಬಗ್ಗೆ ಕಿವಿಯಿಂದ ಕೇಳು. ಆ ಬ್ರಹ್ಮನು ನಿನ್ನನ್ನು ರಕ್ಷಿಸಲಿ. ಹೇಗೆ ಬ್ರಹ್ಮನ ಪೂಜಾದಿಗಳನ್ನು ಮಾಡುವಿಯೋ, ಹೇಗೆ ನಮ್ಮ ಅಭೀಷ್ಟಗಳನ್ನು ಪೂರೈಸುವಿಯೋ ಹಾಗೆಯೇ ನಮಗೆ ಸಮಾನರಾದ, ನಮಗಿಂತ ಉತ್ತಮರಾದವರನ್ನೂ ಉಪಾಸನೆ ಮಾಡು ಅಂದರೆ, ವಿನಯಪೂರ್ವಕವಾಗಿ ಅವರ ಜೊತೆ ಇರು. ಅವರನ್ನು ಉಪಚರಿಸು ಅಂದರೆ, ಅವರಿಗೆ ಅಭೀಷ್ಟವಾದುದನ್ನು ಮಾಡು. ಅವರಿಂದ ಉಪದೇಶ ಪಡೆ, ಅವರು ನಿನ್ನನ್ನು ಪೊರೆಯಲಿ.''

**ವಿವರಣೆ**—ಇದು ಜ್ಞಾನದಲ್ಲಿ ಕಡಿಮೆ ಸ್ಥಾನದ ಗುರುಗಳ ಉಪದೇಶ. ಇಲ್ಲಿ ತಮಗೆ ಮಾಡುವ ಆದರ, ಸತ್ಕಾರಗಳನ್ನೂ ತನ್ನಿಂದ ಪಡೆದ ಉಪದೇಶವನ್ನೂ ಮತ್ತೊಬ್ಬರಿಗೆ ಮಾಡಿ ಅವರಿಂದಲೂ ಕೇಳಿ ತಿಳಿ, ಎಂದು 'ಅತಿದೇಶ' ಮಾಡಲಾಗಿದೆ. ಸಮೋತ್ತಮರಲ್ಲಿ ವಿಕಲ್ಪವು ಇದರಿಂದ ತಿಳಿಯುತ್ತದೆ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

॥ ಓಂ ಪೂರ್ವವಿಕಲ್ಪಃ ಪ್ರಕರಣಾತ್ ಸ್ಯಾತ್ ಕ್ರಿಯಾಮಾನಸವತ್ ಓಂ ॥ (ಅತ್ರ

ಪೂರ್ವಪ್ರಾಪ್ತಾತ್ ಅನ್ಯೋऽಪಿ ಗುರುಃ ಸ್ವೀಕಾರ್ಯಃ, ಇತ್ಯುಚ್ಯತೇ। ಗುರುಃ ಪ್ರಕೃತಃ। ಪೂರ್ವೇಣ=ಪೂರ್ವಗೃಹೀತೇನ ಗುರುಣಾ ಪಶ್ಚಾತ್ ಪ್ರಾಪ್ತಗುರೋಃ ವಿಕಲ್ಪಃ=ಸಂಗ್ರಾಹ್ಯೋ ನವಾ, ಇತಿ ವಿವಿಧಕಲ್ಪಃ ಸ್ಯಾತ್-ಪೂರ್ವಂ ತ್ಯಕ್ತ್ವಾ ಪರಃ ಸ್ವೀಕಾರ್ಯೋ ನವೇತಿ। ನತು ಗ್ರಾಹ್ಯ ಏವೇತಿ ವಿಧಿಃ। ಕುತೋ ಗ್ರಾಹ್ಯಃ ? ಪ್ರಕರಣಾತ್। ಅನುಗ್ರಹಃ ಪ್ರಕೃತಃ। ಅನುಗ್ರಹಸ್ಯ ಪ್ರಕರ್ಷೇಣ ಕರಣಾದ್ಧೇತೋಃ। ಕ್ರಿಯಾಮಾನಸವತ್-ಮಾನಸಂ ಚ ಸಾ ಚ ಕ್ರಿಯಾ ಚ, ತದ್ವತ್=ಧ್ಯಾನವತ್। ಯಥಾ ಫಲತಃ ಸಮಯೋಃ ಧ್ಯಾನಯೋಃ ವಿಕಲ್ಪಃ ತಥಾ ಇತಿ।

ವಿಕಲ್ಪೇತ್ಯುಕ್ತ್ಯಾ 'ವಿಕಲ್ಪಃ ಸಮಯೋರ್ಭವೇತ್' ಇತಿ, 'ವಿಕಲ್ಪಃ ಕಾಮತೋ ಭವೇತ್' ಇತಿ ಚ ಸ್ಮೃತಿಃ ಸೂಚಿತಾ। ತೇನ ಪೂರ್ವಸ್ಮಾತ್ ಉತ್ತಮಶ್ಚೇತ್ ಪರಃ ಸಂಗ್ರಾಹ್ಯ ಏವ। ನ ವಿಕಲ್ಪಃ। ಸಮೋऽಪಿ ಪೂರ್ವಾನುಜ್ಞಯೈವ। ಅಧಮಶ್ಚೇತ್ ನ ಗ್ರಾಹ್ಯ ಏವ, ಇತಿ ಸೂಚಿತಮ್। ಪ್ರಕೃಷ್ಟಾನುಗ್ರಹಕರ್ತೃತ್ವೇ ಏವ ನಾನ್ಯಥಾ ಇತಿ ವಕ್ತುಂ। ತೇನ ಪೂರ್ವತ್ಯಾಗೇ ಹೇತುರ್ನೇತಿ ನಿರಸ್ತಮ್। ಪೂರ್ಣಾನುಗ್ರಹಾರ್ಥತ್ವಾತ್ ಇತಿ ।।)

ಈ ಅಧಿಕರಣದಲ್ಲಿ ಮೊದಲ ಗುರುಗಳಲ್ಲದೆ ಬೇರೆ ಗುರುಗಳನ್ನೂ ಅರಸಬೇಕು, ಎಂದು ಹೇಳಲಾಗಿದೆ. ಪೂರ್ವವಿಕಲ್ಪಃ-ಪೂರ್ವೇಣ=ಮೊದಲ ಗುರುವಿನಿಂದ ಮತ್ತೆ ಲಭ್ಯವಾದ ಗುರುವಿಗೆ ವಿಕಲ್ಪಃ=ವಿವಿಧ ಕಲ್ಪಗಳು, ಅಂತಹ ಗುರುಗಳನ್ನು ಸ್ವೀಕರಿಸಬೇಕೋ ಬೇಡವೋ ಎಂದು ವಿವಿಧ ಪ್ರಕಾರಗಳು, ಹೊರತು ಆಮೇಲೆ ದೊರೆತ ಗುರುಗಳೆಲ್ಲರೂ ಸ್ವೀಕಾರಾರ್ಹರೇ ಆಗಿದ್ದಾರೆ, ಎಂದು ನಿರ್ಬಂಧವಲ್ಲ. ಅದಕ್ಕೆ ಕಾರಣ—ಪ್ರಕರಣಾತ್।। ಪ್ರ+ಕರಣ। ಕರಣ ಎಂದರೆ ಸಮಗ್ರವಾದ ಅನುಗ್ರಹದ ಕರಣ. ಸಮ ಅಥವಾ ಅಧಿಕವಾದ ಗುರುಗಳಿಂದ ಸಮಗ್ರಾನುಗ್ರಹವಾಗುವುದಾದಲ್ಲಿ ಮೊದಲ ಗುರುವನ್ನು ಬಿಟ್ಟು ಅಂತಹ ಇನ್ನೊಬ್ಬ ಗುರುಗಳನ್ನು ಅರಸಬಹುದು. ಅದರಲ್ಲೂ ಅಧಿಕನಾಗಿದ್ದರೆ ಪೂರ್ವಗುರುವಿನ ಅನುಜ್ಞೆ ಬೇಕಾಗಿಲ್ಲ. ಸಮನಾಗಿದ್ದರೆ ಅನುಜ್ಞೆ ಬೇಕು. ಮತ್ತೊಬ್ಬ ಗುರು ಅಧಮನಾದರೆ ಪರಿತ್ಯಾಗವೇ ಉಚಿತ. ಇಬ್ಬರೂ ಸಮರು ಹಾಗೂ ಸಮಗ್ರಾನುಗ್ರಾಹಕರೂ ಆದರೆ ವಿಕಲ್ಪ. ಇದು ಸೂತ್ರದ ವಿಕಲ್ಪಪದದಿಂದ ಸೂಚಿತವಾದ ಶಾಸ್ತ್ರವಚನಗಳ ಅಭಿಪ್ರಾಯ.

ವಿಕಲ್ಪಕ್ಕೆ ಉದಾಹರಣೆ—'ಕ್ರಿಯಾಮಾನಸವತ್' ಎಂದು. ಇದು ಸಮಸ್ತಪದ. ಮಾನಸಧ್ಯಾನದಂತೆ. ಸಮಫಲಧ್ಯಾನದಲ್ಲಿ ವಿಕಲ್ಪದಂತೆ.

**॥ ಓಂ ಅತಿದೇಶಾಚ್ಚ ಓಂ ॥** ('ಬ್ರಹ್ಮೋಪಾಸ್ವ' ಇತಿ ಪೂರ್ವಗುರುಣಾ ಸ್ವೋತ್ತಮಗುರುಸ್ವೀಕಾರಾಯ ಅತಿದೇಶಾಚ್ಚ ಸಮೋತ್ತಮೌ ಗ್ರಾಹ್ಯೌ, ಇತ್ಯರ್ಥಃ।) ಪೂರ್ವಗುರು ತನ್ನ ಶಿಷ್ಯನಿಗೆ ತನ್ನಂತೆಯೇ ತನಗೆ ಸಮನಾದ ಮತ್ತು ಉತ್ತಮನಾದ ಗುರುವಿನ ಸ್ವೀಕಾರವನ್ನು ಉಪದೇಶ ಮಾಡಿರುವುದರಿಂದಲೂ ಸಮೋತ್ತಮಗುರುಗಳು ಗ್ರಾಹ್ಯರು, ಎಂದು ತಿಳಿಯುತ್ತದೆ.

**ಇಲ್ಲಿಗೆ ಪೂರ್ವವಿಕಲ್ಪಾಧಿಕರಣವು ಮುಗಿಯಿತು.**

## ೨೯. ವಿದ್ಯಾಧಿಕರಣಮ್

**'ನಚ ಕರ್ಮಣ್ಯೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ' (ಭ.ಗೀ. 3.20) ಇತ್ಯಾದಿನಾऽನ್ಯನ್ಮೋಕ್ಷಸಾಧನಮ್ ।**

**॥ ಓಂ ವಿದ್ಯೈವ ತು ನಿರ್ಧಾರಣಾತ್ ಓಂ ॥ ೪೮ ॥**

**'ತಮೇವಂ ವಿದಿತ್ವಾऽತಿಮೃತ್ಯುಮೇತಿ ನಾನ್ಯಃ ಪಂಥಾ ವಿದ್ಯತೇऽಯನಾಯ' (ಶ್ವೇ. 3.8) ಇತಿ ನಿರ್ಧಾರಣಾದ್ ವಿದ್ಯಯೈವ ಮೋಕ್ಷಃ ।**

ಭಗವದ್ಗೀತೆಯಲ್ಲಿ 'ಜನಕಾದಿಗಳು ಕರ್ಮದಿಂದಲೇ ಮೋಕ್ಷವನ್ನು ಪಡೆದರು' ಎಂದಿದೆ. ಆದ್ದರಿಂದ ಜ್ಞಾನಾನ್ಯವಾದ ಕರ್ಮವು ಮೋಕ್ಷಸಾಧನ. ಇದು ಸರಿಯಲ್ಲ. 'ತಮೇವಂ' ಎಂಬ ಶ್ವೇತಾಶ್ವತರೋಪನಿಷತ್ತಿನಲ್ಲಿ ವಿದ್ಯೆಯಿಂದ ಮೋಕ್ಷ, ಅದು ಬಿಟ್ಟು ಬೇರೆ ಮೋಕ್ಷಸಾಧನವಿಲ್ಲ, ಎಂದು ನಿರ್ಧಾರಮಾಡಿರುವುದರಿಂದ ಜ್ಞಾನದಿಂದಲೇ ಮೋಕ್ಷ.

**ವಿವರಣೆ**—ಇದುವರೆಗೆ ಅತಿಪ್ರಯತ್ನದಿಂದ ಗುರುಗಳನ್ನು ತುಷ್ಟಿಗೊಳಿಸಿ ಅವರು ಉಪದೇಶಿಸಿದ ಮಾರ್ಗದಿಂದಲೇ ಜ್ಞಾನವು ಹುಟ್ಟುತ್ತದೆ, ಎನ್ನಲಾಯಿತು. ಆದರೆ, ಭಗವದ್ಗೀತೆಯಲ್ಲಿ ಕರ್ಮದಿಂದಲೂ ಜನಕಾದಿಗಳಿಗೆ ಮೋಕ್ಷವಾಗಿದೆ, ಎಂದು ಹೇಳಲಾಗಿದೆ. ಅಷ್ಟೇ ಅಲ್ಲ, ಬಂಧವು ಅಸತ್ಯವಾಗಿದ್ದಲ್ಲಿ ಸ್ವಾಪ್ನಬಂಧದಂತೆ ಜ್ಞಾನದಿಂದ ನಾಶವಾಗಬಹುದು. ಆದರೆ, ಬಂಧ ಸತ್ಯವಾಗಿದೆ. ಸತ್ಯವಾದ ಜಪಾಕುಸುಮ ಸಾನ್ನಿಧ್ಯದಿಂದ ಉಂಟಾಗಿರುವ ಸ್ಫಟಿಕಲೌಹಿತ್ಯವು 'ಸ್ಫಟಿಕವು ಶುಭ್ರವಾಗಿದೆ' ಎಂದು ಜ್ಞಾನಮಾತ್ರದಿಂದ ನಿವೃತ್ತಿಯಾಗುವುದಿಲ್ಲ. ಅದರಂತೆ ಸತ್ಯವಾದ ದುಃಖಾದಿಬಂಧಕ್ಕೆ

ಜ್ಞಾನಮಾತ್ರವು ನಾಶಕವಾಗುವುದಿಲ್ಲ. ಕರ್ಮವೂ ಬೇಕೇ ಬೇಕು, ಎಂದು ಪೂರ್ವಪಕ್ಷ. ಜ್ಞಾನದಿಂದಲೇ ಬಂಧ ನಿವೃತ್ತಿ. ಕರ್ಮದಿಂದಲ್ಲ, ಎಂದು ಸಿದ್ಧಾಂತ.

**ಶ್ರುತ್ಯರ್ಥ**—ತಂ=ಆ ಪರಮಾತ್ಮನನ್ನು ಏವಂ ವಿದ್ವಾನ್=ಹೀಗೆ ತಿಳಿದವನು ಅತಿಮೃತ್ಯುಂ=ಮೃತ್ಯುವನ್ನು ದಾಟಿದ ಮೋಕ್ಷವನ್ನು ಏತಿ=ಹೊಂದುತ್ತಾನೆ. ಅಯನಾಯ=ಮೋಕ್ಷಕ್ಕಾಗಿ ಅನ್ಯಃ ಪಂಥಾಃ=ಜ್ಞಾನ ಬಿಟ್ಟು ಬೇರೆ ಮಾರ್ಗವು ನ=ಇಲ್ಲ.

## ॥ ಓಂ ದರ್ಶನಾಚ್ಚ ಓಂ ॥ ೪೯ ॥

**ನ ಕೇವಲ(ಲಂ)ವಿದ್ಯಯಾ ಕಿಂತು, ಅಪರೋಕ್ಷಜ್ಞಾನೇನೈವ ಚ ।**
**'ಸರ್ವಾನ್ ಪರೋ ಮಾಯಯಾಽಯಂ ಸಿನೀತೇ**
**ದೃಷ್ಟ್ವೈವ ತಂ ಮುಚ್ಯತೇ ನಾಪರೇಣ' ಇತಿ ಕೌಶಿಕಶ್ರುತೇಃ ।**

ವಿದ್ಯೆಯಿಂದ ಎಂದರೆ ಪರೋಕ್ಷಜ್ಞಾನದಿಂದಲೇ ಮೋಕ್ಷವಲ್ಲ. ಹೊರತು, ಅಪರೋಕ್ಷ ಜ್ಞಾನದಿಂದಲೇ ಮೋಕ್ಷ. ಕೌಶಿಕ ಶ್ರುತಿ ಹೇಳಿದೆ—ಪರಮಾತ್ಮನು ಎಲ್ಲರನ್ನೂ ತನ್ನ ಇಚ್ಛೆಯಿಂದ ಸಿನೀತೇ=ಬಂಧಿಸುತ್ತಾನೆ. ಆದ್ದರಿಂದ ಭಗವದ್ದರ್ಶನದಿಂದಲೇ ಮುಕ್ತನಾಗುತ್ತಾನೆ, ಕರ್ಮಾಚರಣೆಯಿಂದಲ್ಲ.

**ವಿವರಣೆ**—ಹಿಂದಿನ ಸೂತ್ರದಲ್ಲಿ ಹೇಳಿರುವಂತೆ ಜ್ಞಾನದಿಂದಲೇ ಮೋಕ್ಷವೆಂದಾದರೂ ಶಾಸ್ತ್ರಶ್ರವಣದಿಂದ ಜ್ಞಾನ ಬರುತ್ತದೆ. ಮನನ, ಧ್ಯಾನಗಳು ಏಕೆ? ಈ ಶಂಕೆಯ ಪರಿಹಾರಕ್ಕಾಗಿ ಪ್ರಕೃತ ಸೂತ್ರ. ಜ್ಞಾನವೆಂದರೆ ಶ್ರವಣಜನ್ಯವಾದ ಪರೋಕ್ಷಜ್ಞಾನವಷ್ಟೇ ಅಲ್ಲ, ಅದರಿಂದ ಅಪರೋಕ್ಷಜ್ಞಾನವೂ ಬೇಕು. ಅಂದರೆ, ಭಗವದ್ದರ್ಶನವಾಗಬೇಕು. ಅದಾಗಬೇಕಾದರೆ, ಮನನ, ಧ್ಯಾನಗಳೂ ಬೇಕು. ಪ್ರಸನ್ನನಾದ ಭಗವಂತನಿಗೆ ಮಾತ್ರ ಮೋಚನಶಕ್ತಿ ಇದೆ. ಅವನು ಪ್ರಸನ್ನನಾದರೆ ಬಂಧಮೋಕ್ಷ ಮಾಡುತ್ತಾನೆ. ಪ್ರಸನ್ನನಾಗಬೇಕಾದರೆ ಅವನನ್ನು ನೋಡಿ ಆಮೇಲೆ ಪರಮಭಕ್ತಿಯಿಂದ ಕರ್ಮಾಚರಣೆಯನ್ನು ಮಾಡಬೇಕು.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ವಿದ್ಯೈವ ತು ನಿರ್ಧಾರಣಾತ್ ಓಂ ॥** (ಅತ್ರ ಜ್ಞಾನಮೇವ ಮುಕ್ತಿಹೇತುರಿತ್ಯುಚ್ಯತೇ । ಮುಕ್ತಿಸಾಧನಮ್, ಇತಿ ಪ್ರಕಾರಣಾತ್ ಅನ್ವೇತಿ। ಬ್ರಹ್ಮಜ್ಞಾನಮೇವ ಮುಕ್ತಿಸಾಧನಮ್ । ನ ಕರ್ಮ । ನಿರ್ಧಾರಣಾತ್ । 'ನಾನ್ಯಃ ಪಂಥಾ

ಅಯನಾಯ ವಿದ್ಯತೇ' ಇತ್ಯನ್ಯನಿರಾಸೇನ ಜ್ಞಾನಸ್ಯೈವ ಮುಕ್ತಿಹೇತುತ್ವ-ನಿರ್ಧಾರಣಾತ್ ಇತ್ಯರ್ಥಃ। 'ಕರ್ಮಣೈವ ಹಿ ಸಂಸಿದ್ಧಿಂ' ಇತ್ಯತೋಽಪಿ 'ನಾನ್ಯಃ ಪಂಥಾ' ಇತ್ಯಸ್ಯ ಪ್ರಾಬಲ್ಯಸೂಚಕಃ ತುಶಬ್ದಃ।)

ಈ ಅಧಿಕರಣದಲ್ಲಿ ಜ್ಞಾನ ಮಾತ್ರ ಮೋಕ್ಷಸಾಧನ ಎಂದು ಸಾಧಿಸಲಾಗಿದೆ. ವಿದ್ಯೈವ=ಬ್ರಹ್ಮಜ್ಞಾನವೇ ಮುಕ್ತಿಗೆ ಸಾಧನ, ಕರ್ಮವಲ್ಲ. ಏಕೆಂದರೆ, ನಿರ್ಧಾರಣಾತ್=ನಾನ್ಯಃ ಪಂಥಾ ಎಂಬ ಶ್ರುತಿಯಲ್ಲಿ ಜ್ಞಾನವೇ ಮೋಕ್ಷಸಾಧನ, ಎಂದು ನಿರ್ಧಾರ ಮಾಡಿರುವುರಿಂದ.

॥ ಓಂ ದರ್ಶನಾಚ್ಚ ಓಂ ॥ (ತಂತ್ರಮಿದಮ್। ಬ್ರಹ್ಮಸಾಕ್ಷಾತ್ಕಾರಾದಪಿ ಮುಕ್ತಿಃ, ನ ವಿದ್ಯಾಮಾತ್ರಾತ್। ಯೇನ ಧ್ಯಾನವೈಯ್ಯರ್ಥ್ಯಮ್ ಇತ್ಯರ್ಥಃ। 'ವಿದ್ವಾನಮೃತಃ' ಇತ್ಯುಕ್ತೇಃ ಕಥಮೇವಂ ಇತಿ ಚೇತ್ ದರ್ಶನಾಚ್ಚ='ದೃಷ್ಟ್ವೈವ ತಂ ಮುಚ್ಯತೇ' ಇತಿ ಶ್ರುತೇಃ ಇತ್ಯರ್ಥಃ। ವಿಶೇಷಶ್ರುತ್ಯಾ 'ವಿದ್ವಾನ್' ಇತ್ಯಪಿ ಶ್ರುತಿಃ ಏತದರ್ಥಾ, ಇತಿ ಭಾವಃ ॥)

ಈ ಸೂತ್ರವನ್ನು ಎರಡೂ ಅರ್ಥಗಳಲ್ಲಿ ಬಳಸಿಕೊಳ್ಳಬೇಕು. ಕೇವಲ ಗುರೂಪದೇಶದಿಂದ ಬಂದ ಜ್ಞಾನದಿಂದಲೂ ಮೋಕ್ಷವಲ್ಲ. ಬ್ರಹ್ಮಸಾಕ್ಷಾತ್ಕಾರವೂ ಬೇಕು. ಆದ್ದರಿಂದ ಧ್ಯಾನವೂ ಬೇಕು. 'ತಮೇವಂ ವಿದ್ವಾನ್' ಎಂಬ ಶ್ರುತಿಯಲ್ಲಿ ಪರೋಕ್ಷ ಜ್ಞಾನವೇ ಮೋಕ್ಷಸಾಧನ ಎನ್ನುತ್ತಿರುವಾಗ ಅಪರೋಕ್ಷಜ್ಞಾನವೂ ಬೇಕು, ಎನ್ನುವುದು ಹೇಗೆ? ದರ್ಶನಾತ್=ಅದೂ 'ದೃಷ್ಟ್ವೈವ ತಂ ಮುಚ್ಯತೇ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟಿದೆ. 'ತಮೇವಂ ವಿದ್ವಾನ್' ಎಂಬ ಶ್ರುತಿ ಸಾಮಾನ್ಯಶ್ರುತಿ. 'ದೃಷ್ಟ್ವೈವ' ಎಂಬ ಶ್ರುತಿ ವಿಶೇಷಶ್ರುತಿ. ಆದ್ದರಿಂದ ಗುರುಗಳಿಂದ ಬ್ರಹ್ಮನನ್ನು ತಿಳಿದು ಅಪರೋಕ್ಷೀಕರಿಸಿ ಕೊಂಡರೆ, ಮೋಕ್ಷ ಎಂದು ಎರಡೂ ಶ್ರುತಿಗಳು ಸೇರಿ ಹೇಳುತ್ತವೆ.

ಇಲ್ಲಿಗೆ ವಿದ್ಯಾಧಿಕರಣವು ಮುಗಿಯಿತು.

## ೩೦. ಅಬಾಧಾಧಿಕರಣಮ್ (ಶ್ರುತ್ಯಧಿಕರಣಮ್)

**॥ ಓಂ ಶ್ರುತ್ಯಾದಿಬಲೀಯಸ್ತ್ವಾಚ್ಚ ನ ಬಾಧಃ ಓಂ ॥ ೫೦ ॥**

**ಸಾವಧಾರಣಾ ಬಲವತೀ ಶ್ರುತಿಃ ।**

'ಇಂದ್ರೋऽಶ್ವಮೇಧಾನ್ ಶತಮಿಷ್ಟ್ವಾऽಪಿ ರಾಜಾ
ಬ್ರಹ್ಮಾಣಮೀಡ್ಯಂ ಸಮುವಾಚೋಪಸನ್ನಃ ।
ನ ಕರ್ಮಭಿರ್ನ ಧನೈರ್ನೈವ ಚಾನ್ಯೈಃ
ಪಶ್ಯೇ(ತ್) ಸುಖಂ ತೇನ ತತ್ವಂ ಬ್ರವೀಹಿ॥'

ಇತಿ ಬಲವಲ್ಲಿಂಗಮ್ ।

'ನಾಸ್ತ್ಯಕೃತಃ ಕೃತೇನ' (ಮುಂ. 1.2.12) ಇತ್ಯುಪಪತ್ತಿಶ್ಚ ।
'ಕರ್ಮಣಾ ಬಧ್ಯತೇ ಜಂತುರ್ವಿದ್ಯಯಾ ಚ ವಿಮುಚ್ಯತೇ ।
ತಸ್ಮಾತ್ ಕರ್ಮ ನ ಕುರ್ವಂತಿ ಯತಯಃ ಪಾರದರ್ಶಿನಃ ॥'

ಇತಿ ಯುಕ್ತಿಮದ್ ಭಗವದ್ವಚನಮ್ ।

ಅತೋ ನ ಪ್ರಮಾಣಾಂತರಬಾಧಃ। 'ಕರ್ಮಣ್ಯೈವ' (ಗೀ.3.20) ಇತ್ಯಯೋಗವ್ಯವಚ್ಛೇದಃ ॥

(ಜ್ಞಾನದಿಂದ ಮೋಕ್ಷ ಎಂದು ತಿಳಿಸುವ ಶ್ರುತಿ–ಯುಕ್ತಿಗಳು ಪ್ರಬಲಗಳಾದುದರಿಂದ 'ಕರ್ಮಣೈವ ಹಿ' ಎಂಬ ವಾಕ್ಯದ ಬಾಧ ಇಲ್ಲ.) 'ದೃಷ್ಟ್ವೈವ ತಂ ಮುಚ್ಯತೇ' ಎಂಬ ಶ್ರುತಿಯು ಅವಧಾರಣಯುಕ್ತವಾಗಿದೆಯಾದುದರಿಂದ ಪ್ರಬಲವಾಗಿದೆ.

ಯುಕ್ತಿ ಇದು—ಇಂದ್ರನು ನೂರು ಅಶ್ವಮೇಧಯಾಗಗಳನ್ನು ಮಾಡಿಯೂ ಸ್ತುತ್ಯನಾದ ಪರಬ್ರಹ್ಮನ ಬಳಿಗೆ ಬಂದು ಹೇಳಿದನು—ಕರ್ಮದಿಂದಾಗಲೀ, ದ್ರವ್ಯ ಅಥವಾ ಇತರ ಸಾಧನಗಳಿಂದಾಗಲೀ ಸುಖವನ್ನು ಕಾಣಲಾಗದು. ಆದ್ದರಿಂದ ನನಗೆ ತತ್ತ್ವೋಪದೇಶ ನೀಡು'. ಹೀಗೆ ಬಹಳಷ್ಟು ಕರ್ಮವನ್ನು ಮಾಡಿರುವ ಇಂದ್ರನೂ ಸುಖಾಪೇಕ್ಷೆಯಿಂದ ತತ್ತ್ವಜ್ಞಾನಕ್ಕಾಗಿ ಪ್ರಾರ್ಥಿಸುವುದರಿಂದ ತತ್ತ್ವಜ್ಞಾನದಿಂದಲೇ ಮೋಕ್ಷ ಎಂದು ತಿಳಿಯುತ್ತದೆ. ಇದು ಯುಕ್ತಿ.

ನಾಸ್ತಿ ಅಕೃತಃ ಕೃತೇನ–ಅಕೃತಃ=ನಿತ್ಯವಾದ ಮೋಕ್ಷವು ಕೃತೇನ=ಅನಿತ್ಯವಾದ ಕರ್ಮದಿಂದ ನಾಸ್ತಿ=ಲಭ್ಯವಲ್ಲ. ಇಲ್ಲಿ ಕರ್ಮವು ಅನಿತ್ಯ, ಎಂಬ ಯುಕ್ತಿಯಿಂದ ಮೋಕ್ಷವು ಕರ್ಮಸಾಧ್ಯವಲ್ಲ ಎಂದು ಸಾಧಿಸಲಾಗಿದೆ.

'ಚೇತನನು ಕರ್ಮದಿಂದ ಸಂಸಾರಬಂಧನಕ್ಕೆ ಒಳಗಾಗುತ್ತಾನೆ, ಜ್ಞಾನದಿಂದ

ಮುಕ್ತನಾಗುತ್ತಾನೆ. ಆದ್ದರಿಂದಲೇ, ಸಂಸಾರಸಾಗರದ ಪಾರದರ್ಶಿಗಳಾದ ಯತಿಗಳು ಕರ್ಮಗಳನ್ನು ಮಾಡುವುದಿಲ್ಲ.' ಇದು ಯುಕ್ತಿಯುಕ್ತವಾದ ಭಗವದ್ವಚನ. ಯುಕ್ತಿಮೂಲತ್ವವೂ ಆಪ್ತಿಮೂಲತ್ವವೂ ಇರುವುದರಿಂದ ಇದು 'ಕರ್ಮಣೈವ' ಎಂಬ ಸ್ಮೃತಿಗಿಂತ ಪ್ರಬಲವಾಗಿದೆ. ಆದ್ದರಿಂದ· ಈ ವಚನಗಳಿಗೆ ಇತರಪ್ರಮಾಣಗಳಿಂದ ಬಾಧವು ಇಲ್ಲ. ಇವುಗಳಿಗೆ ವಿರುದ್ಧವಾದುದರಿಂದ 'ಕರ್ಮಣೈವ' ಎಂಬ ಗೀತಾವಚನದಲ್ಲಿರುವ ಏವಶಬ್ದಕ್ಕೆ ಅಯೋಗವ್ಯವಚ್ಛೇದವೇ ಅರ್ಥ. ಕರ್ಮಕ್ಕೆ ಮೋಕ್ಷಸಾಧನತ್ವದ ಅಭಾವವನ್ನು ಅದು ನಿರಾಕರಿಸುತ್ತದೆ. ಅದೂ ಜ್ಞಾನದ್ವಾರಾ ಮೋಕ್ಷಸಾಧನ ಎಂದರ್ಥ. ಅದೇ ಮೋಕ್ಷಸಾಧನ, ಎಂದು ಅರ್ಥವಲ್ಲ.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಓಂ ಶ್ರುತ್ಯಾದಿಬಲೀಯಸ್ತ್ವಾಚ್ಚ ನ ಬಾಧಃ ಓಂ ॥** (ಪ್ರಾಗುಕ್ತಮೇವಾತ್ರ ಆಕ್ಷಿಪ್ಯ ಸಾಧ್ಯತೇ । ಜ್ಞಾನಸ್ಯೈವ ಮುಕ್ತಿಹೇತುತ್ವೇಽಪಿ 'ಕರ್ಮಣೈವ' ಇತಿ ಸ್ಮೃತಿಬಾಧಃ ನಾಸ್ತಿ । ಕುತಃ ? ಶ್ರುತ್ಯಾದಿಬಲೀಯಸ್ತ್ವಾತ್ । 'ತಮೇವಂ' ಇತಿ ಶ್ರುತಿಃ, ಆದಿಪದಾತ್ 'ಇಂದ್ರೋಽಶ್ವಮೇಧಾನ್ ಶತಮಿಷ್ಟ್ವಾ' ಇತಿ ಶ್ರುತ್ಯುಕ್ತಂ ಬಹುಕರ್ಮ ಕೃತೋಽಪೀಂದ್ರಸ್ಯ ದುಃಖಮಿಶ್ರಸುಖಮೋಕ್ಷಾರ್ಥಂ ತತ್ತ್ವಜ್ಞಾನ ಪ್ರಾರ್ಥನಾ ರೂಪಲಿಂಗಂ, 'ನಾಸ್ತ್ಯಕೃತಃ ಕೃತೇನ' ಇತ್ಯುಕ್ತ್ವಾ ಆದ್ಯಂತವತ್‌ಫಲತ್ವೇನ ಅವಧೃತಕರ್ಮಣಾ ನಿತ್ಯಪುಮರ್ಥೋ ನೇತಿ ಯುಕ್ತಿಃ, 'ಕರ್ಮಣಾ' ಬಧ್ಯತೇ ಜಂತುಃ...' ಇತಿ ಸ್ಮೃತಿಶ್ಚ ಗೃಹ್ಯತೇ । ಶ್ರುತೇಃ ಅನವಕಾಶಾವಧಾರಣವತ್ವೇನ, ಯುಕ್ತೇಃ ಶ್ರೌತತ್ವಾದಿನಾ, ಸ್ಮೃತೇಃ ಈಶವಾಕ್ಯತ್ವೇನ ಯುಕ್ತ್ಯುಪೇತತ್ವೇನ ಚ ಬಲೀಯಸ್ತ್ವಾತ್ ಇತ್ಯರ್ಥಃ ।)

ಶ್ರುತ್ಯಾದಿ ಬಲೀಯಸ್ತ್ವಾಚ್ಚ='ತಮೇವಂ ವಿದ್ವಾನ್' 'ದೃಷ್ಟ್ವೈವ ತಂ ಮುಚ್ಯತೇ' ಈ ಶ್ರುತಿ ಮತ್ತು ಯುಕ್ತಿ–ಭಗವದ್ವಚನಗಳು ಪ್ರಬಲವಾಗಿರುವುದರಿಂದ 'ಕರ್ಮಣೈವ' ಎಂಬ ಗೀತಾವಚನದ ಬಾಧವಿಲ್ಲ.

ಇಲ್ಲಿಗೆ ಅಬಾಧಾಧಿಕರಣವು (ಶ್ರುತ್ಯಧಿಕರಣ) ಮುಗಿಯಿತು.

# ೩೧. ಅನುಬಂಧಾಧಿಕರಣಮ್

**॥ ಓಂ ಅನುಬಂಧಾದಿಭ್ಯಃ ಓಂ ॥ ೫೧ ॥**

ನ ಕೇವಲಂ ಶ್ರವಣಾದಿಭಿರ್ಗುರುಪ್ರಸಾದೇನ ಚ ಬ್ರಹ್ಮದರ್ಶನಮ್ । ಕಿಂತು ಭಕ್ತ್ಯಾದಿಭಿಶ್ಚ ।

'ಸರ್ವಲಕ್ಷಣಸಂಪನ್ನಃ ಸರ್ವಜ್ಞೋ ವಿಷ್ಣುತತ್ಪರಃ ।
ಯದ್ ಗುರುಃ ಸುಪ್ರಸನ್ನಃ ಸನ್ ದದ್ಯಾತ್ ತನ್ನಾನ್ಯಥಾ ಭವೇತ್ ॥
ತಥಾಽಪ್ಯನಾದಿಸಂಸಿದ್ಧೋ ಭಕ್ತ್ಯಾದಿಗುಣಪೂಗತಃ ।
ಲಭೇದ್ ಗುರುಪ್ರಸಾದಂ ಚ ತಸ್ಮಾದೇವ ಚ ತದ್ ಭವೇತ್ ॥'

ಇತಿ ॥

'ಭಕ್ತಿರ್ವಿಷ್ಣೌ ಗುರೌ ಚೈವ ಗುರೋರ್ನಿತ್ಯಪ್ರಸನ್ನತಾಮ್ ।
ದದ್ಯಾಚ್ಛಮದಮಾದಿಂ ಚ ತೇನ ಚೈತೇ ಗುಣಾಃ ಪುನಃ ।
ತೈಃ ಸರ್ವೈರ್ದರ್ಶನಂ ವಿಷ್ಣೋಃ ಶ್ರವಣಾದಿಕೃತಂ ಭವೇತ್ ॥'

ಇತಿ ಚ ನಾರಾಯಣತಂತ್ರೇ ॥

ಕೇವಲ ಶ್ರವಣಾದಿಗಳಿಂದಾಗಲೀ ಗುರುಪ್ರಸಾದದಿಂದಾಗಲೀ ಬ್ರಹ್ಮದರ್ಶನವಾಗುವುದಿಲ್ಲ. ಕಿಂತು ಭಕ್ತ್ಯಾದಿಗಳೂ ಬೇಕು. ಪ್ರಮಾಣ ಹೀಗಿದೆ—

ಸರ್ವಲಕ್ಷಣಗಳಿಂದ ಕೂಡಿರುವ, ಸರ್ವಜ್ಞನಾದ, ವಿಷ್ಣುಭಕ್ತನಾದ ಯಾವ ಗುರುವು ಸುಪ್ರಸನ್ನನಾಗಿ ಏನು ಹೇಳುವನೋ ಅದು ಎಂದೂ ಸುಳ್ಳಾಗುವುದಿಲ್ಲ. ಆದರೂ ಅನಾದಿಕಾಲದಿಂದ ಇದ್ದು ಪರಿಪಕ್ವವಾದ ಭಕ್ತ್ಯಾದಿಗುಣಸಮೂಹಗಳಿಂದ ಗುರುಗಳ ಪ್ರಸಾದವನ್ನು ಪಡೆಯುತ್ತಾನೆ. ಅಂತಹ ಗುರುಪ್ರಸಾದಸಹಿತಭಕ್ತಿಯಿಂದ ಅಪರೋಕ್ಷಜ್ಞಾನವಾಗುತ್ತದೆ. ನಾರಾಯಣತಂತ್ರದಲ್ಲಿ ಹೀಗಿದೆ—

ವಿಷ್ಣುವಿನಲ್ಲಿ ಮತ್ತು ಗುರುಗಳಲ್ಲಿ ಭಕ್ತಿಯು ಗುರುಗಳ ಸದಾ ಪ್ರಸನ್ನತೆಯನ್ನೂ ಶಮ–ದಮಾದಿಗಳನ್ನೂ ಕೊಡುತ್ತದೆ. ಅದರಿಂದ ಮತ್ತೆ ಭಕ್ತ್ಯಾದಿಗುಣಗಳು ವ್ಯಕ್ತವಾಗುತ್ತವೆ. ವ್ಯಕ್ತವಾದ ಈ ಭಕ್ತ್ಯಾದಿಗುಣಗಳಿಂದ ವಿಷ್ಣುವಿನ ದರ್ಶನವಾಗುತ್ತದೆ. ಆ ದರ್ಶನವು ಶ್ರವಣಾದಿಗಳಿಂದ ಸಾಧ್ಯವಾಗಿದೆ.

**ವಿವರಣೆ**—'ಅಂಬುವದಗ್ರಹಣಾತ್' ಎಂಬ ಸೂತ್ರದಲ್ಲಿ ಭಕ್ತಿಯು ಆವಶ್ಯಕ ಎಂದು ಹೇಳಿದ್ದರೂ ಇಲ್ಲಿ ಪುನಃ ಭಕ್ತಿ ಬೇಕು, ಎಂದಿರುವುದು ಅದು ಪ್ರಧಾನ ಎಂದು ತಿಳಿಸುವುದಕ್ಕಾಗಿ ಮತ್ತು ಭಕ್ತಿಯ ಜೊತೆಯಲ್ಲಿ ಇತರ ಸಾಧನಗಳೂ ಬೇಕು, ಎಂದು ತಿಳಿಸುವುದಕ್ಕಾಗಿ.

ಭಕ್ತಿ ಇಲ್ಲದೆಯೂ ದ್ವೇಷಾದಿಗಳಿದ್ದರೂ ಧ್ಯಾನಮಾಡಬಹುದಾದ್ದರಿಂದ ಭಕ್ತಿಯ ಅಗತ್ಯವಿಲ್ಲ ಎಂದು ಪೂರ್ವಪಕ್ಷ. ದ್ವೇಷದಿಂದ ಮಾಡುವ ಧ್ಯಾನವು ಅನರ್ಥ ಹೇತುವಾದ್ದರಿಂದ ಭಕ್ತಿಯೇ ಬೇಕು. ಆ ಭಕ್ತಿಯು ಅನಾದಿಸಿದ್ಧವಾಗಿರಬೇಕು. ಅದು ಗುರುಪ್ರಸಾದಕ್ಕೆ ಸಾಧನವಾಗಿ ಗುರುಪ್ರಸಾದದಿಂದ ಪುನಃ ದೃಢವಾಗುತ್ತದೆ.

ಸೂತ್ರದಲ್ಲಿ ಅನುಬಂಧ ಎಂದರೆ ಭಕ್ತಿ. ''ಅನುಬಂಧಸ್ತು ಭಕ್ತಿಃ ಸ್ಯಾತ್ ಬಂಧಃ ಸ್ನೇಹ ಉದಾಹೃತಃ'' ಎಂದು ಕೋಶವಿದೆ. ಆದಿಪದದಿಂದ ಶಮದಮಗಳು ವಿವಕ್ಷಿತ. ಅನು=ತನಗೆ ಬೇಕಾಗುವಂತೆ ಬಧ್ನಾತಿ=ಬಂಧಿತನಂತೆ ಅಧೀನನಾಗುತ್ತಾನೆ, ಯಾವುದರಿಂದಲೋ ಅದೇ ಅನುಬಂಧ. ತನ್ನ ಸ್ವಾಮಿಯನ್ನು ತನಗೆ ಅನುಕೂಲ ವಾಗುವಂತೆ ಮಾಡುವ ಶಕ್ತಿ ಭಕ್ತಿಗಿದೆ, ಎಂದು ಈ ಪದಪ್ರಯೋಗದಿಂದ ತಿಳಿಯುತ್ತದೆ. ಅದಕ್ಕಾಗಿಯೇ ಭಕ್ತಿಪದವನ್ನು ಬಿಟ್ಟು ಅನುಬಂಧಪದವನ್ನು ಪ್ರಯೋಗಿಸಲಾಗಿದೆ. ಇದು ಗುರ್ವರ್ಥದೀಪಿಕಾದ ವಿವರಣೆ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

II ಓಂ ಅನುಬಂಧಾದಿಭ್ಯಃ ಓಂ II (ಅತ್ರ ಪ್ರಸ್ತುತದರ್ಶನಸ್ಯ ಭಕ್ತಿಸಾಧ್ಯತ್ವಂ ಸಾಧ್ಯತೇ। ದರ್ಶನಮಿತ್ಯಸ್ತಿ। ಅನುಬಂಧೋ ಭಕ್ತಿಃ। ಶಮಾದಿಃ ಆದಿಪದಾರ್ಥಃ, ಶ್ರವಣಾದಿಜನ್ಯಮಪಿ ಬ್ರಹ್ಮದರ್ಶನಂ ಅನುಬಂಧಾದಿಭ್ಯೋ=ಹರಿ–ಗುರು ಭಕ್ತ್ಯಾದಿಭ್ಯಃ ಭವತಿ ನ ದ್ವೇಷಾದಿನಾ, ಇತ್ಯರ್ಥಃ।)

ಈ ಅಧಿಕರಣದಲ್ಲಿ ದರ್ಶನವು ಭಕ್ತ್ಯಾದಿಗಳಿಂದ ಲಭ್ಯವಾಗುತ್ತದೆ, ಎಂದು ಸಾಧಿಸಲಾಗಿದೆ. ಅನುಬಂಧ ಎಂದರೆ ಭಕ್ತಿ. ಆದಿಪದದಿಂದ ಶಮಾದಿಗಳನ್ನು ಪರಿಗ್ರಹಿಸಬೇಕು. ಶ್ರವಣಾದಿಗಳಿಂದ ಬ್ರಹ್ಮದರ್ಶನವು ಆಗುವುದಾದರೂ ಅನುಬಂಧಾದಿಭ್ಯಃ= ಹರಿ–ಗುರುಗಳಲ್ಲಿ ಭಕ್ತಿ, ಶಮಾದಿ ಸಂಪತ್ತಿಗಳಿಂದಲೇ ಆಗುತ್ತದೆ, ದ್ವೇಷದಿಂದ ಆಗುವುದಿಲ್ಲ.

ಇಲ್ಲಿಗೆ ಅನುಬಂಧಾಧಿಕರಣವು ಮುಗಿಯಿತು.

## ೩೨. ಪ್ರಜ್ಞಾಂತರಾಧಿಕರಣಮ್ (ದರ್ಶನಭೇದಾಧಿಕರಣಮ್)

**II ಓಂ ಪ್ರಜ್ಞಾಂತರಪೃಥಕ್ತ್ವವದ್ ದೃಷ್ಟಿಶ್ಚ ತದುಕ್ತಮ್ ಓಂ II ೫೨ II**

**ಉಪಾಸನಾಭೇದವದ್ ದರ್ಶನಭೇದಃ । ತಚ್ಚೋಕ್ತಂ ಕಮಠಶ್ರುತೌ–**

**'ಅಂತರ್ದೃಷ್ಟಯೋ ಬಹಿರ್ದೃಷ್ಟಯೋಽವತಾರದೃಷ್ಟಯಃ ಸರ್ವದೃಷ್ಟಯ ಇತಿ, ದೇವಾ ವಾವ ಸರ್ವದೃಷ್ಟಯಸ್ತೇಷು ಚೋತ್ತರೋತ್ತರ ಮಾಬ್ರಹ್ಮಣೋಽನ್ಯೇಷು ತು ಯಥಾಯೋಗಂ ಯಥಾ ಹ್ಯಾಚಾರ್ಯಾ ಆಚಕ್ಷತೇ' ಇತಿ ॥**

**ಅಧ್ಯಾತ್ಮೇ ಚ-**

**'ದೃಷ್ಟ್ಯೈವ ಹ್ಯವತಾರಾಣಾಂ ಮುಚ್ಯಂತೇ ಕೇಚಿದಂಜಸಾ ।**
**ದರ್ಶನೇನಾಽಂತರೇಣಾನ್ಯೇ ದೇವಾಃ ಸರ್ವತ್ರ ದರ್ಶನಾತ್ ।**
**ತೇಷಾಂ ವಿಶೇಷಮಾಚಾರ್ಯೋ ವೇತ್ತಿ ಸರ್ವಜ್ಞತಾಂ ಗತಃ ॥' ಇತಿ ॥**

ಉಪಾಸನೆಯಲ್ಲಿ ವೈಲಕ್ಷಣ್ಯವಿರುವಂತೆ ಭಗವದ್ದರ್ಶನದಲ್ಲೂ ವ್ಯತ್ಯಾಸವಿದೆ. ಅದನ್ನು ಕಮಠಶ್ರುತಿಯಲ್ಲಿ ಹೇಳಲಾಗಿದೆ—ಕೆಲವರು ಅಂತರ್‌ದೃಷ್ಟಿಯವರು, ಮತ್ತೆ ಕೆಲವರು ಹೊರಗೆ ಬ್ರಹ್ಮದರ್ಶನವನ್ನು ಪಡೆಯುವವರು, ಇನ್ನು ಕೆಲವರು ಅವತಾರ ರೂಪಗಳ ದರ್ಶನಭಾಗ್ಯದವರು, ಮತ್ತೆ ಕೆಲವರು ಸರ್ವತ್ರ ವ್ಯಾಪ್ತವಾದ ಭಗವದ್ರೂಪದ ದರ್ಶನ ಪಡೆಯುವವರು. ಈ ಗುಂಪಿನಲ್ಲಿ ದೇವತೆಗಳು ಸರ್ವತ್ರ ವ್ಯಾಪ್ತನಾದ ಭಗವಂತನ ದರ್ಶನ ಪಡೆಯುವವರು. ಅವರಲ್ಲೂ ಉತ್ತಮೋತ್ತಮರಿಗೆ ಬ್ರಹ್ಮಪರ್ಯಂತವಾಗಿ ದರ್ಶನತಾರತಮ್ಯವಿದೆ. ಇತರರಿಗೆ ಅವರವರ ಯೋಗ್ಯತೆಯಂತೆ ಗುರುಗಳು ಉಪಾಸ್ಯರೂಪವನ್ನು ಹೇಳುತ್ತಾರೆ.

'ಅಧ್ಯಾತ್ಮ'ದಲ್ಲಿ ಹೀಗಿದೆ—ಕೆಲವರು ಅವತಾರ ರೂಪಗಳನ್ನೇ ದಿವ್ಯದೃಷ್ಟಿಯಿಂದ ನೋಡಿಯೇ ಮುಕ್ತರಾಗುತ್ತಾರೆ. ಮತ್ತೆ ಕೆಲವರು ಹೃದಯದೊಳಗೆ ಭಗವಂತನನ್ನು ನೋಡಿ ಮುಕ್ತರಾಗುತ್ತಾರೆ. ದೇವತೆಗಳು ಬ್ರಹ್ಮನ ವ್ಯಾಪ್ತರೂಪದ ದರ್ಶನದಿಂದ ಮುಕ್ತರಾಗುತ್ತಾರೆ. ದರ್ಶನರೂಪದ ವಿಶೇಷವನ್ನು ಸರ್ವಜ್ಞರಾದ ಗುರುಗಳು ತಿಳಿಸುತ್ತಾರೆ.

**ವಿವರಣೆ**—ಭಕ್ತಿ, ಧ್ಯಾನಾದಿಗಳು ಮನೋವೃತ್ತಿರೂಪಗಳು. ಮನಸ್ಸು ವ್ಯಕ್ತಿಗಿಂತ ವ್ಯಕ್ತಿಗೆ ಭಿನ್ನವಾದುದು. ಆದ್ದರಿಂದ ಉಪಾಸನಾತಾರತಮ್ಯ ಸಹಜವಾದುದು. ಆದರೆ ಅಪರೋಕ್ಷ ಭಗವದ್ರೂಪದ್ದು. ಅವನು ಏಕರೂಪನಾದುದರಿಂದ ಭಗವದಪರೋಕ್ಷವು ಏಕರೂಪವಾದುದು, ಎಂಬ ಪೂರ್ವಪಕ್ಷಕ್ಕೆ ಸಮಾಧಾನವಾಗಿ ಈ ಸೂತ್ರ ಇದೆ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

॥ ಓಂ ಪ್ರಜ್ಞಾಂತರಪೃಥಕ್ತ್ವವದ್ ದೃಷ್ಟಿಶ್ಚ ತದುಕ್ತಮ್ ಓಂ ॥ (ಅತ್ರ ಬ್ರಹ್ಮ ದರ್ಶನಸ್ಯ ತಾರತಮ್ಯಂ ಸಾಧ್ಯತೇ। ಪ್ರಜ್ಞಾಂತರಂ=ಪ್ರಜ್ಞಾವಿಶೇಷಃ। ಅವಿಚ್ಛಿನ್ನ-ಪರೋಕ್ಷಜ್ಞಾನ-ಸಂತಾನರೂಪಂ ಧ್ಯಾನಮ್। ತಸ್ಯ ಪೃಥಕ್ತ್ವವತ್=ತಾರತಮ್ಯವತ್ ದೃಷ್ಟಿಶ್ಚ ಪೃಥಕ್=ನಾನಾವಿಧಾ ಇತ್ಯರ್ಥಃ। ತದುಕ್ತಂ-ತತ್=ದೃಷ್ಟಿತಾರತಮ್ಯಮ್ ಉಕ್ತಮ್ 'ಅಂತರ್‌ದೃಷ್ಟಯೋ ಬಹಿರ್ದೃಷ್ಟಯೋಽವತಾರದೃಷ್ಟಯಃ' ಇತ್ಯಾದಿಶ್ರುತೌ ಇತ್ಯರ್ಥಃ। ತಥಾ, ದೃಷ್ಟಿಪೃಥಕ್ತ್ವೇಽಪಿ ಸರ್ವಜ್ಞಾನಿನಾಂ ಮುಕ್ತಿರಿತ್ಯೇತತ್ 'ದೃಷ್ಟ್ಯೈವ ಹ್ಯವತಾರಾಣಾಮ್' ಇತಿ ಸ್ಮೃತೌ ಉಕ್ತಮ್, ಇತ್ಯರ್ಥಃ।)

ಪ್ರಜ್ಞಾಂತರ ಎಂದರೆ ಪ್ರಜ್ಞಾವಿಶೇಷ ಅಂದರೆ ವಿಚ್ಛೇದವಿಲ್ಲದ ಮಾನಸ ಜ್ಞಾನಸಂತತಿರೂಪವಾದ ಧ್ಯಾನ. ಅಂತಹ ಧ್ಯಾನವು ಪೃಥಕ್ತ್ವವತ್=ವ್ಯಕ್ತಿಯಿಂದ ವ್ಯಕ್ತಿಗೆ ತಾರತಮ್ಯೋಪೇತವಾದಂತೆ ದೃಷ್ಟಿಶ್ಚ=ಭಗವದ್ದರ್ಶನವೂ ಒಬ್ಬೊಬ್ಬ ಸಾಧಕನಿಗೆ ಒಂದೊಂದು ರೀತಿಯಾದುದು. ತದುಕ್ತಮ್=ದರ್ಶನತಾರತಮ್ಯವು ಶ್ರುತಿಯಲ್ಲಿ ಉಕ್ತವಾಗಿದೆ. ಅದರಂತೆ, ಭಗವದಪರೋಕ್ಷದಲ್ಲಿ ವೈಲಕ್ಷಣ್ಯವಿದ್ದರೂ ಮೋಕ್ಷವು ಎಲ್ಲರಿಗೂ ಇದೆ, ಇದೂ ಸ್ಮೃತಿಯಲ್ಲಿ ಉಕ್ತವಾಗಿದೆ.

ಇಲ್ಲಿಗೆ ಪ್ರಜ್ಞಾಂತರಾಧಿಕರಣವು (ದರ್ಶನಭೇದಾಧಿಕರಣ) ಮುಗಿಯಿತು.

## ೩೩. ನ ಸಾಮಾನ್ಯಾಧಿಕರಣಮ್

### ॥ ಓಂ ನ ಸಾಮಾನ್ಯಾದಪ್ಯುಪಲಬ್ಧೇರ್ಮೃತ್ಯುವನ್ನಹಿ ಲೋಕಾಪತ್ತಿಃ ಓಂ ॥ ೫೩ ॥

ನ ಸಾಮಾನ್ಯದರ್ಶನಮಾತ್ರೇಣ ಮುಕ್ತಿಃ। ಯಥಾ ಮೃತ್ಯುಮಾತ್ರಾತ್। ನಹಿ ಲೋಕಾಪತ್ತಿಮಾತ್ರಂ ಮುಕ್ತಿಃ।

'ಸಾಮಾನ್ಯದರ್ಶನಾಲ್ಲೋಕಾ ಮುಕ್ತಿರ್ಯೋಗ್ಯಾತ್ಮದರ್ಶನಾತ್'

ಇತಿ ಹಿ ನಾರಾಯಣತಂತ್ರೇ।

'ಮುಚ್ಯತೇ ನಾತ್ರ ಸಂದೇಹೋ ದೃಷ್ಟ್ವಾ ತು ಸ್ವಾತ್ಮಯೋಗ್ಯಯಾ'

ಇತಿ।

'ದರ್ಶನೇನಾಽತ್ಮಯೋಗ್ಯೇನ ಮುಕ್ತಿರ್ನಾನ್ಯೇನ ಕೇನಚಿತ್'

ಇತಿ ಚಾಧ್ಯಾತ್ಮೇ ॥

ಹೇಗೆ ಮರಣಮಾತ್ರವೇ ಮುಕ್ತಿಯಲ್ಲವೋ ಅದರಂತೆ, ಯಾವುದೋ ಭಗವದ್ರೂಪದ ದರ್ಶನಮಾತ್ರದಿಂದಲೂ ಮೋಕ್ಷವಿಲ್ಲ. ಏಕೆಂದರೆ, ಮಹರಾದಿ ಲೋಕವಿಶೇಷಪ್ರಾಪ್ತಿಯೇ ಮೋಕ್ಷವಲ್ಲ. ಸ್ವರೂಪಾವಿರ್ಭಾವವೇ ಮೋಕ್ಷ. ನಾರಾಯಣತಂತ್ರದಲ್ಲಿ ಹೇಳಿದೆ—ಸಾಧಕರಿಗೆ ಯೋಗ್ಯವಾದ ರೂಪದ ಹೊರತಾದ, ಸಾಮಾನ್ಯವಾದ ಭಗವದ್ರೂಪದ ದರ್ಶನದಿಂದ ಮಹರಾದಿಲೋಕಗಳ ಪ್ರಾಪ್ತಿಯಷ್ಟೇ ಆಗುತ್ತದೆ. ಮುಕ್ತಿಯಾದರೋ ಯೋಗ್ಯವಾದ ಭಗವದ್ರೂಪದ ದರ್ಶನದಿಂದಲೇ ಆಗುತ್ತದೆ. 'ಭಗವದಪರೋಕ್ಷದಲ್ಲಿ ತಾರತಮ್ಯವಿದ್ದರೂ ಅವರವರಿಗೆ ಯೋಗ್ಯವಾದ ಭಗವದ್ರೂಪದ ದರ್ಶನದಿಂದ ಎಲ್ಲರೂ ಮುಕ್ತರಾಗುತ್ತಾರೆ, ಇದರಲ್ಲಿ ಸಂದೇಹ ಬೇಡ.''

'ಅಧ್ಯಾತ್ಮ'ದಲ್ಲಿ ಹೀಗಿದೆ—ಸಾಧಕರಿಗೆ ಯೋಗ್ಯವಾದ ಭಗವದ್ರೂಪದ ದರ್ಶನದಿಂದಲೇ ಮೋಕ್ಷ ಹೊರತು ಬೇರೆ ಯಾವುದೋ ರೂಪದ ದರ್ಶನದಿಂದ ಮೋಕ್ಷವಿಲ್ಲ.

**ವಿವರಣೆ**—ಈ ಅಧಿಕರಣದಲ್ಲಿ ರೂಪವಿಶೇಷದ ದರ್ಶನವೇ ಮೋಕ್ಷಸಾಧನ, ಎಂದು ಹೇಳಲಾಗಿದೆ. ಆ ರೂಪ ಬಿಂಬರೂಪ, ಎಂದು ಭಾಷ್ಯದಲ್ಲಿ ಇಲ್ಲ. ಆದರೆ ತತ್ತ್ವಪ್ರಕಾಶಿಕಾದಲ್ಲಿ 'ಕಿಂ ನಾಮ ಬಿಂಬದರ್ಶನಾದೇವ' ಎಂದು ಬಿಂಬರೂಪದ ದರ್ಶನದಿಂದಲೇ ಮೋಕ್ಷ ಎಂದು ಹೇಳಿ ಅದಕ್ಕೆ ಶ್ರುತಿಯ ಆಧಾರವನ್ನು ಕೊಡಲಾಗಿದೆ—'ಸಮೋಽಪಿ ಭಗವಾನ್ ಸ್ವಬಿಂಬದರ್ಶನೇ ಏವೈನಂ ಮೋಚಯತಿ' ಎಂದು. ಆದರೆ, ರಾಯರು 'ಬಿಂಬಶಬ್ದೋಽತ್ರ ಸ್ವಯೋಗ್ಯಾತ್ಮಪರಃ। 'ಮುಕ್ತಿ ರ್ಯೋಗ್ಯಾತ್ಮದರ್ಶನಾತ್' ಇತ್ಯುಕ್ತೇಃ।' ಎಂದು ತತ್ತ್ವಪ್ರಕಾಶಿಕಾಕ್ಕೆ ವಿವರಣೆಯನ್ನು ಕೊಟ್ಟಿದ್ದಾರೆ. ತತ್ತ್ವಪ್ರಕಾಶಿಕಾದಲ್ಲಿ 'ಬಿಂಬ' ಎಂದರೆ ಹೃದಯಸ್ಥಭಗವದ್ರೂಪ, ಎಂದು ಅರ್ಥವಲ್ಲ, ಅವರವರಿಗೆ ಯೋಗ್ಯವಾದ ಭಗವದ್ರೂಪವಿಶೇಷ ಎಂದರ್ಥ. ಏಕೆಂದರೆ, ಆಚಾರ್ಯರು ಭಾಷ್ಯದಲ್ಲಿ 'ಮುಕ್ತಿರ್ಯೋಗ್ಯಾತ್ಮದರ್ಶನಾತ್' ಎಂದೇ ಪ್ರಮಾಣವನ್ನು ಕೊಟ್ಟಿದ್ದಾರೆ.

ಭಾವಬೋಧಕಾರರೂ ಹೀಗೆಯೇ ವ್ಯಾಖ್ಯಾನ ಮಾಡಿದ್ದಾರೆ—'ಬಿಂಬದರ್ಶನಾ ದೇವೇತಿ ॥ ನಾಯಂ ನಿಯಮಃ ಸರ್ವೇಷಾಂ, ಕಿಂತು ಯೇ ಬಿಂಬದರ್ಶನ ಯೋಗ್ಯಾಃ

ಋಷ್ಯಾದಯಃ ತೇಷಾಮೇವ । ತೇಷಾಂ ಬಿಂಬದರ್ಶನಯೋಗ್ಯತ್ವಾತ್ । 'ಋಷಯೋಽಂತಃಪ್ರಕಾಶಾಃ' ಇತಿ ಶ್ರುತೇಶ್ಚ। ಅನ್ಯಥಾ 'ದೃಷ್ಟ್ವೈವ ಹ್ಯವತಾರಾಣಾಂ' ಇತಿ ಪ್ರಾಗುಕ್ತವಿರೋಧಾತ್ ।

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ನ ಸಾಮಾನ್ಯಾದಪ್ಯುಪಲಬ್ಧೇರ್ಮೃತ್ಯುವನ್ನಹಿ ಲೋಕಾಪತ್ತಿಃ ಓಂ ॥**

(ಅತ್ರ ಬಿಂಬಜ್ಞಾನಸ್ಯ ಮುಕ್ತಿಹೇತುತ್ವಂ ಸಾಧ್ಯತೇ । ದೃಷ್ಟಿಪ್ರಸಂಗಸನ್ನಿಧಾಪಿತಾ ಮುಕ್ತಿಃ, ಬ್ರಹ್ಮಸ್ವರೂಪಂ ಚ ಅನ್ವೇತಿ। ಸಾಮಾನ್ಯಾದಿತ್ಯಾವೃತ್ತಿಃ। ಬ್ರಹ್ಮರೂಪಾಣಾಂ ಸಾಮಾನ್ಯಾತ್=ಸಮಾನತ್ವಾತ್ ಉಪಲಬ್ಧೇಃ ಸಾಮಾನ್ಯಾತ್=ಸಾಧಾರಣ್ಯಾತ್ ಕಿಂಚಿದ್‌ರೂಪದೃಷ್ಟ್ಯಾಪಿ ಮುಕ್ತಿರ್ಭವತೀತಿ ನ । ಕಿಂತು, ಸ್ವಬಿಂಬರೂಪದೃಷ್ಟ್ವೈವ। ಮೃತ್ಯುವತ್=ಯಥಾಮೃತಿಸಾಮಾನ್ಯಾತ್ ನ ಮುಕ್ತಿಃ, ಕಿಂತು ಮೃತಿವಿಶೇಷಾದನಂತರಂ ತಥಾ, ಇತಿ। ರೂಪಾಂತರದೃಷ್ಟೇಃ ವೈಫಲ್ಯಾಯೋಗಾತ್ ತಸ್ಯಾಃ ಯತ್‌ಫಲಂ ಸೈವ ಮುಕ್ತಿರಿತ್ಯತ ಉಕ್ತಂ—ನಹೀತಿ। ರೂಪಾಂತರದೃಷ್ಟಿಫಲಭೂತಾ ಮಹರಾದಿ ಲೋಕಪ್ರಾಪ್ತಿಃ, ಮುಕ್ತಿರ್ನ ಭವತೀತ್ಯರ್ಥಃ ।)

ಈ ಅಧಿಕರಣದಲ್ಲಿ ಬಿಂಬಜ್ಞಾನವು ಮೋಕ್ಷಹೇತು ಎಂದು ಸಾಧಿಸಲಾಗಿದೆ. ಬ್ರಹ್ಮನ ಎಲ್ಲಾ ರೂಪಗಳೂ ಸಾಮಾನ್ಯಾತ್=ಸಮಾನವಾದುದರಿಂದ ಆ ರೂಪಗಳ ಉಪಲಬ್ಧೇಃ=ದರ್ಶನವೂ ಸಾಮಾನ್ಯಾತ್=ಸಮಾನವಾದುದರಿಂದ ಯಾವುದೋ ಒಂದು ಭಗವದ್ರೂಪದ ದರ್ಶನವಾದರೂ ಮೋಕ್ಷವಾಗುತ್ತದೆ, ಎನ್ನುವುದು ಸರಿಯಲ್ಲ. ಅವರವರ ಬಿಂಬರೂಪವಿಶೇಷದ ದರ್ಶನದಿಂದಾಗಿಯೇ ಮೋಕ್ಷವಾಗುತ್ತದೆ. ಮೃತ್ಯುವತ್=ಮರಣದಂತೆ। ಜೀವನಿಗೆ ಆಗುವ ಎಲ್ಲಾ ಮರಣಗಳೂ ಮೋಕ್ಷವಲ್ಲ, ಪ್ರಾರಬ್ಧಕರ್ಮಾವಸಾನದಲ್ಲಿ ಆಗುವ ಮರಣವೇ ಮೋಕ್ಷ. ಅದರಂತೆ, ದರ್ಶನ ವಿಶೇಷವೇ ಮೋಕ್ಷಸಾಧನ.

ಹಾಗಾದರೆ ಭಗವಂತನ ಬಿಂಬೇತರರೂಪಗಳ ದರ್ಶನವು ವ್ಯರ್ಥವೋ? ಅಲ್ಲ. ಅದರಿಂದ ಮಹರಾದಿಲೋಕಗಳ ಪ್ರಾಪ್ತಿಯಾಗುತ್ತದೆ. ನಹಿ ಲೋಕಾಪತ್ತಿಃ ಮುಕ್ತಿಃ= ಮಹರಾದಿಲೋಕಪ್ರಾಪ್ತಿಯೇ ಮೋಕ್ಷವಲ್ಲ.

**ಇಲ್ಲಿಗೆ ನ ಸಮಾನ್ಯಾಧಿಕರಣವು ಮುಗಿಯಿತು.**

## ೩೪. ಪರೇಣಾಧಿಕರಣಮ್ (ತಾದ್ವಿಧ್ಯಾಧಿಕರಣಮ್)

'ಭಕ್ತಿರೇವೈನಂ ನಯತಿ ಭಕ್ತಿರೇವೈನಂ ದರ್ಶಯತಿ ಭಕ್ತಿವಶಃ ಪುರುಷೋ ಭಕ್ತಿರೇವ ಭೂಯಸೀ' ಇತಿ ಮಾಠರಶ್ರುತೇರ್ನ ಪರಮಾತ್ಮನಾ ದರ್ಶನಮಿತಿ ಚೇತ್, ನ । 'ತಸ್ಯೈಷ ಆತ್ಮಾ ವಿಶತೇ ಬ್ರಹ್ಮಧಾಮ' (ಮು. 3.2.4) ಇತಿ ಶ್ರುತೇಃ ।

ಕಥಂ ತರ್ಹ್ಯೇಷಾ ಶ್ರುತಿಃ –

**॥ ಓಂ ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ ತ್ವನುಬಂಧಃ ಓಂ ॥ ೫೪ ॥**

ಪರಮಾತ್ಮೈವ ಭಕ್ತ್ಯಾ ದರ್ಶನಂ ಪ್ರಾಪ್ಯ ಮುಕ್ತಿಂ ದದಾ(ತೀ)ತಿ ಪ್ರಧಾನಸಾಧನತ್ವಾದ್ ಭಕ್ತಿಃ ಕರಣತ್ವೇನೋಚ್ಯತೇ । ಮಾಯಾವೈಭವೇ ಚ-

'ಭಕ್ತಿಸ್ಥಃ ಪರಮೋ ವಿಷ್ಣುಸ್ತಯೈವೈನಂ ವಶಂ ನಯೇತ್ ।
ತಯೈವ ದರ್ಶನಂ ಯಾತಃ ಪ್ರದದ್ಯಾನ್ಮುಕ್ತಿಮೇತಯಾ ॥
ಸ್ನೇಹಾನುಬಂಧೋ ಯಸ್ತಸ್ಮಿನ್ ಬಹುಮಾನಪುರಸ್ಸರಃ ।
ಭಕ್ತಿರಿತ್ಯುಚ್ಯತೇ ಸೈವ ಕಾರಣಂ ಪರಮೀಶಿತುಃ ॥' ಇತಿ ।

ಸರ್ವಶಬ್ದಾನಾಂ ಬ್ರಹ್ಮಣಿ ಪ್ರವೃತ್ತೇಶ್ಚ ॥

'ಭಕ್ತಿರೇವೈನಂ ನಯತಿ' ಇತ್ಯಾದಿಮಾಠರಶ್ರುತಿಯು ಭಕ್ತಿಯೇ ಭಗವದ್ದರ್ಶನಕ್ಕೆ ಸಾಧನ ಎನ್ನುತ್ತದೆ. ಆದ್ದರಿಂದ ಭಗವಂತನು ದರ್ಶನಕ್ಕೆ ಕಾರಣನಲ್ಲ. ಹೀಗೆ ಹೇಳುವುದು ಯುಕ್ತವಲ್ಲ. 'ತಸ್ಯೈಷ ಆತ್ಮಾ ವಿಶತೇ ಬ್ರಹ್ಮಧಾಮ' ಎಂಬ ಶ್ರುತಿಯು ಭಗವಂತನೇ ಭಕ್ತರಿಗೆ ದರ್ಶನ ಕೊಡುತ್ತಾನೆ, ಎಂದಿರುವುದರಿಂದ.

ಹಾಗಾದರೆ 'ಭಕ್ತಿರೇವೈನಂ ನಯತಿ' ಎಂಬ ಶ್ರುತಿ ಹೇಗೆ ಉಪಪನ್ನವಾಗುತ್ತದೆ? (ಅದಕ್ಕೆ ಈ ಸೂತ್ರ ಉತ್ತರ ಕೊಡುತ್ತದೆ) ಪರಮಾತ್ಮನೇ ಸಾಧಕನ ಭಕ್ತಿಯಿಂದಾಗಿ ದರ್ಶನವನ್ನು ಕೊಟ್ಟು ಮುಕ್ತಿಯನ್ನು ನೀಡುತ್ತಾನೆ. ಆದರೂ ಸಾಧನಗಳಲ್ಲೆಲ್ಲ ಭಕ್ತಿಯೇ ಪ್ರಧಾನವಾದುದರಿಂದ ಅದನ್ನೇ ಕರಣ ಎಂದು ಹಿಂದಿನ ಮಾಠರಶ್ರುತಿಯು ಹೇಳುತ್ತದೆ. 'ಮಾಯಾವೈಭವ' ಆಗಮದಲ್ಲಿ ಹೀಗಿದೆ—ಭಕ್ತಿಸ್ಥನಾದ ಸರ್ವೋತ್ತಮ

ನಾದ ವಿಷ್ಣುವು ಭಕ್ತಿಯಿಂದಲೇ ತನ್ನನ್ನು ವಶಮಾಡಿಕೊಳ್ಳುತ್ತಾನೆ. (ಅಂದರೆ, ತಾನು ಭಕ್ತಪರಾಧೀನನೆಂದು ತೋರಿಸಿಕೊಳ್ಳುತ್ತಾನೆ–ತದ್ವಶೋಽಹಮಿತಿ ಜ್ಞಾಪಯೇತ್– ತ.ಪ್ರ.) ಅಂತಹ ಭಕ್ತಿಯಿಂದಲೇ ಭಕ್ತನಿಗೆ ದರ್ಶನ ನೀಡಿ, ಅದರಿಂದಲೇ ಮುಕ್ತಿಯನ್ನೂ ಕೊಡುತ್ತಾನೆ. ವಿಷ್ಣುವಿನಲ್ಲಿ ಬಹುಮಾನಪೂರ್ವಕವಾದ ಸ್ನೇಹಭಾವವೇ ಭಕ್ತಿ ಎನಿಸುತ್ತದೆ. ಪರಮಾತ್ಮನಿಗೆ ತನ್ನ ದರ್ಶನ ನೀಡಲು ಅಂತಹ ಭಕ್ತಿಯೇ ಕಾರಣ.''

ಸಕಲಶಬ್ದಗಳೂ ಬ್ರಹ್ಮನಲ್ಲೇ ಸಮನ್ವಯವಾಗುವುದರಿಂದ 'ಭಕ್ತಿರೇವೈನಂ ಗಮಯತಿ' ಎಂಬ ಶ್ರುತಿಯು ಉಪಪನ್ನವಾಗುತ್ತದೆ. (ಭಕ್ತಿರೇವ ಎಂದರೆ ಭಗವಂತನೇ ಎಂದರ್ಥ.)

**ವಿವರಣೆ**—ಮಾಠರ ಶ್ರುತಿಯು ಭಕ್ತಿಯೇ ಭಗವದ್ದರ್ಶನವನ್ನು ಮಾಡಿಸುತ್ತದೆ, ಎನ್ನುತ್ತದೆ. ಆದ್ದರಿಂದ ಅವ್ಯಕ್ತಸ್ವಭಾವದ ಪರಮಾತ್ಮನೇ ಭಕ್ತನಲ್ಲಿ ಪ್ರಸನ್ನನಾಗಿ ದರ್ಶನವನ್ನು ನೀಡುತ್ತಾನೆ, ಎಂದು ಹಿಂದೆ(3.2.17) ಹೇಳಿದ್ದು ಉಚಿತವಲ್ಲ ಎಂದು ಪೂರ್ವಪಕ್ಷ. ಇದಕ್ಕುತ್ತರ—ಪ್ರಸನ್ನನಾದ ಭಗವಂತನೇ ತನ್ನ ದರ್ಶನವನ್ನು ಕೊಡುತ್ತಾನೆ, ಎನ್ನುವುದೇ ಶ್ರುತಿಸಿದ್ಧಾಂತ. ಅವನು ಪ್ರಸನ್ನನಾಗುವುದು ಭಕ್ತಿಯಿಂದ. ಆದ್ದರಿಂದ ದರ್ಶನಕ್ರಿಯೆಗೆ ಕರ್ತೃ ಪರಮಾತ್ಮ, ಭಕ್ತಿಯು ಕರಣ. ಕೆಲವೊಮ್ಮೆ ಕರಣವನ್ನೂ ಕರ್ತೃವನ್ನಾಗಿ ಪರಿಗಣಿಸುವುದಿದೆ. ಉದಾಹರಣೆಗೆ—'ಹಂತಾ ರಾಮಶರಃ' (ರಾಮನ ಬಾಣ ಕೊಂದಿತು.) 'ರಾಮನು ಬಾಣದಿಂದ ಕೊಂದ' ಎನ್ನುವ ಬದಲು 'ಬಾಣವೇ ಕೊಂದಿತು' ಎನ್ನಲಾಗುತ್ತದೆ. ಅದರಂತೆ ಪ್ರಕೃತ ಶ್ರುತಿಯಲ್ಲೂ ಭಕ್ತಿಯೇ ಭಗವದ್ದರ್ಶನವನ್ನು ಮಾಡುತ್ತದೆ, ಎನ್ನಲಾಗಿದೆ. ಹೀಗೆ ಮಾಠರಶ್ರುತಿಗೆ ಅರ್ಥವನ್ನು ಹೇಳಬೇಕು.

ಅಥವಾ, ಭಕ್ತಿ ಎಂದರೂ ಭಗವಂತನೇ. ಅವನು ಸರ್ವಶಬ್ದವಾಚ್ಯ. 'ಭಕ್ತಿರೇವೈನಂ ನಯತಿ' ಎಂದರೆ 'ಭಕ್ತಿಶಬ್ದವಾಚ್ಯನಾದ ಭಗವಂತನೇ ಮೋಕ್ಷ ಕೊಡುತ್ತಾನೆ' ಎಂದು ಅರ್ಥ. ಮೋಕ್ಷಕ್ಕೆ ನಿತ್ಯಕರ್ಮಾನುಷ್ಠಾನಾದಿ ಅನೇಕಸಾಧನಗಳಿದ್ದರೂ ಅವುಗಳಲ್ಲೆಲ್ಲ ಭಕ್ತಿಯೇ ಪ್ರಧಾನವಾದುದರಿಂದ ಭಕ್ತಿಯನ್ನೇ ಇಲ್ಲಿ, ಪರಿಗಣಿಸಲಾಗಿದೆ. ಸತ್ಕರ್ಮಗಳನ್ನು ಭಕ್ತಿಪೂರ್ವಕವಾಗಿ ಮಾಡಿದರೆ ಮಾತ್ರ ಅವುಗಳು ಮೋಕ್ಷಸಾಧನಗಳಾಗುತ್ತವೆ. ಹರಿವಂಶ ಹೇಳುತ್ತದೆ—

ಧ್ಯಾನಂ ಚ ಗುರುಶುಶ್ರೂಷಾ ನಿತ್ಯ–ನೈಮಿತ್ತಿಕಾ ಕ್ರಿಯಾಃ ।
ತೀರ್ಥ–ದಾನ–ಜಪಾದ್ಯಾಶ್ಚ ಸ್ವಾಧ್ಯಾಯೋ ಹರಿಕೀರ್ತನಮ್ ।

ದ್ವಾದಶ್ಯಾದಿವ್ರತಂ ಚೈವ ತುಲಸ್ಯಾದ್ಯೈರಥಾರ್ಚನಮ್ ।
ಸರ್ವಂ ಭಕ್ತ್ಯರ್ಥಮುದ್ದಿಷ್ಟಂ ನಿಷ್ಫಲಂ ತತ್ ತಯಾ ವಿನಾ ॥

**ಶ್ರುತ್ಯರ್ಥ**—ಭಕ್ತಿರೇವ = ಭಕ್ತಿಯೇ ಏನಂ = ಅಧಿಕಾರಿಯನ್ನು ಏನಂ = ಪರಮಾತ್ಮನ ಕಡೆಗೆ ನಯತಿ=ಒಯ್ಯುತ್ತದೆ. ಭಕ್ತಿರೇವ ಏನಂ=ವಿಷ್ಣುವನ್ನು ದರ್ಶಯತಿ=ತೋರಿಸುತ್ತದೆ. ಪುರುಷಃ=ಭಗವಂತನು ಭಕ್ತಿವಶಃ=ಭಕ್ತಿಯ ಅಧೀನ, ಭಕ್ತಿರೇವ ಭೂಯಸೀ=ಭಕ್ತಿಯೇ ಶ್ರೇಷ್ಠವಾದುದು. ಇದು ಮಾಠರಶ್ರುತಿಯ ಅರ್ಥ.

**ಮುಂಡಕಶ್ರುತಿ** — ಏತೈರುಪಾಯೈರ್ಯತತೇ ಯಸ್ತು ವಿದ್ವಾನ್
ತಸ್ಯೈಷ ಆತ್ಮಾ ವಿಶತೇ ಬ್ರಹ್ಮಧಾಮ ॥ (ಮುಂ.3.24)

ಏತೈರುಪಾಯೈಃ=ಪ್ರವಚನಾದಿ ಸಾಧನಗಳಿಂದ ಯಸ್ತು=ಯಾವ ವಿದ್ವಾನ್=ಜ್ಞಾನಿಯು ಯತತೇ=ಪ್ರಯತ್ನಿಸುವನೋ ತಸ್ಯ=ಅವನಿಗಾಗಿ ಏಷ ಆತ್ಮಾ=ಈ ಪರಮಾತ್ಮನು ಬ್ರಹ್ಮಧಾಮ=ಬ್ರಹ್ಮನ ಮುಖ್ಯ ಆವಾಸಸ್ಥಾನವಾದ ವಾಯುದೇವನನ್ನು ವಿಶತೇ= ಪ್ರವೇಶಿಸುತ್ತಾನೆ.

ತತ್ತ್ವಪ್ರದೀಪದಲ್ಲಿ 'ತಸ್ಯೈಷ ಆತ್ಮಾ' ಎಂಬ ಶ್ರುತಿಗೆ ಹೀಗೆ ಅರ್ಥವನ್ನು ಹೇಳಲಾಗಿದೆ. ಏಷ ಆತ್ಮಾ ತಸ್ಯ=ಸಾಧಕನಿಗೆ ಬ್ರಹ್ಮಧಾಮ=ಭಕ್ತನ ಹೃದಯವನ್ನು ವಿಶತೇ=ಪ್ರವೇಶಿಸುತ್ತಾನೆ, ಭಕ್ತರಿಗೆ ದರ್ಶನ ಕೊಡುವುದಕ್ಕಾಗಿ ಅವನ ಹೃತ್ಕಮಲವನ್ನು ಪ್ರವೇಶ ಮಾಡುತ್ತಾನೆ. ಹೃದಯದಲ್ಲಿ ಭಗವಂತನು ನಿತ್ಯಸನ್ನಿಹಿತನಾದುದರಿಂದ 'ಬ್ರಹ್ಮನು ದರ್ಶನವನ್ನು ಕೊಡುತ್ತಾನೆ' ಎಂದು ಶ್ರುತಿಯ ಅಭಿಪ್ರಾಯ. (ಬ್ರಹ್ಮಪುರಂ ಹೃದಯಂ, ಏಷಃ ಪರಮಾತ್ಮಾ ವಿಶತೇ, ತತ್ರ ದೃಶ್ಯತೇ ಇತ್ಯರ್ಥಃ–ತ.ಪ್ರ.)

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಓಂ ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ ತ್ವನುಬಂಧಃ ಓಂ ॥** (ಅತ್ರ ಭಕ್ತೇಃ ಸ್ವಾತಂತ್ರ್ಯೇಣ ದೃಷ್ಟಿಹೇತುತ್ವಂ ನೇತ್ಯುಚ್ಯತೇ। ಚ ಏವ, ತುರಾವರ್ತತೇ। ಪ್ರಸ್ತಾವಾತ್ ದೃಷ್ಟ್ಯಾದಿಕಮ್ ಇತ್ಯನ್ವೇತಿ।

ಪರೇಣ ಚ=ಪರಮಾತ್ಮನೈವ ದೃಷ್ಟ್ಯಾದಿಕಂ, ನ ಭಕ್ತ್ಯಾ ಸ್ವತಂತ್ರಯಾ । ಕುತಃ ?

'ಏತೈರುಪಾಯೈರ್ಯತತೇ ಯಸ್ತು ವಿದ್ವಾನ್ ತಸ್ಯೈಷ ಆತ್ಮಾ ವಿಶತೇ ಬ್ರಹ್ಮಧಾಮ ।' ಇತಿ ಶ್ರುತೇರಿತಿ ಭಾವಃ । ಕಥಂ ತರ್ಹಿ 'ಭಕ್ತಿರೇವೈನಂ' ಇತಿ ಶ್ರುತಿರಿತ್ಯತ ಆಹ—ಶಬ್ದಸ್ಯೇತಿ ॥ ಭಕ್ತಿರೇವ, ಇತಿಶಬ್ದಸ್ಯ ತಾದ್ವಿಧ್ಯಂ ತು=ಭಕ್ತೇಃ ಸ್ವಾತಂತ್ರ್ಯೇಣ

ದೃಷ್ಟ್ಯಾದಿಹೇತುತ್ವವಾಚಿತ್ವಂ ತು ತಸ್ಯಾಃ ಕರಣತ್ವಾತ್, ಯುಕ್ತಮಿತಿ ಶೇಷಃ । 'ಹಂತಾ ರಾಮಶರಃ' ಇತಿವದುಪಚಾರ ಇತಿ ಭಾವಃ । ಸತ್ಸ್ವಪಿ ಅನ್ಯೇಷು ಭಕ್ತೇಃ ವಿಶಿಷ್ಯೋಕ್ತಿಃ ಕುತಃ? 'ಭೂಯಸ್ತ್ವಾತ್ತು ಅನುಬಂಧಃ ।' ಅನುಬಂಧಸ್ತು=ಭಕ್ತಿಸ್ತು ಭೂಯಸ್ತ್ವಾತ್= ಕರಣೇಷು ಪ್ರಧಾನತ್ವಾದುಕ್ತ ಇತ್ಯರ್ಥಃ ।)

ಈ ಅಧಿಕರಣದಲ್ಲಿ ಭಕ್ತಿಯು ಸ್ವತಂತ್ರವಾಗಿ ಭಗವದ್ದರ್ಶನಕ್ಕೆ ಕಾರಣವಲ್ಲ, ಎಂದು ಸಾಧಿಸಲಾಗಿದೆ. ಪರೇಣ ಚ=ಪರಮಾತ್ಮನಿಂದಲೇ ಭಗವದ್ದರ್ಶನವಾಗುತ್ತದೆ, ಭಕ್ತಿಯಿಂದಲ್ಲ. ಅದಕ್ಕೆ ಶ್ರುತಿಯೇ ಆಧಾರ. ಹಾಗಾದರೆ ಭಕ್ತಿಯೇ ದರ್ಶನ ಮಾಡಿಸುತ್ತದೆ, ಎನ್ನುವ ಶ್ರುತಿಗೆ ಏನರ್ಥ? ಶಬ್ದಸ್ಯ='ಭಕ್ತಿರೇವ' ಎಂಬ ಶಬ್ದಕ್ಕೆ ತಾದ್ವಿಧ್ಯಂ (ತದ್ವಿಧಸ್ಯ ಭಾವಃ=ತಾದ್ವಿಧ್ಯಂ)=ಭಕ್ತಿಗೆ ಸ್ವಾತಂತ್ರ್ಯೇಣ ದರ್ಶನಹೇತುತ್ವ ವಾಚಕತ್ವವಾದರೋ, ಭಕ್ತಿಯು ಕರಣ ಎಂಬ ಅಭಿಪ್ರಾಯದಿಂದ. ಇತರ ಸಾಧನಗಳಿದ್ದರೂ ಅನುಬಂಧಸ್ತು=ಭಕ್ತಿಯಾದರೋ ಭೂಯಸ್ತ್ವಾತ್ತು=ಪ್ರಧಾನ ವಾದುದರಿಂದ ಶ್ರುತಿಯಲ್ಲಿ ಅದೇ ಪರಿಗಣಿಸಲ್ಪಟ್ಟಿದೆ.

## ಅದ್ವೈತದರ್ಶನದಲ್ಲಿ ಸೂತ್ರಾರ್ಥ

ಅದ್ವೈತ ಮತ್ತು ವಿಶಿಷ್ಟಾದ್ವೈತಭಾಷ್ಯಗಳಲ್ಲಿ 'ಲಿಂಗಭೂಯಸ್ತ್ವಾತ್...' (ಸೂ.45) ಎಂಬ ಸೂತ್ರದಿಂದ 'ಪರೇಣ ಚ...'(ಸೂ.54) ಎಂಬ ಸೂತ್ರದವರೆಗೆ ಒಟ್ಟು ಒಂಭತ್ತು ಸೂತ್ರಗಳು ಒಂದು ಅಧಿಕರಣ. ದ್ವೈತದರ್ಶನದಲ್ಲಿ ಹತ್ತು ಸೂತ್ರಗಳಾಗುತ್ತವೆ. ಆದರೆ, ಅದ್ವೈತಭಾಷ್ಯದಲ್ಲಿ 51 ಮತ್ತು 52ನೇ ಸೂತ್ರಗಳನ್ನು ಸೇರಿಸಿ ಒಂದೇ ಸೂತ್ರವನ್ನಾಗಿ ಪರಿಗಣಿಸಲಾಗಿದೆ. ಹೀಗಾಗಿ ಒಂಬತ್ತೇ ಸೂತ್ರಗಳು.

**॥ ಲಿಂಗಭೂಯಸ್ತ್ವಾತ್ ತದ್ಧಿ ಬಲೀಯಸ್ತದಪಿ ॥**—ವಾಜಸನೇಯಶಾಖೆಯ ಅಗ್ನಿರಹಸ್ಯದಲ್ಲಿ (10.5.3) 'ನೈವ ವಾ ಇದಮಗ್ರೇ ಸದಾಸೀತ್' ಎಂಬ 'ಬ್ರಾಹ್ಮಣ' ಪ್ರಕರಣದಲ್ಲಿ ಸೃಷ್ಟಿಯ ಪೂರ್ವದಲ್ಲಿ ಸತ್–ಅಸತ್ ಇರಲಿಲ್ಲ ಎಂದು ಹೇಳಿ ಮನಸ್ಸಿನ ಪ್ರಾದುರ್ಭಾವವನ್ನು ನಿರೂಪಿಸಿ 'ತನ್ಮನಃ ಆತ್ಮನಃ ಅಗ್ನೀನ್ ಅಪಶ್ಯತ್' ಎನ್ನಲಾಗಿದೆ. ಮುಂದೆ 'ತತ್ ಷಟ್ತ್ರಿಂಶತ್–ಸಹಸ್ರಾಣಿ ಅಪಶ್ಯತ್ ಆತ್ಮನೋಽಗ್ನೀನ್ ಅರ್ಕಾನ್ ಮನೋಮಯಾನ್' ಎಂದಿದೆ. ಮನುಷ್ಯಾಯುಷ್ಯ ನೂರುವರ್ಷ. ಒಂದು ವರ್ಷಕ್ಕೆ 360 ದಿನಗಳು. 100 ವರ್ಷಕ್ಕೆ 36,000 ದಿನಗಳು. ಅದಕ್ಕನುಗುಣವಾಗಿ ಮನೋವೃತ್ತಿಗಳೂ 36,000. ಇವುಗಳನ್ನು ಇಟ್ಟಿಗೆಗಳೆಂದು ಪರಿಗಣಿಸಿ ಮನಸ್ಸೆಂಬ ಅಗ್ನಿಯನ್ನು ಚಯನ ಮಾಡಬೇಕು. ಇದರಂತೆ 'ವಾಕ್‌ಚಿತ್, ಪ್ರಾಣಚಿತ್...' ಎಂದು ಎಲ್ಲಾ

ಇಂದ್ರಿಯವೃತ್ತಿಗಳಿಗೆ ಅನುಗುಣವಾಗಿ ಬೇರೆಬೇರೆ ಅಗ್ನಿಚಯನವು ಶ್ರುತವಾಗಿದೆ. ಈ ಅಗ್ನಿಚಯನ ಕ್ರಿಯಾಂಗವಲ್ಲ. ವಿದ್ಯಾತ್ಮಕ. ಲಿಂಗಭೂಯಸ್ತ್ವಾತ್=ಅನೇಕ ಲಿಂಗಗಳು ಇದಕ್ಕೆ ಸಾಧಕವಾಗಿರುವುದರಿಂದ. 'ಯತ್ಕಿಂಚೇಮಾನಿ ಭೂತಾನಿ ಮನಸಾ ಸಂಕಲ್ಪಯಂತಿ ತೇಷಾಮೇವ ಸಾ ಕೃತಿಃ' ಪ್ರಾಣಿಗಳು ಮಾಡುವ ಸಂಕಲ್ಪ-ವಿಕಲ್ಪಾದಿಗಳೆಲ್ಲವೂ ಅಗ್ನಿಸಂಪಾದನೆ, ಎನ್ನುವ ಮೂಲಕ ಸ್ವಾತಂತ್ರ್ಯೇಣ 'ಭಾವನಾಂ'ಗತ್ವವು ತಿಳಿಯುತ್ತದೆ. (ಈ ರೀತಿ ಅನುಸಂಧಾನವನ್ನು ಮಾಡಬೇಕು.) ಕ್ರಿಯಾಂಗತ್ವವು ವಿಧಿಮಾತ್ರವೇದ್ಯ. ಇದು ವಿದ್ಯಾಂಗತ್ವಜ್ಞಾಪಕಲಿಂಗ. ಇಂತಹ ಅನೇಕ ಲಿಂಗಗಳಿಂದ ಕ್ರಿಯಾಪ್ರಕರಣವು ಬಾಧಿತವಾಗಿ ಇದು ವಿದ್ಯಾಂಗವೆಂದೇ ತಿಳಿಯುತ್ತದೆ.

**॥ ಪೂರ್ವವಿಕಲ್ಪಃ ಪ್ರಕರಣಾತ್ ಸ್ಯಾತ್ ಕ್ರಿಯಾ ಮಾನಸವತ್ ॥** ಹಿಂದೆ ಹೇಳಿರುವ 'ಇಷ್ಟಿಕಾಭಿರಗ್ನಿಂ ಚಿನುತೇ' ಎಂದು ಹೇಳಿರುವ ಅಗ್ನಿಚಯನದ ಅಂಗವಾಗಿ ವಿಕಲ್ಪಃ=ಮನೋಗ್ನಿರೂಪವಾದ ಪ್ರಕಾರವಿಶೇಷವನ್ನು ಈ ವಾಕ್ಯದಲ್ಲಿ ಹೇಳಲಾಗಿದೆ. 'ಪ್ರಕರಣ' ರೂಪ ಪ್ರಮಾಣದಿಂದ ಈ ಮಾನಸಾಗ್ನಿಯೂ ಕ್ರಿಯಾ=ಕ್ರಿಯಾಂಗವೇ ಸ್ಯಾತ್=ಆಗುತ್ತದೆ. ಅದಕ್ಕೆ ಉದಾಹರಣೆ 'ಮಾನಸವತ್'. ದ್ವಾದಶಾಹಕ್ರತುವಿನಲ್ಲಿ ಹತ್ತನೇ ದಿನದಂದು 'ಅನಯಾ ತ್ವಾ ಪಾತ್ರೇಣ ಸಮುದ್ರಂ ರಸಯಾ ಪ್ರಾಜಾಪತ್ಯಂ ಮನೋಗ್ರಹಂ' ಎಂದು ಪ್ರಜಾಪತಿದೇವತೆಗಾಗಿ ಪೃಥಿವಿಯನ್ನೇ ಪಾತ್ರೆ ಎಂದು ಅನುಸಂಧಾನ ಮಾಡಿ ಸಮುದ್ರವನ್ನು ಸೋಮವೆಂದು ತಿಳಿಯಬೇಕು, ಎನ್ನಲಾಗಿದೆ. ಈ ಮಾನಸ ಅನುಸಂಧಾನವು ಯಜ್ಞಾಂಗವಾಗುವಂತೆ ಪ್ರಕೃತಾಗ್ನಿಚಯನವೂ ಕ್ರಿಯಾಂಗವಾಗಬಹುದು, ಎಂದು ಪೂರ್ವಪಕ್ಷ.

**॥ ಅತಿದೇಶಾಚ್ಚ ॥** 'ಷಟ್‌ತ್ರಿಂಶತ್‌ಸಹಸ್ರಾಣಿ ಅಗ್ನಯಃ ಅರ್ಕಾಃ ತೇಷಾಮೇಕೈಕ ಏವ ತಾವಾನ್ ಯಾವಾನಸೌ ಪೂರ್ವಃ' ಇದು ಅತಿದೇಶವಾಕ್ಯ. 'ಯಾವಾನ್ ಅಸೌ ಪೂರ್ವಃ' ಎಂದು ಪೂರ್ವದಲ್ಲಿ ಕ್ರಿಯಾಪ್ರವೇಶ ಇರುವ ಇಷ್ಟಿಕಾದಲ್ಲಿ ಚಿತವಾದ ಅಗ್ನಿಯಂತೆ 36,000 ಮನೋವೃತ್ತಿರೂಪ ಇಷ್ಟಿಕಾಚಿತವಾದ ಅಗ್ನಿಯೂ 'ತಾವಾನ್' ಎಂದು ಅತಿದೇಶ ಮಾಡಿರುವುದರಿಂದ ಈ ಮನಶ್ಚಿದಗ್ನಿಯೂ ಕ್ರಿಯಾಂಗವೇ ಆಗಿರಬೇಕು. (ಇದೂ ಪೂರ್ವಪಕ್ಷಸೂತ್ರ.)

**॥ ವಿದ್ಯೈವ ತು ನಿರ್ಧಾರಣಾತ್ ॥** ಸೂತ್ರದ ತುಶಬ್ದವು ಹಿಂದಿನ ಎರಡು ಸೂತ್ರಗಳಲ್ಲಿ ಹೇಳಿರುವುದರ ನಿರಾಕರಣೆಯನ್ನು ಸೂಚಿಸುತ್ತದೆ. ಈ ಮನಶ್ಚಿದಾದಿ ಅಗ್ನಿಗಳು ವಿದ್ಯೈವ=ವಿದ್ಯಾತ್ಮಕವೇ ಆಗಿವೆ. ಕ್ರಿಯಾಶೇಷಗಳಲ್ಲ. ನಿರ್ಧಾರಣಾತ್='ತೇ ಹೈತೇ ವಿದ್ಯಾಚಿತ ಏವ' ಎಂದು ಅವಧಾರಣ (ಏವಶಬ್ದಾರ್ಥ) ಮಾಡಿರುವುದರಿಂದ.

ಆದ್ದರಿಂದ ಇದು ಅಸ್ವತಂತ್ರವಾದ ಅನುಸಂಧಾನವೇ ಹೊರತು ಕ್ರಿಯಾಂಗವಾಗಿರುವ ಅಗ್ನಿಚಯನವಲ್ಲ.

**॥ ದರ್ಶನಾಚ್ಚ ॥** ಇವುಗಳು ಕರ್ಮಾಂಗಗಳಲ್ಲ, ಸ್ವತಂತ್ರಗಳು ಎನ್ನುವುದಕ್ಕೆ ಲಿಂಗಭೂಯಸ್ತ್ವಾತ್ (3.3.44) ಎಂಬ ಸೂತ್ರದಲ್ಲಿ ಕಾರಣಗಳನ್ನು ತಿಳಿಸಲಾಗಿದೆ.

**॥ ಶ್ರುತ್ಯಾದಿಬಲೀಯಸ್ತ್ವಾಚ್ಚ ನ ಬಾಧಃ ॥** ಪ್ರಕರಣವಶಾತ್ ಮನಶ್ಚಿದಾದಿಗಳು ಯಜ್ಞಾಂಗಗಳೆಂದು ತಿಳಿಯಲ್ಪಟ್ಟಿದ್ದರೂ, ಹಿಂದೆ ಹೇಳಿರುವ ಲಿಂಗ ಹಾಗೂ ಅವ್ಯವಹಿತ ಪೂರ್ವ ಸೂತ್ರದಲ್ಲಿ ಹೇಳಿರುವ ಶ್ರುತಿಗಳು ಪ್ರಕರಣಕ್ಕಿಂತಲೂ ಪ್ರಬಲವಾಗಿರುವುದ ರಿಂದ ಸ್ವತಂತ್ರಾನುಸಂಧಾನರೂಪವೇ ಆಗಿವೆ, ಕ್ರಿಯಾಂಗಗಳಲ್ಲ.

**॥ ಅನುಬಂಧಾದಿಭ್ಯಃ ಪ್ರಜ್ಞಾಂತರಪೃಥಕ್ತ್ವವದ್ ದೃಷ್ಟಶ್ಚ ತದುಕ್ತಮ್ ॥** ದ್ವೈತಭಾಷ್ಯದಲ್ಲಿ 'ಅನುಬಂಧಾದಿಭ್ಯಃ' ಎಂದು ಪ್ರತ್ಯೇಕ ಸೂತ್ರ. ಅದ್ವೈತಭಾಷ್ಯದಲ್ಲಿ ಅದು ಸೂತ್ರಖಂಡ. ಎರಡು ಸೂತ್ರಗಳು ಸೇರಿ ಅಖಂಡಸೂತ್ರ. 'ದೃಷ್ಟಿಶ್ಚ' ಎಂದು ದ್ವೈತಸೂತ್ರಪಾಠ. ಇಲ್ಲಿ ದೃಷ್ಟಶ್ಚ ಎಂದು ಪಾಠ.

ಮನೋವೃತ್ತಿಗಳಲ್ಲಿ ಕ್ರಿಯಾಂಗಗಳ ಯೋಜನೆಯೇ ಅನುಬಂಧ. ಶ್ರುತಿಯು ಅಗ್ನಿಚಯನಕ್ರಿಯೆಯ ಅಂಗಗಳನ್ನು ಬೇರೆಬೇರೆ ಮನೋವೃತ್ತಿಗಳನ್ನಾಗಿ ನಿರೂಪಿಸುತ್ತದೆ. 'ತೇ ಮನಸೈವಾಧೀಯಂತ, ಮನಸಾ ಅಚೀಯಂತ, ಮನಸೈವ ಗ್ರಹಾ ಅಗೃಹ್ಯಂತ, ಮನಸಾ ಅಸ್ತುವನ್, ಮನಸಾ ಅಶಂಸನ್, ಯತ್ಕಿಂಚ ಯಾಜ್ಞಿಯಂ ಕರ್ಮ ಮನಸೈವ ತೇಷು ತನ್ಮನೋಮಯೇಷು ಮನಶ್ಚಿತ್ಸು ಮನೋಮಯಮೇವ ಕ್ರಿಯಂತೇ' ಎಂದು ಆದಾನ, ಗ್ರಹಗ್ರಹಣ, ಸ್ತೋತ್ರ, ಶಂಸನ ಇವೆಲ್ಲವೂ ಮಾನಸ ಅನುಸಂಧಾನರೂಪವಾದುದು. ಆದ್ದರಿಂದ ಇದು ಕ್ರಿಯಾಂಗಚಯನವಲ್ಲ. ವಿದ್ಯಾರೂಪವಾದುದು.

ಪ್ರಜ್ಞಾಂತರಪೃಥಕ್ತ್ವವತ್, ಹೇಗೆ ಶಾಂಡಿಲ್ಯವಿದ್ಯೆಯೇ ಮೊದಲಾದವು ಕರ್ಮಕ್ಕಿಂತ ಭಿನ್ನವಾದ, ವಿದ್ಯಾಂತರಗಳಿಂದಲೂ ಬೇರೆಯಾದ ಸ್ವತಂತ್ರವಿದ್ಯೆಗಳೋ ಅದರಂತೆ ಇದೂ ಭಿನ್ನವಾದ ವಿದ್ಯೆ. ಕರ್ಮಪ್ರಕರಣಪಠಿತವಾದರೂ ಇದು ಕರ್ಮಾಂಗವಲ್ಲ. ದೃಷ್ಟಶ್ಚ– ಹೇಗೆ 'ಅವೇಷ್ಟಿಯು' ಬ್ರಾಹ್ಮಣಾದಿವರ್ಣತ್ರಯ ಸಂಬಂಧಾತ್ ರಾಜಮಾತ್ರಕರ್ತೃಕ–ರಾಜಸೂಯಪ್ರಕರಣಪಠಿತವಾಗಿದ್ದರೂ ಪ್ರಕರಣಕ್ಕಿಂತ ಬೇರ್ಪಡಿಸಿ (ಪೃಥಕ್ತ್ವ) ಸ್ವತಂತ್ರೇಷ್ಟಿ ಎಂದು ಪರಿಗಣಿಸಲ್ಪಡುವುದೋ ಅದರಂತೆ. ತದುಕ್ತಂ= ಇದನ್ನು ''ಕ್ರತ್ವರ್ಥಾಯಾಮಿತಿ ಚೇನ್ನ ವರ್ಣತ್ರಯ ಸಂಯೋಗಾತ್'' (ಜೈ.ಸೂ.11.4.7.) ಎಂಬ ಸೂತ್ರದಲ್ಲಿ ಹೇಳಲಾಗಿದೆ.

**॥ ನ ಸಾಮಾನ್ಯಾದಪ್ಯುಪಲಬ್ಧೇರ್ಮೃತ್ಯುವನ್ನಹಿ ಲೋಕಾಪತ್ತಿಃ ॥** 'ಕ್ರಿಯಾಮಾನಸವತ್' ಎಂದು 45ನೆಯ ಸೂತ್ರದಲ್ಲಿ ಮಾಡಿರುವ ಪೂರ್ವಪಕ್ಷಕ್ಕೆ ಈ ಸೂತ್ರದಲ್ಲಿ ಸಮಾಧಾನವನ್ನು ಹೇಳಲಾಗಿದೆ—ದ್ವಾದಶಾಹಕ್ರತುವಿನಲ್ಲಿ 'ಮನೋಗ್ರಹಂ ಗೃಹ್ಣಾತಿ' ಎಂದು ಹೇಳಿರುವ ಮಾನಸವಾದ 'ಗ್ರಹ' (ಪಾತ್ರವಿಶೇಷ)ದ ಸಮಾನ ಧರ್ಮವು ಮನಶ್ಚಿದಾದಿಗಳಿಗೆ ಇರುವುದರಿಂದ ಇದೂ ಕರ್ಮಾಂಗ, ಎಂಬ ಪೂರ್ವಪಕ್ಷವು ಯುಕ್ತವಲ್ಲ. ಉಪಲಬ್ಧೇಃ=ಹಿಂದೆ ಹೇಳಿದ ಶ್ರುತಿಯಿಂದ ಮನಶ್ಚಿದುಪಾಸನೆಯ ಫಲ ಕೇವಲ ಸಂಪದಾದಿರೂಪವಾದ ಪುರುಷಾರ್ಥವೆಂದು ಉಪಲಬ್ಧವಾಗಿದೆಯಾದ್ದರಿಂದ. ಒಂದರ ಸಾಮ್ಯ ಇನ್ನೊಂದಕ್ಕೆ ಇದ್ದ ಮಾತ್ರಕ್ಕೆ ಅವುಗಳಲ್ಲಿರುವ ವೈಷಮ್ಯವು ಹೋಗುವುದಿಲ್ಲ. ಮೃತ್ಯುವತ್='ಸ ವಾ ಏಷ ಏವ ಮೃತ್ಯುಃ ಯ ಏಷ ಏತಸ್ಮಿನ್ ಮಂಡಲೇ ಪುರುಷಃ' 'ಅಗ್ನಿರ್ವೈ ಮೃತ್ಯುಃ' (ಬೃ.3.2.10) ಎಂದು ಅಗ್ನಿ, ಆದಿತ್ಯ, ಪುರುಷರಿಗೆ 'ಮೃತ್ಯು' ಎಂಬ ಹೆಸರು ಸಮಾನವಾದ ಮಾತ್ರಕ್ಕೆ ಸರ್ವಥಾ ಸಾಮ್ಯವಿಲ್ಲ. ನಹಿ ಲೋಕಾಪತ್ತಿಃ=''ಅಸೌ ವಾವ ಲೋಕೋ ಗೌತಮಾಗ್ನಿಃ ತಸ್ಯಾದಿತ್ಯ ಏವ ಸಮಿತ್' (ಛಾಂ.5.4.1) ಎಂದು ಲೋಕಕ್ಕೆ ಆದಿತ್ಯರೂಪ ಸಮಿದಾದಿಮತ್ವ ಎಂಬ ಅಗ್ನಿಯ ಸಾಮ್ಯವಿದ್ದ ಮಾತ್ರಕ್ಕೆ ಲೋಕವು ಅಗ್ನಿಯೇ ಆಗುವುದಿಲ್ಲ. ಅದರಂತೆ, ದ್ವಾದಶಾಹಕ್ರತುಗಳಲ್ಲಿ ಏಕಾದಶದಿನದ ಕ್ರತುವಿನ ಸಾಮ್ಯವಿದ್ದ ಮಾತ್ರದಿಂದ ಪ್ರಕೃತ 'ಮನಶ್ಚಿತ್' ಕರ್ಮಾಂಗವಾಗಬೇಕಾಗಿಲ್ಲ.

**॥ ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ ತ್ವನುಬಂಧಃ ॥** ಅಗ್ನಿರಹಸ್ಯದ ಮೊದಲ ಮತ್ತು ಅನಂತರದ ಪ್ರಕರಣಗಳಲ್ಲಿ ವಿದ್ಯೆಯನ್ನೇ ಹೇಳಲಾಗಿದೆ. ಆದ್ದರಿಂದ ಮಧ್ಯದ ಈ ಪ್ರಕರಣದಲ್ಲಿ ವಿದ್ಯೆಯನ್ನೇ ಹೇಳಬೇಕು, ಕ್ರಿಯೆಯನ್ನಲ್ಲ. ಮುಂದಿನ ಬ್ರಾಹ್ಮಣಪ್ರಕರಣದಲ್ಲಿ 'ಅಯಂ ವಾವ ಲೋಕಃ, ಏಷೋಽಗ್ನಿಶ್ಚಿತಃ' ಎಂದು ತಾದ್ವಿಧ್ಯಂ=ಕೇವಲ ವಿದ್ಯಾವಿಧಿಯು ಶಬ್ದಸ್ಯ=ವಾಕ್ಯದ ಪ್ರಯೋಜನ ಎಂದು ತಿಳಿಯುತ್ತದೆ. ಏಕೆಂದರೆ ಅಲ್ಲಿ ಕರ್ಮವನ್ನು ನಿಂದಿಸಿ ವಿದ್ಯೆಯನ್ನು ಪ್ರಶಂಸೆ ಮಾಡಲಾಗಿದೆ—ವಿದ್ಯಯಾ ತದಾರೋಹಂತಿ, ಯತ್ರ ಕಾಮಾಃ ಪರಾಹತಾಃ ನ ತತ್ರ ದಕ್ಷಿಣಾ ಯಾಂತಿ ನಾವಿದ್ವಾಂಸಸ್ತಪಸ್ವಿನಃ' ಎಂದು. ಮೊದಲಿನ ಪ್ರಕರಣದಲ್ಲೂ 'ಯದೇತನ್ಮಂಡಲಂ ತಪತಿ' ಎಂದು ಹೇಳಿ 'ಸೋಽಮೃತೋ ಭವತಿ'ಎಂದು ಜ್ಞಾನಫಲವಾದ ಮೋಕ್ಷದ ಉಪಸಂಹಾರವೇ ಇದೆ. ಕ್ರಿಯಾಗ್ನಿಪ್ರಕರಣದಲ್ಲಿ 'ಮನಶ್ಚಿದಾದಿ'ಗಳನ್ನು ಹೇಳುವುದಕ್ಕೆ ಕಾರಣ ಇದು—ಭೂಯಸ್ತ್ವಾತ್ತು ಅನುಬಂಧಃ–ಅಗ್ನಿಗೆ ಸಂಬಂಧಿಸಿರುವ ಅನೇಕ ಅವಯವಗಳನ್ನು ಈ ವಿದ್ಯೆಯಲ್ಲಿ ತಿಳಿಯಬೇಕು ಎಂಬ ಸೂಚನೆಗಾಗಿ. ಆದ್ದರಿಂದ ಮನಶ್ಚಿದಾದಿಗಳು ಶುದ್ಧ ಬ್ರಹ್ಮವಿದ್ಯೆಗಳೇ ಆಗಿವೆ.

ವಿಮರ್ಶೆ—ಒಂದು ಸಾಧಾರಣ ವಿಷಯವನ್ನು ಚರ್ಚಿಸಲು ಇಷ್ಟೊಂದು ಸೂತ್ರಗಳನ್ನು ಬಳಸಿಕೊಳ್ಳುವುದು 'ಸ್ಥಿತಸ್ಯ ಗತಿಶ್ಚಿಂತನೀಯಾ' ಎಂಬಂತಿದೆ. ಶಾಂಡಿಲ್ಯವಿದ್ಯೆ, ಪ್ರಾಣಾಗ್ನಿಹೋತ್ರ ವಿದ್ಯೆಗಳ ಬಗ್ಗೆ ನಿರ್ಣಯವನ್ನು ಮಾಡುವ ಸೂತ್ರಗಳಲ್ಲಿ ಅದಕ್ಕೆ ಸಂಬಂಧಪಟ್ಟ ಶಬ್ದಗಳು ಇರುವುದರಿಂದ ತನ್ನಿರ್ಣಯಕ್ಕಾಗಿ ಸೂತ್ರಗಳಿವೆ, ಎಂದು ತಿಳಿಯಬಹುದು. ಆದರೆ, ಪ್ರಕೃತ ಸೂತ್ರಗಳಲ್ಲಿ ಇಂತಹ ಸೂಚಕ ಶಬ್ದಗಳೇ ಇಲ್ಲ. ಆದ್ದರಿಂದ ಸೂತ್ರಗಳಿಗೆ ಮಾಡಿರುವ ವ್ಯಾಖ್ಯಾನವು ಕಾಲ್ಪನಿಕವೆನಿಸುತ್ತದೆ.

## ವಿಶಿಷ್ಟಾದ್ವೈತ ದರ್ಶನದಲ್ಲಿ ಸೂತ್ರಗಳ ಅರ್ಥ

ರಾಮಾನುಜಭಾಷ್ಯದಲ್ಲಿ 'ಲಿಂಗಭೂಯಸ್ತ್ವಾತ್....'' ಇತ್ಯಾದಿ ಮೊದಲನೆಯ ಸೂತ್ರ ಒಂದು ಅಧಿಕರಣ.

'ಸಹಸ್ರಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಮ್ ।
ವಿಶ್ವಂ ನಾರಾಯಣಂ ದೇವಮಕ್ಷರಂ ಪರಮಂ ಪದಮ್ ॥

ಎಂಬ ಈ ಮಂತ್ರವು 'ಪದ್ಮಕೋಶಪ್ರತೀಕಾಶಂ ಹೃದಯಂ ಚಾಪ್ಯಧೋಮುಖಂ' ಎಂದು ಮುಂದೇ ಅದೇ ತೈತ್ತಿರೀಯಶ್ರುತಿ ತಿಳಿಸುವ ದಹರವಿದ್ಯೆಯ ವಿಷಯವನ್ನು ವಿವರಿಸುವ ಮಂತ್ರವಲ್ಲ, ಎಲ್ಲಾ ಪರವಿದ್ಯೆಗಳಲ್ಲಿ ವಿಷಯತ್ವೇನ ಪ್ರಸ್ತುತನಾದ ಶಂಭು, ಅಕ್ಷರಾದಿಗಳನ್ನು ಅನುವಾದ ಮಾಡಿ ಅವುಗಳಿಗೆ ನಾರಾಯಣತ್ವವನ್ನು ವಿಧಾನ ಮಾಡುವುದಕ್ಕಾಗಿ ಈ ಮಂತ್ರವಿದೆ. ಸೂತ್ರದ 'ಲಿಂಗ' ಪದಕ್ಕೆ ಸೂಚಕ ಎಂದು ಅರ್ಥ. ಅದನ್ನು ಸೂಚನೆ ಮಾಡುವ ಅನೇಕ ವಾಕ್ಯಗಳಿವೆಯಾದುದರಿಂದ ಈ ರೀತಿ ನಿರ್ಧಾರ ಮಾಡುವುದೇ ಉಚಿತ. ಪರವಿದ್ಯಾಪ್ರಕರಣಪಠಿತವಾದುದರಿಂದ ತತ್ಪರ ಎಂದು ನಿರ್ಧಾರ ಮಾಡಲು ಬೇಕಾದ 'ಪ್ರಕರಣ' ಎಂಬ ನಿರ್ಣಾಯಕಲಿಂಗಕ್ಕಿಂತಲೂ 'ವಾಕ್ಯ'ಲಿಂಗವು ಪ್ರಬಲವಾದ ಕಾರಣ ಈ ಅರ್ಥವೇ ಉಚಿತ.

ಮುಂದಿನ ಏಳು ಸೂತ್ರಗಳು ಒಂದು ಅಧಿಕರಣ. ಅವುಗಳಲ್ಲಿ ಮೊದಲ ಎರಡು ಸೂತ್ರಗಳು ಪೂರ್ವಪಕ್ಷ ಸೂತ್ರಗಳು. ಉಳಿದ ಐದು ಸೂತ್ರಗಳು ಸಿದ್ಧಾಂತ ಸೂತ್ರಗಳು. 'ದರ್ಶನಾಚ್ಚ' ಎಂಬ ಸೂತ್ರವನ್ನು 'ವಿದ್ಯೈವ ತು ನಿರ್ಧಾರಣಾತ್' ಎಂಬ ಸೂತ್ರದಲ್ಲೇ ಸೇರಿಸಲಾಗಿದೆ. ಈ ಸೂತ್ರಗಳಲ್ಲಿ ಮಾಡುವ ಸಿದ್ಧಾಂತ ಶಾಂಕರಭಾಷ್ಯದಂತೆಯೇ ಆಗಿದೆ.

**ಇಲ್ಲಿಗೆ ಪರೇಣಾಧಿಕರಣವು (ತಾದ್ವಿಧ್ಯಾಧಿಕರಣ) ಮುಗಿಯಿತು.**

## ೩೫. ಏಕಾಧಿಕರಣಮ್

**ಜೀವಾಂಶಾನಾಂ ಪೃಥಗುತ್ಪತ್ತೇರ್ನಾನಾದಿಯೋಗ್ಯತಾಪೇಕ್ಷೇತಿ ನ ಮಂತ-ವ್ಯಮ್ । ಕುತಃ ?**

### ॥ ಓಂ ಏಕ ಆತ್ಮನಃ ಶರೀರೇ ಭಾವಾತ್ ಓಂ ॥ ೫೫ ॥

**ಅಂಶಾಂಶಿನೋರೇಕತ್ವಮೇವ । ಅಂಶಿಕರ್ಮನಿರ್ಮಿತಶರೀರ ಏವಾಂಶಸ್ಯ ಭಾವಾತ್ ॥**

ಜೀವರ ಅಂಶಗಳು ಅಂಶಿಯನ್ನು ಬಿಟ್ಟು ಪ್ರತ್ಯೇಕವಾಗಿಯೇ ಜನ್ಮವನ್ನು ಪಡೆಯುವುದರಿಂದ ಯೋಗ್ಯತೆಯೂ ಸಾದಿಯಾಗುತ್ತದೆ. ಆದ್ದರಿಂದ ಉಪಾಸನೆಗೆ ಅನಾದಿಯೋಗ್ಯತೆಯ ಅಪೇಕ್ಷೆ ಇಲ್ಲ, ಎಂದು ತಿಳಿಯಬಾರದು. ಏಕೆಂದರೆ, ಅಂಶಿಕರ್ಮನಿರ್ಮಿತವಾದ ಶರೀರದಲ್ಲೇ ಅಂಶನೂ ಇರುವುದರಿಂದ ಅಂಶ ಮತ್ತು ಅಂಶಿಗಳು ಅಭಿನ್ನಗಳೇ ಆಗಿವೆ.

**ವಿವರಣೆ**—ಇಂದ್ರ ಅಂಶಿ, ಅರ್ಜುನ ಅಂಶ. ಇಂದ್ರನಿಗಿರುವ ಜ್ಞಾನ ಸುಖಾದಿಗಳು ಅರ್ಜುನನಿಗೆ ಇಲ್ಲ, ಆದ್ದರಿಂದ ಅಂಶಾಂಶಿಗಳು ಬೇರೆ. ಅಂಶವು ಹುಟ್ಟುತ್ತದೆ. ಆದ್ದರಿಂದ ಅದರಲ್ಲಿ ಅನಾದಿಯೋಗ್ಯತೆ ಇಲ್ಲ. ಹೀಗಾಗಿ ಉಪಾಸನೆಗೆ ಅನಾದಿಜೀವಯೋಗ್ಯತೆಯೇ ಕಾರಣ, ಎಂದು ಹೇಳುವುದು ಸರಿಯಲ್ಲ. ಹೀಗೆ ಪೂರ್ವಪಕ್ಷ. ಅಂಶಕ್ಕೂ ಅಂಶಿಗೂ ಭೇದವಿಲ್ಲ. ಭೇದವಿದ್ದರೆ, ಇಂದ್ರನ ಕರ್ಮದಿಂದ ನಿರ್ಮಿತವಾದದ್ದು ಅರ್ಜುನನ ಶರೀರ ಎಂದು ಹೇಳಲಾಗುವುದಿಲ್ಲ. ಅಂಶಕ್ಕೆ ಪ್ರತ್ಯೇಕವಾದ ಕರ್ಮವಿಲ್ಲ. ಅಲ್ಲಿಗೆ ಅರ್ಜುನನ ಶರೀರವು ಅಕರ್ಮ ನಿರ್ಮಿತವಾದಂತಾಗುತ್ತದೆ. ಅಕರ್ಮನಿರ್ಮಿತವಾದುದು ಸ್ವಾಭಾವಿಕ. ಸ್ವಾಭಾವಿಕಕ್ಕೆ ನಿವೃತ್ತಿ ಇಲ್ಲ. ಶರೀರವು ಕರ್ಮನಿಮಿತ್ತವಾದರೆ ಕರ್ಮನಾಶಾತ್ ಶರೀರನಾಶವಾಗ ಬಹುದು. ಅಕರ್ಮನಿರ್ಮಿತವಾದರೆ ನಿವೃತ್ತಿಯೇ ಇಲ್ಲವಾದ ಕಾರಣ ಮೋಕ್ಷಾಭಾವಪ್ರಸಂಗ. ಆದ್ದರಿಂದ ಅಂಶಿಕರ್ಮನಿಮಿತ್ತವಾದುದು ಅಂಶದ ಶರೀರ ಎನ್ನುವುದು ಅನಿವಾರ್ಯ. ಹೀಗಿರುವಾಗ ಅಂಶಾಂಶಿಗಳಿಗೆ ಅಭೇದವಿರಬೇಕು.

### ॥ ಓಂ ವ್ಯತಿರೇಕಸ್ತದ್ಭಾವಭಾವಿತ್ವಾನ್ನತೂಪಲಬ್ಧಿವತ್ ಓಂ ॥ ೫೬ ॥

**ಜ್ಞಾನಾದಿಭೇದೇ ವಿದ್ಯಮಾನೇಽಪಿ ನಾಂಶಾಂಶಿನೋಃ ಪೃಥಗ್ಭಾವ ಏವ । ತದುಪಾಸನಾದಿಭೋಗಾದಂಶಸ್ಯ । ಪರಮಸಂಹಿತಾಯಾಂ ಚ-**

**'ಅಂಶಿನಸ್ತು ಪೃಥಗ್ ಜಾತಾ ಅಂಶಾಸ್ತಸ್ಯೈವ ಕರ್ಮಣಾ ।**
**ಪುನರೈಕ್ಯಂ ಪ್ರಪದ್ಯಂತೇ ನಾತ್ರ ಕಾರ್ಯಾ ವಿಚಾರಣಾ ॥' ಇತಿ ॥**

ಅಂಶ ಮತ್ತು ಅಂಶಿಗಳಲ್ಲಿ ಜ್ಞಾನಸುಖಾದಿಗಳಲ್ಲಿ ವ್ಯತ್ಯಾಸವಿದ್ದರೂ ಅಂಶಾಂಶಿಗಳಿಗೆ ಭೇದವು ಇಲ್ಲ. ಅಂಶಿಯ ಉಪಾಸನಾಜನಿತಕರ್ಮದಿಂದಲೇ ಅಂಶಕ್ಕೆ ಜ್ಞಾನಸುಖಾದಿ ಭೋಗವು ಆಗುತ್ತದೆ. ಪರಮಸಂಹಿತೆಯಲ್ಲಿ ಹೀಗಿದೆ—

ಅಂಶಿಯ ಕರ್ಮದಿಂದಾಗಿಯೇ ಅಂಶಗಳು ಅಂಶಿಗಿಂತ ಭಿನ್ನವಾದ ದೇಹಸಂಪರ್ಕವನ್ನು ಪಡೆದು ಹುಟ್ಟುತ್ತಾರೆ. ಆ ಕರ್ಮ ತೀರಿದಾಗ ಮತ್ತೆ ಅಂಶಗಳು ಅಂಶಿಯಿಂದ ಐಕ್ಯವನ್ನು ಪಡೆಯುತ್ತವೆ. ಈ ಬಗ್ಗೆ ವಿಚಾರ ಮಾಡಬೇಕಾಗಿರುವ ಅಗತ್ಯವೇ ಇಲ್ಲ.

**ವಿವರಣೆ**—ಅಂಶಾಂಶಿಗಳಿಗೆ ಅಭೇದವಿದ್ದರೆ ಜ್ಞಾನಸುಖಾದಿವೈಚಿತ್ರ್ಯ ಹೇಗೆ? ಅರ್ಜುನನಿಗೆ ಬರುವ ದುಃಖದ ಅನುಭವ ಇಂದ್ರನಿಗಿಲ್ಲ. ಇಂದ್ರನಿಗಿರುವ ಪೂರ್ಣಜ್ಞಾನ ಅರ್ಜುನನಿಗಿಲ್ಲ. ಆದ್ದರಿಂದ ಅವೆರಡರಲ್ಲಿ ಭೇದವಿದೆ, ಎಂದು ಪೂರ್ವಪಕ್ಷ. ಇದಕ್ಕೆ ಉತ್ತರ—'ತದುಪಾಸನಾದಿಭೋಗಾದಂಶಸ್ಯ' ಎಂಬ ಭಾಷ್ಯ. ಇದಕ್ಕೆ ತತ್ತ್ವಪ್ರದೀಪದ ಅರ್ಥ—

ಭಾವೋ ವೃದ್ಧಿಃ ಸಮುದ್ದಿಷ್ಟಃ ಕ್ವಚಿದ್ ಭಾವೋ ಮನಃ ಸ್ಮೃತಃ ॥

ಭಾವಶಬ್ದಕ್ಕೆ ಮನಃ ಪರಿಣಾಮವಾದ ಜ್ಞಾನ-ಸುಖಾದಿಗಳು ಎಂದು ಅರ್ಥ. 'ತದ್ಭಾವ ಭಾವಿತ್ವಾತ್' ಎಂಬ ಸೂತ್ರದ ಅರ್ಥವನ್ನು 'ತದುಪಾಸನಾದಿಭೋಗಾದಂಶಸ್ಯ' ಎಂಬ ಭಾಷ್ಯವು ವಿವರಿಸುತ್ತದೆ. (ತದ್ಭಾವಭಾವಿತ್ವಾತ್ ಇತಿ ಸೂತ್ರಾಕ್ಷರಾಣಿ ತದುಪಾಸನಾದಿ ಭೋಗಾತ್ ಇತಿ ವ್ಯಾಖ್ಯಾತಿ- ತ.ಪ್ರ.) ಭಾಷ್ಯದ ಅರ್ಥ—ತದುಪಾಸನಾ ಕರ್ಮಾದಿನ್ನೈವ ಜ್ಞಾನಸುಖಾದಿಭೋಗಾದಂಶಸ್ಯ-ಅಂಶಿಯ ಕರ್ಮದಿಂದಲೇ ಅಂಶಕ್ಕೆ ಸುಖಾದಿಭೋಗಗಳು ಆಗುತ್ತವೆ. ಅಂಶಿಯ ಪಾಪದ ಫಲವೇ ಅಂಶದಲ್ಲಿರುವ ದುಃಖಾನುಭವ. ಆದ್ದರಿಂದ ಅವೆರಡಕ್ಕೆ ಸುಖಾದಿ ವೈಷಮ್ಯವಿದ್ದರೂ (ಸೌಭರ್ಯಾದಿಗಳಂತೆ) ಅಭೇದವೇ ಇದೆ.

ತತ್ತ್ವಪ್ರಕಾಶಿಕಾದಲ್ಲಿ ಭಾವ ಶಬ್ದಕ್ಕೆ 'ಉಪಾಸನಾ' ಎಂಬ ಒಂದೇ ಅರ್ಥವನ್ನು

ಪರಿಗಣಿಸಿ ಅಂಶಿಯ ಉಪಾಸನಾಫಲವನ್ನು ಅಂಶ ಅನುಭವಿಸುತ್ತದೆ. ಇದನ್ನು ಗುರ್ವರ್ಥದೀಪಿಕಾದಲ್ಲಿ ಹೀಗೆ ವಿವರಿಸಲಾಗಿದೆ. ಅಂಶವು ಮಾನುಷಶರೀರ ಸಂಪರ್ಕದಿಂದಾಗಿ ಅಂಶಿಗತವಾದ ಎಲ್ಲವನ್ನೂ ಅನುಭವಿಸುವುದಿಲ್ಲ. ಆದರೂ ಧ್ಯಾನದಿಂದ ಅಂಶಿಗೆ ಆಗುವ ಬಿಂಬದರ್ಶನದ ಅನುಭವ ಅಂಶಕ್ಕೂ ಇದೆ. ಇದು ಇರಬೇಕಾದರೆ ಅವೆರಡಕ್ಕೆ ಅಭೇದವಿರಬೇಕು. ಸೂತ್ರದ 'ತದ್ಭಾವ' ಎಂಬ ಶಬ್ದಕ್ಕೆ ತಸ್ಯ=ಅಂಶಿಯ ಭಾವೇನ=ಧ್ಯಾನೇನ ಸ್ವಸ್ಯಾಪಿ ಭಾವಃ=ಅಂಶಕ್ಕೂ ಧ್ಯಾನ. ಇಲ್ಲಿ ಧ್ಯಾನ ಪದದಿಂದ ತತ್ಫಲವಾದ ಬಿಂಬದರ್ಶನವು ವಿವಕ್ಷಿತವಾಗಿದೆ. ಅಂಶಿಯ ಬಿಂಬದರ್ಶನದಿಂದ ಅಂಶಕ್ಕೂ ಬಿಂಬದರ್ಶನವಾಗುತ್ತದೆ, ಎಂದು ಭಾವ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ಏಕ ಆತ್ಮನಃ ಶರೀರೇ ಭಾವಾತ್ ಓಂ ॥** (ಅತ್ರ ಯೋಗ್ಯತಾನಾದಿತ್ವಾಯ ಅಂಶಾಂಶಿನೋಃ ಐಕ್ಯಮುಚ್ಯತೇ । ಚೇತ್ಯಸ್ತಿ ।

ಅಂಶೀ ಅಂಶ ಇತ್ಯೇಕಃ । ಚ ಏವ । ನ ಭಿನ್ನಃ । ಯೇನ ಅಂಶಸ್ಯ ಉತ್ಪತ್ತ್ಯಾ ಯೋಗ್ಯತಾನಾದಿತ್ವಂ ನ ಸ್ಯಾತ್ ಇತಿ ಭಾವಃ । ಕುತಃ ? ಆತ್ಮನಃ=ಅಂಶಿನಃ ಸಂಬಂಧಿನಿ ಶರೀರೇ=ಅಂಶಿಕರ್ಮಾರ್ಜಿತ ಶರೀರೇ ಭಾವಾತ್ । ಅಂಶಸ್ಯೇತಿ ಶೇಷೋ ವಾ । ಏತದರ್ಥೇ ಆತ್ಮನ ಇತ್ಯಾವೃತ್ತಿರ್ವಾ । ಅರ್ಜುನಾದ್ಯಂಶಸ್ಯ ಸತ್ವಾದಿತ್ಯರ್ಥಃ। ಇಂದ್ರಾದಿಕರ್ಮಾರ್ಜಿತೇ ಶರೀರೇ ದೇಹೇ ಸತ್ವಂ ತತೋ ಭೇದೇ ನ ಯುಕ್ತಮ್, ಇತಿ ಭಾವಃ ।)

ಅಂಶಿ ಮತ್ತು ಅಂಶಗಳು ಏಕಃ=ಅಭಿನ್ನಗಳೇ ಆಗಿವೆ. ಏಕೆಂದರೆ, ಆತ್ಮನಃ=ಅಂಶಿಗೆ ಸಂಬಂಧಿಸಿರುವ ಅಂದರೆ ಅಂಶಿಯ ಕರ್ಮನಿರ್ಮಿತವಾದ ಶರೀರೇ=ಶರೀರದಲ್ಲಿ ಅಂಶನು ಭಾವಾತ್=ಇರುವುದರಿಂದ. ಇಂದ್ರಾಂಶನಾದ ಅರ್ಜುನನ ಶರೀರವು ಅಂಶಿಯಾದ ಇಂದ್ರನ ಕರ್ಮದಿಂದ ನಿರ್ಮಿತವಾಗಿದೆ. ಆದ್ದರಿಂದ ಅರ್ಜುನನೂ ಇಂದ್ರನೂ ಅಭಿನ್ನರು.

**॥ ಓಂ ವ್ಯತಿರೇಕಸ್ತದ್ಭಾವಭಾವಿತ್ವಾನ್ನತೂಪಲಬ್ಧಿವತ್ ಓಂ ॥** (ತುರೇವ । ಉಪಲಬ್ಧೀತಿ ಉಪಲಕ್ಷಣಮ್ । ಜ್ಞಾನ-ಸುಖಾದೌ ವ್ಯತಿರೇಕ ಇವ ಅಂಶಾಂಶಿನೋಃ ವ್ಯತಿರೇಕಸ್ತು=ಭೇದ ಏವ ಇತಿ ನ । ಕುತಃ ? ತದ್ಭಾವಭಾವಿತ್ವಾತ್ । ತಸ್ಯ ಅಂಶಿನಃ ಭಾವೇನ=ಉಪಾಸನಾದಿನಾ ಭಾವಿತ್ವಾತ್=ಅಂಶಸ್ಯ ತತ್ಫಲಾನುಸಂಧಾತೃತ್ವಾತ್ । ಅಲ್ಪೇ ಜ್ಞಾನಾದೌ ಅನುಸಂಧಾನಾಭಾವೇಽಪಿ ಅಂಶಿಗತೋಪಾಸನಾದಿಫಲಾನು-

ಸಂಧಾನಾದಿತ್ಯರ್ಥಃ। ತಥಾ ತದ್ಭಾವಸ್ಯ=ಅಂಶಗತಜ್ಞಾನಾದೇಃ ಧರ್ಮಸ್ಯ ಭಾವಿತ್ವಾತ್=ಅಂಶಿನಃ ಅನುಸಂಧಾತೃತ್ವಾತ್, ಇತ್ಯರ್ಥಃ।)

ಸೂತ್ರದಲ್ಲಿ ಉಪಲಬ್ಧಿ ಎಂಬ ಶಬ್ದದಿಂದ ಲಕ್ಷಣಯಾ ಜ್ಞಾನ-ಸುಖಾದಿಗಳನ್ನು ಪರಿಗ್ರಹಿಸಬೇಕು. ಉಪಲಬ್ಧಿವತ್=ಜ್ಞಾನ-ಸುಖಾದಿಗಳು ಅಂಶಾಂಶಿಗಳಿಗೆ ಪರಸ್ಪರ ಇಲ್ಲದಿರುವಂತೆ ವ್ಯತಿರೇಕಸ್ತು=ಅಂಶಾಂಶಿಗಳಿಗೆ ಭೇದವೇ ಇದೆ ಎಂಬುದು ನ=ಯುಕ್ತವಲ್ಲ. ಜ್ಞಾನ-ಸುಖಾದಿ ವ್ಯತಿರೇಕದಂತೆ ತತ್‌ಪ್ರಯುಕ್ತವಾಗಿ ಭೇದವೂ ಇದೆ ಎನ್ನಬಾರದು. ಏಕೆಂದರೆ, ತದ್ಭಾವ-ಭಾವಿತ್ವಾತ್, ತದ್ಭಾವ-ತಸ್ಯ=ಅಂಶಿಯ ಭಾವೇನ=ಉಪಾಸನಾದಿಗಳಿಂದ ಅಂಶಕ್ಕೆ ಭಾವಿತ್ವಾತ್=ಉಪಾಸನಾಫಲವಾದ ಬಿಂಬಾಪರೋಕ್ಷಾದಿಗಳು ಇರುವುದರಿಂದ. ಇಂದ್ರನು ಉಪಾಸನೆಯಿಂದ, ಯಾವ ರೂಪವನ್ನು ಅಪರೋಕ್ಷತಃ ನೋಡುವನೋ ಅದೇ ರೂಪವನ್ನು ಅರ್ಜುನನೂ ನೋಡುತ್ತಾನೆ. ಅಂದಮೇಲೆ ಅವರಿಬ್ಬರಿಗೆ ಭೇದವಿಲ್ಲ. ಅದರಂತೆ, ತದ್ಭಾವಸ್ಯ= ಅಂಶದಲ್ಲಿರುವ ಜ್ಞಾನಸುಖಾದಿಗಳನ್ನು ಅಂಶಿಯು ಭಾವಿತ್ವಾತ್= ಅನುಭವಿಸುತ್ತಾನಾದ್ದರಿಂದ. ಇಂದ್ರನ ಸುಖಾದಿಗಳ ಅನುಸಂಧಾನವು ಪಾರ್ಥಿವ ದೇಹಸಂಬಂಧ ಪ್ರಯುಕ್ತವಾಗಿ ಅರ್ಜುನನಿಗೆ ಇಲ್ಲದಿದ್ದರೂ ಅರ್ಜುನನಿಗೆ ಆಗುವ ಸುಖಾದಿಗಳ ಅನುಭವವು ಇಂದ್ರನಿಗೆ ಆಗುತ್ತದೆ. ಅವರಿಗೆ ಭೇದವಿದ್ದಲ್ಲಿ ಇದು ಸಾಧ್ಯವಿಲ್ಲ. ಆದ್ದರಿಂದ ಅಂಶಾಂಶಿಗಳಿಗೆ ಭೇದವಿಲ್ಲ.

## ಅದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಏಕ ಆತ್ಮನಃ ಶರೀರೇ ಭಾವಾತ್ ॥** ಏಕೇ=ನಾಸ್ತಿಕರಾದ ಕೆಲವರು ಆತ್ಮನಃ=ದೇಹಾತಿರಿಕ್ತನಾದ ಆತ್ಮನ ಅಭಾವವನ್ನು ಹೇಳುತ್ತಾರೆ. ಅದಕ್ಕೆ ಅವರು ಕೊಡುವ ಕಾರಣ ಶರೀರೇ=ದೇಹವು ಇದ್ದಾಗ ಮಾತ್ರ ಭಾವಾತ್=ಜ್ಞಾನಾದಿ ಧರ್ಮಗಳು ಇರುವುದರಿಂದ. ದೇಹವಿದ್ದರೆ ಜ್ಞಾನಾದಿಗಳು, ದೇಹವಿಲ್ಲದಿದ್ದರೆ ಜ್ಞಾನಾದಿಗಳೂ ಇಲ್ಲ, ಆದ್ದರಿಂದ ಜ್ಞಾನಾದಿಗುಣಗಳು ದೇಹಧರ್ಮಗಳು, ಆತ್ಮಧರ್ಮಗಳಲ್ಲ. ಬೆಂಕಿ ಇದ್ದರೆ ಬಿಸಿ, ಪ್ರಕಾಶ. ಅದಿಲ್ಲದಿದ್ದರೆ ಅವೆರಡೂ ಇಲ್ಲ. ಆದ್ದರಿಂದ ಬಿಸಿ ಮತ್ತು ಪ್ರಕಾಶಗಳು ಬೆಂಕಿಯ ಧರ್ಮಗಳು. ಅದರಂತೆ ಜ್ಞಾನಾದಿಗಳೂ ದೇಹಧರ್ಮಗಳು, ದೇಹಾತಿರಿಕ್ತನಾದ ಆತ್ಮನು ಇಲ್ಲ. ಇದು ಪೂರ್ವಪಕ್ಷ ಸೂತ್ರ.

**॥ ವ್ಯತಿರೇಕಸ್ತದ್ಭಾವಭಾವಿತ್ವಾನ್ನತೂಪಲಬ್ಧಿವತ್ ॥** ಆತ್ಮನು ದೇಹಾವ್ಯತಿರಿಕ್ತನಲ್ಲ, ವ್ಯತಿರೇಕಃ=ದೇಹಕ್ಕಿಂತ ಆತ್ಮನಿಗೆ ಭೇದವಿದೆ. 'ತದ್ಭಾವಾಭಾವಿತ್ವಾತ್' (ದ್ವೈತಭಾಷ್ಯದ

ಪಾಠ–ತದ್ಭಾವ–ಭಾವಿತ್ವಾತ್, ಶಾಂಕರಭಾಷ್ಯದ ಪಾಠ–ತದ್ಭಾವ–ಅಭಾವಿತ್ವಾತ್)= ದೇಹವಿದ್ದರೂ ಮಲಗಿದಾಗ ಜ್ಞಾನಾದಿಗಳು ಇಲ್ಲದಿರುವುದರಿಂದ ಜ್ಞಾನಾದಿಗಳು ದೇಹಧರ್ಮಗಳಲ್ಲ, ರೂಪಾದಿಗಳು ದೇಹವಿದ್ದಾಗಲೆಲ್ಲ ಇವೆ, ಆದ್ದರಿಂದ ಅವುಗಳು ದೇಹಧರ್ಮಗಳು. ಆದರೆ, ದೇಹವಿದ್ದರೂ ಕೆಲವೊಮ್ಮೆ ಜ್ಞಾನಾದಿಗಳು ಇರುವುದಿಲ್ಲ. ಆದ್ದರಿಂದ ಜ್ಞಾನಾದಿಗಳು ದೇಹಧರ್ಮಗಳಲ್ಲ ಎಂದೂ ವಾದಮಾಡಬಹುದು.

ಉಪಲಬ್ಧಿವತ್—ಉಬಲಬ್ಧಿ ಎಂದರೆ ಚೈತನ್ಯ. ಚೈತನ್ಯವೆಂದರೆ ಭೂತ–ಭೌತಿಕ ವಸ್ತುವಿಷಯಕವಾದ ಅನುಭವ. ಅಂತಹ ಅನುಭವವು ಭೂತವಿಕಾರವಾದ ದೇಹದ ಧರ್ಮವಾದಲ್ಲಿ ಅದು ಭೂತ–ಭೌತಿಕ–ವಿಷಯವಾಗಲಾರದು. ಅಗ್ನಿಯ ಧರ್ಮವಾದ ಔಷ್ಣ್ಯವು ಅಗ್ನಿಯನ್ನೇ ಸುಡುವುದಿಲ್ಲ. ಆದ್ದರಿಂದ ಭೂತ–ಭೌತಿಕ ವಿಷಯಕವಾದ 'ಉಪಲಬ್ಧಿ'ಯನ್ನು ಒಪ್ಪುವಂತೆ ಅದು ದೇಹಾತಿರಿಕ್ತವಾದ ವಸ್ತು ಎಂದೂ ಒಪ್ಪಬೇಕಾಗುತ್ತದೆ. ಅಂತಹ ಉಪಲಬ್ಧಿಯೇ ಆತ್ಮ.

**ವಿಮರ್ಶೆ**—ಚಾರ್ವಾಕಮತ ವಿಮರ್ಶೆಯನ್ನು ಸಮಯಪಾದದಲ್ಲಿ ಮಾಡಬೇಕು. ಇಲ್ಲಿ ಮಾಡುವುದು ಉಚಿತವಲ್ಲ. ಪ್ರಥಮ ಸೂತ್ರದಲ್ಲಿ 'ಶರೀರ ಇರುವಾಗ ಜ್ಞಾನವು ಇರುತ್ತದೆಯಾದ ಕಾರಣ. ಜ್ಞಾನವು ಶರೀರದ ಧರ್ಮ'ಎಂದು ಅನುಮಾನರೂಪವಾಗಿ ದೇಹವೇ ಆತ್ಮನೆಂದು ಚಾರ್ವಾಕನು ಸಾಧಿಸಲಾರ. ಚಾರ್ವಾಕಮತದಲ್ಲಿ ಅನುಮಾನವು ಪ್ರಮಾಣವೇ ಅಲ್ಲ. 'ತದ್ಭಾವಭಾವಿತ್ವವು' ತದ್ಧರ್ಮತ್ವಸಾಧಕವಲ್ಲ. ಕಾರಣಭಾವಭಾವಿಯಾದ ಕಾರ್ಯವು ಕಾರಣದ ಧರ್ಮವಲ್ಲ.

## ವಿಶಿಷ್ಟಾದ್ವೈತ ದರ್ಶನದಲ್ಲಿ ಸೂತ್ರಾರ್ಥ

**॥ ಏಕ ಆತ್ಮನಃ ಶರೀರೇ ಭಾವಾತ್ ॥** ಉಪಾಸಕನಾದ ಆತ್ಮನಃ=ಆತ್ಮನಿಗೆ ಶರೀರೇ ಭಾವಾತ್=ಶರೀರದಲ್ಲಿ ಸ್ಥಿತಿ ಇರುವುದರಿಂದ 'ಆತ್ಮನು ಜ್ಞಾತೃವಾಗಿ ಶರೀರಸ್ಥನಾಗಿದ್ದಾನೆ' ಎಂದಿಷ್ಟೇ ಅವನನ್ನು ಅನುಸಂಧಾನ ಮಾಡಿದರೆ ಸಾಕು. ಅವನು ಅಪಹತಪಾಪ ಎಂದು ಮುಂತಾಗಿ ತಿಳಿಯಬೇಕಾಗಿಲ್ಲ. ಹೀಗೆ ಏಕೇ=ಕೆಲವರು ತಿಳಿಯುತ್ತಾರೆ. (ಇದು ಪೂರ್ವಪಕ್ಷ ಸೂತ್ರ.)

**॥ ವ್ಯತಿರೇಕಸ್ತದ್ಭಾವಭಾವಿತ್ವಾನ್ನತೂಪಲಬ್ಧಿವತ್ ॥** ಆತ್ಮನಿಗೆ ಸಂಸಾರದಶಾಕ್ಕಿಂತ ಮೋಕ್ಷದಶಾದಲ್ಲಿರುವ ವ್ಯತಿರೇಕಃ=ವ್ಯತ್ಯಾಸ ಏನಿದೆಯೋ ಅಪಹತಪಾಪತ್ವಾದಿಗಳು, ಅವುಗಳನ್ನು ಸ್ವಾತ್ಮನಲ್ಲಿ ಅನುಸಂಧಾನ ಮಾಡಬೇಕು. ಅಪಹತಪಾಪತ್ವಾದಿರೂಪವು

ಸಿದ್ಧವಾಗಬೇಕಾದರೆ ತದ್ಭಾವಭಾವಿತ್ವಾತ್, 'ತಂ ಯಥಾಯಥೋಪಾಸತೇ ತಥೈವ ಭವತಿ' ಎಂಬ ಶ್ರುತಿ ಹೇಳುವಂತೆ ಉಪಾಸನೆಗೆ ಅನುಸಾರವಾಗಿಯೇ ಫಲವೂ ದೊರೆಯುತ್ತದೆಯಾದುದರಿಂದ. 'ತಂ ಯಥಾ ಯಥಾ' ಎಂಬ ಶ್ರುತಿಯು ಪರಮಾತ್ಮನ ಉಪಾಸನೆಗೆ ಮಾತ್ರ ಸಂಬಂಧಿಸಿದ್ದಲ್ಲ. ಜೀವಾತ್ಮಾನುಸಂಧಾನಕ್ಕೂ ಅದು ಅನ್ವಯಿಸುತ್ತದೆ. ಉಪಾಸ್ಯನಾದ ಪರಬ್ರಹ್ಮನ ಶರೀರರೂಪವಾಗಿ ಜೀವಾತ್ಮನೂ ಉಪಾಸ್ಯಕೋಟಿಯಲ್ಲಿ ಸೇರುತ್ತಾನೆ. ಉಪಲಬ್ಧಿವತ್=ಹೇಗೆ ಬ್ರಹ್ಮಜ್ಞಾನವು ಯಥಾವಸ್ಥಿತ ಬ್ರಹ್ಮವಿಷಯಕ ವಾಗಿರಬೇಕೆಂಬ ನಿರ್ಬಂಧವಿದೆಯೋ ಹಾಗೆಯೇ ಜೀವಾತ್ಮನ ಉಪಲಬ್ಧಿಯೂ ಯಥಾವಸ್ಥಿತಜೀವಸ್ವರೂಪವಿಷಯಕವಾಗಿರಬೇಕು.

**ವಿಮರ್ಶೆ**—ಪ್ರಥಮಪೂರ್ವಪಕ್ಷಸೂತ್ರದಲ್ಲಿ 'ಶರೀರೇ' ಎಂಬ ಪದದ ಅಗತ್ಯವಿಲ್ಲ. ಆತ್ಮನಃ ಭಾವಾತ್=ಆತ್ಮನಿಗೆ ಜ್ಞಾತೃತ್ವಾದಿಗಳು ಇರುವುದರಿಂದ ಅದು ಮಾತ್ರ ಉಪಾಸ್ಯ ಎಂದು ಪೂರ್ವಪಕ್ಷ ಮಾಡಲು ಬರುತ್ತದೆ. ಎರಡನೆಯ ಸೂತ್ರದಲ್ಲಿ 'ವ್ಯತಿರೇಕಃ' ಎಂಬ ಪದಕ್ಕೆ ಮಾಡಿದ ಅರ್ಥ ಅತ್ಯಂತ ಕ್ಲೇಶಕರವಾದುದು. ಸಹಜವಾದ ಅರ್ಥವೆನಿಸುವುದಿಲ್ಲ.

**ಇಲ್ಲಿಗೆ ಏಕಾಧಿಕರಣವು ಮುಗಿಯಿತು.**

## ೩೬. ಅಂಗಾವಬದ್ಧಾಧಿಕರಣಮ್

**|| ಓಂ ಅಂಗಾವಬದ್ಧಾಸ್ತು ನ ಶಾಖಾಸು ಹಿ ಪ್ರತಿವೇದಮ್ ಓಂ || ೫೭ ||**

**ಬ್ರಹ್ಮಾದ್ಯಂಗದೇವತಾವಬದ್ಧೋಪಾಸನಾದಿ ಪ್ರತಿಶಾಖಂ ಪ್ರತಿವೇದಂ ಚ ನೋಪಸಂಹ್ರಿಯತೇ । ಹಿಶಬ್ದಾತ್-**

**'ಸಮತ್ವಾದ್ ವೋತ್ತಮತ್ವಾದ್ ವಾ ನಾಂಗದೇವಾದ್ಯುಪಾಸನಮ್ ।**
**ಉಪಸಂಹಾರ್ಯಮಿತ್ಯಾಹುರ್ವೇದಸಿದ್ಧಾಂತವೇದಿನಃ ॥'**

**ಇತಿ ಬ್ರಹ್ಮತರ್ಕವಚನಾತ್ ॥**

ಪರಬ್ರಹ್ಮನ ಅಂಗಭೂತರಾದ ದೇವತಾಸಂಬಂಧಿಯಾದ ಉಪಾಸನಾದಿಗಳನ್ನು ಮಾಡುವಾಗ ಒಂದೊಂದು ವೇದಕ್ಕೆ ಸಂಬಂಧಿಸಿರುವ ಪ್ರತಿಶಾಖೆಯಲ್ಲೂ ಒಬ್ಬ ದೇವತೆಗೆ ಹೇಳಿದ ಗುಣಗಳನ್ನು ಮತ್ತೊಬ್ಬ ದೇವತೆಯಲ್ಲಿ ಉಪಸಂಹಾರ ಮಾಡಬಾರದು.

ಸೂತ್ರದ ಹಿ ಶಬ್ದದಿಂದ ಬ್ರಹ್ಮತರ್ಕವಚನವು ಸೂಚಿತವಾಗಿದೆ—ಕೆಲವು ದೇವತೆಗಳು ಸಮಾನರಾಗಿಯೂ ಕೆಲವರು ಉತ್ತಮರಾಗಿಯೂ ಇರುವುದರಿಂದ ಒಬ್ಬ ದೇವತೆಯ ಗುಣಗಳನ್ನು ಮತ್ತೊಬ್ಬನ್ನಲ್ಲಿ ಉಪಸಂಹಾರ ಮಾಡಬಾರದು. ಹೀಗೆಂದು ವೇದಾಂತ ಜ್ಞಾನಿಗಳು ಹೇಳುತ್ತಾರೆ.

**ವಿವರಣೆ**—ಈ ಅಧಿಕರಣದಲ್ಲಿ ಅಂಗದೇವತಾಸಹಿತವಾಗಿಯೇ ಬ್ರಹ್ಮೋಪಾಸನೆಯನ್ನು ಮಾಡಬೇಕು ಎಂದು ಹೇಳಲಾಗಿದೆ. ಯದ್ಯಪಿ 'ತಮೇವೈಕಂ ಜಾನಥ ಆತ್ಮಾನಮ್ ಅನ್ಯಾ ವಾಚೋ ವಿಮುಂಚಥ' 'ಪೂಜಯೇನ್ನಾನ್ಯದೇವತಾಃ' ಎಂಬ ಪ್ರಮಾಣಗಳು ಬ್ರಹ್ಮೋಪಾಸನೆಯನ್ನು ಮಾತ್ರ ಮಾಡಬೇಕು. ಇತರ ದೇವತೆಗಳ ಪೂಜೆ ಮಾಡಬಾರದು ಎಂದು ಹೇಳುತ್ತದೆ. ಆದರೆ, ಅದರ ಅಭಿಪ್ರಾಯ—ಇತರ ದೇವತೆಗಳನ್ನು ಪ್ರಧಾನತ್ವೇನ ಉಪಾಸನೆ ಮಾಡಬಾರದು, ಪರಿವಾರತಯಾ ಮಾಡಬೇಕು, ಎಂದು.

ಸೂತ್ರದಲ್ಲಿ ಅಂಗಶಬ್ದಕ್ಕೆ ಭಗವಂತನ ಅಂಗಗಳಿಂದ ಹುಟ್ಟಿದ ದೇವತೆಗಳು ಎಂದರ್ಥ.

ವಿಷ್ಣೋರಂಗಸಮುದ್ಭೂತೇಃ ವಿಷ್ಣೋರಂಗಾನಿ ದೇವತಾಃ ।
ಉಚ್ಯಂತೇ ಸರ್ವವೇದೇಷು....॥

ಎಂಬ ಅಧ್ಯಾತ್ಮವಚನದಂತೆ ವಿಷ್ಣುವಿನ ಅಂಗಗಳಿಂದ ಹುಟ್ಟಿದ ದೇವತೆಗಳು ವಿಷ್ಣುವಿನ ಅಂಗಗಳೆಂದೇ ಕರೆಯಲ್ಪಡುತ್ತಾರೆ. ಅಂಗಾವಬದ್ಧಾಃ ಎಂಬ ಸೂತ್ರದ ಶಬ್ದಾರ್ಥವನ್ನು ''ಬ್ರಹ್ಮಾದಿ ಅಂಗದೇವತಾವಬದ್ಧ-ಉಪಾಸನಾದಿ'' ಎಂದು ಭಾಷ್ಯದಲ್ಲಿ ವಿವರಿಸಲಾಗಿದೆ. ಅಂಗದೇವತೆಗಳಿಗೆ ಸಂಬಂಧಿಸಿರುವ (ಅವಬದ್ಧಾಸ್ತು) ಉಪಾಸನೆ-ಪೂಜೆ-ಸೇವೆಗಳು ಎಂದು ಅರ್ಥ. (ಅಂಗೈಃ=ದೇವೈಃ ಅವಬದ್ಧಾಃ=ಸಂಬದ್ಧಾಃ-ತದ್ವಿಷಯಾಃ ಉಪಾಸನಾ-ಪೂಜಾ-ನಮಸ್ಕಾರಾದಯಃ ಕಾರ್ಯಾಃ। ಭಾ.ದೀ.) ದೇವತೆಗಳನ್ನು 'ಬ್ರಹ್ಮಾದ್ಯಾಃ' ಎಂದು ಹೇಳದೆ 'ಅಂಗ' ಎಂಬ ಶಬ್ದದಿಂದ ಹೇಳುವುದಕ್ಕೆ ಕಾರಣ-ಆ ದೇವತೆಗಳನ್ನು ಪರಿವಾರತ್ವೇನ ಉಪಾಸನೆ ಮಾಡಬೇಕು, ಪ್ರಾಧಾನ್ಯೇನ ಮಾಡಬಾರದು, ಎಂದು ತಿಳಿಸುವುದು.

ಪ್ರತಿವೇದದ ಪ್ರತಿಶಾಖೆಯಲ್ಲಿ ಬ್ರಹ್ಮದೇವರಿಗೆ ಹೇಳಿರುವ ಗುಣಗಳನ್ನು ರುದ್ರದೇವರಲ್ಲಿ ಧ್ಯಾನಿಸಬಾರದು. ರುದ್ರದೇವರಿಗೆ ಹೇಳಿದ್ದನ್ನು ಇಂದ್ರನಲ್ಲಿ ಧ್ಯಾನಿಸಬಾರದು. ದೇವತ್ವ-ವೈಷ್ಣವತ್ವಗುಣಗಳು ಮಾತ್ರ ಸಕಲದೇವತೆಗಳಲ್ಲೂ ಸಮಾನವಾದುವುಗಳು. ಅವುಗಳನ್ನು ಮಾತ್ರ ಎಲ್ಲಾ ದೇವತೆಗಳಲ್ಲೂ ಉಪಾಸನೆ ಮಾಡಬೇಕು.

ಈ ಸೂತ್ರದಲ್ಲಿ ಎರಡು ವಿಷಯಗಳನ್ನು ಹೇಳಲಾಗಿದೆ.

1. ಪರಿವಾರದೇವತೆಗಳ ಉಪಾಸನೆಯನ್ನು ಮಾಡಬೇಕು.

2. ಪರಿವಾರದೇವತೆಗಳಲ್ಲೂ ಒಬ್ಬರಿಗೆ ಹೇಳಿದ ಗುಣಗಳನ್ನು ಮತ್ತೊಬ್ಬರಲ್ಲಿ ಉಪಾಸನೆ ಮಾಡಬಾರದು.

ಗುರ್ವರ್ಥದೀಪಿಕಾದಲ್ಲಿ ಸೂತ್ರಾರ್ಥವನ್ನು ಹೀಗೆಯೇ ಹೇಳಲಾಗಿದೆ—

1. ಅಂಗಾವಬದ್ಧಾಃ ಬ್ರಹ್ಮಾದ್ಯಾಃ ಪರಿವಾರದೇವತಾಃ ಅಂಗತಯಾ ಅವಬದ್ಧಾಃ ಸಂತಃ ಉಪಾಸ್ಯಾಃ । ನತು ಪರಮಾತ್ಮವತ್ ಮುಖ್ಯತಯಾ ।

2. ತತ್ರಾಪಿ ಸರ್ವವೇದೋಕ್ತಾಃ ತತ್ತದ್ದೇವಗುಣಾಃ ಸರ್ವದೇವೇಷು ನ ಸಾಮಾನ್ಯೇನ ಉಪಾಸ್ಯಾಃ । ಕಿಂತು ವಿಶೇಷೋಽಸ್ತಿ ।

ಆದರೆ ಭಾಷ್ಯದಲ್ಲಿ ಎರಡನೆಯ ಅರ್ಥವನ್ನು ಮಾತ್ರವೇ ಹೇಳಲಾಗಿದೆ. ಆದರೂ ಸೂತ್ರದಲ್ಲಿ 'ಅಂಗ' ಪದಪ್ರಯೋಗಸ್ವಾರಸ್ಯದಿಂದ ಮೊದಲನೆಯ ವಿಷಯವೂ ಸೂತ್ರಕಾರರಿಗೆ ಅಭಿಪ್ರೇತವಾಗಿದೆ. ಭಾಷ್ಯಕಾರರೂ ಮುಂದಿನ ಸೂತ್ರದಲ್ಲಿ 'ಉಪಾಸನಾ ಅಂಗದೇವಾನಾಂ' ಎಂದು ಈ ವಿಷಯವನ್ನು ತಿಳಿಸಿದ್ದಾರೆ. ಹೀಗೆ ಎರಡು ವಿಷಯಗಳನ್ನು ತಿಳಿಸಿದರೂ ಇವೆರಡೂ 'ದೇವತೋಪಾಸನಾ' ಎಂಬ ಒಂದೇ ವಿಷಯಕ್ಕೆ ಸಂಬಂಧಿಸಿರುವುದರಿಂದ ಅಧಿಕರಣೈಕ್ಯವು ಉಪಪನ್ನವಾಗುತ್ತದೆ.

## ॥ ಓಂ ಮಂತ್ರಾದಿವದ್ ವಾಽವಿರೋಧಃ ಓಂ ॥ ೫೮ ॥

**ಸರ್ವದೇವತಾಮಂತ್ರಾ ಯಥಾಽಧೀಯಂತೇ, ಏವಮವಿರೋಧೋ ವಾ ।**

**'ಉಪಾಸನಾಽಂಗದೇವಾನಾಂ ಪರಮಾಂಗತಯಾ ಭವೇತ್ ।**
**ಉಪಸಂಹೃತಿರ್ವಿಶೇಷೇ ತು ಫಲಾನಾಮನ್ಯಥಾ ನತು ।**
**ಪುರುಷಾಣಾಂ ವಿಶೇಷಾದ್ ವಾ ಯಥಾಯೋಗಂ ಭವಿಷ್ಯತಿ ॥'**
**ಇತಿಚ ಬೃಹತ್ತಂತ್ರೇ ॥**

ಇಂದ್ರ–ಅಗ್ನಿ ಮುಂತಾದ 'ಅವರ' ದೇವತೆಗಳ ಮಂತ್ರಗಳನ್ನೂ ಹೇಗೆ ಉತ್ತಮ ದೇವತಾವಿಷಯತ್ವೇನ ಅಧ್ಯಯನ ಮಾಡಲಾಗುವುದೋ ಅದರಂತೆ ಅಧಮದೇವತೆಗಳ ಗುಣಗಳನ್ನು ಉತ್ತಮದೇವತೆಗಳಲ್ಲಿ ಉಪಾಸನೆ ಮಾಡುವುದು ಯುಕ್ತವೇ ಆಗಿದೆ.

ಅದಕ್ಕೇನೂ ವಿರೋಧವಿಲ್ಲ. ಬೃಹತ್ತಂತ್ರದಲ್ಲಿ ಹೀಗಿದೆ—ಅಂಗದೇವತೆಗಳ ಉಪಾಸನೆಯು ಪರಮಾಂಗತಯಾ=ಪರಮಾತ್ಮನ ಪರಿವಾರತಯಾ ಎಲ್ಲರಿಂದಲೂ ಮಾಡಲ್ಪಡಬೇಕು. ವಿಶೇಷಗುಣಗಳ ಉಪಸಂಹಾರ ಮಾತ್ರ ಅಧಿಕಾರಿ ವಿಶೇಷರಿಗೆ ಫಲವಿಶೇಷಕ್ಕಾಗಿ ಮಾತ್ರ ಕರ್ತವ್ಯವಾಗಿದೆ.

**ವಿವರಣೆ**—ವೇದಮಂತ್ರಗಳ ವ್ಯವಸ್ಥೆಯಂತೆ ಗುಣೋಪಸಂಹಾರದ ವ್ಯವಸ್ಥೆ. ಲಕ್ಷ್ಮೀದೇವಿಯು ನಿತ್ಯಮುಕ್ತಳಾದರೂ ಭಗವಂತನಲ್ಲಿ ಅತಿಶಯ ಪ್ರೀತಿಯಿಂದ ಅನಂತವೇದಗಳಲ್ಲಿ ಹೇಳಿರುವ ಹಾಗೂ ಹೇಳದಿರುವ ಭಗವದ್ಗುಣಗಳನ್ನೂ 'ಅವರ' ದೇವತೆಗಳ ಗುಣಗಳನ್ನೂ ಭಗವಂತಲ್ಲಿ ಉಪಾಸನೆ ಮಾಡುತ್ತಾಳೆ.

ಭಗವಂತನ ಪರಿವಾರಭೂತಳಾದ ಲಕ್ಷ್ಮೀದೇವಿಯನ್ನು ಬ್ರಹ್ಮಾದಿಗಳು, ಭಗವನ್ಮಾತ್ರ ಪ್ರತಿಪಾದಕಗಳಾದ ವೇದಭಾಗಗಳನ್ನು ಬಿಟ್ಟು ಉಳಿದ ವೇದಭಾಗಗಳಿಂದ ಪ್ರತಿಪಾದ್ಯಗಳಾದ ಹಾಗೂ ಅವಳಿಗಿಂತ ಅವರರಾದ ದೇವತೆಗಳ ಗುಣಗಳನ್ನು ಉಪಸಂಹಾರ ಮಾಡಿ ಧ್ಯಾನಿಸುತ್ತಾರೆ.

ರುದ್ರದೇವರು ಭಗವಂತನನ್ನು ಸ್ವಯೋಗ್ಯ ವೇದೋಕ್ತಗುಣಗಳನ್ನು ಉಪಸಂಹಾರ ಮಾಡಿ ಧ್ಯಾನಿಸುತ್ತಾರೆ. ಲಕ್ಷ್ಮೀದೇವಿಯನ್ನು ಭಗವತ್ಪರವಾದ ಸೂಕ್ತಭಾಗಗಳನ್ನು ಬಿಟ್ಟು ಇತರ ವೇದಭಾಗೋಕ್ತವಾದ ಸ್ವಯೋಗ್ಯಗುಣಗಳನ್ನು ಉಪಸಂಹಾರ ಮಾಡಿ ಧ್ಯಾನಿಸುತ್ತಾರೆ. ಬ್ರಹ್ಮದೇವರನ್ನು ಭಗವಂತ ಮತ್ತು ಲಕ್ಷ್ಮೀದೇವಿ ಮಾತ್ರ ನಿಷ್ಠವಾದ ವೇದಭಾಗಗಳನ್ನು ಬಿಟ್ಟು ಇತರ ವೇದಭಾಗಗಳಲ್ಲಿ ಹೇಳಿರುವ ಸ್ವಯೋಗ್ಯ ಗುಣಗಳನ್ನೂ 'ಅವರ' ದೇವತೆಗಳ ಗುಣಗಳನ್ನೂ ಉಪಸಂಹಾರ ಮಾಡಿ ಧ್ಯಾನಿಸುತ್ತಾರೆ.

ಈ ರೀತಿಯ ಉಪಾಸನೆ ಉತ್ತಮಾಧಿಕಾರಿಗಳಾದ ದೇವತೆಗಳಿಗೆ ಮಾತ್ರ. ಇತರ ಅಧಿಕಾರಿಗಳು, ದೇವತೆಗಳನ್ನು ಪರಿವಾರತಯಾ ಮಾತ್ರ ಉಪಾಸನೆ ಮಾಡಬೇಕು. ಇದು ಬೃಹತ್ತಂತ್ರಪ್ರಮಾಣದಲ್ಲಿರುವ 'ವಿಶೇಷೇ ತು ಫಲಾನಾಂ, ಪುರುಷಾಣಾಂ ವಿಶೇಷಾದ್ವಾ' ಎಂಬ ಪದಗಳ ಅರ್ಥ. ಪುರುಷವಿಶೇಷರು ಎಂದರೆ ಉತ್ತಮಾಧಿಕಾರಿಗಳು ಫಲವಿಶೇಷಕ್ಕಾಗಿ=ಮೋಕ್ಷಾನಂದವಿಶೇಷಕ್ಕಾಗಿ ಇಂತಹ ಉಪಾಸನೆ ಮಾಡಬೇಕು, ಎಂದು ಅರ್ಥ.

ತತ್ತ್ವಪ್ರದೀಪದಲ್ಲಿ, ಫಲವಿಶೇಷವೆಂದರೆ ಮೋಕ್ಷಾತಿರಿಕ್ತಫಲವಿಶೇಷಕ್ಕಾಗಿ ಗುಣವಿಶೇಷದ ಉಪಾಸನೆ. ಉದಾಹರಣೆಗೆ–ವಿಷಭಯನಿವಾರಣೆಗಾಗಿ ಗರುಡನಲ್ಲಿ

ವಿಷಹರತ್ವಗುಣದ ಉಪಾಸನೆ. ಅದರಂತೆ, ಪುರುಷವಿಶೇಷರು ಎಂದರೆ–ಉಮೆಯು, ರುದ್ರದೇವರನ್ನು ಪತಿತ್ವೇನ ಉಪಾಸನೆ ಮಾಡಬೇಕು. ಹೀಗೆ ಅರ್ಥವನ್ನು ಹೇಳಲಾಗಿದೆ.

ಮಂತ್ರಗಳಲ್ಲಿಯೂ ಇದೇ ರೀತಿಯ ವ್ಯವಸ್ಥೆ ಇದೆ—ಶ್ರೀಮನ್ನಾರಾಯಣನಲ್ಲಿ ಪ್ರಸಿದ್ಧವಾದ ಪುರುಷಸೂಕ್ತ, ವಿಷ್ಣುಸೂಕ್ತ, ವಾಮನಸೂಕ್ತಾದಿಗಳನ್ನು ಬಿಟ್ಟು ಉಳಿದ ಸೂಕ್ತಗಳಿಗೆ ಲಕ್ಷ್ಮೀದೇವಿಯು ದೇವತೆ. ನಾರಾಯಣನಲ್ಲಿ ಪ್ರಸಿದ್ಧವಾದ ಸೂಕ್ತಗಳು ಮತ್ತು ಲಕ್ಷ್ಮಿಯಲ್ಲಿ ಪ್ರಸಿದ್ಧವಾದ ಶ್ರೀಸೂಕ್ತ ಅಂಭ್ರಿಣೀಸೂಕ್ತಗಳನ್ನು ಬಿಟ್ಟು ಉಳಿದೆಲ್ಲಾ ಮಂತ್ರಗಳಿಗೆ ಬ್ರಹ್ಮನು ದೇವತೆ. ಮಂತ್ರಗಳಲ್ಲಿರುವ ಈ ಕ್ರಮವನ್ನೇ ಅಂಗದೇವತೆಗಳ ಉಪಾಸನೆಗೂ ಅನ್ವಯಿಸಿಕೊಳ್ಳಬೇಕು, ಎಂದು ಸೂತ್ರದ ಅರ್ಥ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**II ಓಂ ಅಂಗಾವಬದ್ಧಾಸ್ತು ನ ಶಾಖಾಸು ಹಿ ಪ್ರತಿವೇದಮ್ ಓಂ II** (ಅತ್ರ ಬ್ರಹ್ಮಾದಿಪರಿವಾರದೇವತೋಪಾಸ್ತಿಃ ಕಾರ್ಯೇತಿ ಸಾಧ್ಯತೇ। ತುರ್ವಿಶೇಷೇ। ಅಂಗಾವಬದ್ಧಾಃ–ಈಶಸ್ಯ ಅಂಗತಯಾ ಅವಬದ್ಧಾಃ=ಸ್ಥಿತಾಃ ಬ್ರಹ್ಮಾದ್ಯಾಃ ಉಪಾಸ್ಯಾಃ ಇತಿ ಶೇಷಃ। ಕುತಃ ? ವೇದೇಷು ತೇಷಾಮ್ ಉಕ್ತೇಃ ಫಲಾಂತರಾಭಾವೇನ ತದನುಪಪತ್ತೇರೇವ। ಆಧ್ಯಾನಾಯ ಇತ್ಯುಕ್ತತ್ವಾತ್, ಇತಿ। ತರ್ಹಿ ದೇವತ್ವ–ವೈಷ್ಣವತ್ವಾದಿಗುಣಾನಾಂ ಚ ಬ್ರಹ್ಮಾದಿಷು ಉಪಸಂಹಾರ್ಯತಾ ಸ್ಯಾತ್ ಇತ್ಯತ ಉಕ್ತಂ–ತ್ವಿತಿ II ಉಪಸಂಹಾರೇ ತು ಅಸ್ತಿ ವಿಶೇಷಃ ಇತ್ಯರ್ಥಃ। ಸಃ ಕಃ ? ಪ್ರತಿವೇದಂ ಯಾಃ ಶಾಖಾಃ ತಾಸು ಉಕ್ತಂ ಬ್ರಹ್ಮಾದಿಗುಣಜಾತಂ ರುದ್ರಾದೌ ನೋಪ–ಸಂಹಾರ್ಯಮ್। ಉತ್ತಮಾನಾಂ ಗುಣಾ–ಅವರೇಷು, ಸಮೇಷು ಅನ್ಯೋನ್ಯಸ್ಮಿನ್ ನ ಧ್ಯೇಯಾಃ ಇತ್ಯರ್ಥಃ। ಕುತ ಏತದಿತ್ಯತೋ ಹೀತ್ಯುಕ್ತಮ್। ಸಮತ್ವಾದ್ವಾ–ಉತ್ತಮತ್ವಾದ್ವಾ–ಇತಿ ಸ್ಮೃತೇಃ ಇತ್ಯರ್ಥಃ। ವಸ್ತುತಸ್ತು ಅಂಗಾವಬದ್ಧಾಃ ಇತ್ಯಸ್ಯ ನಾಯಮರ್ಥಃ। ಭಾಷ್ಯಾದಿವಿರೋಧಾತ್। ಕಿಂತು ಅಂಗೈಃ=ಅಂಗದೇವೈಃ ಅವಬದ್ಧಾ=ಸಂಬದ್ಧಾಃ ತದ್ವಿಷಯಾಃ ಉಪಾಸ್ತಿ–ಪರಿಚರ್ಯಾದಯಃ ಕಾರ್ಯಾಃ, ಇತ್ಯೇವಾರ್ಥಃ।)

ಈ ಅಧಿಕರಣದಲ್ಲಿ ಬ್ರಹ್ಮಾದಿಪರಿವಾರದೇವತೆಗಳ ಉಪಾಸನೆಯನ್ನೂ ಮಾಡಬೇಕು, ಎಂದು ಸಾಧಿಸಲಾಗಿದೆ. ಅಂಗಾವಬದ್ಧಾಃ–ಅಂಗೈಃ=ಭಗವಂತನ ಅಂಗಜಾತರಾದುದರಿಂದ ಅಂಗಶಬ್ದವಾಚ್ಯರಾದ ಬ್ರಹ್ಮಾದಿಗಳೊಂದಿಗೆ ಅವಬದ್ಧಾಃ= ಸಂಬದ್ಧವಾದ ಪೂಜೆ–ಪ್ರದಕ್ಷಿಣೆ ನಮಸ್ಕಾರಾದಿಗಳು ಸಾಧಕನಿಂದ ಮಾಡಲ್ಪಡಬೇಕು.

ತು=ಅವರ ಗುಣೋಪಸಂಹಾರದಲ್ಲಿ ಮಾತ್ರ ವಿಶೇಷವಿದೆ. ಪ್ರತಿವೇದಂ=ಒಂದೊಂದು ವೇದಕ್ಕೂ ಸಂಬಂಧಪಟ್ಟ ಪ್ರತಿಶಾಖಾಸು=ಒಂದೊಂದು ಶಾಖೆಗಳಲ್ಲೂ ಬ್ರಹ್ಮದೇವರಿಗೆ ಉಕ್ತವಾದ ಗುಣಗಳನ್ನು ರುದ್ರದೇವರಲ್ಲಿ ಧ್ಯಾನಿಸಬಾರದು. ಅರ್ಥಾತ್, ಉತ್ತಮರ ಗುಣಗಳನ್ನು ಸಮರಲ್ಲಿ ಅಥವಾ ಅಧಮರಲ್ಲಿ ಧ್ಯಾನಿಸಬಾರದು.

**II ಓಂ ಮಂತ್ರಾದಿವದ್ ವಾऽವಿರೋಧಃ ಓಂ II** (ವಾ ಶಬ್ದೋ ವ್ಯವಸ್ಥಿತವಿಕಲ್ಪಾರ್ಥಃ ಅವರಗುಣಾನಾಮ್ ಉತ್ತಮೇಷು ಉಪಸಂಹಾರೇऽಪಿ ಅವಿರೋಧಃ । ಮಂತ್ರಾದಿವತ್ । ಯಥಾ ಮಂತ್ರವಿದ್ಯಾದೇಃ ಅಧಮಪರಸ್ಯ ಉತ್ತಮವಿಷಯತ್ವೇನ ಅಧ್ಯಯನಂ ತಥಾ, ಇತ್ಯರ್ಥಃ ।)

ಅಧಮದೇವತಾಕಮಂತ್ರಗಳನ್ನು ಉತ್ತಮದೇವತಾಪರವಾಗಿ ಅಧ್ಯಯನ ಮಾಡಿದರೆ ಹೇಗೆ ವಿರೋಧವಿಲ್ಲವೋ ಅದರಂತೆ, ಅಧಮದೇವತೆಗಳ ಗುಣಗಳನ್ನು ಉತ್ತಮರಲ್ಲಿ ಧ್ಯಾನಿಸಬಹುದು. ಇದು ದೇವತೆಗಳಿಗೆ ಮಾತ್ರ ಸಂಬಂಧಿಸಿದ ವಿಕಲ್ಪ.

## ಅದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**II ಅಂಗಾವಬದ್ಧಾಸ್ತು ನ ಶಾಖಾಸು ಹಿ ಪ್ರತಿವೇದಮ್ II** ದೇಹಾತಿರಿಕ್ತ ಆತ್ಮಸಾಧನೆ 'ಪ್ರಾಸಂಗಿಕೀ ಕಥಾ?' ಅದನ್ನು ಮುಗಿಸಿ ಮತ್ತೆ ಉಪಾಸನೆಯ ಬಗ್ಗೆ ಈ ಅಧಿಕರಣದಲ್ಲಿ ವಿಚಾರ ಮಾಡಲಾಗಿದೆ. 'ಓಮಿತ್ಯೇತದಕ್ಷರಮ್ ಉದ್ಗೀಥಮ್ ಉಪಾಸೀತ' (ಛಾಂ.1.1.1) ಇಂತಹ ಕರ್ಮಾಂಗವಾದ ಕೆಲವು ಉಪಾಸನೆಗಳನ್ನು ಉಪನಿಷತ್ತಿನಲ್ಲಿ ಹೇಳಲಾಗಿದೆ. ಹಿಂಕಾರ, ಪ್ರಸ್ತಾವ, ಉದ್ಗೀಥ, ಪ್ರತಿಹಾರ, ನಿಧನ ಎಂದು ಐದು ವಿಧವಾದ ಸಾಮಭಕ್ತಿಗಳಿವೆ. 'ಓಂಕಾರವನ್ನು ಉದ್ಗೀಥಸಾಮ' ಎಂದು ಉಪಾಸನೆ ಮಾಡಿ ಕರ್ಮ ಮಾಡಿದರೆ ಕರ್ಮಫಲವು ಸಮೃದ್ಧಿಯಾಗುತ್ತದೆ. ಉದ್ಗೀಥ ಸಾಮವು ಒಂದೊಂದು ವೇದದಲ್ಲಿ, ಒಂದೊಂದು ಶಾಖೆಯಲ್ಲಿ ಭಿನ್ನಭಿನ್ನವಾದುದು. ಆ ಎಲ್ಲಾ ಸಾಮಭಕ್ತಿಗಳನ್ನು ಓಂಕಾರವನ್ನಾಗಿ ಉಪಾಸನೆ ಮಾಡಬೇಕೋ ಅಥವಾ ಯಾವ ವೇದದಲ್ಲಿ ಈ ಉಪಾಸನೆಯನ್ನು ಹೇಳಲಾಗಿದೆಯೋ ಆ ವೇದೋಕ್ತ ಉದ್ಗೀಥಸಾಮ ದಲ್ಲಿ ಮಾತ್ರವೇ ಓಂಕಾರೋಪಾಸನೆ ಮಾಡಬೇಕೋ? ಎಂದು ಸಂದೇಹ. ಸನ್ನಿಹಿತವಾದುದುದರಿಂದ ಆ ವೇದಗತ ಉದ್ಗೀಥ ಸಾಮವನ್ನು ಮಾತ್ರ ಓಂಕಾರದಲ್ಲಿ ಉಪಾಸನೆ ಮಾಡಬೇಕು ಎಂದು ಭ್ರಮೆ ಬಂದಾಗ ಈ ಸೂತ್ರ ಪ್ರತಿಶಾಖೆ, ಪ್ರತಿವೇದಕ್ಕೆ ಸಂಬಂಧಿಸಿದ ವಿಧಿಯಲ್ಲ ಇದು. ಸರ್ವಶಾಖೆ, ಸರ್ವವೇದಗತ ಉದ್ಗೀಥಗಳನ್ನೂ

ಓಂಕಾರವನ್ನಾಗಿ ಉಪಾಸನೆ ಮಾಡಬೇಕು. ಇವು ಅಂಗಾವಬದ್ಧಾಸ್ತು=ಅಂಗಸಂಬಂಧಿಯಾದ ಉಪಾಸನಾದಿಗಳು.ಅಂತಹ ಉಪಾಸನಾದಿಗಳಲ್ಲಿ ನಿರ್ಬಂಧವಿಲ್ಲ, ಎಂದು ಸೂತ್ರದ ಅರ್ಥ. 'ಓಮಿತ್ಯೇತದಕ್ಷರಂ ಉದ್ಗೀಥಂ' ಎಂಬ ವಿಧಿವಾಕ್ಯಗತವಾದ ಉದ್ಗೀಥಶ್ರುತಿ ಸಾಮಾನ್ಯಶ್ರುತಿ. ಸಕಲ ವೇದಗತವಾದ ಉದ್ಗೀಥಸಾಮಭಕ್ತಿಯನ್ನೂ ಅದು ಹೇಳುತ್ತದೆ. ಸನ್ನಿಧಿಗಿಂತಲೂ ಶ್ರುತಿಯು ಪ್ರಬಲ. ಆದ್ದರಿಂದ ಸಕಲ ಉದ್ಗೀಥಗಳಲ್ಲೂ ಪ್ರಣವೋಪಾಸನೆ ಮಾಡಬೇಕು.

**॥ ಮಂತ್ರಾದಿವದ್ ವಾಽವಿರೋಧಃ ॥** ಮಂತ್ರಾದಿಗಳಂತೆ ಇದು ಅವಿರುದ್ಧವೂ ಆಗಿದೆ. ಯಜುರ್ವೇದದಲ್ಲಿ 'ಕುಕ್ಕುಟೋಽಸಿ' ಎಂಬ ಮಂತ್ರ ಇದೆ, 'ಕುಟರುರಸಿ' ಎಂಬ ಮಂತ್ರವಿಲ್ಲ. ತಂಡುಲಪೇಷಣಕ್ಕಾಗಿ ಇರುವ ಕಲ್ಲನ್ನು ಆದಾನ ಮಾಡುವಾಗ 'ಕುಕ್ಕುಟೋಽಸೀತ್ಯಶ್ಮಾನಮಾದತ್ತೇ, 'ಕುಟರುರಸೀತಿ ವಾ' ಎಂದು ಈ ಎರಡರಲ್ಲಿ ಒಂದು ಮಂತ್ರವನ್ನು ಹೇಳಬೇಕೆನ್ನಲಾಗಿದೆ. ಯಜುರ್ವೇದದಲ್ಲಿ ಇಲ್ಲದಿರುವ 'ಕುಟರುರಸಿ' ಎಂಬ ಮಂತ್ರವನ್ನೂ ಯಜುರ್ವೇದಿಗಳು ಅಶ್ಮಾದಾನ ಮಾಡುವಾಗ ಹೇಳಬಹುದು. ಹೀಗೆ ಮಂತ್ರದಲ್ಲಿ ಆ ವೇದದವರಿಗೆ ಅದೇ ವೇದದ ಮಂತ್ರಗಳು ಎಂಬ ನಿರ್ಬಂಧವಿಲ್ಲ, ಅದರಂತೆ ಪ್ರಣವೋಪಾಸನೆಗೂ ವೇದ ಅಥವಾ ಶಾಖೆಗಳ ನಿರ್ಬಂಧವಿಲ್ಲ, ಸೂತ್ರದ ಆದಿಪದದಿಂದ ಕರ್ಮ ಮತ್ತು ಗುಣಗಳು ವಿವಕ್ಷಿತವಾಗಿವೆ. ಅವುಗಳನ್ನು ಒಂದು ಶಾಖೆಯಲ್ಲಿ ಹೇಳಿದ್ದನ್ನು ಇನ್ನೊಂದು ಶಾಖೆಯಲ್ಲಿ ಅನುಷ್ಠಾನ ಮಾಡುವುದಿದೆ.

**ವಿಮರ್ಶೆ**—ಹಿಂದಿನ ಸರ್ವವೇದಾಂತ ಪ್ರತ್ಯಯಾಧಿಕರಣದಲ್ಲಿ (3.3.1) ಮತ್ತು ಶಾಖಾಂತರಾಧಿಕರಣದಲ್ಲಿ(3.3.6) ಒಂದು ಶಾಖೆಯಲ್ಲಿ ಹೇಳಿರುವ ವಿದ್ಯೆಗೂ ಇನ್ನೊಂದು ಶಾಖೆಯಲ್ಲಿ ಹೇಳಿರುವ ವಿದ್ಯೆಗೂ 'ರೂಪವು' ಒಂದೇ ಆಗಿದ್ದಲ್ಲಿ ಎರಡು ವಿದ್ಯೆಗಳೂ ಒಂದೇ ಎಂದು ಸಿದ್ಧಾಂತ ಮಾಡಲಾಗಿದೆ. ಅದರಿಂದಲೇ ಇದೂ ಗತಾರ್ಥ. ಉದ್ಗೀಥಸಾಮದಲ್ಲಿ ವೇದಭೇದೇನ ಸ್ವರಾದಿಗಳಲ್ಲಿ ಭೇದವಿರುವುದರಿಂದ ಇಲ್ಲಿ ಉಪಾಸನಾಭೇದ ಶಂಕೆಯನ್ನು ಪರಿಹರಿಸಲಾಗಿದೆ, ಎಂಬ ಸಮಾಧಾನವೂ ಸಾಧುವಲ್ಲ, ಅನೇಕ ಸಾಮ್ಯಗಳಿರುವಾಗ ಈ ಅಲ್ಪ ವೈಷಮ್ಯ ಶಂಕಾ ಹೇತುವೇ ಅಲ್ಲ. ಅಲ್ಲದೆ, ಈ ಶಂಕೆಗೆ ಕಾರಣವಾದ ಸ್ವರಭೇದಕ್ಕೆ ಇಲ್ಲಿ ಪರಿಹಾರವನ್ನೂ ಹೇಳಲಾಗಿಲ್ಲ.

**ಇಲ್ಲಿ ಅಂಗಾವಬದ್ಧಾಧಿಕರಣವು ಮುಗಿಯಿತು.**

## ೩೭. ಭೂಮಾಧಿಕರಣಮ್

**॥ ಓಂ ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾಚ ದರ್ಶಯತಿ ಓಂ ॥ ೫೯ ॥**

**ಸರ್ವಗುಣೇಷು ಭೂಮಗುಣಸ್ಯ ಜ್ಯಾಯಸ್ತ್ವಂ ಕ್ರತುವತ್ ಸರ್ವತ್ರ ಸಹಭಾವಾತ್ ।**

**'ಭೂಮ್ನೈವ ದೇವಃ ಪರಮೋ ಹ್ಯುಪಾಸ್ಯೋ**
**ನೈವಾಭೂಮಾ ಫಲಮೇಷಾಂ ವಿಧತ್ತೇ ।**
**ತಸ್ಮಾದ್ ಭೂಮಾ ಗುಣತೋ ವೈ ವಿಶಿಷ್ಟೋ**
**ಯಥಾ ಕ್ರತುಃ ಕರ್ಮಮಧ್ಯೇ ವಿಶಿಷ್ಟಃ ॥' ಇತಿ ಚ ಗೌಪವನಶ್ರುತಿಃ ।**

ಸರ್ವಗುಣಗಳಲ್ಲೂ ಭೂಮಗುಣವು ಪ್ರಧಾನವಾದುದು. ಅದು 'ಕ್ರತು'ವಿನಂತೆ ಎಲ್ಲಾ ಗುಣಗಳಿಗೂ ಸಂಬಂಧಿಸಿದೆ. ಗೌಪವನಶ್ರುತಿ ಹೀಗಿದೆ—ಗುಣಪೂರ್ಣನಾದ ಸರ್ವೋತ್ತಮನಾದ ದೇವನೇ ಸಾಧಕರಿಂದ ಉಪಾಸ್ಯನಾಗಿದ್ದಾನೆ. ಅಪೂರ್ಣನು ಸಾಧಕರಿಗೆ ಫಲ ನೀಡಲಾರ. ಸರ್ವಗುಣಗಳಿಗೂ ಸಂಬಂಧಿಸಿರುವುದರಿಂದ ಭೂಮಗುಣವು (ಪೂರ್ಣತ್ವವು) ಕರ್ಮಗಳಲ್ಲಿ ಕ್ರತುವಿನಂತೆ ಪ್ರಧಾನವಾದುದು.

ವಿವರಣೆ—ಸರ್ವೋಪಾಸ್ಯವಾದ ಗುಣಗಳು ಸತ್, ಚಿತ್, ಆನಂದ, ಆತ್ಮ–ಈ ನಾಲ್ಕು. ಭೂಮಗುಣವು ಇದರಲ್ಲಿ ಸೇರಿಲ್ಲ. ಆದಕಾರಣ ಅದು ಉಪಾಸ್ಯವಲ್ಲ, ಎಂಬ ಆಕ್ಷೇಪಕ್ಕೆ ಉತ್ತರ ಈ ಸೂತ್ರ–ಭೂಮ ಎಂದರೆ ಪೂರ್ಣ. ಭಗವಂತನೂ ಸಕಲಗುಣಗಳಿಂದ ಪೂರ್ಣ, ಅವನ ಜ್ಞಾನಾನಂದಾದಿ ಒಂದೊಂದು ಗುಣಗಳೂ ಪೂರ್ಣಗಳು. ಹೀಗೆ ಉಪಾಸ್ಯವಾದ ಒಂದೊಂದು ಗುಣಗಳಲ್ಲೂ ಭೂಮತ್ವವಿರುವುದರಿಂದ ಅದು ಪ್ರಧಾನವಾದ ಗುಣ. ಚತುರ್ಗುಣೋಪಾಸಕರೂ ತಾವು ಉಪಾಸನೆ ಮಾಡಬೇಕಾಗಿರುವ ಚತುರ್ಗುಣಗಳನ್ನೇ ಭೂಮತ್ವೇನ ಉಪಾಸನೆ ಮಾಡಬೇಕು.

ಇದಕ್ಕೆ ಸೂತ್ರಕಾರರು ಕೊಟ್ಟಿರುವ ಉದಾಹರಣೆ—'ಕ್ರತುವತ್' ಎಂದು. ಇದನ್ನು ತತ್ವಪ್ರದೀಪದಲ್ಲಿ ಹೀಗೆ ವ್ಯಾಖ್ಯಾನಿಸಲಾಗಿದೆ—''ಯಥಾ ಸವನತ್ರಯಾತ್ಮಕಃ ಕ್ರತುಃ ಅಹೀನಾದಿಷು ಪ್ರತ್ಯಹಂ ಸಂಬಂಧ್ಯಮಾನಃ ವಿಶಿಷ್ಟಃ ಭವತಿ । ತಮಂತರೇಣ

ಏಕಸ್ಯಾಪಿ ಅಹ್ನಃ ಅನನುಷ್ಠೇಯತ್ವೇನ 'ಧ್ರುವಾಃ ಸತ್ರಾಣಾಂ ಅಹೀನಾಃ' ಇತಿ ಚ ಸತ್ರಾಣಿ ಪ್ರಕೃತ್ಯ ಯಾಜ್ಞಿಕೋಕ್ತಿಃ, ಏವಮಿಹಾಪಿ।'' ಯಾಗದಲ್ಲಿ ಪ್ರಾತಃಸವನ, ಮಾಧ್ಯಂದಿನ ಸವನ ಮತ್ತು ಸಾಯಂ ಸವನ ಎಂದು ಸವನತ್ರಯಗಳು ವಿಹಿತವಾಗಿವೆ. ಸವನ ಎಂದರೆ ಸೋಮಲತೆಯನ್ನು ಹಿಂಡಿ ರಸತೆಗೆದು ಹೋಮಿಸುವುದು. ಈ ಸವನತ್ರಯಗಳು 12 ದಿನಗಳಲ್ಲಿ (ಅಹೀನಾದಿಷು) ಮಾಡುವ ಯಾಗಗಳ ಪ್ರತಿದಿನವೂ ಅವಶ್ಯಕರ್ತವ್ಯಗಳಾದುದರಿಂದ ಪ್ರಧಾನವಾಗಿರುವಂತೆ ಪ್ರಕೃತ ಭೂಮಗುಣವೂ ಎಲ್ಲಾ ಭಗವದ್ಗುಣಗಳಿಗೂ ಸಂಬಂಧಿಸಿರುವುದರಿಂದ ಪ್ರಧಾನ.

ತತ್ತ್ವಪ್ರಕಾಶಿಕಾದಲ್ಲಿ ಹೀಗಿದೆ—ಯಥಾ ಖಲು ದೀಕ್ಷಾ–ಪ್ರಾಯಣೀಯ ಉದಯನೀಯ – ಸವನತ್ರಯ – ಅವಭೃತಾತ್ಮಕಕ್ರತೋಃ ಸರ್ವಯಾಗೇಷು ಅನುವರ್ತನೇ ಏವ ಸಾಫಲ್ಯಾತ್ ಅನ್ಯಥಾ ವೈಫಲ್ಯಾತ್ ಜ್ಯಾಯಸ್ತ್ವಂ, ತತಶ್ಚ ಸರ್ವೈಃ ಕರ್ತವ್ಯತ್ವಮ್। ದೀಕ್ಷಾ ಎಂದರೆ ಹೋಮ ಮಾಡುವ ಯಜಮಾನನಿಗೆ ಮಾಡುವ ಸಂಸ್ಕಾರ. ಪ್ರಾಯಣೀಯ ಮತ್ತು ಉದಯನೀಯ ಇವೆರಡು ಯಜ್ಞದ ಪ್ರಾರಂಭ ಮತ್ತು ಕೊನೆಯಲ್ಲಿ ಮಾಡಬೇಕಾದ ಹೋಮಗಳು. ಪ್ರಾತಃ ಸವನ, ಮಾಧ್ಯಂದಿನ ಸವನ ಮತ್ತು ತೃತೀಯಸವನ ಇವು ಮೂರು ಒಂದುದಿನ ಮೂರು ಹೊತ್ತುಗಳಲ್ಲಿ ಸೋಮರಸ ಹಿಂಡಿ ಕೊಡುವ ಆಹುತಿಗಳು–ಸವನತ್ರಯಗಳು. ಅವಭೃತ ಎಂದರೆ ಯಾಗದ ಮುಕ್ತಾಯದಲ್ಲಿ ಮಾಡಬೇಕಾದ ಇಷ್ಟಿ. ಇವುಗಳಿಗೆಲ್ಲ ಕ್ರತು ಎಂದು ಹೆಸರು. ಈ ಕ್ರತುವನ್ನು ಸೋಮಯಾಗದ ಏಳು ಪ್ರಭೇದಗಳಲ್ಲೂ ಮಾಡಬೇಕು. ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಅತಿರಾತ್ರ, ಷೋಡಶೀ, ಉಕ್ಥ, ವಾಜಪೇಯ, ಆಪ್ತೋರ್ಯಾಮ ಇವು ಏಳು ಸೋಮಯಾಗಗಳು. ಈ ಏಳು ಸೋಮಯಾಗಗಳಲ್ಲೂ ಪೂರ್ವೋಕ್ತ ಕ್ರತುಗಳನ್ನು ಮಾಡಬೇಕು. ಆಗ ಮಾತ್ರ ಆ ಯಾಗಗಳು ಸಾರ್ಥಕವಾಗುತ್ತವೆ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**।। ಓಂ ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾಚ ದರ್ಶಯತಿ ಓಂ ।।** (ಅತ್ರ ಭೂಮಗುಣಸ್ಯ ಸರ್ವೋಪಾಸ್ಯತ್ವಮುಚ್ಯತೇ। ಭೂಮೇತ್ಯತ್ರ ಭಾವಭವಿತ್ರೋಃ ಐಕ್ಯೇನ ಧರ್ಮಿಪರತ್ವೋಕ್ತಾವಪಿ ಇಹ ನಿರತಿಶಯಪೂರ್ಣತ್ವರೂಪಧರ್ಮಪರಃ, ಭಾವಪ್ರಧಾನೋ ವಾ ಭೂಮಶಬ್ದಃ। ಉಪಾಸ್ಯ ಇತ್ಯಸ್ತಿ।

ಭೂಮಗುಣಃ ಸರ್ವೈರುಪಾಸ್ಯಃ। ಕುತಃ? ಭೂಮ್ನಃ=ಭೂಮಗುಣಸ್ಯ, ಸರ್ವಗುಣೇಷು ಪ್ರಾಧಾನ್ಯಂ ಯತಃ, ಅತ ಇತಿ। ಜ್ಯಾಯಸ್ತ್ವಂ ಕುತಃ ? ಕ್ರತುವತ್।

ಅನೇನ ಸರ್ವಗುಣೇಷು ಅನುಸ್ಯೂತತ್ವೇನ ಆನಂದಾದಿಗುಣೋಪಾಸ್ತಿಫಲಹೇತುತ್ವಾತ್ ಇತಿ ಹೇತುಃ ಲಭ್ಯತೇ। ಯಥಾ, ದೀಕ್ಷಾ–ಪ್ರಾಯಣೀಯ–ಉದಯನೀಯ–ಸವನತ್ರಯ–ಅವಭೃತಾತ್ಮಕಃ ಕ್ರತುಃ ವಿಶ್ವಜಿದಾದಿ ಸರ್ವಯಾಗೇಷು ಅನುವೃತ್ತತ್ವೇನ ತತ್ತದ್ಯೋಗ್ಯಾನುಷ್ಠಾನಫಲಹೇತುರಿತಿ ತಸ್ಯ ಜ್ಯಾಯಸ್ತ್ವಂ ತಥೇತ್ಯರ್ಥಃ। ಇತರ ಗುಣಾಪೇಕ್ಷಯಾ ಅಸ್ಯ ಪ್ರಶಸ್ತತ್ವದ್ಯೋತನಾಯ ಪ್ರಕರ್ಷಪ್ರತ್ಯಯಃ। ಸರ್ವಾನುಸ್ಯೂತತ್ವೇನ ಅಸ್ಯೈವ ಫಲಹೇತುತ್ವಂ ಕುತಃ? ತಥಾ ದರ್ಶಯತಿ ಚ।)

ಭೂಮ್ನಃ=ಪೂರ್ಣತ್ವಗುಣವು ಜ್ಯಾಯಸ್ತ್ವಂ=ಸರ್ವಗುಣಗಳಲ್ಲೂ ಪ್ರಧಾನವಾದುದರಿಂದ ಅದನ್ನು ಎಲ್ಲಾ ಮುಮುಕ್ಷುಗಳೂ ಉಪಾಸನೆ ಮಾಡಬೇಕು. ಅದರ ಪ್ರಾಧಾನ್ಯಕ್ಕೆ ಉದಾಹರಣೆ—ಕ್ರತುವತ್। ಇಲ್ಲಿ ಕ್ರತು ಶಬ್ದಕ್ಕೆ ಜ್ಯೋತಿಷ್ಟೋಮಾದಿ ಯಾಗ ಎಂದು ಅರ್ಥವಲ್ಲ. ಹಿಂದೆ ಹೇಳಿರುವ ದೀಕ್ಷಾದಿಗಳು ಅರ್ಥ. ಅದು ಸೋಮಯಾಗಗಳಲ್ಲಿ ಅನುಸ್ಯೂತವಾಗಿರುವಂತೆ ಭೂಮಗುಣವೂ ಭಗವಂತನ ಎಲ್ಲಾ ಗುಣಗಳಲ್ಲೂ ಇರುವ ಧರ್ಮ. ಆದ್ದರಿಂದ ಅದು ಪ್ರಧಾನ. ಪ್ರಧಾನವಾದರೂ ಅದರ ಉಪಾಸನೆ ಫಲಹೇತು ಏಕೆ? ಅದಕ್ಕುತ್ತರ–ತಥಾಚ ದರ್ಶಯತಿ, ಎಂದು. ಅದಕ್ಕೆ ಶ್ರುತಿಯೇ ಆಧಾರ.

## ಅದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾಚ ದರ್ಶಯತಿ ॥** 1. ವೈಶ್ವಾನರ ವಿದ್ಯೆಯು ಪ್ರಸ್ತುತವಾಗಿದೆ. ಪ್ರಾಚೀನಶಾಲ ಮೊದಲಾದ ಆರು ಋಷಿಗಳು ಕೇಕಯರಾಜ್ಯದ ಅಶ್ವಪತಿಯ ಬಳಿ ಬಂದು ವೈಶ್ವಾನರವಿದ್ಯೆಯ ವಿವರವನ್ನು ಕೇಳಿ ತಿಳಿಯುತ್ತಾರೆ. ಮೊದಲು ಉಪಮನ್ಯುವಿನ ಮಗನಿಗೆ ರಾಜ ಕೇಳುತ್ತಾನೆ. ''ಔಪಮನ್ಯವ ಕಂ ತ್ವಮಾತ್ಮಾನಮ್ ಉಪಾಸ್ಸೇ ಇತಿ'' ''ನೀನು ಯಾವ ರೀತಿಯಲ್ಲಿ ಆತ್ಮೋಪಾಸನೆಯನ್ನು ಮಾಡುವಿ?'' ಅದಕ್ಕೆ ಋಷಿ ಉತ್ತರಿಸಿದ–ದಿವಮೇವ ಭಗವೋ ರಾಜನ್ನಿತಿ ಹೋವಾಚ–ನಾನು ದ್ಯುಲೋಕವನ್ನು ಆತ್ಮನೆಂದು ಉಪಾಸನೆ ಮಾಡುತ್ತೇನೆ'' ರಾಜನೆಂದ–''ಏಷ ವೈ ಸುತೇಜಾ ಆತ್ಮಾ ವೈಶ್ವಾನರೋ ಯಂ ತ್ವಮಾತ್ಮಾನಮ್ ಉಪಾಸ್ಸೇ–ನೀನು ಉಪಾಸನೆ ಮಾಡುತ್ತಿರುವ ಈ ಲೋಕ ವೈಶ್ವಾನರಾತ್ಮ. ಮೂರ್ಧಾತ್ವೇಷ ಆತ್ಮನಃ–ಈ ದ್ಯುಲೋಕವು ವೈಶ್ವಾನರಾತ್ಮನ ತಲೆ ಎಂಬ ಅಂಗ'' ಹೀಗೆ ಹೇಳಿ ವೈಶ್ವಾನರನ ಸಮಗ್ರಾವಯವಗಳನ್ನು ತಿಳಿಸುತ್ತಾನೆ. ಈ ಪ್ರಕರಣದಲ್ಲಿ ವೈಶ್ವಾನರನನ್ನು 'ದ್ಯು' ಮೊದಲಾದ ಒಂದೊಂದು ಲೋಕದಲ್ಲಿ ಉಪಾಸನೆ ಮಾಡಬಹುದೋ (ವ್ಯಸ್ತವಾದ ಉಪಾಸನೆಯೋ) ಅಥವಾ ಸಮಗ್ರಾವಯವದ (ಸಮಸ್ತೋಪಾಸನೆ)

ಉಪಾಸನೆಯೇ ಅಭಿಪ್ರೇತವೋ? ಅದಕ್ಕೆ ಸೂತ್ರಕಾರರ ಉತ್ತರ–'ಭೂಮ್ನಃ ಜ್ಯಾಯಸ್ತ್ವಂ' ಭೂಮ್ನಃ=ಸಮಸ್ತಾವಯವನಾದ ವೈಶ್ವಾನರನ ಸಮಸ್ತೋಪಾಸನೆಯೇ ಜ್ಯಾಯಃ= ಶ್ರೇಷ್ಠವಾದುದು, ವ್ಯಸ್ತೋಪಾಸನೆಯಲ್ಲ. ಕ್ರತುವತ್–ದರ್ಶಪೂರ್ಣ ಮಾಸಾದಿಕ್ರತುಗಳ ಒಂದಂಗವನ್ನಾಗಲೀ ಅಥವಾ ಏಕಾಂಗಯುಕ್ತವಾದ ಯಾಗವನ್ನಾಗಲೀ ಮಾಡಬಾರದು. ಸಮಸ್ತಾಂಗಸಹಿತವಾದ ಯಾಗವೇ ಫಲಪ್ರದವೋ ಅದರಂತೆ ವೈಶ್ವಾನರನನ್ನೂ ಸಮಸ್ತಾಂಗಯುಕ್ತವಾಗಿಯೇ ಉಪಾಸನೆ ಮಾಡಬೇಕು. ತಥಾಹಿ ದರ್ಶಯತಿ–ಕೇಕಯರಾಜನು 'ತಸ್ಯ ಹ ವಾ ಏತಸ್ಯಾತ್ಮನಃ ವೈಶ್ವಾನರಸ್ಯ ಮೂರ್ಧೈವ ಸುತೇಜಾಃ ಚಕ್ಷುರ್ವಿಶ್ವರೂಪಃ, ಪ್ರಾಣಃ ಪೃಥಗ್‌ವರ್ತ್ಮಾ, ಸಂದೋಹೋ ಬಹುಲಃ, ಬಸ್ತಿರೇವ ರಯಿಃ, ಪೃಥಿವ್ಯೇವ ಪಾದೌ' ಎಂದು ಸಮಗ್ರಾವಯವಗಳನ್ನು ಹೇಳಿ 'ನೀವು ಒಂದೊಂದು ಅವಯವಗಳನ್ನಷ್ಟೇ ಉಪಾಸನೆ ಮಾಡುತ್ತಿದ್ದು ಅದು ಅನರ್ಥಕರ, ಸಮಸ್ತೋಪಾಸನೆಯೇ ಫಲಪ್ರದ, ಎಂದು ಉಪದೇಶಿಸುತ್ತಾನೆ. ಆದ್ದರಿಂದ ಸಮಗ್ರೋಪಾಸನೆಯನ್ನೇ ಮಾಡಬೇಕು, ಎಂದು ತಿಳಿಯುತ್ತದೆ.

**ವಿಮರ್ಶೆ**—ಈ ಅಧಿಕರಣದಲ್ಲಿ ಸಮಸ್ತೋಪಾಸ್ತಿಯು ಅನಿಂದಿತವಾದ ಕಾರಣದಿಂದ ಅದು ಕರ್ತವ್ಯ ಎಂದು ಸಿದ್ಧಾಂತವಲ್ಲ. ಅದನ್ನು ಪೂರ್ವಪಕ್ಷಿಯೂ ಒಪ್ಪಿದ್ದಾನೆ. ವ್ಯಸ್ತೋಪಾಸನೆಯನ್ನು ಮಾಡಬಹುದು ಎಂದಿಷ್ಟೇ ಪೂರ್ವಪಕ್ಷ. ಸಮಸ್ತೋಪಾಸನೆ ಬೇಡ ಎಂದೇನೂ ಪೂರ್ವಪಕ್ಷಿಯು ನಿರಾಕರಿಸುತ್ತಿಲ್ಲ. ಇನ್ನು ವ್ಯಸ್ತೋಪಾಸನೆಯು ನಿಂದಿಸಲ್ಪಟ್ಟಿರುವುದರಿಂದ ಸಮಸ್ತೋಪಾಸನೆಯನ್ನೇ ಮಾಡ ಬೇಕು, ಎಂದು ಸಿದ್ಧಾಂತವೂ ಉಚಿತವಲ್ಲ. ಹಾಗಾದಲ್ಲಿ, 'ಶ್ಯಾಮಃ ಶ್ವಾ ಆಹುತಿಮ್ ಅಭ್ಯವಹರತಿ ತಸ್ಯ ಯೋಽನುದಿತೇ ಜುಹೋತಿ' ಎಂದು ಅನುದಿತ ಹೋಮವನ್ನು ನಿಂದಿಸಿರುವುದರಿಂದ ಉದಿತಹೋಮವೇ ಕರ್ತವ್ಯವೆಂದಾದೀತು. ಆದ್ದರಿಂದ ಸಿದ್ಧಾಂತಯುಕ್ತಿ ಸರಿಯಲ್ಲ.

**ಇಲ್ಲಿಗೆ ಭೂಮಾಧಿಕರಣವು ಸಮಾಪ್ತವಾಯಿತು.**

## ೩೮. ನಾನಾಶಬ್ದಾಧಿಕರಣಮ್

### ॥ ಓಂ ನಾನಾ ಶಬ್ದಾದಿಭೇದಾತ್ ಓಂ ॥ ೬೦ ॥

**'ಶಬ್ದೋಽನುಮಾ ತಥೈವಾಕ್ಷೋ ಯೋಗ್ಯತಾಭೇದತಃ ಸದಾ ।**
**ಬ್ರಹ್ಮಾದೀನಾಮೇಕಮರ್ಥಂ ಬಹುಧಾ ದರ್ಶಯಂತಿ ಹಿ ॥**

**ಅತಃ ಪೂರ್ಣತ್ವಮೀಶಸ್ಯ ನಾನ್ಯೈವೈಷಾಂ ಪ್ರದೃಶ್ಯತೇ ।**
**ಅತಃ ಫಲಸ್ಯ ನಾನಾತ್ವಂ ನಾನ್ಯೈವೋಪಾಸನಂ ಯತಃ ॥'**

**ಇತಿ ಹಿ ಬ್ರಹ್ಮತರ್ಕೇ ।**

**ಅತೋ ಭೂಮತ್ವಮಪಿ ನಾನ್ಯೈವೋಪಾಸ್ಯತೇ ॥**

ಈ ಭೂಮಗುಣವು ಅಧಿಕಾರಿಭೇದೇನ ಭಿನ್ನ. ಬ್ರಹ್ಮತರ್ಕದಲ್ಲಿ ಹೀಗಿದೆ—ಶಬ್ದ ಅಂದರೆ ವೇದ, ಅನುಮಾನ ಎಂದರೆ ಬ್ರಹ್ಮಸೂತ್ರಗಳಲ್ಲಿ ಹೇಳಿರುವ ಯುಕ್ತಿಗಳು, ಧ್ಯಾನದಿಂದಾಗುವ ಪರಮಾತ್ಮನ ಪ್ರತ್ಯಕ್ಷ ಈ ಮೂರು ಪ್ರಮಾಣಗಳು ಭಗವಂತನ ಒಂದೇ ಗುಣದಲ್ಲಿರುವ ಭೂಮತ್ವವನ್ನು ಬ್ರಹ್ಮಾದಿ ಬೇರೆಬೇರೆ ಅಧಿಕಾರಿಗಳಿಗೆ ಬೇರೆಬೇರೆಯಾಗಿಯೇ ತಿಳಿಸಿಕೊಡುತ್ತವೆ. ಹೀಗೆ ಭಗವಂತನ ಪೂರ್ಣತ್ವವು ನಾನಾವಿಧವಾಗಿದ್ದು ಉಪಾಸಕರ ಯೋಗ್ಯತಾನುಸಾರವಾಗಿ ಅನೇಕವಿಧವಾಗಿಯೇ ಕಾಣುತ್ತದೆ. ಹೀಗೆ ಉಪಾಸನಾರೂಪವಾದ ಸಾಧನೆಯು ವಿಭಿನ್ನವಾಗಿರುವುದರಿಂದ ಅದಕ್ಕೆ ಅನುಗುಣವಾಗಿ ಫಲವಾದ ಮೋಕ್ಷಾನಂದವೂ ಭಿನ್ನವಾಗಿದೆ. ಆದ್ದರಿಂದ ಭೂಮಗುಣವೂ ವಿಭಿನ್ನವಾಗಿಯೇ ಉಪಾಸ್ಯವಾಗಿದೆ.

**ವಿವರಣೆ**—ಒಂದೇ ಆನಂದದಲ್ಲಿ ಅನೇಕ ವಿಧವಾದ ಪೂರ್ಣತೆ ಇದೆ. ದಿನ, ಮಾಸ, ವರ್ಷಗಳ ಆನಂತ್ಯದಲ್ಲಿ ತಾರತಮ್ಯವಿರುವಂತೆ ಭೂಮತ್ವದಲ್ಲಿ ತಾರತಮ್ಯವಿದೆ. ಒಂದೇ ವಸ್ತು ಕಣ್ಣಿನ ಸಾಮರ್ಥ್ಯಕ್ಕೆ ಅನುಗುಣವಾಗಿ ಹೆಚ್ಚು ಹೆಚ್ಚು ವಿಶದವಾಗಿ ತೋರುವಂತೆ ಭಗವಂತನ ಒಂದೊಂದು ಗುಣಗಳಲ್ಲಿ ಇರುವ ಪೂರ್ಣತೆಯೂ ಅಧಿಕಾರಿಗಳ ಯೋಗ್ಯತೆಗೆ ಅನುಸಾರವಾಗಿ ಬೇರೆ ಬೇರೆಯಾಗಿಯೇ ತೋರುತ್ತದೆ. ಭಗವಂತನ ಗುಣಗಳನ್ನು ನಾವು ಮೊದಲು ತಿಳಿಯುವುದು ವೇದಗಳಿಂದ, ಆಮೇಲೆ ಬ್ರಹ್ಮಸೂತ್ರಗಳು ಹೇಳುವ ಯುಕ್ತಿಗಳಿಂದ. ಆಮೇಲೆ ಭಗವಂತನ ಅಪರೋಕ್ಷದಿಂದ. ಈ ಮೂರೂ ಪ್ರಮಾಣಗಳಿಂದ ತಿಳಿಯುವ ಭೂಮಗುಣ ವ್ಯಕ್ತಿಯ ಯೋಗ್ಯತೆಗೆ ಅನುಸಾರವಾಗಿ ಬೇರೆಯಾಗಿರುತ್ತದೆ.

ಗುರ್ವರ್ಥದೀಪಿಕಾದಲ್ಲಿ ಇದಕ್ಕೊಂದು ನಿದರ್ಶನವನ್ನು ಕೊಡಲಾಗಿದೆ. ಭೂಮಿಯನ್ನು ನೋಡು ಎಂದಾಗ ಸಾಮಾನ್ಯವ್ಯಕ್ತಿ ತನ್ನ ಎದುರಿಗಿರುವ ಸೀಮಿತ ಜಾಗವನ್ನಷ್ಟೇ ನೋಡುತ್ತಾನೆ. ಆಕಾಶಸಂಚಾರಿಗೆ ಇದೇ ಮಾತನ್ನು ಹೇಳಿದರೆ ಅವನು ಭೂಗೋಳವನ್ನು ನೋಡುತ್ತಾನೆ. ದಿವ್ಯದರ್ಶನದ ಋಷ್ಯಾದಿಗಳಿಗೆ ಹೇಳಿದರೆ ಅವರು ಪಾತಾಳಾದಿ ಲೋಕಗಳನ್ನೂ ನೋಡುತ್ತಾರೆ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ನಾನಾ ಶಬ್ದಾದಿಭೇದಾತ್ ಓಂ ॥** (ಅತ್ರ ಭೂಮಗುಣಸ್ಯ ತಾರತಮ್ಯೇನೈವ ಸರ್ವೋಪಾಸ್ಯತ್ವಂ ಉಚ್ಯತೇ। ಭೂಮಾ ಉಪಾಸ್ಯಃ ಇತ್ಯಸ್ತಿ। ಸರ್ವಗುಣೇಷು ಅನುಸ್ಯೂತಃ ಭೂಮಗುಣಃ ನಾನಾ=ಸರ್ವೈಃ ಯಥಾಧಿಕಾರಂ ನಾನಾಪ್ರಕಾರೇಣ ಉಪಾಸ್ಯಃ। ನತು ಐಕರೂಪ್ಯೇಣ। ಯೇನ ಫಲಭೇದೋ ನ ಸ್ಯಾತ್। ಕುತಃ ? ಶಬ್ದಾದಿಭೇದಾತ್=ಶಬ್ದ–ಅನುಮಾನ– ಪ್ರತ್ಯಕ್ಷೈಃ ಭೇದಾತ್। ಭೂಮಗುಣಪ್ರತೀತೇಃ ನಾನಾಪ್ರಕಾರತ್ವಾತ್ ಶಬ್ದಾದಿನೈವ ತತ್ ಪ್ರತೀತೇಃ ಏಷ್ಟವ್ಯತ್ವಾತ್, ತೈಶ್ಚ ಯಥಾಧಿಕಾರಂ ತಾರತಮ್ಯೇನ ಪೂರ್ಣತ್ವಪ್ರತೀತೇಃ। ಕ್ಷಣ–ದಿನ–ಪಕ್ಷ–ಮಾಸಾದಿ ಆನಂತ್ಯತಾರತಮ್ಯವತ್ ಪೂರ್ಣತ್ವೇऽಪಿ ತದುಪಪತ್ತೇಶ್ಚ ಇತ್ಯರ್ಥಃ।)

ಈ ಸೂತ್ರದಲ್ಲಿ ಭೂಮಗುಣವು ತಾರತಮ್ಯಕ್ಕೆ ಅನುಗುಣವಾಗಿ ಎಲ್ಲರಿಂದಲೂ ಉಪಾಸ್ಯ ಎಂದು ಹೇಳಲಾಗಿದೆ. ಭೂಮಗುಣವು ನಾನಾ=ಅಧಿಕಾರಿಗಳು ತಮ್ಮ ಯೋಗ್ಯತೆಗೆ ತಕ್ಕಂತೆ ಅನೇಕ ಪ್ರಕಾರದಿಂದ ಉಪಾಸನಾಯೋಗ್ಯವಾಗಿದೆ. ಅದಕ್ಕೆ ಕಾರಣ–ಶಬ್ದಾದಿಭೇದಾತ್=ಶ್ರುತಿ–ಅನುಮಾನ–ಪ್ರತ್ಯಕ್ಷಗಳಿಂದ ಬರುವ ಭೂಮಗುಣದ ಜ್ಞಾನವು ಯೋಗ್ಯತೆಗೆ ಅನುಗುಣವಾಗಿ ಭಿನ್ನವಾಗಿರುವುದರಿಂದ. ಅವರವರಿಗೆ ತಿಳಿಯಲ್ಪಡುವ ಪೂರ್ಣತ್ವವನ್ನು ಅವರವರು ಉಪಾಸನೆ ಮಾಡಬೇಕು. ಹೀಗೆ ಉಪಾಸನೆಯಲ್ಲಿ ತಾರತಮ್ಯದಿಂದಾಗಿ ಮೋಕ್ಷಫಲದಲ್ಲೂ ತಾರತಮ್ಯ ಬರುತ್ತದೆ.

## ಅದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ನಾನಾ ಶಬ್ದಾದಿಭೇದಾತ್ ॥** ಉಪನಿಷತ್ತಿನಲ್ಲಿ ಹೇಳಿರುವ ಅನೇಕ ವಿದ್ಯೆಗಳಿಂದ ವೇದ್ಯನಾದ ಬ್ರಹ್ಮನು ಒಂದೇ ಆದುದರಿಂದ ಅಂತಹ ವಿದ್ಯೆಗಳೆಲ್ಲವೂ ಒಂದೆ. ಆದ್ದರಿಂದ ಒಂದು ವಿದ್ಯೆಯಲ್ಲಿ ಹೇಳಿರುವ ಗುಣಗಳನ್ನು ವಿದ್ಯಾಂತರಗಳಲ್ಲೂ ಅನುಸಂಧಾನ ಮಾಡಬೇಕು. ಈ ಪೂರ್ವಪಕ್ಷಕ್ಕೆ ಈ ಸೂತ್ರ ಉತ್ತರ. ವಿದ್ಯೆಗಳು ನಾನಾ, ಒಂದೇ ಅಲ್ಲ. ಶಬ್ದಾದಿಭೇದಾತ್=ಉಪಾಸನಾವಿಧಿಗಳಲ್ಲಿ, ವೇದ, ಉಪಾಸೀತ, ಕ್ರತುಂ ಕುರ್ವೀತ, ಎಂದು ಶಬ್ದಭೇದವಿರುವುದರಿಂದ. ಇದಲ್ಲದೆ ಗುಣಭೇದವೂ ವಿದ್ಯಾಭೇದಕ್ಕೆ ಪ್ರಯೋಜಕ.

**ವಿಮರ್ಶೆ**—ಶಬ್ದ ಬೇರೆಯಾದರೂ ಎಲ್ಲಾ ಶಬ್ದಗಳಿಂದಲೂ ತಿಳಿಯುವ ಉಪಾಸನೆ ಒಂದೇ. ಉಪಾಸ್ಯ ಒಂದೇ ಆದುದರಿಂದ. ಉಪಾಸ್ಯವು ಒಂದೇ ಆದರೂ

ಉಪಾಸನೆಯು ಒಂದಲ್ಲ. ಸ್ತ್ರೀ ಒಬ್ಬಳೇ ಆದರೂ ಅವಳನ್ನು ಒಬ್ಬ ಮಾತೃತ್ವೇನ ಇನ್ನೊಬ್ಬರು ಪುತ್ರೀತ್ವೇನ, ಗಂಡ ಪತ್ನೀತ್ವೇನ ತಿಳಿಯುತ್ತಾನೆ. ಹೀಗೆಯೇ ಉಪಾಸ್ಯನಾದ ಬ್ರಹ್ಮನು ಒಬ್ಬನೇ ಆದರೂ ಉಪಾಸ್ಯವಾದ ಪ್ರಕಾರಗಳು ಬೇರೆಬೇರೆಯಾದ ಕಾರಣ ಉಪಾಸನಾ ಭಿನ್ನವಾದುದು, ಎಂದರೆ, ಇದೂ ಸರಿಯಲ್ಲ. ಉಪಾಸನೆಯು ಭಿನ್ನವೆಂದಾದರೆ ಅದಕ್ಕನುಗುಣವಾಗಿ ಉಪಾಸಕನು ತನ್ನ ಮನೋಭಾವವನ್ನು ಬದಲಿಸಿಕೊಳ್ಳುತ್ತಾನೆ. ಅವನ ಮನೋಭಾವದ ವ್ಯತ್ಯಾಸದಿಂದ ಉಪಾಸನಾಭೇದವು ಸಿದ್ಧವಾಗುತ್ತದೆ. ಹೀಗೆ, ಅನ್ಯೋನ್ಯಾಶ್ರಯದೋಷ.

ರಾಮಾನುಜಭಾಷ್ಯದಲ್ಲೂ ಈ ಅಧಿಕರಣಕ್ಕೆ ಇದೇ ಅರ್ಥವನ್ನು ಹೇಳಲಾಗಿದೆ.

ಇಲ್ಲಿಗೆ ನಾನಾಶಬ್ದಾಧಿಕರಣ ಸಮಾಪ್ತವಾಯಿತು.

## ೩೯. ವಿಕಲ್ಪಾಧಿಕರಣಮ್

### ॥ ಓಂ ವಿಕಲ್ಪೋ ವಿಶಿಷ್ಟಫಲತ್ವಾತ್ ಓಂ ॥ ೬೧ ॥

**ಸ್ವಯೋಗ್ಯೋಪಾಸನಾನಂತರಂ ಸಾಮಾನ್ಯಸ್ಯಾಪಿ ಕಸ್ಯಚಿದುಪಾಸನಂ ವಿಕಲ್ಪೇನ ಭವತಿ ವಿಶಿಷ್ಟಫಲಾಪೇಕ್ಷಯಾ ।**

**'ಮುಖ್ಯಾರ್ಥಮಾತ್ಮಯೋಗ್ಯಂ ಹಿ**
**ಕಾರ್ಯಮೇವ ಹ್ಯುಪಾಸನಮ್ ।**
**ನೃಸಿಂಹಾದಿಕಮನ್ಯಚ್ಚ ದುರಿತಾದಿನಿವೃತ್ತಯೇ**
**ಉಪಾಸ್ಯತೇ ಯಥಾಯೋಗಂ ನವಾ ಫಲವಿಭೇದತಃ ॥'**

**ಇತಿ ಚ ಬ್ರಹ್ಮತರ್ಕೇ ।**

ಮೋಕ್ಷಾಧಿಕಾರಿಯು ತನಗೆ ಯೋಗ್ಯವಾದ ಉಪಾಸನೆಯನ್ನು ಮಾಡಿ ವೈಷ್ಣವತ್ವೇನ ಸ್ವೋಪಾಸ್ಯಮೂರ್ತಿಗೆ ಸಮಾನವಾದ ನರಸಿಂಹಾದಿರೂಪವಿಶೇಷಗಳ ಉಪಾಸನೆಯನ್ನು ವಿಕಲ್ಪವಾಗಿ, ದುರಿತನಾಶಾದಿವಿಶಿಷ್ಟಫಲದ ಅಪೇಕ್ಷೆಯಿಂದ ಮಾಡಬೇಕು. ಬ್ರಹ್ಮತರ್ಕದಲ್ಲಿ ಹೀಗಿದೆ—ಮುಕ್ತಿಗಾಗಿ ಸಾಧಕನು ತನಗೆ ಯೋಗ್ಯವಾದ ಉಪಾಸನೆಯನ್ನು ಮಾಡಲೇಬೇಕು. ಇದಲ್ಲದೆ ಸ್ವಯೋಗ್ಯರೂಪವಲ್ಲದ ನರಸಿಂಹ, ಕೃಷ್ಣ, ಹಯಗ್ರೀವಾದಿರೂಪಗಳ ಉಪಾಸನೆಯನ್ನೂ ಉಪಾಸನಾ ಪ್ರತಿಬಂಧಕಗಳಾದ ದುರಿತ–ನಿವೃತ್ತಿಗಾಗಿ ಮಾಡಬೇಕು. ಆದರೆ, ಈ ಉಪಾಸನೆಯನ್ನು ಮಾಡಲೇಬೇಕೆಂಬ

ನಿರ್ಬಂಧವಿಲ್ಲ. ಬಿಂಬೋಪಾಸನೆಯನ್ನೇ ತೀವ್ರವಾಗಿ ಮಾಡುವುದರಿಂದಲೂ ವಿಘ್ನನಿವಾರಣಾದಿಗಳನ್ನು ಮಾಡಿಕೊಳ್ಳಬಹುದು.

**ವಿವರಣೆ**—ಮೋಕ್ಷಕ್ಕಾಗಿ ಸಾಧಕನು ಸ್ವರೂಪಗುರುಗಳು ಉಪದೇಶಿಸಿರುವ ಸ್ವಯೋಗ್ಯರೂಪವನ್ನು ಉಪಾಸನೆ ಮಾಡಲೇಬೇಕು. ಆದರೂ,

ಅನಾದಿಜನ್ಮಸಂಬದ್ಧಂ ನಿರ್ಭೇತ್ತುಂ ಪಾಪಪಂಜರಮ್ ।
ಯಾವತ್ಯಾ ಸೇವಯಾ ಶಕ್ಯಂ ತಾವತ್ ಕಾರ್ಯಂ ನ ಸಂಶಯಃ ।

ಅನಾದಿಕಾಲದಿಂದ ಸಂಬದ್ಧವಾದ ಪಾಪಸಂಚಯವನ್ನು ನಾಶಮಾಡುವ ಸಲುವಾಗಿ ಇತರ ಭಗವದ್ರೂಪಗಳನ್ನೂ ಉಪಾಸನೆ ಮಾಡಬೇಕು. ಅಜ್ಞಾನ ವಿಪರೀತಜ್ಞಾನಗಳು ಅಥವಾ ಉಪಾಸನಾಕಾಲದಲ್ಲಿ ಮನೋವಿಕ್ಷೇಪವು ಪಾಪದ ಫಲವಾಗಿ ಉಂಟಾಗುತ್ತದೆ. ಇಂತಹ ವಿಘ್ನಗಳ ಪರಿಹಾರಕ್ಕಾಗಿ ನರಸಿಂಹ, ಕೃಷ್ಣ, ಹಯಗ್ರೀವಾದಿರೂಪಗಳ ಉಪಾಸನೆಯನ್ನೂ ಸಾಧಕನು ಮಾಡಬಹುದು. ಮಾಡಲೇಬೇಕೆಂಬ ನಿರ್ಬಂಧವಿಲ್ಲ. ಕೆಲವರು ತಮ್ಮ ಯೋಗ್ಯರೂಪದ ಉಪಾಸನೆಯನ್ನೇ ತೀವ್ರಗೊಳಿಸಿ ವಿಘ್ನಗಳನ್ನು ಪರಿಹರಿಸಿಕೊಳ್ಳುತ್ತಾರೆ.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಓಂ ವಿಕಲ್ಪೋ ವಿಶಿಷ್ಟಫಲತ್ವಾತ್ ಓಂ ॥** (ಅತ್ರ ಬಿಂಬೋಪಾಸ್ತೇಃ ವಿಕಲ್ಪೇನ ಕರ್ತವ್ಯತ್ವಮುಚ್ಯತೇ । ಸಾಮಾನ್ಯೋಪಾಸನಸ್ಯೇತಿ ಶೇಷಃ । ಬಿಂಬಾನ್ಯ-ನೃಸಿಂಹೋ-ಪಾಸನಸ್ಯ ವಿಕಲ್ಪಃ=ವಿವಿಧಕಲ್ಪಃ, ಕರ್ತವ್ಯಂ ನವೇತಿ । ನತು ಕಾರ್ಯಮೇವೇತಿ ನಿಯಮಃ । ಕುತಃ? ವಿಶಿಷ್ಟಫಲತ್ವಾತ್, ದುರಿತನಿವೃತ್ತಿರೂಪ-ಫಲವಿಶೇಷ ಹೇತುತ್ವಾತ್ ಇತ್ಯರ್ಥಃ । ಯಸ್ಯ ತದಪೇಕ್ಷಾ ತೇನ ಕಾರ್ಯಮ್ । ಅನ್ಯೇನ ತು ನ ಇತಿ 'ಷೋಡಶಿಗ್ರಹಣ'ವತ್ ವ್ಯವಸ್ಥಿತೋ ವಿಕಲ್ಪಃ ।)

ಈ ಅಧಿಕರಣದಲ್ಲಿ ಬಿಂಬಾನ್ಯ-ಭಗವದ್ರೂಪದ ಉಪಾಸನೆಯು ವೈವಕ್ಷಿಕ, ಎಂದು ಹೇಳಲಾಗಿದೆ. ಬಿಂಬದ ಹೊರತಾದ ನರಸಿಂಹಾದಿರೂಪಗಳ ಉಪಾಸನೆಯು ವಿಕಲ್ಪಃ=ಮಾಡಬಹುದು ಅಥವಾ ಮಾಡದಿರಬಹುದು, ಮಾಡಲೇಬೇಕೆಂಬ ನಿರ್ಬಂಧವಿಲ್ಲ. ಏಕೆಂದರೆ, ವಿಶಿಷ್ಟ ಫಲತ್ವಾತ್=ದುರಿತನಿವೃತ್ತಿರೂಪವಾದ ಫಲವಿಶೇಷಕ್ಕೆ ಇತರ ರೂಪೋಪಾಸನೆಯು ಕಾರಣವಾಗುತ್ತದೆ. ಅದರ ಅಪೇಕ್ಷೆ ಇರುವವರು ಮಾಡಬಹುದು, ಇಲ್ಲದವರು ಬಿಡಬಹುದು.

## ಅದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ವಿಕಲ್ಪೋ ಅವಿಶಿಷ್ಟಫಲತ್ವಾತ್ ॥** (ದ್ವೈತಭಾಷ್ಯದ ಪಾಠ 'ವಿಶಿಷ್ಟಫಲತ್ವಾತ್' ಎಂದು. ಅದ್ವೈತಭಾಷ್ಯಪಾಠ 'ಅವಿಶಿಷ್ಟಫಲತ್ವಾತ್' ಎಂದು.) 'ಮನೋಮಯಃ ಪ್ರಾಣ ಶರೀರನೇತಾ' 'ಕಂ ಬ್ರಹ್ಮ ಖಂ ಬ್ರಹ್ಮ' ಇತ್ಯಾದಿಉಪಾಸನೆಗಳಲ್ಲಿ ವಿಕಲ್ಪಃ=ಯಾವು ದಾದರೂ ಒಂದನ್ನು ಮಾಡಿದರೆ ಸಾಕು, ಎಲ್ಲವನ್ನೂ ಮಾಡಬೇಕಾಗಿಲ್ಲ. ಏಕೆಂದರೆ, ಅವಿಶಿಷ್ಟಫಲತ್ವಾತ್=ಎಲ್ಲ ಉಪಾಸನೆಗಳ ಫಲಗಳೂ ಒಂದೇ, ಬ್ರಹ್ಮಸಾಕ್ಷಾತ್ಕಾರ. ಒಂದು ಉಪಾಸನೆಯಿಂದ ಬ್ರಹ್ಮಸಾಕ್ಷಾತ್ಕಾರವಾದ ಮೇಲೆ ಇನ್ನೊಂದು ಉಪಾಸನೆಯ ಅಗತ್ಯವಿಲ್ಲ.

**ವಿಮರ್ಶೆ**—ಬ್ರಹ್ಮನ ಒಂದು ರೂಪದ ಉಪಾಸನೆಯಿಂದ ಆ ರೂಪದ ಸಾಕ್ಷಾತ್ಕಾರವಾಗುತ್ತದೆ. ಅದರಿಂದಾಗಿ ಲಭಿಸಿದ ಸ್ಥಾನವಿಶೇಷದಲ್ಲಿ ರೂಪಾಂತರವನ್ನು ಉಪಾಸನೆ ಮಾಡಿ ಸಾಕ್ಷಾತ್ಕರಿಸಿಕೊಂಡು ಮಹರಾದಿಲೋಕಪ್ರಾಪ್ತಿ. ಅಲ್ಲಿ ನಿಯತಗುರೂಪದೇಶದಿಂದ ಬಿಂಬೋಪಾಸನೆ ಮಾಡಿ ಬಿಂಬಸಾಕ್ಷಾತ್ಕಾರ. ಹೀಗೆ ಅನೇಕ ಬ್ರಹ್ಮರೂಪಗಳ ಉಪಾಸನೆಯು ವ್ಯರ್ಥವಲ್ಲ. 'ಭೃಗುರ್ವೈ ವಾರುಣಿಃ' ಎಂದು ತೈತ್ತಿರೀಯೋಪನಿಷತ್ತಿನ ಭೃಗುವಲ್ಲಿಯಲ್ಲಿ ಭೃಗುಋಷಿ ಅನೇಕ ಬ್ರಹ್ಮರೂಪಗಳ ಉಪಾಸನೆ ಮಾಡಿರುವ ಉಲ್ಲೇಖವಿದೆ.

ರಾಮಾನುಜಭಾಷ್ಯದಲ್ಲೂ ಈ ಅಧಿಕರಣಕ್ಕೆ ಹೀಗೆಯೇ ಅರ್ಥವನ್ನು ಹೇಳಲಾಗಿದೆ. ಅಲ್ಲಿ ಮುಂದಿನ ಸೂತ್ರವನ್ನೂ ಸೇರಿಸಿಕೊಂಡು ಎರಡು ಸೂತ್ರಗಳ ಒಂದು ಅಧಿಕರಣ.

ಇಲ್ಲಿಗೆ ವಿಕಲ್ಪಾಧಿಕರಣವು ಸಮಾಪ್ತವಾಯಿತು.

## ೪೦. ಕಾಮ್ಯಾಧಿಕರಣಮ್

### ॥ ಓಂ ಕಾಮ್ಯಾಸ್ತು ಯಥಾಕಾಮಂ ಸಮುಚ್ಚೀಯೇರನ್ ನವಾ ಪೂರ್ವಹೇತ್ವಭಾವಾತ್ ಓಂ ॥ ೬೨ ॥

'ಯಸ್ಯಯಸ್ಯ ಹಿ ಯಃ ಕಾಮಸ್ತಸ್ಯತಸ್ಯ ಹ್ಯುಪಾಸನಮ್ ।
ತಾದೃಶಾನಾಂ ಗುಣಾನಾಂ ಚ ಸಮಾಹಾರಂ ಪ್ರಕಲ್ಪಯೇತ್ ॥

**ಅಕಾಮತ್ವಾನ್ಮುಮುಕ್ಷೂಣಾಂ ನವಾ ತೇಷಾಮುಪಾಸನಮ್ ।**
**ತುಷ್ಟ್ಯರ್ಥಮೀಶ್ವರಸ್ಯೈವ ನ ಚೋಪಾಸಾ ವಿದುಷ್ಯತಿ ॥'**
**ಇತಿ ಚ ಬೃಹತ್ತಂತ್ರೇ ।**

(ಐಶ್ವರ್ಯಾದಿ ಕಾಮ್ಯಫಲಕವಾದ ಗುಣಗಳ ಉಪಾಸನೆಯು ಅಮುಮುಕ್ಷುಗಳಿಗೆ ಕಾರ್ಯ, ಮುಮುಕ್ಷುಗಳು ಮಾಡಬಾರದು. ಮುಮುಕ್ಷುಗಳಿಗೆ ಪೂರ್ವಹೇತ್ವಭಾವಾತ್=ಮೋಕ್ಷಾತಿರಿಕ್ತ ಫಲಕಾಮನಾರೂಪ ಹೇತುವು ಇಲ್ಲವಾದುದರಿಂದ ಅವರು ಕಾಮ್ಯೋಪಾಸನೆಗಳನ್ನು ಮಾಡಬೇಕಾಗಿಲ್ಲ.)

ಬೃಹತ್ತಂತ್ರದಲ್ಲಿ ಹೀಗಿದೆ—ಯಾರು ಯಾರಿಗೆ ಏನೇನು ಕಾಮನೆಗಳಿವೆಯೋ ಅಂತಹವರು ಅಂತಹ ಉಪಾಸನೆಗಳನ್ನು ಮಾಡಬೇಕು. ಅಂತಹ ಗುಣಗಳ ಸಮಾಹಾರವನ್ನೇ ಅವರು ಮಾಡಬೇಕು. ಮುಮುಕ್ಷುಗಳು ಅಕಾಮರಾದ ಕಾರಣ ಅವರು ಈ ಕಾಮ್ಯೋಪಾಸನೆಯನ್ನು ಮಾಡಬಾರದು. ಅಥವಾ ಅವರೂ ಭಗವತ್ತುಷ್ಟಿಗಾಗಿ ಕಾಮ್ಯೋಪಾಸನೆಯನ್ನು ಮಾಡಿದರೂ ದೋಷವಿಲ್ಲ.

**ವಿವರಣೆ**—ಇಲ್ಲಿ ಕಾಮ್ಯೋಪಾಸನೆಯ ವಿಕಲ್ಪ ಪುರುಷಭೇದೇನ. ಮುಮುಕ್ಷುಗಳಿಗೆ ಇಲ್ಲ, ಇತರರಿಗೆ ಇದೆ. ಅಥವಾ, ಮುಮುಕ್ಷುಗಳಲ್ಲೇ ವಿಕಲ್ಪ. ಅವರೂ ಭಗವತ್ಪ್ರೀತಿಯ ಕಾಮನೆಯಿಂದ ಅಂತಹ ಉಪಾಸನೆಗಳನ್ನು ಮಾಡಬಹುದು.

''ತುಷ್ಟ್ಯರ್ಥಮೀಶ್ವರಸ್ಯೈವ ನ ಚೋಪಾಸಾ ವಿದುಷ್ಯತಿ ॥''
''ಸಕಾಮೇಭ್ಯೋಽಮಿತಗುಣಾ ಯಾಽಕಾಮ್ಯೈಸ್ತು ಕೃತಾ ಕ್ರಿಯಾ''

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ಕಾಮ್ಯಾಸ್ತು ಯಥಾಕಾಮಂ ಸಮುಚ್ಚೀಯೇರನ್ ನ ವಾ ಪೂರ್ವಹೇತ್ವಭಾವಾತ್ ಓಂ ॥** (ಅತ್ರ ಮೋಕ್ಷಾನ್ಯಕಾಮ್ಯವಿದ್ಯೋಕ್ತ–ಭಗವದ್ರೂಪ–ತದ್ಗುಣೋಪಾಸ್ತೌ ವಿಶೇಷ ಉಚ್ಯತೇ । ತುಃ ಪ್ರಾಚೀನಾದ್ ವಿಶೇಷೇ । ಕಾಮ್ಯಾಸ್ತು=ಮೋಕ್ಷಾನ್ಯಕಾಮ್ಯಸಾಧನೇಶಗುಣಾಸ್ತು ಯಥಾಕಾಮಂ=ವಿತ್ತಾದಿ ಕಾಮನಾನುಸಾರೇಣ ಸಮುಚ್ಚೀಯೇರನ್ ನವಾ=ಉಪಸಂಹಾರ್ಯಾಃ ನವಾ । ಅಮುಮುಕ್ಷುಭಿಃ ಉಪಸಂಹಾರ್ಯಾಃ ಮುಮುಕ್ಷುಭಿರ್ನೇತಿ ಪುಂಭೇದೇನ ವ್ಯವಸ್ಥಿತವಿಕಲ್ಪಾರ್ಥಃ ವಾಶಬ್ದಃ । ಮುಮುಕ್ಷುಭಿರ್ನೇತಿ ಕುತಃ? ಪೂರ್ವಹೇತ್ವಭಾವಾತ್=ಮೋಕ್ಷೇಚ್ಛಾತಃ ಪೂರ್ವೋ ಯೋ ಹೇತುಃ ವಿತ್ತಾದಿಕಾಮಾಖ್ಯಃ ತದಭಾವಾತ್, ಇತ್ಯರ್ಥಃ ।

ಯಥಾಕಾಮಮ್ ಇತಿ ಸಮುಚ್ಚಯವಿಶೇಷಣಂ ಸತ್ ಯಸ್ಯ ಯತ್ ವಿತ್ತಾದಿಕಾಮಃ ತಸ್ಯ ತತ್ತದನುಗುಣಾಃ ಉಪಸಂಹಾರ್ಯಾಃ ಇತಿ ವಿಶೇಷೋಕ್ತ್ಯರ್ಥಮ್ ॥)

ಈ ಸೂತ್ರದಲ್ಲಿ ಮೋಕ್ಷೇತರಫಲದ ಪ್ರಾಪ್ತಿಗಾಗಿ ಇರುವ ಭಗವಂತನ ರೂಪವಿಶೇಷ ಮತ್ತು ಗುಣವಿಶೇಷಗಳ ಉಪಾಸನೆಯ ಬಗ್ಗೆ ಹೇಳಲಾಗಿದೆ.

ಕಾಮ್ಯಾಸ್ತು=ಮೋಕ್ಷಾನ್ಯಕಾಮಸಾಧನವಾದ ಭಗವಂತನ ಗುಣವಿಶೇಷಗಳು ಯಥಾಕಾಮಂ=ಲೌಕಿಕ ಸಂಪತ್ತೇ ಮೊದಲಾದ ಕಾಮನೆಗಳಿಗೆ ಅನುಗುಣವಾಗಿ ಸಮುಚ್ಚೀಯೇರನ್ ನವಾ=ಉಪಸಂಹರಿಸಲ್ಪಡಬೇಕು. ಅಥವಾ ಇಲ್ಲ. ಅಮುಮುಕ್ಷುಗಳು ಆ ಗುಣಗಳ ಉಪಸಂಹಾರವನ್ನು ಮಾಡಬಹುದು. ಮುಮುಕ್ಷುಗಳು ಮಾಡಬಾರದು. ಹೀಗೆ, ವ್ಯಕ್ತಿಭೇದೇನ ವ್ಯವಸ್ಥಿತವಿಕಲ್ಪವನ್ನು ವಾಶಬ್ದವು ಸೂಚಿಸುತ್ತದೆ. ಮುಮುಕ್ಷುಗಳು ಏಕೆ ಉಪಸಂಹಾರ ಮಾಡಬಾರದು? ಅದಕ್ಕೆ ಕಾರಣ– ಪೂರ್ವಹೇತ್ವಭಾವಾತ್=ಮೋಕ್ಷದ ಇಚ್ಛೆ ಬರುವುದಕ್ಕೆ ಮೊದಲಿದ್ದ ಯಾವ ಧನಾದಿ ಕಾಮರೂಪವಾದ ಕಾರಣವಿದೆಯೋ ಅದು ಮುಮುಕ್ಷುವಿಗೆ ಇಲ್ಲವಾದುದರಿಂದ.

## ಅದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಕಾಮ್ಯಾಸ್ತು ಯಥಾಕಾಮಂ ಸಮುಚ್ಚೀಯೇರನ್ ನ ವಾ ಪೂರ್ವಹೇತ್ವಭಾವಾತ್ ॥** ಕಾಮ್ಯಾಸ್ತು='ಸ ಯ ಏತಮೇವಂ ವಾಯುಂ ದಿಶಾಂ ವತ್ಸಂ ವೇದ ನ ಪುತ್ರರೋದಂ ರೋದಿತಿ–ವಾಯುದೇವ ದಿಕ್ಕೆಂಬ ಗೋವುಗಳ ಕರು ಎಂದು ಉಪಾಸನೆ ಮಾಡುವವನು ಪುತ್ರಮರಣಪ್ರಯುಕ್ತವಾದ ದುಃಖವನ್ನು ಅನುಭವಿಸುವುದಿಲ್ಲ'' ಇಂತಹ ಕಾಮ್ಯಫಲಕವಿದ್ಯೆಗಳು ಯಥಾಕಾಮಂ=ಪುರುಷನ ಕಾಮನೆಗೆ ಅನುಗುಣವಾಗಿ ಸಮುಚ್ಚೀಯೇರನ್ ನವಾ=ಸಮುಚ್ಚಯವು ಇರಬಹುದು ಇಲ್ಲದೆಯೂ ಇರಬಹುದು. ಅನೇಕ ಕಾಮನೆಗಳು ಇದ್ದವರು ಅನೇಕೋಪಾಸನೆಯನ್ನೂ ಒಂದೇ ಕಾಮನೆಯವರು ಒಂದೇ ಉಪಾಸನೆಯನ್ನೂ ಮಾಡಬಹುದು. ಪೂರ್ವಹೇತ್ವಭಾವಾತ್=ಹಿಂದೆ ಹೇಳಿರುವ 'ಏಕಫಲಕತ್ವ' ರೂಪಹೇತುವು ಇಂತಹ ಉಪಾಸನೆಯಲ್ಲಿ ಇಲ್ಲವಾದ ಕಾರಣ.

**ವಿಮರ್ಶೆ**—ಬ್ರಹ್ಮಕಾಂಡದಲ್ಲಿರುವ ಉಪಾಸನೆಗಳಿಗೆ ಸಾಕ್ಷಾತ್ ಪರಂಪರಯಾ ವಾ ಬ್ರಹ್ಮಸಾಕ್ಷಾತ್ಕರವೇ ಫಲ. ಪರಂಪರಯಾಪಿ ಬ್ರಹ್ಮಸಾಕ್ಷಾತ್ಕಾರಕ್ಕೆ ಕಾರಣವಾಗದ ಉಪಾಸನೆಗಳನ್ನು ಬ್ರಹ್ಮಕಾಂಡದಲ್ಲಿ ಹೇಳಬಾರದು, ಕರ್ಮಕಾಂಡದಲ್ಲೇ ಅವುಗಳನ್ನು ಹೇಳಬೇಕು. ಆದ್ದರಿಂದ ಕೇವಲ ಕಾಮ್ಯೋಪಾಸನೆಯಲ್ಲಿ 'ಸಮುಚ್ಚಯ' ಎಂಬ ಸಿದ್ಧಾಂತವು ಯುಕ್ತವಲ್ಲ.

ರಾಮಾನುಜಭಾಷ್ಯದಲ್ಲಿ ಈ ಸೂತ್ರಕ್ಕೆ ಇದೇ ಅರ್ಥವನ್ನು ಹೇಳಲಾಗಿದೆ. ಆದರೆ ಇದು ಪ್ರತ್ಯೇಕವಾದ ಅಧಿಕರಣವಲ್ಲ. ಪೂರ್ವಸೂತ್ರದೊಂದಿಗೆ ಸೇರಿರುವ ಎರಡು ಸೂತ್ರಗಳ ಒಂದು ಅಧಿಕರಣ.

ಇಲ್ಲಿಗೆ ಕಾಮ್ಯಾಧಿಕರಣವು ಮುಗಿಯಿತು.

## ೪೧. ಯಥಾಶ್ರಯಭಾವಾಧಿಕರಣಮ್

### ॥ ಓಂ ಅಂಗೇಷು ಯಥಾಽಽಶ್ರಯಭಾವಃ ಓಂ ॥ ೬೩ ॥

**ಅಂಗದೇವತಾನಾಂ ಯಥಾಯಥಾ ಪರಮೇಶ್ವರಾಂಗಾಶ್ರಯತ್ವಮ್-'ಚಕ್ಷೋಃ ಸೂರ್ಯೋಽ ಅಜಾಯತ' (ಋ. 10.90.13) ಇತ್ಯಾದಿ ತಥಾ ಭಾವನಾ ಕರ್ತವ್ಯಾ ॥**

ಸೂರ್ಯಾದಿ ಅಂಗದೇವತೆಗಳು ಭಗವಂತನ ಯಾವ ಯಾವ ಅಂಗಗಳನ್ನು ಆಶ್ರಯಿಸಿರುವರೋ 'ಚಕ್ಷೋಃ ಸೂರ್ಯೋಽಜಾಯತ' ಎಂದಿರುವಂತೆ ಹಾಗೆಯೇ ಅವರ ಉಪಾಸನೆಯನ್ನು ಮಾಡಬೇಕು.

**ವಿವರಣೆ**—ಬ್ರಹ್ಮಾದಿ ಅಂಗದೇವತೆಗಳ ಉಪಾಸನೆ ಎರಡುವಿಧ—ಒಂದು ಪರಿವಾರತ್ವೇನ, ಇನ್ನೊಂದು ಭಗವದಂಗಾಶ್ರಯತ್ವೇನ. ಯಾವ ದೇವತೆಗಳು ಭಗವಂತನ ಯಾವ ಅಂಗಗಳಿಂದ ಹುಟ್ಟಿರುವರೋ ಆ ದೇವತೆಗಳು ಅದೇ ಅಂಗವನ್ನು ಆಶ್ರಯಿಸಿರುತ್ತಾರೆ.

ಸ್ವೋತ್ಪತ್ತ್ಯಂಗಂ ಚ ದೇವಾನಾಂ ವಿಷ್ಣೋಶ್ಚಿಂತ್ಯಂ ಸದೈವ ತು ।
ತೇಷಾಂ ತತ್ರ ಪ್ರವೇಶೋ ಹಿ ಮುಕ್ತಿರಿತ್ಯುಚ್ಯತೇ ಬುಧೈಃ ॥

### ॥ ಓಂ ಶಿಷ್ಟೇಶ್ಚ ಓಂ ॥ ೬೪ ॥

**'ಯಸ್ಮಿನ್ ಯಸ್ಮಿನ್ ಯೋ ಹಿ ಚಾಂಗೇ ನಿವಿಷ್ಟಃ ಪರಸ್ಯ ಚಿಂತ್ಯಃ ಸ ತಥಾ ತಥೈವ' ಇತಿ ಪೌತ್ರಾಯಣಶ್ರುತೇಃ ॥**

(ಶಿಷ್ಟಿ ಎಂದರೆ ಶಿಕ್ಷಾವಿಧಿ-ಶ್ರುತಿ) ಪೌತ್ರಾಯಣಶ್ರುತಿ ಇರುವುದರಿಂದಲೂ ಅಂಗದೇವತೆಗಳ ಉಪಾಸನೆಯನ್ನು ಹೀಗೆಯೇ ಮಾಡಬೇಕು-ಯಾವ ಯಾವ

ಭಗವದಂಗಗಳಲ್ಲಿ ಯಾವ ದೇವತೆಗಳು ಆಶ್ರಯಿಸಿರುವರೋ ಆ ದೇವತೆಗಳು ತದಂಗಾಶ್ರಿತತ್ವೇನೈವ ಉಪಾಸ್ಯರು.

## ॥ ಓಂ ಸಮಾಹಾರಾತ್ ಓಂ ॥ ೬೫ ॥

**'ಅಂಗೈಃ ಪರಾದ್ ಯೇ ಹಿ ದೇವಾ**
**ವಿಸೃಷ್ಟಾಸ್ತತ್ತದ್ಗುಣಾನ್ ಪರಮೇ ಸಂಹರೇತ ।**
**ತಾಂಶ್ಚಾಪಿ ತತ್ರೈವ ವಿಚಿಂತ್ಯ ದೇವಾನ್**
**ಸ್ಥಾನಂ ಮುಮುಕ್ಷುಃ ಪರಮಂ ವ್ರಜೇತ'**
**ಇತಿಚ ಕಾಷಾಯಣಶ್ರುತೌ ಸಮಾಹಾರವಚನಾಚ್ಚ ॥**

(ತತ್ತದ್ದೇವತೋತ್ಪತ್ತ್ಯಾಶ್ರಯತ್ವೇನ ಭಗವದಂಗಗಳ ಉಪಾಸನೆಯಲ್ಲಿ, ತತ್ತದಂಗಜಾತರಾದ ದೇವತೆಗಳ ವಿಶೇಷಗುಣಗಳೂ ತತ್ತದಂಗಗಳಲ್ಲಿ ಇವೆ, ಎಂದು ಸಮಾಹಾರವನ್ನೂ ಮಾಡಬೇಕು.)

ಕಾಷಾಯಣಶ್ರುತಿಯಲ್ಲಿ ಈ ಗುಣೋಪಸಂಹಾರವನ್ನು ಹೇಳಲಾಗಿದೆ— ಪರಮಾತ್ಮನ ಯಾವ ಅಂಗಗಳಿಂದ ಯಾವ ದೇವತೆಗಳು ಸೃಷ್ಟಿಯಾಗಿರುವರೋ ಆ ದೇವತೆಗಳ ಗುಣಗಳನ್ನೂ, ಆ ದೇವತೆಗಳನ್ನೂ ತತ್ತದಂಗಗಳಲ್ಲಿ ಉಪಸಂಹಾರ ಮಾಡಿ ಮುಮುಕ್ಷುವು ಪರಮಸ್ಥಾನವನ್ನು ಹೊಂದಬೇಕು.

ವಿವರಣೆ—ಸೂರ್ಯನು ಭಗವಂತನ ಚಕ್ಷುಸ್ಸಿನಿಂದ ಹುಟ್ಟಿರುವುದರಿಂದ ಸೂರ್ಯನಂತಹ ತೇಜಸ್ಸು ಚಕ್ಷುಸ್ಸಿಗಿದೆ. ಮನಸ್ಸಿನಿಂದ ಚಂದ್ರನು ಹುಟ್ಟಿರುವುದರಿಂದ ಭಗವಂತನ ಮನಸ್ಸು ಚಂದ್ರನಂತೆ ಆಹ್ಲಾದಕರವಾಗಿದೆ. ಹೀಗೆ ದೇವತೆಗಳ ಗುಣಗಳನ್ನು ಭಗವಂತನ ಅಂಗಗಳಲ್ಲಿ ಉಪಾಸನೆ ಮಾಡಬೇಕು.

ಧ್ಯಾಯೇದಂಗೇಷ್ವಂಗದೇವತಾಃ ಪರಸ್ಯ
ವಿಶಿಷ್ಟಾ ಹಿ ಗುಣಾ ಮುಕ್ತೌ ದೇವಾನಾಂ ಭವಂತಿ ॥ ಇದು ಶ್ರುತಿ.

ಸೂತ್ರದಲ್ಲಿರುವ 'ಸಮಾಹಾರಾತ್' ಎಂಬ ಪದಕ್ಕೆ ಸಮಾಹಾರಬೋಧಕವಾದ ಶ್ರುತಿ ಇರುವುದರಿಂದ, ಎಂದೂ ಅರ್ಥ.

## ॥ ಓಂ ಗುಣಸಾಧಾರಣ್ಯಶ್ರುತೇಶ್ಚ ಓಂ ॥ ೬೬ ॥

**'ಸಾಧಾರಣ್ಯಾತ್ ಸರ್ವಗುಣಾಃ ಪರಸ್ಯ**
**ಸಮಾಹಾರ್ಯಾಸ್ತತ್ವದೃಶೋ ಮುಮುಕ್ಷೋಃ' ಇತಿ ಮಾಂಡವ್ಯಶ್ರುತೇಶ್ಚ ॥**

(ಜ್ಞಾನಾನಂದಾದಿಬ್ರಹ್ಮಗುಣಗಳಂತೆ ಈ ಗುಣಗಳೂ ಬ್ರಹ್ಮಗುಣತ್ವೇನ ಸಾಧಾರಣ ವಾದುದರಿಂದ ಸೂರ್ಯಾಶ್ರಯ ಚಕ್ಷುಷ್ಟತ್ವಾದಿಗುಣಗಳೂ ಮುಮುಕ್ಷೂಪಾಸ್ಯ ವಾಗಿವೆ.) ಮಾಂಡವ್ಯಶ್ರುತಿ ಹೇಳಿರುವ ಯುಕ್ತಿಯಿಂದಾಗಿಯೂ ಇದು ಸಿದ್ಧವಾಗುತ್ತದೆ–ಈ ಗುಣಗಳು ಉಪಾಸ್ಯ, ಇವು ಅನುಪಾಸ್ಯ ಎಂಬ ವಿಭಾಗವಿಲ್ಲದೆ ಭಗವದ್ಗುಣಗಳೆಲ್ಲವೂ ತತ್ತ್ವಜ್ಞಾನಿಯಾದ ಮುಮುಕ್ಷುವಿನಿಂದ ಉಪಸಂಹಾರ್ಯ ವಾಗಿವೆ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ಅಂಗೇಷು ಯಥಾಽಽಶ್ರಯಭಾವಃ ಓಂ ॥** (ಅತ್ರ ಬ್ರಹ್ಮಾದೀನಾಂ ಈಶಾಂಗಾಶ್ರಿತತ್ವೇನ ದೇವತಾಮಾತ್ರೋಪಾಸ್ಯತ್ವಮ್ ಉಚ್ಯತೇ । ಅಂಗೇಷು ಇತ್ಯುಕ್ತೇಃ ಸೂರ್ಯಾದಿದೇವತಾನಾಮ್ ಇತ್ಯನ್ವೇತಿ । ಯಥಾಶ್ರಯಭಾವಃ 'ಚಕ್ಷೋಃ ಸೂರ್ಯಃ' 'ತದಾಶ್ರಿತಾಶ್ಚ ತೇ ಸರ್ವೇ' ಇತ್ಯಾದೌ ಉಕ್ತಃ ತಥೈವ ಈಶಾಂಗೇಷು ಉಪಾಸ್ತಿಃ ಕಾರ್ಯಾ, ಇತಿ ಪ್ರಕರಣಾದನ್ವೇತಿ । ಅನ್ಯಥಾ, 'ಚಕ್ಷೋಃ' ಇತ್ಯಾದಿ ಅಂಗಸ್ಥಿತಿಶ್ರುತಿ ವೈಯ್ಯರ್ಥ್ಯಾಪತ್ತೇಃ ।)

ಈ ಅಧಿಕರಣದಲ್ಲಿ ಬ್ರಹ್ಮಾದಿಗಳು ಪರಮಾತ್ಮನ ಅಂಗಾಶ್ರಿತರು ಎಂದು ದೇವತೆಗಳು ಉಪಾಸನೆ ಮಾಡಬೇಕು, ಎಂದು ಹೇಳಲಾಗಿದೆ.

ಅಂಗೇಷು=ಶ್ರುತಿಯಲ್ಲಿ ಹೇಳಿರುವಂತೆ ಪರಮಾತ್ಮನ ಅಂಗಗಳಲ್ಲಿ ಯಥಾಶ್ರಯಭಾವಃ=ತತ್ತದ್ದೇವತಾಶ್ರಯತ್ವೇನ ಶ್ರುತಿ ಹೇಳಿರುವಂತೆ ಉಪಾಸನೆಯನ್ನು ಮಾಡಬೇಕು. ಶ್ರುತಿಯಲ್ಲಿ 'ಚಕ್ಷೋಃ ಸೂರ್ಯಃ' ಎಂದು ಮುಂತಾಗಿ ಹೇಳಿರುವುದು ಉಪಾಸನೆಗಾಗಿಯೇ. ಉಪಾಸನೆ ಮಾಡದಿದ್ದರೆ ಅದನ್ನು ಹೇಳಿರುವುದು ವ್ಯರ್ಥ.

**॥ ಓಂ ಶಿಷ್ಟೇಶ್ಚ ಓಂ ॥** (ಶಿಷ್ಟಿಃ=ಶಿಕ್ಷಾವಿಧಿರಿತಿ ಯಾವತ್ ।

'ಯಸ್ಮಿನ್ ಯಸ್ಮಿನ್ ಯೋ ಹಿ ಚಾಂಗೇ ನಿವಿಷ್ಟಃ
ಪರಸ್ಯ ಚಿಂತ್ಯಃ ಸ ತಥಾ ತಥೈವ ॥

ಇತಿ ಶ್ರುತೌ ವಿಧಾನಾಚ್ಚ ಅಂಗೇಷೂಪಾಸ್ತಿಃ ಕಾರ್ಯಾ, ಇತ್ಯನುಷಂಗಃ । ನ ಕೇವಲಂ 'ಚಕ್ಷೋಃ' ಇತ್ಯಾದಿ ವಚನಾನ್ಯಥಾನುಪಪತ್ತ್ಯಾ ಇತಿ ಚಾರ್ಥಃ ।)

ಶ್ರುತಿ ಹೇಳಿರುವುದು ವ್ಯರ್ಥವಾದೀತು, ಎಂದಿಷ್ಟೇ ಕಾರಣದಿಂದ ದೇವತಾಶ್ರಯಾಂಗತ್ವವು ಉಪಾಸ್ಯವಲ್ಲ. ಹಾಗೆ ಉಪಾಸನೆಯನ್ನು ಹೇಳುವ ಶ್ರುತಿಯೂ ಇದೆ. ಆದ್ದರಿಂದ ಸೂರ್ಯಾದಿ ಉತ್ಪಾದಕ ಚಕ್ಷುರಾದಿಮತ್ವವೂ ಮುಮುಕ್ಷೂಪಾಸ್ಯವಾಗಿವೆ.

**॥ ಓಂ ಸಮಾಹಾರಾತ್ ಓಂ ॥** (ಅಧಿಕಾರ್ಯಭಾವಾತ್ ನ ಕಾರ್ಯಾ ಇತ್ಯತ ಆಹ–ಸಮಾಹಾರಾತ್—ಅನೇನ ತದ್ವಚನಮ್ ಉಪಲಕ್ಷ್ಯತೇ ।

ಅಂಗೈಃ ಪರಾದ್ಯೇ ಹಿ ದೇವಾ ವಿಸೃಷ್ಟಾಃ
ತತ್ತದ್ಗುಣಾನ್ ಪರಮೇ ಸಂಹರೇತ ।
ತಾಂಶ್ಚಾಪಿ ತತ್ರೈವ ವಿಚಿಂತ್ಯ ದೇವಾನ್
ಸ್ಥಾನಂ ಮುಮುಕ್ಷುಃ ಪರಮಂ ವ್ರಜೇತ ॥

ಇತಿ ಪ್ರಕಾಶತ್ವಾದಿಗುಣಾನಾಂ ತತ್ತದ್ದೇವಾನಾಂ ಚ ಉಪಸಂಹಾರಫಲವಚನಾತ್, ಇತ್ಯರ್ಥಃ। ಏತತ್‌ಶ್ರುತೌ ತಥೋಪಾಸ್ತೇಃ, ಪರಮಸ್ಥಾನಾವಾಪ್ತಿಫಲತ್ವೋಕ್ತೇಃ ತಸ್ಯ ದೇವಯೋಗ್ಯತ್ವಾತ್ ದೇವೈಃ ತಥೋಪಾಸ್ತಿಃ ಕಾರ್ಯಾ, ನ ಸರ್ವೈರಿತಿ ಸಿದ್ಧ್ಯತಿ। ಇತಿ 'ಆನಂದಾದಯಃ' ಇತ್ಯುಕ್ತವಿರೋಧೋ ನೇತಿ ಭಾವಃ।)

ಸೂತ್ರದ ಸಮಾಹಾರಪದದಿಂದ ಸಮಾಹಾರವಾಚಕಪ್ರಮಾಣವು ಅಭಿಪ್ರೇತವಾಗಿದೆ. ಅಂತಹ 'ಅಂಗೈಃ ಪರಾದ್ ಯೇ' ಎಂಬ ವಚನವು ದೇವತೆಗಳು ಭಗವಂತನ ಅಂಗಗಳನ್ನು ತಮಗೆ ಆಶ್ರಯವಾದುದು, ಎಂದು ಉಪಾಸನೆ ಮಾಡಬೇಕು, ಎಂದು ತಿಳಿಸುತ್ತದೆ.

**॥ ಓಂ ಗುಣಸಾಧಾರಣ್ಯಶ್ರುತೇಶ್ಚ ಓಂ ॥** (ಗುಣಾನಾಂ=ಈಶಗುಣಾನಾಂ ಸಾಧಾರಣಸ್ಯ=ಉಪಾಸ್ಯತ್ವೇನ ಸಾಮ್ಯಸ್ಯ, ಸರ್ವೇಷಾಂ ಗುಣಾನಾಂ ಉಪಾಸ್ಯತ್ವಸ್ಯೇತಿ ಯಾವತ್, ಶ್ರುತೇಃ 'ಸಾಧಾರಣ್ಯಾತ್ ಸರ್ವಗುಣಾಃ ಪರಸ್ಯ ಸಮಾಹಾರ್ಯಾಸ್ತತ್ವ-ದೃಶೋ ಪರಸ್ಯ''

ಇತಿ ಶ್ರವಣಾಚ್ಚೇತ್ಯರ್ಥಃ। ಸೂರ್ಯಾಶ್ರಯಚಕ್ಷುಷ್ಟ್ವಾದೀನಾಮಪಿ ಈಶ ಗುಣತ್ವಾದೇವಮ್ ಉಪಾಸ್ತಿಃ ಕಾರ್ಯೇತಿ ಭಾವಃ।)

ಗುಣಸಾಧಾರಣ್ಯಶ್ರುತೇಃ, ಗುಣಾನಾಂ=ಪರಮಾತ್ಮನ ಗುಣಗಳಲ್ಲಿ ಸಾಧಾರಣ್ಯಸ್ಯ=ಉಪಾಸ್ಯತ್ವೇನ ಸಾಮ್ಯವು ಶ್ರುತೇಃ=ಶ್ರುತವಾಗಿರುವುದರಿಂದ ಸೂರ್ಯ ಚಕ್ಷುಷ್ಮತ್ವಗುಣವೂ ಉಪಾಸ್ಯವಾಗಿದೆ. ಶ್ರುತಿಯಲ್ಲಿ ಗುಣಗಳನ್ನು ಹೇಳಿರುವುದೇ

ಉಪಾಸನೆಗಾಗಿ. ಅವುಗಳಲ್ಲಿ ಕೆಲವು ಉಪಾಸ್ಯ, ಕೆಲವು ಅನುಪಾಸ್ಯ ಎಂಬ ವಿಶೇಷವಿಲ್ಲ. ಎಲ್ಲವೂ ಉಪಾಸ್ಯತ್ವೇನ ಸಮಾನ. ಆದ್ದರಿಂದ ಆ ಗುಣಗಳೂ ದೇವತೋಪಾಸ್ಯವಾಗಿವೆ.

**ಇಲ್ಲಿಗೆ ಯಥಾಶ್ರಯಭಾವಾಧಿಕರಣವು ಮುಗಿಯಿತು.**

## ೪೨. ನವಾಧಿಕರಣಮ್

**॥ ಓಂ ನವಾಽತತ್ಸಹಭಾವಶ್ರುತೇಃ ಓಂ ॥ ೬೭ ॥**

**ನವಾಽಂಗದೇವತೋಪಸಂಹಾರಃ ಕಾರ್ಯಃ। ಉಪಸಂಹಾರಸ್ಯ ಸಹಾ-ಶ್ರವಣಾತ್ ॥**

ಅಂಗದೇವತೋಪಾಸನೆಯ ಉಪಸಂಹಾರವನ್ನು ಮಾಡಬೇಕಾದ್ದಿಲ್ಲ. ಏಕೆಂದರೆ, ಉಪಸಂಹಾರವು ಆ ಗುಣಗಳ ಜೊತೆಯಲ್ಲಿ ಹೇಳಲ್ಪಟ್ಟಿಲ್ಲ.

ವಿವರಣೆ—ದೇವತೆಗಳು ಭಗವಂತನ ಅಂಗಾಶ್ರಿತರು ಎಂಬ ಉಪಾಸನೆಯನ್ನು ಎಲ್ಲರೂ ಮಾಡಬೇಕಾಗಿಲ್ಲ. ದೇವತೆಗಳಿಗೆ ಮಾತ್ರ ಅದರಲ್ಲಿ ಅಧಿಕಾರ. ಅದಕ್ಕೆ ಸೂತ್ರ ಕೊಟ್ಟಿರುವ ಕಾರಣ–ಅಸಹಭ್ಭಾವಶ್ರುತೇಃ. ಅದರ ವಿವರಣೆ ಭಾಷ್ಯದಲ್ಲಿ— 'ಉಪಸಂಹಾರಸ್ಯ ಸಹಾಶ್ರವಣಾತ್' ಎಂದು. ಅದಕ್ಕೆ ತತ್ತ್ವಪ್ರದೀಪದ ವ್ಯಾಖ್ಯಾನ— 'ಚಕ್ಷೋಃ ಸೂರ್ಯೋ ಅಜಾಯತ' ಇತ್ಯಾದೌ ಉಪಸಂಹಾರ್ಯತ್ವಸ್ಯ ಸಹಾಶ್ರವಣಾತ್– ಸೂರ್ಯನು ಭಗವಂತನ ಚಕ್ಷುಸ್ಸಿನಿಂದ ಹುಟ್ಟಿದ, ಎಂಬ ಶ್ರುತಿಯ ಜೊತೆಯಲ್ಲಿ 'ಈ ಗುಣದ ಉಪಸಂಹಾರ ಮಾಡಬೇಕು, ಎಂದು ಶ್ರುತವಾಗಿಲ್ಲ. ಆದಕಾರಣ ಈ ಗುಣವು ಸರ್ವೋಪಾಸ್ಯವಲ್ಲ.

ತತ್ತ್ವಪ್ರಕಾಶಿಕಾದ ವ್ಯಾಖ್ಯಾನ—ತಥೋಪಾಸನಸ್ಯ ಸರ್ವಶಾಖಾಗತೋಪಾಸನೇನ ಸಹ ಅಶ್ರವಣಾತ್–ಸೂರ್ಯಚಕ್ಷುಷ್ಟ್ವೇನ ಉಪಾಸನೆಯು ಸರ್ವಶಾಖೆಗಳಲ್ಲೂ ಹೇಳಲ್ಪಟ್ಟಿಲ್ಲ. ಅದು ಸರ್ವೋಪಾಸ್ಯವಾಗಿದ್ದಲ್ಲಿ ಸರ್ವಶಾಖೆಗಳಲ್ಲೂ ಅದನ್ನು ಹೇಳಬೇಕಾಗಿತ್ತು. ಹೇಳಿಲ್ಲವಾದ ಕಾರಣ ಅದು ದೇವತೋಪಾಸ್ಯಗುಣ.

**॥ ಓಂ ದರ್ಶನಾಚ್ಚ ಓಂ ॥ ೬೮ ॥**

**'ಸತ್ಯೋ ಜ್ಞಾನಃ ಪರಮಾನಂದರೂಪ**
**ಆತ್ಮೇತ್ಯೇವಂ ನಿತ್ಯದೋಪಾಸನಂ ಸ್ಯಾತ್ ।**

**ನಾನ್ಯತ್ ಕಿಂಚಿತ್ ಸಮುಪಾಸೀತ ಧೀರಃ**
**ಸರ್ವೈರ್ಗುಣೈರ್ದೇವಗಣಾ ಉಪಾಸತೇ ॥'**

**ಇತಿ ಕಮಠಶ್ರುತೌ ।**

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ**
**ಶ್ರೀಮದ್‌ಬ್ರಹ್ಮಸೂತ್ರಭಾಷ್ಯೇ ತೃತೀಯಾಧ್ಯಾಯಸ್ಯ ತೃತೀಯಃ ಪಾದಃ ॥**

ಕಮಠಶ್ರುತಿಯಲ್ಲಿ ಹೀಗೆಯೇ ಇದೆ—ಸತ್ಯ, ಜ್ಞಾನ, ಪರಮಾನಂದರೂಪ, ಆತ್ಮಾ(ಸ್ವಾಮೀ) ಈ ಗುಣಗಳಿಂದ ಭಗವಂತನನ್ನು ಸರ್ವದಾ ಉಪಾಸನೆ ಮಾಡಬೇಕು. ಸಾಮಾನ್ಯಜ್ಞಾನಿಯು ಈ ಗುಣಗಳನ್ನು ಬಿಟ್ಟು ಇತರ ಗುಣಗಳನ್ನು ಉಪಾಸನೆ ಮಾಡಬಾರದು. ದೇವತೆಗಳು ಶ್ರುತ್ಯುಕ್ತವಾದ ಸಕಲಗುಣಗಳಿಂದಲೂ ಉಪಾಸನೆ ಮಾಡುತ್ತಾರೆ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ನವಾಽತತ್‌ಸಹಭಾವಶ್ರುತೇಃ ಓಂ ॥** (ಅತ್ರಾಂಗದೇವತೋಪಾಸನಸ್ಯ ದೇವಾನ್ಯೈಃ ಅಕರ್ತವ್ಯತ್ವಮ್ ಉಚ್ಯತೇ।

ನವಾಂಗೇಷು ಸೂರ್ಯಾದೀನಾಮ್ ಉಪಾಸ್ತಿಃ ಕಾರ್ಯಾ । ಕುತಃ ? ಅತತ್ ಸಹಭಾವಶ್ರುತೇಃ । ಸರ್ವಶಾಖಾಗತೋಪಾಸನೇನ ಸಹಭಾವೇನ=ಸಹಸತ್ವೇನ ಅಶ್ರವಣಾತ್, ಇತಿ ನಞಃ ವ್ಯತ್ಯಾಸೇನ ಯೋಜ್ಯಮ್ । ದೇವಾನ್ಯಾಪೇಕ್ಷಯಾ ವಾಶಬ್ದಃ ।)

ಭಗವಂತನ ಅಂಗಗಳಲ್ಲಿ ಸೂರ್ಯಾದಿದೇವತೆಗಳ ಉಪಾಸನೆಯನ್ನು ಮಾಡಬೇಕಾಗಿಲ್ಲ, ಅತತ್‌ಸಹಭಾವಶ್ರುತೇಃ–ಸರ್ವಶಾಖಾಗತವಾದ ಉಪಾಸನೆಗಳ ಸಹಭಾವೇನ=ಜೊತೆಯಲ್ಲಿ ಶ್ರುತವಾಗಿಲ್ಲವಾದುದರಿಂದ. ಆದ್ದರಿಂದ ಅದು ಸರ್ವೋಪಾಸ್ಯವಲ್ಲ, ದೇವೋಪಾಸ್ಯ.

**॥ ಓಂ ದರ್ಶನಾಚ್ಚ ಓಂ ॥** ('ಸತ್ಯೋ ಜ್ಞಾನಃ ಪರಮಾನಂದ ಆತ್ಮಾ' ಇತ್ಯಾದಿಶ್ರುತೌ ದೇವೈಸ್ತಥೋಪಾಸ್ತಿಃ ಕಾರ್ಯಾ, ನಾನ್ಯೈಃ ಇತ್ಯಸ್ಯ ಅರ್ಥಸ್ಯ ದರ್ಶನಾಚ್ಚ ಏವಂ ಇತ್ಯರ್ಥಃ।)

'ಸತ್ಯೋ ಜ್ಞಾನಃ' ಎಂಬ ಶ್ರುತಿಯಲ್ಲಿ ದೇವತೆಗಳೇ ಆ ಗುಣದ ಉಪಾಸನೆಯನ್ನು ಮಾಡಬೇಕು, ಇತರರು ಮಾಡಬಾರದು ಎಂದೂ ಹೇಳಿದೆ.

## ಅದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**ಯಥಾಶ್ರಯಭಾವಾಧಿಕರಣಮ್ ॥** ಶಾಂಕರಭಾಷ್ಯದಲ್ಲಿ 61ನೇ ಸೂತ್ರದಿಂದ (ಮಾಧ್ವಭಾಷ್ಯದಲ್ಲಿ ಸೂತ್ರ-63) 66ನೇ ಸೂತ್ರದವರೆಗೆ ಒಟ್ಟು ಆರು ಸೂತ್ರಗಳು ಒಂದು ಅಧಿಕರಣ. ಇದುವರೆಗೆ ಪ್ರತೀಕೋಪಾಸನೆಯ ಕುರಿತಾಗಿ ವಿಮರ್ಶೆಯನ್ನು ಮಾಡಲಾಗಿದೆ. ಈ ಅಧಿಕರಣದಲ್ಲಿ ಯಜ್ಞಾಂಗಕ್ಕೆ ಸಂಬಂಧಿಸಿರುವ ಉಪಾಸನಾ ಕ್ರಮಗಳ ವಿಮರ್ಶೆಯನ್ನು ಮಾಡಲಾಗುತ್ತದೆ. (ಸಂಪ್ರತಿ ಅಂಗಾವಬದ್ಧೋಪಾಸ್ತೀನಾಂ ಕ್ರಮಂ ವಕ್ತುಂ ಪೂರ್ವಪಕ್ಷಯತಿ.ಭಾ.ರ) ಈ ಅಧಿಕರಣದ ಮೊದಲ ನಾಲ್ಕು ಸೂತ್ರಗಳು ಪೂರ್ವಪಕ್ಷಸೂತ್ರಗಳು. ಕೊನೆಯ ಎರಡು ಸೂತ್ರಗಳು ಸಿದ್ಧಾಂತ ಸೂತ್ರಗಳು.

**॥ ಅಂಗೇಷು ಯಥಾಶ್ರಯಭಾವಃ ॥** ವೇದತ್ರಯಗಳಲ್ಲಿ ಕರ್ಮಾಂಗವಾದ 'ಉದ್ಗೀಥಾದಿ' ಉಪಾಸನೆಗಳನ್ನು ಹೇಳಲಾಗಿದೆ. 'ಪ್ರಣವವನ್ನು ಉದ್ಗೀಥಸಾಮ' ಎಂದು ಉಪಾಸನೆ ಮಾಡುವುದೇ ಉದ್ಗೀಥೋಪಾಸನೆ. ಇದರಿಂದ ಇತರ ಉಪಾಸನೆಗಳಂತೆ ಬ್ರಹ್ಮಸಾಕ್ಷಾತ್ಕಾರವಾಗುವುದಿಲ್ಲ. ಕರ್ಮಸಮೃದ್ಧಿಯಾಗುತ್ತದೆ. ಅಂದರೆ, ಯಜ್ಞಾದಿಕರ್ಮಗಳಲ್ಲಿ ಬರುವ ವಿಘ್ನವು ಪರಿಹಾರವಾಗುತ್ತದೆ. ಕರ್ಮಫಲವು ಕೂಡಲೇ ಸಮೃದ್ಧವಾಗಿ ದೊರೆಯುತ್ತದೆ. ಅಂತಹ ಎಲ್ಲ ಉಪಾಸನೆಗಳನ್ನು ಮಾಡಿಯೇ ಕರ್ಮವನ್ನು ಮಾಡಬೇಕೋ ಅಥವಾ ಆಯಾಯಾ ಉಪಾಸನೆಗೆ ಹೇಳಿರುವ ಫಲವನ್ನು ಅಪೇಕ್ಷಿಸುವವರು ಮಾತ್ರ ಆಯಾಯ ಉಪಾಸನೆಗಳನ್ನು ಮಾಡಿ ಕರ್ಮವನ್ನು ಮಾಡಬೇಕೋ ಎಂದು ಸಂದೇಹ. ಅರ್ಥಾತ್ ಪ್ರಣವಾದಿಗಳು ಮಾತ್ರ ಯಜ್ಞಾಂಗಗಳೋ ಅಥವಾ ಉಪಾಸನಾವಿಶಿಷ್ಟವಾದ ಪ್ರಣವವೇ ಅಂಗವೋ. 'ಜುಹೂ' ಎಂಬ ಯಜ್ಞೋಪಕರಣಕ್ಕೆ 'ಪರ್ಣಮಯೀತ್ವ' (ಪಾಲಾಶತ್ವ)ದಂತೆ ಉದ್ಗೀಥೋಪಾಸನೆಯನ್ನೂ ಯಜ್ಞಾಂಗ ಪ್ರಣವದಲ್ಲಿ ಅವಶ್ಯ ಮಾಡಬೇಕೋ ಅಥವಾ ಗೋದೋಹನದಂತೆ ಐಚ್ಛಿಕವೋ? ಪೂರ್ವಪಕ್ಷ-ಸಮುಚ್ಚಿತ್ಯಾನುಷ್ಠಾನ ಎಂದು. ಪ್ರಣವವು ಅಂಗವೆಂದಾದ ಮೇಲೆ ತದಾಶ್ರಿತವಾದ ಉಪಾಸನೆಯನ್ನು ಬಿಟ್ಟು 'ಕ್ರತುವು' (ಯಜ್ಞವು) ಫಲವನ್ನು ನೀಡುವುದಾದಲ್ಲಿ ಪ್ರಣವಕ್ಕೆ ಅಂಗತ್ವವೇ ಭಗ್ನವಾದೀತು. (ಸೂತ್ರದ ಯಥಾಶ್ರಯಭಾವಶಬ್ದಕ್ಕೆ ಅಂಗಾಂಗಿಭಾವ, ಎಂದರ್ಥ.) ಆದ್ದರಿಂದ ಉದ್ಗೀಥಾದಿ ಉಪಾಸನೆಯನ್ನು ಮಾಡಿಯೇ ಕ್ರತುವನ್ನು ಮಾಡಬೇಕು, ಎಂದು ಪೂರ್ವಪಕ್ಷ—

ಉಪಾಸ್ತೀನಾಂ ಸ್ವತಂತ್ರತ್ವೇ ಬಹಿರ್ಭಾವಃ ಕ್ರತೋರ್ಭವೇತ್ ।
ಸಮುಚ್ಚಯಾದ್ ವಿನಾ ನ ಸ್ಯಾತ್ ನಿಯಮೇನಾಂಗಸಂಗತಿಃ ॥

**॥ ಶಿಷ್ಟೇಶ್ಚ ॥** ಶಿಷ್ಟೇಶ್ಚ–ಶಿಷ್ಟಿ ಎಂದರೆ ಶಾಸನ, ವಿಧಿ. ಉದ್ಗೀಥೋಪಾಸನೆಯನ್ನು ಕ್ರತ್ವಂಗತಯಾ ಶಾಸನ ಮಾಡಲಾಗಿದೆ. ಹೀಗಿದ್ದಮೇಲೆ ಆ ಉಪಾಸನೆಗಳನ್ನೆಲ್ಲ ಸಮುಚ್ಚಿತ್ಯ ಮಾಡಬೇಕು. ಅಪವಾದಗಳೇನಾದರೂ ಇದ್ದಲ್ಲಿ ಈ ನಿರ್ಬಂಧವನ್ನು ಬಿಡಬಹುದು. ಅಂತಹ ಅಪವಾದಗಳೇನೂ ಪ್ರಕೃತದಲ್ಲಿ ಇಲ್ಲ.

**॥ ಸಮಾಹಾರಾತ್ ॥** ಛಾಂದೋಗ್ಯದಲ್ಲಿ 'ಋಗ್ವೇದಿನಾಂ ಯಃ ಪ್ರಣವಃ ಸಃ ಸಾಮವೇದಿನಾಂ ಉದ್ಗೀಥಃ' ಎಂದಿದೆ. ಇದರ ಅರ್ಥ–ಋಗ್ವೇದಿಗಳು ಯಾವುದನ್ನು 'ಪ್ರಣವ'(ಓಂಕಾರ) ಎಂದು ತಿಳಿಯುತ್ತಾರೋ ಅದೇ ಸಾಮವೇದಿಗಳಿಗೆ 'ಉದ್ಗೀಥಸಾಮಭಕ್ತಿ' ಎಂದು, ಇಲ್ಲಿ ಸಾಮವೇದದಲ್ಲಿರುವ ಉದ್ಗೀಥಸಾಮದ ಸಮಾಹಾರವನ್ನು=ಸಂಬಂಧವನ್ನು ಪ್ರಣವಕ್ಕೆ ಹೇಳಲಾಗಿದೆ. ಇದರಂತೆ ವೇದಾಂತರದಲ್ಲಿ ಹೇಳಲಾದ ಉಪಾಸನೆಗಳೆಲ್ಲವನ್ನೂ ವೇದಾಂತರದಲ್ಲಿ ಹೇಳಿರುವ ಕರ್ಮಾಂಗವಾಗಿ ಸಮುಚ್ಚಿತ್ಯ ಅನುಷ್ಠಾನ ಮಾಡಬೇಕು.

**॥ ಗುಣ–ಸಾಧಾರಣ್ಯ ಶ್ರುತೇಶ್ಚ ॥** 'ಗುಣಶ್ರುತೇಃ' 'ಸಾಧರಣ್ಯಶ್ರುತೇಃ' ಎಂದು ಎರಡು ಹೇತುಗಳು. ಛಾಂದೋಗ್ಯದಲ್ಲಿ 'ತೇನೇಯಂ ತ್ರಯೀ ವಿದ್ಯಾ ವರ್ತತೇ, ಓಮಿತ್ಯಾಶ್ರಾವಯತಿ, ಓಮಿತಿ ಶಂಸತಿ, ಓಮಿತ್ಯುದ್ಗಾಯತಿ'. ಹೋಮದಲ್ಲಿ 'ಆಶ್ರಾವಣ, ಶಂಸನ, ಉದ್ಗಾನ' ಇವು ಕ್ರಮವಾಗಿ ವೇದತ್ರಯೋಕ್ತ ಕರ್ಮಗಳು. ಈ ಮೂರೂ ಕರ್ಮಗಳೂ ಓಂಕಾರದ ಉಚ್ಚಾರಣೆಯೊಂದಿಗೇ ನಡೆಯುತ್ತದೆ. ಹೀಗೆ ಉಪಾಸನಾವಿಷಯವಾದ ಓಂಕಾರವು ಸರ್ವವೇದಸಾಧಾರಣವಾಗಿದೆ. ಆದ್ದರಿಂದ ತದ್ವಿಷಯಕವಾದ ಉಪಾಸನೆಯೂ ಸರ್ವಕರ್ಮಸಾಧಾರಣವಾಗಿದೆ.

ಗುಣಸಾಧಾರಣ್ಯಶ್ರುತೇಶ್ಚ–ಹಿಂದೆ ಹೇಳಿದುದರ ವ್ಯತಿರೇಕ ವ್ಯಾಪ್ತಿಯು ಇಲ್ಲಿ ವಿವಕ್ಷಿತ. ಉದ್ಗೀಥಾದ್ಯುಪಾಸನೆಗಳೆಲ್ಲವೂ ವೇದತ್ರಯೋಕ್ತಕರ್ಮಗಳಲ್ಲಿ ಸಾಧಾರಣ ವಾಗಿ ಅಂಗವಾಗಿಲ್ಲವಾದಲ್ಲಿ ಉಪಾಸನಾವಿಷಯವಾದ ಓಂಕಾರಕ್ಕೆ, ಸರ್ವಕರ್ಮಗಳ ಸಂಬಂಧವು ಇಲ್ಲವಾದೀತು. ಆದರೆ, ಛಾಂದೋಗ್ಯದಲ್ಲಿ ಓಂಕಾರಕ್ಕೆ ವೇದತ್ರಯೋಕ್ತ ಕರ್ಮಸಾಧಾರಣ್ಯವು ಶ್ರುತವಾಗಿದೆ. ಆದ್ದರಿಂದ ಉದ್ಗೀಥೋಪಾಸೆಯು ಸರ್ವಕರ್ಮಾಂಗ.

ಇವಿಷ್ಟು ಪೂರ್ವಪಕ್ಷಾಂಶಗಳು. ಮುಂದಿನದು ಸಿದ್ಧಾಂತಸೂತ್ರ–

**ನ ವಾ ತತ್–ಸಹಭಾವಾಶ್ರುತೇಃ ।** 'ನ ವಾ' ಶಬ್ದಗಳು ಈವರೆಗೆ ಹೇಳಿದ್ದನ್ನು ನಿರಾಕರಿಸುತ್ತವೆ. 'ಸಹಭಾವ–ಅಶ್ರುತೇಃ' ಎಂದು ಸೂತ್ರಪಾಠ. 'ಗ್ರಹಂ ವಾ ಗೃಹೀತ್ವಾ ಚಮಸಂ ವಾ ಉನ್ನೀಯ, ಸ್ತೋತ್ರಮುಪಾಕರೋತಿ, ಸ್ತೋತ್ರಮನುಶಂಸತಿ–ಪ್ರಸ್ತೋತಃ 'ಸಾಮ ಗಾಯ' ಹೋತಃ 'ಏತದ್ ಯಜ' ಎಂದು ಸ್ತೋತ್ರಕ್ಕೆ ಯಜನ ಸಹಭಾವವು ಶ್ರುತವಾಗಿದೆ. ಹೀಗಾಗಿ ಅದು ಕರ್ಮಾಂಗವೆನಿಸಬಹುದು. ಆದರೆ ಆದರಂತೆ 'ಉದ್ಗೀಥೋಪಾಸನೆಯನ್ನು ಮಾಡಿ ಹೋಮಿಸು' ಎಂದು ಕ್ರತುಸಹಭಾವವು ಉಪಾಸನೆಗೆ ಶ್ರುತವಾಗಿಲ್ಲ. ಆದಕಾರಣ, ಉಪಾಸನೆಯು ಅವಶ್ಯಾನುಷ್ಠೇಯವಾದ ಕ್ರತ್ವಂಗವಲ್ಲ. ಫಲಸಮೃದ್ಧಿಯ ಅಭಿಲಾಷೆ ಇದ್ದರೆ ಉದ್ಗೀಥೋಪಾಸನೆ ಮಾಡು, ಎಂದು ಈ ಉಪಾಸನೆಯು ಗೋದೋಹದಂತೆ ಫಲಾಂಗವಾಗಿಯಷ್ಟೇ ಶ್ರುತವಾಗಿದೆ.

**ದರ್ಶನಾಚ್ಚ ॥** ಛಾಂದೋಗ್ಯದಲ್ಲಿ ಹೀಗಿದೆ—''ಏವಂವಿದ್ಧ(ವಿತ್+ಹ) ವೈ ಬ್ರಹ್ಮಾ ಯಜ್ಞಂ, ಯಜಮಾನಂ, ಸರ್ವಾಂಶ್ಚ ಋತ್ವಿಜಃ ಅಭಿರಕ್ಷತಿ'. ಏವಂವಿತ್=ಋಗ್ವೇದವಿಹಿತವಾದ ಕರ್ಮಲೋಪವಾಗಿದ್ದಲ್ಲಿ ವ್ಯಾಹೃತಿಹೋಮವು ಪ್ರಾಯಶ್ಚಿತ್ತ, ಎಂದು ತಿಳಿಯುವ ಮೂಲಕ 'ಬ್ರಹ್ಮ'ನು ಇತರ ಋತ್ವಿಕ್‌ಗಳು ಮಾಡುವ ಕರ್ಮಲೋಪವನ್ನು ಪರಿಹರಿಸುತ್ತಾನೆ. ಇದು ಆ ಛಾಂದೋಗ್ಯವಾಕ್ಯದ ಅಭಿಪ್ರಾಯ. ಎಲ್ಲರೂ ಎಲ್ಲವನ್ನೂ ತಿಳಿಯುವುದು ಕಡ್ಡಾಯವಾಗಿದ್ದಲ್ಲಿ ಇದು ಕೂಡುವುದಿಲ್ಲ. ಆದ್ದರಿಂದ ಸರ್ವೋಪಾಸನೆಯನ್ನು ಎಲ್ಲರೂ ಮಾಡಬೇಕಾಗಿಲ್ಲ. ಆದ್ದರಿಂದ ತತ್ತದುಪಾಸನಾಫಲವಾದ ಯಾವ ಯಾವ ಕಾಮನೆಗಳಿವೆಯೋ ತತ್ತತ್‌ಫಲಕೋಪಾಸನೆಗಳು ಐಚ್ಛಿಕ.

**ವಿಮರ್ಶೆ**—ಶಾಂಕರಭಾಷ್ಯದ 'ತನ್ನಿರ್ಧಾರಣಾರ್ಥನಿಯಮಃ' (3.3.43) ಎಂಬ ಅಧಿಕರಣ ದಲ್ಲಿ ಅಂಗಸಂಬಂಧಿಯಾದ ಉಪಾಸನೆಗಳಿಗೆ ಸ್ವಾತಂತ್ರ್ಯವನ್ನೂ (ಅಂಗತ್ವಾಭಾವವನ್ನೂ) ಪ್ರತ್ಯೇಕ ಪುರುಷಾರ್ಥಫಲಕತ್ವವನ್ನೂ ಕ್ರತುಲಭ್ಯವಾದ ಫಲಕ್ಕಿಂತ ಪೃಥಕ್ ಫಲವನ್ನೂ ಸಾಧಿಸಿ ಆಗಿದೆ. ಮತ್ತೆ ಇಲ್ಲಿ ಪೂರ್ವಪಕ್ಷಕ್ಕೆ ಅವಕಾಶವೇ ಇಲ್ಲ.

**ರಾಮಾನುಜಭಾಷ್ಯ**ದಲ್ಲಿ ಅಧಿಕರಣ ಶರೀರ, ಅದರಲ್ಲಿ ಸೇರಿರುವ ಸೂತ್ರಾರ್ಥ ಎಲ್ಲವೂ ಶಾಂಕರಭಾಷ್ಯದಂತೆಯೇ. 'ಉದ್ಗೀಥವು' ಯಜ್ಞಾಂಗವಾದಂತೆ ಆದರ ಉಪಾಸನೆಯೂ ಯಜ್ಞದ ಅವಶ್ಯಾನುಷ್ಠೇಯವಾದ ಅಂಗ, ಎಂದು ಪೂರ್ವಪಕ್ಷ. ಉಪಾಸನೆಯು ಐಚ್ಛಿಕ ಎಂದು ಸಿದ್ಧಾಂತ.

**ಇಲ್ಲಿಗೆ ಮೂರನೆಯ ಅಧ್ಯಾಯದ ಮೂರನೆಯಪಾದ ಮುಗಿಯಿತು.**

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ

# ಬ್ರಹ್ಮಸೂತ್ರಭಾಷ್ಯಮ್

## ಮೂರನೆಯ ಅಧ್ಯಾಯದ ನಾಲ್ಕನೆಯ ಪಾದ

## ೧. ಪುರುಷಾರ್ಥಾಧಿಕರಣಮ್

ಜ್ಞಾನಸಾಮರ್ಥ್ಯಮಸ್ಮಿನ್ ಪಾದೇ ಉಚ್ಯತೇ-

**॥ ಓಂ ಪುರುಷಾರ್ಥೋಽತಃ ಶಬ್ದಾದಿತಿ**
**ಬಾದರಾಯಣಃ ಓಂ ॥ ೧ ॥**

ಯದ್ದರ್ಶನಾರ್ಥಮುಪಾಸನೋಕ್ತಾ ತಸ್ಮಾದ್ ದರ್ಶನಾತ್ ಸರ್ವಪುರುಷಾರ್ಥ ಪ್ರಾಪ್ತಿರಿತಿ ಬಾದರಾಯಣೋ ಮನ್ಯತೇ ।

'ಯಂಯಂ ಲೋಕಂ ಮನಸಾ ಸಂವಿಭಾತಿ
ವಿಶುದ್ಧಸತ್ತ್ವಃ ಕಾಮಯತೇ ಯಾಂಶ್ಚ ಕಾಮಾನ್ ।
ತಂತಂ ಲೋಕಂ ಜಯತೇ ತಾಂಶ್ಚ ಕಾಮಾಂ-
ಸ್ತಸ್ಮಾದಾತ್ಮಜ್ಞಂ ಹ್ಯರ್ಚಯೇದ್ ಭೂತಿಕಾಮಃ ॥' (ಮು.3.1.10)

ಇತಿ ಶಬ್ದಾತ್ ॥ 1 ॥

ಪೂರ್ವೋಕ್ತವಾದ ಉಪಾಸನಾದಿಂದ ಜನ್ಯವಾದ ಭಗವದಪರೋಕ್ಷದ ಮಹಿಮೆಯನ್ನು ಈ ಪಾದದಲ್ಲಿ ಹೇಳಲಾಗಿದೆ.

ಯಾವ ಭಗವದ್ದರ್ಶನದ ಉದ್ದೇಶದಿಂದ ಹಿಂದಿನ ಪಾದದಲ್ಲಿ ಮನನ-ಧ್ಯಾನ ರೂಪವಾದ ಉಪಾಸನೆಯನ್ನು ಹೇಳಲಾಗಿದೆಯೋ ಅಂತಹ ಭಗವದ್ದರ್ಶನದಿಂದ ಸರ್ವಪುರುಷಾರ್ಥಗಳೂ ಸಿಗುತ್ತವೆ, ಮೋಕ್ಷಮಾತ್ರವಲ್ಲ, ಎಂದು ಬಾದರಾಯಣರು ತಿಳಿಸುತ್ತಾರೆ. ಶಬ್ದಾತ್='ಯಂಯಂ' ಇತ್ಯಾದಿ ಮುಂಡಕೋಪನಿಷತ್ತಿನ ಮಂತ್ರದಿಂದಾಗಿ ಅದು ಸಿದ್ಧವಾಗುತ್ತದೆ.

ವಿವರಣೆ—ಭಾಷ್ಯದಲ್ಲಿ 'ಯದ್ದರ್ಶನಾರ್ಥಂ ಉಪಾಸನೋಕ್ತಾ' ಎಂದಿರುವುದು ಪೂರ್ವಪಾದದೊಂದಿಗೆ ಈ ಪಾದಕ್ಕೆ ಸಂಗತಿಯನ್ನು ತಿಳಿಸುವುದಕ್ಕಾಗಿ. ಪೂರ್ವಪಾದದಲ್ಲಿ ಮನನ-ಧ್ಯಾನರೂಪವಾದ ಉಪಾಸನೆಯನ್ನು ಹೇಳಲಾಗಿದೆ. ಅದರಿಂದ ಪರಮಾತ್ಮನ

ಪ್ರತ್ಯಕ್ಷವಾಗುತ್ತದೆ. ಅಂತಹ, ಅಪರೋಕ್ಷದಿಂದ ಮೋಕ್ಷವಾಗುತ್ತದೆ. ಮೋಕ್ಷಮಾತ್ರ ವಲ್ಲದೆ, ಅಪರೋಕ್ಷಜ್ಞಾನಿಯು ಬಯಸಿದ್ದೆಲ್ಲ ಕೈಗೂಡುತ್ತದೆ. ವಸ್ತುತಃ,

**ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್ ॥**

ಎಂದು ಕರ್ಮಲಭ್ಯವಾದ ಫಲಗಳಲ್ಲಿ ವೈರಾಗ್ಯವಿದ್ದರೆ ಮಾತ್ರ ಬ್ರಹ್ಮಜ್ಞಾನಪ್ರಾಪ್ತಿಯನ್ನು ಹೇಳಲಾಗಿದೆ. ಆದ್ದರಿಂದ ಬ್ರಹ್ಮಜ್ಞಾನಿಗಳಿಗೆ ಇತರ ಕಾಮನೆಗಳು ಇರುವುದಿಲ್ಲ. ಆದರೂ ಅಪರೋಕ್ಷಜ್ಞಾನಿಯಾದ ಸೌಭರಿಯು ತನ್ನ ಪ್ರಾರಬ್ಧಕ್ಷಯಕ್ಕಾಗಿ ಕನ್ಯಾರ್ಥಿಯಾಗಿರುವುದು ತಿಳಿದುಬರುತ್ತದೆ. ಅವನು ಅಪರೋಕ್ಷಜ್ಞಾನದ ಮಹಿಮೆಯಿಂದ ಕಾಯವ್ಯೂಹವನ್ನು ಸ್ವೀಕರಿಸಿ ಸಂಸಾರಸುಖವನ್ನು ಅನುಭವಿಸಿದ್ದಾನೆ. ಕರ್ದಮ ಪ್ರಜಾಪತಿ ಗೃಹಸ್ಥಜೀವನವನ್ನು ಅನುಭವಿಸಿದ್ದಾನೆ. ಹೀಗೆ ಜ್ಞಾನಿಗಳಿಗೂ ಇತರ ಕಾಮನೆಗಳು ಬರುವುದುಂಟು. ಅವೆಲ್ಲವೂ ಅಪರೋಕ್ಷಜ್ಞಾನದ ಪ್ರಭಾವದಿಂದ ಕೈಗೂಡುತ್ತವೆ.

ಶ್ರುತ್ಯರ್ಥ— ಶುದ್ಧಾಂತಃಕರಣನಾದ ಜ್ಞಾನಿಯು ಯಂಯಂ ಲೋಕಂ=ಯಾವ ಯಾವ ಲೋಕಗಳನ್ನು ಮನಸ್ಸಿನಿಂದ ಸಂವಿಭಾತಿ=ಇಚ್ಛಿಸುತ್ತಾನೋ ಯಾವ ಕಾಮ್ಯವಸ್ತುಗಳನ್ನು ಬಯಸುವನೋ ಆ ಲೋಕಗಳನ್ನೂ ಅಂತಹ ಕಾಮ್ಯವಸ್ತುಗಳನ್ನೂ ಅವನು ಪಡೆಯುತ್ತಾನೆ. ಆದ್ದರಿಂದ ಐಶ್ವರ್ಯಕಾಮಿಯು ಆತ್ಮಜ್ಞಾನಿಯನ್ನು ಆರಾಧಿಸಬೇಕು.

## ॥ ಓಂ ಶೇಷತ್ವಾತ್ ಪುರುಷಾರ್ಥವಾದೋ ಯಥಾಽನ್ಯೇಷ್ವಿತಿ ಜೈಮಿನಿಃ ಓಂ ॥ ೨ ॥

**ಅಸ್ತ್ಯೇವ ಮೋಕ್ಷಸಾಧನತ್ವಂ ಜ್ಞಾನಸ್ಯ । ಸ್ವರ್ಗಾದಿಷು ತತ್ಸಾಧನ-ಕರ್ಮಶೇಷತ್ವೇನ ।**

**'ಸ್ವರ್ಗಂ ಧನಾದ್ ದೇಹತೋ ವೈ ಗೃಹಾಚ್ಚ**
**ಪ್ರಾಪ್ಸ್ಯಂತಿ ಧೀರಾ ನ ತ್ವಧೀರಾಃ ಕುತಶ್ಚಿತ್ ॥' ಇತಿವದಿತಿ ಜೈಮಿನಿಃ ।**

ಭಗವದಪರೋಕ್ಷಜ್ಞಾನವು ಮೋಕ್ಷಕ್ಕೆ ಸಾಧನ ಎನ್ನುವುದು ಯುಕ್ತ. ಆದರೂ ಅದು ಸ್ವರ್ಗಾದಿ ಇತರ ಪುರುಷಾರ್ಥಗಳಿಗೆ ಸ್ವತಂತ್ರಸಾಧನವಲ್ಲದಿದ್ದರೂ ಕರ್ಮಶೇಷತಯಾ ಕಾರಣ. ಕರ್ಮಶೇಷವಾದರೂ 'ಯಂಯಂ ಲೋಕಂ' ಎಂದು ಜ್ಞಾನದಿಂದ ಇತರಲೋಕಪ್ರಾಪ್ತಿಶ್ರುತಿಯು ಯುಕ್ತವೇ ಆಗಿದೆ. ಐಶ್ವರ್ಯವು ಯಾಗಾದಿ

ಕರ್ಮಶೇಷತಯಾ ಸ್ವರ್ಗಸಾಧನವಾದರೂ 'ಸ್ವರ್ಗಂ ಧನಾತ್' ಎಂದು ಹೇಳಲಾಗುತ್ತದೆ. ಅದರಂತೆ 'ಜ್ಞಾನದಿಂದ ಸ್ವರ್ಗ' ಎಂದು ಹೇಳಬಹುದು. ಹೀಗೆ ಜೈಮಿನಿ ಆಚಾರ್ಯರು ಹೇಳುತ್ತಾರೆ.

**ವಿವರಣೆ**—ಭಗವದಪರೋಕ್ಷಜ್ಞಾನದಿಂದ ಮೋಕ್ಷವಾಗುತ್ತದೆ ಎನ್ನುವುದು ಸರಿ. ಆದರೆ ಜ್ಞಾನವು ಮೋಕ್ಷಕ್ಕೆ ಸಾಧನವಾದಂತೆ ಸ್ವರ್ಗಾದಿ ಇತರ ಪುರುಷಾರ್ಥಗಳಿಗೆ ಸ್ವತಂತ್ರ ಸಾಧನವಲ್ಲ. ಅದಕ್ಕೆ ಪ್ರಧಾನ ಸಾಧನವಾದುದು ಕರ್ಮವೇ. ಆದರೆ, ಜ್ಞಾನಪೂರ್ವಕವಾಗಿ ಕರ್ಮ ಮಾಡಿದರೆ ಸ್ವರ್ಗದಲ್ಲಿ ಅತಿಶಯ ಸಿದ್ಧವಾಗುತ್ತದೆ. ಹೀಗೆ ಕರ್ಮಶೇಷವಾಗಿ ಜ್ಞಾನವೂ ಸ್ವರ್ಗಸಾಧನವಾಗುತ್ತದೆ. ಹೀಗೆ ಕರ್ಮಶೇಷವಾಗಿ ಸ್ವರ್ಗಸಾಧನವಾದರೂ 'ಜ್ಞಾನದಿಂದ ಸ್ವರ್ಗ' ಎನ್ನುವ ಮಾತು ಯುಕ್ತವಾಗುತ್ತದೆ. ಹಣವು ಯಾಗದ ಮೂಲಕ ಸ್ವರ್ಗಸಾಧನವಾದುದರಿಂದ ಹಣ ಕರ್ಮಶೇಷ. ಆದರೂ 'ಧನಾತ್ ಸ್ವರ್ಗಂ' ಎಂದು ಶಾಸ್ತ್ರೀಯ ಪ್ರಯೋಗವಿದೆ. ಅದರಂತೆ, ಜ್ಞಾನದಿಂದ ಸ್ವರ್ಗ, ಎಂಬ ಪ್ರಯೋಗವು ಉಪಪನ್ನವಾಗುತ್ತದೆ. ಹೀಗೆ ಜ್ಞಾನಕ್ಕೆ ಪುರುಷಾರ್ಥ ಹೇತುತ್ವವನ್ನು ಜೈಮಿನಿಗಳು ಹೇಳುತ್ತಾರೆ.

**ಶ್ರುತ್ಯರ್ಥ**—ಸ್ವರ್ಗಂ=ಸ್ವರ್ಗವನ್ನು ಧನಾತ್=ಹಣದಿಂದ, ದೇಹತಃ=ದೃಢದೇಹ ದಿಂದ, ಗೃಹಾಚ್ಚ=ಗೃಹಸ್ಥಾಶ್ರಮದಿಂದಲೂ ಧೀರಾಃ=ಜ್ಞಾನಿಗಳು ಪ್ರಾಪ್ಸ್ಯಂತಿ=ಹೊಂದು ತ್ತಾರೆ. ಅಧೀರಾಃ=ಅಜ್ಞಾನಿಗಳು ಕುತಶ್ಚಿತ್=ಇನ್ನಾವುದರಿಂದಲೂ ನ ಪ್ರಾಪ್ಸ್ಯಂತಿ= ಹೊಂದುವುದಿಲ್ಲ.

## ॥ ಓಂ ಆಚಾರದರ್ಶನಾತ್ ಓಂ ॥ ೩ ॥

**ಜ್ಞಾನಿನಾಮೇವ ದೇವಾದೀನಾಮಾಚಾರದರ್ಶನಾತ್ ॥**

ಅಪರೋಕ್ಷಜ್ಞಾನಿಗಳಾದ ದೇವತೆಗಳೂ ಸ್ವರ್ಗಕ್ಕಾಗಿ ಯಜ್ಞವನ್ನು ಆಚರಿಸಿದ್ದು ಶ್ರುತಿಯಿಂದ ತಿಳಿಯುತ್ತದೆ. ಆದಕಾರಣ ಸ್ವರ್ಗವು ಕರ್ಮದ ಫಲ, ಜ್ಞಾನ ಫಲವಲ್ಲ.

**ವಿವರಣೆ**—'ನೈವ ದೇವಪದಂ ಪ್ರಾಪ್ತಾಃ ಬ್ರಹ್ಮದರ್ಶನವರ್ಜಿತಾಃ' ಬ್ರಹ್ಮಾಪರೋಕ್ಷ ಇಲ್ಲದವರಿಗೆ ದೇವತಾಪದಪ್ರಾಪ್ತಿ ಇಲ್ಲ. ಇದರಿಂದ ದೇವತೆಗಳಿಗೆ ಬ್ರಹ್ಮಜ್ಞಾನ ಇದೆ, ಎಂದು ತಿಳಿಯುತ್ತದೆ. ಆದರೂ ದೇವತೆಗಳು ಸ್ವರ್ಗಕ್ಕಾಗಿ ಯಜ್ಞವನ್ನು ಮಾಡುತ್ತಾರೆ. 'ಯಜ್ಞೇನ ಯಜ್ಞಮಯಜಂತ ದೇವಾಃ' ಎಂದು ದೇವತೆಗಳೂ ಯಜ್ಞಮಾಡಿರುವ ಇತಿಹಾಸ ವೇದದಲ್ಲಿದೆ. ಇದರಿಂದ ಸ್ವರ್ಗಕ್ಕೆ ಕರ್ಮವು

ಸಾಧನವೆಂದು ತಿಳಿಯುತ್ತದೆ, ಜ್ಞಾನವಲ್ಲ. ಆದ್ದರಿಂದ ಜ್ಞಾನದಿಂದ ಪುರುಷಾರ್ಥ ಎನ್ನುವ ಶ್ರುತಿಗೆ ಜೈಮಿನಿಗಳು ಹೇಳಿದಂತೆ ಜ್ಞಾನಪೂರ್ವಕ ಕರ್ಮದಿಂದ ಪುರಷಾರ್ಥ, ಎಂದು ಗೌಣಾರ್ಥವನ್ನು ಮಾಡಬೇಕು.

**|| ಓಂ ತಚ್ಛ್ರುತೇಃ ಓಂ || ೪ ||**

**'ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತಿ' (ಛಾಂ.ಉ. 1.1.10) ಇತಿ ಶೇಷತ್ವಶ್ರುತೇಃ ||**

ಛಾಂದೋಗ್ಯದಲ್ಲಿ 'ಯದೇವ ವಿದ್ಯಯಾ' 'ಜ್ಞಾನಪೂರ್ವಕವಾಗಿ ಮಾಡಿದ ಕರ್ಮವೇ ಫಲಪ್ರದವಾಗುತ್ತದೆ' ಎಂದು ಹೇಳಿರುವುದರಿಂದ ಜ್ಞಾನವು ಕರ್ಮಶೇಷ ವಾಗಿದೆ, ಎಂದು ತಿಳಿಯುತ್ತದೆ. ಆದ್ದರಿಂದ ಕರ್ಮಶೇಷವಾಗಿಯೇ ಜ್ಞಾನವು ಪುರುಷಾರ್ಥಸಾಧನ. ಹೊರತು, ಕರ್ಮದಂತೆ ಸ್ವತಂತ್ರವಾಗಿ ಅಲ್ಲ.

ಶ್ರುತ್ಯರ್ಥ—ಯದೇವ=ಯಾವುದನ್ನು ಉಪನಿಷದಾ ವಿದ್ಯಯಾ=ಸ್ವಯೋಗ್ಯ ವಾದ ಜ್ಞಾನದಿಂದ ಕರೋತಿ=ಮಾಡುತ್ತಾನೋ ತದೇವ=ಅದೇ ವೀರ್ಯವತ್ತರಂ=ಅಧಿ ಕಫಲಸಾಧನವಾಗಿ ಭವತಿ=ಆಗುತ್ತದೆ.

ಉಪ ನಿಷಾದಯತೀತಿ ಉಪನಿಷತ್–ಪರಮಾತ್ಮವಿದ್ಯಯಾ. ಉಪನಿಷತ್ ಎಂದರೆ ಆತ್ಮವಿದ್ಯೆ–ತತ್ತ್ವಪ್ರದೀಪ.

**|| ಓಂ ಸಮನ್ವಾರಂಭಣಾತ್ ಓಂ || ೫ ||**

**'ಕರ್ಮೈವ ದೇಹಂ ದೈವಿಕಂ ಮಾನುಷಂ ವಾऽ–**
**ಪ್ಯನ್ವಾರಭೇನ್ನಾಪರಸ್ತತ್ರ ಹೇತುಃ |**
**ಭೋಗಾಂಸ್ತದೀಯಾಂಶ್ಚ ಯಥಾವಿಭಾಗಂ**
**ದದಾತಿ ಕರ್ಮೈವ ಶುಭಾಶುಭಂ ಯತ್ ||'**
**ಇತಿ ಮಾಠರಶ್ರುತೇಶ್ಚ | ಸಂಶಬ್ದಃ ಪ್ರಾಧಾನ್ಯಂ ದರ್ಶಯತಿ ||**

'ಕರ್ಮೈವ' ಎಂಬ ಮಾಠರಶ್ರುತಿಯು ಸ್ವರ್ಗಾದಿಫಲಪ್ರಾಪ್ತಿಗೆ ಕರ್ಮವೇ ಕಾರಣವೆನ್ನುತ್ತದೆ. ಸೂತ್ರದ 'ಸಂ' ಶಬ್ದವು ಪುರುಷಾರ್ಥಪ್ರಾಪ್ತಿಗೆ ಕರ್ಮವೇ ಪ್ರಧಾನ ವೆಂದು ತಿಳಿಸುತ್ತದೆ.

**ವಿವರಣೆ—** ಜ್ಞಾನಕ್ಕೆ ಪುರುಷಾರ್ಥಸಾಧನತ್ವವನ್ನು ಪ್ರಧಾನವಾಗಿ ಶ್ರುತಿಯು ತಿಳಿಸಿದರೂ ಅದು ಕರ್ಮಶೇಷ ಎಂದು ಹೇಳಿದಂತೆ, ಕರ್ಮಕ್ಕೆ ಪ್ರಾಧಾನ್ಯ ಶ್ರುತವಾದರೂ ಅದು ಜ್ಞಾನ ಸಮಕಕ್ಷವೆಂದೋ ಜ್ಞಾನಶೇಷವೆಂದೋ ಏಕೆ ಹೇಳಬಾರದು? ಎಂಬ ಆಕ್ಷೇಪದ ಪರಿಹಾರಕ್ಕಾಗಿ ಈ ಸೂತ್ರ.

**ಶ್ರುತ್ಯರ್ಥ—** ಕರ್ಮೈವ=ಕರ್ಮವೇ ದೈವಿಕಂ=ದೇವತೆಗಳಿಗೆ ಸಂಬಂಧಿಸಿದ ಮಾನುಷಂ ವಾ=ಮನುಷ್ಯರಿಗೆ ಸಂಬಂಧಿಸಿದ ದೇಹಂ=ದೇಹವನ್ನು ಅನ್ವಾರಭೇತ್=ಉಂಟುಮಾಡುತ್ತದೆ. ತತ್ರ=ಈ ದೇಹಾರಂಭಕ್ಕೆ ಅಪರಃ=ಬೇರೇನೂ ನ ಹೇತುಃ=ಕಾರಣವಲ್ಲ. ಶುಭಾಶುಭಂ=ಶುಭ ಮತ್ತು ಅಶುಭವಾದ ಕರ್ಮೈವ=ಕರ್ಮವೇ ಯಥಾವಿಭಾಗಂ=ಪುಣ್ಯ–ಪಾಪಗಳಿಗೆ ಅನುಗುಣವಾಗಿ ತದೀಯಾನ್=ಕರ್ಮಕ್ಕೆ ಸಂಬಂಧಿಸಿದ, ಭೋಗಾನ್=ಸುಖದುಃಖಗಳನ್ನು ದದಾತಿ=ಕೊಡುತ್ತದೆ.

## ॥ ಓಂ ತದ್ವತೋ ವಿಧಾನಾತ್ ಓಂ ॥ ೬ ॥

**'ಜ್ಞಾನೀ ಚ ಕರ್ಮಾಣಿ ಸದೋದಿತಾನಿ ಕುರ್ಯಾದಕಾಮಃ ಸತತಂ ಭವೇತ' ಇತಿ ಕಮಠಶ್ರುತೌ ಜ್ಞಾನವತೋಽಪಿ ವಿಧಾನಾತ್ ॥**

ಕಮಠಶ್ರುತಿಯಲ್ಲಿ ಜ್ಞಾನಿಯೂ ಕರ್ಮವನ್ನು ಮಾಡಬೇಕು, ಎಂದು ವಿಧಾನಮಾಡಲಾಗಿದೆ. ಆದ್ದರಿಂದ ಜ್ಞಾನವು ಕರ್ಮಶೇಷವೆಂದು ಸಿದ್ಧವಾಗುತ್ತದೆ.

**ವಿವರಣೆ—** ಜ್ಞಾನವು ಕರ್ಮಶೇಷವಲ್ಲ, ಅದು ಸ್ವತಂತ್ರವಾಗಿ ಪುರುಷಾರ್ಥ ಸಾಧನ. ಏಕೆಂದರೆ, ಅಪರೋಕ್ಷಜ್ಞಾನಿಗಳೂ ಕರ್ಮವನ್ನು ಮಾಡುತ್ತಾರೆ. ಅವರು ಮಾಡಿದ ಕರ್ಮಕ್ಕೆ ಯಾವ ಫಲವೂ ಇಲ್ಲ. ಮುಕ್ತರಂತೆ ಅವರು ಲೀಲೆಗಾಗಿ ಕರ್ಮವನ್ನು ಮಾಡುತ್ತಾರೆ. ಹೀಗಾಗಿ ಜ್ಞಾನಸಹಿತ ಮಾಡಿದ ಕರ್ಮ ಫಲವಿಶೇಷಕ್ಕೆ ಸಾಧನವಲ್ಲ. ಅದು ವ್ಯರ್ಥ. ಆದ್ದರಿಂದ ಜ್ಞಾನವು ಕರ್ಮಶೇಷವಲ್ಲ. ಈ ಆಕ್ಷೇಪಕ್ಕೆ ಪರಿಹಾರ ಪ್ರಕೃತಸೂತ್ರ–ಕಮಠಶ್ರುತಿಯು ಜ್ಞಾನಿಗೆ ಕರ್ಮವನ್ನು ವಿಧಾನಮಾಡಿದೆ. ವಿಹಿತಾಚರಣೆ ವ್ಯರ್ಥವಲ್ಲ. ಆದ್ದರಿಂದ ಜ್ಞಾನಿಯ ಕರ್ಮ ಮುಕ್ತಕರ್ಮದಂತೆ ಲೀಲಾಮಾತ್ರವಲ್ಲ.

**ಶ್ರುತ್ಯರ್ಥ—** ಜ್ಞಾನಿಯೂ ಶ್ರುತಿವಿಹಿತವಾದ ಸಂಧ್ಯಾದಿನಿತ್ಯಕರ್ಮಗಳನ್ನು ಸರ್ವದಾ ಮಾಡಲೇಬೇಕು. ಅದೂ ಅಕಾಮಃ=ನಿಷ್ಕಾಮನೆಯಿಂದ ಮಾಡಬೇಕು.

## ॥ ಓಂ ನಿಯಮಾಚ್ಚ ಓಂ ॥ ೭ ॥

**'ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ ।**
**ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ॥'**

**(ಈಶ.2) ಇತಿ ।**

ಈಶಾವಾಸ್ಯೋಪನಿಷತ್ತಿನಲ್ಲಿ ಜ್ಞಾನಿಗೆ ಕರ್ಮದ ನಿಯಮವನ್ನು ಹೇಳಿರುವುದರಿಂದಾಗಿಯೂ ಅವನ ಕರ್ಮ ಲೀಲಾಮಾತ್ರವಲ್ಲ.

ಈಶಾವಾಸ್ಯಉಪನಿಷತ್ತಿನಲ್ಲಿ ಜ್ಞಾನಿಯು ಕರ್ಮವನ್ನು ಮಾಡದಿದ್ದಲ್ಲಿ 'ಪ್ರತ್ಯವಾಯವನ್ನು' ಹೇಳಲಾಗಿದೆ. ಆದ್ದರಿಂದಲೂ ಜ್ಞಾನಿಯ ಕರ್ಮಾಚರಣೆ ಲೀಲಾಮಾತ್ರವಲ್ಲ.

ಶ್ರುತ್ಯರ್ಥ—ಇಹ=ಇಲ್ಲಿ ಭಗವದರ್ಪಣಬುದ್ಧಿಯಿಂದ ಕರ್ಮಾಣಿ ಕುರ್ವನ್ನೇವ=ವಿಹಿತ ಕರ್ಮಗಳನ್ನು ಮಾಡುತ್ತಲೇ ಶತಂ ಸಮಾಃ=ನೂರು ವರ್ಷಗಳ ಕಾಲ ಜಿಜೀವಿಷೇತ್=ಜೀವಿಸಲು ಬಯಸಬೇಕು. ಇತೋ ಅನ್ಯಥಾ=ಕರ್ಮ ಮಾಡದ ಹೊರತಾಗಿ ನರೇಽಪಿ ತ್ವಯಿ=ಜ್ಞಾನಿಯಾದರೂ ನಿನ್ನಲ್ಲಿ ಕರ್ಮ=ಪಾಪವು ನ ಲಿಪ್ಯತೇ ಇತಿ ನ=ಲೇಷವಾಗುವುದಿಲ್ಲವೆಂದಿಲ್ಲ. (ಪಾಪವು ಬಂದೇ ತೀರುತ್ತದೆ.)

## ॥ ಓಂ ಅಧಿಕೋಪದೇಶಾತ್ತು ಬಾದರಾಯಣಸ್ಯೈವಂ ತದ್ದರ್ಶನಾತ್ ಓಂ ॥ ೮ ॥

**'ಜ್ಞಾನಾದೇವ ಸ್ವರ್ಗೋ ಜ್ಞಾನಾದೇವಾಪವರ್ಗೋ ಜ್ಞಾನಾದೇವ (ಸರ್ವೇ) ಕಾಮಾಃ ಸಂಪದ್ಯಂತೇ । ಅ(ತ)ಥಾಪಿ ಯಥಾಯಥಾ ಕರ್ಮ ಕುರುತೇ ತಥಾತಥಾಽಧಿಕೋ ಭವತಿ'**

**ಇತಿ ಕೌಂಠರವ್ಯಶ್ರುತೇಃ, ಯುಧಿಷ್ಠಿರಾದೀನಾಂ ರಾಜಸೂಯಾದಿನಾ ಫಲಾಧಿಕ್ಯದರ್ಶನಾಚ್ಚೇತಿ ಬಾದರಾಯಣಮತಮ್ ॥**

ಕೌಂಠರವ್ಯಶ್ರುತಿಯಲ್ಲಿ ಜ್ಞಾನದಿಂದಲೇ ಸಿಗುವ ಸಕಲವಿಧಪುರುಷಾರ್ಥಗಳಲ್ಲಿ ಕರ್ಮದಿಂದ ಅತಿಶಯವಿಶೇಷವು ಉಂಟಾಗುತ್ತದೆ, ಎನ್ನಲಾಗಿದೆ. ಜ್ಞಾನಿಗಳಾದ ಯುಧಿ

ಷ್ಠಿರಾದಿಗಳಿಗೆ ರಾಜಸೂಯಯಾಗದಿಂದಾಗಿ ಜ್ಞಾನಲಭ್ಯವಾದ ಫಲದಲ್ಲಿ ಆಧಿಕ್ಯವು ಕಂಡಿದೆ. ಆದ್ದರಿಂದ ಜ್ಞಾನಶೇಷವಾದುದು ಕರ್ಮ, ಎಂದು ಬಾದರಾಯಣರ ಸಿದ್ಧಾಂತ.

**ವಿವರಣೆ**—ಇದುವರೆಗೆ ಜ್ಞಾನವು ಕರ್ಮಶೇಷವಾಗಿ ಇತರ ಪುರುಷಾರ್ಥಗಳಿಗೆ ಸಾಧನವಾಗುತ್ತದೆ ಎಂದು ಹೇಳಲಾಗಿದೆ. ಇದು ವ್ಯಾಸಶಿಷ್ಯರಾದ ಜೈಮಿನಿಗಳ ಸಿದ್ಧಾಂತ. ಬಾದರಾಯಣರು (ವ್ಯಾಸರು) ಹೇಳುತ್ತಾರೆ—ಅಪರೋಕ್ಷಜ್ಞಾನವೇ ಎಲ್ಲಾ ಪುರುಷಾರ್ಥಗಳಿಗೂ ಕಾರಣ. ಕರ್ಮವು ಜ್ಞಾನ ಲಭ್ಯವಾದ ಆ ಪುರುಷಾರ್ಥಗಳಲ್ಲಿ ಅತಿಶಯವನ್ನು ಉಂಟುಮಾಡುತ್ತದೆ. ಹೀಗೆ ಜ್ಞಾನವು ಪ್ರಧಾನ, ಕರ್ಮವು ಜ್ಞಾನಶೇಷ. ಸ್ವರ್ಗಾರೋಹಣಪರ್ವದಲ್ಲಿ(ಮ.ಭಾ.18.3.26) ಜ್ಞಾನಿಗಳಾದ ಯುಧಿಷ್ಠಿರಾದಿಗಳು ರಾಜಸೂಯಯಾಗದಿಂದಾಗಿ ಫಲವಿಶೇಷವನ್ನು ಪಡೆದರು ಎಂದು ಹೇಳಲಾಗಿದೆ—

ರಾಜಸೂಯಜಿತಾನ್ ಲೋಕಾನ್ ಅಶ್ವಮೇಧಾಭಿವರ್ಧಿತಾನ್ ।
ಪ್ರಾಪ್ನುಹಿ ತ್ವಂ ಮಹಾರಾಜ ತಪಸಶ್ಚ ಫಲಂ ಮಹತ್ ॥

## ॥ ಓಂ ತುಲ್ಯಂ ತು ದರ್ಶನಮ್ ಓಂ ॥ ೯ ॥

**ರಾಜಸೂಯಾದಿಕೃತಾವಕೃತೌ ಚ ಸಮಮೇವ ತೇಷಾಂ (ವಿ)ಜ್ಞಾನಮ್ ।**
**'ವಿಜ್ಞಾತಮೇತತ್ ಸರ್ವೇಷಾಂ ಮುನೀನಾಂ ತತ್ತ್ವ(ಬ್ರಹ್ಮ)ದರ್ಶನಾತ್ ।**
**ಸ್ಯಾದೇವ ಮೋಕ್ಷೋ ನಾನ್ಯಸ್ಮಾದಿತಿ ತತ್ರಾಪಿ ಚಿತ್ರತಾ ॥**

**ಸ್ವರ್ಗಾದಯಃ ಕರ್ಮಣೈವ ನಾನ್ಯೇನೇತ್ಯಪರೇ ವಿದುಃ ।**
**ಜ್ಞಾನೇನಾऽಧಿಕ್ಯಮಿತ್ಯಾಹುರ್ಜೈಮಿನ್ಯಾದ್ಯಾಸ್ತು ಕೇಚನ ॥**

**ಅದೃಷ್ಟಮೇವ ಜ್ಞಾನೇನ ದೃಷ್ಟಂ ನೈವೋಪಲಭ್ಯತೇ ।**
**ಇತಿ ಕೇಚಿದ್ ವಿದಃ ಪ್ರಾಹುರ್ವ್ಯಾಸಶಿಷ್ಯಾ ಇಮೇऽಖಿಲಾಃ ॥**

**ಯಸ್ಮಾದ್ ವ್ಯಾಸಮತಂ ಸರ್ವಂ ಸತ್ಯಮೇವ ತತೋऽಖಿಲಮ್ ।**
**ಯಥಾऽऽಕಾಶಸ್ತ್ವನಂತೋऽಪಿ ವ್ಯಾಮೋ ಹಸ್ತಾವಧಿಸ್ತಥಾ ॥**

**ಪ್ರಾದೇಶೋऽಪಿ ಹಿ ಸತ್ಯೇನ ತಥೈತೇಷಾಂ ಮತಾನಿ ತು ।**
**ಸ್ವಯಂ ತು ಭಗವಾನ್ ವ್ಯಾಸೋ ವ್ಯಾಪ್ತಜ್ಞಾನಮಹಾಂಶುಮಾನ್ ॥**

ಅನಂತಾಕಾಶವತ್ ಪಶ್ಯನ್ ನಿಖಿಲಂ ಪುರುಷೋತ್ತಮಃ ।
ಜ್ಞಾನೇನೈವಾಽಪ್ಯತೇ ಸರ್ವಂ ಕರ್ಮಣಾ ತ್ವಧಿಕಂ ಭವೇತ್ ।
ಇತಿ ಪ್ರಾಹ ಮಹಾಯೋಗೀ ಪುಮರ್ಥಾನಾಂ ವಿನಿರ್ಣಯಮ್ ॥'

ಇತಿ ಭವಿಷ್ಯತ್‌ಪರ್ವಣಿ ॥

'ಜ್ಞಾನಿನಾಮಪಿ ದೇವಾನಾಂ ವಿಶೇಷಃ ಕರ್ಮಭಿರ್ಭವೇತ್ ।
ಚೀರ್ಣೇಽಕೃತೇ ವಾ ಜ್ಞಾನಸ್ಯ ನ ವಿಶೇಷೋಽಸ್ತಿ ಕರ್ಮಣಿ ॥'

ಇತಿ ಚ ಬ್ರಹ್ಮತರ್ಕೇ ॥

ಪಾಂಡವರು ರಾಜಸೂಯಾದಿಕರ್ಮಗಳನ್ನು ಮಾಡಿದ್ದರೂ ಅವರ ಜ್ಞಾನವು ಅದರಿಂದೇನೂ ಹೆಚ್ಚಾಗಲಿಲ್ಲ, ಅದು ಮೊದಲಿನಂತೆಯೇ ಇತ್ತು. (ಆದ್ದರಿಂದ ಜ್ಞಾನಿಗಳು ಮಾಡಿದ ಕರ್ಮಪ್ರಯುಕ್ತವಾಗಿ ಜ್ಞಾನದಲ್ಲಿ ಯಾವ ಅತಿಶಯವೂ ಉಂಟಾಗುವುದಿಲ್ಲ, ಫಲದಲ್ಲಿ ಮಾತ್ರ ಆಧಿಕ್ಯ ಬರುತ್ತದೆ) ಮಹಾಭಾರತದ ಭವಿಷ್ಯತ್‌ಪರ್ವದಲ್ಲಿ ಹೀಗಿದೆ—

ಎಲ್ಲಾ ಜ್ಞಾನಿಗಳಿಗೂ ಬ್ರಹ್ಮದರ್ಶನದಿಂದ ಮೋಕ್ಷವು ಆಗಿಯೇ ತೀರುತ್ತದೆ. ಜ್ಞಾನದ ಹೊರತು ಬೇರಾವ ಸಾಧನಗಳಿಂದಲೂ ಮೋಕ್ಷವು ಆಗುವುದಿಲ್ಲ. ಇದು ಜೈಮಿನ್ಯಾದಿ ವ್ಯಾಸಶಿಷ್ಯರಿಗೆಲ್ಲರಿಗೂ ಸಮ್ಮತವಾಗಿದೆ. ಮೋಕ್ಷಾನ್ಯಫಲದ ಬಗ್ಗೆ ಅವರ ಅಭಿಪ್ರಾಯದಲ್ಲಿ ಭೇದವಿದೆ—ಸ್ವರ್ಗಾದಿಪುರುಷಾರ್ಥಗಳು ಕರ್ಮದಿಂದಲೇ ದೊರೆಯುತ್ತವೆ, ಜ್ಞಾನದಿಂದ ದೊರಕುವುದಿಲ್ಲ ಎಂದು ಅಪರೇ=ಕೆಲವು ಋಷಿಗಳು ತಿಳಿಯುತ್ತಾರೆ. (ಇದು ಮನುಷ್ಯರಲ್ಲಿ ಅಧಮಾಧಿಕಾರಿಗಳ ಬಗ್ಗೆ ಸಿದ್ಧಾಂತ.) ಜೈಮಿನ್ಯಾದಿಗಳು ಕೆಲವರು, ಕರ್ಮಲಭ್ಯವಾದ ಪುರುಷಾರ್ಥಗಳಲ್ಲಿ ಜ್ಞಾನದಿಂದ ಆಧಿಕ್ಯ ಬರುವುದು, ಎಂದು ಹೇಳುತ್ತಾರೆ. (ಈ ಸಿದ್ಧಾಂತವು ಮನುಷ್ಯೋತ್ತಮರಿಗೆ ಅನ್ವಯಿಸುತ್ತದೆ, ಎಂದು ''ಜೈಮಿನ್ಯುಕ್ತಂ ಮಾನುಷಾಣಾಂ'' ಅನುವ್ಯಾಖ್ಯಾನದಲ್ಲಿ ಹೇಳಲಾಗಿದೆ.)

ಇನ್ನು ಕೆಲವರು, ಅದೃಷ್ಟವಾದ ಸ್ವರ್ಗಾದಿಗಳು ಜ್ಞಾನಫಲ, ದೃಷ್ಟವಾದ ಪುತ್ರ-ವಿತ್ತಾದಿಗಳು ಜ್ಞಾನದಿಂದ ಸಿಗುವುದಿಲ್ಲ, ಎನ್ನುತ್ತಾರೆ. (ಕರ್ಮಶೇಷವಾದ ಜ್ಞಾನದಿಂದ ಸ್ವರ್ಗಾದಿಫಲ.) ಹೀಗೆ ಹೇಳುವವರೆಲ್ಲರೂ ವ್ಯಾಸರ ಶಿಷ್ಯರೇ ಆಗಿರುತ್ತಾರೆ. ಆದ್ದರಿಂದ ಅವರು ಹೇಳಿದ್ದೆಲ್ಲವೂ ವ್ಯಾಸಸಿದ್ಧಾಂತವೇ ಆಗಿದೆ, ಆದ್ದರಿಂದಲೇ ಸತ್ಯವೂ ಆಗಿದೆ. (ಅಧಿಕಾರಿಭೇದೇನ ಫಲಭೇದ.) ಆಕಾಶವು ಅನಂತವಾದರೂ ಅದು

ಮಾರುದ್ದವೂ ಹೌದು, ಮೊಳದಷ್ಟೂ ಹೌದು, ಗೇಣುದ್ದವೂ ಹೌದು. ಇವೆಲ್ಲವೂ ಸತ್ಯವಾದ ಆಕಾಶಭಾಗಗಳೇ. ಅದರಂತೆ ಅನಂತವಾದ ವ್ಯಾಸಚಿತ್ತದ ಒಂದೊಂದು ಅಭಿಪ್ರಾಯಗಳನ್ನು ಒಬ್ಬೊಬ್ಬರು ಹೇಳುತ್ತಾರೆ. ಎಲ್ಲವೂ ಅಧಿಕಾರಿಭೇದೇನ ಸತ್ಯವೇ ಆಗಿದೆ. ಸರ್ವಜ್ಞರಾದ ಭಗವಾನ್ ವೇದವ್ಯಾಸರು ಅನಂತಾಕಾಶದಂತೆ ವ್ಯಾಪ್ತವಾದ ಜ್ಞಾನದಿಂದ ಎಲ್ಲವನ್ನೂ ತಿಳಿದವರಾಗಿದ್ದು ಜ್ಞಾನದಿಂದಲೇ ಎಲ್ಲ ಪುರುಷಾರ್ಥಗಳೂ ಸಿಗುತ್ತವೆ, ಕರ್ಮದಿಂದ ಅದು ಅಧಿಕವಾಗುತ್ತದೆ, ಎಂದು (ದೇವತೆಗಳ ಬಗ್ಗೆ) ಪುರುಷಾರ್ಥಗಳ ನಿರ್ಣಯವನ್ನು ಹೇಳಿರುತ್ತಾರೆ. (ಆದ್ದರಿಂದ ವ್ಯಾಸಮತಕ್ಕೂ ಜೈಮಿನಿಮತಕ್ಕೂ ವಿರೋಧವನ್ನು ತಿಳಿಯಬಾರದು. ಅಧಿಕಾರಿಭೇದೇನ ಎಲ್ಲವೂ ಅವಿರುದ್ಧ.)

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ಪುರುಷಾರ್ಥೋಽತಃ ಶಬ್ದಾದಿತಿ ಬಾದರಾಯಣಃ ಓಂ ॥** (ಅತ್ರ ಜ್ಞಾನಸ್ಯ ಸರ್ವಪುರುಷಾರ್ಥಹೇತುತ್ವಮಹಿಮಾ ಉಚ್ಯತೇ । ಯದರ್ಥಂ ಪ್ರಾಗುಪಾಸನಾ ಉಕ್ತಾ ತತ್‌ಜ್ಞಾನಮ್ ಅತ ಇತಿ ಪರಾಮೃಶತಿ । ಪುರುಷೈಃ ಅರ್ಥ್ಯತೇ ಇತಿ ಪುರುಷಾರ್ಥಃ, ಇತಿ ಸರ್ವೋಽಪಿ ಪುಮರ್ಥಃ ಉಚ್ಯತೇ ।

ಅತಃ=ಜ್ಞಾನಾತ್ ಪುರುಷಾರ್ಥೋ ಭವತಿ । ಕುತಃ ? ಶಬ್ದಾತ್='ಯಂಯಂ ಲೋಕಮ್' ಇತ್ಯಾದಿಶಬ್ದಾತ್, ಇತಿ ಬಾದರಾಯಣೋ ಮನ್ಯತೇ । ವಿಮತಿ ಸೂಚನಾಯ ಏತತ್‌ಪದಮ್ ।)

ಅತಃ=ಯಾವ ಅಪರೋಕ್ಷಜ್ಞಾನಪ್ರಾಪ್ತಿಗಾಗಿ ಹಿಂದಿನ ಪಾದದಲ್ಲಿ ಉಪಾಸನಾ ವನ್ನು ಹೇಳಲಾಗಿದೆಯೋ ಅಂತಹ ಜ್ಞಾನದಿಂದ ಪುರುಷಾರ್ಥಃ=ಪುರುಷರು ಬಯಸಿದ್ದೆಲ್ಲವೂ ದೊರಕುತ್ತದೆ. ಶಬ್ದಾತ್='ಯಂ ಯಂ ವಾಪಿ' ಎಂಬ ಶ್ರುತಿ ಇರುವುದರಿಂದ ಎಂದು ವೇದವ್ಯಾಸರು ಹೇಳುತ್ತಾರೆ.

**॥ ಓಂ ಶೇಷತ್ವಾತ್ ಪುರುಷಾರ್ಥವಾದೋ ಯಥಾಽನ್ಯೇಷ್ವಿತಿ ಜೈಮಿನಿಃ ಓಂ ॥** (ಅತ ಇತ್ಯೇತತ್ ವಿಪರಿಣಮ್ಯ ವರ್ತತೇ । ಅಸ್ಯ=ಜ್ಞಾನಸ್ಯ ಪುರುಷಾರ್ಥವಾದಃ='ಯಂ ಯಂ' ಇತಿ ಶ್ರುತೌ ಸ್ವರ್ಗಾದಿ–ಮುಕ್ತ್ಯಂತ–ಪುಮರ್ಥಹೇತುತ್ವವಾದಃ ಶೇಷತ್ವಾತ್= ತದ್ಧೇತುಕರ್ಮ–ಶೇಷತ್ವಾತ್, ನ ಸಾಕ್ಷಾತ್ । ಏವಂ ತರ್ಹಿ ಜ್ಞಾನಸ್ಯ ಪ್ರಾಧಾನ್ಯೇನ ಶ್ರುತೌ ತದ್ವಾದಃ ಕಥಮ್ ? ಯಥಾನ್ಯೇಷು='ಸ್ವರ್ಗಂ ಧನಾದ್ದೇಹತೋ ವೈ ಗೃಹಾಚ್ಚ' ಇತಿ ಶ್ರುತೌ ವಿತ್ತಾದಿಷು ಸ್ವರ್ಗಹೇತು– ಕರ್ಮಶೇಷೇಷು ಯಥಾ ತದ್ವಾದಃ ತಥಾ, ಇತಿ

ಜೈಮಿನಿರ್ಮನ್ಯತೇ ಇತ್ಯರ್ಥಃ। ಶೇಷತ್ವಂ ಚ ಜ್ಞಾನಸ್ಯ ಕರ್ಮಾರ್ಜಿತೇ ಅತಿಶಯಾಧಾಯಕತ್ವಂ ಬೋಧ್ಯಮ್ ।)

ಅತಃ ಎಂಬ ಹಿಂದಿನ ಸೂತ್ರದ ಇದಂ ಶಬ್ದವನ್ನು 'ಅಸ್ಯ' ಎಂದು ಷಷ್ಠ್ಯಂತವನ್ನಾಗಿ ಪರಿಗಣಿಸಿದಾಗ–ಅಸ್ಯ=ಜ್ಞಾನಕ್ಕೆ ಪುರುಷಾರ್ಥವಾದಃ='ಯಂ ಯಂ' ಎಂಬ ಶ್ರುತಿಯಲ್ಲಿ ಹೇಳಿರುವಂತೆ ಸಕಲಪುರುಷಾರ್ಥಸಾಧನತ್ವವು ಶೇಷತ್ವಾತ್= ಸ್ವರ್ಗಾದಿಕಾರಣವಾದ ಕರ್ಮಕ್ಕೆ ಶೇಷವಾಗಿ ಹೊರತು ಸಾಕ್ಷಾತ್ ಜ್ಞಾನವೇ ಪುರುಷಾರ್ಥ ಹೇತುವಲ್ಲ. ಹಾಗಿದ್ದರೆ ಶ್ರುತಿಯಲ್ಲಿ ಜ್ಞಾನವೇ ಪ್ರಧಾನವಾಗಿ ಪುರುಷಾರ್ಥಸಾಧನ, ಎಂದಿರುವುದು ಹೇಗೆ? ಯಥಾ ಅನ್ಯೇಷು=ಹೇಗೆ ಕರ್ಮಾನ್ಯವಾದ ಧನಾದಿಗಳಿಗೆ ಸ್ವರ್ಗಹೇತುತ್ವವನ್ನು ಹೇಳುವ ಶ್ರುತಿಗಳಲ್ಲಿ ಕರ್ಮಶೇಷತ್ವೇನ ಹೇಳಲಾಗುವುದೋ ಹಾಗೆ. ಇತಿ ಜೈಮಿನಿಃ=ಇದು ಜೈಮಿನಿ ಆಚಾರ್ಯರ ಮತ.

**॥ ಓಂ ಆಚಾರದರ್ಶನಾತ್ ಓಂ ॥**(ಚೋ ಜ್ಞಾನಿನಾಂ ಚ ದೇವಾನಾಮಿತ್ಯನ್ವೇತಿ । ಆಚಾರಸ್ಯ=ಕರ್ಮಾನುಷ್ಠಾನಸ್ಯ 'ಯಜ್ಞೇನ ಯಜ್ಞಮಯಜಂತ ದೇವಾಃ' ಇತ್ಯಾದೌ ದರ್ಶನಾತ್ । ಅತ ಏಷಾ ಕಲ್ಪನಾ । ಅನ್ಯಥಾ ಆಚಾರವೈಯರ್ಥ್ಯಾತ್, ಇತ್ಯರ್ಥ । ಆಚಾರಸ್ಯ=ಜ್ಞಾನಿಗಳಾದ ದೇವತೆಗಳೂ ಕರ್ಮಾನುಷ್ಠಾನಮಾಡಿರುವುದು ದರ್ಶನಾತ್= 'ಯಜ್ಞೇನ ಯಜ್ಞಂ' ಎಂಬ ಶ್ರುತಿಯಿಂದ ತಿಳಿಯುತ್ತದೆ. ಆದ್ದರಿಂದ ಜ್ಞಾನವು ಕರ್ಮಕ್ಕೆ ಅಂಗವಾಗಿದೆ.

**॥ ಓಂ ತಚ್ಛ್ರುತೇಃ ಓಂ ॥** (ತಸ್ಯ=ಕರ್ಮ ಪ್ರತಿ ಜ್ಞಾನೇ ಶೇಷತ್ವಸ್ಯ 'ಯದೇವ ವಿದ್ಯಯಾ ಕರೋತಿ ತದೇವ ವೀರ್ಯವತ್ತರಂ ಭವತಿ' ಇತಿ ಶ್ರವಣಾತ್ ತಚ್ಛೇಷತ್ವಮ್, ಇತ್ಯರ್ಥಃ ।)

ತಚ್ಛ್ರುತೇಃ, ತಸ್ಯ=ಜ್ಞಾನವು ಕರ್ಮಶೇಷ ಎಂಬುದು, ಶ್ರುತೇಃ='ಯದೇವ ವಿದ್ಯಯಾ ಕರೋತಿ' ಎಂಬ ಶ್ರುತಿಯಿಂದ ತಿಳಿಯುವುದರಿಂದ ಜ್ಞಾನವು ಕರ್ಮ ಶೇಷವಾಗಿದೆ.

**॥ ಓಂ ಸಮನ್ವಾರಂಭಣಾತ್ ಓಂ ॥** ('ಕರ್ಮೈವ ದೇಹಂ ದೈವಿಕಂ ಮಾನುಷಂ ವಾನ್ವಾರಭೇತ್' ಇತಿ ಶ್ರುತ್ಯಾ ಕರ್ಮಣೈವ ಐಹಿಕಾಮುಷ್ಮಿಕದೇಹಾದೇಃ ಸಂ=ಪ್ರಾಧಾನ್ಯೇನ ಅನ್ವಾರಂಭಣಾತ್= ಉತ್ಪಾದನೋಕ್ತೇಃ ತಸ್ಯೈವ ಪ್ರಾಧಾನ್ಯಂ, ನ ಜ್ಞಾನಶೇಷತ್ವಂ ತತ್ಸಾಮ್ಯಂ ವಾ, ಇತ್ಯರ್ಥಃ ।)

'ಕರ್ಮೈವ ದೇಹಂ' ಇತ್ಯಾದಿ ಶ್ರುತಿಯಿಂದ ಕರ್ಮದಿಂದಲೇ ಐಹಿಕ ಮತ್ತು

ಆಮುಷ್ಮಿಕ ದೇಹಗಳ ಸಂ=ಪ್ರಧಾನವಾಗಿ ಅನ್ವಾರಂಭಣಾತ್=ಉತ್ಪತ್ತಿಯನ್ನು ಹೇಳಿರುವುದರಿಂದ ಕರ್ಮಕ್ಕೇ ಪ್ರಾಧಾನ್ಯ. ಹೊರತು, ಕರ್ಮ ಜ್ಞಾನಶೇಷವೂ ಅಲ್ಲ, ಜ್ಞಾನಸಮಕಕ್ಷವೂ ಅಲ್ಲ.

**॥ ಓಂ ತದ್ವತೋ ವಿಧಾನಾತ್ ಓಂ ॥** ('ಜ್ಞಾನೀ ಚ ಕರ್ಮಾಣಿ ಸದೋದಿತಾನಿ ಕುರ್ಯಾದಕಾಮಃ' ಇತಿ ಶ್ರುತೌ ತದ್ವತಃ=ಪ್ರಸ್ತುತಜ್ಞಾನವತಃ ಕರ್ಮವಿಧಾನಾತ್ ನ ಲೀಲಾತ್ವಂ ಇತ್ಯರ್ಥಃ । ನ ಹಿ ವಿಹಿತಸ್ಯಲೀಲಾತ್ವಮ್, ಇತ್ಯರ್ಥಃ ।)

ಜ್ಞಾನಿಗಳು ಮಾಡುವ ಕರ್ಮಗಳು ಲೀಲಾಮಾತ್ರ, ಅದಕ್ಕೆ ಫಲವಿಲ್ಲ, ಎನ್ನುವ ಆಕ್ಷೇಪಕ್ಕೆ ಈ ಸೂತ್ರದ ಉತ್ತರ–ತದ್ವತಃ=ಜ್ಞಾನವುಳ್ಳವನಿಗೂ ವಿಧಾನಾತ್='ಜ್ಞಾನೀ ಚ ಕರ್ಮಾಣಿ' ಎಂಬ ಶ್ರುತಿಯಲ್ಲಿ ವಿಧಾನಮಾಡಿರುವುದರಿಂದ ಜ್ಞಾನಿಯ ಕರ್ಮಾಚರಣೆ ಲೀಲಾಮಾತ್ರವಲ್ಲ, ಅದಕ್ಕೂ ಫಲವಿದೆ.

**॥ ಓಂ ನಿಯಮಾಚ್ಚ ಓಂ ॥** ('ಕುರ್ವನ್ನೇವೇಹ ಕರ್ಮಾಣಿ' ಇತಿ ಶ್ರುತ್ಯಾ ಜ್ಞಾನಿನೋಽಪಿ ಕರ್ಮಣಃ ನಿಯಮಿತತ್ವಾಚ್ಚೇತ್ಯರ್ಥಃ, ಅಕರಣೇ ಪ್ರತ್ಯವಾಯಾಚ್ಚ ನ ಲೀಲಾತ್ವಮಿತಿ ಭಾವಃ ॥)

'ಕುರ್ವನ್ನೇವೇಹ' ಎಂಬ ಈಶಾವಾಸ್ಯಶ್ರುತಿಯಲ್ಲಿ ಜ್ಞಾನಿಗೂ ಕರ್ಮದ ನಿಯಮಾಚ್ಚ=ನಿರ್ಬಂಧವನ್ನು ಅಂದರೆ, ಮಾಡದಿದ್ದರೆ ಪ್ರತ್ಯವಾಯವನ್ನು ಹೇಳಿರುವುದರಿಂದ ಜ್ಞಾನಿಯ ಕರ್ಮವು ಲೀಲಾಮಾತ್ರವಲ್ಲ.

**॥ ಓಂ ಅಧಿಕೋಪದೇಶಾತ್ತು ಬಾದರಾಯಣಸ್ಯೈವಂ ತದ್ದರ್ಶನಾತ್ ಓಂ ॥** (ತುಃ ಪ್ರಾಚೀನಾದ್ ವಿಶೇಷಾರ್ಥಃ। ಏವಮಿತಿ 'ಪುರುಷಾರ್ಥೋಽತಃ' ಇತ್ಯುಕ್ತ ಪರಾಮರ್ಶಃ । ಬಾದರಾಯಣಸ್ಯ ಏವಂ=ಜ್ಞಾನಾದೇವ ಸರ್ವಪುರುಷಾರ್ಥೋ ಭವತಿ ಇತ್ಯೇವಂ ಮತಂ, ನತು ಜ್ಞಾನಂ ಕರ್ಮಶೇಷತಯಾ ತಥೇತಿ । ತರ್ಹಿ ಜ್ಞಾನ್ಯಾಚಾರವೈಯರ್ಥ್ಯಂ, ಪ್ರಾಗುಕ್ತವಿಧ್ಯಯೋಗಶ್ಚ ಇತಿ ನ ಶಂಕ್ಯಮ್ । ಕುತಃ? ಅಧಿಕೋಪದೇಶಾತ್=ಜ್ಞಾನಾರ್ಜಿತೇ ಫಲೇ ಕರ್ಮಾಧೀನಾತಿಶಯಸ್ಯ 'ಯಥಾ ಯಥಾ ಕರ್ಮ ಕುರುತೇ ತಥಾತಥಾಧಿಕೋ ಭವತಿ' ಇತ್ಯುಪದೇಶಾತ್ । ಕರ್ಮಣೋ ಜ್ಞಾನಶೇಷತ್ವೋಕ್ತೇಃ ಇತ್ಯರ್ಥಃ । ತದ್ದರ್ಶನಾತ್ । ಚಸ್ಯ ಅನುವೃತ್ತಿಃ । ತಸ್ಯ=ಜ್ಞಾನಫಲೇ ಕರ್ಮಾರ್ಜಿತಾತಿಶಯಸ್ಯ ರಾಜಸೂಯಾದಿನಾ ಉಪಲಂಭಾಚ್ಚ, ಇತ್ಯರ್ಥಃ ।

ಬಾದರಾಯಣಸ್ಯ=ವೇದವ್ಯಾಸರಿಗೆ ಏವಂ=ಮೊದಲನೆಯ ಸೂತ್ರದಲ್ಲಿ ಹೇಳಿರುವಂತೆ ಜ್ಞಾನದಿಂದಲೇ ಸರ್ವಪುರುಷಾರ್ಥಗಳೂ ಸಿಗುತ್ತವೆ, ಎನ್ನುವುದು ಅಭಿಮತವಾಗಿದೆ. ಹೊರತು, ಜ್ಞಾನವು ಕರ್ಮಶೇಷತಯಾ ಪುರುಷಾರ್ಥಹೇತು ಎನ್ನುವುದು ಅವರಿಗೆ ಅಭಿಮತವಲ್ಲ. ಹಾಗಾದರೆ ಜ್ಞಾನಿಗಳ ಕರ್ಮಾಚರಣೆಯು ವ್ಯರ್ಥವೆಂದಾದೀತು, ಹಿಂದೆ ಹೇಳಿದ ಕರ್ಮವಿಧಿಯೂ ಅನುಪಪನ್ನವೆಂದಾದೀತು. ಇಲ್ಲ, ಅಧಿಕೋಪದೇಶಾತ್=ಜ್ಞಾನಲಭ್ಯವಾದ ಫಲದಲ್ಲಿ ಕರ್ಮದಿಂದ ಆಧಿಕ್ಯವು 'ಯಥಾಯಥಾ' ಇತ್ಯಾದಿ ಶ್ರುತಿಯಲ್ಲಿ ಹೇಳಲ್ಪಟ್ಟಿದೆ. ಅರ್ಥಾತ್ ಆ ಶ್ರುತಿಯಲ್ಲಿ ಕರ್ಮವು ಜ್ಞಾನದ ಅಂಗ ಎಂದೇ ಹೇಳಲಾಗಿದೆ. ತದ್ದರ್ಶನಾತ್, ತಸ್ಯ=ಜ್ಞಾನ ಸಾಧ್ಯಫಲದಲ್ಲಿ ಕರ್ಮಾಚರಣೆಯಿಂದಾಗುವ ಅತಿಶಯವು ದರ್ಶನಾತ್=ಪಾಂಡವರಿಗೆ ಕಂಡಿದೆಯಾದ್ದರಿಂದ, ಜ್ಞಾನಲಭ್ಯವಾದ ಫಲವು ಕರ್ಮಾಚರಣೆಯಿಂದ ಸಮೃದ್ಧವಾಗುತ್ತದೆ.

**॥ ಓಂ ತುಲ್ಯಂ ತು ದರ್ಶನಮ್ ಓಂ ॥** (ತುರೇವ। ಜ್ಞಾನಿನಾಂ ದರ್ಶನಂ ತುಲ್ಯಂ ಕರ್ಮಣಃ ಕೃತ್ವಾಕೃತೌ ಚ ಸಮಮೇವ=ಪುಮರ್ಥ-ಸಮರ್ಥಮೇವೇತ್ಯರ್ಥಃ। ಏತಚ್ಚ 'ಕಾಮಕಾರೇಣ ಚೈಕೇ' ಇತ್ಯಗ್ರೇ ವ್ಯಕ್ತಮ್, ಅತೋ ನೈವಮಿತಿ ಭಾವಃ। ಮೋಕ್ಷೇತರಸ್ವರ್ಗಾದಿಫಲೇ ಜ್ಞಾನಶೇಷತ್ವಕರ್ಮಶೇಷತ್ವಯೋಃ ಜೈಮಿನಿವ್ಯಾಸ ಮತಯೋಃ ಮನುಷ್ಯದೇವರೂಪಾಧಿಕಾರಿಭೇದೇನ ವಾ, ದೇವೇಷ್ವಪಿ ಪ್ರಬಲಕರ್ಮಪ್ರತಿಬದ್ಧಾ ಪ್ರತಿಬದ್ಧಜ್ಞಾನಿಭೇದೇನ ವಾ ಅವಿರೋಧೋ ಬೋಧ್ಯಃ ॥)

ದರ್ಶನಂ=ಅಪರೋಕ್ಷಜ್ಞಾನವು ತುಲ್ಯಂತು=ಕರ್ಮ ಮಾಡಿದರೂ ಮಾಡ ದಿದ್ದರೂ ಸಮಾನವಾಗಿರುತ್ತದೆ. ಅಂದರೆ ಪುರುಷಾರ್ಥವನ್ನು ಕೊಡಲು ಸಮರ್ಥವೇ ಆಗಿರುತ್ತದೆ. ಆದ್ದರಿಂದ ಕರ್ಮಾಚರಣೆಯಿಂದ ಜ್ಞಾನದಲ್ಲಿ ಅತಿಶಯವೇನೂ ಉಂಟಾಗುವುದಿಲ್ಲ.

ಕರ್ಮವು ಜ್ಞಾನಶೇಷ, ಜ್ಞಾನವೇ ಸರ್ವಪುರುಷಾರ್ಥಹೇತು, ಎಂದು ಬಾದರಾಯಣರ ಸಿದ್ಧಾಂತ. ಕರ್ಮವೇ ಮೋಕ್ಷೇತರಪುರುಷಾರ್ಥಕ್ಕೆ ಕಾರಣ, ಜ್ಞಾನವು ಕರ್ಮಶೇಷ ಎಂದು ಜೈಮಿನಿಗಳ ಮತ. ಬಾದರಾಯಣರ ಸಿದ್ಧಾಂತವು ದೇವತೆಗಳಿಗೆ ಅನ್ವಯಿಸುತ್ತದೆ. ಜೈಮಿನಿಗಳ ಮತ ಮನುಷ್ಯರಿಗೆ ಸಂಬಂಧಿಸಿದೆ. ಅಥವಾ ಎರಡೂ ಮತಗಳೂ ದೇವತೆಗಳಿಗೆ ಸಂಬಂಧಪಟ್ಟಿವೆ. ಪ್ರಬಲಪ್ರಾರಬ್ಧಕರ್ಮದಿಂದ ಪ್ರತಿಬದ್ಧರಾದ ದೇವತೆಗಳಿಗೆ ಸಂಬಂಧಿಸಿದ್ದು ಜೈಮಿನಿಗಳ ಮತ. ಅಂತಹ ಪ್ರತಿಬಂಧಕಗಳಿಲ್ಲದ

ದೇವತೆಗಳಿಗೆ ಜ್ಞಾನವೇ ಸಕಲ ಪುರುಷಾರ್ಥಗಳಿಗೂ ಕಾರಣ, ಎಂದು ಬಾದರಾಯಣರ ಮತ. ಹೀಗೆ ಜೈಮಿನಿ ಮತ್ತು ಬಾದರಾಯಣಮತಗಳಿಗೆ ಪರಸ್ಪರವಾಗಿ ವಿರೋಧವಿಲ್ಲ.

ಶಾಂಕರ-ರಾಮಾನುಜ ಭಾಷ್ಯಗಳಲ್ಲಿ 19ನೇ ಸೂತ್ರದವರೆಗೂ ಒಂದೇ ಅಧಿಕರಣ.

**ಇಲ್ಲಿಗೆ ಪುರುಷಾರ್ಥಾಧಿಕರಣವು ಮುಗಿಯಿತು .**

## ೨. ಅಸಾರ್ವತ್ರಿಕಾಧಿಕರಣಮ್

**ಸರ್ವೇಷಾಂ ಪುರುಷಾರ್ಥಾಪೇಕ್ಷಿತ್ವಾಜ್ಜ್ಞಾನಾಧಿಕಾರಿತಾ । ಇತ್ಯತ ಆಹ-**

**॥ ಓಂ ಅಸಾರ್ವತ್ರಿಕೀ ಓಂ ॥ ೧೦ ॥**

**ನ ಸರ್ವೇಷಾಮಧಿಕಾರಃ ॥**

ಎಲ್ಲರೂ ಪುರುಷಾರ್ಥವನ್ನು ಬಯಸುತ್ತಾರೆ. ಆದ್ದರಿಂದ ಎಲ್ಲರಿಗೂ ಜ್ಞಾನದಲ್ಲಿ ಅಧಿಕಾರವಿದೆ, ಎನ್ನುವ ಆಕ್ಷೇಪಕ್ಕೆ ಉತ್ತರ-ಅಸಾರ್ವತ್ರಿಕೀ-ಎಂಬ ಸೂತ್ರ. ಎಲ್ಲರಿಗೂ ಜ್ಞಾನದಲ್ಲಿ ಅಧಿಕಾರವಿಲ್ಲ.

**ವಿವರಣೆ**—ಹಿಂದಿನ ಅಧಿಕರಣದಲ್ಲಿ ಜ್ಞಾನವು ಸಕಲಪುರುಷಾರ್ಥಸಾಧನ, ಎನ್ನಲಾಗಿದೆ. ಪುರುಷಾರ್ಥಗಳು ಎಲ್ಲರಿಗೂ ಬೇಕು. ಆದ್ದರಿಂದ ಎಲ್ಲರಿಗೂ ಜ್ಞಾನಾಧಿಕಾರ ಇದೆ. ಇದು ಪೂರ್ವಪಕ್ಷ. ಎಲ್ಲರಿಗೂ ಇಲ್ಲ, ಎಂದು ಸಿದ್ಧಾಂತ.

**॥ ಓಂ ವಿಭಾಗಃ ಶತವತ್ ಓಂ ॥ ೧೧ ॥**

**'ನವಕೋಟ್ಯೋ ಹಿ ದೇವಾನಾಂ ತೇಷಾಂ ಮಧ್ಯೇ ಶತಸ್ಯ ತು ।**
**ಸೋಮಾಧಿಕಾರೋ ವೇದೋಕ್ತೋ ಬ್ರಹ್ಮಣೇ ದ್ವೇ ಶತಾಧಿಕೇ ॥**

**ಯಥಾ ತಥೈವಾಸಂಖ್ಯೇಯಾಃ ಪ್ರಜಾಸ್ತಾಸು ಕಿಯಾನ್ ಜನಃ ।**
**ಜ್ಞಾನಾಧಿಕಾರೀ ಸಂಪ್ರೋಕ್ತೋ ವಿಷ್ಣುಪಾದೈಕಸಂಶ್ರಯಃ ॥'**

**ಇತಿ ವಚನಾತ್ ಸುಖಾಪೇಕ್ಷಾಸಾಮ್ಯೇಽಪಿ ವಿಭಾಗ ಇಷ್ಯತೇಽಧಿಕಾರಾರ್ಥಮ್ ॥**

ಸೋಮಾಧಿಕಾರ ನೂರೇ ದೇವತೆಗಳಿಗೆ ಇರುವಂತೆ ಕೆಲವರಿಗೆ ಮಾತ್ರ ಜ್ಞಾನಾಧಿಕಾರ.

'ಒಂಭತ್ತು ಕೋಟಿ ದೇವತೆಗಳಿದ್ದಾರೆ. ಅವರಲ್ಲಿ ನೂರು ಮಂದಿಗೆ ಮಾತ್ರ ಯಜ್ಞದಲ್ಲಿ ಸೋಮಪಾನವನ್ನು ಮಾಡುವ ಅಧಿಕಾರ. ಪರಾಪರಬ್ರಹ್ಮರು ಇಬ್ಬರು ನೂರಕ್ಕಿಂತ ಹೆಚ್ಚಿನವರು. ಅವರಿಗೂ ಸೋಮಾಧಿಕಾರವಿದೆ. ಅದರಂತೆ ಅಸಂಖ್ಯ ಜೀವರಿದ್ದರೂ ಅವರಲ್ಲಿ ವಿಷ್ಣುಪಾದದಲ್ಲಿ ಮಾತ್ರ ಆಸಕ್ತರಾಗಿರುವ ಜ್ಞಾನಾಧಿಕಾರಿಗಳು ಎಷ್ಟುಮಂದಿ ತಾನೇ ಇರಲು ಸಾಧ್ಯ?'

ಹೀಗೆ ಪ್ರಮಾಣವಚನವಿರುವುದರಿಂದ ಸುಖದ ಅಪೇಕ್ಷೆಯು ಎಲ್ಲರಿಗೂ ಇದ್ದರೂ ನಿರ್ದಿಷ್ಟರಾದವರು ಮಾತ್ರ ಜ್ಞಾನಾಧಿಕಾರಿಗಳು, ಎಂಬ ವಿಭಾಗವು ವಿವಕ್ಷಿತವೇ ಆಗಿದೆ.

**ವಿವರಣೆ**— ಸೋಮಪಾನಾರ್ಹ ನೂರು ದೇವತೆಗಳನ್ನು ತತ್ವಪ್ರದೀಪದಲ್ಲಿ ಹೀಗೆ ತೋರಿಸಲಾಗಿದೆ—

ಪ್ರಧಾನವಾಯು – 1
ವಸುಗಳು – 8
ರುದ್ರರು – 11
ಮರುದ್ದೇವತೆಗಳು – 49
ಆದಿತ್ಯರು – 12
ವಿಶ್ವೇದೇವತೆಗಳು –10
ಬೃಹಸ್ಪತಿ – 1
ಪಿತೃಪತಿಗಳು – 03 (ಸೋಮ–ಯಮ–ಅಗ್ನಿ)
ಅಶ್ವಿನೀದೇವತೆಗಳು – 02
ಋಭುಗಳು – 01 (ಇವರು ಸಮಾನ ಹೆಸರಿನ ಸಾವಿರ ಮಂದಿ.)
ದ್ಯಾವಾಪೃಥಿವೀ – 02

ಇವರ ಜೊತೆಯಲ್ಲಿ ಚತುರ್ಮುಖ ಬ್ರಹ್ಮದೇವರು ಮತ್ತು ಪರಬ್ರಹ್ಮನಾದ ವಿಷ್ಣು ಇವರಿಬ್ಬರು.

**ಕಸ್ಯಾಧಿಕಾರಃ ?**

## ॥ ಓಂ ಅಧ್ಯಯನಮಾತ್ರವತಃ ಓಂ ॥ ೧೨ ॥

'ಅವೈಷ್ಣವಸ್ಯ ವೇದೇಽಪಿ ಹ್ಯಧಿಕಾರೋ ನ ವಿದ್ಯತೇ ।
ಗುರುಭಕ್ತಿವಿಹೀನಸ್ಯ ಶಮಾದಿರಹಿತಸ್ಯ ಚ ॥
ನಚ ವರ್ಣಾವರಸ್ಯಾಪಿ ತಸ್ಮಾದಧ್ಯಯನಾನ್ವಿತಃ ।
ಬ್ರಹ್ಮಜ್ಞಾನೇ ತು ವೇದೋಕ್ತೇಽಪ್ಯಧಿಕಾರೀ ಸತಾಂ ಮತಃ ॥'

ಇತಿ ಹಿ ಬ್ರಹ್ಮತರ್ಕೇ ॥

'ಪಠೇದ್ ವೇದಾನಥಾರ್ಥಾನಧೀಯೀತಾಥ ವಿಚಾರ್ಯ ಬ್ರಹ್ಮ ವಿಂದೇತ್'

ಇತಿ ಚ ಕೌಷಾರವಶ್ರುತಿಃ ।

ಯಾರಿಗೆ ಅಧಿಕಾರ? 'ವೇದಾಧ್ಯಯನ ಇದ್ದವರಿಗೆ ಮಾತ್ರ'. ಬ್ರಹ್ಮತರ್ಕದಲ್ಲಿ ಹೀಗಿದೆ—ವೈಷ್ಣವರಲ್ಲದವರಿಗೆ ವೇದದಲ್ಲೂ ಅಧಿಕಾರವಿಲ್ಲ. ಅದರಂತೆ ಗುರುಗಳಲ್ಲಿ ಭಕ್ತಿಇಲ್ಲದವರಿಗೆ ಶಮಾದಿ ಆಧ್ಯಾತ್ಮಿಕಸಂಪತ್ತುರಹಿತರಿಗೆ, ಕೆಳವರ್ಗದವರಿಗೆ ವೇದಾಧಿಕಾರ ಇಲ್ಲ. ಆದ್ದರಿಂದ ವೇದಾಧ್ಯಯನ ಸಂಪನ್ನನಾದವನೇ ವೇದೋಕ್ತವಾದ ಬ್ರಹ್ಮಜ್ಞಾನದಲ್ಲಿ ಅಧಿಕಾರಿ. ಇದು ಸಜ್ಜನರ ನಿರ್ಧಾರ.

ಕೌಶಾರವ ಶ್ರುತಿ ಹೀಗಿದೆ—''ವೇದಾಧ್ಯಯನ ಮಾಡಿ, ಅದರ ಅರ್ಥವನ್ನು ತಿಳಿದು, ಅದನ್ನು ವಿಮರ್ಶೆ ಮಾಡಿದರೆ ಮಾತ್ರ ಬ್ರಹ್ಮನ ದರ್ಶನವನ್ನು ಪಡೆಯಬಹುದು.''

**ವಿವರಣೆ—** ಕೆಲವರಿಗೆ ಮಾತ್ರ ಜ್ಞಾನಾಧಿಕಾರ ಎಂದು ಹಿಂದಿನ ಸೂತ್ರದಲ್ಲಿ ಹೇಳಲಾಗಿದೆ. ಯಾರಿಗೆ ಎಂದು ಇಲ್ಲಿ ತಿಳಿಸಲಾಗಿದೆ. ವೇದಾಧ್ಯಯನದಲ್ಲಿ ಯಾರಿಗೆ ಅಧಿಕಾರ ಇದೆಯೋ ಅವರಿಗೆ ಬ್ರಹ್ಮಜ್ಞಾನದಲ್ಲಿ ಅಧಿಕಾರ. ವೇದಾಧ್ಯಯನಾಧಿಕಾರ ಯಾರಿಗೆ ಎಂದು ಬ್ರಹ್ಮತರ್ಕದಲ್ಲಿ ಹೇಳಲಾಗಿದೆ. ''ಅವೈಷ್ಣವಾದಿಗಳು ಅರ್ಥಾತ್ ವೇದಾಧಿಕಾರವಿಲ್ಲದವರು ವೇದವನ್ನು ಓದಿದರೂ ಅದರ ಫಲ ಅವರಿಗೆ ಸಿಗುವುದಿಲ್ಲ. ಆದ್ದರಿಂದ ಅಧ್ಯಯನ ಮಾಡಿದವರೆಲ್ಲರೂ ಬ್ರಹ್ಮಜ್ಞಾನಾಧಿಕಾರಿಗಳು ಆಗುವುದಿಲ್ಲ'' ಎಂದು ತತ್ತ್ವಪ್ರದೀಪದಲ್ಲಿದೆ. (ಅವೈಷ್ಣವಾದೀನಾಮ್ ಅಧ್ಯಯನೇಽಪಿ ತತ್ಫಲಾನುತ್ಪತ್ತೇಃ ಸಫಲಾಧ್ಯಯನವತಃ, ಇತ್ಯರ್ಥಃ।) ವೈದಿಕ ಬ್ರಹ್ಮವಿದ್ಯೆಗೆ ಇದು ಅಧಿಕಾರ. ತಂತ್ರಗ್ರಂಥಗಳಿಂದ ವೇದಾನಧಿಕಾರಿಗಳೂ ಬ್ರಹ್ಮಜ್ಞಾನವನ್ನು ಪಡೆಯಬಹುದು. (ಅಧ್ಯಯನವತೋ ವೈದಿಕೇ ಬ್ರಹ್ಮಜ್ಞಾನೇ ಅಧಿಕಾರ ಇತಿ ಸ್ಮೃತ್ಯಾ ಸಿದ್ಧಮ್– ತ.ಪ್ರಕಾ.)

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ಅಸಾರ್ವತ್ರಿಕೀ ಓಂ ॥** (ಅತ್ರ ಈಶಜ್ಞಾನಮ್ ಅಸರ್ವಾಧಿಕಾರಿಕಮ್ ಇತ್ಯುಚ್ಯತೇ। ಅಸಾರ್ವತ್ರಿಕೀ=ಸರ್ವಜನನಿಷ್ಠಾ ನೇತ್ಯರ್ಥಃ।)

ಬ್ರಹ್ಮಜ್ಞಾನದಲ್ಲಿ ಅಧಿಕಾರವು ಅಸಾರ್ವತ್ರಿಕೀ=ಸರ್ವಸಾಧಾರಣವಲ್ಲ. ವೇದಾಧ್ಯಯನದಲ್ಲಿ ಅಧಿಕಾರವಿದ್ದವರಿಗೆ ಮಾತ್ರ.

**॥ ಓಂ ವಿಭಾಗಃ ಶತವತ್ ಓಂ ॥** (ಅರ್ಥಿತ್ವಾದೇಃ ಸಾಮ್ಯಾತ್ ಕಥಂ ನ ಇತ್ಯತ ಆಹ–ವಿಭಾಗಃ ಶತವತ್, ನವಕೋಟೀನಾಂ ದೇವತ್ವಸಾಮ್ಯೇऽಪಿ ಪರಾಪರ ಬ್ರಹ್ಮದ್ವಯಾಧಿಕಸ್ಯ ಶತಸ್ಯ ಸೋಮಾಧಿಕಾರಃ ನಾನ್ಯೇಷಾಮ್, ಇತಿ ವಿಭಾಗಃ ಯಥಾ ತಥೈವ ಅರ್ಥಿತ್ವಾದಿ ಸಾಮ್ಯೇऽಪಿ ಕೇಷಾಂಚಿದಧಿಕಾರಿತಾ ಅನ್ಯೇಷಾಂ ನೇತಿ ವಿಭಾಗಃ ಇತ್ಯರ್ಥಃ। ಅರ್ಥಿತ್ವಾದಿಮಾತ್ರಂ ನ ಪ್ರಯೋಜಕಮ್ ಇತಿ ಭಾವಃ ॥)

ಸುಖದ ಬಗ್ಗೆ ಆಸೆಯು ಎಲ್ಲರಿಗೂ ಸಮಾನವಾದರೂ ಮೋಕ್ಷಸುಖಕ್ಕೆ ಕಾರಣವಾದ ಬ್ರಹ್ಮಜ್ಞಾನದಲ್ಲಿ ಎಲ್ಲರಿಗೂ ಅಧಿಕಾರವಿಲ್ಲ. ಹೇಗೆ ಒಂಭತ್ತುಕೋಟಿ ದೇವತೆಗಳಲ್ಲಿ ದೇವತ್ವವು ಸಮಾನವಾದರೂ ಪರಬ್ರಹ್ಮ ಮತ್ತು ಚತುರ್ಮುಖ ಬ್ರಹ್ಮ ಇವರಿಬ್ಬರ ಜೊತೆ ಇತರ ಒಟ್ಟು ನೂರುಮಂದಿ ದೇವತೆಗಳಿಗೆ ಮಾತ್ರ ಸೋಮಾಧಿ ಕಾರವೋ ಆದರಂತೆ.

**॥ ಓಂ ಅಧ್ಯಯನಮಾತ್ರವತಃ ಓಂ ॥** (ಅಧಿಕಾರಿತಾ ಇತ್ಯಸ್ತಿ। ಮಾತ್ರೇತಿ ಕಾರ್ತ್ಸ್ನ್ಯಮುಚ್ಯತೇ। ಯಥಾಶಕ್ತಿ ಕೃತ್ಸ್ನಾಧ್ಯಯನವತಃ ಅಧಿಕಾರಿತಾ ಇತ್ಯರ್ಥಃ।

ತತ್ವಪ್ರದೀಪೇ ತು ಅಧ್ಯಯನೇತಿ ಫಲವದಧ್ಯಯನಮ್ ಉಚ್ಯತೇ। ಮಾತ್ರೇತಿ ಸಾಂಗತ್ವರೂಪ–ಕಾರ್ತ್ಸ್ನ್ಯೋಕ್ತಿಃ। ತೇನ ಅವೈಷ್ಣವಕೃತಾಧ್ಯಯನಸ್ಯ ಸಾಂಗತ್ವ–ಸಫಲತ್ವಯೋಃ ಅಭಾವಾತ್ ವ್ಯಾವೃತ್ತಿರಿತ್ಯುಕ್ತಮ್। ಸಾಂಗ–ಸಫಲ ವೇದಾಧ್ಯಯನ ವತ್ವಂ ಪ್ರಯೋಜಕಮಿತಿ ಭಾವಃ ॥)

ಸೂತ್ರದಲ್ಲಿರುವ ಮಾತ್ರಪದಕ್ಕೆ ಸಕಲ ಎಂದು ಅರ್ಥ. ಯಥಾಶಕ್ತಿಯಾಗಿ ಸಕಲವೇದಗಳನ್ನು ಅಧ್ಯಯನ ಮಾಡಿದವರಿಗೆ ಬ್ರಹ್ಮಜ್ಞಾನದಲ್ಲಿ ಅಧಿಕಾರ, ಎಂದರ್ಥ.

**ಇಲ್ಲಿಗೆ ಅಸಾರ್ವತ್ರಿಕಾಧಿಕರಣವು ಮುಗಿಯಿತು.**

# ೩. ಅವಿಶೇಷಾಧಿಕರಣಮ್

## ।। ನಾವಿಶೇಷಾತ್ ।। ೧೩ ।।

ನ ಸಾಮಾನ್ಯೇನಾಧಿಕಾರೋ ದೇವಾದೀನಾಮ್ ।

'ಅಥ ಪುಮರ್ಥಸಾಧನಾನ್ಯರ್ಥೋ
ಧರ್ಮೋ ಜ್ಞಾನಮಿತ್ಯುತ್ತರೋತ್ತರಂ ।
ತತ್ರಾಧಿಕಾರಿಣೋ ಮನುಷ್ಯಾ ಋಷಯೋ
ದೇವಾ ಇತ್ಯುತ್ತರೋತ್ತರಮ್ ।।' ಇತಿ ಹಿ ಕೌಂಡಿನ್ಯಶ್ರುತಿಃ ।।

ದೇವ-ಋಷಿ-ಗಂಧರ್ವ-ಮನುಷ್ಯರಿಗೆ ಜ್ಞಾನದಲ್ಲಿ ಅಧಿಕಾರವು ಸಮಾನವಲ್ಲ. ಕೌಂಡಿನ್ಯಶ್ರುತಿಯಲ್ಲಿ ಹೀಗಿದೆ—ಪುರುಷಾರ್ಥಕ್ಕೆ ಸಾಧನವಾದುದು ಸಂಪತ್ತು, ಕರ್ಮಾಚರಣೆ ಮತ್ತು ಜ್ಞಾನ ಈ ಮೂರು. ಇವುಗಳಲ್ಲಿ ಮುಂದು ಮುಂದಿನವು ಪ್ರಧಾನವಾಗುತ್ತವೆ. ಇವುಗಳಲ್ಲಿ ಮನುಷ್ಯರು, ಋಷಿಗಳು, ದೇವತೆಗಳು ಉತ್ತರೋತ್ತರವಾಗಿ ಹೆಚ್ಚು ಹೆಚ್ಚಿನ ಅಧಿಕಾರಿಗಳು.

**ವಿವರಣೆ**— ಅರ್ಥವು ಧರ್ಮದ ಮೂಲಕ ಮೋಕ್ಷಸಾಧನ, ಧರ್ಮವು ಜ್ಞಾನದ ಮೂಲಕ ಮೋಕ್ಷಸಾಧನ. ಜ್ಞಾನವು ಸಾಕ್ಷಾತ್ ಮೋಕ್ಷಸಾಧನ.

ಮನುಷ್ಯಾದಿಗಳ ಸ್ವರೂಪದಲ್ಲೇ ತಾರತಮ್ಯವಿದೆ. ಅದಕ್ಕೆ ಅನುಗುಣವಾಗಿ ಜ್ಞಾನಾಧಿಕಾರದಲ್ಲೂ ತಾರತಮ್ಯವಿದೆ. ಅದರಿಂದಾಗಿ ಜ್ಞಾನದಲ್ಲೂ ತಾರತಮ್ಯವಿದೆ.

### ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**।। ನಾವಿಶೇಷಾತ್ ।।** (ಅತ್ರ ಜ್ಞಾನಾಧಿಕಾರೇ ತಾರತಮ್ಯಮ್ ಅಸ್ತೀತ್ಯುಚ್ಯತೇ । ಅಧಿಕಾರಿತಾ, ಇತ್ಯಸ್ತಿ, ಅವಿಶೇಷಾದಿತ್ಯಾವೃತ್ತಿಃ । ದೇವಾದೀನಾಮ್ ಜ್ಞಾನಾಧಿಕಾರಿತಾ ಅವಿಶೇಷೇಣ ನ=ಏಕರೂಪಾ ನ । ಕುತಃ ? ಅವಿಶೇಷಾತ್=ಜ್ಞಾನಸ್ಯಾಪಿ ಅವಿಶೇಷಪ್ರಸಂಗಾತ್ ।)

ದೇವಾದಿಗಳಿಗೆ ಜ್ಞಾನದಲ್ಲಿ ಅಧಿಕಾರವು ನ ಅವಿಶೇಷಾತ್=ಏಕರೂಪವಾದುದಲ್ಲ. ಏಕೆಂದರೆ, ಅವಿಶೇಷಾತ್-ಅವಿಶೇಷಪ್ರಸಂಗಾತ್=ಜ್ಞಾನವೂ ಒಂದೇ ವಿಧವಾದೀತು. ಆದರೆ, ಜ್ಞಾನದಲ್ಲಿ ತಾರತಮ್ಯವಿದೆ. ಅದನ್ನು 'ಪ್ರಜ್ಞಾಂತರಪೃಥಕ್ತ್ವವತ್ ದೃಷ್ಟಿಶ್ಚ'

(ಬ್ರ.ಸೂ.3.3.52) ಎಂದು ಹಿಂದೆಯೇ ಹೇಳಲಾಗಿದೆ. ಅದಕ್ಕೆ ಅನುಗುಣವಾಗಿ ಜ್ಞಾನಾಧಿಕಾರದಲ್ಲೂ ತಾರತಮ್ಯವು ಇರಬೇಕು.

ಯಾವದಧಿಕಾರಂ (ಬ್ರ.ಸೂ.3.3.33) ಎಂಬ ಅಧಿಕರಣದಲ್ಲಿ 'ವೃದ್ಧಿಹ್ರಾಸ ಭಾಕ್ತ್ವಂ' (3.2.21) ಎಂಬ ಅಧಿಕರಣಸಿದ್ಧವಾದ ಮೋಕ್ಷತಾರತಮ್ಯಕ್ಕೆ ಅನುಗುಣವಾಗಿ ಉಪಾಸನಾಧಿಕಾರದಲ್ಲಿ ತಾರತಮ್ಯವನ್ನು ಹೇಳಲಾಗಿದೆ. ಈ ಅಧಿಕರಣದಲ್ಲಿ 'ಪ್ರಜ್ಞಾಂತರ...'(3.3.52) ಎಂಬ ಅಧಿಕರಣದಲ್ಲಿ ಸಿದ್ಧವಾದ ಜ್ಞಾನತಾರತಮ್ಯಕ್ಕೆ ಅನುಗುಣವಾಗಿ ಜ್ಞಾನಾಧಿಕಾರದಲ್ಲಿ ತಾರತಮ್ಯವನ್ನು ಹೇಳಲಾಗಿದೆ.

**ಇಲ್ಲಿಗೆ ಅವಿಶೇಷಾಧಿಕರಣವು ಮುಗಿಯಿತು.**

## ೪. ಸ್ತುತ್ಯಧಿಕರಣಮ್

**'ಅಥ ಮುನಿರಮೌನಂ ಚ ಮೌನಂ ಚ ನಿರ್ವಿದ್ಯಾಥ ಬ್ರಾಹ್ಮಣಃ ಸ ಬ್ರಾಹ್ಮಣಃ ಕೇನ ಸ್ಯಾದ್ ಯೇನ ಸ್ಯಾತ್ ತೇನೇದೃಶ ಏವ' (ಬೃ.ಉ. 5.5.1) ಇತಿ ಜ್ಞಾನಿನೋ ಯಥೇಷ್ಟಾಚರಣಂ ವಿಧೀಯತೇ । ಇತ್ಯತ ಆಹ-**

**॥ ಓಂ ಸ್ತುತಯೇಽನುಮತಿರ್ವಾ ಓಂ ॥ ೧೪ ॥**

**ನ ವಿಧಿಃ । ಜ್ಞಾನಿಸ್ತುತಯೇಽನುಮತಿಮಾತ್ರಂ ವಾ । ಯುಜ್ಯತೇ ಚ ॥**

ಬೃಹದಾರಣ್ಯಕಶ್ರುತಿಯಲ್ಲಿ ಅಪರೋಕ್ಷಜ್ಞಾನಿಯು ಹೀಗೆಯೇ ಇರಬೇಕೆಂಬ ನಿರ್ಬಂಧವಿಲ್ಲ, ಅವನು ಮನಬಂದಂತೆ ಇರಬಹುದು, ಆಚಾರನಿರ್ಬಂಧವಿಲ್ಲ, ಎಂದು ಹೇಳಿರುವಂತೆ ತಿಳಿಯುತ್ತದೆ. ಅದಕ್ಕೆ ಈ ಸೂತ್ರ ಹೇಳುತ್ತದೆ— ಯಥೇಷ್ಟಾಚಾರ ವಿರಬೇಕೆಂಬುದು ಇಲ್ಲಿ ವಿಧಿಯಲ್ಲ, ಜ್ಞಾನಿಯ ಪ್ರಶಂಸೆಗಾಗಿ ಹಾಗೆ ಹೇಳಲಾಗಿದೆ. ಅಥವಾ, ಯಥೇಷ್ಟಾಚಾರಕ್ಕೆ ಅನುಮತಿ ಮಾತ್ರ ನೀಡುತ್ತದೆ ಆ ಶ್ರುತಿ. ಜ್ಞಾನಿಗೂ ಸನ್ನಡತೆಯಿಂದ ಆನಂದವೃದ್ಧಿಯೂ, ದುರ್ನಡತೆಯಿಂದ ಆನಂದಹ್ರಾಸವೂ ಯುಕ್ತವಾಗಿದೆ. (ಯುಜ್ಯತೇ।)

**ವಿವರಣೆ—** ಅಥ ಮುನಿಃ=ಪರೋಕ್ಷಜ್ಞಾನವನ್ನು ಪಡೆದ ಮೇಲೆ ಸಾಧಕನು ಧ್ಯಾನಾಸಕ್ತನಾಗುತ್ತಾನೆ. ಅಲ್ಲಿ ಮೌನಂ=ಉಪಾಸನೆಯನ್ನೂ ಅಮೌನಂ ಚ=ಅಪರೋಕ್ಷ ಜ್ಞಾನವನ್ನೂ ನಿರ್ವಿದ್ಯ=ಪಡೆದು ಅಥ ಬ್ರಾಹ್ಮಣಃ ಭವತಿ=ಬ್ರಹ್ಮನಿಷ್ಠನಾಗುತ್ತಾನೆ. ಸ

ಬ್ರಾಹ್ಮಣಃ=ಅಂತಹ ಬ್ರಹ್ಮಜ್ಞಾನಿಯು ಯೇನ ಸ್ಯಾತ್ ಕೇನ ಸ್ಯಾತ್= ಆಚಾರಶೀಲನಾಗಿರಲಿ ಇಲ್ಲದಿರಲಿ ತೇನ ಈದೃಶ ಏವ=ಅದರಿಂದ ಅವನು ಬ್ರಹ್ಮಜ್ಞಾನಿಯಾಗಿ ಮೋಕ್ಷಾರ್ಹನೇ ಆಗಿರುತ್ತಾನೆ. ಅವನಿಗೆ ಯಾವ ಹಾನಿಯೂ ಆಗುವುದಿಲ್ಲ.

ಈ ಬೃಹದಾರಣ್ಯಕಶ್ರುತಿಯಲ್ಲಿ ಬ್ರಹ್ಮಾಪರೋಕ್ಷಜ್ಞಾನಿಗೆ ಯಾವ ನಿರ್ಬಂಧವೂ ಇಲ್ಲ, ದುರಾಚಾರಿಯಾದರೂ ಹಾನಿ ಇಲ್ಲ ಎಂದು ತಿಳಿಯುತ್ತದೆ. ಆದರೆ, ಆ ಶ್ರುತಿಯು ಆಚಾರಹೀನನಾಗಿರಬೇಕು, ದುರಾಚಾರಿಯಾಗಿರಬೇಕು, ಎಂದು ವಿಧಿಸುತ್ತಿಲ್ಲ. ಅದು ಜ್ಞಾನಿಯ ಪ್ರಶಂಸೆ ಮಾತ್ರ—ಅವನು ಪಡೆದ ಬ್ರಹ್ಮಜ್ಞಾನದಿಂದ ಮೋಕ್ಷವು ನಿಶ್ಚಿತ, ಎಂದು. ಅಥವಾ, ಅವನು ಮಾಡುವ ಕೆಲಸಗಳಿಗೆ ತನ್ನ ಅನುಮೋದನೆಯನ್ನು ಮಾತ್ರ ಅದು ನೀಡುತ್ತದೆ. ಅವನಿಗೂ ದುರಾಚಾರದಿಂದ ಹಾನಿ ಇದೆ, ಸದಾಚಾರದಿಂದ ಲಾಭವೂ ಇದೆ.

ತತ್ತ್ವಪ್ರದೀಪದಲ್ಲಿ-ಸ್ತುತಿಃ=ಸಾಮರ್ಥ್ಯ ಪ್ರಕಟನಮ್, ಯಥೇಷ್ಟಾಚಾರವಿದ್ದರೂ ಜ್ಞಾನಿಯು ಮುಕ್ತನಾಗುವುದು ನಿಶ್ಚಿತ, ಎಂದು ಜ್ಞಾನದ ಸಾಮರ್ಥ್ಯವನ್ನು ತಿಳಿಸುವುದಕ್ಕಾಗಿ ಎಂದರ್ಥ. ಅನುಮತಿಃ=ಕ್ರಿಯಮಾಣಸ್ಯ ಅಭ್ಯನುಜ್ಞಾ, ಎಂದು ಅರ್ಥವನ್ನು ಹೇಳಲಾಗಿದೆ. ತತ್ತ್ವಪ್ರಕಾಶಿಕಾದಲ್ಲಿ ಸ್ತುತಿಯನ್ನು ಹೀಗೆ ವಿವರಿಸಲಾಗಿದೆ— ವಿನೀತನಾದ ಕೆಲಸಗಾರನಿಗೆ 'ನಿನಗೆ ಹೇಗೆ ಮನಸ್ಸು ಬರುವುದೋ ಹಾಗೆ ಮಾಡು' ಎಂದಂತೆ.

ಇಲ್ಲಿ ಸ್ತುತಿ ಎಂಬ ಪಕ್ಷ ಮನುಷ್ಯರಿಗೂ ಅನುಮತಿ ಎಂಬ ಪಕ್ಷ ದೇವತೆಗಳಿಗೂ ಅನ್ವಯಿಸುತ್ತದೆ. ಸೂತ್ರದ ವಾಶಬ್ದವು ಈ ವ್ಯವಸ್ಥಿತವಿಕಲ್ಪವನ್ನು ತಿಳಿಸುತ್ತದೆ.

## ।। ಓಂ ಕಾಮಕಾರೇಣ ಚೈಕೇ ಓಂ ।। ೧೫ ।।

**'ಕಾಮಚಾರಾಃ ಕಾಮಭಕ್ಷಾಃ ಕಾಮವಾದಾಃ ಕಾಮೇನ್ನೈವೇಮಂ ದೇಹಮುತ್ಸೃಜ್ಯಾಥ ಪರಾತ್ ಪರಮೀಯುರನಾರಂಭಣಮ್' ಇತಿ ಚೈಕೇ ಪಠಂತಿ ।।**

ಕೆಲವು ಶಾಖಿಗಳು ಯಥೇಷ್ಟಾಚಾರ-ಆಹಾರ-ಭಾಷಣಾದಿಗಳನ್ನು ಮಾಡಿದರೂ ಜ್ಞಾನಿಗಳಿಗೆ ಮೋಕ್ಷವು ನಿಶ್ಚಿತ, ಎನ್ನುತ್ತಾರೆ.

**ವಿವರಣೆ**— ಶಾಸ್ತ್ರವಿರುದ್ಧವಾದ ಆಚರಣೆ ಅಥವಾ ನಿಷಿದ್ಧಾಹಾರಸೇವನೆ, ಆಡಬಾರದ ಮಾತುಗಳನ್ನು ಆಡುವುದು ಇವುಗಳಿಂದ ಅಪರೋಕ್ಷಜ್ಞಾನದ ಶಕ್ತಿಯು ಕುಂದಿ ಅದರಿಂದ ಮೋಕ್ಷವು ಸಿಗದಿರಬಹುದು, ಎಂಬ ಆಶಂಕೆಯನ್ನು ಈ ಸೂತ್ರದಲ್ಲಿ ಪರಿಹರಿಸಲಾಗಿದೆ. ಅಂತಹ ದೋಷಗಳಿಂದಾಗಿ ಮೋಕ್ಷವು ಸಿಗದಿರುವ ಸಂದರ್ಭವಿಲ್ಲ, ಎಂದು ಈ ಸೂತ್ರದ ಅಭಿಪ್ರಾಯ. ಆದರೆ, ದುರಾಚಾರದಿಂದ ಮನುಷ್ಯರಿಗೆ ಮೋಕ್ಷದಲ್ಲಿ ಸಿಗಬೇಕಾದ ಆನಂದದಲ್ಲಿ ಹ್ರಾಸವಾಗುತ್ತದೆ. ಅದನ್ನು ಅಣುಭಾಷ್ಯದಲ್ಲಿ ಆಚಾರ್ಯರು ಹೇಳಿದ್ದಾರೆ—

ಗುಣದೋಷೈಸ್ಸುಖಸ್ಯಾಪಿ ವೃದ್ಧಿಹ್ರಾಸೌ ವಿಮುಕ್ತಿಗೌ ।

ನೃಣಾಮ್....॥

**ಶ್ರುತ್ಯರ್ಥ**—ಅಪರೋಕ್ಷಜ್ಞಾನಿಗಳು ಕಾಮಚಾರಾಃ=ತಮಗೆ ಇಷ್ಟಬಂದಂತೆ ಆಚಾರವನ್ನು ಮಾಡುತ್ತಾರೆ. ಕಾಮಭಕ್ಷಾಃ=ಇಷ್ಟಬಂದಂತೆ ತಿನ್ನುತ್ತಾರೆ, ಕಾಮವಾದಾಃ= ಇಷ್ಟಬಂದಂತೆ ಮಾತನಾಡುತ್ತಾರೆ. ಕಾಮೇನ=ತಮ್ಮ ಇಚ್ಛೆಯಿಂದ ಇಮಂ ದೇಹಮ್= ಈ ದೇಹವನ್ನು ಉತ್ಸೃಜ್ಯ=ತ್ಯಜಿಸಿ ಅನಾರಂಭಣಮ್=ಉತ್ಪತ್ತಿ ಇಲ್ಲದ ಪರಾತ್ಪರಂ=ಸರ್ವೋತ್ತಮನಾದ ಪರಮಾತ್ಮನನ್ನು ಈಯುಃ=ಹೊಂದುತ್ತಾರೆ. (ಇದು ಸಾಮಶಾಖೆಯ ಮಂತ್ರ.)

## ॥ ಓಂ ಉಪಮರ್ದಂ ಚ ಓಂ ॥ ೧೬ ॥

**ಓಮಿತ್ಯುಚ್ಚಾರ್ಯಾಂತರಿಮಮಾತ್ಮಾನಮಭಿಪಶ್ಯೋಪಮೃದ್ಯ ಪುಣ್ಯಂ ಚ ಪಾಪಂ ಚ ಕಾಮಮಾಚರಂತೋ ಬ್ರಹ್ಮಾನುವ್ರಜಂತಿ' ಇತಿ ಚ ತುರಶ್ರುತೌ ॥**

ತುರಶ್ರುತಿಯಲ್ಲಿದೆ– ಅಪರೋಕ್ಷಜ್ಞಾನವು ಅವಶ್ಯಭೋಕ್ತವ್ಯವಾದ ಪ್ರಾರಬ್ಧ ಪುಣ್ಯ–ಪಾಪಗಳ ಫಲಹ್ರಾಸವನ್ನು ಮಾಡುತ್ತದೆ. ಹೀಗಿರುವಾಗ ಜ್ಞಾನೋತ್ತರದಲ್ಲಿ ಮಾಡುವ ದುರಾಚಾರಗಳ ಲೇಪವು ಆಗದಂತೆ ಮಾಡುತ್ತದೆ, ಎನ್ನುವುದು ಸುತರಾಂ ಸಿದ್ಧ.

**ವಿವರಣೆ**— ಅಪರೋಕ್ಷಜ್ಞಾನದಿಂದ ಸಂಚಿತವಾದ ಪುಣ್ಯಪಾಪಗಳು ನಾಶವಾಗುತ್ತವೆ. ಪ್ರಾರಬ್ಧಪುಣ್ಯಪಾಪಗಳ ಫಲವನ್ನು ಅನುಭವಿಸಲೇಬೇಕು. ಆದರೂ ಪಾಪದ ಫಲವಾದ ದುಃಖವು ತೀವ್ರವಾಗದಂತೆ ತಡೆಯುತ್ತದೆ ಅಪರೋಕ್ಷಜ್ಞಾನ. ಹೀಗೆ

ಅನಿಷ್ಟಪುಣ್ಯದ ಫಲವನ್ನೂ ಅದು ಹ್ರಾಸ ಮಾಡುತ್ತದೆ. ಇಂತಹ ಸಾಮರ್ಥ್ಯವು ಅಪರೋಕ್ಷಜ್ಞಾನಕ್ಕೆ ಇದ್ದಮೇಲೆ ಅದು ಜ್ಞಾನೋತ್ತರಕಾಲದಲ್ಲಿ ಮಾಡಿದ ದುರಾಚಾರಗಳ ಪಾಪದ ಲೇಪವು ಆಗದಂತೆ ಮಾಡಿಯೇ ಮಾಡುತ್ತದೆ. ಆದ್ದರಿಂದ ಜ್ಞಾನಿಗಳಿಗೆ ಕಾಮಚಾರದಿಂದ ಮೋಕ್ಷ ಚ್ಯುತಿ ಇಲ್ಲ.

**ಶ್ರುತ್ಯರ್ಥ**— ಓಮಿತ್ಯುಚ್ಚಾರ್ಯ=ಓಂ ಎಂದು ಉಚ್ಚರಿಸಿ, ಶ್ರವಣಾದಿಗಳನ್ನೂ ಮಾಡಿ ಅಂತಃ=ಹೃದಯದ ಒಳಗೆ ಇಮಮ್ ಆತ್ಮಾನಮ್=ಈ ಬಿಂಬರೂಪವನ್ನು ಅಭಿಪಶ್ಯ=ನೋಡಿ ಪುಣ್ಯಂ=ಅನಿಷ್ಟಪುಣ್ಯವನ್ನೂ ಪಾಪಂ ಚ=ಪಾಪವನ್ನೂ ಉಪಮೃದ್ಯ=ಫಲಹ್ರಾಸವಾಗುವಂತೆ ಮಾಡಿ ಕಾಮಮ್ ಆಚರಂತಃ= ಯಥೇಷ್ಟಾಚಾರವಂತರಾದವರಾಗಿ ಬ್ರಹ್ಮ–ಪರಮಾತ್ಮನನ್ನು ಅನುವ್ರಜಂತಿ=ಸಮೀಪಿಸು ತ್ತಾರೆ.

## ॥ ಓಂ ಊರ್ಧ್ವರೇತಸ್ಸು ಚ ಶಬ್ದೇ ಹಿ ಓಂ ॥ ೧೭ ॥

**ನ ತಾವತಾ ಕಾಮಚಾರಾಣಾಂ ಜ್ಞಾನಾಧಿಕಾರಃ ।**

**'ಯ ಇಮಂ ಪರಮಂ ಗುಹ್ಯಮೂರ್ಧ್ವರೇತಸ್ಸು ಭಾಷಯೇತ್ ।**
**ನ ತಥಾ ವಿದ್ಯತೇ ಭೂಯಾನ್ ಯಂ ಪ್ರಾಪ್ಯಾನ್ಯೇಽಪಿ ಭೂಯಸಃ ॥'**
**ಇತಿ ಮಾಠರಶ್ರುತೇಃ ॥**

ಕಾಮಚಾರಿಗಳಾದ ಅಪರೋಕ್ಷಜ್ಞಾನಿಗಳ ಮುಕ್ತಿಯೋಗ್ಯತೆಗೆ ಚ್ಯುತಿ ಇಲ್ಲ. ಅಂದಮಾತ್ರಕ್ಕೆ, ಕಾಮಚಾರಿಗಳಾದವರಿಗೆ ಜ್ಞಾನದಲ್ಲಿ ಅಧಿಕಾರ ಇಲ್ಲ. ಮಾಠರಶ್ರುತಿಯಲ್ಲಿದೆ—ಯಃ=ಯಾರು, ಇಮಂ=ಈ ಪರಮಂ ಗುಹ್ಯಂ=ಪರಮ ರಹಸ್ಯನಾದ ವಿಷ್ಣುವನ್ನು ಊರ್ಧ್ವರೇತಸ್ಸು=ಗುರುಕುಲವಾಸಾದಿಗಳನ್ನು ಮಾಡಿರುವ ಬ್ರಹ್ಮಚಾರಿಗಳಿಗೆ ಭಾಷಯೇತ್=ಹೇಳುವನೋ ತಥಾ=ಹಾಗೆ ಉಪದೇಶ ಮಾಡಿದವನಿ ಗಿಂತ ಭೂಯಾನ್=ಶ್ರೇಷ್ಠನು ನ ವಿದ್ಯತೇ=ಇಲ್ಲ. ಯಂ=ಯಾವ ಉಪದೇಶಕನನ್ನು ಪ್ರಾಪ್ಯ=ಹೊಂದಿ ಅನ್ಯೇಽಪಿ=ಉಳಿದವರೂ ಭೂಯಸಃ=ಶ್ರೇಷ್ಠರಾಗುವರು.

**ವಿವರಣೆ**— ಜ್ಞಾನಬಂದ ಮೇಲೆ ಕಾಮಚಾರಕ್ಕೆ ಅನುಮತಿ ಇದೆ. ಆದರೆ ಅಪರೋಕ್ಷಜ್ಞಾನ ಬರುವುದಕ್ಕೂ ಮೊದಲು ಕಾಮಚಾರಿಗಳಾದರೆ ಜ್ಞಾನವೇ ಬರುವುದಿಲ್ಲ. ಸೂತ್ರದಲ್ಲಿ 'ಊರ್ಧ್ವರೇತಸ್ಸು' ಎಂಬ ಗುಣ ಉಪಲಕ್ಷಣ. ಇತರ ಸದ್ಗುಣಗಳನ್ನೂ ಇಟ್ಟುಕೊಳ್ಳಬೇಕು.

## ॥ ಓಂ ಪರಾಮರ್ಶಂ ಜೈಮಿನಿರಚೋದನಾ ಚಾಪವದತಿ ಹಿ ಓಂ ॥ ೧೮ ॥

'ಪ್ರಾತರುತ್ಥಾಯಾಥ ಸಂಧ್ಯಾಮುಪಾಸೀತ, ಯತ್ ಸಂಧ್ಯಾ-ಮುಪಾಸತೇ ಬ್ರಹ್ಮೈವ ತದುಪಾಸತೇಽಥ ದೇವಾನ್ ನಮೇತ್ ಜುಹುಯಾದ್, ವೇದಾನಾವರ್ತಯೀತ, ನಾನ್ಯತ್ ಕಿಂಚಿದಾಚರೇನ್ನ ಸುರಾಂ ಪಿಬೇನ್ನ ಪಲಾಂಡುಂ ಭಕ್ಷಯೀತ, ನ ಭೃಶಂ ವದೇನ್ನ ವಿಸ್ಮರೇತಾಽತ್ಮಾನಂ, ಸೋಮಂ ಪಿಬೇದುದ್ಧತಶೇಷೇಣ ವರ್ತಯೇತ್'

ಇತ್ಯುಕ್ತಾಚಾರಪರಾಮರ್ಶೇನ ವಿಧಿಬಂಧವರ್ಜಿತತ್ವೇನ ಕಾಮತ ಏವ ತಸ್ಯ ಚರಣಂ ಕಾಮಚಾರ ಇತಿ ಜೈಮಿನಿರ್ಮನ್ಯತೇ ।

ನ ಚ ನಿಷಿದ್ಧಂ ಕರ್ಮ ಕರ್ತವ್ಯಮೇವೇತಿ ಚೋದನಾ । 'ಬ್ರಾಹ್ಮಣೋ ನ ಹಂತವ್ಯಃ' ಇತ್ಯಾದ್ಯಪವಾದಶ್ಚ ॥

ಕಾಮಚಾರದ ಬಗ್ಗೆ ಜೈಮಿನಿ ಋಷಿಗಳ ಅಭಿಪ್ರಾಯ ಹೀಗೆ—'ಪ್ರಾತರುತ್ಥಾಯ' ಎಂಬ ಶ್ರುತಿಯಲ್ಲಿ ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಹೇಳಲಾಗಿದೆ. ಈ ಆಚಾರಗಳನ್ನು ಪರಾಮರ್ಶಮಾಡಿ 'ಯೇನ ಸ್ಯಾತ್ ಕೇನ ಸ್ಯಾತ್' ಎಂಬ ಶ್ರುತಿಯು ಕಾಮಚಾರವನ್ನು ವಿಧಿಸುತ್ತದೆ. ಜ್ಞಾನಿಗಳು ವೇದದ ವಿಧಿ ಇದೆ, ಎಂಬ ನಿರ್ಬಂಧಕ್ಕೆ ಒಳಪಟ್ಟು ಸಂಧ್ಯಾದಿನಿತ್ಯಕರ್ಮಗಳನ್ನು ಮಾಡುವುದಲ್ಲ. ಅವರು ವಿಧಿಬಂಧ ವರ್ಜಿತರು. ಆದರೂ ಅವರು ಸ್ವೇಚ್ಛೆಯಿಂದಲೇ ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಮಾಡುತ್ತಾರೆ. ಹೀಗೆ ಸ್ವೇಚ್ಛೆಯಿಂದಲೇ ಕರ್ಮಾಚರಣೆಯೇ ಕಾಮಚಾರ. ಹೊರತು, ಮನಬಂದಂತೆ ಇರುವುದು ಕಾಮಚಾರವಲ್ಲ. ಏಕೆಂದರೆ, ನಿಷಿದ್ಧವಾದುದನ್ನು ಜ್ಞಾನಿಯು ಮಾಡಬೇಕು, ಎಂದು ವಿಧಿ ಇಲ್ಲ. ಮಾತ್ರವಲ್ಲ 'ಬ್ರಾಹ್ಮಣನನ್ನು ಕೊಲ್ಲಬಾರದು' ಇತ್ಯಾದಿ ನಿಷೇಧಶ್ರುತಿ ಜ್ಞಾನಿಗೂ ಅನ್ವಯಿಸುತ್ತದೆ. ಹೀಗಿರುವುದರಿಂದ ನಿಷಿದ್ಧಾಚರಣೆಯಲ್ಲಿ ಕಾಮಚಾರ ಎಂದು ಅರ್ಥವನ್ನು ಮಾಡಬಾರದು. ಈ ನಿಷೇಧಶ್ರುತಿಯು ಜ್ಞಾನಿಗೂ ಅನ್ವಯಿಸುತ್ತದೆ.

**ವಿವರಣೆ**— ಇದುವರೆಗೆ 'ಕೇನ ಸ್ಯಾತ್' ಎಂಬ ವೇದವಾಕ್ಯವು ವಿಧಿರೂಪವಲ್ಲ, ಜ್ಞಾನಿಸ್ತುತಿ ಅಥವಾ ಅನುಮತಿ ಎಂದು ಪರಿಗಣಿಸಿ ಅರ್ಥವನ್ನು ಹೇಳಲಾಗಿದೆ. ಜೈಮಿನಿಗಳ ಮತದಲ್ಲಿ ಅದಕ್ಕೆ ಇನ್ನೊಂದು ಅಭಿಪ್ರಾಯ ಇದೆ, ಎಂದು ಈ ಸೂತ್ರದಲ್ಲಿ

ಹೇಳಲಾಗಿದೆ. ಜ್ಞಾನಿಗಳು ಹೇಗಿದ್ದರೂ ಸರಿ ಎಂದು ಅದರ ಅರ್ಥವಲ್ಲ. ಅವರು ವಿಧಿ ಬದ್ಧರಲ್ಲ. ವೇದವಿಧಿಯ ಉಲ್ಲಂಘನೆಯ ಹೆದರಿಕೆಯಿಂದ ಅವರು ಕರ್ಮಗಳನ್ನು ಆಚರಿಸುವುದಲ್ಲ, ಸ್ವೇಚ್ಛೆಯಿಂದಲೇ ನಿತ್ಯ-ನೈಮಿತ್ತಿಕ ಕರ್ಮಾಚರಣೆಯನ್ನು ಮಾಡುತ್ತಾರೆ, ಇದೇ ಕಾಮಾಚಾರ. ಹೊರತು ನಿಷಿದ್ಧವನ್ನೂ ಆಚರಿಸುವುದು ಕಾಮಚಾರವಲ್ಲ. ಏಕೆಂದರೆ, ನಿಷಿದ್ಧಾಚರಣೆಗೆ ಪ್ರಮಾಣವೂ ಇಲ್ಲ. ನಿಷೇಧಶ್ರುತಿಯು ಜ್ಞಾನಿಗೂ ಅನ್ವಯಿಸುತ್ತದೆ.

ಶ್ರುತ್ಯರ್ಥ— ಪ್ರಾತುರುತ್ಥಾಯ=ಬೆಳಗ್ಗೆ ಎದ್ದು ಸಂಧ್ಯಾಮ್ ಉಪಸೀತ=ಸಂಧ್ಯಾ ವಂದನೆ ಮಾಡಬೇಕು. ಯತ್=ಯಾವ ಸಂಧ್ಯಾಮುಪಾಸತೇ=ಸಂಧ್ಯಾವಂದನೆಯನ್ನು ಮಾಡಲಾಗುವುದೋ ತತ್=ಅದು ಬ್ರಹ್ಮೈವೋಪಾಸತೇ=ಬ್ರಹ್ಮೋಪಾಸನೆಯೇ ಆಗಿದೆ. ದೇವಾನ್=ದಿಗ್‌ದೇವತೆಗಳನ್ನು ನಮೇತ್=ನಮಸ್ಕರಿಸಬೇಕು, ಜುಹುಯಾತ್=ಅಗ್ನಿಹೋತ್ರಾದಿಗಳನ್ನು ಮಾಡಬೇಕು. ವೇದಾನ್=ವೇದಗಳನ್ನು ಆವರ್ತಯೀತ=ಮತ್ತೆ ಮತ್ತೆ ಪಾರಾಯಣ ಮಾಡಬೇಕು. ಅನ್ಯತ್ ಕಿಂಚಿತ್= ನಿಷಿದ್ಧವಾದ ಯಾವುದನ್ನೂ ನ ಆಚರೇತ್=ಮಾಡಬಾರದು. ಸುರಾಂ=ಹೆಂಡವನ್ನು ನ ಪಿಬೇತ್=ಕುಡಿಯಬಾರದು. ಪಲಾಂಡುಂ=ಬೆಳ್ಳುಳ್ಳಿಯನ್ನು ನ ಭಕ್ಷಯೀತ= ತಿನ್ನಕೂಡದು. ಭೃಶಂ=ಕಠೋರವಾಗಿ ನ ವೇದತ್=ಮಾತನಾಡಬಾರದು. ಆತ್ಮಾನಂ= ಪರಮಾತ್ಮನನ್ನು ನ ವಿಸ್ಮರೇತ್=ಮರೆಯಬಾರದು. ಸೋಮಂ=ಯಜ್ಞಶೇಷವಾಗಿ ಸೋಮಪಾನ ಮಾಡಬೇಕು. ಹುತಶೇಷೇಣ=ಅಗ್ನ್ಯಾದಿ ಮುಖದಿಂದ ನಿವೇದಿಸಿದ ಶೇಷದಿಂದಲೇ ವರ್ತಯೇತ್=ಜೀವನ ನಡೆಸಬೇಕು.

## ॥ ಓಂ ಅನುಷ್ಠೇಯಂ ಬಾದರಾಯಣಃ ಸಾಮ್ಯಶ್ರುತೇಃ ಓಂ ॥ ೧೯ ॥

**ಅನುಷ್ಠೇಯಾನಾಂ ಮಧ್ಯ ಏವ ಕಾಮತಶ್ಚರಣಂ ಕಾಮತೋ ನಿವೃತ್ತಿರಿತಿ ಬಾದರಾಯಣೋ ಮನ್ಯತೇ ।**

**'ಕೇನ ಸ್ಯಾದ್ ಯೇನ ಸ್ಯಾತ್ ತೇನೇದೃಶ ಏವ' (ಬೃ.ಉ. 5.5.1) ಇತಿ ಸಾಮ್ಯಶ್ರುತೇಃ ।**

**'ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ ।**
**ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥' (ಭ.ಗೀ. 3.17)**

**ಇತಿ ಭಗವದ್ವಚನಾಚ್ಚ ।**

ಕಾಮಚಾರದ ಬಗ್ಗೆ ಬಾದರಾಯಣರ ಅಭಿಪ್ರಾಯ ಹೀಗಿದೆ— ಅನುಷ್ಠೇಯವಾದ ಸಂಧ್ಯಾದಿಕರ್ಮಗಳಲ್ಲಿ ಜ್ಞಾನಿಗೆ ಸ್ವೇಚ್ಛೆಯಿಂದ ಪ್ರವೃತ್ತಿ ಅಥವಾ ನಿವೃತ್ತಿಯೇ ಕಾಮಚಾರ. ಏಕೆಂದರೆ, ಸಾಮ್ಯಶ್ರುತೇಃ='ಕೇನ ಸ್ಯಾತ್ ಯೇನ ಸ್ಯಾತ್ ತೇನ ಈದೃಶ ಏವ'' ಎಂದು ಶ್ರುತಿಯಲ್ಲಿ ಸಾಮ್ಯವನ್ನು ಹೇಳಲಾಗಿದೆ. (ಕರ್ತವ್ಯವನ್ನೂ ಮಾಡಿದರೂ ಬಿಟ್ಟರೂ ಜ್ಞಾನಿಗೆ ಸಾಮ್ಯವನ್ನು ಶ್ರುತಿಯಲ್ಲಿ ಹೇಳಲಾಗಿದೆ. ವಸ್ತುತಃ ಕರ್ತವ್ಯಲೋಪಮಾಡಿದರೆ ಪಾಪಬರುವುದರಿಂದ ಕರ್ತವ್ಯ ಮಾಡಿದವನ ಸಾಮ್ಯ ಬರಲು ಸಾಧ್ಯವಿಲ್ಲ. ಹೀಗೆ ಸಾಮ್ಯವು ಅಸಂಭಾವಿತವಾದಾಗ ಶ್ರುತಿಯಲ್ಲಿ 'ಈದೃಶ ಏವ' ಎಂದು ಸಾಮ್ಯವನ್ನು ಹೇಳುವುದು ಅತ್ಯಂತ ಸಂಗತವಾಗುತ್ತದೆ. ಜೈಮಿನಿಗಳು ಹೇಳಿರುವ ಕಾಮಚಾರವನ್ನು ಹೇಳಿದಾಗ ಎಲ್ಲವನ್ನೂ ಜ್ಞಾನಿಯು ಸ್ವೇಚ್ಛೆಯಿಂದಲೇ ಮಾಡುವುದರಿಂದ ಸಾಮ್ಯಕ್ಕೆ ಅವಕಾಶವಿಲ್ಲ. ಆದ್ದರಿಂದ 'ಈದೃಶ ಏವ' ಎಂದು ಸಂಭವಜ್ಞಾಪನಮಾತ್ರ.)

ಭಗವದ್ಗೀತೆಯಲ್ಲಿ ಇದೇ ರೀತಿಯ ಕಾಮಚಾರವನ್ನು ಹೇಳಲಾಗಿದೆ— ಯಸ್ತು=ಯಾವ ಜ್ಞಾನಿಯು ಆತ್ಮರತಿರೇವ=ಪರಮಾತ್ಮನ ದರ್ಶನದಿಂದಾಗುವ ಸುಖವನ್ನು ಅನುಭವಿಸುತ್ತಿರುವನೋ, ಆತ್ಮತೃಪ್ತಃ=ಆತ್ಮನನ್ನು ಬಿಟ್ಟು ಇತರ ಕಾಮ್ಯವಸ್ತುಗಳಲ್ಲಿ ನಿಃಸ್ಪೃಹನಾಗಿರುವನೋ, ಆತ್ಮನ್ಯೇವ=ಪರಮಾತ್ಮನಲ್ಲೇ ಸಂತುಷ್ಟಃ= ತೃಪ್ತಿಗೆ ಕಾರಣವಾದ ಸುಖವನ್ನು ಅನುಭವಿಸುತ್ತಿರುವನೋ ತಸ್ಯ=ಅಂತಹ ಜ್ಞಾನಿಗೆ ಕಾರ್ಯಂ ನ ವಿದ್ಯತೇ=ಕರ್ತವ್ಯದ ನಿರ್ಬಂಧವಿಲ್ಲ.

ವಿವರಣೆ— ಜೈಮಿನಿಗಳ ಮತ ಮನುಷ್ಯರಿಗೆ ಸಂಬಂಧಿಸಿದೆ, ಬಾದರಾಯಣರ ಮತ ದೇವತೆಗಳಿಗೆ ಅನ್ವಯಿಸುತ್ತದೆ. ಹೀಗೆ ಅವೆರಡರಲ್ಲಿ ವಿರೋಧವಿಲ್ಲ. ಈ ಸೂತ್ರದಲ್ಲಿ ದೇವತೆಗಳಿಗೆ ಕಾಮಚಾರಾನುಜ್ಞೆಯನ್ನು ಹೇಳಲಾಗಿದೆ.

## ॥ ಓಂ ವಿಧಿರ್ವಾ ಧಾರಣವತ್ ಓಂ ॥ ೨೦ ॥

**'ಕೇನ ಸ್ಯಾದ್ ಯೇನ ಸ್ಯಾತ್' (ಬೃ.ಉ. 5.5.1) ಇತಿ ವಿಧಿರ್ವಾ । ಯಥಾ ವೇದಧಾರಣಂ ತ್ರೈವರ್ಣಿಕಾನಾಂ ವಿಹಿತಂ ನಾನ್ಯೇಷಾಮ್, ಏವಂ ಸ್ವಮತಾನುಸಾರಿಣೀ ಪ್ರವೃತ್ತಿರ್ಜ್ಞಾನಿನಾಂ ವಿಹಿತಾ । ನ ತತ್ರಾಧರ್ಮಶಂಕಾ ಕಾರ್ಯಾ, ನಾನ್ಯೇಷಾಮಿತಿ ವಾ ।**

**'ಸ್ವೇಚ್ಛಯೈವ ಪ್ರವೃತ್ತಿಸ್ತು ಬ್ರಹ್ಮಣೋ ವಿಧಿಚೋದಿತಾ ।**

**ನಾಶಂಕ್ಯಂ ತನ್ಮತಂ ಕ್ವಾಪಿ ವಿಷ್ಣೋಃ ಪ್ರತ್ಯಕ್ಷಚೋದನಾ ।**
**'ಇತರೇಷಾಂ ನ ವಿಹಿತಾ ಸ್ವೇಚ್ಛಾವೃತ್ತಿಃ ಕಥಂಚನ ॥'**

**ಇತಿಹಿ ಬ್ರಾಹ್ಮೇ ।**

'ಕೇನ ಸ್ಯಾತ್ ಯೇನ ಸ್ಯಾತ್' ಎಂದು ವಿಧಿಯೂ ಆಗಬಹುದು. ವೇದಧಾರಣಮ್=ಹೇಗೆ 'ಸ್ವಾಧ್ಯಾಯೋऽಧ್ಯೇತವ್ಯಃ' ಎಂಬುದು ಬ್ರಾಹ್ಮಣ-ಕ್ಷತ್ರಿಯ-ವೈಶ್ಯ ಈ ತ್ರೈವರ್ಣಿಕರಿಗೆ ವಿಧಿಯೋ, ಇತರರಿಗೆ ಈ ವಿಧಿ ಅನ್ವಯಿಸುವುದಿಲ್ಲವೋ, ಅದರಂತೆ ಸ್ವೇಚ್ಛಾನುಸಾರಿಯಾದ ಪ್ರವೃತ್ತಿಯು ಅಪರೋಕ್ಷಜ್ಞಾನಿಗಳಿಗೆ ಮಾತ್ರ ಈ ವಾಕ್ಯದಿಂದ ವಿಹಿತವಾಗಿದೆ. ಆದ್ದರಿಂದ ಜ್ಞಾನಿಗಳ ಪ್ರವೃತ್ತಿಗಳಲ್ಲಿ ಅಧರ್ಮಶಂಕೆಯನ್ನು ಮಾಡಬಾರದು. ಅಥವಾ ಜ್ಞಾನಿಗಳಲ್ಲದವರು ಸ್ವೇಚ್ಛಾನುಸಾರಿ ಪ್ರವೃತ್ತಿ ಮಾಡಬಾರದು. ಬ್ರಾಹ್ಮಪುರಾಣದಲ್ಲಿದೆ—ಚತುರ್ಮುಖಬ್ರಹ್ಮದೇವರಿಗೆ ಸ್ವೇಚ್ಛಾಪ್ರವೃತ್ತಿಯು ವಿಧಿ ವಿಹಿತವಾಗಿದೆ. ಆದ್ದರಿಂದ ಬ್ರಹ್ಮದೇವರ ಅಭಿಪ್ರಾಯವು ವೇದವಿರುದ್ಧವಾಗಿ ಕಂಡರೂ (ತನ್ನ ಮಗಳ ಮೇಲೆಯೇ ಮೋಹಕ್ಕೆ ಒಳಗಾದುದು.) ಅದರ ಬಗ್ಗೆ ಅಧರ್ಮ ಶಂಕೆಯನ್ನು ಮಾಡಬಾರದು. ಇದು ಮಾತ್ರವಲ್ಲದೆ ಬ್ರಹ್ಮದೇವರ ಪ್ರವೃತ್ತಿಗಳೆಲ್ಲವೂ ವಿಷ್ಣುವಿನ ನೇರವಾದ ಆದೇಶದಿಂದಾಗಿಯೇ ನಡೆಯುತ್ತದೆ. ಇತರರಿಗೆ ಎಂದೂ ಸ್ವೇಚ್ಛಾವೃತ್ತಿ ವಿಹಿತವಲ್ಲ.

**ವಿವರಣೆ—** ಹಿಂದೆ 'ಕೇನ ಸ್ಯಾತ್' ಎಂದು ವಿಧಿಯಲ್ಲ. ಮನುಷ್ಯರಿಗೆ ಸ್ತುತಿ ಅಥವಾ ದೇವತೆಗಳಿಗೆ ಅನುಮತಿ ಎನ್ನಲಾಗಿದೆ. ಇಲ್ಲಿ ಅದನ್ನು ವಿಧಿ ಎಂದೇ ಪರಿಗಣಿಸಲಾಗಿದೆ. ಸೂತ್ರದ ವಾಶಬ್ದದಿಂದ ಎಲ್ಲಾ ಜ್ಞಾನಿಗಳಿಗೂ ಸ್ವೇಚ್ಛಾಚಾರವು ವಿಹಿತವಲ್ಲ, ಕೆಲವರಿಗೆ ಮಾತ್ರ, ಎಂದು ಸೂಚಿಸಲಾಗಿದೆ. ಪ್ರಮಾಣವಾಕ್ಯದಲ್ಲಿ ಅದನ್ನು 'ಬ್ರಹ್ಮಣಃ' ಎಂದು ತಿಳಿಸಲಾಗಿದೆ. ಅಲ್ಲಿ ಬ್ರಹ್ಮಶಬ್ದವು ಉಪಲಕ್ಷಣ. ಇತರ ಕೆಲವು ದೇವತೆಗಳಿಗೂ ಅದು ಅನ್ವಯಿಸುತ್ತದೆ, ಎಂದು ತತ್ತ್ವಪ್ರಕಾಶಿಕಾದಲ್ಲಿ ಹೇಳಿದೆ.

## ॥ ಓಂ ಸ್ತುತಿಮಾತ್ರಮುಪಾದಾನಾದಿತಿ ಚೇನ್ನಾಪೂರ್ವತ್ವಾತ್ ಓಂ ॥ ೨೧ ॥

**ಸ್ತುತಿಮಾತ್ರಮೇವ ಸ್ವೇಚ್ಛಾಚರಣಮ್, ನ ವಿಧಿಃ, ತೈರಪಿ ಸಾಮಾನ್ಯವಿಧಿ ಸ್ವೀಕರಣಾದಿತಿ ಚೇತ್, ನ । ಅಪೂರ್ವತ್ವಾತ್=ಪರವಶತ್ವಾತ್ ।**

**ಸರ್ವವಿಧ್ಯತಿಕ್ರಮೇಣ ಸ್ತುತಿಮಾತ್ರವಿಷಯತ್ವಂ ಪರಬ್ರಹ್ಮಣ ಏವ ಹಿ ।**

**'ವಿಧೀನಾಂ ವಿಷಯಾಸ್ತ್ವನ್ಯೇ ಬ್ರಹ್ಮಣಃ ಸ್ವೇಚ್ಛಯಾ ಕೃತೌ ।**
**ಪರಸ್ಯ ಬ್ರಹ್ಮಣೋ ಹ್ಯೇವ ಸರ್ವವಿಧ್ಯತಿದೂರತಾ ॥'**

**ಇತಿಹಿ ಬ್ರಹ್ಮತರ್ಕೇ ।**

ಸ್ವೇಚ್ಛಾಚರಣೆಯು ಜ್ಞಾನಿಗಳಿಗೆ ಸ್ತುತಿಮಾತ್ರ, ವಿಧಿಯಲ್ಲ. ಉಪಾದಾನಾತ್= ಜ್ಞಾನಿಗಳು ಸಂಧ್ಯಾವಂದನಾದಿ ಸಾಮಾನ್ಯವಿಧಿಯನ್ನು ಒಪ್ಪಿಕೊಳ್ಳುತ್ತಾರೆ, ಆದ್ದರಿಂದ. ಹೀಗೆ ಹೇಳುವುದು ಸರಿಯಲ್ಲ. ಅಪೂರ್ವತ್ವಾತ್=ಭಗವದಧೀನರಾದುದರಿಂದ (ಜ್ಞಾನಿಗಳಾದರೂ ಭಗವಂತನ ನಿಯಮಕ್ಕೆ ಒಳಪಟ್ಟಿರುವುದರಿಂದ) ಭಗವದಾದೇಶ ರೂಪವಾದ ವಿಧಿಗೆ ಜ್ಞಾನಿಗಳೂ ಬದ್ಧರೇ ಆಗಿರುತ್ತಾರೆ. ಎಲ್ಲಾ ವಿಧಿಗಳನ್ನೂ ಮೀರಿ ಸ್ತುತಿಮಾತ್ರ ವಿಷಯವಾದವನು ಪರಬ್ರಹ್ಮ ಮಾತ್ರ. ಬ್ರಹ್ಮತರ್ಕದಲ್ಲಿ ಹೀಗೆ ಹೇಳಲಾಗಿದೆ– ಪರಮಾತ್ಮನ ಹೊರತಾಗಿ ಇತರರೆಲ್ಲರೂ ವಿಧಿಬದ್ಧರು. ಆದ್ದರಿಂದ ಸ್ವೇಚ್ಛಾಚಾರಕ್ಕೆ ಬ್ರಹ್ಮೋಪಲಕ್ಷಿತ ಜ್ಞಾನಿಗಳೇ ವಿಷಯರು. ಏಕೆಂದರೆ, ಬ್ರಹ್ಮನೊಬ್ಬನೇ ಸರ್ವವಿಧಿನಿಷೇಧಗಳನ್ನು ಮೀರಿದವನು.

**ವಿವರಣೆ**— ಜ್ಞಾನಿಗಳು 'ಅಹರಹಃ ಸಂಧ್ಯಾಮುಪಾಸೀತ' ಇತ್ಯಾದಿವಿಧಿಗಳಿಗೆ ಬದ್ಧರಾದ ಕಾರಣ 'ಕೇನ ಸ್ಯಾತ್' ಇತ್ಯಾದಿ ಸ್ವೇಚ್ಛಾಚಾರವಿಧಿಯು ಸ್ತುತಿ ಮಾತ್ರ, ಆದೇಶವಲ್ಲ. ಒಂದುವೇಳೆ 'ಕೇನ ಸ್ಯಾತ್' ಎಂಬ ಶ್ರುತಿಯು ಜ್ಞಾನಿಗಳು ವಿಧಿಯ ನಿರ್ಬಂಧವಿಲ್ಲದೆ ಸ್ವೇಚ್ಛೆಯಿಂದಲೇ ಸಂಧ್ಯಾದಿಕರ್ಮಗಳನ್ನು ಮಾಡುತ್ತಾರೆ, ಎಂದು ವಿಧಿಸಿದರೆ ಜ್ಞಾನಿಗಳು ಸಂಧ್ಯಾವಿಧಿವಾಕ್ಯವನ್ನು ಅನುಸರಿಸುವುದು ಯುಕ್ತವಾಗಲಿಕ್ಕಿಲ್ಲ. ಎಂದು ಪೂರ್ವಪಕ್ಷ. ಪರಮಾತ್ಮನು ಮಾತ್ರ ವಿಧಿ–ನಿಷೇಧಾತೀತ. ಇತರರು ಎಲ್ಲರೂ ವಿಧಿಬದ್ಧರು. 'ಕೇನ ಸ್ಯಾತ್' ಎಂಬ ಶ್ರುತಿ ಸ್ತುತಿ ಪರವೆಂದು ಪರಿಗಣಿಸಿದರೆ 'ಜ್ಞಾನಿಗಳು ಎಲ್ಲ ವಿಧಿ–ನಿಷೇಧಗಳನ್ನೂ ಮೀರಿದವರು' ಎಂದು ಆ ವಾಕ್ಯ ಜ್ಞಾನಿಗಳ ಸ್ತುತಿಮಾಡುತ್ತದೆ, ಎಂದು ಹೇಳಬೇಕು. ಆದರೆ ಅಂತಹ ವಿಧ್ಯತೀತತ್ವವು ಪರಮಾತ್ಮನ ಲಕ್ಷಣ. ಜ್ಞಾನಿಗಳು ಭಗವದಧೀನರು. ಅವರಲ್ಲಿ ಆ ಲಕ್ಷಣ ಬರಬಾರದು. ಆದ್ದರಿಂದ 'ಕೇನ ಸ್ಯಾತ್' ಎಂಬ ವಾಕ್ಯವು ವಿಧಿಯೇ ಹೊರತು ಸ್ತುತಿಯಲ್ಲ. ಸರ್ವವಿಧಿಗಳನ್ನೂ ಮೀರಿ ಸ್ತುತಿ ಮಾತ್ರ ವಿಷಯನಾದವನು ಪರಮಾತ್ಮ ಮಾತ್ರ. ಬೇರಾರೂ ಇಲ್ಲ.

ಉಪಾದಾನಾತ್, ಎಂಬ ಸೂತ್ರದ ಶಬ್ದವನ್ನು ತತ್ತ್ವಪ್ರದೀಪದಲ್ಲಿ ''ತೈಃ ಜ್ಞಾನಿಭಿರಪಿ ಜ್ಞಾನದಾನಾದಿಸಾಮಾನ್ಯ ವಿಧಿಸ್ವೀಕಾರಾತ್'' ಎಂದು ವಿವರಿಸಲಾಗಿದೆ.

ತತ್ತ್ವಪ್ರಕಾಶಿಕಾದಲ್ಲಿ–ಜ್ಞಾನಿಭಿರಪಿ ಸಂಧ್ಯಾಮುಪಾಸೀತ, ಇತ್ಯಾದಿ ಸರ್ವಜನಸಾಧಾರಣ ವಿಧಿಸ್ವೀಕಾರಾತ್–ಎಂದು ವಿವರಿಸಲಾಗಿದೆ.

ಅಪೂರ್ವತ್ವಾತ್ ಎನ್ನುವ ಸೂತ್ರಶಬ್ದದ ವಿವರಣೆ ತತ್ತ್ವಪ್ರದೀಪದಲ್ಲಿ ''ನಹಿ ಅಯಂ ವಿರಿಂಚಃ ಪೂರ್ವಂ=ಅನಾದಿಬ್ರಹ್ಮ ಭವತಿ। ಕಿಂತು ತಸ್ಯ ಬ್ರಹ್ಮಣಃ ವಶಗಃ' ಎಂದಿದೆ. ಪೂರ್ವ ಎಂದರೆ ಪರಮಾತ್ಮ. ಚತುರ್ಮುಖನು ಪೂರ್ವನಲ್ಲವಾದ ಕಾರಣ ಅಪೂರ್ವ. ಅರ್ಥಾತ್ ಪರಮಾತ್ಮಾಧೀನ ಎಂದರ್ಥ. ಭಾವಬೋಧಕಾರರು– ಅಃ=ಪರಃ ಪರಮಾತ್ಮಾ ಪೂರ್ವಃ=ನಿಯಾಮಕಃ ಯೇಷಾಂ=ಅಪೂರ್ವಾಃ'' ಎಂದು ಅರ್ಥ ಹೇಳಿದ್ದಾರೆ.

## ॥ ಓಂ ಭಾವಶಬ್ದಾಚ್ಚ ಓಂ ॥ ೨೨ ॥

'ಯಥಾವಿಧಾನಮಪರೇ ವಿಧಿರ್ಭಾವೇ ಪ್ರಜಾಪತೇಃ ।
ಬ್ರಹ್ಮಣಃ ಪರಮಸ್ಯೈವ ಸರ್ವವಿಧ್ಯತಿದೂರತಾ ॥'
ಇತಿ ಚ ತುರಶ್ರುತೌ ॥

ಇಚ್ಛಾರ್ಥಕಭಾವಶಬ್ದ ಘಟಿತವಾದ ಶ್ರುತಿ ಇರುವುದರಿಂದಲೂ 'ಕೇನ ಸ್ಯಾತ್' ಎನ್ನುವುದು ಜ್ಞಾನಿಗಳಿಗೆ ವಿಧಿರೂಪವಾದುದು, ಅನುಮತಿರೂಪವಲ್ಲ. ತುರಶ್ರುತಿ ಹೇಳುತ್ತದೆ–ಅಪರೇ=ಚತುರ್ಮುಖನ ಹೊರತಾದ ಜ್ಞಾನಿಗಳು, ಯಥಾವಿಧಾನಂ= ವಿಧಿ–ನಿಷೇಧಗಳಿಗೆ ಬದ್ಧರು. ಚತುರ್ಮುಖನಿಗೆ ಮಾತ್ರ 'ಕೇನ ಸ್ಯಾತ್' ಎಂಬ ವಿಧಿಯು ಭಾವೇ=ಇಚ್ಛಾಧೀನ ಆಚರಣೆಯನ್ನು ಹೇಳುತ್ತದೆ.

**ವಿವರಣೆ**— 'ಸ್ವೇಚ್ಛಾಚರಣೆಯು'ವಿಧಿ ಎನ್ನುವುದು ಸ್ಪಷ್ಟವಾದ ಪ್ರಮಾಣಗಳಿಂದ ಸಿದ್ಧವಾಗಿದ್ದಲ್ಲಿ ಅದು ಸ್ತುತಿಯಲ್ಲ, ವಿಧಿ ಎಂದು ಕಲ್ಪಿಸಬಹುದು. ಅಂತಹ ಪ್ರಮಾಣವಿದೆಯೇ? ಎಂದು ಜಿಜ್ಞಾಸೆ ಬಂದಾಗ ಇಚ್ಛಾರ್ಥಕ ಭಾವಶಬ್ದ ಘಟಿತವಾದ ಶ್ರುತಿ ಇದೆ, ಎಂದು ಈ ಸೂತ್ರದಲ್ಲಿ ತಿಳಿಸಲಾಗಿದೆ.

## ॥ ಓಂ ಪಾರಿಪ್ಲವಾರ್ಥಾ ಇತಿ ಚೇನ್ನ ವಿಶೇಷಿತತ್ವಾತ್ ಓಂ ॥ ೨೩ ॥

**'ಕೇನ ಸ್ಯಾದ್ ಯೇನ ಸ್ಯಾತ್' (ಬೃ.ಉ. 5.5.1) ಇತ್ಯಾದಯಃ ಸ್ಥಿರತ್ವನಿವೃತ್ತ್ಯರ್ಥಾ ಇತಿ ಚೇತ್, ನ ।**

**'ತ್ರೇಧಾ ಹಿ ಜ್ಞಾನಿನೋ– ವಿಧಿನಿಯತಾ, ಅನಿಯತಾಃ, ಸ್ವೇಚ್ಛಾನಿಯತಾ ಇತಿ । ವಿಧಿನಿಯತಾ ಮನುಷ್ಯಾ, ಅನಿಯತಾ ಹಿ ದೇವಾಃ, ಬ್ರಹ್ಮೈವ ಸ್ವೇಚ್ಛಾನಿಯತಃ' ಇತಿ ಗೌಪವನಶ್ರುತೌ ವಿಶೇಷಿತತ್ವಾತ್ ॥**

'ಕೇನ ಸ್ಯಾತ್' ಎಂಬ ಶ್ರುತಿಗೆ ವಿರುದ್ಧವಾದ ಅನೇಕಾರ್ಥಗಳನ್ನು ಹೇಳಿರುವುದರಿಂದ 'ಹೀಗೆ ಮಾಡಬೇಕು' ಎಂಬ ನಿರ್ಧಾರಿತಾರ್ಥವು ಇಲ್ಲದಂತಾಗುತ್ತದೆ ಎನ್ನಬಾರದು–ಜ್ಞಾನಿವಿಶೇಷಾನುಸಾರವಾಗಿ ಅದಕ್ಕೆ ವ್ಯವಸ್ಥಿತವಾದ ಅರ್ಥವನ್ನು ಹೇಳಬಹುದು. ಗೌಪವನಶ್ರುತಿಯಲ್ಲಿ ವ್ಯವಸ್ಥೆಯನ್ನು ಹೀಗೆ ಮಾಡಲಾಗಿದೆ– ಜ್ಞಾನಿಗಳು ಮೂರು ವಿಧವಾಗಿದ್ದಾರೆ–ಕೆಲವರು ವಿಧಿಬದ್ಧರು, ಇನ್ನು ಕೆಲವರು ವಿಧಿ ಬದ್ಧರಲ್ಲದವರು, ಮತ್ತೆ ಕೆಲವರು ಸ್ವೇಚ್ಛೆಯಿಂದಲೇ ವಿಹಿತಕಾರ್ಯವನ್ನು ಮಾಡುವವರು. ಮನುಷ್ಯರು ವಿಧಿನಿಯತರು. ವಿಹಿತವಾದುದನ್ನು ಅವರು ಮಾಡಲೇಬೇಕು. ದೇವತೆಗಳಿಗೆ ವಿಧಿಬಂಧವಿಲ್ಲ. ವಿಹಿತವಾದುದನ್ನು ಕೆಲವನ್ನು ಮಾಡುತ್ತಾರೆ ಅಥವಾ ಬಿಡುತ್ತಾರೆ. ಬ್ರಹ್ಮನು ಸ್ವೇಚ್ಛಾನಿಯತ. ವಿಧಿಯ ಒತ್ತಾಯದಿಂದ ಬ್ರಹ್ಮದೇವರು ನಿತ್ಯಕರ್ಮಗಳನ್ನು ಮಾಡುವುದಲ್ಲ. ಸ್ವೇಚ್ಛೆಯಿಂದಲೇ ಅವರು ವಿಹಿತವನ್ನು ಮಾಡುತ್ತಾರೆ.

**ವಿವರಣೆ**— ಮೊದಲು ಜೈಮಿನಿಗಳ ಅಭಿಪ್ರಾಯದಂತೆ ಕಾಮಚಾರವಿಧಿ ಸ್ತುತಿಮಾತ್ರ, ಜ್ಞಾನಿಗಳು ವಿಹಿತವಾದುದನ್ನು ಎಲ್ಲವನ್ನೂ ಮಾಡಬೇಕು, ಎಂದು ಹೇಳಲಾಯಿತು. ಎರಡನೆಯದಾಗಿ, 'ಯಸ್ತ್ವಾತ್ಮರತಿರೇವ ಸ್ಯಾತ್' ಎಂಬ ಪ್ರಮಾಣ ದಂತೆ ಸ್ವೇಚ್ಛಾಚರಣೆಯನ್ನು ಒಪ್ಪಿಕೊಳ್ಳಲಾಗಿದೆ (ಅನುಮತಿ). ಮತ್ತೆ ಕೊನೆಯಲ್ಲಿ ಇಚ್ಛಾನುಸಾರವಾಗಿ ಆಚರಣೆಯನ್ನು ವಿಧಿಸಲಾಗಿದೆ, ಎಂದು ಹೇಳಲಾಗಿದೆ. ಈ ಮೂರು ಅರ್ಥಗಳು ಪರಸ್ಪರ ವಿರುದ್ಧವಾಗಿವೆ. ಇಂತಹ ವಿರುದ್ಧವಾದ ಅರ್ಥವನ್ನು ಶ್ರುತಿ ಹೇಳಿದರೆ ಆಚರಣೆಯಲ್ಲಿ ಅವ್ಯವಸ್ಥೆಯಾಗುತ್ತದೆ, ಎಂದು ಪೂರ್ವಪಕ್ಷ. ಅದಕ್ಕೆ ಉತ್ತರ—ಒಬ್ಬನಿಗೇ ಈ ಮೂರನ್ನೂ ಹೇಳಿದರೆ ಅವ್ಯವಸ್ಥೆಯಾದೀತು. ಆದರೆ, ಜ್ಞಾನಿಗಳಲ್ಲಿ ಮೂರು ವರ್ಗವಿದೆ. ಮನುಷ್ಯಾಪರೋಕ್ಷಜ್ಞಾನಿಗಳು ವಿಹಿತವಾದ ಎಲ್ಲವನ್ನೂ ಮಾಡಬೇಕು. ದೇವತೆಗಳು, ವಿಹಿತದಲ್ಲಿ ತಮ್ಮಿಚ್ಛೆಯಂತೆ ನಡೆದುಕೊಳ್ಳಬಹುದು. ಬ್ರಹ್ಮದೇವರಿಗೆ ಇದು ಕಾಮಚಾರವಿಧಿ. ಅಂದರೆ ಅವರಿಗೆ ವಿಧಿ ಬಂಧವಿಲ್ಲದಿದ್ದರೂ ವಿಧ್ಯುಕ್ತವಾದ ಎಲ್ಲವನ್ನೂ ಅವರು ಸ್ವೇಚ್ಛೆಯಿಂದಲೇ ಮಾಡುತ್ತಾರೆ. ಹೀಗೆ, ಅಧಿಕಾರಿವಿಶೇಷದಿಂದ ಅವಿರೋಧವನ್ನು ಹೇಳಬೇಕು.

## ॥ ಓಂ ತಥಾಚೈಕವಾಕ್ಯೋಪಬಂಧಾತ್ ಓಂ ॥ ೨೪ ॥

**ಏವಂ ಸತಿ ವಿಧಿವಾಕ್ಯಾನಾಂ ಸ್ವೇಚ್ಛಾಪ್ರವೃತ್ತಿವಾಕ್ಯಾನಾಂ (ಚ) ಸಂಬಂಧೋ ಭವತಿ ॥**

ಹೀಗೆ ಜ್ಞಾನಿಗಳು ಮೂರುಗುಂಪಿನಲ್ಲಿ ವಿಂಗಡಿಸಲ್ಪಟ್ಟಿರುವುದರಿಂದ 'ಜ್ಞಾನೀ ಚ ಕರ್ಮಾಣಿ' ಎಂಬ ಕರ್ಮವಿಧಿವಾಕ್ಯ ಮತ್ತು 'ಸ್ವೇಚ್ಛಯೈವ ಪ್ರವೃತ್ತಿಸ್ತು' ಎಂದು ಹೇಳುವ ಸ್ವೇಚ್ಛಾಪ್ರವೃತ್ತಿವಾಕ್ಯಕ್ಕೂ ಅಭಿಪ್ರಾಯವಿರೋಧವಿಲ್ಲದೆ ಏಕವಾಕ್ಯತಾ ಸಂಬಂಧವು ಬರುತ್ತದೆ.

**ವಿವರಣೆ**—ಮನುಷ್ಯರು ಅಪರೋಕ್ಷಜ್ಞಾನಿಗಳಾದರೆ ಅವರಿಗೆ ಕರ್ಮದ ನಿರ್ಬಂಧವಿದೆ. ಅದನ್ನು ಜೈಮಿನಿಗಳು ಹೇಳಿದ್ದಾರೆ. 'ಜೈಮಿನ್ಯುಕ್ತಂ ಮಾನುಷಾಣಾಂ'. ಜ್ಞಾನಿಗಳಾದುದರಿಂದ ಮನುಷ್ಯರು ವಿಧಿಬಂಧರಹಿತರು. ಆದರೂ ಕರ್ತವ್ಯಕರ್ಮದ ನಿರ್ಬಂಧ ಅವರಿಗೆ ಇದೆ. ಕರ್ತವ್ಯವನ್ನು ಮಾಡದಿರುವುದರಿಂದ ಅವರಿಗೆ ಪಾಪಲೇಪವಿಲ್ಲವಾದ ಕಾರಣ ಅವರು ವಿಧಿಬಂಧರಹಿತರು. ಆದರೆ ಕರ್ತವ್ಯವನ್ನು ಮಾಡದಿದ್ದಲ್ಲಿ ಮೋಕ್ಷಸುಖದಲ್ಲಿ ಹ್ರಾಸವಾಗುತ್ತದೆ. ಆದ್ದರಿಂದ ಅವರೂ ವಿಧಿ ನಿಯತರು. (ಕಥಂವಿಧಿಬಂಧವರ್ಜಿತತ್ವಂ ವಿಧಿನಿಯತತ್ವಂ ವಿರುದ್ಧಂ ಏಕತ್ರ, ಇತಿ ಚೇನ್ನ! ಉಕ್ತಂ ಹಿ ವಿಧಿಬಂಧವರ್ಜಿತತ್ವಂ ಅಕರಣೇ ಪ್ರತ್ಯವಾಯಾಭಾವಾತ್ । ವಿಧಿ ನಿಯತತ್ವಂ ಅಕರಣೇ ಫಲಹ್ರಾಸಾತ್) ಆದ್ದರಿಂದ 'ಕೇನ ಸ್ಯಾತ್' ಎಂಬ ಶ್ರುತಿಯು ಮನುಷ್ಯರ ಬಗ್ಗೆ ಸುಖಾಧಿಕ್ಯಫಲಕ ವಿಧಿರೂಪವಾದುದು.

2. ಬಾದರಾಯಣರ ಮೊದಲ ಸಿದ್ಧಾಂತ—ದೇವತಾವಿಷಯ. ಅಪರೋಕ್ಷಜ್ಞಾನಿಗಳಾಗಿರುವ ದೇವತೆಗಳಿಗೆ ಅನುಷ್ಠೇಯ ಕರ್ಮಗಳ ಬಗ್ಗೆ ಮಾತ್ರ ಕಾಮಚಾರ. ನಿಷಿದ್ಧ ಬ್ರಾಹ್ಮಣಹನನಾದಿಗಳಲ್ಲಿ ಕಾಮಚಾರ ಇಲ್ಲ. ಅದನ್ನು 'ಯಸ್ತ್ವಾತ್ಮರತಿರೇವ' ಎಂಬ ಗೀತಾವಾಕ್ಯ ಹೇಳುತ್ತದೆ. ಹೀಗೆ, ದೇವತೆಗಳಿಗೆ 'ಕೇನ ಸ್ಯಾತ್' ಎಂಬ ಶ್ರುತಿಯು ಅನುಜ್ಞಾಬೋಧಕ.

3. ಪರಮಗುರುವಾದ ಪರಮೇಷ್ಠಿಯ ಬಗ್ಗೆ 'ಕೇನ ಸ್ಯಾತ್' ಎಂಬ ಶ್ರುತಿಯು ವಿಧಿರೂಪವಾಗಿ ಪರ್ಯವಸನ್ನವಾಗುತ್ತದೆ. ಚತುರ್ಮುಖಬ್ರಹ್ಮದೇವರು ವಿಹಿತ ಕರ್ಮಗಳನ್ನು 'ಸಂಧ್ಯಾಮುಪಾಸೀತ' ಎಂಬ ವಿಧಿ ಇದೆ ಎಂದು ಮಾಡಬಾರದು. ಸ್ವೇಚ್ಛೆಯಿಂದಲೇ ಮಾಡಬೇಕು, ಎಂದು. (ಕಾಮಿತಮೇವ ಆಚರಂತೀತಿ ।) ಇದು

'ವಿಧಿರ್ವಾ ಧಾರಣವತ್' ಎಂಬ ಸೂತ್ರದಲ್ಲಿ ಹೇಳಿರುವ ಬಾದರಾಯಣರ ಮತ್ತೊಂದು ಅಭಿಪ್ರಾಯ.

ಹೀಗೆ 'ಕೇನ ಸ್ಯಾತ್' ಎಂಬ ಶ್ರುತಿಗೆ ಅನಿಯತಾರ್ಥಕತ್ವಪ್ರಸಂಗ ಇಲ್ಲ.

**॥ ಓಂ ಅತ ಏವ ಚಾಗ್ನೀಂಧನಾದ್ಯನಪೇಕ್ಷಾ ಓಂ ॥ ೨೫ ॥**

**ಅತ ಏವ ಜ್ಞಾನಸ್ಯ ಮೋಕ್ಷದಾನೇ ನಾಗ್ನಿಹೋತ್ರಾದ್ಯಪೇಕ್ಷಾ । ಬ್ರಹ್ಮತರ್ಕೇ ಚ-**

**'ಯೇಷಾಂ ಜ್ಞಾನಂ ಸಮುತ್ಪನ್ನಂ ತೇಷಾಂ ಮೋಕ್ಷೋ ವಿನಿಶ್ಚಿತಃ ।**
**ಶುಭಕರ್ಮಭಿರಾಧಿಕ್ಯಂ ವಿಪರೀತೈರ್ವಿಪರ್ಯಯಃ ॥**

**ಸ್ವೇಚ್ಛಾನುವೃತ್ತ್ಯೈವ ಭವೇದ್ ಬ್ರಹ್ಮಣಃ ಪ್ರಾಯಶಸ್ತಥಾ ।**
**ದೇವಾನಾಮಪಿ ಸರ್ವೇಷಾಂ ವಿಶೇಷಾದುತ್ತರೋತ್ತರಮ್ ॥' ಇತಿ ।**

ಎಲ್ಲಾ ಜ್ಞಾನಿಗಳಿಗೂ ಸತ್ಕರ್ಮ ಮಾಡಿದರೂ, ದುಷ್ಕರ್ಮ ಮಾಡಿದರೂ, ಸತ್ಕರ್ಮವನ್ನು ಮಾಡದಿದ್ದರೂ ಜ್ಞಾನಶಕ್ತಿಗೆ ಹ್ರಾಸವಿಲ್ಲವಾದುದರಿಂದ ಮೋಕ್ಷವು ನಿಶ್ಚಿತ. (ಅತ ಏವ) ಆದ್ದರಿಂದ ಮೋಕ್ಷ ದೊರಕಿಸಿ ಕೊಡುವುದಕ್ಕಾಗಿ ಜ್ಞಾನಕ್ಕೆ ಅಗ್ನಿಹೋತ್ರಾದಿ ಕರ್ಮಗಳ ಸಹಾಯದ ಅಗತ್ಯವಿಲ್ಲ. (ನ ಅಗ್ನೀಂಧನಾದ್ಯಪೇಕ್ಷಾ) ಬ್ರಹ್ಮತರ್ಕದಲ್ಲಿ ಹೀಗಿದೆ—ಯಾರಿಗೆ ಬ್ರಹ್ಮಾಪರೋಕ್ಷವಾಗಿದೆಯೋ ಅವರಿಗೆ ಮೋಕ್ಷವು ನಿಶ್ಚಿತ. ಮನುಷ್ಯರಾದರೆ ಸತ್ಕರ್ಮದಿಂದ ಮೋಕ್ಷದಲ್ಲಿ ಸುಖಾಧಿಕ್ಯವಾಗುತ್ತದೆ, ಅಸತ್ಕರ್ಮದಿಂದ ಸುಖಹ್ರಾಸವಾಗುತ್ತದೆ. ಬ್ರಹ್ಮದೇವರಿಗೆ ಎಲ್ಲಾ ಸತ್ಕರ್ಮಗಳಲ್ಲೂ ಪ್ರವೃತ್ತಿಯು ಸ್ವೇಚ್ಛೆಯಿಂದಲೇ ಆಗುತ್ತದೆ, ದೇವತೆಗಳೂ ಪ್ರಾಯಶಃ ಸ್ವೇಚ್ಛೆಯಿಂದಲೇ ಸತ್ಕರ್ಮದಲ್ಲಿ ಪ್ರವೃತ್ತಿ ಮಾಡುತ್ತಾರೆ. ಅವರ ಯೋಗ್ಯತೆಯು ಹೆಚ್ಚಿದಂತೆಲ್ಲ ಸ್ವೇಚ್ಛಾದಿಂದ ಹೆಚ್ಚು ಹೆಚ್ಚು ಕರ್ಮದಲ್ಲಿ ಪ್ರವೃತ್ತಿಯಾಗಿ ಸುಖೋತ್ಕರ್ಷವು ಹೆಚ್ಚುತ್ತಾ ಹೋಗುತ್ತದೆ.

**॥ ಓಂ ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇರಶ್ವವತ್ ಓಂ ॥ ೨೬ ॥**

**ಸರ್ವಧರ್ಮಾಪೇಕ್ಷಾ ಚ ಜ್ಞಾನಸ್ಯೋತ್ಪತ್ತೌ 'ವಿವಿದಿಷಂತಿ ಯಜ್ಞೇನ ದಾನೇನ ತಪಸಾऽನಾಶಕೇನ' (ಬೃ.ಉ. 6.4.22) ಇತಿ ಶ್ರುತೇಃ । ಯಥಾ ಗತಿನಿಷ್ಪತ್ತ್ಯರ್ಥಮಶ್ವಾದಯೋऽಪೇಕ್ಷ್ಯಂತೇ ನ ವಿನಿಷ್ಪನ್ನಗತೇರ್ಗ್ರಾಮಾದಿ-ಪ್ರಾಪ್ತೌ ॥**

ವರ್ಣಾಶ್ರಮಧರ್ಮಗಳ ಅಪೇಕ್ಷೆ ಅಪರೋಕ್ಷಜ್ಞಾನದ ಉತ್ಪತ್ತಿಗಾಗಿ. ಬೃಹದಾರಣ್ಯಕಶ್ರುತಿ ಹೀಗಿದೆ—ಯಾರು ಪರಮಾತ್ಮನನ್ನು ನೋಡಲು ಬಯಸುವರೋ ಅವರು ಯಜ್ಞದಿಂದ, ದಾನದಿಂದ, ತಪಸ್ಸಿನಿಂದ, ನಿರಶನದಿಂದ ಇರಬೇಕು. (ಏತಮೇವ ವಿದಿತ್ವಾ ಮುನಿರ್ಭವತಿ–ಯಜ್ಞಾದಿಗಳನ್ನು ಆಚರಿಸಿ ಭಗವದ್ದರ್ಶನವನ್ನು ಪಡೆದವನು ಮುನಿ ಎನಿಸುತ್ತಾನೆ.) ಹೇಗೆಂದರೆ ಮನೆ (ಗ್ರಾಮ) ತಲುಪಲು ಕುದುರೆ ಮುಂತಾದ ವಾಹನಗಳು ಬೇಕು, ಮನೆ (ಗ್ರಾಮ) ತಲುಪಿದ ಮೇಲೆ ಅದರ ಅಗತ್ಯವಿಲ್ಲ.

ವಿವರಣೆ— ಜ್ಞಾನಿಗಳು ಮಾಡಿದ ನಿಷಿದ್ಧಕರ್ಮದಿಂದ ಮೋಕ್ಷಕ್ಕೆ ಹಾನಿ ಇಲ್ಲದಿದ್ದರೂ ಸತ್ಕರ್ಮಗಳು ಜ್ಞಾನದ ಜೊತೆಯಲ್ಲಿ ಮೋಕ್ಷಕ್ಕೆ ಕಾರಣವಾಗಬಹುದು ಎಂಬ ಜಿಜ್ಞಾಸೆಗೆ ಈ ಸೂತ್ರದ ಉತ್ತರ–ಮನೆ ತಲುಪಲು ವಾಹನಗಳ ಅಗತ್ಯವಿದೆ. ತಲುಪಿದ ಮೇಲೆ ವಾಹನ ಬೇಕಿಲ್ಲ. ಅದರಂತೆ, ಅಪರೋಕ್ಷಜ್ಞಾನ ಬರಬೇಕಾದರೆ ಯಜ್ಞಾದಿಸತ್ಕರ್ಮಗಳು ಬೇಕು. ಅಪರೋಕ್ಷವಾದ ಮೇಲೆ ಅದಾವುದರ ಅಗತ್ಯವೂ ಇಲ್ಲ. ಆದ್ದರಿಂದ ಕರ್ಮವು ಅಪರೋಕ್ಷಜ್ಞಾನದ ಉತ್ಪತ್ತಿಗೆ ಪ್ರಯೋಜಕವಾಗುತ್ತದೆ. ಮೋಕ್ಷವು ಜ್ಞಾನದಿಂದಲೇ ಆಗುತ್ತದೆ. ಅದಕ್ಕೆ ಕರ್ಮದ ಅಗತ್ಯವಿಲ್ಲ. ಆದರೂ ಮನುಷ್ಯರು ವಿಹಿತಕರ್ಮ ಮಾಡದಿದ್ದಲ್ಲಿ ಆನಂದಹ್ರಾಸವಾಗುತ್ತದೆ.

**॥ ಓಂ ಶಮದಮಾದ್ಯುಪೇತಃ ಸ್ಯಾತ್ ತಥಾಽಪಿ ತು ತದ್ವಿಧೇಸ್ತದಂಗತಯಾ ತೇಷಾಮವಶ್ಯಾನುಷ್ಠೇಯತ್ವಾತ್ ಓಂ ॥ ೨೭॥**

**ಯದ್ಯಪಿ ಜ್ಞಾನೇನೈವ ಮೋಕ್ಷೋ ನಿಯತಸ್ತಥಾಽಪಿ ಜ್ಞಾನೀ ಶಮದಮಾದ್ಯುಪೇತಃ ಸ್ಯಾತ್ ।**

**'ಆಚಾರ್ಯಾದ್ ವಿದ್ಯಾಮವಾಪ್ಯೈತಮಾತ್ಮಾನಮಭಿಪಶ್ಯ ಶಾಂತೋ ಭವೇದ್ ದಾಂತೋ ಭವೇದನುಕೂಲೋ ಭವೇದಾಚಾರ್ಯಂ ಪರಿಚರೇತ್ ಪರಿಚರೇದಾಚಾರ್ಯಮ್'**

**ಇತಿ ಮಾಠರಶ್ರುತೌ ಜ್ಞಾನಿನೋಽಪಿ ತದ್ವಿಧೇಃ ।**

**'ಬ್ರಾಹ್ಮೀಂ ವಾವ ತ ಉಪನಿಷದಮಬ್ರೂಮೇತಿ । ತಸ್ಯೈ ತಪೋ ದಮಃ ಕರ್ಮೇತಿ ಪ್ರತಿಷ್ಠಾ । ವೇದಾಃ ಸರ್ವಾಂಗಾನಿ ಸತ್ಯಮಾಯತನಮ್ ।**

ಯೋ ವಾ ಏತಾಮೇವಂ ವೇದ' (ಕೇನ. 4. 7,8,9)

ಇತಿ ಜ್ಞಾನಾಂಗತಯಾ ತೇಷಾಮವಶ್ಯಾನುಷ್ಠೇಯತ್ವಾತ್ ।

'ಯಸ್ಯ ಜ್ಞಾನಂ ತಸ್ಯ ಮೋಕ್ಷ ಇತಿ ನಾತ್ರ ವಿಚಾರಣಾ ।
ತಸ್ಯ ಶಾಂತ್ಯಾದಯೋಽಂಗಾನಿ ತಸ್ಮಾತ್ ತೇಷಾಮನುಷ್ಠಿತಿಃ ।
ಅವಶ್ಯಕರಣೀಯಾ ಸ್ಯಾದನ್ಯಥಾಽಲ್ಪಫಲಂ ಭವೇತ್ ॥'

ಇತಿ ಚಾಽಗ್ನೇಯೇ ।

ತುಶಬ್ದಃ ಪೂರ್ಣಫಲಾರ್ಥತ್ವಂ ಸೂಚಯತಿ ।

ವಸ್ತುತಃ ಜ್ಞಾನದಿಂದಲೇ ಮೋಕ್ಷವು ನಿಶ್ಚಿತ. ಆದರೂ ಜ್ಞಾನಿಯು ಶಮ-ದಮಾದಿ ಗುಣಗಳಿಂದ ಸಂಪನ್ನನಾಗಿರಬೇಕು. ಮಾಠರಶ್ರುತಿಯಲ್ಲಿ ಶಮಾದಿಗುಣಗಳನ್ನೂ ವಿಧಾನ ಮಾಡಿರುವುದರಿಂದ. ತಲವಕಾರೋಪನಿಷತ್ತಿನಲ್ಲಿ ಜ್ಞಾನಾಂಗವಾಗಿ ಶಮಾದಿಗಳು ಅವಶ್ಯಾನುಷ್ಠೇಯವೆಂದು ಹೇಳಲಾಗಿದೆ. ಅಗ್ನಿಪುರಾಣದ ವಚನ ಹೀಗಿದೆ— ಯಾರಿಗೆ ಅಪರೋಕ್ಷಜ್ಞಾನವು ಬಂದಿದೆಯೋ ಅವನಿಗೇ ಮೋಕ್ಷ. ಈ ಬಗ್ಗೆ ವಿಚಾರಮಾಡಬೇಕಾಗಿಯೇ ಇಲ್ಲ. ಅಂತಹ ಜ್ಞಾನಕ್ಕೆ ಶಮಾದಿಗುಣಗಳು ಅಂಗಗಳು. ಆದ್ದರಿಂದ ಶಮಾದ್ಯನುಷ್ಠಾನವನ್ನೂ ಮಾಡಬೇಕು. ಸೂತ್ರದ 'ತು' ಶಬ್ದವು ಶಮಾದಿಗಳ ಪ್ರಯೋಜನ-ಪರಿಪೂರ್ಣವಾದ ಮೋಕ್ಷಲಾಭ, ಎಂದು ಸೂಚಿಸುತ್ತದೆ.

ಶ್ರುತ್ಯರ್ಥ—ಗುರುಗಳಿಂದ ಬ್ರಹ್ಮವಿದ್ಯೆಯನ್ನು ಪಡೆದು ಈ ಪರಮಾತ್ಮನನ್ನು ಅಪರೋಕ್ಷೀಕರಿಸಬೇಕು. ಅಂತಹ ಅಪರೋಕ್ಷಿಯು ಶಾಂತನಾಗಿಯೂ ದಾಂತನಾಗಿಯೂ ಇರಬೇಕು. ಆಚಾರ್ಯರಿಗೆ ಅನುಕೂಲನಾಗಿರಬೇಕು. ಗುರುಗಳ ಸೇವೆಯನ್ನು ಮಾಡುತ್ತಿರಬೇಕು.'

ಶಮ-ದಮ-ಉಪರಮ-ತಿತಿಕ್ಷಾ-ಕ್ಷಮಾ ಈ ಗುಣಗಳು ಜ್ಞಾನಿಯಲ್ಲಿರಬೇಕು. ಶಬ್ದನಿರ್ಣಯದಲ್ಲಿ ಇವುಗಳ ಅರ್ಥವನ್ನು ಹೇಳಲಾಗಿದೆ—

ಶಾಂತಿಸ್ತು ಭಗವನ್ನಿಷ್ಠಾ ದಮೋ ಮದವಿನಿಗ್ರಹಃ ।
ಹೃದಿಸ್ಥವಿಷ್ಣೌ ಸಂತೋಷಃ ಸದೈವೋಪರಮಃ ಸ್ಮೃತಃ ॥
ತಿತಿಕ್ಷಾ ದ್ವಂದ್ವಸಹನಾ ಕ್ಷಮಾ ಕ್ರೋಧಾಸಮುತ್ಥಿತಿಃ ॥

ಶಮ ಎಂದರೆ ಮನಸ್ಸನ್ನು ಭಗವಂತನಲ್ಲಿ ನೆಲೆಗೊಳಿಸುವುದು. ದಮ ಎಂದರೆ

ಇಂದ್ರಿಯನಿಗ್ರಹ. ಹೃದಯಸ್ಥನಾದ ಭಗವನ್ಮೂರ್ತಿಯ ದರ್ಶನದಿಂದ ಬರುವ ಸಂತೋಷವೇ ಉಪರಮ. ತಿತಿಕ್ಷಾ ಎಂದರೆ ಸುಖ–ದುಃಖ, ಶೀತೋಷ್ಣ ಈ ದ್ವಂದ್ವಗಳನ್ನು ಸಹಿಸಿಕೊಳ್ಳುವುದು. ಕ್ಷಮಾ ಎಂದರೆ ಸಿಟ್ಟು ಬರದಿರುವುದು.

2. ತಲವಕಾರದಲ್ಲಿ ''ಉಪನಿಷದಂ ಭೋ ಬ್ರೂಹಿ'' ಎಂಬ ರುದ್ರದೇವರ ಪ್ರಾರ್ಥನೆಗೆ ಬ್ರಹ್ಮದೇವರ ಮಾತು ಹೀಗಿದೆ—ಬ್ರಹ್ಮನಿಗೆ ಸಂಬಂಧಿಸಿರುವ ರಹಸ್ಯ ವಿದ್ಯೆಯನ್ನು ಈಗಾಗಲೇ ಹೇಳಿದ್ದೇವೆ. ಆ ವಿದ್ಯೆಗೆ ತಪಸ್ಸು, ದಮ, ಕರ್ಮ ಇವುಗಳು ಪ್ರತಿಷ್ಠಾಹೇತುಗಳು. ಇವುಗಳಿದ್ದರೆ ಬ್ರಹ್ಮಜ್ಞಾನವು ಸ್ಥಿರವಾಗಿ ಉಳಿಯುತ್ತದೆ. ವೇದ–ವೇದಾಂಗಗಳು, ಮೀಮಾಂಸಾ ಇವು ಆ ಬ್ರಹ್ಮವಿದ್ಯೆಯ ಉಗಮಸ್ಥಾನಗಳು.

ಅಪರೋಕ್ಷಜ್ಞಾನದ ವೃದ್ಧಿಗಾಗಿ ಶಮಾದಿಗಳು ಬೇಕು, ಎಂದು ತತ್ತ್ವಪ್ರದೀಪದಲ್ಲಿ ಹೇಳಿದೆ—''ಉತ್ಪನ್ನಜ್ಞಾನಸ್ಯಾಪಿ ಜ್ಞಾನವೃದ್ಧ್ಯರ್ಥಂ ಶಮಾದೀನಾಮ್ ಅವಶ್ಯಾನುಷ್ಠೇಯತ್ವಮ್।''

## ॥ ಓಂ ಸರ್ವಾನ್ನಾನುಮತಿಶ್ಚ ಪ್ರಾಣಾತ್ಯಯೇ ತದ್ದರ್ಶನಾತ್ ಓಂ ॥ ೨೮ ॥

**'ಯದಿ ಹ ವಾ ಏವಂವಿನ್ನಿಖಿಲಂ ಭಕ್ಷಯೀತ ಏವಮೇವ ಸ ಭವತಿ'**
**ಇತಿ ಸರ್ವಾನ್ನಾನುಮತಿಃ ಪ್ರಾಣಾತ್ಯಯವಿಷಯಾ ।**
**'ನ ವಾ ಅಜೀವಿಷ್ಯಮಿಮಾನಖಾದನ್ನಿತಿ ಹೋವಾಚ**
**ಕಾಮೋ ಮ ಉದಪಾನಮ್' (ಛಾಂ.ಉ. 1.10.4)**
**ಇತಿ ದರ್ಶನಾತ್ ॥**

''ಬ್ರಹ್ಮಜ್ಞಾನಿಯಾದವನು ಏನು ಬೇಕಾದರೂ ತಿನ್ನಬಹುದು. ಅದರಿಂದಾಗಿ ಅವನ ಜ್ಞಾನಕ್ಕೆ ಕುಂದಿಲ್ಲ. ಅವನು ಜ್ಞಾನಿಯಾಗಿಯೇ ಉಳಿಯುತ್ತಾನೆ, ಎಂದು ಶ್ರುತಿ ಇದೆ. ಇಲ್ಲಿ ಜ್ಞಾನಿಗೆ ಎಲ್ಲವನ್ನೂ (ನಿಷಿದ್ಧವಾದುದನ್ನು) ತಿನ್ನುವ ಅನುಮತಿಯನ್ನು ಕೊಡಲಾಗಿದೆ. ಇದು ಪ್ರಾಣಹೋಗುವಂತಹ ಆಪತ್ಕಾಲ ಬಂದಾಗ ಮಾತ್ರ. ಏಕೆಂದರೆ, ಚಾಕ್ರಾಯಣನೆಂಬ ಬ್ರಹ್ಮಜ್ಞಾನಿಯು ಇಭ್ಯನು ಕೊಟ್ಟ ಉಚ್ಛಿಷ್ಟವಾದ ಉದ್ದನ್ನು ತಿಂದ. ನೀರು ಉಚ್ಛಿಷ್ಟ, ಎಂದು ನಿರಾಕರಿಸಿದ. ಆಗ ಇಭ್ಯ ಕೇಳುತ್ತಾನೆ—ಉದ್ದೂ ನನ್ನ ಎಂಜಲು. ಅದನ್ನು ಹೇಗೆ ತಿಂದೆ?' ಚಾಕ್ರಾಯಣ ಹೇಳುತ್ತಾನೆ—''ನ ವಾಹಂ ಅಜೀವಿಷ್ಯಮ್ ಇಮಾನ್ ಅಖಾದನ್ನಿತಿ ಹೋವಾಚ, ಕಾಮೋ ಮ ಉದಪಾನಮ್

ಇತಿ– ಈ ಉದ್ದನ್ನು ತಿನ್ನದಿರುತ್ತಿದ್ದರೆ ನನ್ನ ಪ್ರಾಣ ಉಳಿಯುತ್ತಿರಲಿಲ್ಲ. ಅದನ್ನು ತಿಂದು ಪ್ರಾಣಾಪಾಯದಿಂದ ಪಾರಾಗಿದ್ದೇನೆ. ಇನ್ನು ನೀರು ಕುಡಿಯುವುದು, ಪ್ರಾಣರಕ್ಷಣೆಗಾಗಿ ಅಲ್ಲ, ನನ್ನ ಆಸೆಗಾಗಿ'' ಛಾಂದೋಗ್ಯದಲ್ಲಿ ನಿರೂಪಿತವಾಗಿರುವ ಈ ಘಟನೆಯಿಂದ ತಿಳಿದು ಬರುವ ಅಂಶ– ಸರ್ವಭಕ್ಷಣಾನುಮತಿ 'ಅಖಿಲಂ ಭಕ್ಷಯೀತ–ಎಂಬುದು ಪ್ರಾಣಾಪಾಯದ ಆಪತ್ಕಾಲದಲ್ಲಿ ಮಾತ್ರ. ಬೇರೆ ಸಂದರ್ಭದಲ್ಲಿ ಜ್ಞಾನಿಯೂ ಆಹಾರನಿಯಮವನ್ನು ಪಾಲಿಸಬೇಕು. (ಇಭ್ಯ ಎಂದರೆ ಆನೆಸಾಕುವವ. ಅವನು ಆನೆಗಾಗಿ ನೀರಿಗೆ ಹಾಕಿದ ಕೆಟ್ಟುಹೋದ ಉದ್ದು ಕುಲ್ಮಾಷ–ಕುತ್ಸಿತಮಾಷ.)

## ॥ ಓಂ ಅಬಾಧಾಚ್ಚ ಓಂ ॥ ೨೯ ॥

**'ಅನ್ಯಾಯ್ಯಚರಣಾಭಾವೇ ನಹಿ ಜ್ಞಾನಸ್ಯ ಬಾಧನಮ್ ।**
**ಅತೋ ವಿದ್ವಾನಪಿ ನ್ಯಾಯ್ಯಂ ವರ್ತೇತೋತ್ಕರ್ಷಸಿದ್ಧಯೇ ॥'**
**ಇತಿ ಚ ಬ್ರಹ್ಮತರ್ಕೇ ।**

(ಜ್ಞಾನಿಯು ನಿಷಿದ್ಧವಾದ ಕಾರ್ಯವನ್ನು ಮಾಡದಿರಲು ಬಾಧಕವು ಇಲ್ಲದಿರುವುದರಿಂದ ಅವನು ನಿಷಿದ್ಧವನ್ನು ಮಾಡಬಾರದು.) ಬ್ರಹ್ಮತರ್ಕದಲ್ಲಿ ಹೀಗಿದೆ— ಕೆಟ್ಟಕಾರ್ಯವನ್ನು ಮಾಡದೆ ಇದ್ದಲ್ಲಿ ಜ್ಞಾನಕ್ಕೇನೂ ಚ್ಯುತಿ ಇರುವುದಿಲ್ಲ. ಆದ್ದರಿಂದ ಜ್ಞಾನಿಯೂ ಅನಿಷಿದ್ಧವನ್ನೇ ಮಾಡುತ್ತಿರಬೇಕು. ಇದರಿಂದ ಜ್ಞಾನದಲ್ಲಿ ಮತ್ತು ಮೋಕ್ಷದಲ್ಲಿ ಅತಿಶಯವು ಸಿದ್ಧವಾಗುತ್ತದೆ. ಅಷ್ಟೇ ಅಲ್ಲ, ನಿಷಿದ್ಧವಾದುದನ್ನು ಮಾಡಲು ಪ್ರಮಾಣವೂ ಇಲ್ಲ.

## ॥ ಓಂ ಅಪಿ ಸ್ಮರ್ಯತೇ ಓಂ ॥ ೩೦ ॥

**'ಅತೀತಾನಾಗತಜ್ಞಾನೀ ತ್ರೈಲೋಕ್ಯೋದ್ಧರಣಕ್ಷಮಃ ।**
**ಏತಾದೃಶೋಽಪಿ ನಾಽಚಾರಂ ಶ್ರೌತಂ ಸ್ಮಾರ್ತಂ ವಿವರ್ಜಯೇತ್**
**(ಪರಿತ್ಯಜೇತ್) ॥' ಇತಿ ಹರಿವಂಶೇಷು ।**

ಜ್ಞಾನಿಯು ಆಚಾರಶೀಲನಾಗಿಯೇ ಇರಬೇಕೆಂದು ಸ್ಮೃತಿಯೂ ಇದೆ. ಹರಿವಂಶದಲ್ಲಿ ಹೀಗಿದೆ—ಭೂತ–ವರ್ತಮಾನಗಳ ಜ್ಞಾನಿಯಾಗಿ ಮೂರುಲೋಕಗಳನ್ನು ಉದ್ಧಾರಮಾಡುವ ಸಾಮರ್ಥ್ಯ ಇದ್ದರೂ ಅಂತಹವನೂ ಸದಾಚಾರವನ್ನು ಬಿಡಬಾರದು. ಶ್ರುತಿ–ಸ್ಮೃತ್ಯುಕ್ತವಾದ ಆಚಾರಗಳನ್ನು ಮಾಡುತ್ತಲಿರಬೇಕು.

**|| ಓಂ ಶಬ್ದಶ್ಚಾತೋಽಕಾಮಕಾ(ಚಾ)ರೇ ಓಂ || ೩೧ ||**

**'ಸ ಯ ಏತದೇವಂವಿದೇವಂ ಮನ್ವಾನ ಏವಂ ಪಶ್ಯನ್ ನ ಕಾಮಚರಿತಂ ಚರೇನ್ನ ಕಾಮಂ ಭಕ್ಷಯೀತ ನ ಕಾಮಮನುವರ್ತೇತ'**

**ಇತಿ ಕೌಂಡಿನ್ಯಶ್ರುತೌ।**

**ಅತ ಇತ್ಯಲ್ಪಫಲತ್ವಂ ಸೂಚಯತಿ ।**

**'ನ ನಿಷಿದ್ಧಾನಿ ವರ್ತೇತ ಪೂರ್ಣಜ್ಞಾನಫಲೇಚ್ಛಯಾ ।'**

**ಇತಿ ಚ ಪಾದ್ಮೇ॥**

ಜ್ಞಾನಿಯು ಕಾಮಚಾರಿಯಾಗಿರಬಾರದು, ಎನ್ನಲು ಶ್ರುತಿಯೂ ಇದೆ— ಯಾರು ಬ್ರಹ್ಮಜ್ಞಾನಿಯಾಗಿರುವನೋ, ಮನನಶೀಲನೋ, ಬ್ರಹ್ಮದರ್ಶಿಯೋ ಅವನು ಮನಬಂದಂತೆ ಆಚಾರವನ್ನು ಮಾಡಬಾರದು. ಇಷ್ಟಬಂದಂತೆ ತಿನ್ನಬಾರದು. ಇಚ್ಛೆಬಂದಂತೆ ಇರಬಾರದು.

ಸೂತ್ರದ 'ಅತಃ' ಎಂಬ ಶಬ್ದವು ವಿಧಿಪರಿಪಾಲನೆಯಿಂದ ಅಲ್ಪವಾದ ಫಲವೂ ಜ್ಞಾನಿಗೆ ಇದೆ ಎಂದು ಸೂಚಿಸುತ್ತದೆ. ಅಥವಾ ನಿಷಿದ್ಧಾಚರಣೆಯಿಂದ ಅಲ್ಪಅನರ್ಥವನ್ನು ಸೂಚಿಸುತ್ತದೆ—ಜ್ಞಾನಿಯು ನಿಷಿದ್ಧವಾದುದನ್ನು ಮಾಡಬಾರದು. ಅದರಿಂದ ಜ್ಞಾನದ ಫಲವು ಪೂರ್ಣವಾಗಿ ಅವನಿಗೆ ದೊರಕುತ್ತದೆ, ಇದು ಪಾದ್ಮವಚನ.

**|| ಓಂ ವಿಹಿತತ್ವಾಚ್ಚಾಽಶ್ರಮಕರ್ಮಾಪಿ ಓಂ || ೩೨ ||**

**ನ ಕೇವಲಂ ನಿಷಿದ್ಧಾಕರಣೇನ ಪೂರ್ಯತೇ । ಕರ್ತವ್ಯಂ ಚ ವರ್ಣಾಶ್ರಮವಿಹಿತಂ ಕರ್ಮ ।**

**'ಪಶ್ಯನ್ನಪೀಮಮಾತ್ಮಾನಂ ಕುರ್ಯಾತ್ ಕರ್ಮಾವಿಚಾರಯನ್ ।**
**ಯದಾತ್ಮನಃ ಸುನಿಯತಮಾನಂದೋತ್ಕರ್ಷಮಾಪ್ನುಯಾತ್ ॥'**

**ಇತಿ ಕೌಷಾರವಶ್ರುತೌ ವಿಹಿತತ್ವಾಚ್ಚ ।**

**ಅಪಿಶಬ್ದೋ ವರ್ಣಧರ್ಮಸಮುಚ್ಚಯಾರ್ಥಃ ॥**

ನಿಷಿದ್ಧವಾದುದನ್ನು ಮಾಡಬಾರದು. ಮಾತ್ರವಲ್ಲ, ವರ್ಣಾಶ್ರಮ ವಿಹಿತವಾದುದನ್ನು ಮಾಡಬೇಕು. ಕೌಷಾರವಶ್ರುತಿಯಲ್ಲಿ ಕರ್ಮವು ವಿಹಿತವಾಗಿದೆ. ಈ

ಭಗವಂತನನ್ನು ನೋಡಿದರೂ ವಿಚಾರಮಾಡದೇ ವಿಹಿತಕರ್ಮವನ್ನು ಮಾಡಲೇಬೇಕು. ಜ್ಞಾನಿಯಾದ ಆತ್ಮನಿಗೆ ನಿಯತವಾದ ಆನಂದದ ಉತ್ಕರ್ಷವು ಅದರಿಂದ ಸಿಗುತ್ತದೆ. ಸೂತ್ರದ ಅಪಿಶಬ್ದದಿಂದ ಸೂತ್ರೋಕ್ತವಾದ ಆಶ್ರಮಧರ್ಮದೊಂದಿಗೆ ವರ್ಣಧರ್ಮ ವನ್ನೂ ಸಮುಚ್ಚಯ ಮಾಡಲಾಗಿದೆ. (ಆದ್ದರಿಂದ ಜ್ಞಾನಿಯಾದವನು ತನ್ನ ಜಾತಿಧರ್ಮವನ್ನೂ ತಾನು ಬ್ರಹ್ಮಚಾರಿಯೋ, ಗೃಹಸ್ಥನೋ ಆ ಆಶ್ರಮಕ್ಕೆ ವಿಹಿತವಾದ ಧರ್ಮವನ್ನೂ ಮಾಡಬೇಕು.)

## ॥ ಓಂ ಸಹಕಾರಿತ್ವೇನ ಚ ಓಂ ॥ 33 ॥

'ಯಥಾ ರಾಜ್ಞಃ ಸಹಕಾರ್ಯೇವ ಮಂತ್ರೀ ।
ತಥಾऽಪ್ಯೃತೇ ತಂ ಕ್ಷಿತಿಪಃ ಕಾರ್ಯಮೃಚ್ಛೇತ್ ।
ಏವಂ ಜ್ಞಾನಂ ಕರ್ಮ ವಿನಾऽಪಿ ಕಾರ್ಯಂ
ಸಹಾಯಭೂತಂ ನ ವಿಚಾರಃ ಕುತಶ್ಚಿತ್' ॥

ಇತಿ ಕಮಠಶ್ರುತೌ ಸಹಕಾರಿತ್ವೋಕ್ತೇಶ್ಚ ।

'ಜ್ಞಾನಾನ್ಮೋಕ್ಷೋ ಭವತ್ಯೇವ ಸರ್ವಾಕಾರ್ಯಕೃತೋऽಪಿ ತು ।
ಆನಂದೋ ಹ್ರಸತೇऽಕಾರ್ಯಾಚ್ಛುಭಂ ಕೃತ್ವಾ ಚ ವರ್ಧತೇ ॥'

ಇತಿ ಚ ಬ್ರಹ್ಮಾಂಡೇ ।

'ಸರ್ವದುಃಖನಿವೃತ್ತಿಸ್ತು ಜ್ಞಾನಿನೋ ನಿಶ್ಚಿತೈವ ಹಿ ।
ಉಪಾಸಯಾ ಕರ್ಮಭಿಶ್ಚ ಭಕ್ತ್ಯಾ ಚಾऽನಂದಚಿತ್ರತಾ ॥'

ಇತಿ ಚ ಬೃಹತ್ತಂತ್ರೇ ।

'ಧರ್ಮಸ್ವರೂಪಚಿತ್ರತ್ವಾದ್ ಯೋಯೋ ದೇವಮನೋಗತಃ ।
ಸ ಏವ ಧರ್ಮೋ ವಿಜ್ಞೇಯೋ ನಹ್ಯೇತೇ ಲೋಕಸಮ್ಮಿತಾಃ ॥'

ಇತಿ ಚ ಪಾದ್ಮೇ ।

ಜ್ಞಾನಕ್ಕೆ ಕರ್ಮವು ಸಹಕಾರಿಯಾದುದರಿಂದಲೂ ಕರ್ಮವನ್ನು ಮಾಡಬೇಕು. ಕಮಠಶ್ರುತಿಯಲ್ಲಿ ಕರ್ಮವು ಸಹಕಾರಿ ಎಂದು ಹೇಳಲಾಗಿದೆ– ಹೇಗೆ ಮಂತ್ರಿಯು ರಾಜನಿಗೆ ಸಹಕಾರಿಯಾದರೂ, ಮಂತ್ರಿ ಇಲ್ಲದೆಯೂ ರಾಜನು ಕಾರ್ಯಸಮರ್ಥನೋ ಅದರಂತೆ ಜ್ಞಾನವೂ ಕರ್ಮ ಇಲ್ಲದೆಯೂ ತನ್ನ ಕಾರ್ಯವನ್ನು ಮಾಡಲು

ಸಮರ್ಥವಾಗಿದೆ. ಆದರೂ ಕರ್ಮವು ಜ್ಞಾನಕ್ಕೆ ಸಹಾಯಕವಾಗಿದೆ. ಈ ಬಗ್ಗೆ ವಿಚಾರದ ಅಗತ್ಯವಿಲ್ಲ. ಬ್ರಹ್ಮಾಂಡದಲ್ಲಿ ಹೀಗಿದೆ—

ಜ್ಞಾನದಿಂದ ಮೋಕ್ಷವು ಆಗಿಯೇ ತೀರುತ್ತದೆ. ಸರ್ವ ಅಕಾರ್ಯಗಳನ್ನು ಮಾಡಿದರೂ ಚಿಂತಿಲ್ಲ. ಆದರೆ ಅಕಾರ್ಯದಿಂದ ಮೋಕ್ಷದಲ್ಲಿ ಆನಂದದ ಹ್ರಾಸವಾಗುತ್ತದೆ. ಸತ್ಕರ್ಮದಿಂದ ಆನಂದ ವೃದ್ಧಿಯಾಗುತ್ತದೆ. ಬೃಹತ್ತಂತ್ರದಲ್ಲೂ ಇದೆ—

ಜ್ಞಾನಿಗೆ ಸಕಲದುಃಖಗಳ ನಿವೃತ್ತಿಯೂ ನಿಶ್ಚಿತವೇ. ಉಪಾಸನೆಯಿಂದ ಮತ್ತು ಕರ್ಮದಿಂದ ಹಾಗೂ ಭಕ್ತಿಯಿಂದ ಆನಂದವಿಶೇಷವು ಲಭಿಸುತ್ತದೆ. ಪಾದ್ಮವಚನ ಹೀಗಿದೆ—

ಧರ್ಮದ ಸ್ವರೂಪವು ವಿಚಿತ್ರವಾದುದು. ಯಾವುದು ಧರ್ಮ, ಯಾವುದು ಅಧರ್ಮ ಎಂದು ನಿರ್ಧರಿಸುವುದು ಸುಲಭವಲ್ಲ. ದೇವತೆಗಳು ತಿಳಿದಿರುವುದೇ ನಿಜವಾದ ಧರ್ಮ. ದೇವತೆಗಳು ಲೋಕದ ಜನರಂತೆ ಅಲ್ಲ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ಸ್ತುತಯೇಽನುಮತಿರ್ವಾ ಓಂ ॥** (ಅತ್ರ ಜ್ಞಾನಿನಃ ಸದಸತ್ಪ್ರವೃತ್ತೌ ವಿಶೇಷಃ ಉಚ್ಯತೇ । ನೇತ್ಯಸ್ತಿ । ವಿಧಿಪದಮ್ ಅಗ್ರೇತನಮ್ ಆಕೃಷ್ಯತೇ ।

'ಸ ಬ್ರಾಹ್ಮಣಃ ಕೇನ ಸ್ಯಾತ್, ಯೇನ ಸ್ಯಾತ್ ತೇನ ಈದೃಶ ಏವ' ಇತಿ ಶ್ರುತೌ ಜ್ಞಾನಿನಃ ಯಥೇಷ್ಟಾಚರಣಂ ನ ವಿಧಿಃ । ಕಿಂತು, ಸ್ತುತಯೇ=ಜ್ಞಾನಿಸ್ತುತ್ಯರ್ಥಮ್ । ಯಥೇಷ್ಟಾಚಾರೋಽಪಿ ಜ್ಞಾನೀ ಮುಚ್ಯತೇ ಏವ, ಇತಿ ಸಾಮರ್ಥ್ಯಪ್ರಕಟನಾರ್ಥಾಯ ಉಚ್ಯತೇ । ಅನುಮತಿರ್ವಾ=ಜ್ಞಾನಿನಾ ಕ್ರಿಯಮಾಣಸ್ಯ ಅಭ್ಯನುಜ್ಞಾನಂ ವಾ । ಸರ್ವಥಾ ಯಥೇಷ್ಟಾಚಾರೋ ನ ವಿಧೀಯತೇ, ಯೇನ ಸದಸತ್ಪ್ರವೃತ್ತ್ಯೋಃ ವಿಶೇಷೋ ನ ಸ್ಯಾತ್ ಇತಿ ಭಾವಃ ।)

'ಸ ಬ್ರಾಹ್ಮಣಃ ಕೇನ ಸ್ಯಾತ್ ಯೇನ ಸ್ಯಾತ್' ಈ ಬೃಹದಾರಣ್ಯಕ ಶ್ರುತಿಯಲ್ಲಿ ಬ್ರಹ್ಮಜ್ಞಾನಿಯ ಆಚಾರವು ಹೇಗಿದ್ದರೂ ಸರಿ, ಅವನು ಜ್ಞಾನಿಯಾಗಿ ಇರುತ್ತಾನೆ, ಎಂದು ಕಾಮಚಾರವನ್ನು ತಿಳಿಸಲಾಗಿದೆ. ಇದು ಜ್ಞಾನಿ ಹೀಗೆಯೇ ಇರಬೇಕೆಂದು ವಿಧಿಯಲ್ಲ. ಸ್ತುತಯೇ=ಜ್ಞಾನಿಯ ಸ್ತುತಿಗಾಗಿ ಹೀಗೆ ಹೇಳಲಾಗಿದೆ. ಕಾಮಚಾರನಾದರೂ ಜ್ಞಾನಿಯು ಮುಕ್ತನಾಗುತ್ತಾನೆ, ಎಂದು ಜ್ಞಾನದ ಸಾಮರ್ಥ್ಯಪ್ರಕಟನೆಗಾಗಿ ಹೀಗೆ ಹೇಳಲಾಗಿದೆ. ಅಥವಾ ಅಪರೋಕ್ಷಿಗಳಾದ ದೇವತೆಗಳ ಕಾಮಚಾರಕ್ಕೆ ಅನುಮತಿ

ಎಂದಾದರೂ ಇದನ್ನು ಪರಿಗಣಿಸಬಹುದು. ಏನಾದರೂ ಕಾಮಚಾರವನ್ನು ವಿಧಾನಮಾಡುವುದು ಶ್ರುತಿಯ ಉದ್ದೇಶವಲ್ಲ.

**॥ ಓಂ ಕಾಮಕಾರೇಣ ಚೈಕೇ ಓಂ ॥** (ಚೋಽಪ್ಯರ್ಥೇ, ಏಕೇ ಶಾಖಿನಃ ಕಾಮಕಾರೇಣ ಚ, ಕಾರಃ=ಚರಣಮ್ ಯಥೇಷ್ಟಾಚಾರೇಣಾಪಿ ಜ್ಞಾನಿನೋ ಮೋಕ್ಷಂ 'ಕಾಮಚಾರಾಃ ಕಾಮಭಕ್ಷಾಃ' ಇತಿ ಶ್ರುತೌ ಪಠಂತಿ ಯತಃ, ಅತಃ ಬಾಧಕಾಭಾವಾತ್ ಅಸ್ತಿ ಜ್ಞಾನಿನಃ ಸದಸತ್ಪ್ರವೃತ್ತೌ ವಿಶೇಷಃ, ಇತಿ ಭಾವಃ ।)

ಈ ಸೂತ್ರದಲ್ಲಿ ಅನಾಚಾರದಿಂದ ಜ್ಞಾನದ ಶಕ್ತಿಯು ಕಡಿಮೆಯಾಗಿ ಮೋಕ್ಷ ವಾಗದಿರುವ ಸಂಭವವನ್ನು ನಿರಾಕರಿಸಲಾಗಿದೆ. ಏಕೇ ಶಾಖಿನಃ=ಸಾಮಶಾಖೆಯವರು 'ಕಾಮಚಾರಾಃ ಕಾಮಭಕ್ಷಾಃ...ದೇಹಮುತ್ಸೃಜ್ಯ ಅಥ ಪರಾತ್ ಪರಮ್ ಈಯುಃ' ಎಂದು ಕಾಮಚಾರಿಗಳಿಗೂ ಮೋಕ್ಷವನ್ನು ಹೇಳುತ್ತಾರೆ. ಆದ್ದರಿಂದ ಕಾಮಚಾರವು ಜ್ಞಾನಕ್ಕೆ ತಡೆಯಾಗುವುದಿಲ್ಲ. (ಆದರೂ ಅಸತ್ ಪ್ರವೃತ್ತಿಯಿಂದಾಗಿ ಜ್ಞಾನಿಗಳಿಗೂ ಮೋಕ್ಷದಲ್ಲಿ ಆನಂದಹ್ರಾಸವಿದೆ.)

**॥ ಓಂ ಉಪಮರ್ದಂ ಚ ಓಂ ॥** (ಏಕ ಇತ್ಯಸ್ತಿ । ಜ್ಞಾನಂ ಪ್ರಕೃತಂ । ಚಃ ಅಪ್ಯರ್ಥಃ ಸನ್ ಕರ್ಮಸಮುಚ್ಚಯೇ । ಅನಿವರ್ತ್ಯತಯಾ ಪ್ರಾಪ್ತಸ್ಯ ಆರಬ್ಧಕರ್ಮಣೋಽಪಿ ಕಿಂಚಿದ್ಭುಕ್ತಸ್ಯಜ್ಞಾನೇನ ಉಪಮರ್ದಂ=ಫಲಹ್ರಾಸಮ್ ಏಕೇ 'ಓಮಿತ್ಯುಚ್ಚಾರ್ಯ...' ಇತಿ ಪಠಂತಿ । ಕಿಮ್ ಉತ್ತರಕಾಲೀನಂ ಕರ್ಮ ನ ಮುಕ್ತಿಪ್ರತಿಬಂಧಕಮಿತಿ ವಾಚ್ಯಮ್, ಇತ್ಯರ್ಥಃ ।

ಈ ಸೂತ್ರದಲ್ಲಿ ಅಸತ್ಕರ್ಮವು ಜ್ಞಾನಕ್ಕೆ ಪ್ರತಿಬಂಧಕವಲ್ಲ, ಎನ್ನುವುದನ್ನು ಕೈಮುತ್ಯನ್ಯಾಯದಿಂದ ಸಾಧಿಸಲಾಗಿದೆ. ಪ್ರಾರಬ್ಧವನ್ನು ಅನುಭವಿಸಿಯೇ ತೀರಬೇಕು. ಆದರೂ ಅಂತಹ ಪ್ರಬಲವಾದ ಪ್ರಾರಬ್ಧಕರ್ಮಕ್ಕೂ ಅಪರೋಕ್ಷಜ್ಞಾನದಿಂದ ಉಪಮರ್ದಂ ಚ=ಫಲಹ್ರಾಸವನ್ನೂ ಕೆಲವು ಶಾಖೆಗಳಲ್ಲಿ ಹೇಳಲಾಗಿದೆ. ಹೀಗಿರುವಾಗ ಆ ಜ್ಞಾನಕ್ಕೆ ಜ್ಞಾನಿಗಳು ಮಾಡಿದ ಕರ್ಮಫಲದ ಲೇಪವಾಗದಂತೆ ಮಾಡುವ ಸಾಮರ್ಥ್ಯವು ಇರಲೇಬೇಕು.

**॥ ಓಂ ಊರ್ಧ್ವರೇತಸ್ಸು ಚ ಶಬ್ದೇ ಹಿ ಓಂ ॥** (ಯದ್ಯೇವಂ, ಜಿಜ್ಞಾಸೂನಾಂ ವಿಕರ್ಮಾಚಾರೇಽಪಿ ಅಪರೋಕ್ಷಾಧಿಕಾರಃ ಸ್ಯಾತ್ ಇತ್ಯತ ಆಹ–'ಊರ್ಧ್ವರೇತಸ್ಸು' ಇತಿ । ಚಃ ಸಾಧ್ಯಸಮುಚ್ಚಯೇ, ಅವಧಾರಣೇ ವಾ । ಜ್ಞಾನಿವತ್ ಜಿಜ್ಞಾಸೂನಾಮಪಿ ತಥೇತಿ ನ । ಕುತಃ ? ಹಿ=ಯತಃ ಊರ್ಧ್ವರೇತಸ್ಸು ಚ, ಉಪಲಕ್ಷಣಮ್,

ಊರ್ಧ್ವರೇತಸ್ತ್ವಾದಿಗುಣಯುಕ್ತೇಷ್ವೇವ 'ಯ ಇಮಂ ಪರಮಂ ಗುಹ್ಯಂ ಊರ್ಧ್ವರೇತಸ್ಸು ಭಾಷಯೇತ್।' ಇತ್ಯಾದಿಶಬ್ದೇ ಜ್ಞಾನೋಪದೇಶವಿಧಿರಸ್ತಿ ಇತಿ ಶೇಷಃ। ಅತ ಇತ್ಯರ್ಥಃ। ಪರೋಕ್ಷಪೂರ್ವಕತ್ವಾದಪರೋಕ್ಷಸ್ಯ ಇತಿ ಭಾವಃ।)

ಜ್ಞಾನಿಗಳಂತೆ ಜಿಜ್ಞಾಸುಗಳೂ ಕಾಮಚಾರಿಗಳಾಗಿ ಇರಬಹುದು, ಎಂಬ ಸಂದೇಹವನ್ನು ಇಲ್ಲಿ ಪರಿಹರಿಸಲಾಗಿದೆ. ಜ್ಞಾನಿಗಳಂತೆ ಜಿಜ್ಞಾಸುಗಳಿಗೆ ಕಾಮಚಾರವು ಯುಕ್ತವಲ್ಲ. ಶಬ್ದೇ='ಯ ಇಮಂ ಪರಮಂ ಗುಹ್ಯಂ' ಎಂಬ ಶ್ರುತಿಯಲ್ಲಿ ಊರ್ಧ್ವರೇತಸ್ತ್ವಾದಿ ಆಚಾರಶೀಲರಿಗೆ ಮಾತ್ರ ತತ್ವಜ್ಞಾನೋಪದೇಶ ಮಾಡಬೇಕೆಂದು ಹೇಳಿದೆ. ಆದ್ದರಿಂದ ಆಚಾರವಿಲ್ಲದವರಿಗೆ ಪರೋಕ್ಷಜ್ಞಾನದಲ್ಲೇ ಅಧಿಕಾರವಿಲ್ಲ. ಇನ್ನು ಅಪರೋಕ್ಷಜ್ಞಾನ ಹೇಗೆ ಬರಬೇಕು?

**॥ ಓಂ ಪರಾಮರ್ಶಂ ಜೈಮಿನಿರಚೋದನಾ ಚಾಪವದತಿ ಹಿ ಓಂ ॥** (ಜೈಮಿನಿಃ 'ಕೇನ ಸ್ಯಾತ್' ಇತಿ ಶ್ರುತೇಃ 'ಪ್ರಾತುರುತ್ಥಾಯ' ಇತ್ಯಾದಿ ಶ್ರುತ್ಯಂತರೋಕ್ತ–ಸದಾಚಾರಪರಾಮರ್ಶಂ ಬ್ರೂತೇ। ಕಿಮುಕ್ತಂ ಭವತಿ ? ಶ್ರುತ್ಯಂತರವಿಹಿತ ಸದಾಚಾರೇಷ್ವೇವ ವಿಧಿಬಂಧೇನ ವಿನಾ ಸ್ವೇಚ್ಛಯಾ, ಅನಿಯಮೇನ ವರ್ತೇತ। ನ ತು ಕಾಮಚಾರವಿಧಿಃ ಸ್ತುತ್ಯಾದಿರ್ವಾ, ಇತ್ಯುಕ್ತಂ ಭವತಿ। ಸದಸದ್‌ವಿಷಯಾ ಕುತೋ ನ? ಇತಿ ನ ಶಂಕ್ಯಮ್। ಹಿ=ಯಸ್ಮಾತ್ ಅಚೋದನಾ=ನಿಷಿದ್ಧಂ ಜ್ಞಾನಿನಾ ಕಾರ್ಯಂ ಇತಿ ವಿಧಿಃ ನಾಸ್ತಿ 'ಬ್ರಾಹ್ಮಣೋ ನ ಹಂತವ್ಯಃ' ಇತಿ ಅಪವದತಿ ಚ ಶ್ರುತಿಃ। ಅತಃ ವಿಧ್ಯಭಾವಾತ್, ನಿಷೇಧಸತ್ವಾಚ್ಚ ಕಲ್ಪಕಾಭಾವಾತ್, ಇತಿ। ಚಃ ಸಮುಚ್ಚಯೇ। ಸಾಮಾನ್ಯನಿಷೇಧಸ್ಯ ಜ್ಞಾನಿಷ್ವಪಿ ಪ್ರವೃತ್ತೇಃ, ಇತಿ ಭಾವಃ।)

ಜೈಮಿನಿಃ=ಜೈಮಿನಿಋಷಿಗಳು, ಪರಾಮರ್ಶಂ='ಪ್ರಾತರುತ್ಥಾಯ' ಎಂಬ ಶ್ರುತಿಯಲ್ಲಿ ಹೇಳಿದ ಆಚಾರಗಳ ಪರಾಮರ್ಶವನ್ನು 'ಕೇನ ಸ್ಯಾತ್' ಎಂಬ ಶ್ರುತಿಯಲ್ಲಿ ವಿವಕ್ಷೆ ಮಾಡಿ 'ಶ್ರುತ್ಯುಕ್ತವಾದ ಸದಾಚಾರಗಳಲ್ಲಿ ಜ್ಞಾನಿಗಳಿಗೆ ಕಾಮಚಾರ=ಸ್ವೇಚ್ಛೆಯಿಂದಲೇ ಆಚರಣೆ' ಎಂದು ಕಾಮಚಾರಶ್ರುತಿಗೆ ಅರ್ಥವನ್ನು ಹೇಳುತ್ತಾರೆ. ಹೊರತು, ಮನಬಂದಂತೆ ನಿಷಿದ್ಧಾಚರಣೆಯನ್ನು ಮಾಡುವುದು ಕಾಮಚಾರವಲ್ಲ. ಏಕೆಂದರೆ ಅಚೋದನಾ=ನಿಷಿದ್ಧವನ್ನು ಜ್ಞಾನಿಯು ಮಾಡಬೇಕು, ಎಂದು ವಿಧಿಯೂ ಇಲ್ಲ, ಅಪವದತಿ ಚ='ಬ್ರಾಹ್ಮಣೋ ನ ಹಂತವ್ಯಃ' ಎಂಬ ಶ್ರುತಿಯು ಜ್ಞಾನಿಗೂ ಬ್ರಾಹ್ಮಣಹನನಾದಿಗಳ ನಿಷೇಧವನ್ನೂ ಮಾಡುತ್ತಿದೆ. ಇದು ಅಧಿಕಾರಿಗಳನ್ನು ಉಲ್ಲೇಖ ಮಾಡದೇ ಹೇಳಿರುವ ನಿಷೇಧವಾದ ಕಾರಣ ಈ ನಿಷೇಧವು ಜ್ಞಾನಿಗೂ ಅನ್ವಯಿಸುತ್ತದೆ.

**॥ ಓಂ ಅನುಷ್ಠೇಯಂ ಬಾದರಾಯಣಃ ಸಾಮ್ಯಶ್ರುತೇಃ ಓಂ ॥** (ಪ್ರಾಗುಕ್ತಂ ಸ್ತುತ್ಯಾದ್ಯರ್ಥತ್ವಮೇವಾಸ್ಯ ಸಾಧಯತಿ। ಬಾದರಾಯಣಃ ಅನುಷ್ಠೇಯಂ ಕಾಮಚಾರಶ್ರುತೇಃ ಅರ್ಥಂ ಬ್ರೂತೇ। ಕಿಮುಕ್ತಂ ಭವತಿ? ಅನುಷ್ಠೇಯಮಧ್ಯೇ ಏವ ಸ್ವೇಚ್ಛಯಾ ಕೇಷಾಂಚಿದನುಷ್ಠಾನಂ, ಕೇಷಾಂಚಿತ್ ನ, ಇತಿ ಕಾಮಚಾರಾನುಮತಿರೇವ ನ ಕಾಮಚಾರವಿಧಿಃ। ಪ್ರಾಗುಕ್ತಂ ನಿಯಮೇನ ಕರ್ತವ್ಯಂ ನ, ಇತ್ಯುಕ್ತಂ ಭವತಿ। ಕುತಃ? ಸಾಮ್ಯಶ್ರುತೇಃ=ಕೇನಾಪಿ ಪ್ರಕಾರೇಣ ಪ್ರವೃತ್ತೌ ಅಪಿ 'ಈದೃಶ ಏವ' ಇತಿ ಸಾಮ್ಯೋಕ್ತೇಃ। 'ಯಸ್ತ್ವಾತ್ಮರತಿರೇವ ಸ್ಯಾತ್' ಇತಿ ಸ್ಮೃತೇರಪಿ ಉಪಲಕ್ಷಣಮ್। ವಿಹಿತಾಕರಣಪ್ರಾಪ್ತ–ಅಸಾಮ್ಯನಿರಾಸಾರ್ಥತ್ವಾತ್ ತಸ್ಯಾಃ। ನಿಯಮೇನ ಸರ್ವಾಚರಣಪಕ್ಷೇ ಕದಾಚಿತ್ ಅಸಾಮ್ಯಪ್ರಸಕ್ತ್ಯಭಾವೇನ ಸರ್ವಾಚರಣೇನ ಸಂಭಾವಿತ–ಸಾಮ್ಯಜ್ಞಾಪನಾರ್ಥತೈವ ಸ್ಯಾತ್। ತತೋಽಪಿ ಪ್ರಾಪ್ತಾಸಾಮ್ಯ ನಿರಾಸಾರ್ಥತ್ವಸ್ಯ ವರತ್ವಾತ್ ಇತಿ ಭಾವಃ।)

ಬಾದರಾಯಣರ ಅಭಿಪ್ರಾಯ ಹೀಗೆ—ಅನುಷ್ಠೇಯವಾದ ಕರ್ಮಗಳಲ್ಲಿ ಕೆಲವು ಕರ್ಮಗಳನ್ನು ಅನುಷ್ಠಾನ ಮಾಡುವುದು, ಕೆಲವನ್ನು ಬಿಡುವುದು—ಈ ರೀತಿಯ ಸ್ವೇಚ್ಛಾಚಾರಾವೇ ಕಾಮಚಾರ. ಹೀಗೆ ಕಾಮಚಾರಶ್ರುತಿಯು ಅನುಷ್ಠೇಯ ಕರ್ಮಗಳಲ್ಲಿ ಜ್ಞಾನಿಗಳಿಗೆ ಸ್ವೇಚ್ಛಾಚಾರವನ್ನು ಅನುಮೋದಿಸುತ್ತದೆ. ಹೊರತು, ಜೈಮಿನಿಗಳು ಹೇಳಿದಂತೆ ಸ್ವೇಚ್ಛಯಾ ಕರ್ಮಕರ್ತವ್ಯತ್ವದ ವಿಧಿ ಇದಲ್ಲ. ಏಕೆಂದರೆ, ಸಾಮ್ಯಶ್ರುತೇಃ=ಕಾಮಚಾರಶ್ರುತಿಯಲ್ಲಿ 'ತೇನ ಈದೃಶ ಏವ' ಎಂದು ಜ್ಞಾನಿಗೆ ಸಾಮ್ಯವು ಶ್ರುತವಾಗಿದೆ. ವೈಷಮ್ಯದ ಪ್ರಸಕ್ತಿ ಇದ್ದರೆ ಈ ಸಾಮ್ಯಶ್ರುತಿಯು ಅರ್ಥವತ್ತಾಗುತ್ತದೆ. ಕರ್ತವ್ಯಕರ್ಮದಲ್ಲಿ ಸ್ವೇಚ್ಛಾಚಾರವನ್ನು ಹೇಳಿದರೆ, ಮಾಡಿ ದವರಿಗೂ ಮಾಡದವರಿಗೂ ವೈಷಮ್ಯಪ್ರಸಂಗಕ್ಕೆ ಅವಕಾಶವಿದೆ. ಆಗ ಸಾಮ್ಯಶ್ರುತಿ ಅನ್ವರ್ಥವಾಗುತ್ತದೆ. ಎಲ್ಲ ವಿಹಿತಕರ್ಮಗಳನ್ನು ಸ್ವೇಚ್ಛಯಾ ಮಾಡಬೇಕು, ಎಂದು ಜೈಮಿನಿಗಳು ಹೇಳಿದಂತೆ ಅರ್ಥ ತಿಳಿದಾಗ ವೈಷಮ್ಯಪ್ರಸಕ್ತಿ ಇಲ್ಲ. ಆದರೂ ಸಾಮ್ಯಜ್ಞಾಪನೆಯಷ್ಟೇ ಶ್ರುತಿಗೆ ಅರ್ಥವಾಗುತ್ತದೆ. ಸಾಮ್ಯಜ್ಞಾಪನೆಗಿಂತಲೂ ಪ್ರಾಪ್ತವಾದ ಅಸಾಮ್ಯನಿವಾರಣೆಯು ಯುಕ್ತವಾಗುತ್ತದೆ. ಆದ್ದರಿಂದ ಕರ್ತವ್ಯ ಕರ್ಮಗಳ ಕಾಮಚಾರಾನುಜ್ಞಾ ಈ ಶ್ರುತ್ಯರ್ಥ.

**॥ ಓಂ ವಿಧಿರ್ವಾ ಧಾರಣವತ್ ಓಂ ॥** (ಏವಂ ಅರ್ಥದ್ವಯಮುಕ್ತ್ವಾ ಸ್ವೇಚ್ಛಾಚರಣ ವಿಧ್ಯರ್ಥಂ ಚಾಹ। 'ಕೇನ ಸ್ಯಾತ್' ಇತಿ ಜ್ಞಾನಿನೋ ಯಥೇಷ್ಟಾಚಾರ ವಿಧಿಃ। ವಾಶಬ್ದಃ ಅಧಿಕಾರಿಭೇದನ ಪ್ರಾಗುಕ್ತೇನ ವ್ಯವಸ್ಥಿತವಿಕಲ್ಪಾರ್ಥಃ। ತರ್ಹಿ

ಅಜ್ಞಸ್ಯಾಪಿ ಏವಂ ಸ್ಯಾದತ ಉಕ್ತಂ ಧಾರಣೇತಿ । ಯಥಾ ವೇದಧಾರಣಂ ತ್ರೈವರ್ಣಿ-ಕಾನಾಮೇವ ವಿಹಿತಂ ತಥಾ ಕಾಮಚಾರೋಽಪಿ ಜ್ಞಾನಿನಾಮೇವ, ಇತ್ಯರ್ಥಃ ।)

ಹೀಗೆ 'ಕೇನ ಸ್ಯಾತ್' ಎಂಬ ಶ್ರುತಿಗೆ ಸ್ತುತಿ ಮತ್ತು ಅನುಮತಿಪರವಾದ ಎರಡು ಅರ್ಥಗಳನ್ನು ಕೇಳಿ ವಿಧಿಪರವಾದ ಇನ್ನೊಂದು ಅರ್ಥವನ್ನು ಈ ಸೂತ್ರದಲ್ಲಿ ಹೇಳಿದ್ದಾರೆ—'ಕೇನ ಸ್ಯಾತ್' ಎಂದು ಜ್ಞಾನಿಗೆ ಯಥೇಷ್ಟಾಚರಣೆಯ ವಿಧಾನವನ್ನು ಮಾಡಲಾಗಿದೆ. ವಾಶಬ್ದವು ವ್ಯವಸ್ಥಿತವಿಕಲ್ಪಾರ್ಥ. ಕೆಲವು ಜ್ಞಾನಿಗಳಿಗೆ ಮಾತ್ರ ಇದು ಅನ್ವಯಿಸುತ್ತದೆ. ಹಾಗಾದರೆ ಈ ವಿಧಿ ಅಜ್ಞಾನಿಗಳಿಗೂ ಅನ್ವಯಿಸುತ್ತದೆಯೇ? ಇಲ್ಲ, ಧಾರಣವತ್। ಧಾರಣೆ ಎಂದರೆ ವೇದಾಧ್ಯಯನ. 'ಸ್ವಾಧ್ಯಾಯೋ ಅಧ್ಯೇತವ್ಯಃ' ಎಂದಿಷ್ಟೇ ಹೇಳಿದ್ದರೂ ಅದು ತ್ರೈವರ್ಣಿಕರಿಗೆ ಮಾತ್ರ ಅನ್ವಯಿಸುತ್ತದೆ, ಇತರರಿಗೆ ಇಲ್ಲ. ಅದರಂತೆ ಈ ವಿಧಿಯೂ ಜ್ಞಾನಿಗಳಿಗೆ ಮಾತ್ರ.

**॥ ಓಂ ಸ್ತುತಿಮಾತ್ರಮುಪಾದಾನಾದಿತಿ ಚೇನ್ನಾಪೂರ್ವತ್ವಾತ್ ಓಂ ॥**(ವಿಧಿರ್ವಾ, ಇತ್ಯುಕ್ತಮ್ ಆಕ್ಷಿಪ್ಯಾಹ । ಜ್ಞಾನಿಭಿರಪಿ 'ಸಂಧ್ಯಾಮುಪಾಸೀತ' ಇತ್ಯಾದಿಸಾಮಾನ್ಯವಿಧಿ ಸ್ವೀಕಾರಾತ್ ಕೇನ ಸ್ಯಾದಿತಿ ಶ್ರುತಿಃ ಪ್ರಾಗುಕ್ತಸ್ತುತಿಮಾತ್ರಂ, ನ ವಿಧಿಃ। ವಿಧಿತ್ವೇ ತದುಪಾದಾನಾಯೋಗಾತ್, ಇತಿ ಚೇನ್ನ। ಕುತಃ ? ಅಪೂರ್ವತ್ವಾತ್ । ತತ್ತ್ವಪ್ರದೀಪದಿಶಾ ಪೂರ್ವಂ=ಅನಾದಿಬ್ರಹ್ಮ। ಜ್ಞಾನಿನಃ=ಅಬ್ರಹ್ಮತ್ವಾತ್ ಇತ್ಯೇಕೇ। ಏತದುಕ್ತಂ ಭವತಿ। 'ಕೇನ ಸ್ಯಾತ್' ಇತ್ಯಸ್ಯ ಅವಿಧಿತ್ವೇನ ಸ್ತುತಿತ್ವೇ ಜ್ಞಾನಿನಾಂ ಸರ್ವವಿಧ್ಯತಿದೂರತ್ವೇನ ಸ್ತುತಿಮಾತ್ರವಿಷಯತ್ವಂ ಸ್ಯಾತ್। ತಚ್ಚಾಯುಕ್ತಮ್। ಸರ್ವವಿಧ್ಯತಿದೂರತ್ವಸ್ಯ ಬ್ರಹ್ಮಲಕ್ಷಣತ್ವಾತ್ । ಜ್ಞಾನಿನಶ್ಚ ಬ್ರಹ್ಮವಶ್ಯತಯಾ ಅಬ್ರಹ್ಮತ್ವಾತ್ ಇತಿ ।)

ಇಲ್ಲಿ 'ಕೇನ ಸ್ಯಾತ್' ಎಂಬ ವಾಕ್ಯವು ವಿಧಿರೂಪ ಎನ್ನುವುದರ ಮೇಲೆ ಆಕ್ಷೇಪಿಸಿ ಸಮಾಧಾನಿಸಲಾಗಿದೆ. ಜ್ಞಾನಿಗಳೂ 'ಅಹರಹಃ ಸಂಧ್ಯಾಮುಪಾಸೀತ' ಇತ್ಯಾದಿ ಕರ್ಮವಿಧಿಗಳನ್ನು ಸ್ವೀಕಾರಮಾಡುತ್ತಾರೆ. ಅವರು ಹೀಗೆ ವಿಧಿಬದ್ಧರಾಗಿರುವಾಗ ಕಾಮಚಾರವಿಧಿಯು ಅವರಿಗೆ ಅನ್ವಯಿಸುವುದಿಲ್ಲ. ಆದ್ದರಿಂದ 'ಕೇನ ಸ್ಯಾತ್' ಎನ್ನುವುದು ಸ್ತುತಿ ಮಾತ್ರ, ಎಂದು ಪೂರ್ವಪಕ್ಷ. ಇದು ಸರಿಯಲ್ಲ. ಅಪೂರ್ವತ್ವಾತ್= ಜ್ಞಾನಿಗಳೂ ಭಗವದಧೀನರಾದುದರಿಂದ.

'ಕೇನ ಸ್ಯಾತ್' ಎಂಬ ಶ್ರುತಿಯು ಸ್ತುತಿಮಾತ್ರವಾದರೆ 'ಜ್ಞಾನಿಗಳು ಸರ್ವವಿಧಿ ಗಳನ್ನೂ ಮೀರಿದವರು, ಯಾವ ವಿಧಿಗೂ ಬದ್ಧರಲ್ಲ, ಎಂದು ಅವರ ಸ್ತುತಿ

ಮಾಡಬೇಕು. ಆದರೆ, ಅದು ಸರಿಯಲ್ಲ. ಸರ್ವವಿಧ್ಯವಿಷಯತ್ವವು ಪರಮಾತ್ಮನಿಗೆ ಮಾತ್ರ. ಜ್ಞಾನಿಗಳು ಅಂತಹ ಪರಮಾತ್ಮನ ಅಧೀನರು. ಆದ್ದರಿಂದ ಅವರು ವಿಧ್ಯವಿಷಯರಾಗಲು ಸಾಧ್ಯವಿಲ್ಲ. ಆದ್ದರಿಂದ 'ಕೇನ ಸ್ಯಾತ್' ಎನ್ನುವುದು ಸ್ತುತಿ ಅಲ್ಲ, ವಿಧಿ.

**॥ ಓಂ ಭಾವಶಬ್ದಾಚ್ಚ ಓಂ ॥** (''ಯಥಾವಿಧಾನಮಪರೇ ವಿಧಿರ್ಭಾವೇ ಪ್ರಜಾಪತೇಃ'' ಇತಿ ಶ್ರುತೌ ಇಚ್ಛಾಪರಪರ್ಯಾಯ–ಭಾವಶಬ್ದಾಚ್ಚ ಸ್ವೇಚ್ಛಾಚಾರವಿಧಿಃ ಇತ್ಯನುಷಂಗಃ । ಪೂರ್ವಸೂತ್ರೇ ಸ್ವೇಚ್ಛಾಚಾರವಿಧೇಃ ಅರ್ಥಸಿದ್ಧತ್ವಾತ್ ಚಶಬ್ದಃ ।)

ಇಚ್ಛಾಸಮಾನಾರ್ಥಕವಾದ ಭಾವಶಬ್ದಘಟಿತವಾದ ಶ್ರುತಿಯು ಇರುವುದರಿಂದಾಗಿಯೂ 'ಕೇನ ಸ್ಯಾತ್' ಎಂಬುದು ವಿಧಿಯೇ ಆಗಿದೆ. ಆ ಶ್ರುತಿಯಲ್ಲಿ ಜ್ಞಾನಿಗಳು ಸಂಧ್ಯಾದಿವಿಧಿಬದ್ಧರಾಗಿ ನಿತ್ಯ–ನೈಮಿತ್ತಿಕರ್ಮಗಳನ್ನು ಮಾಡುತ್ತಾರೆ. ಆದರೆ, ಚತುರ್ಮುಖ ಮತ್ತು ಕೆಲವು ದೇವತೆಗಳು ವಿಧಿಯ ನಿರ್ಬಂಧವಿಲ್ಲದೆ ಸ್ವೇಚ್ಛೆಯಿಂದಲೇ ಕರ್ಮವನ್ನು ಮಾಡಬೇಕು, ಎಂದು. ಹೀಗೆ ಶ್ರುತ್ಯಂತರದಲ್ಲಿ ವಿಧಿಯನ್ನೇ ಹೇಳಿರುವುದರಿಂದ 'ಕೇನ ಸ್ಯಾತ್' ಎಂಬ ಶ್ರುತಿಯೂ ವಿಧಿಯನ್ನೇ ಹೇಳುತ್ತದೆ.

**॥ ಓಂ ಪಾರಿಪ್ಲವಾರ್ಥಾ ಇತಿ ಚೇನ್ನ ವಿಶೇಷಿತತ್ವಾತ್ ಓಂ ॥** ('ಕೇನ ಸ್ಯಾತ್' ಇತ್ಯಾದಿಶ್ರುತಯಃ ಪಾರಿಪ್ಲವಾರ್ಥಾಃ=ಚಂಚಲಾರ್ಥಾಃ ಅವ್ಯವಸ್ಥಿತಾರ್ಥಾಃ ಸ್ಯುಃ । ನಿಯಮೇನ ಸರ್ವಧರ್ಮಾಚರಣಂ, ತನ್ಮಧ್ಯೇ ಏವ ಕಾಮಚಾರೇಣ ಆಚರಣಂ, ಯಥೇಷ್ಟಾಚಾರವಿಧಿಃ ಇತ್ಯುಕ್ತಾರ್ಥತ್ರಯಸ್ಯ ವಿರುದ್ಧತ್ವಾತ್ ಇತಿ ಚೇನ್ನ । ವಿಶೇಷಿತತ್ವಾತ್='ತ್ರೇಧಾ ಹ ಜ್ಞಾನಿನಃ' ಇತ್ಯಾದಿಶ್ರುತ್ಯಾ ಜ್ಞಾನಿನಾಮ್ ಅನೇಕ ಪ್ರಕಾರತ್ವಾತ್ ಇತ್ಯರ್ಥಃ ।)

'ಕೇನ ಸ್ಯಾತ್' ಇತ್ಯಾದಿ ಶ್ರುತಿಗಳು ಪಾರಿಪ್ಲವಾರ್ಥಾಃ=ಅವ್ಯವಸ್ಥಿತವಾದ ಅನೇಕ ಅರ್ಥವುಳ್ಳವುಗಳಾಗುತ್ತವೆ ಎಂದಾದೀತು. ಎಂದರೆ, ವಿಶೇಷಿತತ್ವಾತ್=ತ್ರೇಧಾಹ ಜ್ಞಾನಿನೋ' ಎಂಬ ಗೌಪವನ ಶ್ರುತಿಯಂತೆ ಜ್ಞಾನಿಗಳಲ್ಲಿ ಮೂರುವಿಧವಾದ ವಿಶೇಷಗಳನ್ನು ಹೇಳಿದ್ದಾರೆ. ಅವರಿಗೆ ಅನುಗುಣವಾಗಿ ಈ ಶ್ರುತಿಯ ಮೂರು ಅರ್ಥಗಳನ್ನು ವ್ಯವಸ್ಥೆ ಮಾಡಬೇಕು.

**॥ ಓಂ ತಥಾ ಚೈಕವಾಕ್ಯೋಪಬಂಧಾತ್ ಓಂ ॥** (ಏಕವಾಕ್ಯೇತಿ ಭಾವಪ್ರಧಾನಂ । ತಥಾಚ ಜ್ಞಾನಿನಾಂ ತ್ರೈವಿಧ್ಯೇ ಸತಿ 'ಕೇನ ಸ್ಯಾತ್' ಇತ್ಯಸ್ಯ

ತ್ರ್ಯರ್ಥತ್ವಾನುಗುಣಾನಾಂ 'ಪ್ರಾತುರುತ್ಥಾಯ' ಇತಿ, 'ಯಸ್ತ್ವಾತ್ಮರತಿರೇವ' ಇತಿ, 'ಯಥಾವಿಧಾನಂ' ಇತಿ ಚ ವಾಕ್ಯಾನಾಮ್ ಏಕವಾಕ್ಯತ್ವೇನ ಜ್ಞಾನಿಭೇದಮಾಶ್ರಿತ್ಯ ಅವಿರೋಧೇನ ಉಪಬಂಧಾತ್, ತಥಾಚ ತೇಷಾಮವಿರೋಧೇ ಸತಿ 'ಕೇನ ಸ್ಯಾತ್' ಇತಿ ವಾಕ್ಯಸ್ಯಾಪಿ ಏಕವಾಕ್ಯತ್ವೋಪಬಂಧಾತ್ ಜ್ಞಾನಿಭೇದೇನ ಸ್ಥಿರಾರ್ಥತ್ವಯೋಗಾತ್ ಇತ್ಯರ್ಥಃ। ಜೈಮಿನಿಮತಂ ಜ್ಞಾನಿಮಾನುಷವಿಷಯಮ್। ವ್ಯಾಸಮತಂ ದೇವತಾವಿಷಯಂ, ವಿಧಿರ್ವೇತಿ ಮತಂ ವಿರಿಂಚವಿಷಯಮ್ ಇತಿ ಭಾವಃ।)

ಜ್ಞಾನಿಗಳು ಮನುಷ್ಯ, ದೇವತೆಗಳು, ಚತುರ್ಮುಖ ಹೀಗೆ ಮೂರು ವಿಧರಾದುದರಿಂದ 'ಕೇನ ಸ್ಯಾತ್' ಎಂಬ ವಾಕ್ಯಕ್ಕೆ ಸ್ತುತಿ, ಅನುಮತಿ, ವಿಧಿರೂಪವಾದ ಮೂರೂ ಅರ್ಥಗಳೂ ಸಮಂಜಸವಾಗುತ್ತವೆ. ಮಾತ್ರವಲ್ಲ, 'ಪ್ರಾತುರುತ್ಥಾಯ' ಇತ್ಯಾದಿ ಕರ್ಮವಿಧಾಯಕವಾಕ್ಯಗಳಿಗೂ 'ಯಸ್ತ್ವಾತ್ಮರತಿರೇವ' ಎಂಬ ಜ್ಞಾನಿಗೆ ಕರ್ಮ ನಿರ್ಬಂಧವಿಲ್ಲ ಎಂಬ ವಾಕ್ಯಕ್ಕೂ 'ಯಥಾವಿಧಾನಂ' ಎಂಬ ಇಚ್ಛಾನಿಯತಕರ್ಮ ಕಾರಿತ್ವಬೋಧಕವಾಕ್ಯಕ್ಕೂ ಜ್ಞಾನಿಭೇದೇನ ವ್ಯವಸ್ಥೆಮಾಡಬಹುದಾದ್ದರಿಂದ ವಿರೋಧವಿಲ್ಲದೆ ಏಕವಾಕ್ಯತ್ವದ ಉಪಬಂಧಾತ್=ಸಂಬಂಧವಿರುವುದರಿಂದ ಪರಸ್ಪರ ವಿರೋಧವಿಲ್ಲ. 'ಕೇನ ಸ್ಯಾತ್' ಎಂಬ ವಾಕ್ಯಕ್ಕೆ ಸ್ತುತಿಪರತ್ವವನ್ನು ಹೇಳಿ ಜ್ಞಾನಿಗಳಿಗೂ ಕರ್ಮವಿಧಿಯನ್ನು ನಿರೂಪಿಸುವ ಜೈಮಿನಿಮತ ಮಾನುಷಜ್ಞಾನಿವಿಷಯಕ. ಅನುಮತಿಪರವಾಗಿ ಅರ್ಥಮಾಡಿ ವಿಹಿತಕರ್ಮಗಳಲ್ಲಿ ಸ್ವೇಚ್ಛಾನುಸರಣೆಯನ್ನು ಹೇಳುವ ಬಾದರಾಯಣರ ಸಿದ್ಧಾಂತ ದೇವತಾವಿಷಯ. 'ವಿಧಿರ್ವಾ' ಎಂದು ವ್ಯಾಸರದೇ ಇನ್ನೊಂದು ಸಿದ್ಧಾಂತ ಚತುರ್ಮುಖವಿಷಯ.

**॥ ಓಂ ಅತ ಏವ ಚಾಗ್ನೀಂಧನಾದ್ಯನಪೇಕ್ಷಾ ಓಂ ॥** (ಅಗ್ನೇಃ ಇಂಧನಂ=ದೀಪನಂ ಯಸ್ಮಿನ್ ತತ್–ಅಗ್ನಿಹೋತ್ರಂ। ಅತಏವ= ಕಾಮಚಾರಾಃ, ಕಾಮಭಕ್ಷಾಃ ಇತಿ ಶ್ರುತೌ ಕಾಮಚಾರೇಽಪಿ ಮೋಕ್ಷನೈಯತ್ಯಸ್ಯ ಉಕ್ತತ್ವಾದೇವ, ಜ್ಞಾನಸ್ಯ ಮೋಕ್ಷಾರ್ಜನೇ ಅಗ್ನಿಹೋತ್ರಾದಿ–ಆಶ್ರಮ–ವರ್ಣಧರ್ಮಾಪೇಕ್ಷಾ ನಾಸ್ತೀತ್ಯರ್ಥಃ। ಚಶಬ್ದೋ ಜ್ಞಾನಿನಃ ಸದಸತ್ಪ್ರವೃತ್ತಿಭ್ಯಾಂ ವಿಶೇಷಸತ್ವೇಽಪಿ ಇತಿ ವಾ,

ಯೇಷಾಂ ಜ್ಞಾನಂ ಸಮುತ್ಪನ್ನಂ ತೇಷಾಂ ಮೋಕ್ಷೋ ವಿನಿಶ್ಚಯಃ।
ಶುಭಕರ್ಮಭಿರಾಧಿಕ್ಯಂ ವಿಪರೀತೈರ್ವಿಪರ್ಯಯಃ ॥

ಇತ್ಯಾದಿ ಸ್ಮೃತಿಂ ವಾ ಸಮುಚ್ಚಿನೋತಿ। ತೇನ ತಾಭ್ಯಾಂ ಜ್ಞಾನಿನಃ ಕಥಂ ವಿಶೇಷಃ ಇತಿ ನಿರಸ್ತಮ್ ।)

ಅಗ್ನಿಯು ಯಾವ ಕರ್ಮದಲ್ಲಿ ನಿರಂತರವಾಗಿ ಪ್ರಜ್ವಲಿಸುವುದೋ ಅಂತಹ ಅಗ್ನಿಹೋತ್ರವು ಅಗ್ನೀಂಧನ. ಅತ ಏವ=ಯಥೇಚ್ಛವಾದ ಆಚಾರವಿದ್ದರೂ ಮೋಕ್ಷವು ಜ್ಞಾನಿಗೆ ನಿಯತವಾದುದರಿಂದಲೇ ಜ್ಞಾನವು ಮೋಕ್ಷಜನಕವಾಗಬೇಕಾದರೆ ವರ್ಣ ಧರ್ಮ ಅಥವಾ ಆಶ್ರಮಧರ್ಮಗಳ ಅಪೇಕ್ಷೆಯು ಇಲ್ಲ. ಚಶಬ್ದದಿಂದ ಸದಸತ್ ಪ್ರವೃತ್ತಿಯಿಂದಾಗಿ ಮಾನುಷಜ್ಞಾನಿಗಳ ಮೋಕ್ಷದಲ್ಲಿ ಆನಂದವಿಶೇಷವಿದೆ ಎಂದು ಸೂಚಿತವಾಗಿದೆ.

**॥ ಓಂ ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇರಶ್ವವತ್ ಓಂ ॥** (ಜ್ಞಾನಂ ಪ್ರಕೃತಮ್ । ಸರ್ವಧರ್ಮಾಪೇಕ್ಷಾ ಜಾನೋತ್ಪತ್ತ್ಯರ್ಥಮೇವ, ನ ಮೋಕ್ಷಾರ್ಥಮ್ । ಕುತಃ ? ಯಜ್ಞಾದಿಶ್ರುತೇಃ='ವಿವಿದಿಶಂತಿ ಯಜ್ಞೇನ ದಾನೇನ ।' ಗತೌ ನಿವೃತ್ತಾಯಾಂ ತತ್ಸಾಧನಾಶ್ವಾದೇಃ ಯಥಾ ಅನಪೇಕ್ಷಾ ತಥಾ ಜ್ಞಾನಾರ್ಥಕರ್ಮಣಾಂ ಜ್ಞಾನೇ ನಿವೃತ್ತೇ ತತ್–ಫಲಾರ್ಥಂ ಅಪೇಕ್ಷಾ ನ, ಇತ್ಯರ್ಥಃ ॥)

ಸರ್ವಾಪೇಕ್ಷಾ=ಸರ್ವಕರ್ಮಗಳ ಅಪೇಕ್ಷೆಯು ಜ್ಞಾನದ ಉತ್ಪತ್ತಿಗಾಗಿ, ಮೋಕ್ಷಪ್ರಾಪ್ತಿಗಾಗಿ ಅಲ್ಲ. ಏಕೆಂದರೆ, ಯಜ್ಞಾದಿಶ್ರುತೇಃ 'ವಿವಿದಿಶಂತಿ' ಇತ್ಯಾದಿ ಯಜ್ಞಶಬ್ದಘಟಿತವಾದ ಶ್ರುತಿ ಇರುವುದರಿಂದ. ಆ ಶ್ರುತಿಯು ಜ್ಞಾನದ ಅಪೇಕ್ಷೆ ಇರುವವರು ಯಜ್ಞಾದಿಕರ್ಮಗಳನ್ನು ಮಾಡಬೇಕು, ಎಂದಿದೆ. ಅಶ್ವವತ್=ಹೇಗೆ ಮನೆಗೆ ಹೋಗಬೇಕು, ಎಂದು ಬಯಸುವವನು ಕುದುರೆಯನ್ನೋ ವಾಹನವನ್ನೋ ಬಯಸುತ್ತಾನೆ, ಮನೆ ತಲುಪಿದ ಮೇಲೆ ಅದರ ಅಗತ್ಯವಿಲ್ಲ. ಅದರಂತೆ ಜ್ಞಾನ ಬರುವವರೆಗೆ ಕರ್ಮ ಬೇಕು. ಜ್ಞಾನ ಬಂದಮೇಲೆ ಕರ್ಮದ ಅಗತ್ಯವಿಲ್ಲ. ಮೋಕ್ಷಕ್ಕೆ ಕರ್ಮವು ಸಾಧನವಲ್ಲ.

**॥ ಓಂ ಶಮದಮಾದ್ಯುಪೇತಃ ಸ್ಯಾತ್ ತಥಾಽಪಿ ತು ತದ್ವಿಧೇಸ್ತದಂಗತಯಾ ತೇಷಾಮವಶ್ಯಾನುಷ್ಠೇಯತ್ವಾತ್ ಓಂ ॥** (ತಥಾಪಿ=ಜ್ಞಾನಸ್ಯ ಮುಕ್ತಿಹೇತುತ್ವೇಽಪಿ ಜ್ಞಾನೀ ಶಮ–ದಮಾದಿಸತ್ಪ್ರವೃತ್ತ್ಯುಪೇತಃ ಸ್ಯಾತ್ । ಕುತಃ? ತದ್ವಿಧೇಃ 'ಆಚಾರ್ಯಾದ್ ವಿದ್ಯಾಮವಾಪ್ಯ, ಇತಿ ತಸ್ಯ=ಶಮದಮಾದ್ಯುಪೇತತ್ವಸ್ಯ ಜ್ಞಾನಿನೋ ವಿಧಾನಾತ್ । ಕಿಮರ್ಥೋಽಯಂ ವಿಧಿಃ? ಇತ್ಯತ ಉಕ್ತಮ್–ತದಿತ್ಯಾದಿ । ತದಂಗತಯಾ=ಪ್ರಸ್ತುತ ಜ್ಞಾನಾಂಗತಯಾ–ಜ್ಞಾನ ಪ್ರತಿಷ್ಠಾಪಕತಯಾ ತೇಷಾಂ=ಶಮ–ದಮಾದೀನಾಂ ಅವಶ್ಯಾನುಷ್ಠೇಯತ್ವಾತ್ ಇತ್ಯರ್ಥಃ। 'ತಪೋ ದಮಃ ಕರ್ಮೇತಿ ಪ್ರತಿಷ್ಠಾ' ಇತ್ಯಾದಿಶ್ರುತೇರಿತಿ ಭಾವಃ। ಪ್ರತಿಷ್ಠಯಾಪಿ ಕಿಂ ಫಲಂ? ಇತ್ಯತಃ

ಸಂಪೂರ್ಣಫಲಾರ್ಥತ್ವ–ದ್ಯೋತಕಃ ತುರುಕ್ತಃ। ಜ್ಞಾನಾದೇವ ಮುಕ್ತಿಸಿದ್ಧೌ ಸ್ವಯೋಗ್ಯಪೂರ್ಣಫಲಾವಾಪ್ತ್ಯೈ ಶಮಾದ್ಯಾವಶ್ಯಕಮ್। 'ಯಸ್ಯಜ್ಞಾನಂ ತಸ್ಯ ಮೋಕ್ಷಃ' ಇತಿ ಸ್ಮೃತೇಃ ಇತಿ ॥)

ತಥಾಪಿ=ಜ್ಞಾನವೇ ಮೋಕ್ಷಸಾಧನವಾದರೂ ಜ್ಞಾನಿಯು ಶಮ–ದಮಾದ್ಯುಪೇತಃ ಸ್ಯಾತ್=ಶಮ–ದಮ ಮುಂತಾದ ಆಧ್ಯಾತ್ಮಿಕಸಂಪತ್ತನ್ನು ಹೊಂದಿರಬೇಕು. ತದ್ವಿಧೇಃ= ಶಮಾದಿ ಉಪೇತತ್ವವನ್ನು ಜ್ಞಾನಿಗೆ ಶ್ರುತಿಯು ವಿಧಾನ ಮಾಡಿರುವುದರಿಂದ. ತದಂಗತಯಾ=ಪ್ರಸ್ತುತ ಜ್ಞಾನಾಂಗತಯಾ ಅಂದರೆ ಜ್ಞಾನಸ್ಥೈರ್ಯಕ್ಕಾಗಿ ತೇಷಾಂ= ಶಮಾದಿಗಳನ್ನು ಅವಶ್ಯಾನುಷ್ಠೇಯತ್ವಾತ್=ಅಗತ್ಯವಾಗಿ ಅನುಷ್ಠಾನ ಮಾಡಬೇಕಾಗಿದೆ. ಜ್ಞಾನದ ಸ್ಥೈರ್ಯದಿಂದ ಮೋಕ್ಷದಲ್ಲಿ ಸಂಪೂರ್ಣವಾದ ಆನಂದವು ಪ್ರಾಪ್ತಿಯಾಗುತ್ತದೆ.

**॥ ಓಂ ಸರ್ವಾನ್ನಾನುಮತಿಶ್ಚ ಪ್ರಾಣಾತ್ಯಯೇ ತದ್ದರ್ಶನಾತ್ ಓಂ ॥** (ಚಸ್ತ್ವರ್ಥಃ ಸನ್ ಶ್ರುತೇರ್ವಿಷಯದ್ಯೋತಕಃ। 'ಯದಿ ಹವಾ' ಇತಿ ಶ್ರುತೌ ಸರ್ವಾನ್ನಾನುಮತಿಶ್ಚ ಜ್ಞಾನಿನಃ ಪ್ರಾಣತ್ಯಾಗವಿಷಯಾ। ಯದಿ ಜ್ಞಾನೀ ಪ್ರಾಣತ್ಯಾಗಕಾಲೇ ಭುಂಜೀತ ನ ತೇನ ತಸ್ಯ ವಿಶೇಷ ಇತಿ। ಕುತಃ ? ತದ್ದರ್ಶನಾತ್। ತಸ್ಯ=ಪ್ರಾಣಾತ್ಯಯೇ ಯಥಾಲಬ್ಧಾದಾನಸ್ಯ ದರ್ಶನಾತ್ ವಾಕ್ಯಶೇಷೇ ಇತ್ಯರ್ಥಃ ॥)

'ಯದಿಹ' ಎಂಬ ಶ್ರುತಿಯಲ್ಲಿ ಜ್ಞಾನಿಗೆ ಹೇಳಲ್ಪಟ್ಟ–ಸರ್ವಭಕ್ಷಣಾನುಮತಿಯು ಪ್ರಾಣಾತ್ಯಯೇ=ಪ್ರಾಣತ್ಯಾಗದಂತಹ ಆಪತ್ಕಾಲದಲ್ಲಿ ಮಾತ್ರ. ಅಂದರೆ ಜ್ಞಾನಿಯು ಪ್ರಾಣಹೋಗುವ ಸಂದರ್ಭ ಬಂದಾಗ ಯಾವುದನ್ನಾದರೂ ತಿನ್ನಬಹುದು, ಎಂದು ಶ್ರುತಿಯ ಅಭಿಪ್ರಾಯ. ಏಕೆಂದರೆ, ತದ್ದರ್ಶನಾತ್=ಪ್ರಾಣ ಹೋಗುವ ಸನ್ನಿವೇಶದಲ್ಲಿ ಸಿಕ್ಕಿದ್ದನ್ನು ಚಾಕ್ರಾಯಣ ಉಷಸ್ತಿಯು ತಿಂದಿರುವ ಚರಿತ್ರೆಯು ಉಪನಿಷತ್ತಿನಲ್ಲಿ ಶ್ರುತವಾಗಿರುವುದರಿಂದ.)

**॥ ಓಂ ಅಬಾಧಾಚ್ಚ ಓಂ ॥** (ಕಿಂಚೇತಿ ಚಾರ್ಥಃ। ಅನ್ಯಾಯ್ಯಾನಾಚರಣೇ ಜ್ಞಾನೇ ಬಾಧಕಾಭಾವಾತ್ ನೈವಂ ಕಲ್ಪನೀಯಮ್ ಇತ್ಯರ್ಥಃ।)

ಜ್ಞಾನಿಯು ನಿಷಿದ್ಧವಾದುದನ್ನು ಮಾಡದೇ ಇದ್ದಲ್ಲಿ ಜ್ಞಾನಕ್ಕೇನೂ ಬಾಧಕವಿಲ್ಲ. ಆದ್ದರಿಂದ ಜ್ಞಾನಿಯು ನಿಷಿದ್ಧವಾದುದನ್ನು ಮಾಡುವುದಿಲ್ಲ. ಅಷ್ಟೇ ಅಲ್ಲ, ನಿಷಿದ್ಧಾಚರಣೆಗೆ ಪ್ರಮಾಣವೂ ಇಲ್ಲ.

**॥ ಓಂ ಅಪಿ ಸ್ಮರ್ಯತೇ ಓಂ ॥** (ಸದ್ಧರ್ಮಾತ್ಯಾಗಃ 'ಅತೀತಾನಾಗತ ಜ್ಞಾನೀ' ಇತಿ ಸ್ಮರ್ಯತೇಽಪಿ ಇತ್ಯರ್ಥಃ। ನಿಷೇಧಕಸ್ಮೃತಿ ಸತ್ವಾತ್ ನಾಯಂ ಕಲ್ಪಃ ಇತಿ ಭಾವಃ।)

ಜ್ಞಾನಿಯು ಸದ್ಧರ್ಮವನ್ನು ಬಿಟ್ಟಿರಬಾರದು ಎಂದು 'ಅತೀತಾನಾಗತಜ್ಞಾನೀ' ಎಂಬ ಸ್ಮೃತಿಯಲ್ಲೂ ಹೇಳಲ್ಪಟ್ಟಿದೆ. ಆದ್ದರಿಂದ ಅವನೂ ಸದ್ಧರ್ಮವನ್ನು ಮಾಡಬೇಕು, ಅಸದ್ಧರ್ಮವನ್ನು ಮಾಡಬಾರದು.

**॥ ಓಂ ಶಬ್ದಶ್ಚಾತೋಽಕಾಮಚಾರೇ ಓಂ ॥** (ಅಕಾಮಚಾರೇ 'ಏವಂ ಪಶ್ಯನ್ ನ ಕಾಮಚರಿತಂ ಚರೇತ್' ಇತಿ ಶಬ್ದಶ್ಚಾಸ್ತಿ ಯತಃ ಅತಃ ನ ತೃತೀಯಃ ಕಲ್ಪಃ ।)

ಜ್ಞಾನಿಯು ತನಗೆ ಮನಬಂದಂತೆ ಇರಬಾರದು, ಎಂದು ಹೇಳುವ 'ಏವಂ ಪಶ್ಯನ್....' ಎಂಬ ಶ್ರುತಿಯೂ ಇದೆ. ಆದ್ದರಿಂದ ಕಾಮಚಾರ ಸರಿಯಲ್ಲ.

**॥ ಓಂ ವಿಹಿತತ್ವಾಚ್ಚಾಶ್ರಮಕರ್ಮಾಪಿ ಓಂ ॥** (ಅಪಿಃ ವರ್ಣಧರ್ಮ ಸಮುಚ್ಚಯೇ । 'ಪಶ್ಯನ್ನಪೀಮಮಾತ್ಮಾನಂ ಕುರ್ಯಾತ್ ಕರ್ಮ' ಇತಿ ಶ್ರುತೌ ವಿಹಿತತ್ವಾತ್ ಆಶ್ರಮಾದ್ಯುಚಿತಂ ಕರ್ಮ ಕಾರ್ಯಂ ಚ । ನ ಕೇವಲಂ ನಿಷಿದ್ಧಂ ನ ಕಾರ್ಯಮ್, ಇತ್ಯರ್ಥಃ ।)

ಜ್ಞಾನಿಯು ನಿಷಿದ್ಧವನ್ನು ಮಾಡಕೂಡದು. ಅಷ್ಟೇ ಅಲ್ಲ. ವಿಹಿತತ್ವಾತ್= 'ಪಶ್ಯನ್ನಪಿ' ಎಂಬ ಶ್ರುತಿಯಿಂದ ವಿಹಿತವಾದುದರಿಂದ ಸ್ವಾಶ್ರಮಕರ್ಮ= ಸ್ವಾಶ್ರಮೋಚಿತವಾದ ಕರ್ಮವನ್ನು ಮಾಡಲೂ ಬೇಕು.

**॥ ಓಂ ಸಹಕಾರಿತ್ವೇನ ಚ ಓಂ ॥** (ಮೋಕ್ಷಹೇತುಜ್ಞಾನಸಹಕಾರಿತ್ವೇನಾಪಿ ಕರ್ಮ ಕಾರ್ಯಮ್, ನ ವಿಹಿತತ್ವಾದೇವ ಇತಿ ಚಾರ್ಥಃ। ವಿನಾಪಿ ಕರ್ಮ ಜ್ಞಾನಾದೇವ ಮೋಕ್ಷಸ್ವರೂಪಸಿದ್ಧೌ ಸಂಪೂರ್ಣತತ್ಸಿದ್ಧ್ಯರ್ಥಂ ಕರ್ಮ ಸಹಕಾರಿತಯಾ ಅಪೇಕ್ಷ್ಯತೇ, ಇತಿ ವಿಶೇಷದ್ಯೋತಕ ತುಶಬ್ದಾರ್ಥೋ ವಾ ಚಶಬ್ದಃ। ತೇನ ಸಮುಚ್ಚಯವಾದೋ ವ್ಯಾವರ್ತಿತಃ । 'ಜ್ಞಾನಾನ್ಮೋಕ್ಷ'ಇತಿ ಸ್ಮೃತಿಸಮುಚ್ಚಾಯಕ ಇತ್ಯೇಕೇ ।)

ಮೋಕ್ಷಜನಕವಾದ ಜ್ಞಾನಕ್ಕೆ ಸಹಕಾರಿಯಾದುದರಿಂದಲೂ ಜ್ಞಾನಿ ಸತ್ಕರ್ಮಾಚರಣೆಯನ್ನು ಮಾಡಬೇಕು, ಶಾಸ್ತ್ರವಿಹಿತವಾದುದರಿಂದ ಮಾತ್ರವಲ್ಲ. ಇದು ಚಶಬ್ದಾರ್ಥ. ಕರ್ಮ ಮಾಡದಿದ್ದರೂ ಜ್ಞಾನದಿಂದಲೇ ಮೋಕ್ಷವು ದೊರಕುವುದಾದರೂ ಮೋಕ್ಷದಲ್ಲಿ ಪೂರ್ಣಾನಂದವನ್ನು ಪಡೆಯುವುದಕ್ಕಾಗಿ ಕರ್ಮವನ್ನು ಮಾಡಲೇಬೇಕು. ಈ ವಿಶೇಷದ್ಯೋತಕವಾದುದೂ ಚಶಬ್ದ. ಅದು 'ತು' ಎಂಬ ಅರ್ಥದಲ್ಲಿದೆ. ಇದರಿಂದಾಗಿ ಜ್ಞಾನಕರ್ಮಸಮುಚ್ಚಯವಾದ ದ್ವೈತದರ್ಶನದಲ್ಲಿ ಅಲ್ಲ, ಎಂದು ತಿಳಿಸಿದಂತಾಗುತ್ತದೆ. ಏಕೆಂದರೆ ಸಮುಚ್ಚಯವಾದದಲ್ಲಿ ಜ್ಞಾನಸಮಕಕ್ಷಾಪನ್ನವಾದುದು

ಕರ್ಮ. ಜ್ಞಾನದಂತೆ ಕರ್ಮವೂ ಮೋಕ್ಷಸಾಧನ. ದ್ವೈತದರ್ಶನದಲ್ಲಿ ಕರ್ಮವಿಲ್ಲದೆಯೂ ಜ್ಞಾನವು ಮೋಕ್ಷಜನನ ಸಮರ್ಥವಾಗುತ್ತದೆ.

## ಅದ್ವೈತದರ್ಶನದಲ್ಲಿ ಸೂತ್ರಾರ್ಥ

ಅದ್ವೈತಭಾಷ್ಯದಲ್ಲಿ ಈ ಪಾದದ ಪ್ರಾರಂಭದ ಸೂತ್ರದಿಂದ 17ನೇ ಸೂತ್ರದವರೆಗೆ ಒಂದೇ ಅಧಿಕರಣ. 'ಪುರುಷಾರ್ಥಾಧಿಕರಣ' ಎಂದು ಈ ಅಧಿಕರಣದ ಹೆಸರು.

ಹಿಂದಿನ ಪಾದದಲ್ಲಿ ಪರಾಪರವಿದ್ಯೆಗಳಲ್ಲಿ ಗುಣೋಪಸಂಹಾರವನ್ನು ವಿಚಾರ ಮಾಡಿ ಅವುಗಳ ಸ್ವರೂಪವನ್ನು ನಿರ್ಣಯಿಸಲಾಗಿದೆ. ಈ ಪಾದದಲ್ಲಿ ಆ ವಿದ್ಯೆಗಳು ಕರ್ಮಾಂಗವಾಗದೇ ಸಾಕ್ಷಾತ್ ಪುರುಷಾರ್ಥಸಾಧನವಾಗಿವೆ, ಎಂದು ನಿರೂಪಿಸಲಾಗಿದೆ. ಆ ವಿದ್ಯೆಗಳಿಗೆ ಯಜ್ಞಾದಿಗಳು ಬಾಹ್ಯಾಂಗಗಳು, ಶಮ-ದಮಾದಿಗಳು ಅಂತರಂಗಗಳು.

**॥ ಪುರುಷಾರ್ಥೋಽತಃ ಶಬ್ದಾದಿತಿ ಬಾದರಾಯಣಃ ॥** ಅತಃ=ಆತ್ಮಜ್ಞಾನದಿಂದಲೇ ಪುರುಷಾರ್ಥಃ=ಮೋಕ್ಷರೂಪವಾದ ಪರಮಪುರುಷಾರ್ಥವು ಸಿದ್ಧಿಸುತ್ತದೆ. ಶಬ್ದಾತ್='ತರತಿ ಶೋಕಮ್ ಆತ್ಮವಿತ್' ಎಂದು ಶ್ರುತಿಪ್ರಮಾಣವಿರುವುದರಿಂದ. ಇತಿ=ಹೀಗೆಂದು ಬಾದರಾಯಣ=ಬಾದರಾಯಣರು ಹೇಳುತ್ತಾರೆ.

**॥ ಶೇಷತ್ವಾತ್ ಪುರುಷಾರ್ಥವಾದೋ ಯಥಾಽನ್ಯೇಷ್ವಿತಿ ಜೈಮಿನಿಃ ॥** ಜ್ಞಾನಾತ್=ಆತ್ಮಜ್ಞಾನದಿಂದ ಪುರುಷಾರ್ಥವಾದಃ=ಮೋಕ್ಷರೂಪವಾದ ಪುರುಷಾರ್ಥವು ದೊರಕುವುದು, ಎನ್ನುವುದು ಅರ್ಥವಾದಃ=ಅರ್ಥವಾದ ಮಾತ್ರ. ಯಥಾ ಅನ್ಯೇಷು=ಪರ್ಣತಾದಲ್ಲಿ ಫಲಶ್ರುತಿಯು ಹೇಗೆ ಅರ್ಥವಾದವೋ ಅದರಂತೆ.

''ಯಸ್ಯ ಪರ್ಣಮಯೀ ಜುಹೂರ್ಭವತಿ ನ ಸ ಪಾಪಂ ಶ್ಲೋಕಂ ಶೃಣೋತಿ'' ಪಲಾಶವೃಕ್ಷದಿಂದ 'ಜುಹೂ' (ಸೌಟು) ಸಿದ್ಧಪಡಿಸಿದರೆ ಯಜಮಾನ ಕೆಟ್ಟಮಾತನ್ನು ಕೇಳುವುದಿಲ್ಲ, ಎಂದು ಈ ವಾಕ್ಯದ ಅರ್ಥ. ಜುಹೂ ಪಲಾಶದ್ದಾದರೆ ಫಲವಿಶೇಷವನ್ನು ಈ ವಾಕ್ಯದಲ್ಲಿ ಹೇಳಲಾಗಿದೆ. ಆದರೂ ಪರ್ಣಮಯವಾದ ಜುಹೂ ದರ್ಶಪೂರ್ಣಮಾಸಧ ಅಂಗವಾದುದರಿಂದ ಪ್ರಧಾನಯಾಗದ ಫಲವೇ ಅದಕ್ಕೂ ಫಲ. ಅದಕ್ಕೆ ಪ್ರತ್ಯೇಕವಾದ ಫಲವಿಲ್ಲ. ಆದ್ದರಿಂದ ಈ ವಾಕ್ಯದಲ್ಲಿ ಹೇಳುವ ಫಲ, ಅರ್ಥವಾದ ಮಾತ್ರ. ಅದರಲ್ಲಿ ವೇದಕ್ಕೆ ತಾತ್ಪರ್ಯವಿಲ್ಲ. ಅದರಂತೆ 'ತರತಿ ಶೋಕಮ್ ಆತ್ಮವಿತ್' ಎಂಬ ಶ್ರುತಿಯಲ್ಲಿ ಕರ್ಮಾಂಗವಾದ ಜ್ಞಾನಕ್ಕೆ ಹೇಳಿರುವ ಫಲವೂ ಅರ್ಥವಾದ ಮಾತ್ರ.

**॥ ಆಚಾರದರ್ಶನಾತ್ ॥** ಜ್ಞಾನಿಗಳೂ ಕರ್ಮಾಸಕ್ತರಾದುದಕ್ಕೆ ನಿದರ್ಶನಗಳು ಉಪನಿಷತ್ತಿನಲ್ಲಿವೆ—ಜನಕರಾಜ ಅಪರೋಕ್ಷಜ್ಞಾನಿ. ಆದರೂ, 'ಜನಕೋ ಹ ವೈದೇಹಃ ಬಹುದಕ್ಷಿಣೇನ ಯಜ್ಞೇನ ಈಜೇ। (ಬೃ.3.1.1)' ಜನಕರಾಜ ಯಜ್ಞ ಮಾಡಿದ ಎನ್ನಲಾಗಿದೆ. ಉದ್ದಾಲಕಾದಿಬ್ರಹ್ಮಜ್ಞಾನಿಗಳು ಮಕ್ಕಳಿಗೆ ಉಪದೇಶಮಾಡುತ್ತಾ ಗೃಹಸ್ಥಧರ್ಮವನ್ನು ಆಚರಿಸಿದ್ದರು ಎಂದೂ ಉಪನಿಷತ್ತುಗಳಿಂದ ತಿಳಿಯುತ್ತದೆ. ಜ್ಞಾನವೇ ಮೋಕ್ಷಸಾಧನವಾದರೆ ಜ್ಞಾನಿಗಳಾದ ಜನಕಾದಿಗಳು ಕರ್ಮವನ್ನು ಆಚರಿಸುವ ಪ್ರಯಾಸವನ್ನು ಏಕೆ ಮಾಡಬೇಕು?

**॥ ತಚ್ಛ್ರುತೇಃ ॥** 'ಯದೇವ ವಿದ್ಯಯಾ ಕರೋತಿ ಶ್ರದ್ಧಯಾ ಉಪನಿಷದಾ ತದೇವ ವೀರ್ಯವತ್ತರಂ ಭವತಿ' (ಛಾ.1-1-10) ಈ ಶ್ರುತಿಯು ಜ್ಞಾನವು ಕರ್ಮಶೇಷ ಎಂದು ಹೇಳುತ್ತಲಿದೆ. (ಉಪನಿಷದಾ=ಜ್ಞಾನದಿಂದ ಯದೇವ ಕರೋತಿ=ಯಾವ ಕರ್ಮವನ್ನು ಮಾಡುತ್ತಾನೋ ಅದೇ ಸಫಲವಾಗುತ್ತದೆ.)

**॥ ಸಮನ್ವಾರಂಭಣಾತ್ ॥** 'ತಂ ವಿದ್ಯಾಕರ್ಮಣೀ ಸಮನ್ವಾರಭೇತೇ' (ಬೃ.4.4.2) ಪರಲೋಕಕ್ಕೆ ಹೋಗುವ ಯಜಮಾನನನ್ನು ಜ್ಞಾನ ಮತ್ತು ಕರ್ಮಗಳು ಹಿಂಬಾಲಿಸುತ್ತವೆ, ಎಂದು ಹೇಳುವ ಮೂಲಕ ಜ್ಞಾನ-ಕರ್ಮಗಳು ಸೇರಿಯೇ ಫಲವನ್ನು ಕೊಡುತ್ತವೆ, ಎಂದು ತಿಳಿಯುತ್ತದೆ.

**॥ ತದ್ವತೋ ವಿಧಾನಾತ್ ॥** ತದ್ವತಃ=ಗುರುಕುಲವಾಸದಿಂದ ಜ್ಞಾನಸಂಪನ್ನನಾದವನಿಗೇ ಉಪನಿಷತ್ತುಗಳು ಗೃಹಸ್ಥಧರ್ಮವನ್ನು ಉಪದೇಶಿಸುತ್ತವೆ.

ಆಚಾರ್ಯಕುಲಾತ್ ವೇದಮಧೀತ್ಯ ಯಥಾವಿಧಾನಂ ಗುರೋಃ
ಕರ್ಮಾತಿಶೇಷೇಣಾಭಿಸಮಾವೃತ್ಯ ಕುಟುಂಬೇ ಶುಚೌ ದೇಶೇ
ಸ್ವಾಧ್ಯಾಯಮಧೀಯಾನೋ ಧಾರ್ಮಿಕಾನ್ ವಿದಧತ್ ॥ (ಛಾಂ.8.15.1)

ಇದರಿಂದಲೂ ಜ್ಞಾನವು ಸ್ವತಂತ್ರವಾಗಿ ಮೋಕ್ಷಸಾಧನವಲ್ಲ, ಎಂದು ತಿಳಿಯುತ್ತದೆ.

**॥ ನಿಯಮಾಚ್ಚ ॥**'ಕುರ್ವನ್ನೇವೇಹ ಕರ್ಮಾಣಿ' ಎಂದು ಕರ್ಮನಿಯಮವನ್ನು ಹೇಳಲಾಗಿದೆ. ಆದ್ದರಿಂದಲೂ ಕರ್ಮವು ಪ್ರಧಾನ, ಜ್ಞಾನವು ಅಂಗ.

ಹೀಗೆ ಪೂರ್ವಪಕ್ಷ ಬಂದಾಗ ಸಿದ್ಧಾಂತ ಸೂತ್ರ—

**॥ ಅಧಿಕೋಪದೇಶಾತ್ತು ಬಾದರಾಯಣಸ್ಯೈವಂ ತದ್ದರ್ಶನಾತ್ ॥** ತುಶಬ್ದವು ಇದುವರೆಗೆ ಮಾಡಿದ ಪೂರ್ವಪಕ್ಷದ ನಿರಾಕರಣೆಯನ್ನು ಸೂಚಿಸುತ್ತದೆ. ವೇದಾಂತ

ಗಳಲ್ಲಿ ಈ ಶಾರೀರಾತ್ಮನ ಬಗ್ಗೆ ಮಾತ್ರ ಹೇಳಿಲ್ಲ, ಅಧಿಕೋಪದೇಶಾತ್= ಸಂಸಾರಿಗಿಂತಲೂ ಅಧಿಕನಾದ ಸಂಸಾರಿಧರ್ಮರಹಿತನಾದ, ಪಾಪರಹಿತನಾದ ಆತ್ಮನನ್ನೂ ಉಪದೇಶಿಸಲಾಗಿದೆ. ಇಂತಹ ಆತ್ಮಜ್ಞಾನವು ಕರ್ಮಪ್ರವರ್ತಕವಲ್ಲ, ನಿವರ್ತಕ. ಆದ್ದರಿಂದ ನಿರ್ಗುಣಾತ್ಮಜ್ಞಾನದಿಂದ ಮೋಕ್ಷರೂಪಪುರುಷಾರ್ಥ ಲಭ್ಯವಾಗುತ್ತದೆ, ಎಂಬ ಬಾದರಾಯಣದರ್ಶನವು ಯುಕ್ತವಾದುದು. ತದ್ದರ್ಶನಾತ್= ಶಾರೀರ ಜೀವನಿಂದ ವಿಲಕ್ಷಣವಾದ ಆತ್ಮನನ್ನು 'ಯಃ ಸರ್ವಜ್ಞಃ' ಇತ್ಯಾದಿ ಶ್ರುತಿಗಳು ತಿಳಿಸುತ್ತವೆ.

**॥ ತುಲ್ಯಂ ತು ದರ್ಶನಮ್ ॥** ಜ್ಞಾನಿಗಳಾದ ಜನಕಾದಿಗಳೂ ಕರ್ಮ ಮಾಡಿರುವುದು ಕಂಡಿದೆಯಾದ್ದರಿಂದ ಜ್ಞಾನವು ಕರ್ಮಾಂಗ ಎಂದು ನಿರ್ಧರಿಸಲಾಗದು. ಇದಕ್ಕೆ ಸಮಾನವಾಗಿ ಜ್ಞಾನಿಗಳು ಕರ್ಮವನ್ನು ಬಿಟ್ಟಿರುವ ಉದಾಹರಣೆಗಳೂ ಇವೆ—

''ಏತದ್ಧಸ್ಮ ವೈ ತದ್ವಿದ್ವಾಂಸಃ ಆಹುಃ ಋಷಯಃ
ಕಾವಷೇಯಾಃ ಕಿಮರ್ಥಾ ವಯಂ ಅಧ್ಯೇಷ್ಯಾಮಹೇ, ಕಿಮರ್ಥಾ
ವಯಂ ಯಕ್ಷ್ಯಾಮಹೇ। ಏತದ್ಧಸ್ಮ ವೈ ತತ್‌ಪೂರ್ವೇ ವಿದ್ವಾಂಸಃ
ಅಗ್ನಿಹೋತ್ರಂ ನ ಜುಹುಯಾಂಚಕ್ರಿರೇ'' (ಐ.ಆ.3.2.6)

ಇಲ್ಲಿ ಜ್ಞಾನಿಗಳಾದ ಋಷಿಗಳು ನಾವೇಕೆ ಅಧ್ಯಯನ ಮಾಡಬೇಕು, ಹೋಮಿಸಬೇಕು ಎಂದು ಹೇಳುವ ಮೂಲಕ ಜ್ಞಾನಿಗಳಿಗೆ ಕರ್ಮದ ಅಗತ್ಯವಿಲ್ಲ ಎಂದು ತಿಳಿಸಿದ್ದಾರೆ.

**॥ ಅಸಾರ್ವತ್ರಿಕೀ ॥** 'ಯದೇವ ವಿದ್ಯಯಾ ಕರೋತಿ' ಎಂದು ಕರ್ಮಾಂಗವಾಗಿ ಹೇಳಿರುವ ವಿದ್ಯೆ ಬ್ರಹ್ಮವಿದ್ಯೆಯಲ್ಲ. ಉದ್ಗೀಥೋಪಾಸನೆಯ ಸಂದರ್ಭದಲ್ಲಿ ಬಂದಿರುವ ವಾಕ್ಯ ಅದು. ಉದ್ಗೀಥೋಪಾಸನೆ ಬ್ರಹ್ಮವಿದ್ಯೆಯಲ್ಲ, ಕರ್ಮಾಂಗವಿದ್ಯೆ. ಆದ್ದರಿಂದ ಅದು ಕರ್ಮಾಂಗವಾದರೂ ಮೋಕ್ಷಕಾರಣವಾದ ಬ್ರಹ್ಮವಿದ್ಯೆ ಸಾಕ್ಷಾತ್ ಮೋಕ್ಷಸಾಧನ, ಕರ್ಮಾಂಗವಲ್ಲ.

**॥ ವಿಭಾಗಃ ಶತವತ್ ॥** 'ತಂ ವಿದ್ಯಾಕರ್ಮಣೀ ಸಮನ್ವಾರಭೇತೇ॥(ಬ.4.4.2) ಎಂದು ಹಿಂದೆ ಫಲಾರಂಭಕವಾದುದು ವಿದ್ಯೆ ಮತ್ತು ಕರ್ಮ ಎಂದು ಹೇಳಲಾಗಿದೆ. ಅವೆರಡೂ ಸೇರಿ ಒಂದೇ ಫಲಕ್ಕೆ ಆರಂಭಕಗಳಲ್ಲ, ವಿದ್ಯೆಯಿಂದ ಮೋಕ್ಷ, ಕರ್ಮದಿಂದ ಇತರ ಪುರುಷಾರ್ಥ. 'ನೂರು ರೂಪಾಯಿ ಇವರಿಬ್ಬರಿಗೆ ಕೊಡಬೇಕು' ಎಂದಾಗ ನೂರನ್ನು ವಿಭಾಗ ಮಾಡಿ ಐವತ್ತು ಐವತ್ತು ಕೊಡುವಂತೆ ಜ್ಞಾನಕರ್ಮಗಳು ಫಲಾರಂಭಕ ಎಂದಾಗಲೂ ಹೀಗೆಯೇ ವಿಭಾಗಶಃ ಫಲಾರಂಭಕವೆಂದು ತಿಳಿಯಬೇಕು.

**॥ ಅಧ್ಯಯನಮಾತ್ರವತಃ ॥** 'ಆಚಾರ್ಯಕುಲಾತ್ ವೇದಮಧೀತ್ಯ' (ಛಾಂ.8.15.1) ಎಂಬಲ್ಲೂ ಬ್ರಹ್ಮಜ್ಞಾನಿಯ ಪ್ರಸ್ತಾಪವಿಲ್ಲ. ವೇದಾಧ್ಯಯನವನ್ನು ಮಾತ್ರ ಮಾಡಿದವನು ಗೃಹಸ್ಥಧರ್ಮವನ್ನು ಆಚರಿಸಬೇಕು, ಎಂದು ಅಲ್ಲಿ ಹೇಳಲಾಗಿದೆ. ಬ್ರಹ್ಮಜ್ಞಾನಿಗೆ ಅಲ್ಲ.

**॥ ನಾವಿಶೇಷಾತ್ ॥** 'ಕುರ್ವನ್ನೇವೇಹ ಕರ್ಮಾಣಿ' ಇತ್ಯಾದಿ ಕರ್ಮವಿಧಿಯಲ್ಲೂ ಬ್ರಹ್ಮಜ್ಞಾನಿಗೆ, ಎಂಬ ವಿಶೇಷವನ್ನೇನೂ ಹೇಳಲಾಗಿಲ್ಲ. ಆದ್ದರಿಂದ ಅಲ್ಲಿ ಹೇಳಿರುವ ಕರ್ಮನಿಯಮ ಅಜ್ಞಾನಿಗಳಿಗೆ ಹೊರತು ಜ್ಞಾನಿಗಳಿಗಲ್ಲ.

**॥ ಸ್ತುತಯೇಽನುಮತಿರ್ವಾ ॥** ಅಥವಾ 'ಕುರ್ವನ್ನೇವೇಹ' ಎಂಬ ಈಶಾವಾಸ್ಯ ವಾಕ್ಯದಲ್ಲಿ ಪ್ರಕರಣವಶಾತ್ ಜ್ಞಾನಿಯ ಪರಾಮರ್ಶ ಮಾಡಿದರೂ ಆ ವಾಕ್ಯವು ಕರ್ಮನಿಯಮವನ್ನು ಹೇಳುತ್ತಿಲ್ಲ, ಜ್ಞಾನಿಯ ಸ್ತುತಿಯನ್ನು ಮಾಡುತ್ತದೆ. ಜ್ಞಾನಿಯು ನೂರು ವರ್ಷ ಕರ್ಮವನ್ನು ಮಾಡುತ್ತಲೇ ಇದ್ದರೂ ಅವನಿಗೆ ಕರ್ಮಲೇಪವಾಗುವುದಿಲ್ಲ. ಅದು ಜ್ಞಾನದ ಸಾಮರ್ಥ್ಯ, ಎಂದು. ಹೀಗೆ ಸ್ತುತಿಗಾಗಿ ಕರ್ಮದ ಅನುಜ್ಞಾನವನ್ನಷ್ಟೇ ಇಲ್ಲಿ ಮಾಡಲಾಗಿದೆ, ವಿಧಿಯನ್ನಲ್ಲ.

**॥ ಕಾಮಕಾರೇಣ ಚೈಕೇ ॥** ಕೆಲವು ಬ್ರಹ್ಮಜ್ಞಾನಿಗಳು ಜ್ಞಾನಫಲವನ್ನು ಅನುಭವಿಸುತ್ತಿರುವವರಾಗಿ ಫಲಾಂತರಸಾಧನವಾದ ಸಂತತಿಯ ಬಗ್ಗೆ ಉಪೇಕ್ಷೆ ಮಾಡಿರುವುದರ ಉಲ್ಲೇಖ ಬೃಹದಾರಣ್ಯಕದಲ್ಲಿ ಇದೆ—ಏತದ್ಧ ಸ್ಮ ವೈ ತತ್‌ಪೂರ್ವೇ ವಿದ್ವಾಂಸಃ ಪ್ರಜಾಂ ನ ಕಾಮಯಂತೇ ಕಿಂ ಪ್ರಜಯಾ ಕರಿಷ್ಯಾಮಃ ಯೇಷಾಂ ನೋಽಯಮಾತ್ಮಾ ಅಯಂ ಲೋಕಃ। ಹೀಗೆ ಕಾಮಕಾರೇಣ=ಇಚ್ಛೆಯಿಂದಲೇ ಫಲಸಾಧನವಾದ ಸಂತತಿಯಲ್ಲಿ ಉದಾಸೀನರಾಗಿದ್ದಾರೆ, ಜ್ಞಾನಿಗಳು. ಆದ್ದರಿಂದ ವಿದ್ಯೆಯು ಸ್ವತಂತ್ರವಾಗಿ ಪುರುಷಾರ್ಥಸಾಧನ, ಕರ್ಮಶೇಷವಾಗಿ ಅಲ್ಲ.

**॥ ಉಪಮರ್ದಂ ಚ ॥** ಅಷ್ಟೇ ಅಲ್ಲ, ಕರ್ಮಾಧಿಕಾರಕ್ಕೆ ಕಾರಣವಾದ ಕ್ರಿಯಾಕಾರಕ–ಫಲಸಂಬಂಧರೂಪವಾದ ಸಮಸ್ತಪ್ರಪಂಚವೇ ಬ್ರಹ್ಮಜ್ಞಾನದಿಂದ ನಿವೃತ್ತಿಯಾಗುತ್ತದೆ, ಎಂದು ಬೃಹದಾರಣ್ಯಕದಲ್ಲಿದೆ—ಯತ್ರ ವಾ ಅಸ್ಯ ಸರ್ವಮ್ ಆತ್ಮೈವಾಭೂತ್ ತತ್ ಕೇನ ಕಂ ಪಶ್ಯೇತ್?(ಬೃ.2.4.14) ಹೀಗೆ ವಿದ್ಯೆಯಿಂದ ಜ್ಞಾನಿಗೆ ಕರ್ಮಾಧಿಕಾರವೇ ಇಲ್ಲದಾಗುವುದರಿಂದ ಜ್ಞಾನವು ಕರ್ಮಶೇಷವಾಗುವುದು ಹೇಗೆ?

**॥ ಊರ್ಧ್ವರೇತಸ್ಸು ಚ ಶಬ್ದೇ ಹಿ ॥** ಬ್ರಹ್ಮವಿದ್ಯೆಯು ಊರ್ಧ್ವರೇತಸ್ಕರಾಗಿರುವ ಆಶ್ರಮಿಗಳಲ್ಲಿ ಶ್ರುತವಾಗಿದೆ. ಅಂತಹವರಿಗೆ ಕರ್ಮಾಧಿಕಾರವೇ ಇಲ್ಲ. ಅಗ್ನಿಹೋತ್ರಾದಿ

ವೈದಿಕ ಕರ್ಮಗಳು ಯಾವುವೂ ಅವರಿಗಿಲ್ಲ. ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳು ಮಾತ್ರ ಪ್ರಸಿದ್ಧವಾಗಿವೆ. ಊರ್ಧ್ವರೇತಸ್ಸು ಎಂಬ ಆಶ್ರಮಕ್ಕೆ ಏನು ಪ್ರಮಾಣ? ಶಬ್ದೇ ಹಿ=''ಬ್ರಹ್ಮಚರ್ಯಾದೇವ ಪ್ರವ್ರಜೇತ್'' ''ಯೇ ಚೇಮೇಽರಣ್ಯೇ ಶ್ರದ್ಧಾತಪ ಇತ್ಯುಪಾಸತೇ'' ಎಂದು ಮುಂತಾಗಿ ಊರ್ಧ್ವರೇತಸ್ಕರಾಗಿ ಅರಣ್ಯವಾಸಿಗಳಾದವರೇ ಈ ಆಶ್ರಮಿಗಳು.

ಆದ್ದರಿಂದ ಜ್ಞಾನದಿಂದಲೇ ಸಾಕ್ಷಾತ್ ಮೋಕ್ಷರೂಪವಾದ ಪುರುಷಾರ್ಥವು ದೊರೆಯುವುದು.

**ವಿಮರ್ಶೆ—** ಅದ್ವೈತ ಭಾಷ್ಯದಂತೆ ಮೊದಲ ಸೂತ್ರ ಸಿದ್ಧಾಂತಸೂತ್ರ. ಆಮೇಲಿನ ಆರು ಸೂತ್ರಗಳು ಪೂರ್ವಪಕ್ಷಸೂತ್ರಗಳು. ಈ ಪೂರ್ವಪಕ್ಷವನ್ನು ಮಾಡಿದವರು ವ್ಯಾಸಶಿಷ್ಯರಾದ ಜೈಮಿನಿಗಳು. 7 ರಿಂದ 17ನೆಯ ಸೂತ್ರದವರೆಗೆ ಜೈಮಿನಿಗಳ ಪೂರ್ವಪಕ್ಷವನ್ನು ನಿರಾಕರಿಸಿ ಬ್ರಹ್ಮಜ್ಞಾನವು ಕರ್ಮಾಪೇಕ್ಷೆ ಇಲ್ಲದೆ ಸ್ವತಂತ್ರವಾಗಿ ಮೋಕ್ಷಸಾಧನ ಎಂದು ಸಿದ್ಧಾಂತ ಮಾಡಲಾಗಿದೆ. ಜ್ಞಾನವು ಮೋಕ್ಷಸಾಧನ ಎನ್ನುವ ವಿಷಯದಲ್ಲಿ ವಿವಾದವಿಲ್ಲ. ಆದರೆ ಜ್ಞಾನಿಗಳಿಗೆ ಕರ್ಮವಿಲ್ಲ ಎನ್ನುವುದು ವೇದಾಂತಗಳಿಗೆ ಸಮ್ಮತವಲ್ಲ. ಉಪನಿಷತ್ತುಗಳಲ್ಲಿ ಜನಕಾದಿಗಳೂ ಕರ್ಮಾಸಕ್ತರಾದುದು ಹೇಳಲ್ಪಟ್ಟಿದೆ. ಇದನ್ನು ಜೈಮಿನಿಗಳ ಪೂರ್ವಪಕ್ಷದಲ್ಲಿ ಉಲ್ಲೇಖಿಸಿ 'ತುಲ್ಯಂ ತು ದರ್ಶನಮ್' ಎಂಬ ಸೂತ್ರದಲ್ಲಿ ಕರ್ಮತ್ಯಾಗ ಮಾಡಿದ್ದಕ್ಕೆ ಪ್ರತಿನಿದರ್ಶನವನ್ನು ಕೊಡಲಾಗಿದೆ. ಇದರಿಂದ ಕರ್ಮಮಾಡಬೇಕಾಗಿಲ್ಲ ಎಂಬ ಅಂಶವೇನೂ ಸಿದ್ಧವಾಗುವುದಿಲ್ಲ, ಕರ್ಮದಲ್ಲಿ ಕಾಮಚಾರ ಮಾತ್ರ ಸಿದ್ಧವಾದೀತು. ಬ್ರಹ್ಮಜ್ಞಾನಿಗಳಿಗೆ ಕ್ರಿಯಾ–ಕಾರಕ–ಫಲರೂಪವಾದ ಪ್ರಪಂಚವೇ ನಿವೃತ್ತವಾಗುವುದಾದಲ್ಲಿ 'ಭಿಕ್ಷಚರ್ಯಾಂ ಚರಂತಿ' ಎಂದು ಅದೇ ವಾಕ್ಯದಲ್ಲಿ ಭಿಕ್ಷಾಟನೆಯನ್ನು ಹೇಳಿದ್ದಾದರೂ ಹೇಗೆ? ಆದ್ದರಿಂದ ಫಲಕಾಮನಯಾ ಅನನುಷ್ಠಾನ, ನಿಷ್ಕಾಮತಯಾ ಅನುಷ್ಠಾನ, ಎಂದೇ ವಿರುದ್ಧ ಶ್ರುತಿಗಳ ಅಭಿಪ್ರಾಯ. ಅದರಿಂದಾಗಿಯೇ ಭಗವದ್ಗೀತೆಯಲ್ಲಿ—

ಕರ್ಮಣೈವ ಸಂಸಿದ್ಧಿಮಾಸ್ಥಿತಾ ಜನಕಾದಯಃ । (3.20) ಎಂದಿದೆ.

**ರಾಮಾನುಜ ದರ್ಶನದಲ್ಲೂ** ಈ ಸೂತ್ರಗಳಿಗೆ ಇದೇ ರೀತಿಯ ಅರ್ಥವನ್ನು ಹೇಳಲಾಗಿದೆಯಾದರೂ ಜ್ಞಾನಿಗಳಿಗೆ ಸರ್ವಥಾ ಕರ್ಮತ್ಯಾಗವನ್ನು ಅಲ್ಲಿ ಹೇಳಲಾಗಿಲ್ಲ. ಅವರಿಗೂ ನಿಷ್ಕಾಮಕರ್ಮವು ಇದೆ. ರಾಮಾನುಜಭಾಷ್ಯದಲ್ಲಿ 20ನೆಯ ಸೂತ್ರದವರೆಗೂ ಒಂದು ಅಧಿಕರಣ.

## ಅದ್ವೈತದರ್ಶನದಲ್ಲಿ ಪರಾಮರ್ಶಾಧಿಕರಣ

**ಪರಾಮರ್ಶಂ ಜೈಮಿನಿರಚೋದನಾ ಚಾಪವದತಿ ಹಿ ||** ಹಿಂದಿನ ಸೂತ್ರದಲ್ಲಿ 'ತ್ರಯಃ ಧರ್ಮಸ್ಕಂಧಾಃ(ಛಾಂ.2.23.1) ಯೇ ಚೇಮೇಽರಣ್ಯೇ ಶ್ರದ್ಧಾ ತಪ ಇತ್ಯುಪಾಸತೇ (ಛಾಂ.5.10.11)' ಎಂದು ನಾಲ್ಕು ಆಶ್ರಮಗಳನ್ನು ಪ್ರಮಾಣ ಬದ್ಧಗೊಳಿಸಲು ಛಾಂದೋಗ್ಯಶ್ರುತಿಯನ್ನು ಉದಾಹರಿಸಲಾಗಿದೆ. ಆದರೆ, ಆ ಛಾಂದೋಗ್ಯಶ್ರುತಿಯು ನಾಲ್ಕು ಆಶ್ರಮಗಳಿವೆ ಎನ್ನಲು ಪ್ರಮಾಣವಾಗುವುದಿಲ್ಲ. ''ಬ್ರಹ್ಮಸಂಸ್ಥೋಽಮೃತತ್ವಮೇತಿ' (2.23.1) 'ಬ್ರಹ್ಮಜ್ಞಾನಿಗಳಾಗಿ ಅಮೃತತ್ವವನ್ನು ಹೊಂದುತ್ತಾನೆ' ಎಂದು ಸ್ತುತಿಗಾಗಿ ಆಶ್ರಮಗಳನ್ನು ಅನುವಾದ ಮಾಡಲಾಗಿದೆ. 'ತ್ರಯಃ ಧರ್ಮಸ್ಕಂಧಾಃ=ಮೂರು ಧರ್ಮಾಶ್ರಮಗಳು'. ಯಜ್ಞ, ದಾನ, ಅಧ್ಯಯನ ಈ ಮೂರನ್ನು ಮಾಡುವ ಗೃಹಸ್ಥಾಶ್ರಮ. ತಪೋನುಷ್ಠಾನ ಮಾಡುವ ಆಶ್ರಮ ವಾನಪ್ರಸ್ಥ. ಗುರುಕುಲವಾಸಿಯಾದ ಬ್ರಹ್ಮಚಾರಿ. ಈ ಮೂವರೂ ಗುರುಕುಲದಲ್ಲೇ ಇದ್ದು ಆಚಾರನಿಷ್ಠರಾದರೆ 'ಪುಣ್ಯಲೋಕಾ ಭವಂತಿ'. ಜ್ಞಾನನಿಷ್ಠರಾದರೆ ಅಮೃತತ್ವವನ್ನು ಪಡೆಯುತ್ತಾರೆ. ಹೀಗೆ ಅನುವಾದಪರವಾದುದರಿಂದ ಇದು ಆಶ್ರಮಚತುಷ್ಟಯಕ್ಕೆ ಪ್ರಮಾಣವಾಗುವುದಿಲ್ಲ. ಆದ್ದರಿಂದ 'ಯೇ ಚೇಮೇ...' ಎನ್ನುವುದು ಪರಾಮರ್ಶಂ= ಅನುವಾದ, ಅಚೋದನಾ=ವಿಧಿಯಲ್ಲ.

ಅಪವದತಿ ಹಿ=ಶ್ರುತಿಯು ಬ್ರಹ್ಮಚರ್ಯಾದಿ ಮೂರನ್ನು ಬಿಟ್ಟಿರುವುದನ್ನು ನಿಷೇಧಮಾಡುತ್ತದೆ. 'ವೀರಹಾ ಯಾ ಏಷ ದೇವಾನಾಂ ಯೋಽಗ್ನಿಮ್ ಉದ್ವಾಸಯತೇ' 'ಆಚಾರ್ಯಾಯ ಪ್ರಿಯಂ ಧನಮಾಹೃತ್ಯ ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ' ಈ ಶ್ರುತಿಗಳು ಅಗ್ನಿತ್ಯಾಗ, ಅಪುತ್ರತ್ವವನ್ನು ನಿಷೇಧಿಸುವ ಮೂಲಕ ಊರ್ಧ್ವರೇತಸ್ತ್ವವನ್ನು ನಿರಾಕರಿಸುತ್ತಿವೆ. ಆದ್ದರಿಂದ ಮೂರು ಬಿಟ್ಟು ಆಶ್ರಮಾಂತರ ಇಲ್ಲ, ಇದು ಜೈಮಿನಿಗಳ ಮತ.

**|| ಅನುಷ್ಠೇಯಂ ಬಾದರಾಯಣಃ ಸಾಮ್ಯಶ್ರುತೇಃ ||** ಅನುಷ್ಠೇಯವಾದ ಆಶ್ರಮಾಂತರವೂ ಇದೆ ಎನ್ನುತ್ತಾರೆ, ಬಾದರಾಯಣರು. ಸಾಮ್ಯಶ್ರುತೇಃ= ಗೃಹಸ್ಥಾಶ್ರಮವನ್ನು ನಿರೂಪಿಸುವ ಶ್ರುತಿಗೆ ಸಮಾನವಾದ ಶ್ರುತಿ ಇರುವುದರಿಂದ. 'ತ್ರಯಃ ಧರ್ಮಸ್ಕಂಧಾಃ' ಎಂಬ ಶ್ರುತಿಯು ಶ್ರುತ್ಯಂತರವಿಹಿತವಾದ ಗೃಹಸ್ಥಾಶ್ರಮ ವನ್ನು ಪರಾಮರ್ಶಮಾಡುವಂತೆ ಆಶ್ರಮಾಂತರವನ್ನೂ ಪರಾಮರ್ಶಮಾಡುತ್ತದೆ. ''ನಿವೀತಂ ಮನುಷ್ಯಾಣಾಂ, ಪ್ರಾಚೀನಾವೀತಂ ಪಿತೃಣಾಂ, ಉಪವೀತಂ ದೇವಾನಾಮ್'' ಎಂಬ ಶ್ರುತಿಯಲ್ಲಿ ದೇವತಾಕಾರ್ಯದಲ್ಲಿ ಉತ್ತರೀಯವನ್ನು

ಉಪವೀತಾಕಾರದಲ್ಲಿ ಧರಿಸಬೇಕು, ಎಂದು ವಿಧಿಸುವಾಗ ಮಾನುಷಕಾರ್ಯದಲ್ಲಿ ಸೌಕರ್ಯಕ್ಕಾಗಿ ದೇಹಾರ್ಧದಲ್ಲಿ ವಸ್ತ್ರಧಾರಣೆಯು (ಸೊಂಟಕ್ಕೆ ಉತ್ತರೀಯವನ್ನು ಕಟ್ಟಿಕೊಳ್ಳುವುದು) ಪ್ರಾಪ್ತವಾದುದನ್ನು ಅನುವಾದ ಮಾಡುವಂತೆ ಪಿತೃಕಾರ್ಯದಲ್ಲೂ ಪ್ರಾಚೀನಾವೀತಿಯಾಗಿ ವಸ್ತ್ರಧಾರಣೆ ಪ್ರಮಾಣಾಂತರ ಸಿದ್ಧವಾದುದನ್ನು ಅನುವಾದ ಮಾಡಲಾಗಿದೆ. ಅದರಂತೆ ಪ್ರಕೃತದಲ್ಲಿ, ಇದು ಅನುವಾದವಾದರೂ ವಿಧಿತುಲ್ಯ.

ಸಾಕ್ಷಾತ್ ವಿಧಿಯೂ ಇದೆ—'ಏತಮೇವ ಪ್ರವ್ರಾಜಿನೋ ಲೋಕಮಿಚ್ಛಂತಃ ಪ್ರವ್ರಜಂತಿ । (ಬೃ.4.4.22)

**॥ ವಿಧಿರ್ವಾ ಧಾರಣವತ್ ॥** ಅಥವಾ, 'ತ್ರಯಃ ಧರ್ಮಸ್ಕಂಧಾಃ... ತಪಶ್ರದ್ಧೇಯೇಽಭ್ಯುಪವಸಂತ್ಯರಣ್ಯೇ' ಎಂಬುದು ವಿಧಿಯೇ ಹೊರತು, ಅನುವಾದ ವಲ್ಲ. ವಿಧಿಯಾದರೆ 'ಏತೇ ಪುಣ್ಯಲೋಕಾ ಭವಂತಿ' ಎಂಬ ಮುಂದಿನ ವಾಕ್ಯದೊಂದಿಗೆ ಏಕವಾಕ್ಯತ್ವವನ್ನು ಕೂಡಿಸುವುದು ಹೇಗೆ? ಎಂದರೆ, ಪ್ರಮಾಣಾಂತರದಿಂದ ಅಪ್ರಾಪ್ತವಾದುದರಿಂದ ಇದನ್ನು ಅನುವಾದ ಎಂದು ಪರಿಗಣಿಸಲಾಗುವುದಿಲ್ಲ. ಹೀಗಾಗಿ ಏಕವಾಕ್ಯತಾಭಂಗವಾದರೂ ವಿಧಿಯೆಂದೇ ಕಲ್ಪಿಸಬೇಕು. ಅದಕ್ಕೆ ಉದಾಹರಣೆ— ಧಾರಣವತ್। ''ಅಧಸ್ತಾತ್ ಸಮಿಧಂ ಧಾರಯನ್ನನುದ್ರವೇದುಪರಿ ಹಿ ದೇವೇಭ್ಯೋ ಧಾರಯತಿ'' ಸ್ರುವದಲ್ಲಿ ಹವಿಸ್ಸನ್ನು ಹಿಡಿದುಕೊಂಡು ಆಹವನೀಯಾಗ್ನಿಯ ಬಳಿಗೆ ಹೋಗುವಾಗ ಪ್ರೇತಾಗ್ನಿಹೋತ್ರದಲ್ಲಿ ಸ್ರುಗ್‌ದಂಡದ ಕೆಳಗೆ ಸಮಿಧೆಯನ್ನು ಧರಿಸುತ್ತಾ ಹೋಗಬೇಕು, ಎಂಬುದು ಅನುವಾದ. ಅದರ ಜೊತೆಯಲ್ಲೇ ಮುಂದೆ ಹೇಳಿದ ಸ್ರುಗ್‌ದಂಡದ ಮೇಲ್ಭಾಗದಲ್ಲಿ ಸಮಿದ್ಧಾರಣೆ ವಿಧಿ, ಎಂದು ಪರಿಗಣಿಸಲಾಗಿದೆ.

**ವಿಮರ್ಶೆ**—ಊರ್ಧ್ವರೇತಸ್ತ್ವರೂಪವಾದ ಆಶ್ರಮವು ಇದೆಯೋ ಇಲ್ಲವೋ ಎಂದು ನಿರ್ಧಾರ ಮಾಡುವ ಸಲುವಾಗಿ ಅಧಿಕರಣದ ಅಗತ್ಯವಿಲ್ಲ. 'ಯದಹರೇವ ವಿರಜೇತ್ ತದಹರೇವ ಪ್ರವ್ರಜೇತ್' ಎಂಬ ಜಾಬಾಲಶ್ರುತಿಯಲ್ಲಿ ಸ್ಪಷ್ಟವಾದ ವಿಧಿ ವಾಚಕಶಬ್ದವಿದೆ. ಹೀಗಿದ್ದಮೇಲೆ ಪ್ರಯಾಸಪಟ್ಟು ಆಶ್ರಮಾಂತರ ಇಲ್ಲ ಎಂದು ಪೂರ್ವಪಕ್ಷವಾಗಲೀ ಸಾಮ್ಯಶ್ರುತಿಯಿಂದಾಗಿ ಸಮಾಧಾನವಾಗಲೀ ಸಮಂಜಸವೆನಿಸುವು ದಿಲ್ಲ. ಅಷ್ಟೇ ಅಲ್ಲ, ಜ್ಞಾನವು ಕರ್ಮಾಂಗವಲ್ಲ ಎಂದು ಸಾಧಿಸಬೇಕಾದರೆ ಅದಕ್ಕೆ ಹೊಸದಾದ ಒಂದು ಆಶ್ರಮಾಂತರದ ಕಲ್ಪನೆ ಬೇಕಾಗಿಲ್ಲ. ಗೃಹಸ್ಥಾಶ್ರಮಿಯೇ ಜ್ಞಾನಮಾರ್ಗವನ್ನು ಅನುಸರಿಸಬಹುದು.

**ರಾಮಾನುಜಭಾಷ್ಯ**ದಲ್ಲಿ ಪುರುಷಾರ್ಥಾಧಿಕರಣದಲ್ಲೇ ಈ ಸೂತ್ರ ಸೇರಿದೆ. ಆದರೂ ಅರ್ಥದಲ್ಲಿ ವ್ಯತ್ಯಾಸವಿಲ್ಲ.

## ಅದ್ವೈತ ಭಾಷ್ಯದಲ್ಲಿ ಸ್ತುತಿಮಾತ್ರಾಧಿಕರಣ

**॥ ಸ್ತುತಿಮಾತ್ರಮುಪಾದಾನಾದಿತಿ ಚೇನ್ನಾಪೂರ್ವತ್ವಾತ್ ॥** ಛಾಂದೋಗ್ಯದಲ್ಲಿ ಉದ್ಗೀಥಸಾಮದ ಅಂಗವಾದ ಓಂಕಾರದ ಬಗ್ಗೆ ಹೀಗೆ ಹೇಳಲಾಗಿದೆ–ಪಂಚಭೂತಗಳಲ್ಲಿ ಪೃಥಿವಿಯು ಶ್ರೇಷ್ಠವಾದುದು. ಪೃಥಿವೀಗಿಂತ ಓಷಧಿಗಳು, ಸಸ್ಯಗಳಿಗಿಂತ ಪುರುಷ, 'ಸ ರಸಾನಾಂ ರಸತಮಃ ಪರಮಃ ಪರಾರ್ಧ್ಯೋ಼ಽಷ್ಟಮೋ ಯದುದ್ಗೀಥಃ' ಉದ್ಗೀಥಃ ಎಂಟನೆಯ ಶ್ರೇಷ್ಠವಸ್ತು.(ಛಾಂ.1.1.3) ಇದು ಸ್ತುತಿಮಾತ್ರ, ವಾಸ್ತವ ಅಲ್ಲ. ಕರ್ಮಾಂಗವಾದ ಉದ್ಗೀಥಸಾಮವನ್ನು ಉದ್ದೇಶಿಸಿ (ಉಪಾದಾನಾತ್) ಹೇಳಿರುವುದರಿಂದ, ಎಂದು ಪೂರ್ವಪಕ್ಷ. ಇತಿ ಚೇನ್ನ ಎಂದು ಅದನ್ನು ನಿರಾಕರಿಸಿ 'ಅಪೂರ್ವತ್ವಾತ್' ಎಂಬ ಹೇತುವಿನಿಂದ ಅದಕ್ಕೆ ವಿಧಿತ್ವವನ್ನು ಸಾಧಿಸಲಾಗಿದೆ. 'ಅಷ್ಟಮೋ ಉದ್ಗೀಥಃ=ಎಂಟನೆಯದಾದ ಉದ್ಗೀಥವು ಶ್ರೇಷ್ಠವಾದುದು, ಎಂದು ವಿಧಿ ಯೆಂದು ಪರಿಗಣಿಸಿದಾಗ ಅದು ಅಪೂರ್ವವಾದುದರಿಂದ (ತಿಳಿಯದ ವಿಷಯವಾದುದರಿಂದ) ವಾಕ್ಯವು ಅರ್ಥವತ್ತಾಗುತ್ತದೆ. ಅದನ್ನು ಸ್ತುತಿ ಎಂದು ಪರಿಗಣಿಸುವುದು ಉಚಿತವೂ ಅಲ್ಲ. ಏಕೆಂದರೆ, ಉದ್ಗೀಥವಿಧಿ ಕರ್ಮಪ್ರಕರಣದಲ್ಲಿದೆ. ಈ ವಾಕ್ಯ ಬ್ರಹ್ಮಪ್ರಕರಣದಲ್ಲಿದೆ. ಆದ್ದರಿಂದ ದೂರಸ್ಥವಿಧಿಯ ಸ್ತುತಿ ಎಂದು ಪರಿಗಣಿಸಲಾಗದು.

**॥ ಭಾವಶಬ್ದಾಚ್ಚ ॥** ಈ ಪ್ರಕರಣದಲ್ಲಿ 'ಉದ್ಗೀಥಮುಪಾಸೀತ' ಎಂದು ವಿಧಿ ವಾಚಕವಾದ ಶಬ್ದವು ಇರುವುದರಿಂದಲೂ ಇದು ಸ್ತುತಿಪರವಲ್ಲ. ತದೇಕವಾಕ್ಯತಾ ಪನ್ನವಾಗಿ ವಿಧಿಪರ.

**ವಿಮರ್ಶೆ—** 'ಉದ್ಗೀಥೋ ರಸಃ' ಎಂಬ ವಾಕ್ಯವು ಸ್ತುತಿಪರವಲ್ಲ. ಏಕೆಂದರೆ, ಭಾವಶಬ್ದಾತ್ ವಿಧಿವಾಚಕ ಶಬ್ದವಿರುವುದರಿಂದ ಎನ್ನುವುದು ಸರಿಯಲ್ಲ. ಏಕೆಂದರೆ, ಆ ವಾಕ್ಯದಲ್ಲಿ ವಿಧಿಶಬ್ದವೇ ಇಲ್ಲ. ಅದು ಉದ್ಗೀಥಕ್ಕೆ ರಸತಮತ್ವವನ್ನಷ್ಟೇ ಹೇಳುತ್ತದೆ.

## ಅದ್ವೈತಭಾಷ್ಯದಲ್ಲಿ ಪಾರಿಪ್ಲವಾಧಿಕರಣ

**॥ ಪಾರಿಪ್ಲವಾರ್ಥಾ ಇತಿ ಚೇನ್ನ ವಿಶೇಷಿತತ್ವಾತ್ ॥** ಉಪನಿಷತ್ತುಗಳಲ್ಲಿ 'ಯಜ್ಞವಲ್ಕ್ಯಸ್ಯ ದ್ವೇ ಭಾರ್ಯೇ ಬಭೂವತುಃ' (ಬೃ.4.5.1) ''ಪ್ರತರ್ದನೋ ಹ ವೈ

ದೈವೋದಾಸಿಃ ಇಂದ್ರಸ್ಯ ಪ್ರಿಯಂ ಧಾಮೋಪಜಗಾಮ'' (ಕೌ.3.1) ಹೀಗೆ ಕೆಲವು ಚರಿತ್ರೆಗಳ ಉಲ್ಲೇಖವು ಬರುತ್ತದೆ. ಇವುಗಳು ಪಾರಿಪ್ಲವಾರ್ಥಾಃ=ಪಾರಿಪ್ಲವಕ್ಕಾಗಿ ಇವೆ. ಎಂದು ಪೂರ್ವಪಕ್ಷ. ಪಾರಿಪ್ಲವ ಕರ್ಮಾಂಗವಾದುದು. ಅಶ್ವಮೇಧಯಾಗದ ಮೊದಲದಿನ ರಾಜಪರಿವಾರಕ್ಕೆ ''ಪಾರಿಪ್ಲವಮಾಚಕ್ಷೀತ'' ಎಂದು ಆರಂಭಿಸಿ ''ಮನುರ್ವೈವಸ್ವತಃ'' ಎಂದಿದೆ. ಎರಡನೆಯ ದಿನ ''ಯಮೋ ವೈವಸ್ವತಃ'', ಮೂರನೇ ದಿನ ''ವರುಣ ಆದಿತ್ಯಃ'' ಎಂದಿದೆ. ಮನ್ವಾದಿಗಳ ಚರಿತ್ರೆಯೇ ಪಾರಿಪ್ಲವ. ಅದರಂತೆ ವಿದ್ಯಾಪ್ರಕರಣದಲ್ಲೂ ಹೇಳಿರುವ ಚರಿತ್ರೆಯು ಪಾರಿಪ್ಲವ. ಅದು ವಿದ್ಯಾ ವಿಶೇಷಸಂಪಾದಕವಲ್ಲ. (ವಿದ್ಯಾಸ್ತುತಿಯಲ್ಲ.) ಎಂದು ಪೂರ್ವಪಕ್ಷ. 'ವಿಶೇಷಿತತ್ತ್ವಾತ್'' ಎಂಬ ಹೇತುವಿನಿಂದ ಸೂತ್ರಕಾರರು ಇದನ್ನು ನಿರಾಕರಿಸುತ್ತಿದ್ದಾರೆ. ಪಾರಿಪ್ಲವ ವಾಕ್ಯಗಳ ಆರಂಭದಲ್ಲಿ ''ಅಥ ಪಾರಿಪ್ಲವಮಾಚಕ್ಷೀತ'' ಎಂಬ ವಿಶೇಷವಚನವಿದೆ. ಆದರೆ, ವಿದ್ಯಾಪ್ರಕರಣಗಳಲ್ಲಿ ಈ ವಚನವಿಲ್ಲದೇ ಚರಿತ್ರೆಯ ನಿರೂಪಣೆ ಇದೆ. ಚರಿತ್ರಾಕಥನವೆಲ್ಲವೂ 'ಪಾರಿಪ್ಲವ'ದಲ್ಲಿ ಸೇರುವುದಾದಲ್ಲಿ ''ಪಾರಿಪ್ಲವಮಾಚಕ್ಷೀತ'' ಎಂಬ ವಚನದ ಅಗತ್ಯವಿಲ್ಲ. ಆದ್ದರಿಂದ ವಿದ್ಯಾಪ್ರಕರಣದಲ್ಲಿ ಹೇಳಿರುವ ಇತಿಹಾಸಕಥನ ವಿದ್ಯೆಯಲ್ಲಿ ಗೌರವವನ್ನು ಬೆಳೆಸುವುದಕ್ಕಾಗಿ.

**॥ ತಥಾ ಚೈಕವಾಕ್ಯೋಪಬಂಧಾತ್ ॥** ಆದ್ದರಿಂದಲೇ ವಿದ್ಯಾಪ್ರಕರಣದಲ್ಲಿರುವ ಇತಿಹಾಸನಿರೂಪಣೆ ಮಾಡುವ ವಾಕ್ಯಗಳು ವಿದ್ಯಾವಾಕ್ಯಗಳೊಂದಿಗೆ ಏಕವಾಕ್ಯತಯಾ ಅನ್ವಯವಾಗುತ್ತವೆ. ಯಾಜ್ಞವಲ್ಕ್ಯರು ತಮ್ಮ ಪತ್ನಿಯಾದ ಗಾರ್ಗಿಗೆ 'ಆತ್ಮಾ ವಾ ದ್ರಷ್ಟವ್ಯಃ' ಎಂದು ಉಪದೇಶ ನೀಡಿದರು, ಎಂದು. ಇದರಿಂದ ಆಯಾಯಾ ವಿದ್ಯೆಗಳಲ್ಲಿ ಪ್ರರೋಚನೆ(ಪ್ರೀತಿಜನನ) ಮತ್ತು ವಿದ್ಯೆಯನ್ನು ತಿಳಿದುಕೊಳ್ಳಲು ಸೌಕರ್ಯವಾಗುತ್ತದೆ.

**ವಿಮರ್ಶೆ**— ವಿದ್ಯಾಪ್ರಕರಣದಲ್ಲಿ ಹೇಳಿರುವ ಇತಿಹಾಸಕಥನವು ಸ್ಪಷ್ಟವಾಗಿ ವಿದ್ಯಾಂಗವೆಂದೇ ತಿಳಿದುಬರುತ್ತದೆ. ಉದಾಹರಣೆ—ಯಾಜ್ಞವಲ್ಕ್ಯರಿಗೆ ಇಬ್ಬರು ಪತ್ನಿಯರಿದ್ದರು. ಅವರಲ್ಲಿ ಗಾರ್ಗಿಯು ಅಧ್ಯಾತ್ಮದಲ್ಲಿ ಆಸಕ್ತಳಾಗಿದ್ದಳು. ಅವಳಿಗೆ ಯಾಜ್ಞವಲ್ಕ್ಯರು ''ಆತ್ಮಾ ವಾರೇ'' ಎಂದು ಉಪದೇಶಿಸಿದರು. ಹೀಗೆ ನೇರವಾಗಿ ಇಲ್ಲಿ ಹೇಳಿರುವ ಇತಿಹಾಸವು ವಿದ್ಯಾಂಗ ಎಂದು ತಿಳಿದುಬರುತ್ತದೆ. ಆದರೆ, ಯಾಗಕ್ಕೂ ವೈವಸ್ವತಮನುವಿನ ಚರಿತ್ರೆಗೂ ಯಾವ ಸಂಬಂಧವೂ ಇಲ್ಲ. ಆದ್ದರಿಂದ ಅದು 'ಪಾರಿಪ್ಲವ' ಎನಿಸಬಹುದು. ಹೀಗೆ ಇಲ್ಲಿ ಪೂರ್ವಪಕ್ಷಕ್ಕೆ ಸರಿಯಾದ ಸಮರ್ಥನೆಯೇ ಇಲ್ಲ.

## ಅದ್ವೈತಭಾಷ್ಯದಲ್ಲಿ ಅತ ಏವಚಾಧಿಕರಣ

**॥ ಅತ ಏವ ಚಾಗ್ನೀಂಧನಾದ್ಯನಪೇಕ್ಷಾ ॥** ಈ ಅಧಿಕರಣದಲ್ಲಿ ಪುರುಷಾರ್ಥಾಧಿಕರಣದ ಫಲವನ್ನು ಹೇಳಲಾಗಿದೆ. ಅತ ಏವ=ಬ್ರಹ್ಮಜ್ಞಾನವು ಮೋಕ್ಷಕ್ಕೆ ಕಾರಣವಾದುದರಿಂದಲೇ ಅಗ್ನೀಂಧನಾದ್ಯನಪೇಕ್ಷಾ=ಅಗ್ನಿ ಮತ್ತು ಇಂಧನಸಾಧ್ಯವಾದ ಆಶ್ರಮಕರ್ಮಗಳ ಸಹಾಯವು ಜ್ಞಾನಕ್ಕೆ ಇಲ್ಲ. ಜ್ಞಾನಹುಟ್ಟಲು ಅಂತಃಕರಣ ಶುದ್ಧಿದ್ವಾರಾ ಕರ್ಮದ ಅಪೇಕ್ಷೆ ಇದೆ. ಆದರೆ, ಜ್ಞಾನವು ಫಲ ನೀಡಲು ಕರ್ಮದ ಅಪೇಕ್ಷೆ ಇಲ್ಲ.

ವಿಮರ್ಶೆ—'ಅತ ಏವ' ಶಬ್ದದಿಂದ ವ್ಯವಹಿತವಾದ, ಆರಂಭದ ಸೂತ್ರದಲ್ಲಿ ಹೇಳಿರುವ ವಿಷಯದ ಪರಾಮರ್ಶೆ ಉಚಿತವಲ್ಲ.

## ವಿಶಿಷ್ಟಾದ್ವೈತದಲ್ಲಿ ಸೂತ್ರದ ಅರ್ಥ

ರಾಮಾನುಜಭಾಷ್ಯದಲ್ಲಿ ಅತ ಏವ ಎಂದರೆ ಊರ್ಧ್ವರೇತಸ್ಕರಲ್ಲಿ ಬ್ರಹ್ಮವಿದ್ಯೆಯು ಪ್ರತಿಷ್ಠಿತವಾಗುತ್ತದೆ, ಎಂದಿರುವುದರಿಂದ ವಿದ್ಯೆಗೆ ಆಶ್ರಮಕರ್ಮದ ಅಪೇಕ್ಷೆ ಇಲ್ಲ, ಎಂದರ್ಥ. ಆದ್ದರಿಂದ ಪರಿವ್ರಾಜಕರಿಗೂ ವಿದ್ಯಾಧಿಕಾರವಿದೆ.

## ಶಾಂಕರಭಾಷ್ಯದಲ್ಲಿ ಸರ್ವಾಪೇಕ್ಷಾಧಿಕರಣ

**॥ ಸರ್ವಾಪೇಕ್ಷಾ ಚ ಯಜ್ಞಾದಿ ಶ್ರುತೇರಶ್ವವತ್ ॥** ಸರ್ವ ಆಶ್ರಮಕರ್ಮಗಳ ಅಪೇಕ್ಷೆಯೂ ಜ್ಞಾನಕ್ಕಿದೆ. ಯಜ್ಞಾದಿಶ್ರುತೇಃ='ತಮೇತಂ ವೇದಾನುವಚನೇ ಬ್ರಾಹ್ಮಣಾ ವಿವಿದಿಷಂತಿ। ಯಜ್ಞೇನ ದಾನೇನ ತಪಸಾನಾಶಕೇನ ॥ (ಬೃ.4.4.22)

ಈ ಶ್ರುತಿಯಲ್ಲಿ 'ಯಜ್ಞೇನ ವಿವಿದಿಶಂತಿ' ಎಂದಿರುವುದರಿಂದ ಯಜ್ಞಾದಿ ಕರ್ಮಗಳ ಆಪೇಕ್ಷೆ ಜ್ಞಾನದ ಉತ್ಪತ್ತಿಗೆ ಇದೆ. ಉತ್ಪತ್ತಿಯಾದ ಮೇಲೆ ಮೋಕ್ಷರೂಪವಾದ ಫಲವು ಹುಟ್ಟಬೇಕಾದರೆ ಕರ್ಮದ ಅಪೇಕ್ಷೆ ಇಲ್ಲ. ಅಶ್ವವತ್=ಕುದುರೆಯು ಉಳುವುದಕ್ಕೆ ಬೇಕಾಗಿಲ್ಲ, ಆದರೆ, ರಥ ಎಳೆಯಲು ಬೇಕು. ಅದರಂತೆ, ಜ್ಞಾನಕ್ಕೆ ಸ್ವೋತ್ಪತ್ತಿಗಾಗಿ ಕರ್ಮದ ಅಪೇಕ್ಷೆ ಇದೆ, ಮೋಕ್ಷಹೇತುವಾಗಬೇಕಾದರೆ ಕರ್ಮಾಪೇಕ್ಷೆ ಇಲ್ಲ.

**॥ ಶಮದಮಾದ್ಯುಪೇತಃ ಸ್ಯಾತ್ ತಥಾಽಪಿ ತು ತದ್ವಿಧೇಸ್ತದಂಗತಯಾ ತೇಷಾಮವಶ್ಯಾನುಷ್ಠೇಯತ್ವಾತ್ ॥** ''ಶಾಂತೋ ದಾಂತ ಉಪರತಃ'' ಎಂದಿರುವುದರಿಂದ ವಿದ್ಯಾರ್ಥಿಯು ಶಮ-ದಮಾದಿ ಗುಣಗಳನ್ನು ರೂಢಿಸಿಕೊಳ್ಳಬೇಕು. ತಥಾಪಿತು=

ವಿದ್ಯೆಯಿಂದ ಮೋಕ್ಷವು ದೊರಕಬೇಕಾದರೆ ಸಹಾಯದ ಅಗತ್ಯವಿಲ್ಲದಿದ್ದರೂ ತದ್ವಿಧೇಃ=ವಿದ್ಯಾರ್ಥಿಗೆ ಶಮಾದಿಗಳು ವಿಹಿತವಾದುದರಿಂದ ಅವನು ಶಮಾದ್ಯುಪೇತಃ ಸ್ಯಾತ್=ಶಮಾದಿ ಸಂಪನ್ನನಾಗಬೇಕು. 'ಯಜ್ಞೇನ ದಾನೇನ' ಎಂದಿರುವುದರಿಂದ ಯಜ್ಞಾದಿ ಆಶ್ರಮಧರ್ಮಗಳೂ ತದಂಗತಯಾ=ಜ್ಞಾನಾಂಗತಯಾ ಅವಶ್ಯಾನುಷ್ಠೇಯ. ಜ್ಞಾನ ಬಂದ ಮೇಲೆ ಅವುಗಳ ಅಗತ್ಯವಿಲ್ಲ. ''ಏವಂವಿತ್ ಶಾಂತೋ ದಾಂತಃ'' ಎಂದಿರುವುದರಿಂದ ಶಮಾದಿಗಳು ಜ್ಞಾನಕ್ಕೆ ಅಂತರಂಗ ಸಾಧನಗಳು. ''ವಿವಿದಿಶಂತಿ ಯಜ್ಞೇನ'' ಎಂದಿರುವುದರಿಂದ ಯಜ್ಞಾದಿಗಳು ಬಹಿರಂಗ ಸಾಧನಗಳು.

**ವಿಮರ್ಶೆ—** ಆಶ್ರಮ ಧರ್ಮಕ್ಕೂ ಶಮಾದಿಗಳಿಗೂ ಜ್ಞಾನೋತ್ಪಾದಕತ್ವವು ಸಮಾನವಾದುದರಿಂದ ಮೊದಲ ಸೂತ್ರದಲ್ಲಿ ಯಜ್ಞಾದಿಗಳಿಗೆ ಜ್ಞಾನೋತ್ಪಾದಕತ್ವವನ್ನು ಹೇಳಿದಮೇಲೆ 'ತಥಾಪಿ ತು ಶಮಾದ್ಯುಪೇತಃ ಸ್ಯಾತ್' ಎಂದು ಶಮಾದಿಗಳನ್ನು ವಿಶಿಷ್ಯ ವಿಧಿಸಲು ಕಾರಣವಿಶೇಷವಿಲ್ಲ. 'ತಥಾಪಿ ಶಮಾದ್ಯುಪೇತಃ ಸ್ಯಾತ್' ಎನ್ನುವ ಸೂತ್ರ ಖಂಡದಿಂದ ಯಜ್ಞಾದಿಗಳ ಸಹಾಯ ಜ್ಞಾನಕ್ಕೆ ಅಗತ್ಯವಿಲ್ಲವಾದರೂ ಶಮಾದಿಗಳ ಅಪೇಕ್ಷೆ ಇದೆ, ಎಂಬ ಅರ್ಥವು ಸಹಜವಾಗಿ ತಿಳಿಯುತ್ತದೆ. ಆದರೆ, ಈ ಪ್ರಮೇಯವನ್ನು ಅದ್ವೈತದರ್ಶನವು ಅಂಗೀಕರಿಸಿಲ್ಲ. ಹೀಗೆ ಈ ಸೂತ್ರವ್ಯಾಖ್ಯಾನವು ಸೂತ್ರಕಾರರಿಗೆ ಸಮ್ಮತವೆಂದು ಹೇಳಲಾಗದು.

## ಶಾಂಕರಭಾಷ್ಯದಲ್ಲಿ ಸರ್ವಾನ್ನಾನುಮತ್ಯಧಿಕರಣ

**॥ ಸರ್ವಾನ್ನಾನುಮತಿಶ್ಚ ಪ್ರಾಣಾತ್ಯಯೇ ತದ್ದರ್ಶನಾತ್ ॥** ಪ್ರಾಣವಿದ್ಯಾ ಪ್ರಕರಣದಲ್ಲಿ 'ನ ಹವಾ ಏವಂವಿದಿ ಕಿಂಚನಾನನ್ನಂ ಭವತಿ' (ಛಾಂ.5.2.1) ಬೃಹದಾರಣ್ಯಕದಲ್ಲೂ ಹೀಗೆಯೇ ಇದೆ. ಆದರೆ ಸರ್ವಾನ್ನಭಕ್ಷಣದ ಈ ಅನುಜ್ಞೆಯು ಶಮಾದಿಗಳಂತೆ ವಿದ್ಯಾಂಗವಲ್ಲ. ಅದು ಪ್ರಾಣವಿದ್ಯೆಯ ಸ್ತುತಿ ಮಾತ್ರ. ಪ್ರಾಣಾಗ್ನಿ ವಿದ್ಯೆಯಲ್ಲಿ ಎಲ್ಲರ ಭೋಜನವೂ ಪ್ರಾಣಾಹುತಿ ಎನ್ನಲಾಗಿದೆ. ಈ ಅನುಸಂಧಾನ ವಿರುವವನು ನಾಯಿಯಿಂದಾರಂಭಿಸಿ ಮನುಷ್ಯರವರೆಗೆ ಎಲ್ಲರೂ ಯಾವುದನ್ನು ತಿನ್ನುವರೊ ಅವೆಲ್ಲವೂ ಪ್ರಾಣಾಹುತಿ ಎಂದು ತಿಳಿಯಬಹುದು. ಆದರೆ ನಾಯಿ ಯಂತಹ ಪ್ರಾಣಿ ತಿನ್ನುವುದನ್ನು ಅವನು ತಿನ್ನಲಾಗದು. ಆದರೆ, ಪ್ರಾಣಹೋಗುವ ಪರಿಸ್ಥಿತಿಯಲ್ಲಿ ಅಭಕ್ಷ್ಯಭಕ್ಷಣವನ್ನು ಉಪನಿಷತ್ತೇ ತೋರಿಸುತ್ತದೆ—ಛಾಂದೋಗ್ಯದ ಪ್ರಕರಣ ಇದು—ಕೆಂಪುವರ್ಣದ ಕ್ಷುದ್ರ ಪಕ್ಷಿ ಮಟಚೀ. ಕುರುದೇಶದಲ್ಲಿ ಎಲ್ಲಾ

ಸಸ್ಯಗಳನ್ನೂ ಈ ಹಕ್ಕಿಗಳು ತಿಂದವು. ಅದರಿಂದ ಅಲ್ಲಿ ಬರಗಾಲಬಂತು. ಚಾಕ್ರಾಯಣ ಋಷಿಯು ಇಭ್ಯನಿರುವ ಗ್ರಾಮಕ್ಕೆ ಬಂದ. ಹಸಿವಿನಿಂದ ಕಂಗಾಲಾಗಿ ಇಭ್ಯನು ತಿಂದುಳಿದ ಕುಲ್ಮಾಷಗಳನ್ನು=ಕೆಟ್ಟ ಉದ್ದನ್ನು ತಿಂದ. ಆದರೆ ನೀರನ್ನು ಉಚ್ಛಿಷ್ಟ ಎಂದು ನಿರಾಕರಿಸಿದ. ಮತ್ತೆ ಮರುದಿನವೂ ಹೀಗೆಯೇ ನಡೆಯಿತು. ಇದರಿಂದ, ಪ್ರಾಣಹೋಗುವ ಸಂದರ್ಭ ಬಂದಾಗ ಸರ್ವಾನ್ನಾನುಮತಿ ಇದೆ, ಎಂದು ತಿಳಿಯುತ್ತದೆ. ಆದರೂ ಅದು ಜ್ಞಾನಾಂಗವಲ್ಲ.

**॥ ಅಬಾಧಾಚ್ಚ ॥** ಹೀಗೆ ಅಭ್ಯಕ್ಷ್ಯಭಕ್ಷಣವು ದೋಷವಾದುದರಿಂದಲೇ ''ಆಹಾರಶುದ್ಧೌ ಸತ್ವಶುದ್ಧಿಃ, ಸತ್ವಶುದ್ಧೌ ಧ್ರುವಾ ಸ್ಮೃತಿಃ'' ಎಂಬ ಶಾಸ್ತ್ರವು ಅಬಾಧಿತವಾಗುತ್ತದೆ. ''ಆಹಾರ ಶುದ್ಧವಾದರೆ ಅಂತಃಕರಣವು ಶುದ್ಧವಾಗುತ್ತದೆ. ಅಂತಃಕರಣವು ಶುದ್ಧವಾದರೆ ಧ್ಯಾನ ಸಾಧ್ಯವಾಗುತ್ತದೆ'' ಎಂದು ಆ ಶಾಸ್ತ್ರದ ಅರ್ಥ.

**॥ ಅಪಿ ಸ್ಮರ್ಯತೇ ॥** ಸ್ಮೃತಿಯೂ ಅಭಕ್ಷ್ಯಭಕ್ಷಣವು ಆಪದ್ಧರ್ಮ, ಎಂದು ಹೇಳುತ್ತದೆ—

ಜೀವಿತಾತ್ಯಯಮಾಪನ್ನೋ ಯೋಽನ್ನಮತ್ತಿ ಯತಸ್ತತಃ ।
ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥
''ಮದ್ಯಂ ನಿತ್ಯಂ ಬ್ರಾಹ್ಮಣಃ (ವರ್ಜಯೇತ್)''

**॥ ಶಬ್ದಶ್ಚಾತೋಽಕಾಮಚಾರೇ ॥** ಯಥೇಚ್ಛಾಹಾರದ ನಿಷೇಧಕ್ಕೆ ಶ್ರುತಿಯೂ ಇದೆ—''ತಸ್ಮಾದ್ ಬ್ರಾಹ್ಮಣಃ ಸುರಾಂ ನ ಪಿಬೇತ್'' (ಕಾಠಕಸಂಹಿತಾ)

**ವಿಮರ್ಶೆ—** ಬ್ರಹ್ಮಜ್ಞಾನ ಬಂದಮೇಲೆ ಅದ್ವೈತದರ್ಶನದಲ್ಲಿ ಕರ್ಮನಿರ್ಬಂಧ ಇಲ್ಲ. ತತ್ಪೂರ್ವದಲ್ಲಿ ಅಭಕ್ಷ್ಯ-ಅಭಕ್ಷಣವು ಜ್ಞಾನಾಂಗ ಇತ್ಯಾದಿವಿಚಾರವು ಪ್ರಕೃತ ಜ್ಞಾನಪಾದಕ್ಕೆ ಸಂಗತವಲ್ಲ. ಚಾಕ್ರಾಯಣನು ಬ್ರಹ್ಮಜ್ಞಾನಿ. ಅವನಿಗೆ ಅಭಕ್ಷ್ಯಭಕ್ಷಣದಿಂದಾಗಿ ಹಾನಿ ಇಲ್ಲ. ಅಂದಮೇಲೆ ಅದರ ದೃಷ್ಟಾಂತದಿಂದ ಅಜ್ಞಾನಿಗಳಲ್ಲಿ ಭಕ್ಷ್ಯನಿಯಮದ ಚಿಂತನೆ ಅಸಂಗತ.

ಈ ಎಲ್ಲಾ ಅಧಿಕರಣಗಳನ್ನೂ ರಾಮಾನುಜಭಾಷ್ಯದಲ್ಲಿ ಹೀಗೆಯೇ ವ್ಯಾಖ್ಯಾನಿಸಲಾಗಿದೆ.

**ಇಲ್ಲಿಗೆ ಸ್ತುತ್ಯಧಿಕರಣವು ಮುಗಿಯಿತು.**

## ೫. ಉಭಯಲಿಂಗಾಧಿಕರಣಮ್

**॥ ಓಂ ಸರ್ವಥಾಽಪಿ ತು ತ ಏವೋಭಯಲಿಂಗಾತ್ ಓಂ ॥ ೩೪ ॥**

**ಸರ್ವಪ್ರಕಾರೇಣೋತ್ಸಾಹೇಽಪಿ ಯೇ ಜ್ಞಾನಯೋಗ್ಯಾಸ್ತ ಏವ ಜ್ಞಾನಂ ಪ್ರಾಪ್ನುವಂತಿ ನಾನ್ಯೇ ।**

**'ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯು-ರ್ವಿಶೋಕೋಽವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ'**

**ಇತಿ ಶ್ರುತ್ಯಾಽಽಚಾರ್ಯೋಪದೇಶಸಾಮ್ಯೇಽಪಿ ವಿರೋಚನೋ ವಿಪರೀತಜ್ಞಾನಮಾಪೇಂದ್ರಃ ಸಮ್ಯಗ್‌ಜ್ಞಾನಮಿತ್ಯುಭಯವಿಧಲಿಂಗಾತ್ ॥**

ಎಲ್ಲಾ ವಿಧದ ಪ್ರಯತ್ನಮಾಡಿದರೂ ಯಾರು ಜ್ಞಾನಯೋಗ್ಯರೋ ಅವರೇ ಜ್ಞಾನವನ್ನು ಪಡೆಯುತ್ತಾರೆ. 'ಯ ಆತ್ಮಾ' (ಛಾಂ.8.7.3) ಎಂದು ಬ್ರಹ್ಮದೇವರು ವಿರೋಚನ ಮತ್ತು ಇಂದ್ರರಿಗೆ ಒಂದೇ ಕಾಲದಲ್ಲಿ ಏಕವಿಧವಾಗಿ ಉಪದೇಶ ಕೊಟ್ಟರೂ ವಿರೋಚನ ವಿಪರೀತಜ್ಞಾನವನ್ನು ಪಡೆದ, ಇಂದ್ರ ಸರಿಯಾದ ಜ್ಞಾನವನ್ನು ಪಡೆದ. ಯೋಗ್ಯರಿಗೆ ಜ್ಞಾನಪ್ರಾಪ್ತಿ ಅಯೋಗ್ಯರಿಗೆ ವಿಪರೀತಜ್ಞಾನಪ್ರಾಪ್ತಿ. ಹೀಗೆ ಎರಡು ವಿಧವಾದ ಲಿಂಗವು ಕಂಡಿರುವುದರಿಂದ ಯೋಗ್ಯರೇ ಜ್ಞಾನವನ್ನು ಪಡೆಯುತ್ತಾರೆ.

**ವಿವರಣೆ**— ಇಂದ್ರ ಸುರೋತ್ತಮ, ವಿರೋಚನ ಅಸುರೋತ್ತಮ. ಅವರಿಬ್ಬರೂ ಬ್ರಹ್ಮದೇವರ ಬಳಿ ಮೂವತ್ತೆರಡು ಸಾವಿರ ವರ್ಷಗಳ ಕಾಲ ಉಪಸತ್ತಿಯನ್ನು ಮಾಡಿದರು. ಬ್ರಹ್ಮದೇವರು ಇಬ್ಬರನ್ನೂ ಜೊತೆಗೂಡಿಸಿ ಬ್ರಹ್ಮೋಪದೇಶ ಮಾಡಿದರು—'ಯ ಏಷೊಂತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮಾ' ಎಂದು. ಇದನ್ನು ಕೇಳಿದ ಇಂದ್ರ ಅಕ್ಷಿಸ್ಥನಾದ ಅಪಹತಪಾಪನಾದ ಶ್ರೀಹರಿಯೇ ಆತ್ಮನೆಂದು ತಿಳಿದ. ವಿರೋಚನ ಕಣ್ಣಿನಲ್ಲಿ ಕಾಣುವ ಪ್ರತಿಬಿಂಬವೇ ಆತ್ಮನೆಂದು, ತಿಳಿದ. ಮತ್ತೊಬ್ಬರ ಕಣ್ಣಲ್ಲಿ ಬಿದ್ದ ಪ್ರತಿಬಿಂಬವು ಬ್ರಹ್ಮನಾದರೆ ಬಿಂಬ ಪ್ರತಿಬಿಂಬಗಳಿಗೆ ಐಕ್ಯವಾದುದರಿಂದ ಬಿಂಬನಾದ ತಾನೂ ಬ್ರಹ್ಮನೆಂದು ವಿರೋಚನ ತಿಳಿದ. ಇದರಿಂದ ತಪಸ್ಸು ಬ್ರಹ್ಮಚರ್ಯ ಗುರುಸೇವೆ ಮುಂತಾದ ಮಹೋತ್ಸಾಹವು ಇದ್ದರೂ ಯೋಗ್ಯರಿಗೆ ಮಾತ್ರ ಜ್ಞಾನಪ್ರಾಪ್ತಿ

ಎಂದು ತಿಳಿಯುತ್ತದೆ. ಅಯೋಗ್ಯರಿಗೆ ಜ್ಞಾನ ಬರುವುದಿಲ್ಲ ಮಾತ್ರವಲ್ಲ, 'ಅಯೋಗ್ಯರು ಜ್ಞಾನಕ್ಕಾಗಿ ಪ್ರಯತ್ನಪಟ್ಟರೆ ಪಾಪವೂ ಬರುತ್ತದೆ–ಅನರ್ಥವಾಗುತ್ತದೆ.' ''ತುಶಬ್ದಾತ್ ವಿಪರ್ಯಯಂ ಪ್ರಾಪ್ನೋತಿ ಚ । ಅಮೃತಾರ್ಥಂ ಪ್ರಯತಮಾನ ಇವ ರಾಹುಃ । ಯೋಗ್ಯಃ ಉತ್ಸಾಹೇನ ಜ್ಞಾನಂ ಪ್ರಾಪ್ನೋತಿ, ಅಮೃತಮಿವಾಮರಾಃ ।'' (ತತ್ತ್ವಪ್ರದೀಪ)

**ಶ್ರುತ್ಯರ್ಥ—** ಯಾವ ಆತ್ಮನು ಪಾಪರಹಿತನೋ ಅಜರಃ=ಮುಪ್ಪಿಲ್ಲದವನು. ವಿಮೃತ್ಯುಃ=ಮರಣರಹಿತನು. ವಿಶೋಕಃ=ದುಃಖರಹಿತನೋ ಅವಿಜಿಘತ್ಸಃ=ಹಸಿವಿಲ್ಲದವನು, ಅಪಿಪಾಸಃ=ನೀರಡಿಕೆ ಇಲ್ಲದವನು. ಸತ್ಯಕಾಮಃ=ಅವನ ಕಾಮನೆಗಳೆಲ್ಲವೂ ಈಡೇರುತ್ತವೆ. ಸತ್ಯಸಂಕಲ್ಪಃ=ಅವನು ಅಂದುಕೊಂಡಂತೆ ಆಗುತ್ತದೆ. ಸಃ=ಅಂತಹ ಆತ್ಮನು ಅನ್ವೇಷ್ಟವ್ಯಃ=ತಿಳಿಯಲ್ಪಡಬೇಕು, ಸಃ ವಿಜಿಜ್ಞಾಸಿತವ್ಯಃ=ಅವನೇ ವಿಚಾರ ಮಾಡಲ್ಪಡಬೇಕು.''

ಹೀಗೆ ಬ್ರಹ್ಮಸ್ವರೂಪವನ್ನು ನಿರೂಪಿಸಿ ಬ್ರಹ್ಮದೇವರು 'ಯ ಏಷೋऽಂತರಕ್ಷಿಣಿ' ಎಂದು ಉಪದೇಶಿಸಿದರು.

ಅವಿಜಿಘತ್ಸಃ ಅಪಿಪಾಸಃ ಎಂಬ ಬಗ್ಗೆ ಗುರ್ವರ್ಥದೀಪಿಕಾದಲ್ಲಿ ಹೀಗಿದೆ– ಉಭಯವಿಧೇಚ್ಛಾಯಾ ಅಪಿ ನವನೀತಭಕ್ಷಕೇ ಕ್ಷೀರಪಾತರಿ ಚ ಕೃಷ್ಣೇ ಅವಕ್ತುಮಶಕ್ಯತ್ವಾತ್ ತನ್ನಿಮಿತ್ತಪೀಡಾಭಾವ ಏವ ತದುಭಯಾಭಾವ ಇತಿ ಭಾವಃ। ಶ್ರೀಕೃಷ್ಣ ಹಾಲು ಕುಡಿದಿದ್ದಾನೆ, ಬೆಣ್ಣೆ ಮೆದ್ದಿದ್ದಾನೆ. ಹೀಗಾಗಿ ಕುಡಿಯುವ ತಿನ್ನುವ ಇಚ್ಛೆ ಅವನಿಗೆ ಇದೆ. ಆದರೂ ಅಪಿಪಾಸಃ, ಅವಿಜಿಘತ್ಸಃ ಎಂದರೆ ಅವನಿಗೆ ಕುಡಿಯುವುದರಿಂದ, ತಿನ್ನುವುದರಿಂದ ತೊಂದರೆ ಏನೂ ಆಗುವುದಿಲ್ಲ ಎಂದು ಭಾವ.

## ॥ ಓಂ ಅನಭಿಭವಂ ಚ ದರ್ಶಯತಿ ಓಂ ॥ ೩೫ ॥

**'ದೈವೀಮೇವ ಸಂಪತ್ತಿಂ ದೇವಾ ಅಭಿಗಚ್ಛಂತ್ಯಾಸುರೀಮೇವ ಚಾಸುರಾ ನ್ಯೈ(ವೈ)ತಯೋರಭಿಭವಃ ಕದಾಚಿತ್ ಸ್ವಭಾವ ಏವ ಹ್ಯವತಿಷ್ಠತೇ'**

**ಇತಿ ಸ್ವಭಾವಾನಭಿಭವಂ ಚ ದರ್ಶಯತಿ ॥**

ಜೀವಸ್ವಭಾವವು ಎಂದೂ ಬದಲಾಗದು ಎಂದೂ ಶ್ರುತಿ ಹೇಳುತ್ತದೆ— 'ದೇವತೆಗಳು ಏನಿದ್ದರೂ ದೈವೀಸಂಪತ್ತನ್ನೇ ಹೊಂದುತ್ತಾರೆ, ಅಸುರರು ಆಸುರೀ

ಸಂಪತ್ತನ್ನೇ ಹೊಂದುತ್ತಾರೆ. ಎಂದೂ ಈ ಸ್ವಭಾವಗಳಿಗೆ ಅಭಿಭವ ಇಲ್ಲ. ಸ್ವಭಾವವು ಸ್ವಾಭಾವಿಕವಾಗಿಯೇ ಇರುತ್ತದೆ.'' ಈ ಶ್ರುತಿಯು ಸ್ವಭಾವದ ಅನಭಿಭವವನ್ನು ಹೇಳುತ್ತದೆ.

**ವಿವರಣೆ—** ಅಸುರರು ಜ್ಞಾನಕ್ಕೆ ಅಯೋಗ್ಯರಾದರೂ ಅವರ ಅಯೋಗ್ಯತೆಯು ಹತ್ತಿಕ್ಕಲ್ಪಟ್ಟು ಅವರು ಜ್ಞಾನಿಗಳೂ ಆಗಬಹುದು. ಇದಕ್ಕೆ ತತ್ತ್ವಪ್ರದೀಪದಲ್ಲಿ 'ಯೋಗ ವ್ಯಾಘ್ರವತ್' ಎಂದು ದೃಷ್ಟಾಂತವನ್ನು ಕೊಡಲಾಗಿದೆ. ಯೋಗಿಯೊಬ್ಬ ಹುಲಿಯಾಗುವಂತೆ ಎಂದು. ತತ್ತ್ವಪ್ರಕಾಶಿಕಾದಲ್ಲಿ ವಿಶ್ವಾಮಿತ್ರನು ಮಹಾಪ್ರಯತ್ನದಿಂದ ಬ್ರಾಹ್ಮಣನಾದುದನ್ನು ಉದಾಹರಿಸಲಾಗಿದೆ. ಈ ಪೂರ್ವಪಕ್ಷಕ್ಕೆ ಉತ್ತರ—ಯೋಗ್ಯತೆಯು ಎಂದೂ ಬದಲಾಗುವುದಿಲ್ಲ. ಸ್ವಭಾವತಃ ಅಸುರರೆಂದೂ ಜ್ಞಾನಿಗಳಾಗುವುದಿಲ್ಲ. ಮನುಷ್ಯತ್ವ, ಕ್ಷತ್ರಿಯತ್ವಾದಿಗಳು ಯೋಗಿ–ವಿಶ್ವಾಮಿತ್ರಾದಿಗಳ ಸ್ವಭಾವವಲ್ಲ. ಆದ್ದರಿಂದ ಅದು ಬದಲಾಗಬಹುದು.

## ॥ ಓಂ ಅಂತರಾ ಚಾಪಿ ತು ತದ್ದೃಷ್ಟೇಃ ಓಂ ॥ ೩೬ ॥

**ಸಮ್ಯಗ್ಜ್ಞಾನವಿಪರೀತಜ್ಞಾನಯೋರಂತರಾ ಸ್ಥಿತಾನಾಮಪಿ ದೇವಾಸುರ ಭಾವಯೋರ್ದಾರ್ಢ್ಯದೃಷ್ಟೇಃ ॥**

ತತ್ತ್ವಜ್ಞಾನ ಮತ್ತು ವಿಪರೀತಜ್ಞಾನಗಳ ಮಧ್ಯದಲ್ಲಿರುವ ಮಿಶ್ರಜೀವರಿಗೂ ದೇವ–ಅಸುರ ಸ್ವಭಾವದ ದಾರ್ಢ್ಯವು ಶ್ರುತಿಯಲ್ಲೂ ಲೋಕದಲ್ಲೂ ಕಂಡಿದೆ.

**ವಿವರಣೆ—** ಸಜ್ಜೀವ ಮತ್ತು ದುರ್ಜೀವರ ಸ್ವಭಾವಕ್ಕೆ ನಾಶವಿಲ್ಲ ಎಂದು ಹಿಂದಿನ ಸೂತ್ರದಲ್ಲಿ ಹೇಳಿ ಈ ಸೂತ್ರದಲ್ಲಿ ಮಿಶ್ರಜೀವರ ಸ್ವಭಾವಕ್ಕೂ ನಾಶವಿಲ್ಲ, ಎಂದು ಹೇಳಲಾಗಿದೆ. ಮಿಶ್ರಜೀವರಲ್ಲಿ ಕೆಲವರಿಗೆ ದೇವಭಾವ–ಅಸುರಭಾವ ಇವೆರಡರಲ್ಲೂ ಬಹುಮಾನವಿರಬಹುದು. ಅಥವಾ ಎರಡರಲ್ಲೂ ದ್ವೇಷ ಇರಬಹುದು, ಇಲ್ಲವೇ ಎರಡರಲ್ಲೂ ಔದಾಸೀನ್ಯವಿರಬಹುದು, ಎಂದು ತತ್ತ್ವಪ್ರದೀಪದಲ್ಲಿದೆ.

## ॥ ಓಂ ಅಪಿ ಸ್ಮರ್ಯತೇ ಓಂ ॥ ೩೭ ॥

'ಅಸುರಾ ಆಸುರೇಣೈವ ಸ್ವಭಾವೇನ ಚ ಕರ್ಮಣಾ ।
ಜ್ಞಾನೇನ ವಿಪರೀತೇನ ತಮೋ ಯಾಂತಿ ವಿನಿಶ್ಚಯಾತ್ ॥

**ದೇವಾ ದೈವಸ್ವಭಾವೇನ ಕರ್ಮಣಾ ಚಾಪ್ಯಸಂಶಯಮ್ ।**
**ಸಮ್ಯಗ್ಜ್ಞಾನೇನ ಪರಮಾಂ ಗತಿಂ ಗಚ್ಛಂತಿ ವೈಷ್ಣವೀಮ್ ॥**

**ನಾನಯೋರನ್ಯಥಾಭಾವಃ ಕದಾಚಿತ್ ಕ್ವಾಪಿ ವಿದ್ಯತೇ ।**
**ಮಾನುಷಾ ಮಿಶ್ರಮತಯೋ ವಿಮಿಶ್ರಗತಯೋಽಪಿ ಚ ॥'**

**ಇತಿ ಸ್ಕಾಂದೇ ।**

ಸ್ಕಾಂದಪುರಾಣದಲ್ಲಿ ಹೀಗಿದೆ—ಅಸುರರು ಅಸುರ ಸ್ವಭಾವದಿಂದ ಅದಕ್ಕೆ ಯೋಗ್ಯವಾದ ಕೆಟ್ಟಕೆಲಸಗಳಿಂದ, ಅನ್ಯಥಾಜ್ಞಾನದಿಂದ ನಿಶ್ಚಯವಾಗಿಯೂ ತಮಸ್ಸಿಗೆ ಹೋಗುತ್ತಾರೆ. ದೇವತೆಗಳು, ದೇವಸ್ವಭಾವದಿಂದ ಸತ್ಕರ್ಮದಿಂದ ತತ್ತ್ವಜ್ಞಾನದಿಂದ ಮೋಕ್ಷವನ್ನು ಹೊಂದುತ್ತಾರೆ. ಇದರಲ್ಲಿ ಸಂದೇಹವಿಲ್ಲ. ಇವರಿಬ್ಬರ ಸ್ವಭಾವದಲ್ಲಿ ಎಂದೂ ಎಲ್ಲೂ ಬದಲಾವಣೆ ಇಲ್ಲ. ಮನುಷ್ಯರು ದೇವಾಸುರ ಮಿಶ್ರಬುದ್ಧಿಯವರು. ಅವರಿಗೆ ಸುಖ-ದುಃಖ ಮಿಶ್ರವಾದ ಗತಿಯೇ ಆಗುತ್ತದೆ.

## ॥ ಓಂ ವಿಶೇಷಾನುಗ್ರಹಂ ಚ ಓಂ ॥ ೩೮ ॥

**'ಶೃಣ್ವೇ ವೀರ ಉಗ್ರಮುಗ್ರಂ ದಮಾಯ-**
**ನ್ನನ್ಯಮನ್ಯಮತಿನೇನೀಯಮಾನಃ ।**
**ಏಧಮಾನದ್ವಿಳುಭಯಸ್ಯ ರಾಜಾ**
**ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್ ॥'**

**(ಋ. 6.47.16)**

**ಇತಿ ವಿಶೇಷಾನುಗ್ರಹಂ ಚ ದರ್ಶಯತಿ ದೇವೇಷು ಪರಮೇಶ್ವರಸ್ಯ ।**

**'ಅಸುರಾನ್ ದಮಯನ್ ವಿಷ್ಣುಃ**
**ಸ್ವಪದಂ ಚ ಸುರಾನ್ ನಯನ್ ।**
**ಪುನಃಪುನರ್ಮಾನುಷಾಂಸ್ತು**
**ಸೃತಾವಾವರ್ತಯತ್ಯಸೌ ॥' ಇತಿ ಚ ಭವಿಷ್ಯತ್ಪರ್ವಣಿ ॥**

ಭಗವಂತನು ಜ್ಞಾನಿಗಳಿಗೆ ವಿಶೇಷ ಅನುಗ್ರಹವನ್ನೂ ಮಾಡುತ್ತಾನೆ. ಅದನ್ನು

ಋಗ್ವೇದಮಂತ್ರ ತಿಳಿಸುತ್ತದೆ. ವೀರಃ=ಮಾಡಿದ್ದನ್ನು ಕೊನೆಗೊಳಿಸುವ ಉಭಯಸ್ಯ=ತಮಸ್ಸು ಮತ್ತು ಮೋಕ್ಷಗಳ ರಾಜಾ=ಒಡೆಯನಾದ ಇಂದ್ರಃ= ಪರಮಾತ್ಮನು ಉಗ್ರಮ್ ಉಗ್ರಮ್=ಎಲ್ಲ ದೈತ್ಯರನ್ನೂ ದಮಾಯನ್=ತಮಸ್ಸಿನಲ್ಲಿ ಹಾಕುತ್ತಾ ಅನ್ಯಂ ಅನ್ಯಂ=ದೈತ್ಯರಲ್ಲದ ದೇವತೆಗಳನ್ನು ಅತಿನೇನೀಯಮಾನಃ= ಉಚ್ಚವಾದ ತನ್ನ ಸ್ಥಾನಕ್ಕೆ ಒಯ್ಯುತ್ತಾ ಏಧಮಾನದ್ವಿಟ್=ಯೋಗ್ಯತೆಗೆ ಮೀರಿ ಮಾಡುವುದನ್ನು ಸಹಿಸದವನಾಗಿ, ವಿಶಃ=ಮನುಷ್ಯಪ್ರಜೆಗಳನ್ನು ಚೋಷ್ಕೂಯತೇ= ಭೂಮಿಯಲ್ಲೂ ನರಕದಲ್ಲೂ ತಿರುಗಾಡಿಸುತ್ತಾನೆ.

ಮಹಾಭಾರತದ ಭವಿಷ್ಯತ್‌ಪರ್ವದಲ್ಲಿಯೂ ಇದೆ—ವಿಷ್ಣುವು ಅಸುರರನ್ನು ನಿಗ್ರಹ ಮಾಡುತ್ತಾ ದೇವತೆಗಳನ್ನು ತನ್ನದಾದ ಮೋಕ್ಷಪದವಿಗೆ ಒಯ್ಯುತ್ತಾ ಮನುಷ್ಯರನ್ನು ಮತ್ತೆ ಮತ್ತೆ ಸಂಸಾರದಲ್ಲಿ ತಿರುಗಿಸುತ್ತಾನೆ.

## ॥ ಓಂ ಅತಸ್ತ್ವಿತರಜ್ಜ್ಯಾಯೋ ಲಿಂಗಾಚ್ಚ ಓಂ ॥ ೩೯ ॥

**ದೇವಭಾಗಾದಸುರಭಾಗ ಏವ ಬಹುಲಃ । 'ತಸ್ಮಾನ್ನ ಜನ(ತಾ)ಮಿಯಾತ್' (ಬೃ.ಉ. 3.3.20) ಇತಿ ಲಿಂಗಾತ್। ಚಶಬ್ದಾತ್- 'ತತಃ ಕನೀಯಸಾ ಏವ ದೇವಾ ಜ್ಯಾಯಸಾ ಅಸುರಾಃ' (ಬೃ.ಉ. 3.3.1) ಇತಿ ಶ್ರುತೇಶ್ಚ ।**

**'ಅಸುರಾ ಬಹುಲಾ ಯಸ್ಮಾತ್ತಸ್ಮಾನ್ನ ಜನತಾಮಿಯಾತ್ ।'**

**ಇತಿ ಚ ಬ್ರಾಹ್ಮೇ ॥**

ದೇವತೆಗಳ ಸಂಖ್ಯೆಗಿಂತಲೂ ದೈತ್ಯರ ಸಂಖ್ಯೆಯೇ ಹೆಚ್ಚು. ಇದಕ್ಕೆ ಜ್ಞಾಪಕ–'ತಸ್ಮಾನ್ನ ಜನತಾಮಿಯಾತ್=ದೈತ್ಯರೇ ಹೆಚ್ಚಾದುದರಿಂದ ಜನರ ಗುಂಪಿಗೆ ಹೋಗಬಾರದು' ಎಂಬ ಬೃಹದಾರಣ್ಯಕಶ್ರುತಿ. ಸೂತ್ರದ ಚಶಬ್ದದಿಂದ ''ಆದ್ದರಿಂದ ದೇವತೆಗಳೇ ಕಡಿಮೆ, ದೈತ್ಯರು ಸಂಖ್ಯೆಯಲ್ಲಿ ಹೆಚ್ಚು'' ಎಂಬ ಶ್ರುತಿಯೂ ಸೂಚಿತವಾಗಿದೆ. ಬ್ರಾಹ್ಮಪುರಾಣದಲ್ಲಿ ಹೀಗಿದೆ—ಅಸುರರೇ ಹೆಚ್ಚಾದುದರಿಂದ ಜನರ ಗುಂಪಿನಲ್ಲಿ ಹೋಗಬಾರದು.

**ವಿವರಣೆ—** ಒಂದು ವೇಳೆ ಅಸುರಭಾವವು ಅಭಿಭೂತವಾಗಿ ದೇವತ್ವ ಪ್ರಾಪ್ತಿಯಾಗುವುದಿದ್ದಲ್ಲಿ ಅಸುರರು ಕಡಿಮೆಯಾಗಿ ದೇವತೆಗಳೇ ಹೆಚ್ಚಾಗಿ ಇರಬೇಕಾಗಿತ್ತು. ಆದರೆ, ವಸ್ತುಸ್ಥಿತಿ ಹೀಗಿಲ್ಲ ದೇವತೆಗಳೇ ಕಡಿಮೆ, ಅಸುರರು ಹೆಚ್ಚು.

ತತ್ತ್ವಪ್ರದೀಪದಲ್ಲಿ ಅಸುರರು ಹೆಚ್ಚು ಎನ್ನುವ ಮಹಾಸಂಹಿತೆಯ ಪ್ರಮಾಣವನ್ನು ಉಲ್ಲೇಖಿಸಲಾಗಿದೆ—

ದ್ವಯಾ ಬ್ರಹ್ಮಸುತಾಸ್ತತ್ರ ದೈತೇಯಾ ಬಹವಃ ಸ್ಮೃತಾಃ ।
ತಮೋಭೂತಾ ಸತ್ವರೂಪಾ ಅಲ್ಪಸಂಖ್ಯಾಸುರಾ ಸ್ಮೃತಾಃ ॥

**॥ ಓಂ ತದ್‌ಭೂತಸ್ಯ ತು ತದ್ಭಾವೋ ಜೈಮಿನೇರಪಿ ನಿಯಮಾತದ್ರೂಪಾಭಾವೇಭ್ಯಃ ಓಂ ॥ ४೦ ॥**

**ಅಸುರಜಾತೇರೇವಾಸುರತ್ವಂ ದೇವಜಾತೇರೇವ ದೇವತ್ವಂ ಜೈಮಿನೇರಪಿ ಸಿದ್ಧಮೇವ ।**
**'ನಾಸುರಾ ದೈವೀಂ ನ ದೇವಾ ಆಸುರೀಂ ನ ಮನುಷ್ಯಾ ದೈವೀಮಾಸುರೀಂ ಚ ಗತಿಮೀಯುರಾತ್ಮೀಯಾಮೇವ ಜಾತಿಮನುಭವಂತಿ' ಇತಿ ನಿಯಮಶ್ರುತೇಃ ।**
**'ನಾಸುರಾಣಾಂ ದೈವಂ ರೂಪಂ ನ ದೇವಾನಾಮಾಸುರಂ ನ ಚೋಭಯಂ ಮನುಷ್ಯಾಣಾಂ ಯೋ ಯದ್ರೂಪಃ ಸ ತದ್ರೂಪೋ ನಿಸರ್ಗೋ ಹ್ಯೇವೈಷ ಭವತಿ' ಇತ್ಯೇತದ್ರೂಪತ್ವಶ್ರುತೇಃ ।**
**'ತಂ ಭೂತಿರಿತಿ ದೇವಾ ಉಪಾಸಾಂಚಕ್ರಿರೇ ತೇ ಬಭೂವುಸ್ತಸ್ಮಾದ್ಧಾಪ್ಯೇತರ್ಹಿ ಸುಪ್ತೋ ಭೂರ್ಭೂರಿತ್ಯೇವ ಪ್ರಶ್ವಸಿತ್ಯಭೂತಿರಿತ್ಯಸುರಾಸ್ತೇ ಹ ಪರಾಬಭೂವುಃ' ಇತಿ ದೇವಾಸುರಾಣಾಂ ಭಾವಾಭಾವಶ್ರುತೇಶ್ಚ ।**
**'ದೇವಾನಾಂ ಭೂತಿರಿತ್ಯೇವ ಮನೋ ವಿಷ್ಣೌ ಸ್ವಭಾವತಃ ।**
**ಅಸುರಾಣಾಮಭೂತಿತ್ವೇ ನೈತನ್ನೇಯಮತೋಽನ್ಯಥಾ ॥**
**ದೇವಾಃ ಶಾಪಾಭಿಭೂತತ್ವಾತ್ ಪ್ರಹ್ಲಾದಾದ್ಯಾ ಬಭೂವಿರೇ ।**
**ಅತಃ ಸುಗತಿರೇತೇಷಾಂ ನಾನ್ಯಥಾ ವ್ಯತ್ಯಯೋ ಭವೇತ್ ॥'**
**ಇತಿ ಚಾಧ್ಯಾತ್ಮೇ ।**

ಅಸುರಜಾತಿಯವರಿಗೆ ಆಸುರಸ್ವಭಾವ, ದೇವತಾಜಾತಿಗೆ ಮಾತ್ರ ದೇವತ್ವ ಇದು ಜೈಮಿನಿಗಳಿಗೂ ಸಮ್ಮತ. ನಿಯತಸ್ವಭಾವವನ್ನು ತಿಳಿಸುವ ಶ್ರುತಿ ಇದೆಯಾದ್ದರಿಂದ. ನಾಸುರಾ ದೈವೀಂ=ಅಸುರರು ದೇವಸ್ವಭಾವವನ್ನು ಪಡೆಯುವುದಿಲ್ಲ. ದೇವತೆಗಳು

ಆಸುರಭಾವವನ್ನು ಹೊಂದುವುದಿಲ್ಲ. ಮನುಷ್ಯರು ದೈವ–ಆಸುರ ಗತಿಯನ್ನು ಪಡೆಯುವುದಿಲ್ಲ. ತಮತಮಗೆ ಯೋಗ್ಯವಾದ ಗತಿಯನ್ನೂ ಸ್ವಭಾವವನ್ನೂ ಅವರವರು ಅನುಭವಿಸುತ್ತಾರೆ.

ಅವರವರಿಗೆ ಅವರ ಸ್ವಭಾವದ ನಾಶವಿಲ್ಲ ಎಂದು ತಿಳಿಸುವ ಶ್ರುತಿಯೂ ಇದೆಯಾದ್ದರಿಂದ ನಾಸುರಾಣಾಂ ದೈವಂ ರೂಪಂ=ಅಸುರರಿಗೆ ದೈವಜ್ಞಾನವು ಬರುವುದಿಲ್ಲ. ದೇವತೆಗಳಿಗೆ ಅಸುರರಿಗಿರುವ ಅನ್ಯಥಾಜ್ಞಾನ ಇಲ್ಲ. ಮನುಷ್ಯರಿಗೆ ಈ ಎರಡು ವಿಧದ ಜ್ಞಾನವೂ ಇಲ್ಲ. ಯಃ ಯದ್ರೂಪಃ=ಯಾರ ಸ್ವರೂಪ ಎಂತಹ ಜ್ಞಾನರೂಪವೋ ಸಃ ತದ್ರೂಪಃ=ಅವರಿಗೆ ಅದೇ ರೀತಿಯ ಜ್ಞಾನವು ಪ್ರಾಪ್ತಿಯಾಗುತ್ತದೆ. ಇದು ಜೀವಸ್ವಭಾವವಾಗಿರುತ್ತದೆ. ದೇವತೆಗಳಿಗೆ ಭೂತಿಯನ್ನೂ ದೈತ್ಯರಿಗೆ ಅಭೂತಿಯನ್ನೂ ಹೇಳುವ ಶ್ರುತಿ ಇರುವುದರಿಂದ.

ಆ ಬ್ರಹ್ಮನನ್ನು ದೇವತೆಗಳು ಭೂತಿಮಿತಿ=ಜ್ಞಾನೈಶ್ವರ್ಯಪ್ರದನೆಂದು ಉಪಾಸಾಂಚಕ್ರಿರೇ=ಧ್ಯಾನಿಸಿದರು. ಹೀಗಾಗಿ ಅವರು ಸುಖ—ಜ್ಞಾನಾದಿಗುಣಗಳಿಂದ ಯುಕ್ತರಾಗಿ ಬಭೂವುಃ=ಆದರು. ಆದ್ದರಿಂದಲೇ ಇಂದೂ ಸುಪ್ತಃ=ಮಲಗಿದ ಜೀವರಲ್ಲಿರುವ ಪ್ರಾಣದೇವ ಭೂರ್ಭೂಃ=ಭೂಭೂ ಎಂದೇ ಪ್ರಶ್ವಸಿತಿ= ಉಸಿರಾಡುತ್ತಾನೆ. (ಸ್ಥಿತ್ವಾ ಸುಪ್ತೇಷು ತಂ ವಿಷ್ಣುಂ ಭೂರ್ಭೂರಿತ್ಯೇವ ಶಂಸತಿ।) ಅಸುರರು ಅಭೂತಿರಿತಿ=ತಮಗೆ ಬ್ರಹ್ಮನು 'ಅಭೂತಿ' ಕಾರಣ, ಎಂದು ಉಪಾಸನೆ ಮಾಡಿದರು. ಅವನು ಜ್ಞಾನೈಶ್ವರ್ಯಾದಿಗುಣರಹಿತನೆಂದೂ ಧ್ಯಾನಿಸಿದರು. ಅವರು ಪರಾಬಭೂವುಃ=ಜ್ಞಾನೈಶ್ವರ್ಯಹೀನರಾಗಿ ಅಂಧಂತಮಸ್ಸಿಗೆ ಬಿದ್ದರು. ಇದು ಐತರೇಯದಲ್ಲಿದೆ.

(ಪ್ರಮಾಣ ಶ್ಲೋಕದಲ್ಲಿರುವ ಗತಿ–ಜಾತಿ ಶಬ್ದಗಳಿಗೆ ಸ್ವಭಾವ ಎಂದು ಅರ್ಥ. ರೂಪಶಬ್ದಕ್ಕೆ ತತ್ತ್ವಜ್ಞಾನಾದಿಗಳು ಅರ್ಥ, ಎಂದು ತತ್ತ್ವಪ್ರಕಾಶಿಕಾದಲ್ಲಿದೆ)

ಅಧ್ಯಾತ್ಮದಲ್ಲಿ ಹೀಗಿದೆ—ದೇವತೆಗಳ ಮನಸ್ಸಿನಲ್ಲಿ ಬ್ರಹ್ಮನು ಭೂತಿಃ= ಜ್ಞಾನೈಶ್ವರ್ಯಾದಿಗುಣಪ್ರದ ಎಂದೇ ಸ್ವಾಭಾವಿಕವಾಗಿ ಇರುತ್ತದೆ. ಅಸುರರ ಮನದಲ್ಲಿ ಬ್ರಹ್ಮನು ಅಭೂತಿ ಎಂದೇ ಇದೆ. ಈ ನಿಯಮಕ್ಕೆ ಎಂದೂ ವ್ಯತ್ಯಾಸ ಇಲ್ಲ. ದೇವತೆಗಳು ಶಾಪಾದಿಕಾರಣಗಳಿಂದಾಗಿ ಪ್ರಹ್ಲಾದನಂತೆ ಅಸುರಜಾತಿಯಲ್ಲಿ ಹುಟ್ಟುತ್ತಾರೆ. ಅದು ಸ್ವಾಭಾವಿಕವಲ್ಲ. ಆದ್ದರಿಂದ ದೇವತೆಗಳಿಗೆ ಸದ್ಗತಿಯೇ ಆಗುತ್ತದೆ.

**ವಿವರಣೆ—** ಸೂತ್ರದಲ್ಲಿ 'ನಿಯಮಾತದ್ರೂಪಾಭಾವೇಭ್ಯಃ' ಎಂದೂ ಮೂರು ಕಾರಣಗಳನ್ನು ಕೊಡಲಾಗಿದೆ. ನಿಯಮ, ಅತದ್ರೂಪತ್ವ ಅಭಾವ. ಈ ಶಬ್ದಗಳು

ತತ್ತದ್ ವಾಚಕವಾದ ಶ್ರುತಿಗಳಿಗೆ ಉಪಲಕ್ಷಕ. ನಿಯಮಶ್ರುತಿ. 2.ತದ್ರೂಪತ್ವಾಭಾವವನ್ನು ನಿಷೇಧಿಸುವ ಶ್ರುತಿ. 3.ಅಭಾವ–ಭಾವ ಅಂದರೆ ಅಭೂತಿ–ಭೂತಿಗಳನ್ನು ಹೇಳುವ ಶ್ರುತಿ. ಈ ಮೂರು ಶ್ರುತಿಗಳಿರುವುದರಿಂದ ಜೈಮಿನಿಗಳೂ ವ್ಯಾಸಮತವನ್ನು ಅಂಗೀಕರಿಸಿದ್ದಾರೆ. ಆದ್ದರಿಂದ ಪುರುಷಾರ್ಥಾಧಿಕರಣದಂತೆ (3.4.1) ಅಧಿಕಾರಿ ಭೇದೇನ ವ್ಯವಸ್ಥೆ ಮಾಡಬೇಕಾಗಿಲ್ಲ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ಸರ್ವಥಾಽಪಿ ತು ತ ಏವೋಭಯಲಿಂಗಾತ್ ಓಂ ॥** (ಅತ್ರ ಜ್ಞಾನಸ್ಯ ಅಧಿಕಾರಮಾತ್ರಪ್ರಾಪ್ಯತ್ವಂ ಸಾಧ್ಯತೇ । ಉಭಶಬ್ದ–ಪರ್ಯಾಯೋಽತ್ರ ಉಭಯಶಬ್ದಃ। ಸರ್ವಥಾಪಿ=ದೇಶ–ಕಾಲ ಗುರೂಪಸತ್ತಿಶ್ರವಣಾದಿ–ಅನೇಕೋತ್ಸಾಹೇಽಪಿ ತೇಏವ= ಪ್ರಸ್ತುತಯೋಗ್ಯಾ ಏವ ಜ್ಞಾನಂ ಪ್ರಾಪ್ನುವಂತೀತಿ ಶೇಷಃ। ನತು ಅಯೋಗ್ಯಾಃ। ಪ್ರತ್ಯುತ ವಿಪರೀತಜ್ಞಾನಮ್ ಆಪ್ನುವಂತಿ ಇತಿ ತೋಃ ಅರ್ಥಃ ತತ್ತ್ವಪ್ರದೀಪೋಕ್ತಃ। ಕುತಃ ? ಉಭಯ ಲಿಂಗಾತ್=ಯೋಗ್ಯಾಯೋಗ್ಯಯೋಃ ಜ್ಞಾನಪ್ರಾಪ್ತಿ–ಅಪ್ರಾಪ್ತಿ ರೂಪೋಭಯಲಿಂಗದರ್ಶನಾತ್ ಇತ್ಯರ್ಥಃ। ಇಂದ್ರ–ವಿರೋಚನಯೋಃ ''ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಏಷ ತೇ ಆತ್ಮಾ ಇತಿ ಹೋವಾಚ'' ಇತಿ ಪ್ರಜಾಪತಿನಾ ಉಪದಿಷ್ಟಯೋಃ ಜ್ಞಾನಪ್ರಾಪ್ತಿ–ಅಪ್ರಾಪ್ತ್ಯೋಃ ಶ್ರುತೌ ದರ್ಶನಾತ್ ಇತಿ ಭಾವಃ ॥)

ಯದ್ವಾ, ಉಭಯತ್ರ=ಅಯೋಗ್ಯೇನ ಉತ್ಸಾಹಿನಾಪಿ ಜ್ಞಾನಂ ನಾಪ್ಯತೇ ಪ್ರತ್ಯುತ ವಿಪರೀತಜ್ಞಾನಮ್ ಆಪ್ಯತೇ ಇತಿ ಉಭಯತ್ರ ಲಿಂಗದರ್ಶನಾತ್=ವಿರೋಚನಸ್ಯ ಜ್ಞಾನಾನಾಪ್ತಿ–ವಿಪರೀತ ಜ್ಞಾನಾವಾಪ್ತಿ ದರ್ಶನರೂಪಾ ಲಿಂಗಾದಿತ್ಯರ್ಥಃ॥)

ಈ ಅಧಿಕರಣದಲ್ಲಿ ಅಧಿಕಾರವಿದ್ದವರಿಗೆ ಮಾತ್ರ ಜ್ಞಾನಪ್ರಾಪ್ತಿಯನ್ನು ಸಾಧಿಸಲಾಗಿದೆ. ಸರ್ವಥಾಪಿ=ದೇಶ–ಕಾಲ-ಗುರೂಪಸತ್ತಿ–ಶ್ರವಣಾದಿಪ್ರಯತ್ನಗಳನ್ನು ಮಾಡಿದರೂ ತೇ ಏವ=ಯೋಗ್ಯತಾವಿದ್ದವರಿಗೆ ಮಾತ್ರ ಜ್ಞಾನವು ಪ್ರಾಪ್ತಿಯಾಗುತ್ತದೆ. ಅಯೋಗ್ಯರಿಗೆ ಜ್ಞಾನವು ಪ್ರಾಪ್ತಿಯಾಗುವುದಿಲ್ಲ. ಅಷ್ಟೇ ಅಲ್ಲ, ಅಯೋಗ್ಯರು ವಿಪರೀತಜ್ಞಾನವನ್ನೇ ಪಡೆಯುತ್ತಾರೆ. ಉಭಯಲಿಂಗಾತ್=ಯೋಗ್ಯರಿಗೆ ಜ್ಞಾನಪ್ರಾಪ್ತಿ ಮತ್ತು ಅಯೋಗ್ಯರಿಗೆ ಜ್ಞಾನಾಪ್ರಾಪ್ತಿಗೆ ಉದಾಹರಣೆಯು ಕಂಡಿರುವುದರಿಂದ. ಅದಕ್ಕೆ ಉದಾಹರಣೆ–ಇಂದ್ರ ಮತ್ತು ವಿರೋಚನರು. ಅಥವಾ, ಉಭಯಲಿಂಗಾತ್=

ಅಯೋಗ್ಯರಿಗೆ ಜ್ಞಾನಪ್ರಾಪ್ತಿ ಇಲ್ಲ, ವಿಪರೀತಜ್ಞಾನವೇ ಆಗುತ್ತದೆ ಎನ್ನುವುದಕ್ಕೂ ಅದೇ ಉದಾಹರಣೆಯಾಗಿ ಕಂಡಿರುವುದರಿಂದ.

**।। ಓಂ ಅನಭಿಭವಂ ಚ ದರ್ಶಯತಿ ಓಂ ।।** (ಸ್ವಭಾವಸ್ಯೇತಿ ಶೇಷಃ । ''ದೈವೀಮೇವ ಸಂಪತ್ತಿಂ ದೇವಾ ಅಭಿಗಚ್ಛಂತಿ । ಆಸುರೀಮೇವ ಚಾಸುರಾಃ...'' ಇತಿ ಶ್ರುತಿಃ ಸ್ವಭಾವಸ್ಯ ಅನಭಿಭವಂ ಚ ದರ್ಶಯತಿ । ಅಯೋಗ್ಯತಾ ಚ ಸ್ವಭಾವ ಇತಿ ಕಥಂ ತದಭಿಭವಃ ಇತಿ ಚಾರ್ಥಃ ।)

''ದೈವೀಮೇವ...'' ಎಂಬ ಶ್ರುತಿಯು ದೈತ್ಯರ ಅಯೋಗ್ಯತೆ ಮತ್ತು ದೇವತೆಗಳ ಯೋಗ್ಯತೆ ಇವು ಅವರವರ ಸ್ವಭಾವ, ಅದಕ್ಕೆ ಎಂದೂ ಅಭಿಭವ ಇಲ್ಲ, ಎಂದು ಹೇಳುತ್ತದೆ.

**।। ಓಂ ಅಂತರಾ ಚಾಪಿ ತು ತದ್ದೃಷ್ಟೇಃ ಓಂ ।।**(ಅಪಿಃ ಮಿಶ್ರಬುದ್ಧೀನಾಮಿತಿ ಸಮುಚ್ಚಿನೋತಿ । ಸ್ವಭಾವಾನಭಿಭವ ಇತ್ಯಸ್ತಿ 'ಸರ್ವಥಾಪಿತು' ಇತ್ಯತ್ರ ಪ್ರಸ್ತುತ–ಸಮ್ಯಗ್‌ಜ್ಞಾನ–ವಿಪರೀತಜ್ಞಾನಯೋಃ ಇಹಾನ್ವಯಃ । ಚ ಏವ । ಸಮ್ಯಗ್‌ಜ್ಞಾನ–ಅಸಮ್ಯಗ್‌ಜ್ಞಾನೇ ಅಂತರಾ ಚ=ತಯೋರ್ಮಧ್ಯೇ ಏವ ಸ್ಥಿತಿಃ ಇತಿ ಶೇಷಃ । ಕೇಷಾಂ ? ತದ್ವಯಯೋಗ್ಯ–ದೇವಾಸುರಾನ್ಯೇಷಾಂ, ಮಾನವಾನಾಂ ಇತಿ ಯಾವತ್ । ಅನಭಿಭವ ಏವ=ಮಿಶ್ರಬುದ್ಧಿತ್ವಮೇವ ನ ಜ್ಞಾನಾದಿಪ್ರಾಪ್ತಿಃ । ಕುತಃ? ತದ್ದೃಷ್ಟೇಃ ತದಿತಿ ತಂತ್ರಮ್, ತುಃ ವಿಶೇಷೇ । ತೇಷಾಂ ತತ್ರ=ಮಿಶ್ರಬುದ್ಧಿತ್ವೇ ಏವ ತಸ್ಯ=ದಾರ್ಢ್ಯಸ್ಯ ದೃಷ್ಟೇಃ ಇತ್ಯರ್ಥಃ ।)

ಅಂತರಾ ಎಂದರೆ ಮಧ್ಯದವರು. ಪ್ರಕೃತದಲ್ಲಿ ಪ್ರಸ್ತುತವಾದ ತತ್ತ್ವಜ್ಞಾನ ಮತ್ತು ಮಿಥ್ಯಾಜ್ಞಾನದ ಮಧ್ಯದಲ್ಲಿರುವವರು. ಅವರೇ ಮಿಶ್ರರು. ಅವರ ಸ್ವಭಾವಕ್ಕೂ ಅಭಿಭವ ಇಲ್ಲ. ತದ್ದೃಷ್ಟೇಃ, ತೇಷಾಂ=ಅವರಿಗೆ ತಸ್ಯ=ಮಿಶ್ರಜ್ಞಾನದ ದಾರ್ಢ್ಯವೇ ದೃಷ್ಟೇಃ=ಕಂಡಿರುವುದರಿಂದ.

**।। ಓಂ ಅಪಿ ಸ್ಮರ್ಯತೇ ಓಂ ।।** ('ಅಸುರಾ ಆಸುರೇಣ' ಇತಿ ಸ್ಮೃತ್ಯಾ ತಾದೃಕ್ ಸ್ವಭಾವತ್ವಂ, ತದನುಗುಣಫಲಮಿತಿ ತದ್‌ದ್ವಯಂ ಸ್ಮರ್ಯತೇಽಪಿ ಇತ್ಯರ್ಥಃ ।।)

'ಅಸುರಾ ಆಸುರೇಣ' ಎಂಬ ಸ್ಮೃತಿಯಲ್ಲಿ ದೈವ–ಅಸುರ ಸ್ವಭಾವಗಳು ಹಾಗೂ ಆ ಸ್ವಭಾವಕ್ಕೆ ಅನುಗುಣವಾದ ಫಲವೂ ಹೇಳಲ್ಪಟ್ಟಿದೆ.

**।। ಓಂ ವಿಶೇಷಾನುಗ್ರಹಂ ಚ ಓಂ ।।** (ದೇವೇಷು ಈಶಸ್ಯ ವಿಶೇಷಾನುಗ್ರಹಂ ಚ

'ಶೃಣ್ವೇ ವೀರ' ಇತಿ ಶ್ರುತಿಃ ದರ್ಶಯತಿ। ಅತಶ್ಚ ತದ್ಧೇತುಜ್ಞಾನಮಪಿ ತೇಷಾಮೇವ ಇತ್ಯರ್ಥಃ।)

ದೇವತೆಗಳ ಮೇಲೆ ಭಗವಂತನ ವಿಶೇಷವಾದ ಅನುಗ್ರಹವನ್ನು 'ಶೃಣ್ವೇ ವೀರ' ಎಂಬ ಋಗ್ವೇದ ಮಂತ್ರವು ತಿಳಿಸುತ್ತದೆ. ಆದ್ದರಿಂದ ಆ ಅನುಗ್ರಹಕ್ಕೆ ಕಾರಣವಾದ ಜ್ಞಾನವೂ ಅವರಿಗೇ ಇದೆ.

**॥ ಓಂ ಅತಸ್ತ್ವಿತರಜ್ಜ್ಯಾಯೋ ಲಿಂಗಾಚ್ಚ ಓಂ ॥** (ದೈತ್ಯಾನಾಂ ಸ್ವಭಾವಾಭಿಭವೋ ನೇತ್ಯೇತದ್ ಯುಕ್ತ್ಯಾ ಆಹ। ಅತ ಇತಿ ವಿಶೇಷೇತಿ ಪ್ರಸ್ತುತದೇವಭಾಗಸ್ಯ ಪರಾಮರ್ಶಃ। ತುರೇವ। ಅಗ್ರೇಽನ್ವೇತಿ ಅತಃ=ದೇವಭಾಗಾದಿ ರತರತ್=ಅಸುರಜಾತಮೇವ ಜ್ಯಾಯಃ=ಅತಿಬಹುಲಮ್ ಅಸ್ತಿ ಯತಃ ಅತಃ ಸ್ವಭಾವಾನಭಿಭವಃ ಇತ್ಯನುಷಂಗಃ। ಅನ್ಯಥಾ ದೇವಭಾಗಾದೂನಾ ಸ್ಯಾದಿತಿ ಭಾವಃ। ಜ್ಯಾಯಸ್ತ್ವಮೇವ ಕುತಃ ? ಲಿಂಗಾತ್='ತಸ್ಮಾನ್ನ ಜನತಾಮಿಯಾತ್' ಇತಿ ಜನಸಂಘಾಪ್ರವೇಶೋಕ್ತ್ಯನ್ಯಥಾನುಪಪತ್ತಿರೂಪಲಿಂಗಾತ್ 'ಕನೀಯಾ ಏವ ದೇವಾಃ ಜ್ಯಾಯಸಾ ಅಸುರಾಃ' ಇತಿ ಶ್ರುತೇಶ್ಚ ಇತಿ ಚಾರ್ಥಃ।)

ಈ ಸೂತ್ರದಲ್ಲಿ ದೈತ್ಯರ ಸ್ವಭಾವಕ್ಕೆ ನಾಶವಿಲ್ಲ ಎಂಬುದನ್ನು ಯುಕ್ತಿಯಿಂದ ಸಮರ್ಥಿಸಲಾಗಿದೆ. ಅತಃ=ದೇವಭಾಗಕ್ಕಿಂತ ಇತರತ್=ಬೇರೆಯಾದ ಅಸುರರ ಗುಂಪೇ ಜ್ಯಾಯಃ=ಅತಿ ಹೆಚ್ಚಾಗಿದೆ. ಆದ್ದರಿಂದ ದೈತ್ಯರ ಸ್ವಭಾವನಾಶವಿಲ್ಲ. ಅದಿದ್ದರೆ ಬಹುಪಾಲು ದೈತ್ಯರು ದೇವತೆಗಳಂತೆಯೇ ಸಾತ್ವಿಕರಾಗುತ್ತಿದ್ದರು. ಅಸುರರ ಸಂಖ್ಯೆ ಕಡಿಮೆಯಾಗುತ್ತಿತ್ತು. ಅಸುರರ ಪಾಲೇ ಹೆಚ್ಚು ಏಕೆ? ಲಿಂಗಾತ್='ತಸ್ಮಾತ್ ನ ಜನತಾಮಿಯಾತ್' ಎಂಬ ಶ್ರುತಿಯಲ್ಲಿ ಹೇಳಿರುವಂತೆ ಜನಸಮೂಹದಲ್ಲಿ ಪ್ರವೇಶವನ್ನು ನಿಷೇಧ ಮಾಡಿರುವ ಕಾರಣದಿಂದಾಗಿ ಅಸುರರ ಸಂಖ್ಯೆಯೇ ಹೆಚ್ಚೆಂದು ತಿಳಿಯುತ್ತದೆ. ಜನರ ಗುಂಪಿನಲ್ಲಿ ದುಷ್ಟರೇ ಹೆಚ್ಚಾಗಿರುವುದರಿಂದ ಸಾತ್ವಿಕರು ಜನಜಂಗುಳಿಯಲ್ಲಿ ಸೇರಬಾರದು.

**॥ ಓಂ ತದ್‌ಭೂತಸ್ಯ ತು ತದ್ಭಾವೋ ಜೈಮಿನೇರಪಿ ನಿಯಮಾತದ್ರೂಪಾ- ಭಾವೇಭ್ಯಃ ಓಂ ॥** (ತದಿತಿ ಪ್ರಸ್ತುತದೇವಾದಿತ್ರಯಪರಾಮರ್ಶಃ। ತುರೇವ। ಭೂ=ಪ್ರಾಪ್ತೌ। ತದ್ಭೂತಸ್ಯ, ತತ್ವಂ=ದೇವಾದಿತ್ವಂ ಪ್ರಾಪ್ತಸ್ಯೈವ ದೇವಾದೇಃ ತದ್ಭಾವಃ=ದೇವಾದಿಭಾವಃ, ಜೈಮಿನೇರಪಿ ಸಿದ್ಧಃ। ನ ವ್ಯಾಸಸ್ಯೈವ ಇತ್ಯಪೇರರ್ಥಃ। ತೇನ ಪುರುಷಾರ್ಥನಯೇ ಇವ ವ್ಯವಸ್ಥಿತವಿಕಲ್ಪೋ ನೇತಿ ಸೂಚಯತಿ। ಕುತಃ ?

ನಿಯಮ–ಅತದ್ರೂಪಭಾವೇಭ್ಯಃ। ಏತೇನ ನಿಯಮಾದಿಶ್ರುತಿಃ ಲಕ್ಷ್ಯತೇ। ತದ್ರೂಪಂ=ಪ್ರಾಗ್ ವಿದ್ಯಮಾನಸ್ವಭಾವಃ, ತನ್ನೇತಿ ಅತದ್ರೂಪಮ್ ಇತಿ ನಿಯಮಶ್ರುತೇಃ 'ನಾಸುರಾಣಾಂ ದೈವಂ ರೂಪಮ್' ಇತಿ ಅತದ್ರೂಪತ್ವಶ್ರುತೇಃ। 'ತಂ ಭೂತಿರಿತಿ ದೇವಾ ಉಪಾಸಾಂಚಕ್ರಿರೇ, ತೇ ಬಭೂವುಃ' 'ಅಭೂತಿರಿತ್ಯಸುರಾಃ ತೇ ಪರಾಬಭೂವುಃ' ಇತಿ ದೇವಾಸುರ–ಭೂತ್ಯಭೂತಿಶ್ರುತೇರಿತ್ಯರ್ಥಃ।)

ತದ್‌ಭೂತಸ್ಯ, ತತ್ವಂ=ದೇವತ್ವ–ಅಸುರತ್ವ–ಮನುಷ್ಯತ್ವಗಳನ್ನು ಹೊಂದಿರುವವರಿಗೆ ಮಾತ್ರ ತದ್ಭಾವಃ=ದೇವತಾತ್ವಾದಿಧರ್ಮಗಳು ಎನ್ನುವುದು ಜೈಮಿನಿ ಋಷಿಗಳಿಗೂ ಸಮ್ಮತವಾಗಿದೆ. ಆದ್ದರಿಂದ ಪುರುಷಾರ್ಥಾಧಿಕರಣದಂತೆ ಇಲ್ಲಿ ಅಧಿಕಾರಿಭೇದೇನ ವ್ಯವಸ್ಥೆಮಾಡಬೇಕಾಗಿಲ್ಲ. ಜೈಮಿನಿಗಳಿಗೂ ಸಮ್ಮತವಾಗಿರುವುದಕ್ಕೆ ಕಾರಣ–ನಿಯಮಾತದ್ರೂಪಾಭಾವೇಭ್ಯಃ, ಎಂದು. ಈ ಮೂರು ಶಬ್ದಗಳಿಂದ ತದ್ವಾಚಕ ಶ್ರುತಿಗಳನ್ನು ಲಕ್ಷಣಯಾ ಗ್ರಹಿಸಬೇಕು. ಅತದ್ರೂಪ ಎಂದರೆ ಮೊದಲು ಇದ್ದ ಸ್ವಭಾವಕ್ಕೆ ವಿಪರೀತವಾದ ಧರ್ಮ ಎಂದರ್ಥ. ಅಭಾವ=ಅಭೂತಿ. ಒಟ್ಟಿನಲ್ಲಿ ಅರ್ಥ–'ನಾಸುರಾ ದೈವೀಮ್' ಎಂಬ ನಿಯಮಶ್ರುತಿ ಇರುವುದರಿಂದ, 'ನಾಸುರಾಣಾಂ ದೈವಂ ರೂಪಮ್' ಎಂಬ ಆಸುರಸ್ವಭಾವಕ್ಕೆ ನಾಶವಿಲ್ಲ ಎಂದು ಶ್ರುತಿ ಇರುವುದರಿಂದ, 'ತಂ ಭೂತಿರಿತಿ ದೇವಾಃ' ಎಂದೂ 'ಅಭೂತಿರಿತ್ಯಸುರಾಃ' ಎಂದೂ ದೇವತೆಗಳಿಗೆ 'ಭೂತಿ'ಯನ್ನೂ ದೈತ್ಯರಿಗೆ ಅಭೂತಿಯನ್ನೂ ಹೇಳುವ ಶ್ರುತಿ ಇರುವುದರಿಂದ (ಜೈಮಿನಿಗಳಿಗೂ ವ್ಯಾಸಮತವು ಅಭಿಮತವಾಗಿದೆ.)

## ಶಾಂಕರಭಾಷ್ಯದಲ್ಲಿ ಆಶ್ರಮಕರ್ಮಾಧಿಕರಣ

॥ ವಿಹಿತತ್ವಾಚ್ಚಾಶ್ರಮಕರ್ಮಾಪಿ ॥ ಈ ಅಧಿಕರಣದಲ್ಲಿ ಮೋಕ್ಷಾಪೇಕ್ಷೆ ಇಲ್ಲದವರೂ ಸ್ವಾಶ್ರಮೋಚಿತವಾದ ಕರ್ಮಗಳನ್ನು ಮಾಡಬೇಕು, ಎಂದು ಹೇಳಲಾಗಿದೆ. ಮೋಕ್ಷಾಪೇಕ್ಷಿಗಳಿಗೆ ನಿತ್ಯಕರ್ಮಗಳು ಜ್ಞಾನಾಂಗವಾಗಿವೆ. ಆದರೂ ಮೋಕ್ಷವನ್ನು ಬಯಸದ ಆಶ್ರಮದವರೂ 'ಯಾವಜ್ಜೀವಮ್ ಅಗ್ನಿಹೋತ್ರಂ ಜುಹೋತಿ' ಇತ್ಯಾದಿ ವಿಧಿಗಳಿರುವುದರಿಂದ ಈ ಕರ್ಮಗಳನ್ನು ಮಾಡಲೇಬೇಕು. (ನ ಹಿ ವಚನಸ್ಯ ಅತಿಭಾರೋ ನಾಮ ಕಶ್ಚಿದಸ್ತಿ (ಶಾಂ.ಭಾ.) ಆಶ್ರಮಸ್ಯ ಕರ್ಮಾಪಿ ಭವತಿ ಯಜ್ಞಾದಿಃ–ಎಂದು ಸೂತ್ರಾರ್ಥ)

॥ ಸಹಕಾರಿತ್ವೇನ ಚ ॥ ಇವೇ ಆಶ್ರಮಕರ್ಮಗಳು ಮೋಕ್ಷಾರ್ಥಿಗಳಿಗೆ ಜ್ಞಾನೋತ್ಪತ್ತಿಗೆ ಸಹಕಾರಿತ್ವೇನ ಅನುಷ್ಠೇಯವಾಗಿವೆ. ಅವುಗಳು ಜ್ಞಾನೋತ್ಪತ್ತಿಗೆ

ಕಾರಣವಾದರೂ ಜ್ಞಾನಫಲವಾದ ಮೋಕ್ಷಕ್ಕೆ ಅವುಗಳು ಕಾರಣಗಳಲ್ಲ. ಏಕೆಂದರೆ ಮೋಕ್ಷವು ಸ್ವರ್ಗಾದಿಗಳಂತೆ ಜನ್ಯವಾದ ಫಲವಲ್ಲ.

**॥ ಸರ್ವಥಾಽಪಿ ತು ತ ಏವೋಭಯಲಿಂಗಾತ್ ॥** ಜ್ಞಾನಾರ್ಥಿಯಾಗಿರಲಿ ಸ್ವರ್ಗಾದಿಫಲಾರ್ಥಿಯಾಗಿರಲಿ ಒಂದೇ ರೀತಿಯ ಅಗ್ನಿಹೋತ್ರಾದಿಗಳೇ (ತೇ ಏವ) ಇಬ್ಬರಿಗೂ ವಿಹಿತ. ಹೊರತು ಜ್ಞಾನಾರ್ಥಿಗಳಿಗೆ ಅಪೂರ್ವಕರ್ಮವಿಧಿ ಇಲ್ಲ. ಉಭಯಲಿಂಗಾತ್=ಶ್ರುತಿ–ಸ್ಮೃತಿರೂಪವಾದ ಎರಡು ಜ್ಞಾಪಕಗಳು ಇರುವುದರಿಂದ. ಶ್ರುತಿ–'ವಿವಿದಿಷಂತಿ ಯಜ್ಞೇನ ದಾನೇನ ತಪಸಾ' ಎಂದಿವೆ. ಇಲ್ಲಿ ಕಾಮಿಗಳು ಮಾಡುವ ಕರ್ಮಗಳನ್ನೇ ಅನುವಾದ ಮಾಡಿ ಜ್ಞಾನರೂಪಫಲವನ್ನು 'ವಿವಿದಿಶಂತಿ' ಎನ್ನಲಾಗಿದೆ. ಸ್ಮೃತಿ–

ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ॥

ಇಲ್ಲೂ ಕಾಮಿಗಳು ಮಾಡುವ ಕರ್ಮಗಳನ್ನೇ ಫಲಕಾಮನೆ ಬಿಟ್ಟು ಜ್ಞಾನಾರ್ಥಿಯು ಮಾಡಬೇಕು ಎನ್ನಲಾಗಿದೆ.

**॥ ಅನಭಿಭವಂ ಚ ದರ್ಶಯತಿ॥** ಪೂರ್ವಸೂತ್ರೋಕ್ತವಾದ ಶ್ರುತಿರೂಪಲಿಂಗವು ಜ್ಞಾನಾರ್ಥಿಯಾದ ಬ್ರಹ್ಮಚಾರಿಗೆ ರಾಗಾದಿಕ್ಲೇಶಗಳಿಂದ ಸೋಲಿಲ್ಲ ಎಂದೂ ತಿಳಿಸುತ್ತದೆ–ಏಷ ಹ್ಯಾತ್ಮಾ ನ ನಶ್ಯತಿ ಬ್ರಹ್ಮಚರ್ಯೇಣ ಅನುವಿಂದತೇ'' (ಛಾಂ.8.5.3)

**ರಾಮಾನುಜಭಾಷ್ಯದಲ್ಲಿ** ಈ ಸೂತ್ರಕ್ಕೆ ಅರ್ಥಾಂತರವನ್ನು ಹೇಳಲಾಗಿದೆ— 'ಧರ್ಮೇಣ ಪಾಪಮ್ ಅಪನುದತಿ' (ತೈ.ಆ.6.50) ಎಂದು ಆಶ್ರಮವಿಹಿತ ಕರ್ಮದಿಂದಲೇ ಪಾಪವನ್ನು ಕಳೆದುಕೊಂಡು ಜ್ಞಾನಿಯು ಜ್ಞಾನೋತ್ಪತ್ತಿಗೆ ಪ್ರತಿಬಂಧಕದ ಅಭಾವವನ್ನು ಸಂಪಾದಿಸಿಕೊಳ್ಳಬೇಕು. (ಅನಭಿಭವಂ=ಪ್ರತಿಬಂಧಾಭಾವಂ) ಎಂದು ಶ್ರುತಿಯು ತಿಳಿಸುತ್ತದೆ.

**ವಿಮರ್ಶೆ:** ಅಜ್ಞಾನಿಗಳಿಗೆ ಕರ್ಮಾಧಿಕಾರದ ವಿಚಾರ ಕರ್ಮಮೀಮಾಂಸಾಕ್ಕೆ ಸಂಬಂಧಪಟ್ಟದ್ದು. ಅದನ್ನು ಇಲ್ಲಿ ವಿಚಾರ ಮಾಡುವುದು ಅಸಂಗತ. 'ಉಭಯ ಲಿಂಗಾತ್' ಎಂಬ ಶಬ್ದಕ್ಕೆ ಶ್ರುತಿ–ಸ್ಮೃತಿ ಇರುವುದರಿಂದ ಎಂಬ ಅರ್ಥ ಸ್ವರಸವಲ್ಲ.

## ಶಾಂಕರಭಾಷ್ಯದಲ್ಲಿ ವಿಧುರಾಧಿಕರಣ

**॥ಅಂತರಾ ಚಾಪಿ ತು ತದ್ದೃಷ್ಟೇಃ ॥** ಕರ್ಮವು ಜ್ಞಾನೋತ್ಪಾದಕವಾದರೆ ವಿಧುರರಿಗೆ ಕರ್ಮಾಧಿಕಾರವಿಲ್ಲವಾದ ಕಾರಣ ಜ್ಞಾನವೂ ಇಲ್ಲವೆಂದಾದೀತು. ದ್ರವ್ಯಾದಿ

ಸಂಪತ್ತುಗಳಿಲ್ಲದ ಬಡವರು ಯಜ್ಞಾದಿಗಳನ್ನು ಆಚರಿಸಲಾಗುವುದಿಲ್ಲ. ಅವರಿಗೂ ಜ್ಞಾನಲೋಪವಾದೀತು. ಅದಕ್ಕುತ್ತರ–ಅಂತರಾ ಚಾಪಿ=ಅನಾಶ್ರಮಿಯಾಗಿದ್ದರೂ ಕೂಡ, ಅರ್ಥಾತ್ ಆಶ್ರಮಕರ್ಮಗಳನ್ನು ಆಚರಿಸಲಾಗದಿದ್ದರೂ ಕೂಡ ವಿದ್ಯಾಧಿಕಾರಿಯಾಗುತ್ತಾನೆ. ತದ್ದೃಷ್ಟೇಃ=ಆ ರೀತಿಯಲ್ಲಿದ್ದ 'ರೈಕ್ವ'ದಿಗಳಿಗೆ ವಿದ್ಯಾಧಿಕಾರವು ಕಂಡಿದೆ.

**॥ ಅಪಿ ಸ್ಮರ್ಯತೇ ॥** ಸಂವರ್ತನೇ ಮೊದಲಾದವರು ನಗ್ನಚರ್ಯೆಯಲ್ಲಿದ್ದೂ ಜ್ಞಾನಿಗಳಾಗಿದ್ದುದು ಸ್ಮೃತಿಸಿದ್ಧವಾಗಿದೆ. 'ವಿವಿದಿಷಾ' (ಜ್ಞಾನೇಚ್ಛಾ) ಉತ್ಪತ್ತಿಗೆ ಕರ್ಮಾಪೇಕ್ಷಾ. ರೈಕ್ವ, ವಾಚಕ್ನವೀ, ಸಂವರ್ತ ಮೊದಲಾದವರಿಗೆ 'ವಿವಿದಿಷಾ' ಉಂಟಾಗಿರುವುದರಿಂದ ಕರ್ಮದ ಅಗತ್ಯವಿಲ್ಲ.

**॥ ವಿವಿದಿಷಾನುಗ್ರಹಂ ಚ ॥** (ದ್ವೈತಭಾಷ್ಯಪಾಠ–ವಿಶೇಷಾನುಗ್ರಹಂ ಚ) ವಿಧುರರಾದರೂ ಜಪ, ಉಪವಾಸ, ದೇವತಾರಾಧನಾದಿ ಕರ್ಮಗಳಲ್ಲಿ ಅಧಿಕಾರವಿದೆ. ಇವುಗಳಿಂದ ವಿದ್ಯಾನುಗ್ರಹ ಆಗುತ್ತದೆ. ಸ್ಮೃತಿ ಹೇಳುತ್ತದೆ—

ಜಪ್ಯೇನೈವ ತು ಸಂಸಿದ್ಧ್ಯೇತ್ ಬ್ರಾಹ್ಮಣೋ ನಾತ್ರ ಸಂಶಯಃ ।
ಕುರ್ಯಾನ್ಯನ್ನವಾ ಕುರ್ಯಾತ್ ಮೈತ್ರೋ ಬ್ರಾಹ್ಮಣ ಉಚ್ಯತೇ ॥

ಅಥವಾ ಹಿಂದಿನ ಜನ್ಮಗಳಲ್ಲಿ ಮಾಡಿರುವ ಆಶ್ರಮಕರ್ಮಗಳಿಂದಾಗಿ ಈ ಜನ್ಮದಲ್ಲಿ ವಿವಿದಿಶಾ ಹುಟ್ಟಬಹುದು. ಹಾಗೆ ಭಗವದ್ಗೀತೆಯಲ್ಲಿದೆ—

ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್ ॥ (6.45)

**॥ ಅತಸ್ತ್ವಿತರಜ್ಜ್ಯಾಯೋ ಲಿಂಗಾಚ್ಚ ॥** ಅತಃ=ಆದ್ದರಿಂದ ಇತರತ್–ಜ್ಯಾಯಃ= ಮಧ್ಯವರ್ತಿಯಾಗುವುದಕ್ಕಿಂತಲೂ (ವಿಧುರಾದಿಗಳಿಗಿಂತಲೂ) ಗೃಹಸ್ಥಾದಿಆಶ್ರಮದಲ್ಲಿರುವುದೇ ಲೇಸು. ಶ್ರುತಿ ಹಾಗೆಯೇ ಇದೆ—ತೇನೈತಿ ಬ್ರಹ್ಮವಿತ್ ಪುಣ್ಯಕೃತ್ ತೈಜಸಶ್ಚ'' (ಬೃ.4.4.9) ಕರ್ಮದಿಂದ ಶುದ್ಧಾಂತಃಕರಣನಾಗಿ (ತೈಜಸಃ) ಜ್ಞಾನಮಾರ್ಗದಿಂದ ಬ್ರಹ್ಮನನ್ನು ಹೊಂದುತ್ತಾನೆ.

''ಅನಾಶ್ರಮೀ ನ ತಿಷ್ಠೇತ ದಿನಮೇಕಮಪಿ ದ್ವಿಜಃ ।
ಸಂವತ್ಸರಮ್ ಅನಾಶ್ರಮೀ ಸ್ಥಿತ್ವಾ ಕೃಚ್ಛ್ರಮೇಕಂ ಸಮಾಚರೇತ್ ॥''

'ಆಶ್ರಮಹೀನನಾಗಿ ಒಂದು ದಿನವೂ ಇರಬಾರದು' 'ಒಂದು ಸಂವತ್ಸರ ಪರ್ಯಂತವಾಗಿ ಆಶ್ರಮಹೀನನಾಗಿದ್ದರೆ ಒಂದು ಕೃಚ್ಛ್ರಾಚರಣೆ ಮಾಡಬೇಕು.''

**ವಿಮರ್ಶೆ—** ವಿಧುರಾದಿಗಳಿಗೆ ಪತ್ನಿ ಇಲ್ಲದಿರುವುದರಿಂದ ಯಜ್ಞಾದಿಗಳಲ್ಲಿ ಅಧಿಕಾರ ಇಲ್ಲದಿದ್ದರೂ ಶಮಾದಿಸಂಪತ್ತುಗಳಲ್ಲಿ ಅಧಿಕಾರವಿರುವುದರಿಂದ ವಿವಿದಿಷಾ ಉತ್ಪತ್ತಿಯಾಗಬಹುದು. ಶಮಾದಿಗಳು ಸಾಮಾನ್ಯಧರ್ಮಗಳನ್ನು 'ಶಾಂತೋ ದಾಂತಃ' ಇತ್ಯಾದಿ ಶ್ರುತಿಗಳಲ್ಲಿ ಅಧಿಕಾರಿವಿಶೇಷದ ಉಲ್ಲೇಖವಿಲ್ಲದೆಯೇ ಹೇಳಲಾಗಿದೆ.

ಜನ್ಮಾಂತರೀಯ ಕರ್ಮದಿಂದಾಗಿ ಈ ಜನ್ಮದಲ್ಲಿ ವಿವಿದಿಷೋತ್ಪತ್ತಿ ಎನ್ನುವುದಾದಲ್ಲಿ ಜನ್ಮಾಂತರೀಯಉಪನಯನದಿಂದಲೂ ವೇದಾಧಿಕಾರ ಸಿದ್ಧವಾದೀತು. ರೈಕ್ವಾದಿಗಳು ನೈಷ್ಠಿಕ ಬ್ರಹ್ಮಚಾರಿಗಳು. ಅದೂ ಒಂದು ಆಶ್ರಮ. ಆದ್ದರಿಂದ ಅವರನ್ನು ಅನಾಶ್ರಮಿಗಳೆಂದು ಪರಿಗಣಿಸಲಾಗದು.

## ಶಾಂಕರಭಾಷ್ಯದಲ್ಲಿ ತದ್ಭೂತಾಧಿಕರಣ

**॥ ತದ್‌ಭೂತಸ್ಯ ತು ತದ್ಭಾವೋ ಜೈಮಿನೇರಪಿ ನಿಯಮಾತದ್ರೂಪಾಭಾವೇಭ್ಯಃ ॥** ಊರ್ಧ್ವರೇತಸಾಶ್ರಮದಿಂದ ರಾಗಾದಿವಶಾತ್ ಚ್ಯುತನಾಗಬಾರದು. ತದ್ಭೂತಸ್ಯ=ಊರ್ಧ್ವರೇತೋ ಆಶ್ರಮವನ್ನು ಸ್ವೀಕರಿಸಿದವನಿಗೆ ಅತದ್ಭಾವಃ=ಅದರಿಂದ ಪ್ರಚ್ಯುತಿಯು ನ=ಇಲ್ಲ. ನಿಯಮ–ಅತದ್ರೂಪಾಭಾವೇಭ್ಯಃ, ''ಅತ್ಯಂತಮ್ ಆತ್ಮಾನಮ್ ಆಚಾರ್ಯಕುಲೇऽವಸಾದಯನ್'(ಛಾಂ.22.3.1) 'ಅರಣ್ಯಮಿಯಾದಿತಿ ಪದಂ ತತೋ ನ ಪುನರೇಯಾದಿತ್ಯುಪನಿಷತ್।''

ಆಚಾರ್ಯೇಣಾಭ್ಯನುಜ್ಞಾತಃ ಚತುರ್ಣಾಮೇಕಮಾಶ್ರಮಮ್ ।
ಆ ವಿಮೋಕ್ಷಾಚ್ಛರೀರಸ್ಯ ಸೋऽನುತಿಷ್ಠೇದ್ ಯಥಾವಿಧಿ ॥

ಈ ನಿಯಮವು ಪ್ರಚ್ಯುತ್ಯಭಾವವನ್ನು ತಿಳಿಸುತ್ತದೆ. ''ಬ್ರಹ್ಮಚರ್ಯಂ ಸಮಾಪ್ಯ ಗೃಹೀ ಭವೇತ್। (ಜಾ.4) ''ಬ್ರಹ್ಮಚರ್ಯಾದೇವ ಪ್ರವ್ರಜೇತ್'' (ಜಾ.4) ಈ ಮೊದಲಾದ ವಚನಗಳು ಆರೋಹವನ್ನು ಹೇಳುತ್ತವೆ. ಆದರೆ, ಮೇಲಿನ ಆಶ್ರಮಗಳಿಂದ ಕೆಳಗಿಳಿಯುವ ವಚನಗಳು ಇಲ್ಲ. ಹೀಗೆ ಅತದ್ರೂಪವಚನವೂ ಇದೆ. ಇಂತಹ ಶಿಷ್ಟಾಚಾರಗಳೂ ಇಲ್ಲ. ಇದು ಜೈಮಿನಿಗಳಿಗೂ ಸಮ್ಮತ.

**ವಿಮರ್ಶೆ—** ಪೂರ್ವಾಧಿಕರಣದಲ್ಲಿ ಆಶ್ರಮರಹಿತರಾದ 'ವಿಧುರಾದಿ'ಗಳು ಮಾಡಿದ ಕರ್ಮಗಳೂ ವಿದ್ಯಾಸಾಧನವಾಗುತ್ತವೆ ಎನ್ನಲಾಗಿದೆ. ಹಾಗಾದರೆ ನೈಷ್ಠಿಕ ಬ್ರಹ್ಮಚರ್ಯದಿಂದ ಚ್ಯುತರಾದವರ ಕರ್ಮವೂ ಜ್ಞಾನಸಾಧನವಾಗಬಹುದು. ಅನಾಶ್ರಮಿಗಳಿಗೆ ಪ್ರಾಯಶ್ಚಿತ್ತವಿದ್ದಂತೆ ಬ್ರಹ್ಮಚರ್ಯದಿಂದ ಚ್ಯುತರಾದವರಿಗೂ ಪ್ರಾಯಶ್ಚಿತ್ತವಿದೆ—

''ತಥಾ ಪ್ರಚ್ಯಾವಿತಾ ವಿಪ್ರಾಃ ಪ್ರವ್ರಜ್ಯಾಗ್ನಿಜಲಾದಿತಃ ।
ಆದ್ರಾ್ರಂಶುಕಾದಿ ಸಂಯುಜ್ಯ ಗೃಹಸ್ಥತ್ವಂ ಚಿಕೀರ್ಷವಃ ।
ತಾನ್ ಚಾರಯಿತ್ವಾ ತ್ರೀನ್ ಕೃಚ್ಛ್ರಾನ್ ತ್ರೀಣಿ ಚಾಂದ್ರಾಯಣಾನಿ ಚ ।
ಜಾತಕರ್ಮಾದಯಃ ಕಾರ್ಯಾಃ ಮತೇನಾಂಗಿರಸೇನ ತು ॥

ಹೀಗೆ ಹಿಂದಿನ ಅಧಿಕರಣಕ್ಕೆ ಸಂಗತವಾಗುವ ಪೂರ್ವಪಕ್ಷವಿರುವುದರಿಂದ ಈ ಅಧಿಕರಣವು ಪಾದಸಂಗತವಾಗಿದೆ ಎಂದು ಪರವಾದಿಗಳ ಸಮರ್ಥನೆ. ಇದು ಸರಿಯಲ್ಲ. ಆಶ್ರಮಭ್ರಷ್ಟರಾದವರಿಗೆ ಯಾವುದೇ ಕರ್ಮದಲ್ಲಿ ಅಧಿಕಾರವಿಲ್ಲ. ಅವರು ವರ್ಣಬಾಹ್ಯರಾದ ಚಂಡಾಲರು.

ಚಂಡಾಲಾ ಪ್ರತ್ಯವಸಿತಾಃ ಪರಿವ್ರಾಜಕ–ತಾಪಸಾಃ ।
ತೇಷಾಂ ಜಾತಾನ್ಯಪತ್ಯಾನಿ ಚಂಡಾಲೈಃ ಸಹ ವಾಸಯೇತ್ ॥

ಆದ್ದರಿಂದ ಈ ಅಧಿಕರಣಕ್ಕೆ ಪೂರ್ವಪಕ್ಷವೇ ಇಲ್ಲ.

ಶಾಂಕರಭಾಷ್ಯದಲ್ಲಿ ಇದೊಂದೇ ಸೂತ್ರವು ಒಂದು ಅಧಿಕರಣ. ಆದರೆ, ರಾಮಾನುಜಭಾಷ್ಯದಲ್ಲಿ 43ನೆಯ ಸೂತ್ರದವರಿಗೆ ಒಂದು ಅಧಿಕರಣ. ಅಧಿಕರಣ ಪ್ರತಿಪಾದ್ಯವಾದ ವಿಷಯ ಶಾಂಕರಭಾಷ್ಯದ್ದೇ ಆಗಿದೆ.

**ಇಲ್ಲಿಗೆ ಉಭಯಲಿಂಗಾಧಿಕರಣವು ಮುಗಿಯಿತು.**

## ೬. ಆಧಿಕಾರಿಕಾಧಿಕರಣಮ್

### ॥ ಓಂ ನಚಾಽಧಿಕಾರಿಕಮಪಿ ಪತನಾನುಮಾನಾತ್ ತದಯೋಗಾತ್ ಓಂ ॥ ೪೧ ॥

**ನಚ ಪರಮಾತ್ಮೈಶ್ವರ್ಯಾದಿಕಮಾಕಾಂಕ್ಷ್ಯಮ್ । ಬ್ರಹ್ಮಾದೀನಾಮಪಿ ನಾಽಕಾಂಕ್ಷ್ಯಂ ಕಿಮು ಪರಸ್ಯೇತಿ ಸೂಚಯಿತುಮಪಿಶಬ್ದಃ । ಚಶಬ್ದಸ್ತು ಜ್ಞಾನಾರ್ಥಿನಾಂ ಪೂರ್ವೋಕ್ತಾದ್ ಇತ್ಥಂಭಾವಾಂತರಸೂಚಕಃ ।**

**ಅಯೋಗ್ಯಮಾರೋಢುಂ ಪ್ರಯತನ್ ಪ್ರಪತನ್ ಹಿ ದೃಶ್ಯತೇ । ಏವಮಯೋಗ್ಯಸ್ಯ ಪರಮಾತ್ಮೈಶ್ವರ್ಯಸ್ಯ ಬ್ರಹ್ಮಾದಿಪದಸ್ಯ ವಾ(ಚಾ)ಽಕಾಂಕ್ಷಾಯಾಂ ಪತನಮನುಮೀಯತೇ ।**

'ನ ದೇವಪದಮನ್ವಿಚ್ಛೇತ್ ಕುತ ಏವ ಹರೇರ್ಗುಣಾನ್ ।
ಇಚ್ಛನ್ ಪತತಿ ಪೂರ್ವಸ್ಮಾದಧಸ್ತಾದ್ ಯತ್ರ ನೋತ್ಥಿತಿಃ ॥'

ಇತಿ ಬ್ರಹ್ಮಾಂಡೇ ॥

'ಸ್ವಕೀಯಮಿಚ್ಛಮಾನಂ ತು ರಾಜಾದ್ಯಾಃ ಪಾತಯಂತಿ ಹಿ ।
ಏವಮೇವ ಸುರಾದ್ಯಾಶ್ಚ ಹರಿಶ್ಚ ಸ್ವಪದೇಚ್ಛ(ಚ್ಛು)ಕಮ್ ॥'

ಇತ್ಯಾದ್ಯನುಮಾನರೂಪವಾಕ್ಯಾಚ್ಚ ॥

'ಮಾಯಾಭಿರುತ್ಸಿಸೃಪ್ಸತ ಇಂದ್ರ ದ್ಯಾಮಾರುರುಕ್ಷತಃ ।
ಅವ ದಸ್ಯೂರಧೂನುಥಾಃ' (ಋ.8.14.14)

ಇತಿ ಚ ಶ್ರುತಿಃ ॥

ಜ್ಞಾನಾರ್ಥಿಯಾದವನು ಪರಮಾತ್ಮನ ಅಣಿಮಾದ್ಯೈಶ್ವರ್ಯವನ್ನಾಗಲೀ ಇತರ ಗುಣವಿಶೇಷಗಳನ್ನಾಗಲೀ ಬಯಸಬಾರದು. ಬ್ರಹ್ಮಾದಿ ಉತ್ತಮದೇವತೆಗಳ ಮಹತಿಯನ್ನೇ ಬಯಸಬಾರದು, ಹೀಗಿರುವಾಗ ಪರಮಾತ್ಮನ ಗುಣಗಳನ್ನು ಬಯಸಬಾರದೆಂದು ಹೇಳಲೇಬೇಕಾಗಿಲ್ಲ. ಈ ಕೈಮುತ್ಯನ್ಯಾಯವನ್ನು ಸೂತ್ರದ ಅಪಿಶಬ್ದವು ಸೂಚಿಸುತ್ತದೆ. ಚಶಬ್ದವು, ಜ್ಞಾನಾರ್ಥಿಯು ಹಿಂದೆ ಹೇಳಿರುವ ಬ್ರಹ್ಮಚರ್ಯ, ಗುರುಸೇವೆ, ಭಕ್ತಿಶ್ರವಣಾದಿಗಳಂತೆ ಉತ್ತಮರ ಗುಣಗಳ ಬಗ್ಗೆ ಆಕಾಂಕ್ಷಾರಹಿತನಾಗಿಯೂ ಇರಬೇಕು ಎಂದು ಸೂಚಿಸಿತ್ತು. ತನಗೆ ಅಶಕ್ಯವಾದ ಮರವನ್ನು ಹತ್ತಲು ಪ್ರಯತ್ನಿಸುವವನು ಬೀಳುವಂತೆ ಭಗವದೈಶ್ವರ್ಯವನ್ನು, ಅಯೋಗ್ಯಬ್ರಹ್ಮಪದವಿಯನ್ನು ಬಯಸುವವನೂ ನರಕಕ್ಕೆ ಬೀಳುತ್ತಾನೆ, ಎಂದು ಅನುಮಾನ ಮಾಡಬಹುದು. ಬ್ರಹ್ಮಾಂಡದಲ್ಲಿ ಹೀಗಿದೆ—

ದೇವತೆಗಳ ಪದವಿಯನ್ನೇ ಬಯಸಬಾರದು. ಹೀಗಿದ್ದಮೇಲೆ ಶ್ರೀಹರಿಯ ಗುಣಗಳನ್ನಂತೂ ಬಯಸಲೇಬಾರದು. ಇಂತಹುದನ್ನು ಬಯಸುವವನು ತಾನಿರುವ ಸ್ಥಾನದಿಂದಲೂ ಕೆಳಗೆ ಬೀಳುತ್ತಾನೆ, ಅಲ್ಲಿ ಬಿದ್ದರೆ ಮೇಲಕ್ಕೆ ಏಳುವಂತೆಯೇ ಇಲ್ಲ.

ರಾಜಾದಿಗಳೇ ತಮ್ಮ ಅಧಿಕಾರಕ್ಕೆ ಆಸೆಪಡುವ ಮತ್ತೊಬ್ಬರನ್ನು ಸೆರೆಮನೆಗೆ ತಳ್ಳುತ್ತಾರೆ. ಅದರಂತೆ, ದೇವತೆಗಳು. ಶ್ರೀಹರಿಯೂ ತನ್ನ ಸ್ಥಾನೇಚ್ಛುಗಳನ್ನು ನಿಗ್ರಹಿಸುತ್ತಾನೆ. ಈ ರೀತಿಯ ಅನುಮಾನರೂಪವಾದ ಪ್ರಮಾಣವಾಕ್ಯದಿಂದಲೂ ಈ

ಪ್ರಮೇಯ ಸಿದ್ಧವಾಗುತ್ತದೆ. ಈ ಬಗ್ಗೆ ಶ್ರುತಿಯೂ ಹೀಗೆ ಹೇಳುತ್ತದೆ—ಹೇ ಇಂದ್ರ=ಪರಮೈಶ್ವರ್ಯಶಾಲಿಯಾದ ಶ್ರೀಹರಿಯೇ, ನೀನು ಮಾಯಾಭಿಃ= ದುಷ್ಟವಿದ್ಯೆಯಿಂದ ಉತ್ಸಿಸೃಪ್ಸತಃ=ಯೋಗ್ಯತೆಗೆ ಮೀರಿದ ಉತ್ತಮತ್ವವನ್ನು ಪಡೆಯಲು ಬಯಸುವವರನ್ನು ದ್ಯಾಂ ಆರುರುಕ್ಷತಃ=ಸ್ವರ್ಗವನ್ನು ಏರಲು ಬಯಸುವವರನ್ನು ದಸ್ಯೂನ್=ದುಷ್ಟರನ್ನು ಅಧೂನುಥಾಃ=ಅಂಧಂತಮಸ್ಸಿನಲ್ಲಿ ಬೀಳಿಸುತ್ತಿ.

**ವಿವರಣೆ**— ಚೇತನತ್ವಾದಿಗಳು ಮಾತ್ರ ಎಲ್ಲರಲ್ಲೂ ಇರುವ ಸಮಾನಧರ್ಮ. ದೇವತ್ವ, ಈಶ್ವರತ್ವಾದಿಗಳು ನಮ್ಮ ಪ್ರಯತ್ನದಿಂದ ಪಡೆಯಬಹುದಾದ ಧರ್ಮಗಳು.

''ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್ ವಿರಿಂಚತಾಮೇತಿ॥''

ಎಂದು ಬ್ರಹ್ಮಪದವಿಯೂ ಪ್ರಯತ್ನದಿಂದಲೇ ಲಭ್ಯವಾಗುತ್ತದೆ, ಎನ್ನುತ್ತದೆ ಪ್ರಮಾಣ. ಹೆಚ್ಚೇಕೆ, ಮನಸ್ಸು ಮಾಡಿದರೆ ವಿಷ್ಣುವಿನ ಮಹಾತ್ಮ್ಯೆಯನ್ನೂ ಪಡೆಯಬಹುದು, ಎಂದು ಈ ಅಧಿಕರಣದ ಪೂರ್ವಪಕ್ಷ.

## ॥ ಓಂ ಉಪಪೂರ್ವಮಪೀತ್ಯೇಕೇ ಭಾವಶಮನವತ್ ತದುಕ್ತಮ್ ಓಂ ॥ ೪೨ ॥

**ಉಪದೇವಪದಂ ಚ ನಾಪೇಕ್ಷ್ಯಮಿತ್ಯೇಕೇ । ಭಾವಶಮನವತ್, ಋಷಿಪದವದೇವ । ತಚ್ಚೋಕ್ತಮಿಂದ್ರದ್ಯುಮ್ನಶ್ರುತೌ –**

**'ಅಥ ಯಥರ್ಷೀನ್ ಪ್ರಜಾಪತೀನ್ ನ ಕಾಂಕ್ಷೇದೇವಂ**
**ನ ಗಂಧರ್ವಾನ್ ನ ವಿದ್ಯಾಧರಾನ್ ನ ಸಿದ್ಧಾನ್' ಇತಿ ।**

**ಬೃಹತ್ಸಂಹಿತಾಯಾಂ ಚ–**

**'ನ ದೈವಾನಭಿಕಾಂಕ್ಷೇತ ಕುತ ಏವ ಹರೇರ್ಗುಣಾನ್ ।**
**ಪ್ರಾಜಾಪತ್ಯಾನ್ ನ ಚಾऽऽರ್ಷಾಂಶ್ಚ ಗಾಂಧರ್ವಾದೀನಪಿ ಕ್ವಚಿತ್ ।**
**ಋಷ್ಯಾದಿಷು ವಿಶೇಷೇ ತು ದೋಷೋ ನೈವಾವಿಶೇಷಿ(ಷ)ತಃ ॥'**

**ಇತಿ ವಿಶೇಷದರ್ಶನಾರ್ಥಮೇಕ ಇತ್ಯುಕ್ತಮ್ ॥**

ಉಪಪೂರ್ವಂ=ಉಪದೇವಪದವಿಯನ್ನು ಅಂದರೆ ಗಂಧರ್ವಪದವಿಯನ್ನೂ ಬಯಸಬಾರದು ಎಂದು ಕೆಲವರು ಹೇಳುತ್ತಾರೆ. ಭಾವಶಮನವತ್=ಋಷಿ ವಿಶೇಷ

ಪದವಿಯ ಬಯಕೆಯಂತೆ. ಇದನ್ನು ಇಂದ್ರದ್ಯುಮ್ನಶ್ರುತಿಯಲ್ಲಿ ಹೇಳಲಾಗಿದೆ— ಹೇಗೆ ಋಷಿಪದವಿಯನ್ನಾಗಲೀ ಪ್ರಜಾಪತಿಗಳ (ದಕ್ಷಾದಿಗಳ) ಪದವಿಯನ್ನಾಗಲೀ ಬಯಸಬಾರದೋ ಅದರಂತೆ ಗಂಧರ್ವಪದವಿಯನ್ನಾಗಲೀ, ವಿದ್ಯಾಧರ-ಸಿದ್ಧಪದವಿಗಳನ್ನಾಗಲೀ ಬಯಸಬಾರದು. ಬೃಹತ್ಸಂಹಿತೆಯಲ್ಲಿದೆ—

ದೇವಪದವಿಯನ್ನೇ ಆಕಾಂಕ್ಷೆ ಮಾಡಬಾರದು, ಹೀಗಿರುವಾಗ ಶ್ರೀಹರಿಯ ಗುಣಗಳನ್ನು ಬಯಸಬಾರದೆಂದು ಹೇಳಬೇಕೆ? ಪ್ರಜಾಪತಿಯ ಮಹತಿಯನ್ನಾಗಲೀ ಋಷಿವಿಶೇಷ ಮಹತಿಯನ್ನಾಗಲೀ ಎಂದೂ ಬಯಸಬಾರದು. ವಸಿಷ್ಠ ವಿಶ್ವಾಮಿತ್ರಾದಿ ಋಷಿವಿಶೇಷರಾಗಲು ಬಯಸಬಾರದಾದರೂ 'ನಾನೊಬ್ಬ ಋಷಿಯಾಗಬೇಕು' ಎಂಬ ಬಯಕೆ ಹಾನಿಕರವಲ್ಲ.

**ವಿವರಣೆ—** ಉಪಪೂರ್ವಂ ಎಂದರೆ ಗಂಧರ್ವಪದವಿ. ಉಪಪೂರ್ವ ದೇವಪದ=ಉಪದೇವ. ಉಪ ಎಂದರೆ ದೇವತೆಗಳ ಸಮೀಪದಲ್ಲಿ ಅವರ ಪರಿಚಾರಕ ರಾಗಿರುವವರು ಗಂಧರ್ವರು. ಗಂಧರ್ವಸ್ವರೂಪವನ್ನು ತಿಳಿಸಲು ಈ ಪದಪ್ರಯೋಗ.

ಭಾವಶಮನರು ಎಂದರೆ, ಋಷಿಗಳು. ಭಾವ ಎಂದರೆ ಭಾವನೆ. ಉಪ ಲಕ್ಷಣಯಾ ಕ್ರಿಯೆ. ಭಾವನೆ ಮತ್ತು ಕ್ರಿಯೆಯಲ್ಲಿ ಶಮನ=ನಿಯಂತ್ರಣವಿರುವವರು ಋಷಿಗಳು.

## ॥ ಓಂ ಬಹಿಸ್ತೂಭಯಥಾಽಪಿ ಸ್ಮೃತೇರಾಚಾರಾಚ್ಚ ಓಂ ॥ ೪೩ ॥

ದೇವರ್ಷಿಗಂಧರ್ವಾದಿಪದೇಭ್ಯೋಽನ್ಯತ್ರ ಶುಭವಿಷಯಾಕಾಂಕ್ಷಾಯಾ-ಮನಾಕಾಂಕ್ಷಾಯಾಂ ಚ ನ ಪತನಮ್ ।

'ದೇವರ್ಷಿಗಂಧರ್ವಾಣಾಂ ಪದಾಕಾಂಕ್ಷಃ(ಕ್ಷ್ಮಿ) ಪತೇದ್ ಧ್ರುವಮ್ ।
ಅನ್ಯತ್ರ ಶುಭಮಾಕಾಂಕ್ಷನ್ ನ ಪತೇದವಿರೋಧತಃ ॥'

ಇತಿ ಸ್ಮೃತೇಃ ।

'ನಾನಾತ್ವಮೇವ ಕಾಮಾನಾಂ ನಾಕಾಮಃ ಕ್ವಚ ದೃಶ್ಯತೇ ।
ಅತೋಽವಿರುದ್ಧಕಾಮಃ ಸ್ಯಾದಕಾಮಸ್ತೇನ ಭಣ್ಯತೇ ॥'

ಇತ್ಯಾಚಾರಾಚ್ಚ ।

ಬಹಿಸ್ತು=ದೇವ-ಋಷಿ-ಗಂಧರ್ವಪದವಿಗಳನ್ನು ಹೊರತಾದ ಒಳ್ಳೆಯ ಕಾಮನೆ ಇದ್ದರೂ ನಿಷ್ಕಾಮನಾಗಿದ್ದರೂ ಅಧಃಪಾತ ಇಲ್ಲ. ಹಾಗೆ ಸ್ಮೃತಿ ಇದೆ—

ದೇವ-ಋಷಿ-ಗಂಧರ್ವರ ಪದವಿಗಾಗಿ ಆಸೆ ಪಡುವವನು ನಿಶ್ಚಯವಾಗಿಯೂ ನರಕಕ್ಕೆ ಬೀಳುತ್ತಾನೆ. ಇತರ ಶುಭಕಾಮನೆ ಮಾಡುವುದಕ್ಕೆ ವಿರೋಧವಿಲ್ಲದಿರುವುದರಿಂದ ಅಧಃಪಾತ ಇಲ್ಲ.

ಆಚಾರ(ವಿಧಿ)ಪ್ರತಿಪಾದಕವಾಕ್ಯದಿಂದಲೂ ಇದು ತಿಳಿಯುತ್ತದೆ-ಕಾಮನೆಗಳು ನಾನಾವಿಧವಾಗಿವೆ. ಕಾಮನೆಗಳಿಲ್ಲದವರು ವಿರಳ. ಆದ್ದರಿಂದ ಅಕಾಮರೆಂದರೆ, ಕಾಮನಾರಹಿತರು ಎಂದು ಅರ್ಥವಲ್ಲ. ಅವಿರುದ್ಧಕಾಮವುಳ್ಳವರು ಎಂದರ್ಥ.

**ವಿವರಣೆ—** ಭಗವದ್ಗೀತೆಯಲ್ಲಿ-'ವಿಹಾಯ ಕಾಮಾನ್ ಯಃ ಸರ್ವಾನ್ ಪುಮಾಂಶ್ಚರತಿ ನಿಃಸ್ಪೃಹಃ ॥'' ಎಂದಿದೆ. ಇಲ್ಲಿ ಸಕಲಕಾಮನೆಗಳನ್ನೂ ತ್ಯಾಗಮಾಡ ಬೇಕೆಂದು ಹೇಳಲಾಗಿದೆ. ಆದರೆ, ಮನುಷ್ಯನಾದವನು ಯಾವ ಕಾಮನೆಗಳನ್ನೂ ಬಿಟ್ಟಿರಲು ಸಾಧ್ಯವಿಲ್ಲ. ಆದ್ದರಿಂದ ವಿರುದ್ಧಸಕಲಕಾಮನೆಗಳನ್ನೂ ಬಿಟ್ಟಿರಬೇಕೆಂದೇ ಭಗವದ್ಗೀತೆಯ ಅಭಿಪ್ರಾಯ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ನಚಾಽಧಿಕಾರಿಕಮಪಿ ಪತನಾನುಮಾನಾತ್ ತದಯೋಗಾತ್ ಓಂ ॥**
(ಅತ್ರ ಜ್ಞಾನಸ್ಯ ದೇವಾದಿಪದಾನಾಕಾಂಕ್ಷಿಭಿರೇವ ಪ್ರಾಪ್ಯತ್ವಂ ಸಾಧ್ಯತೇ। ಚಶಬ್ದಃ; ಪ್ರಾಗುಕ್ತೋರ್ಧ್ವರೇತಸ್ತ್ವಾದೀತಿಕರ್ತವ್ಯತಾತಃ ದೇವಾದಿಪದಾನಾಂ ಕಾಂಕ್ಷಿತ್ವಾಖ್ಯೇತಿ-ಕರ್ತವ್ಯತಾಂತರಸೂಚಕಃ। ಅಪಿಃ ಕೈಮುತ್ಯಸೂಚನಾರ್ಥಮ್ ।)

ಯಸ್ಯ ಯಸ್ಮಿನ್ ಪದೇ ಅಧಿಕಾರಃ ಶ್ರುತ್ಯಾದಿಸಿದ್ಧಃ ತತ್ ಬ್ರಹ್ಮಾದಿದೇವಪದಂ ಆಧಿಕಾರಿಕಮ್। ತದಪಿ ಜ್ಞಾನಾರ್ಥಿನಾ ನಾಕಾಂಕ್ಷ್ಯಮ್, ಕಿಂ ಐಶ್ವರ್ಯಮ್ ನಾಕಾಂಕ್ಷ್ಯಮಿತಿ। ಕುತಃ? ತದಯೋಗಾತ್। ತದಾಕಾಂಕ್ಷಾಯಾಃ ಅಯೋಗಾದಿ-ತ್ಯರ್ಥಃ। ತದಯೋಗಃ ಕುತಃ ? ಪತನಾನುಮಾನಾತ್। ಅಯೋಗ್ಯಮಾರೋಢುಂ ಯತಮಾನಸ್ಯ ಲೋಕೇ ಪತನೋಪಲಂಭೇನ ಇಹಾಪಿ ಬ್ರಹ್ಮಾದಿಪದಾಕಾಂಕ್ಷಾವಾನ್ ಪತತಿ। ಅಯೋಗ್ಯಾರೋಹಪ್ರಯತ್ನವತ್ವಾತ್ ಇತಿ ಭಾವಃ। ವಿಮತಃ, ದೇವಾದಿಭಿಃ ಪಾತ್ಯತೇ, ಅಶಕ್ಯತತ್ಪದೇಚ್ಛುತ್ವಾತ್, ರಾಜಪದೇಚ್ಛುವತ್, ಇತಿ ವಾ ಪತನಾನುಮಾನಾದಿತ್ಯರ್ಥಃ। ಆದ್ಯೇ ಇಚ್ಛಾಯಾಃ ಯತ್ನವಿಶೇಷತ್ವೋಪಗಮಾತ್ ನಾಸಿದ್ಧಿಃ।

ದೇವಾದಿಪದಮಿತಿ ವಾಚ್ಯೇ ಆಧಿಕಾರಿಕಮಿತ್ಯುಕ್ತಿಃ ತತ್ತದಧಿಕಾರಿಭಿಃ ಪ್ರಾಪ್ಯಂ ತದನ್ಯೈಃ ನಾಕಾಂಕ್ಷ್ಯಮ್ ಇತಿ ಸೂಚಯಿತುಮ್। ತೇನ ಯೋಗ್ಯಾನಾಮಪಿ ತತ್ತದಾಕಾಂಕ್ಷಾವತಾಂ ಜ್ಞಾನಾನವಾಪ್ತಿಃ ಅನುಮಾನಬಾಧಾದಿದೋಷಶ್ಚ ಸ್ಯಾದಿತಿ ಶಂಕಾನವಕಾಶಃ।)

ಜ್ಞಾನವನ್ನು ಅರಸುವವರು ದೇವಾದಿಪದವಿಗಳನ್ನು ಬಯಸಬಾರದು ಎಂದು ಇಲ್ಲಿ ಹೇಳಲಾಗಿದೆ. ಯಾರಿಗೆ ಯಾವ ಪದವಿಯ ಅಧಿಕಾರವು ಶ್ರುತ್ಯಾದಿ ಪ್ರಮಾಣಗಳಿಂದ ಸಿದ್ಧವಾಗಿದೆಯೋ ಅಂತಹ ಬ್ರಹ್ಮಪದವಿ, ದೇವತಾಪದವಿಗಳು ಆಧಿಕಾರಿಕವೆನಿಸುತ್ತವೆ. ಆಧಿಕಾರಿಕಮಪಿ=ಇಂತಹ ಪದವಿಗಳನ್ನೂ ಜ್ಞಾನಿಗಳು ಬಯಸಬಾರದು, ಹೀಗಿದ್ದಮೇಲೆ ಭಗವಂತನ ಗುಣಗಳನ್ನು ಬಯಸಬಾರದು ಎಂದು ಹೇಳಬೇಕಾಗಿಲ್ಲ. ತದಯೋಗಾತ್=ಅಂತಹ ಆಸೆಯು ಯುಕ್ತವಲ್ಲವಾದುದರಿಂದ. ಏಕೆಂದರೆ, ಪತನಾನುಮಾನಾತ್, ತನಗೆ ಯೋಗ್ಯವಲ್ಲದ ರಾಜಾದಿಪದವಿಯನ್ನು ಇಚ್ಛೆಪಡುವವನಿಗೆ ಶಿಕ್ಷೆಯಾಗುವಂತೆ ದೇವಾದಿಪದವಿಗಳನ್ನು ಇಚ್ಛಿಸುವವನಿಗೆ ನರಕವಾಗುತ್ತದೆ, ಎಂದು ಅನುಮಾನಮಾಡಬಹುದಾದ್ದರಿಂದ.

**॥ ಓಂ ಉಪಪೂರ್ವಮಪೀತ್ಯೇಕೇ ಭಾವಶಮನವತ್ ತದುಕ್ತಮ್ ಓಂ ॥**

(ನಾಕಾಂಕ್ಷ್ಯಮಿತ್ಯಸ್ತಿ। ಅಧಿಕಾರಿಕಮಿತ್ಯುಕ್ತಿಲಬ್ಧಂ ದೇವಪದಮ್ ಇತ್ಯೇತತ್ ಇಹಾಪ್ಯನ್ವೇತಿ। ಉಪೇತಿ ಶಬ್ದಃ ಪೂರ್ವಃ ಯಸ್ಯ ತದುಪಪೂರ್ವಂ ದೇವಪದಮ್–ಉಪದೇವಪದಮಿತ್ಯರ್ಥಃ। ಉಪಶಬ್ದೋಽಯಂ ಸಮೀಪವರ್ತಿವಾಚೀ।

ದೇವಾನಾಮ್ ಉಪವರ್ತಿನಃ–ಉಪದೇವಾಃ ಗಂಧರ್ವಾದಯಃ। ತೇಷಾಂ ಪದಮಪಿ ಭಾವಶಮನವತ್=ಭಾವಶಮನಪದವತ್ ನಾಕಾಂಕ್ಷ್ಯಮ್ ಇತ್ಯೇಕೇ ವದಂತಿ। ಕಿಂ ದೇವಪದಂ ನಾಕಾಂಕ್ಷ್ಯಮ್ ಇತ್ಯಪೇರರ್ಥಃ। ದೃಷ್ಟಾಂತೀಭೂತಂ ಋಷ್ಯಾದಿಪದಂ ದಾರ್ಷ್ಟಾಂತಿಕಂ ಗಂಧರ್ವಾದಿಪದಂ ಚ ಕುತೋ ನಾಕಾಂಕ್ಷ್ಯಮ್ ? ತದುಕ್ತಮ್=ತದ್ವಯಂ ನಾಕಾಂಕ್ಷ್ಯಮ್ ಇತ್ಯೇತದುಕ್ತಂ–

ಯಥರ್ಷೀನ್ ಪ್ರಜಾಪತೀನ್ ನಾಕಾಂಕ್ಷ್ಯೇತ್
ಏವಂ ನ ಗಂಧರ್ವಾನ್ ॥ ಇತಿ ಶ್ರುತೌ ಇತ್ಯರ್ಥಃ।

ಗಂಧರ್ವಾನಿತಿ, ಗಂಧರ್ವಾದಿಪದಮ್ ಇತಿ ವಾ ವಾಚ್ಯೇ ಉಪೇತ್ಯಾದ್ಯುಕ್ತಿಃ–ಸಮೀಪವರ್ತಿನಾಮಪಿ ನಾಕಾಂಕ್ಷ್ಯಮ್ ಕಿಮು ತೇಷಾಂ ಇತಿ ಅಪಿಪದಸೂಚಿತ ಕೈಮುಕ್ಯವ್ಯಕ್ತ್ಯರ್ಥಾ। ಋಷಿವದಿತಿ ವಾಚ್ಯೇ ಭಾವೇತ್ಯಾದ್ಯುಕ್ತಿಃ 'ಭಾವೇ=ಚಿತ್ತೇ

ಚೇಷ್ಟಾಯಾಂ ಚ ಶಮನಾತ್ ಭಾವಶಮನಾಃ=ಋಷಯಃ' ಇತಿ ತತ್ತ್ವಪ್ರದೀಪೋಕ್ತ್ಯಾ ಋಷಿಸ್ವರೂಪೋಕ್ತ್ಯರ್ಥಾ ।)

ಉಪ ಶಬ್ದದ ಜೊತೆಯಲ್ಲಿ 'ದೇವಪದ' ಶಬ್ದವನ್ನು ಸೇರಿಸಿದಾಗ ಉಪದೇವಪದ, ಎಂದು ಅರ್ಥವಾಗುತ್ತದೆ. ಈ ಪದವೇ 'ಉಪಪೂರ್ವ'(ದೇವಪದ) ಉಪ= ಸಮೀಪದಲ್ಲಿರುವವರು. ಉಪದೇವ ಎಂದರೆ ದೇವತೆಗಳ ಸಮೀಪದಲ್ಲಿ ಇರುವವರು, ದೇವತೆಗಳ ಪರಿಚಾರಕರಾದ ಗಂಧರ್ವರು. ಅವರ ಪದವನ್ನು ಬ್ರಹ್ಮಜ್ಞಾನೇಚ್ಛುಗಳು ಬಯಸಬಾರದು. ದೇವತೆಗಳ ಸಮೀಪವರ್ತಿಗಳ ಪದವಿಯನ್ನೇ ಬಯಸಬಾರದು ಎಂದಾದರೆ ದೇವತಾಪದವಿಯನ್ನು ಬಯಸಲೇಬಾರದು. ಈ ಕೈಮುತ್ಯವನ್ನು ತಿಳಿಸಲು 'ಉಪಪೂರ್ವಂ' ಎಂಬ ಪದವನ್ನು ಪ್ರಯೋಗಿಸಲಾಗಿದೆ.

ಭಾವಶಮನರು ಎಂದರೆ ಋಷಿಗಳು. ಭಾವೇ=ಮನಸ್ಸಿನಲ್ಲಿ ಮತ್ತು ಕ್ರಿಯೆಯಲ್ಲಿ ಶಮನಂ=ನಿಗ್ರಹವು ಯಾರಿಗೆ ಇದೆಯೋ ಅವರು ಭಾವಶಮನರು. ವಸಿಷ್ಠಾದಿ ಋಷಿಗಳ ಸ್ಥಾನವನ್ನು ಹೇಗೆ ಬಯಸಬಾರದೋ ಅದರಂತೆ, ಎಂದು ಉದಾಹರಣೆ.

ಇವೆರಡನ್ನೂ ಏಕೆ ಬಯಸಬಾರದು? ತದುಕ್ತಂ=ಅದನ್ನು ಶ್ರುತಿಯಲ್ಲಿ ಹೇಳಲಾಗಿದೆ. ಋಷಿಗಳ ಸ್ವರೂಪವನ್ನು ತಿಳಿಸುವ ಸಲುವಾಗಿ ಭಾವಶಮನ ಶಬ್ದವನ್ನು ಪ್ರಯೋಗಿಸಲಾಗಿದೆ. ಇದರಿಂದಾಗಿ, ವಸಿಷ್ಠಾದಿಗಳಲ್ಲದೆ ಇತರ ಋಷಿಗಳೂ ಇದ್ದಾರೆ. ಅವರಂತೆ ನಾನೂ ಒಬ್ಬ ಋಷಿಯಾಗಬೇಕು, ಎಂಬ ಆಕಾಂಕ್ಷೆಯು ಯುಕ್ತವಾಗಿದೆ, ಎಂದು ಸೂಚಿಸಲಾಗಿದೆ.

**॥ ಓಂ ಬಹಿಸ್ತೂಭಯಥಾಽಪಿ ಸ್ಮೃತೇರಾಚಾರಾಚ್ಚ ಓಂ ॥** (ತುರ್ವಿಶೇಷ-ದ್ಯೋತಕಃ । ಬಹಿಸ್ತು=ದೇವರ್ಷಿಗಂಧರ್ವಪದೇಭ್ಯೋ ಬಹಿರ್ಭೂತ-ಜ್ಞಾನಭಕ್ತ್ಯಾದಿಷು ಅಸ್ತಿ ವಿಶೇಷಃ । ಸಃ ಕಃ ? ಉಭಯಥಾಪಿ=ಆಕಾಂಕ್ಷಾಯಾಂ ಅನಾಕಾಂಕ್ಷಾಯಾಮಪಿ ನ ಪತನಮ್ । ಕುತಃ ? ''ದೇವರ್ಷಿಗಂಧರ್ವಾಣಾಮ್'' ಇತಿ ಸ್ಮೃತೇಃ । ಆಚಾರಾದಿತ್ಯಾಚಾರವಾಕ್ಯಂ ಗೃಹ್ಯತೇ–

ನಾನಾತ್ವಮೇವ ಕಾಮಾನಾಂ ನಾಕಾಮಃ ಕ್ವಚ ದೃಶ್ಯತೇ ।
ಅತೋಽವಿರುದ್ಧಕಾಮಃ ಸ್ಯಾತ್ ಅಕಾಮಸ್ತೇನ ಭಣ್ಯತೇ ॥

ಇತಿ ಅವಿರುದ್ಧಕಾಮೇನ ಆಚಾರಪ್ರತಿಪಾದಕವಾಕ್ಯಾಚ್ಚ ಇತ್ಯರ್ಥಃ । ಅನೇಕ ವಾಕ್ಯೇನ ''ವಿಹಾಯ ಕಾಮಾನ್ ಯಃ ಸರ್ವಾನ್ ಪುಮಾಂಶ್ಚರತಿ'' ಇತಿ ಗೀತೋಕ್ತಾಚಾರಸ್ಯ ಅವಿರುದ್ಧಕಾಮಾಚಾರಪ್ರತಿಪಾದನಾತ್, ಇತಿ ಭಾವಃ ।

ಬಹಿಸ್ತು=ದೇವ-ಋಷಿ-ಗಂಧರ್ವಪದವಿಗಳಿಗಿಂತ ಬೇರೆಯಾದ ಜ್ಞಾನಭಕ್ತ್ಯಾದಿಗಳಲ್ಲಿ ವಿಶೇಷವಿದೆ. ಆ ವಿಶೇಷವೇ, ಉಭಯಥಾಪಿ=ಜ್ಞಾನಾದಿಗಳನ್ನು ಬಯಸಿದರೂ ಬಯಸದೇ ಇದ್ದರೂ ಅದರಿಂದ ಅನರ್ಥವಿಲ್ಲ. ಸ್ಮೃತೇಃ='ದೇವರ್ಷೀಣಾಂ' ಇತ್ಯಾದಿಸ್ಮೃತಿ ಇರುವುದರಿಂದ. ''ವಿಹಾಯ ಕಾಮಾನ್'' ಎಂಬ ಗೀತಾವಾಕ್ಯದಲ್ಲಿ ಸರ್ವಕಾಮನೆಗಳನ್ನೂ ಬಿಡಬೇಕೆಂದು ಹೇಳಲಾಗಿದೆಯಲ್ಲವೆ? ಎಲ್ಲಾ ಕಾಮನೆಗಳನ್ನು ಬಿಡಬೇಕಾಗಿಲ್ಲ-ಆಚಾರಾಚ್ಚ=ಆಚಾರಪ್ರತಿಪಾದಕಶ್ರುತಿ ಇರುವುದರಿಂದ. ಅವಿರುದ್ಧ ಕಾಮನೆಯೇ ಸರ್ವಕಾಮತ್ಯಾಗ ಹೊರತು ಜ್ಞಾನಾದಿಗಳ ಕಾಮನೆಗಳನ್ನು ಬಿಟ್ಟಿರುವುದಲ್ಲ.

## ಶಾಂಕರಭಾಷ್ಯದಲ್ಲಿ ಆಧಿಕಾರಿಕಾಧಿಕರಣ

**॥ ನಚಾಽಧಿಕಾರಿಕಮಪಿ ಪತನಾನುಮಾನಾತ್ ತದಯೋಗಾತ್ ॥** ಬ್ರಹ್ಮಚಾರಿಯು ಸ್ತ್ರೀಸಂಸರ್ಗವನ್ನು (ಅವಕೀರ್ಣಃ) ಮಾಡಿದರೆ ''ಬ್ರಹ್ಮಚಾರ್ಯ-ವಕೀರ್ಣೀ ನೈರ್ಋತಂ ಗರ್ದಭಮಾಲಭೇತ'' ಎಂದು ಪ್ರಾಯಶ್ಚಿತ್ತವನ್ನು ಹೇಳಲಾಗಿದೆ. ಈ ಪ್ರಾಯಶ್ಚಿತ್ತವು ನೈಷ್ಠಿಕಬ್ರಹ್ಮಚಾರಿಗೆ ಅನ್ವಯಿಸುವುದಿಲ್ಲ. ಆಧಿಕಾರಿಕಮಪಿ=ಅಧಿಕಾರ ಶಾಸ್ತ್ರದಲ್ಲಿ ನಿರ್ಣಯಿಸಿರುವ ಪ್ರಾಯಶ್ಚಿತ್ತವು ನೈಷ್ಠಿಕರಿಗೆ ಇಲ್ಲ. ಪತನಾನುಮಾನಾತ್=

ಆರೂಢೋ ನೈಷ್ಠಿಕಂ ಧರ್ಮಂ ಯಸ್ತು ಪ್ರಚ್ಯವತೇ ಪುನಃ ।
ಪ್ರಾಯಶ್ಚಿತ್ತಂ ನ ಪಶ್ಯಾಮಿ ಯೇನ ಶುದ್ಧ್ಯೇತ್ ಸ ಆತ್ಮಹಾ ॥

ಎಂದು ಪತನವನ್ನೇ ಹೇಳಿರುವುದರಿಂದ. ತದಯೋಗಾತ್=ಬ್ರಹ್ಮಚಾರಿಗೆ ಪತನವಿಲ್ಲದುದರಿಂದ ಪ್ರಾಯಶ್ಚಿತ್ತವು ಅವನಿಗೆ ಅನ್ವಯಿಸುತ್ತದೆ, ನೈಷ್ಠಿಕ ಬ್ರಹ್ಮಚಾರಿಗೆ ಅಲ್ಲ.

**॥ ಉಪಪೂರ್ವಮಪಿ ತ್ವೇಕೇ ಭಾವಮಶನವತ್ ತದುಕ್ತಮ್ ॥** ಶಾಂಕರ ಭಾಷ್ಯದ ಸೂತ್ರಪಾಠ ''ಭಾವಮಶನವತ್'' ಎಂದು. ಏಕೇ=ಕೆಲವರು ಉಪ ಪೂರ್ವಂ, ಉಪಪೂರ್ವಕವಾದ ಪಾತಕ ಅರ್ಥಾತ್ ಉಪಪಾತಕವೆಂದು ಪರಿಗಣಿಸಿ ನೈಷ್ಠಿಕರ ಪತನಕ್ಕೂ ಪ್ರಾಯಶ್ಚಿತ್ತವನ್ನು ಭಾವಂ=ಇದೆ ಎನ್ನುತ್ತಾರೆ. ಅಶನವತ್=ಅಭಕ್ಷ್ಯ ಭಕ್ಷಣದಂತೆ. ಬ್ರಹ್ಮಚಾರಿಯು ಮಧು-ಮಾಂಸಗಳನ್ನು ತಿಂದರೆ ವ್ರತಲೋಪವಾಗುವುದರಿಂದ ಮತ್ತೆ ಸಂಸ್ಕಾರವನ್ನು ಮಾಡಲಾಗುವುದೋ, ಅದರಂತೆ ಸ್ತ್ರೀಸಂಗವನ್ನು ಮಾಡಿದರೂ ಪ್ರಾಯಶ್ಚಿತ್ತವಿದೆ. ಗುರುಪತ್ನಿಯ ಸಂಗಮಾತ್ರ ಪ್ರಾಯಶ್ಚಿತ್ತವಿಲ್ಲದ ಪತನ.

ಸ್ತ್ರೀಸಂಗಪ್ರಾಯಶ್ಚಿತ್ತ ಬ್ರಹ್ಮಚಾರಿಗೆ ವಿಹಿತ. ನೈಷ್ಠಿಕನೂ ಬ್ರಹ್ಮಚಾರಿಯಾದ ಕಾರಣ ಅವನಿಗೂ ಅದು ಅನ್ವಯಿಸುತ್ತದೆ.

**ವಿಮರ್ಶೆ—** ದ್ವೈತಸೂತ್ರಪಾಠ ''ಉಪಪೂರ್ವಮಪೀತ್ಯೇಕೇ'' ಎಂದು. ಶಾಂಕರರಾಮಾನುಜಭಾಷ್ಯಪಾಠ–''ಉಪಪೂರ್ವಮಪಿ ತ್ವೇಕೇ'' ಎಂದು 'ಆಧಿಕಾರಿಕಂ' ಎಂಬ ಸೂತ್ರಪದಕ್ಕೆ 'ಅಧಿಕಾರಲಕ್ಷಣೇ ನಿರ್ಣೀತಂ ಪ್ರಾಯಶ್ಚಿತ್ತಂ' ಎಂಬ ಅರ್ಥವು ಸ್ವರಸವಲ್ಲ. ಆ ಅರ್ಥವನ್ನು ಒಪ್ಪಿಕೊಂಡರೂ ಈ ವಿಷಯವನ್ನು ಪೂರ್ವತಂತ್ರದ ಪ್ರಾಯಶ್ಚಿತ್ತಪ್ರಕರಣದಲ್ಲೇ ಮಾಡಬೇಕಿತ್ತು.

ಸ್ತ್ರೀಸಂಸರ್ಗ ಉಪಪಾತಕ. ಪ್ರಾಯಶ್ಚಿತ್ತ ಮಾಡಿದರೆ ಜ್ಞಾನಾಧಿಕಾರಪ್ರಾಪ್ತಿಯಾಗುತ್ತದೆ ಎಂದು ಎರಡನೆಯ ಸೂತ್ರದ ಅರ್ಥ. ಹಾಗಿದ್ದರೆ ಪ್ರಾಯಶ್ಚಿತ್ತ ಮಾಡಿಕೊಂಡ ನೈಷ್ಠಿಕನಿಗೆ 'ಸಾಂವ್ಯವಹಾರ್ಯತ್ವವೂ' (ಸಹಪಂಕ್ತಿಭೋಜನಾದಿಗಳು) ಬರಬೇಕಾದೀತು.

## ಶಾಂಕರಭಾಷ್ಯದಲ್ಲಿ ಬಹಿರಧಿಕರಣ

**॥ ಬಹಿಸ್ತೂಭಯಥಾಽಪಿ ಸ್ಮೃತೇರಾಚಾರಾಚ್ಚ ॥** ಉಭಯಥಾಪಿ=ನೈಷ್ಠಿಕ ಬ್ರಹ್ಮಚಾರಿಗಳು ಪ್ರಾಯಶ್ಚಿತ್ತಮಾಡಿಕೊಂಡರೂ ಇಲ್ಲದಿದ್ದರೂ ಬಹಿಃ=ಶಿಷ್ಟರು ಹೊರಹಾಕಬೇಕು. ಸ್ಮೃತೇಃ=ಪ್ರಾಯಶ್ಚಿತ್ತಂ ನ ಪಶ್ಯಾಮಿ, ಎಂಬ ಸ್ಮೃತಿ ಇರುವ ಕಾರಣ.

ಆರೂಢಪತಿತಂ ವಿಪ್ರಂ ಮಂಡಲಾಚ್ಚ ವಿನಿಃಸೃತಮ್ ।
ಉದ್ಬದ್ಧಂ ಕೃಮಿದಷ್ಟಂ ಚ ಸ್ಪೃಷ್ಟ್ವಾ ಚಾಂದ್ರಾಯಣಂ ಚರೇತ್ ॥

ಆಚಾರಾಚ್ಚ=ಶಿಷ್ಟಾಚಾರವೂ ಹೀಗೆಯೇ ಇದೆ.

**ವಿಮರ್ಶೆ:** ಈ ಸೂತ್ರಾರ್ಥ ಹಿಂದಿನ ಸೂತ್ರಗಳಿಂದ ಲಭ್ಯವಾಗುತ್ತದೆ. ಆದ್ದರಿಂದ ಮತ್ತೆ ಹೇಳುವ ಅಗತ್ಯವಿಲ್ಲ.

**ಇಲ್ಲಿಗೆ ಆಧಿಕಾರಿಕಾಧಿಕರಣವು ಮುಗಿಯಿತು.**

## ೭. ಫಲಶ್ರುತ್ಯಧಿಕರಣಮ್

### ॥ ಓಂ ಸ್ವಾಮಿನಃ ಫಲಶ್ರುತೇರಿತ್ಯಾತ್ರೇಯಃ ಓಂ ॥ ೪೪ ॥

'ಬ್ರಹ್ಮವಿದಾಪ್ನೋತಿ ಪರಮ್' (ತೈ.ಉ. 2.1) ಇತ್ಯಾದಿಫಲಂ ಸ್ವಾಮಿನಾಂ ದೇವಾನಾಮೇವ ಭವತಿ ।

'ಯದು ಕಿಂಚೇಮಾಃ ಪ್ರಜಾಃ ಶುಭಮಾಚರಂತಿ ದೇವಾ ಏವ ತದಾಚರಂತಿ, ಯದು ಕಿಂಚೇಮಾಃ ಪ್ರಜಾ ವಿಜಾನತೇ ದೇವಾ ಏವ ತದ್ ವಿಜಾನತೇ ದೇವಾನಾಂ ಹ್ಯೇತದ್ ಭವತಿ, ಸ್ವಾಮೀ ಹಿ ಫಲಮಶ್ನುತೇ, ನಾಸ್ವಾಮೀ ಕರ್ಮ ಕುರ್ವಾಣಃ'

ಇತಿ ಮಾಧ್ಯಂದಿನಾಯನಶ್ರುತೇರಿತ್ಯಾತ್ರೇಯೋ ಮನ್ಯತೇ ॥

''ಬ್ರಹ್ಮವಿತ್ ಆಪ್ನೋತಿ ಪರಂ'' ಎಂದು ಜ್ಞಾನದ ಫಲ ಬ್ರಹ್ಮಪ್ರಾಪ್ತಿ ಎಂದು ಹೇಳಿದೆ. ಈ ಫಲವು ಜ್ಞಾನಪಡೆದ ಜ್ಞಾನಿಗಳಿಗಲ್ಲ, ಪ್ರೇರಕತ್ವೇನ ಸ್ವಾಮಿಗಳೆನಿಸಿದ ದೇವತೆಗಳಿಗೆ ಮಾತ್ರ. ಹಾಗೆ ಶ್ರುತಿ ಇದೆ–ಮನುಷ್ಯರು ಏನು ಶುಭಕರ್ಮವನ್ನು ಮಾಡುವರೋ ದೇವತೆಗಳೇ ಅದನ್ನು ಮಾಡುತ್ತಾರೆ. ಕರ್ಮಸ್ವಾಮಿಗಳಾದ ಅವರಿಗೇ ಫಲಪ್ರಾಪ್ತಿ. ಅಸ್ವಾಮಿಯಾದ ಕರ್ಮಮಾಡಿದವನಿಗೆ ಫಲವಿಲ್ಲ. ಹೀಗೆ ಮಾಧ್ಯಂದಿನಾಯನ ಶ್ರುತಿ ಇದೆ. ಇದು ಆತ್ರೇಯರ ಅಭಿಪ್ರಾಯ.

**ವಿವರಣೆ—** ಅನಂತ ಜೀವರಲ್ಲಿ ಕೆಲವರಿಗೆ ಮಾತ್ರ ಜ್ಞಾನಾಧಿಕಾರ. ಅಯೋಗ್ಯರಿಗೆ ಎಷ್ಟು ಪ್ರಯತ್ನ ಮಾಡಿದರೂ ಜ್ಞಾನವು ಬರುವುದಿಲ್ಲ. ಯೋಗ್ಯತೆಯನ್ನು ಯಾರಿಂದಲೂ ಬದಲಿಸಲಾಗುವುದಿಲ್ಲ. ಅಯೋಗ್ಯಕಾಮನೆಯು ಪತನಕಾರಣ. ಇದು ಈವರೆಗೆ ಹೇಳಿರುವ ವಿಷಯ. ಈ ಅಧಿಕರಣದಲ್ಲಿ ಯಾರಿಗೆ ಬ್ರಹ್ಮಜ್ಞಾನವು ಬರುವುದೋ ಅವನಿಗೇ ಜ್ಞಾನಫಲವೋ ಅಥವಾ ಅವನ ಪ್ರೇರಕರಾದ ದೇವತೆಗಳಿಗೋ ಎಂದು ನಿರ್ಣಯಿಸಲಾಗಿದೆ. ಕರ್ಮಮಾಡಿ ಜ್ಞಾನಪಡೆದ ಜೀವರಿಗೆ ಅಲ್ಪಫಲ. ಮಾಡಿಸಿದ ದೇವತೆಗಳಿಗೆ ಮಹಾಫಲ. ಕೆಲಸಗಾರನಿಗೆ ಸಂಬಳ ಮಾತ್ರ. ಅವನು ಮಾಡಿದ ಕೆಲಸದ ಲಾಭ ಯಜಮಾನನಿಗೆ ಸೇರುತ್ತದೆ.

## ॥ ಓಂ ಆರ್ತ್ವಿಜ್ಯಮಿತ್ಯೌಡುಲೋಮಿಸ್ತಸ್ಮೈ ಹಿ ಪರಿಕ್ರಿಯತೇ ಓಂ ॥ ೪೫ ॥

**ಸತ್ರಯಾಗೇಷ್ವೃತ್ವಿಜಾಮಪಿ ಫಲದರ್ಶನಾದಲ್ಪಂ ಫಲಂ ಪ್ರಜಾನಾಮಪಿ ಭವತೀತ್ಯೌಡುಲೋಮಿರ್ಮನ್ಯತೇ। ತದರ್ಥಂ ದೇವೈಃ ಕ್ರಿಯಮಾಣತ್ವಾತ್ ॥**

ಸತ್ರಯಾಗದಲ್ಲಿ ಯಜಮಾನನಂತೆ ಋತ್ವಿಕ್‌ಗಳಿಗೂ ಯಾಗಫಲವು ಬರುವಂತೆ ಜ್ಞಾನದ ಅಲ್ಪಫಲವು ಮನುಷ್ಯರಿಗೂ ಬರುತ್ತದೆ, ಹೀಗೆಂದು ಔಡುಲೋಮಿ ಆಚಾರ್ಯರು ಹೇಳುತ್ತಾರೆ. ಏಕೆಂದರೆ, ದೇವತೆಗಳು ಇಂದ್ರಿಯಾದ್ಯಭಿಮಾನಿಗಳಾಗಿ ಮನುಷ್ಯರಿಗಾಗಿ ಜ್ಞಾನವನ್ನು ಸಂಪಾದಿಸಿಕೊಡುತ್ತಾರೆ.

**ವಿವರಣೆ—** ಆತ್ರೇಯರು ದೇವತೆಗಳಿಗೇ ಜ್ಞಾನಫಲ, ಎಂದರೆ ಔಡುಲೋಮಿಗಳು ದೇವತೆಗಳಿಗೆ ಮಾತ್ರವಲ್ಲ; ಜ್ಞಾನಸಂಪಾದಿಸಿದ ಮನುಷ್ಯರಿಗೂ ಫಲವಿದೆ, ಎನ್ನುತ್ತಾರೆ. ಅದಕ್ಕೆ ಉದಾಹರಣೆ ಸತ್ರಯಾಗ. ದಕ್ಷಿಣೆಯನ್ನು ಪಡೆಯದೆ ಅನೇಕ ಋತ್ವಿಜರು ಸೇರಿಮಾಡುವ ಯಾಗ ಸತ್ರಯಾಗ. ಅದಕ್ಕೆ ಬೇಕಾದ ಸಾಮಗ್ರಿಗಳನ್ನು ಒದಗಿಸುವವನು ಗೃಹಪತಿ. ಋತ್ವಿಜರು ತಮ್ಮ ತಮ್ಮ ಅಗ್ನಿಯನ್ನು ಆವಾಹಿಸಿ, ಎಲ್ಲರೂ ದೀಕ್ಷಿತರಾಗಿ, ಎಲ್ಲರೂ ಸೋಮರಸವನ್ನು ಹಿಂಡಿ ಯಾಗ ಮಾಡುತ್ತಾರೆ. ಆದರ ಸ್ವಾಮಿ ಗೃಹಪತಿಯಾದರೂ ಯಾಗದ ಫಲ ಎಲ್ಲ ಋತ್ವಿಜರಿಗೂ ಬರುತ್ತದೆ. ಅದರಂತೆ ತತ್ತ್ವಾಭಿಮಾನಿ ದೇವತೆಗಳು ನಮ್ಮ ಜ್ಞಾನ-ಕರ್ಮೇಂದ್ರಿಯ ಗಳಲ್ಲಿದ್ದು ಜ್ಞಾನಸಂಪಾದನೆ ಮಾಡಿಕೊಟ್ಟರೂ ಅವರು ನಮಗಾಗಿ ಆ ಕಾರ್ಯವನ್ನು ಮಾಡಿರುವುದರಿಂದ ಆದರ ಅಲ್ಪಫಲ ನಮಗೂ ಇದೆ. ಅಲ್ಪಧನವಿದ್ದವನನ್ನು ಬಡವ ಎನ್ನುವಂತೆ ನಮಗೆ ಫಲವೇ ಇಲ್ಲ, ಎಂದು ಆತ್ರೇಯರ ಮತ. ಸಾಧಕರಿಗೆ ಅಲ್ಪಫಲ ಬರುತ್ತದೆ, ಎನ್ನುವುದು ಅವರಿಗೂ ಸಮ್ಮತವಾಗಿದೆ.

ವಾದಿರಾಜರು ಸತ್ರಯಾಗದ ನಿರೂಪಣೆಯನ್ನು ಹೀಗೆ ಮಾಡಿದ್ದಾರೆ— ಅನೇಕರು ತಮ್ಮತಮ್ಮ ಮನೆಗಳಿಂದ ಅಕ್ಕಿ-ಕಾಯಿಪಲ್ಲೆಗಳನ್ನು ತಂದು ಒಂದುಕಡೆ ಊಟಮಾಡುವುದು. ಅಲ್ಲಿ ಅಡುಗೆ ಮಾಡುವ ಸಹಕಾರಿಗಳಿಗೂ ಭೋಜನಸಿಗುವಂತೆ ಜ್ಞಾನಫಲವೂ ನಮಗೆ ಸಿಗುತ್ತದೆ.

'ನಾಸ್ವಾಮೀ (ಫಲಮಶ್ನುತೇ') ಎಂಬ ಹಿಂದೆ ಹೇಳಿದ ಶ್ರುತಿಗೆ ಪೂರ್ಣಫಲ ಅಸ್ವಾಮಿಗೆ ಇಲ್ಲ, ಎಂದು ಅರ್ಥ.

## ॥ ಓಂ ಸಹಕಾರ್ಯಂತರವಿಧಿಃ ಪಕ್ಷೇಣ ತೃತೀಯಂ ತದ್ವತೋ ವಿಧ್ಯಾದಿವತ್ ಓಂ ॥ ೪೬ ॥

ಏತತ್ ಪಕ್ಷೇಣ ತೃತೀಯಂ ತೃತೀಯಃ ಸ್ವಪಕ್ಷಃ । ದೇವಾನಾಂ ಜ್ಞಾಪನಾದಿಕರ್ಮಣಿ ಸಹಕಾರ್ಯಂತರತ್ವೇನ ಪ್ರಜಾ ವಿಧೀಯಂತೇ । ಯಥಾ ಪ್ರಜಾವತೋ ರಾಜ್ಞಃ ಪ್ರಜಾಃ ಸಹಕಾರಿತ್ವೇನ ವಿಧೀಯಂತೇ । ಯಥಾ ವಾಽಚಾರ್ಯಸ್ಯ ಶಿಷ್ಯಾಃ । ವಾರಾಹೇ ಚ-

'ಜ್ಞಾನಾದಿದಾನಂ ದೇವಾನಾಂ ವಿಷ್ಣುನಾ ಸಾಧು ಚೋದಿತಮ್ ।
ವೇದೇ ಚ ತೇಷಾಂ ವಿಹಿತಂ ತತ್ರಾಽಚಾರ್ಯೋ ಮಹತ್ತರಃ ॥

ವಿಹಿತಃ ಸಹಕಾರಿತ್ವೇ ಸಹಕಾರ್ಯಂತರಂ ಪ್ರಜಾಃ ।
ಪಾ(ತ್ರ)ತೃತ್ವೇನ ಯಥಾ ರಾಜ್ಞೋ ಯಥಾ ಶಿಷ್ಯಾ ಗುರೋರಪಿ ॥

ತಸ್ಮಾಚ್ಛ್ರುತಂ ಫಲಂ ತಾಸಾಮಾಚಾರ್ಯಾಣಾಂ ಮಹತ್ತರಮ್ ।
ತತೋ ಮಹತ್ತರಂ ಪ್ರೋಕ್ತಂ ದೇವಾನಾಮುತ್ತರೋತ್ತರಮ್ ॥'

ಇತಿ ॥

ಈ ಮೂರನೆಯ ಪಕ್ಷ ಸೂತ್ರಕಾರರ ಸ್ವಪಕ್ಷ. ದೇವತೆಗಳು ತಾವು ಮಾಡುವ ಜ್ಞಾನಸಂಪಾದನೆಯೇ ಮೊದಲಾದ ಕಾರ್ಯಗಳಲ್ಲಿ ಮನುಷ್ಯರನ್ನು ಸಹಕಾರಿಗಳನ್ನಾಗಿ ಅವರು ತೆಗೆದುಕೊಳ್ಳುತ್ತಾರೆ. ಹೇಗೆ ಪ್ರಜಾಪಾಲಕನಾದ ರಾಜನಿಗೆ ಪ್ರಜೆಗಳು ಸಹಕಾರಿಗಳಾಗಿರುತ್ತಾರೋ ಹೇಗೆ ಅಧ್ಯಾಪಕರು ಪಾಠಹೇಳಲು ಶಿಷ್ಯರು ಸಹಕಾರಿಗಳಾಗಿರುತ್ತಾರೋ ಹಾಗೆ ದೇವತೆಗಳಿಗೆ ಮನುಷ್ಯರು. ವರಾಹಪುರಾಣದಲ್ಲಿದೆ—

ಮಹಾವಿಷ್ಣು ದೇವತೆಗಳಿಗೆ ಕೊಟ್ಟಿರುವ ಕೆಲಸ ಜ್ಞಾನಾದಿದಾನ ಮಾಡುವುದು. ಈ ಕೆಲಸವು ವೇದವಿಹಿತವೂ ಆಗಿದೆ. ಜ್ಞಾನದಾನದಲ್ಲಿ ಗುರುಗಳ ಪಾತ್ರವೇ ಹಿರಿದು. ಸಹಕಾರಿತ್ವವಿಷಯದಲ್ಲಿ ಮನುಷ್ಯರು ಆ ಕಾರ್ಯದಲ್ಲಿ ಸಹಾಯಕರಾಗಿ ನಿಯೋಜಿತರಾಗಿದ್ದಾರೆ. ಪಾಲಕತ್ವೇನ ನಿಯುಕ್ತನಾದ ರಾಜನಿಗೆ ಪ್ರಜೆಗಳು ಹೇಗೋ ಗುರುಗಳಿಗೆ ಶಿಷ್ಯರು ಹೇಗೋ ಹಾಗೆ. ಹೇಗೆ ಶಿಷ್ಯರು ಮಾಡಿದ ಶಾಸ್ತ್ರಶ್ರವಣದ ಫಲವು ಗುರುಗಳಿಗೆ ಬರುವುದೋ ಅದರಂತೆ ಆ ಗುರುಗಳಿಗಿಂತಲೂ ಹೆಚ್ಚಿನ ಫಲ ದೇವತೆಗಳಿಗೆ ಸಿಗುತ್ತದೆ. ಆ ಫಲ ದೇವತೆಗಳ ತಾರತಮ್ಯಾನುಸಾರ ಹೆಚ್ಚಾಗುತ್ತದೆ.

**ವಿವರಣೆ**— ಮೊದಲನೇ ಪಕ್ಷದಲ್ಲಿ ದೇವತೆಗಳಿಗೆ ಜ್ಞಾನಫಲ, ಮನುಷ್ಯರಿಗಿಲ್ಲ. ಎರಡನೆಯ ಪಕ್ಷದಲ್ಲಿ ದೇವತೆಗಳಿಗೆ ಹೆಚ್ಚಿನ ಫಲ, ಮನುಷ್ಯರಿಗೆ ಅಲ್ಪಫಲ. ಏಕೆಂದರೆ ದೇವತೆಗಳು ನಮ್ಮಿಂದ ಮಾಡಿಸುವುದು ನಮಗಾಗಿ. ಮೂರನೆಯ ಪಕ್ಷ ವ್ಯಾಸರದು. ದೇವತೆಗಳು ನಮ್ಮ ಗುರುಗಳ ಒಳಗಿದ್ದು ಉಪದೇಶ ಮಾಡಿಸುತ್ತಾರೆ. ನಮ್ಮೊಳಗಿದ್ದು ಇಂದ್ರಿಯಗಳನ್ನು ಸಕ್ರಿಯಗೊಳಿಸಿ ತಿಳುವಳಿಕೆ ಬರುವಂತೆ ಮಾಡುತ್ತಾರೆ. ಇದರಿಂದಾಗಿ ನಮಗೂ ಅಲ್ಪಫಲವಿದೆ. ಗುರುಗಳಿಗೂ ಫಲವಿದೆ. ದೇವತೆಗಳಿಗೂ ಫಲವಿದೆ.

ಹಿಂದಿನ ಎರಡು ಪಕ್ಷಗಳಲ್ಲಿ ವಿರೋಧವಿಲ್ಲ, ಅದೂ ವ್ಯಾಸರದೇ ಅಭಿಪ್ರಾಯ. ಆದರೂ ಶಿಷ್ಯಪ್ರಸಿದ್ಧಿಗಾಗಿ ಆತ್ರೇಯರ, ಔಡುಲೋಮಿಗಳ ಹೆಸರನ್ನು ಹೇಳಲಾಗಿದೆ.

ದೇಶಪಾಲನೆಯನ್ನು ರಾಜನು ಪ್ರಜೆಗಳ ಹಿತಕ್ಕಾಗಿ ಮಾಡುತ್ತಾನಾದರೂ ಅದರ ಫಲ ಪಾಲನರೂಪವಾದ ಪ್ರಜೆಗಳಿಗೆ ಮಾತ್ರವಲ್ಲ. ರಾಜನಿಗೇ ಮುಖ್ಯಫಲ. ಗುರುಗಳು ಶಿಷ್ಯನಿಗಾಗಿ ಪಾಠ ಮಾಡಿದರೂ ಅದರ ಮುಖ್ಯಫಲ ಗುರುಗಳಿಗೆ. ಅದರಂತೆ ದೇವತೆಗಳೂ ನಮಗಾಗಿ ಜ್ಞಾನದಾನ ಮಾಡಿದರೂ ಅದರ ಮುಖ್ಯಫಲ ದೇವತೆಗಳಿಗೇ ಸೇರುತ್ತದೆ.

ಮುಕ್ತಾವಷ್ಟಗುಣಂ ಶಿಷ್ಯಾತ್ ಗುರುರಾಪ್ನೋತಿ ಶೋಭನಮ್ ।
ತದ್ಗುರುರ್ದ್ವಿಗುಣಂ ತಸ್ಮಾತ್ ಸಾರ್ಧಂ ತಾವತ್ತತೋಽಪರೇ
ದೇವಾಃ ಸಹಸ್ರಗುಣಿತಂ ಕ್ರಮಾತ್ ತಸ್ಮಾದ್ ಯಥೋತ್ತರಮ್ ।
ಬ್ರಹ್ಮಾ ಮಹೌಘಗುಣಿತಮೇವಂ ಫಲವಿನಿರ್ಣಯೇ ॥ (ಗುರುವೃತ್ತ)

ವಾದಿರಾಜರು ಗುರ್ವರ್ಥದೀಪಿಕಾದಲ್ಲಿ–ನಮ್ಮ ಇಂದ್ರಿಯಗಳಲ್ಲಿದ್ದು ನಮಗೆ ಜ್ಞಾನಬರುವಂತೆ ದೇವತೆಗಳೇ ಮಾಡುವವರಾದರೂ ಆ ಜ್ಞಾನದ ಫಲ ನಮಗೂ ಬರುತ್ತದೆ. ಮಕ್ಕಳಿಗಾಗಿ ಅಡಿಗೆ ಮಾಡುವ ತಾಯಿ ಮಕ್ಕಳಿಗೂ ಉಣಬಡಿಸುವಂತೆ.

ದೇವತೆಗಳಿಗೆ ಮಾತ್ರ ಪುಣ್ಯಫಲ ಎಂದು ಶ್ರುತ್ಯುಕ್ತವಾದ ಮೊದಲಪಕ್ಷ ಪೂರ್ಣಫಲದ ದೃಷ್ಟಿಯಿಂದ.

ಮನುಷ್ಯರಿಗೂ ಫಲವಿದೆ ಎಂದು ಯುಕ್ತಿಯಿಂದ ಸಾಧಿಸಿರುವ ಎರಡನೆಯ ಪಕ್ಷ ಅಲ್ಪಫಲಾಪೇಕ್ಷಯಾ ಆಚಾರ್ಯರಲ್ಲಿ ಇದ್ದು ದೇವತೆಗಳು ಉಪದೇಶ ಮಾಡಿಸುತ್ತಾರೆ. ಶಿಷ್ಯರಲ್ಲಿದ್ದು ಅವರಿಗೆ ತಿಳುವಳಿಕೆ ಬರುವಂತೆ ಮಾಡುತ್ತಾರೆ. ಇದರಿಂದಾಗಿ ದೇವತೆಗಳಿಗೆ ಅಧಿಕಫಲ. ಮನುಷ್ಯರು ಕೇವಲ ಸಹಕಾರಿಗಳು. ಆದ್ದರಿಂದ ಅವರಿಗೆ ಅಲ್ಪಫಲ. ಈ ಮೂರನೆಯ ಪಕ್ಷವು ಹಿಂದಿನ ಎರಡೂ ಪಕ್ಷಗಳನ್ನೂ ಸಮರ್ಥನೆ ಮಾಡುತ್ತದೆ.

ಇದು ಸತ್ಕರ್ಮಗಳ ಬಗ್ಗೆ ನಿಯಮ. ದುಷ್ಕರ್ಮದ ಫಲ ದೇವತೆಗಳಿಗೆ ಬರುವುದೇ ಇಲ್ಲ. ಅವರು ಜೀವನ ಪಾಪಗಳಿಗೆ ಅನುಗುಣವಾಗಿ ರಾಗದ್ವೇಷಗಳಿಲ್ಲದೆ ಭಗವದಾಜ್ಞೆಯಂತೆ ಜೀವರಿಂದ ದುಷ್ಕರ್ಮಗಳನ್ನು ಮಾಡಿಸುತ್ತಾರೆ. ಆದರಿಂದಾಗಿ ಅವರಿಗೆ ಪುಣ್ಯವೇ ಲಭಿಸುತ್ತದೆ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ಸ್ವಾಮಿನಃ ಫಲಶ್ರುತೇರಿತ್ಯಾತ್ರೇಯಃ ಓಂ ॥** (ಅತ್ರ ಜ್ಞಾನಸ್ಯ ಅಸ್ವಾಮಿನೋಽಪಿ ಸನ್ನಿಧಾನಮಾತ್ರೇಣ ಫಲದಾತೃತ್ವಂ ಸಾಧ್ಯತೇ। ಸ್ವಾಮಿನ ಇತ್ಯೇಕವಚನಂ ಸಮುದಾಯಪರಮ್ । ಸ್ವಾಮಿನಾಂ ದೇವಾನಾಮೇವ ಜ್ಞಾನಫಲಮಿತಿ ಫಲಪದಸ್ಯ ಬುದ್ಧ್ಯಾ ಅತ್ರಾಪಿ ಅನ್ವಯಃ। ಕುತಃ ? ಫಲಶ್ರುತೇಃ, ಸ್ವಾಮಿನ ಇತ್ಯನ್ವೇತಿ । ''ಸ್ವಾಮೀ ಹಿ ಫಲಮಶ್ನುತೇ ನಾಸ್ವಾಮೀ'' ಇತಿ ಸ್ವಾಮಿನಃ ಫಲಶ್ರವಣಾತ್ ಇತ್ಯಾತ್ರೇಯೋ ಮನ್ಯತೇ ಇತ್ಯರ್ಥಃ ॥)

ಸ್ವಾಮಿನಃ=ಇಂದ್ರಿಯಸ್ವಾಮಿಗಳಾದ ದೇವತೆಗಳಿಗೇ ಫಲಂ=ಜ್ಞಾನದ ಫಲ. ಫಲಶ್ರುತೇಃ='ಸ್ವಾಮೀ ಹಿ ಫಲಮಶ್ನುತೇ' ಎಂಬ ಶ್ರುತಿ ಇರುವುದರಿಂದ.

**॥ ಓಂ ಆರ್ತ್ವಿಜ್ಯಮಿತ್ಯೌಡುಲೋಮಿಸ್ತಸ್ಮೈ ಹಿ ಪರಿಕ್ರಿಯತೇ ಓಂ ॥** (ಪ್ರಜಾನಾಮಪಿ ಫಲಮಸ್ತೀತ್ಯಾಹ। ಋತ್ವಿಜಾಮ್ ಇದಂ=ಆರ್ತ್ವಿಜ್ಯಮ್। ಲುಪ್ತೋಪ-ಮಾನಮ್। ಲೋಕೇ ಋತ್ವಿಜಾಂ ಫಲಮಿವ ಪ್ರಜಾನಾಮಪಿ ಜ್ಞಾನಫಲಮಸ್ತೀತಿ ಅನ್ವೇತಿ, ಇತಿ ಔಡುಲೋಮಿಃ ಮನ್ಯತೇ। ಕುತಃ ? 'ತಸ್ಮೈ ಹಿ ಪರಿಕ್ರಿಯತೇ'। ತಾದರ್ಥ್ಯೇ ಚತುರ್ಥೀ। ತಸ್ಮೈ=ಪ್ರಜಾರ್ಥೇ ದೇವೈಃ ಜ್ಞಾನಾದಿ ಪರಿಕ್ರಿಯತೇ= ಸಂಪಾದ್ಯತೇ ಹಿ=ಯಸ್ಮಾತ್ ಅತ ಇತಿ । ಹಿಃ ಹೇತೌ ವಾ । ಯದರ್ಥಂ ಯದ್ ಯೇನ ಕ್ರಿಯತೇ ತತ್ಫಲಂ ತಸ್ಯ ಇತಿ ಲೋಕಪ್ರಸಿದ್ಧಂ ಇತಿ ಪ್ರಸಿದ್ಧಿದ್ಯೋತಕೋ ವಾ ।)

ಸತ್ರಯಾಗದಲ್ಲಿ ಆರ್ತ್ವಿಜ್ಯಮಿವ=ಋತ್ವಿಕ್ಕುಗಳಿಗೂ ಫಲವಿರುವಂತೆ ಮನುಷ್ಯರಿಗೂ ಜ್ಞಾನದ ಫಲವಿದೆ. ಇದು ವ್ಯಾಸಶಿಷ್ಯರಾದ ಔಡುಲೋಮಿ ಆಚಾರ್ಯರ ಅಭಿಪ್ರಾಯ. ಆದಕ್ಕೆ ಅವರು ಕೊಡುವ ಕಾರಣ–ತಸ್ಮೈ ಹಿ ಪರಿಕ್ರಿಯತೇ, ತಸ್ಮೈ= ಮನುಷ್ಯರಿಗಾಗಿ ದೇವತೆಗಳಿಂದ ಪರಿಕ್ರಿಯತೇ=ಜ್ಞಾನಾದಿಗಳು ಸಂಪಾದಿಸಲ್ಪಡುತ್ತದೆ.

**॥ ಓಂ ಸಹಕಾರ್ಯಂತರವಿಧಿಃ ಪಕ್ಷೇಣ ತೃತೀಯಂ ತದ್ವತೋ ವಿಧ್ಯಾದಿವತ್ ಓಂ ॥** (ಏವಂ ಹಿ ಪ್ರಜಾನಾಮೇವ ಫಲಂ ಸ್ಯಾತ್, ನ ದೇವಾನಾಮ್ ಇತ್ಯತ

ಆಹ–ಸಹಕಾರ್ಯಂತರ... । ಸಹಕಾರ್ಯಂತರೇತಿ ಪಕ್ಷೇಣೇತಿ ಚ ಭಾವಪ್ರಧಾನಮ್ । ಪ್ರಜಾನಾಂ ಸಹಕಾರ್ಯಂತರತ್ವೇನ=ದೇವಾನಾಂ ಸಹಕಾರಿತ್ವೇನ ವಿಧಾನಂ, ಪಕ್ಷೇಣ=ಪಕ್ಷತ್ವೇನ ತೃತೀಯಂ=ತೃತೀಯಃ ಪಕ್ಷಃ । ಕಥಮ್ ? ತದ್ವತೋ ವಿಧಾನಾತ್ ತದ್ವತಃ–ತದಿತಿ ಪ್ರಸ್ತುತಪ್ರಜಾಃ ತದ್ವಿಶೇಷಾಃ ಶಿಷ್ಯಾಶ್ಚ ಉಚ್ಯಂತೇ । ಪ್ರಜಾವತಃ ರಾಜ್ಞಃ, ಶಿಷ್ಯವತೋ ಗುರೋಶ್ಚ ವಿಧ್ಯಾದಿವತ್ । ಆದಿಪದಾತ್ ಫಲಮ್ । ಸಹಕಾರ್ಯಂತರೇತಿ ಬುದ್ಧ್ಯಾ ಅನುಷಂಗಃ । ಯಥಾ ಪ್ರಜಾ–ಶಿಷ್ಯಾಣಾಂ ರಾಜ–ಗುರುಸಹಕಾರಿತ್ವೇನ ವಿಧಾನಫಲಂ ಚ ತಯೋರೇವ ಮುಖ್ಯಂ ತದ್ವದಿತ್ಯರ್ಥಃ । ಯಥಾ ರಾಜ್ಞಃ ಗುರೋಶ್ಚ ಪಾಲನೇ, ವ್ಯಾಖ್ಯಾನೇ ಚ ಪ್ರಜಾನಾಂ ಶಿಷ್ಯಾಣಾಂ ಚ ಸಹಕಾರಿತ್ವೇಽಪಿ ತಯೋರೇವ ಪಾಲನಾದಿಫಲಂ, ತೇಷಾಂ ಸ್ವಲ್ಪಂ ತಥಾ ದೇವಾನಾಂ ವಿಹಿತೇ ಜ್ಞಾನದಾನಾದೌ ಪ್ರಜಾನಾಂ ಸಹಕಾರಿಕಾರಣಾತ್ ದೇವಾನಾಂ ಮುಖ್ಯಂ ಫಲಂ ಪ್ರಜಾನಾಮ್ ಅಲ್ಪಮಿತಿ ಭಾವಃ ।)

ಮನುಷ್ಯರಿಗೋಸ್ಕರ ದೇವತೆಗಳು ಮಾಡಿಸುವುದಾದಲ್ಲಿ ಜ್ಞಾನಫಲವು ಮನುಷ್ಯರಿಗೇ ಸಿಗಬೇಕು, ದೇವತೆಗಳಿಗೆ ಹೇಗೆ? ಅದಕ್ಕುತ್ತರ ಈ ಸೂತ್ರ. ಮನುಷ್ಯರು ದೇವತೆಗಳ ಜ್ಞಾನದಾನಕ್ಕೆ ಸಹಕಾರಿಗಳಾಗಿ ವಿಹಿತರಾಗಿದ್ದಾರೆ. ಇದರಿಂದಾಗಿ ಸಹಕಾರಿಗಳಾದ ಮನುಷ್ಯರಿಗೂ ವಿಧಿವಿಷಯತ್ವ ಮತ್ತು ಅಲ್ಪಫಲ ಇದೆ. ದೇವತೆಗಳಿಗೆ ಅಧಿಕಫಲ ಇದೆ. ಅದಕ್ಕೆ ಉದಾಹರಣೆ—ತದ್ವತೋ ವಿಧ್ಯಾದಿವತ್। ತತ್ ಎಂದರೆ ಪ್ರಜೆಗಳು ಮತ್ತು ಶಿಷ್ಯರು. ತದ್ವಾನ್=ರಾಜ ಮತ್ತು ಗುರು. ಪ್ರಜೆಗಳಿಂದ ಸಹಿತವಾದ ರಾಜನಿಗೇ ಪಾಲನೆಯ ಆದೇಶ. ಶಿಷ್ಯಸಹಿತರಾದ ಗುರುಗಳಿಗೇ ಉಪದೇಶದ ವಿಧಾನ. ಆದ್ದರಿಂದ ಪ್ರಜೆಗಳಿಗೆ ಅಲ್ಪಫಲ, ರಾಜನಿಗೆ ಮಹಾಫಲ, ಶಿಷ್ಯರಿಗೆ ಅಲ್ಪಫಲ, ಗುರುಗಳಿಗೆ ಮಹಾಫಲ. ಅದರಂತೆ ಪ್ರಕೃತದಲ್ಲಿ. ಇದು ಪಕ್ಷೇಣ ತೃತೀಯಂ= ಮೂರನೆಯ ಪಕ್ಷ.

## ಶಾಂಕರಭಾಷ್ಯದಲ್ಲಿ ಸ್ವಾಮ್ಯಧಿಕರಣ

ಕರ್ಮಾಂಗವಾದ ಉಪಾಸನೆಗಳನ್ನು ಯಾರು ಮಾಡಬೇಕು? ಯಜಮಾನನೋ ಋತ್ವಿಕ್ಕುಗಳೋ? ಎಂದು ಸಂದೇಹ. ಯಜಮಾನ ಮಾಡಬೇಕೆಂದು ಆತ್ರೇಯರ ಮತ. ಉಪಾಸನೆಯ ಫಲವು ಉಪಾಸನಾಕರ್ತೃಗಳಿಗೆ ಬರುತ್ತದೆ ಎಂದು ಶ್ರುತವಾಗಿದೆ. 'ವರ್ಷತಿ ಹಾಸ್ಮೈ ವರ್ಷಯತಿ ಹ ಯ ಏತದೇವಂ ವಿದ್ವಾನ್ ಪಂಚವಿಧಿಂ ಸಾಮೋಪಾಸ್ತೇ' ಎಂದು. ಹಿಂಕಾರ, ಪ್ರಸ್ತಾವ, ಉದ್ಗೀಥ, ಪ್ರತಿಹಾರ, ನಿಧನ ಈ ಐದು

ವಿಧವಾದ ಸಾಮಗಳಲ್ಲಿ ವೃಷ್ಟ್ಯಭೇದಧ್ಯಾನ ಮಾಡುವವನಿಗೆ ಮೇಲಿನ ಛಾಂದೋಗ್ಯ ವಾಕ್ಯದಲ್ಲಿ ಫಲವನ್ನು ಹೇಳಲಾಗಿದೆ. ಫಲ ಯಜಮಾನನಿಗೆ ಸಿಗುವುದರಿಂದ ಉಪಾಸನೆಯನ್ನು ಅವನೇ ಮಾಡಬೇಕು, ಎಂದು ಆತ್ರೇಯರ ಅಭಿಪ್ರಾಯ.

**॥ ಆರ್ತ್ವಿಜ್ಯಮಿತ್ಯೌಡುಲೋಮಿಸ್ತಸ್ಮೈ ಹಿ ಪರಿಕ್ರಿಯತೇ ॥** ಔಡುಲೋಮಿ ಆಚಾರ್ಯರು ಈ ಅಂಗೋಪಾಸನೆಗಳನ್ನು ಋತ್ವಿಕ್ಕುಗಳೇ ಮಾಡಬೇಕು, ಎಂದು ಹೇಳುತ್ತಾರೆ. ಅವರು ಉಪಾಸನೆ ಮಾಡಿದರೂ ಅದರ ಫಲ ಯಜಮಾನನಿಗೆ ಸೇರುತ್ತದೆ. ತಸ್ಮೈ ಹಿ ಪರಿಕ್ರಿಯತೇ=ಸಾಂಗಕರ್ಮಸಿದ್ಧಿಗಾಗಿ ಋತ್ವಿಕ್ಕು ಗಳನ್ನು ಯಜಮಾನನು ಖರೀದಿಸಿರುತ್ತಾನೆ. (ದಕ್ಷಿಣೆ ಕೊಟ್ಟು ಆಯ್ಕೆ ಮಾಡಿದ್ದಾನೆ.) ಆದ್ದರಿಂದ ಅವರೇ ಉಪಾಸನೆ ಮಾಡಿದರೂ ಅದರ ಫಲ ಯಜಮಾನನಿಗೆ ಸೇರುತ್ತದೆ.

**॥ ಶ್ರುತೇಶ್ಚ ॥**

'ಯಾಂ ವೈ ಕಾಂಚನ ಯಜ್ಞೇ ಋತ್ವಿಜ ಆಶಿಷಮಾಶಾಸತ ಇತಿ
ಯಜಮಾನಾಯೈವ ತಾಮಾಶಾಸತ ಇತಿ ಹೋವಾಚೇತಿ'' (ಛಾಂ.1.7.8,9)

ಎಂದು ಶ್ರುತಿಯೂ ಇದೆ. ಇಲ್ಲಿ ಋತ್ವಿಕ್ಕುಗಳ ಜ್ಞಾನದಿಂದ ಯಜಮಾನನಿಗೆ ಫಲವನ್ನು ಹೇಳಲಾಗಿದೆ. ಆದ್ದರಿಂದ ಅಂಗೋಪಾಸನೆಯನ್ನು ಋತ್ವಿಜರೇ ಮಾಡಬೇಕು.

**ರಾಮಾನುಜಭಾಷ್ಯದಲ್ಲಿ** ಇದೇ ಅರ್ಥ. ಆದರೆ, 'ಶ್ರುತೇಶ್ಚ' ಎಂಬ ಸೂತ್ರ ಅವರ ಪಾಠದಲ್ಲೂ ಇಲ್ಲ, ದ್ವೈತಪಾಠದಲ್ಲೂ ಇಲ್ಲ.

**ವಿಮರ್ಶೆ**— ಇಲ್ಲಿ ಕರ್ಮಾಂಗ ಉಪಾಸನೆಯ ಬಗ್ಗೆ ವಿಚಾರವನ್ನು ಮಾಡಲಾಗಿದೆ. (ಕರ್ಮಾಂಗಸಂಗೀನಿ ಉಪಾಸನಾನಿ ವಿಷಯ: । ನ್ಯಾ.ರತ್ನ.) (ಕರ್ಮಾಂಗಾಶ್ರಯಾಣಿ ಉದ್ಗೀಥಾದ್ಯುಪಾಸನಾನಿ...ರಾ.ಭಾ.) ಇದು ಪೂರ್ವತಂತ್ರಕ್ಕೆ ಸಂಬಂಧಿಸಿರುವುದರಿಂದ ಇಲ್ಲಿ ಸಂಗತವಾಗುವುದಿಲ್ಲ.

**ಇಲ್ಲಿಗೆ ಫಲಶ್ರುತ್ಯಧಿಕರಣವು ಮುಗಿಯಿತು**

## ೮. ಕೃತ್ಸ್ನಭಾವಾಧಿಕರಣಮ್

**॥ ಓಂ ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ ಓಂ ॥ ೪೭ ॥**

**'ಕುಡುಂಬೇ ಶುಚೌ ದೇಶೇ ಸ್ವಾಧ್ಯಾಯಮಧೀಯಾನೋ ಧಾರ್ಮಿಕಾನ್ ವಿದಧತ್' ಇತ್ಯುಕ್ತ್ವಾ 'ನಚ ಪುನರಾವರ್ತತೇ ನಚ ಪುನರಾವರ್ತತೇ' (ಛಾಂ.ಉ. 8.14)**

**ಇತಿ ಗೃಹಿಣೋಪಸಂಹಾರಃ ಕ್ರಿಯತೇ । ತಸ್ಮಾದ್ ಗೃಹಸ್ಥಸ್ಯೈವೋತ್ತಮತ್ವಮಿತಿ ನ ವಾಚ್ಯಮ್ । ಯತಃ ಕೃತ್ಸ್ನಗೃಹಸ್ಥಾನ್ ದೇವಾನಪೇಕ್ಷ್ಯೈವೋಪಸಂಹಾರಃ ಕ್ರಿಯತೇ ।**

**'ಕೃತ್ಸ್ನಾ ಹ್ಯೇವ(ತೇ) ಗೃಹಿಣೋ ದೇವಾಃ, ಕೃತ್ಸ್ನಾ ಏ(ಹ್ಯೇ)ತೇ ಯತಯೋಽತ ಏವೈ(ವತೇ)ಷಾಂ ನ ಪುತ್ರಾ ದಾಯಮುಪಯಂತಿ, ನಚೈತೇ ಗೃಹಾನ್ ವಿಸೃಜಂತ್ಯರಾಗಾ, ಅದ್ವೇಷಾ, ಅಲೋಭಾಃ, ಸರ್ವಭೋಗಾಃ ಸರ್ವಜ್ಞಾಃ, ಸರ್ವಕರ್ತಾರಃ'**

**ಇತಿಹಿ ಪೌತ್ರಾಯಣಶ್ರುತಿಃ ॥**

ಛಾಂದೋಗ್ಯದಲ್ಲಿ ''ಆಚಾರ್ಯಕುಲಾತ್ ವೇದಮಧೀತ್ಯ...ಕುಡುಂಬೇ ಶುಚೌ ದೇಶೇ...ಬ್ರಹ್ಮಲೋಕಮ್ ಅಭಿಸಂಪದ್ಯತೇ ನಚ ಪುನರಾವರ್ತತೇ'' ಎಂದು ಗೃಹಸ್ಥನು ತನ್ನ ಧರ್ಮವನ್ನು ಅನುಷ್ಠಾನ ಮಾಡುತ್ತಲೇ ಮೋಕ್ಷಕ್ಕೆ ಹೋಗುತ್ತಾನೆ, ಎಂದು ವಾಕ್ಯೋಪಸಂಹಾರ ಮಾಡಲಾಗಿದೆ. ಇದರಿಂದಾಗಿ ಸರ್ವಾಶ್ರಮಿಗಳಿಗಿಂತಲೂ ಅರ್ಥಾತ್ ಯತಿಗಳಿಗಿಂತಲೂ ಗೃಹಸ್ಥನು ಉತ್ತಮನಾಗಿದ್ದಾನೆ ಎನ್ನಬಾರದು. ಏಕೆಂದರೆ, ಪರಿಪೂರ್ಣ ಗೃಹಸ್ಥಾಶ್ರಮಿಗಳಾದ ದೇವತೆಗಳ ದೃಷ್ಟಿಯಿಂದಲೇ ಈ ಉಪಸಂಹಾರವಿದೆ. ಪೌತ್ರಾಯಣ ಶ್ರುತಿಯಲ್ಲಿ ದೇವತೆಗಳೇ ಪರಿಪೂರ್ಣರಾದ ಗೃಹಸ್ಥರು ಎನ್ನಲಾಗಿದೆ.

**ವಿವರಣೆ**— ದೇವ-ಋಷಿ-ಮಾನುಷರಲ್ಲಿ ಬ್ರಹ್ಮಚರ್ಯಾದಿ ಆಶ್ರಮವ್ಯವಸ್ಥೆ ಇರುವುದು ಮನುಷ್ಯರಲ್ಲಿ ಮಾತ್ರ. ಈ ನಾಲ್ಕು ಆಶ್ರಮಿಗಳಲ್ಲಿ ಗೃಹಸ್ಥನೇ ಮೋಕ್ಷದಲ್ಲಿ ಉತ್ತಮ. ಯತಿಗಳೂ ಅವನಿಗಿಂತ ಕಡಿಮೆ ಎಂದು ಪೂರ್ವಪಕ್ಷ. ಏಕೆಂದರೆ ಅವನಿಗೆ ಸರ್ವಕರ್ಮಗಳಲ್ಲೂ ಅಧಿಕಾರವಿದೆ. ಯಜ್ಞಾಧಿಕಾರ ಇತರ ಆಶ್ರಮಿಗಳಿಗೆ ಇಲ್ಲ.

ಇದಲ್ಲದೆ, ಛಾಂದೋಗ್ಯದಲ್ಲಿ ಗೃಹಸ್ಥನು ತನ್ನ ಆಶ್ರಮಧರ್ಮದಲ್ಲಿ ನಿಷ್ಠನಾಗಿದ್ದು ಮೋಕ್ಷಹೊಂದುತ್ತಾನೆ, ಎನ್ನಲಾಗಿದೆ. ಎಲ್ಲಾ ಆಶ್ರಮದವರಿಗೂ ಮೋಕ್ಷವಾಗುವುದರಿಂದ ಗೃಹಸ್ಥರಿಗೆ ಮಾತ್ರ ಮೋಕ್ಷವನ್ನು ಇಲ್ಲಿ ಹೇಳಿರುವ ಕಾರಣ ಅವರು ಇತರಾಶ್ರಮಿಗಳಿಗಿಂತಲೂ ಅಧಿಕರು ಎಂದು ತಿಳಿಯುತ್ತದೆ. ''ನಚ ಪುನರಾರ್ವತೇ, ನ

ಚ ಪುನರಾವರ್ತತೇ'' ಎಂದು ಉಪಸಂಹಾರ ಮಾಡಿರುವುದರಿಂದ ಅದರಲ್ಲಿ ಉಪನಿಷತ್ತಿಗೆ ತಾತ್ಪರ್ಯವೂ ಇದೆ, ಎಂದು ತಿಳಿಯುತ್ತದೆ. ಆದ್ದರಿಂದ ಮೋಕ್ಷದಲ್ಲಿ ಗೃಹಸ್ಥನೇ ಶ್ರೇಷ್ಠ. ಇದು ಪೂರ್ವಪಕ್ಷ.

ಛಾಂದೋಗ್ಯದಲ್ಲಿ ಹೇಳಿರುವ ಗೃಹಸ್ಥರು ದೇವತೆಗಳು, ಮನುಷ್ಯರಲ್ಲ. ಏಕೆಂದರೆ, ಅವರೇ ಪರಿಪೂರ್ಣಗೃಹಸ್ಥರು.(ಕೃತ್ಸ್ನಭಾವಾತ್) ಸಂಪೂರ್ಣ ಗೃಹಸ್ಥಧರ್ಮ ಇರುವುದು ದೇವತೆಗಳಲ್ಲಿ ಮಾತ್ರ. ''ಕೃತ್ಸ್ನಾ ಏತೇ ಗೃಹಿಣಃ' ಎಂದು ಶ್ರುತಿಯೇ ಅದಕ್ಕೆ ಆಧಾರ. ಆದ್ದರಿಂದ ಮಾನುಷಗೃಹಸ್ಥರು ಯತಿಗಳಿಗಿಂತ ಕನಿಷ್ಠರು. ಗೃಹಸ್ಥರು ಅಲ್ಪಕಾಲದ ಸಾಧನೆಯಿಂದ ಮೋಕ್ಷವನ್ನು ಪಡೆಯುತ್ತಾರೆ. ಯತಿಗಳು ಬಹುಕಾಲಪರ್ಯಂತ ಸಾಧನೆ ಮಾಡಿ ಮೋಕ್ಷ ಪಡೆಯುತ್ತಾರೆ. ಆದ್ದರಿಂದ ಯತಿಮೋಕ್ಷವೇ ಶ್ರೇಷ್ಠವಾದುದು. ಗೃಹಸ್ಥರಿಗೆ ಬಹುಕರ್ಮಗಳಲ್ಲಿ ಅಧಿಕಾರವಿದ್ದರೂ ಅವೆಲ್ಲವನ್ನೂ ಅವರಿಂದ ಮಾಡಲಾಗುವುದಿಲ್ಲ. ''ಚರಂತಿ ದೇವಾ ವಿಹಿತಂ ಸಮಸ್ತಮ್'' ವಿಹಿತವಾದುದನ್ನೆಲ್ಲ ಮಾಡುವವರು ದೇವತೆಗಳು ಮಾತ್ರ.

ಗುರ್ವರ್ಥದೀಪಿಕಾದಲ್ಲಿ ದೇವತೆಗಳು ಪೂರ್ಣಗೃಹಸ್ಥರು ಹೇಗೆ ಎಂದು ಸಮರ್ಥಿಸಲಾಗಿದೆ— ಅವರಲ್ಲಿ ಬ್ರಹ್ಮಚರ್ಯದ ಧರ್ಮವಾದ ಅಧ್ಯಯನ ಇದೆ, ಗೃಹಸ್ಥಧರ್ಮವಾದ ಯಜ್ಞಾದಿಗಳಿವೆ, ವಾನಪ್ರಸ್ಥಧರ್ಮವಾದ ತಪಸ್ಸು ಇದೆ, ಯತಿಧರ್ಮವಾದ ವೈರಾಗ್ಯವೂ ಇದೆ.

ಶ್ರುತ್ಯರ್ಥ— ಆಚಾರ್ಯಕುಲಾತ್ ವೇದಮಧೀತ್ಯ ಯಥಾವಿಧಾನಂ
ಗುರೋಃ ಕರ್ಮಾತಿಶೇಷೇಣಾಭಿ ಸಮಾವೃತ್ಯ, ಕುಡುಂಬೇ
ಶುಚೌ ದೇಶೇ ಸ್ವಾಧ್ಯಾಯಮಧೀಯಾನಃ ಧಾರ್ಮಿಕಾನ್
ವಿದಧತ್ ಆತ್ಮನಿ ಸರ್ವೇಂದ್ರಿಯಾಣಿ ಪ್ರತಿಷ್ಠಾಪ್ಯ, ಅಹಿಂಸನ್
ಸರ್ವಾಣಿ ಭೂತಾನಿ ಅನ್ಯತ್ರ ತೀರ್ಥೇಭ್ಯಃ, ಸ ಖಲ್ವೇವಂ ವರ್ತಯನ್
ಯಾವದಾಯುಷಂ, ಬ್ರಹ್ಮಲೋಕಮಭಿ ಸಂಪದ್ಯತೇ । ನಚ ಪುನ-
ರಾವರ್ತತೇ, ನಚ ಪುನರಾವರ್ತತೇ ॥ (ಛಾಂ.8.15.1)

ಆಚಾರ್ಯಕುಲಾತ್=ಗುರುವಂಶದಿಂದ ವೇದಂ=ವೇದವನ್ನು ಅಧೀತ್ಯ=ಓದಿ ಯಥಾವಿಧಾನಂ=ವಿಧಿಗೆ ಅನುಸಾರವಾಗಿ ಸೇವಾದಿಗಳನ್ನು ಅತಿಶೇಷೇಣ=ಪೂರ್ಣವಾಗಿ ಅಭಿಸಮಾವೃತ್ಯ=ಮಾಡಿ, ಕುಡುಂಬೇ=ಗೃಹಸ್ಥಾಶ್ರಮದಲ್ಲಿದ್ದು ಶುಚೌ ದೇಶೇ=ಪವಿತ್ರ ವಾದ ಪ್ರದೇಶದಲ್ಲಿದ್ದು, ಸ್ವಾಧ್ಯಾಯಮಧೀಯಾನಃ=ತನಗೆ ವಿಹಿತಶಾಸ್ತ್ರಗಳನ್ನು ಅಧ್ಯಯನ ಮಾಡುತ್ತಾ ಧಾರ್ಮಿಕಾನ್=ಧರ್ಮಸಂಬಂಧಿ ಕಾರ್ಯಗಳನ್ನು ಮಾಡುತ್ತಾ

ಆತ್ಮನಿ=ಪರಮಾತ್ಮನಲ್ಲಿ ಇಂದ್ರಿಯಾಣಿ=ಇಂದ್ರಿಯಗಳನ್ನು ಪ್ರತಿಷ್ಠಾಪ್ಯ=ನೆಲೆಗೊಳಿಸಿ ತೀರ್ಥೇಭ್ಯೋಽನ್ಯತ್ರ=ಯಜ್ಞಬಿಟ್ಟು ಬೇರೆ ಕಡೆ ಸರ್ವಾಣಿ ಭೂತಾನಿ ಅಹಿಂಸನ್=ಯಾವ ಪ್ರಾಣಿಗಳಿಗೂ ಹಿಂಸೆ ಮಾಡದೆ ಯಾವದಾಯುಷಂ=ಆಯುಷ್ಯ ಇರುವವರೆಗೆ ಏವಂ ವರ್ತಯನ್=ಹೀಗೆ ನಡೆಯುತ್ತಾ ಬ್ರಹ್ಮಲೋಕಮ್ ಅಭಿಸಂಪದ್ಯತೇ=ಭಗವದ್ದರ್ಶನ ಪಡೆದು ಮುಕ್ತನಾಗುತ್ತಾನೆ. ಪುನಃ=ತಿರುಗಿ ನ ಆವರ್ತತೇ=ಬರುವುದಿಲ್ಲ.

### ಪೌತ್ರಾಯಣ ಶ್ರುತ್ಯರ್ಥ

ದೇವಾಃ=ದೇವತೆಗಳು ಕೃತ್ಸ್ನಾಃ ಗೃಹಿಣಃ=ಪೂರ್ಣಗೃಹಸ್ಥರು. ಏತೇ=ದೇವತೆಗಳು ಕೃತ್ಸ್ನಾಃ ಯತಯಃ=ಪೂರ್ಣಪ್ರಮಾಣದ ಯತಿಗಳು. ಅತಃ=ಆದ್ದರಿಂದಲೇ ಏತೇಷಾಂ ಪುತ್ರಾಃ=ಇವರ ಮಕ್ಕಳು ದಾಯಂ=ತಂದೆಯ ಪಾಲನ್ನು ನ ಉಪಯಂತಿ=ಹೊಂದುವುದಿಲ್ಲ. (ಯತಿಗಳು ಮಾಡಿದ ಸಂಪಾದನೆಯಲ್ಲಿ ಅವರ ಮಕ್ಕಳಿಗೆ ಹೇಗೆ 'ಪಾಲು' ಇಲ್ಲವೋ ಅದರಂತೆ ಇಂದ್ರಾದಿದೇವತೆಗಳ ಮಕ್ಕಳಾದ ಜಯಂತಾದಿಗಳಿಗೆ ತಂದೆಯ ಪಾಲಿನ ಹಕ್ಕಿಲ್ಲ.) ಏತೇ=ದೇವತೆಗಳು ಗೃಹಾನ್=ಮನೆಗಳನ್ನು ನ ವಿಸೃಜಂತಿ=ಬಿಡುವುದಿಲ್ಲ. (ಆದ್ದರಿಂದ ಅವರು ಸದಾ ಗೃಹಸ್ಥರು.) ಅರಾಗಾಃ ಅದ್ವೇಷಾಃ=ರಾಗದ್ವೇಷಗಳಿಲ್ಲದವರು. ಅಲೋಭಾಃ=ದುರಾಸೆ ಇಲ್ಲದವರು. ಸರ್ವಭೋಗಾಃ=ಎಲ್ಲ ರೀತಿಯ ಭೋಗಗಳೂ ಅವರಿಗಿವೆ. ಸರ್ವಜ್ಞಾಃ=ಎಲ್ಲವನ್ನೂ ತಿಳಿದವರು, ಸರ್ವಕರ್ತಾರಃ=ಎಲ್ಲವನ್ನೂ ಮಾಡುತ್ತಾರೆ.

## ॥ ಓಂ ಮೌನವದಿತರೇಷಾಮಪ್ಯುಪದೇಶಾತ್ ಓಂ ॥ ೪೮ ॥

### ನಚಾಽಽಶ್ರಮದ್ವಯಮೇವ ದೇವಾನಾಮ್-

'ದೇವಾ ಏವ ಬ್ರಹ್ಮಚಾರಿಣೋ ದೇವಾ (ಏವ) ಗೃಹಸ್ಥಾ ದೇವಾ (ಏವ) ವನಸ್ಥಾ ಯಥಾ ಹ್ಯೇತೇ ಮುನಯ ಏವಂ ಸರ್ವವರ್ಣಾಃ ಸರ್ವಾಶ್ರಮಾಃ ಸರ್ವಂ ಹ್ಯೇತೇ ಕರ್ಮ ಕುರ್ವಂತಿ' ಇತಿ ಕೌಂಠರವ್ಯಶ್ರುತೌ ಯತಿತ್ವದೃಷ್ಟಾಂತೇನಾನ್ಯೇಷಾಮಪ್ಯುಪದೇಶಾತ್ ॥

ದೇವತೆಗಳಿಗೆ ಗೃಹಸ್ಥ ಸಂನ್ಯಾಸ ಎರಡೇ ಆಶ್ರಮಗಳಲ್ಲ. ಕೌಂಠರವ್ಯಶ್ರುತಿಯಲ್ಲಿ ಯತ್ಯಾಶ್ರಮದ ದೃಷ್ಟಾಂತವನ್ನು ಕೊಟ್ಟು ಅದರಂತೆ ಬೇರೆ ಆಶ್ರಮಗಳನ್ನೂ ಉಪದೇಶಿಸಲಾಗಿದೆ.

**ವಿವರಣೆ**— ದೇವತೆಗಳಿಗೆ ಗೃಹಸ್ಥ-ಯತಿಧರ್ಮಗಳು ಇರುವ ಕಾರಣದಿಂದಷ್ಟೇ ಅವರು ಪೂರ್ಣಗೃಹಸ್ಥರಲ್ಲ. ಎಲ್ಲಾ ಆಶ್ರಮ-ವರ್ಣಧರ್ಮಗಳೂ ಅವರಿಗೆ ಇರುವುದರಿಂದಾಗಿಯೂ ಅವರು ಪೂರ್ಣಪ್ರಮಾಣದ ಗೃಹಸ್ಥರು ಎಂದು ಈ ಸೂತ್ರದಲ್ಲಿ ಹೇಳಲಾಗಿದೆ.

ಮೌನವತ್ ಎಂದರೆ ಯತ್ಯಾಶ್ರಮದಂತೆ, ಎಂದರ್ಥ.

**ಶ್ರುತ್ಯರ್ಥ**— ದೇವಾ ಏವ=ದೇವತೆಗಳೇ ಬ್ರಹ್ಮಚಾರಿಣಃ=ಬ್ರಹ್ಮಚರ್ಯ ಧರ್ಮಸ್ಥರು. ದೇವಾ ಏವ ಗೃಹಸ್ಥಾಃ=ದೇವತೆಗಳೇ ಗೃಹಸ್ಥಧರ್ಮವುಳ್ಳವರು. ದೇವಾ ಏವಃ=ದೇವತೆಗಳೇ ವನಸ್ಥಾಃ=ವಾನಪ್ರಸ್ಥಧರ್ಮಿಗಳು. ಯಥಾ ಹ್ಯೇತೇ ಮುನಯಃ= ಹೇಗೆ ಅವರು ಯತಿಗಳೋ ಏವಂ=ಅದರಂತೆ ಸರ್ವವರ್ಣಾಃ= ಸರ್ವಜಾತಿಯವರು, ಸರ್ವಾಶ್ರಮಾಃ=ಎಲ್ಲಾ ಆಶ್ರಮಗಳ ಧರ್ಮಾಚರಣೆಯನ್ನೂ ಮಾಡುವವರು. ಸರ್ವಂ ಹ್ಯೇತೇ ಕರ್ಮ ಕುರ್ವಂತಿ=ಇವರು ಎಲ್ಲ ವರ್ಣ-ಆಶ್ರಮಗಳ ಕರ್ಮಗಳನ್ನೂ ಆಚರಿಸುತ್ತಾರೆ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**ll ಓಂ ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ ಓಂ ll** (ಅತ್ರ ಜ್ಞಾನೇ ವಿಶೇಷಾಧಿಕಾರಿಣಾಂ ಯತೀನಾಂ ಸರ್ವಾತಿಶಯಃ ಸಾಧ್ಯತೇ। ದೇವಾನಾಮಿತಿ ಪ್ರಕೃತತ್ವಾದನ್ವೇತಿ। ಯತೀನಾಮೇವ ಜ್ಞಾನಾಧಿಕಾರಿಣಾಂ ಸರ್ವಾಶ್ರಮಿಷು ಉತ್ತಮತ್ವಮ್ ಇತಿ ಸಾಧ್ಯಮ್ ಅಭಿಮತಮ್, 'ಕುಡುಂಬೀ ಶುಚೌ ದೇಶೇ' ಇತ್ಯಾದಿನಾ ಗೃಹಿಣಾಂ ಮೋಕ್ಷಮುಕ್ತ್ವಾ 'ನಚ ಪುನರಾರ್ವತೇ' ಇತಿ ಗೃಹಿಣೋಪಸಂಹಾರಸ್ತು ದೇವಾನಾಂ ಕೃತ್ಸ್ನಭಾವಾತ್-ಕೃತ್ಸ್ನಾನಾಂ=ಗೃಹ, ಧರ್ಮಾಣಾಂ ಸತ್ವಾತ್ ತತ್ಪರಃ, ನ ತು ಮನುಷ್ಯಗೃಹಸ್ಥಪರಃ। ಯೇನ ತದ್ ಬಲೇನ ಗೃಹಿಣಃ ಯತೇರಪಿ ಉತ್ತಮತ್ವಮಾಶಂಕ್ಯೇತ ಇತ್ಯರ್ಥಃ। ಯತಿನೋ ದೇವಾನಾಮ್ ಉತ್ತಮತ್ವಂ ಕಥಮ್, ಇತ್ಯತೋಽಪಿ ಕೃತ್ಸ್ನಭಾವಾದಿತಿ। ದೇವಾನಾಂ ಕೃತ್ಸ್ನಯತಿಧರ್ಮಾಣಾಂ ಭಾವಾತ್ ಇತ್ಯರ್ಥಃ। ಗೃಹಿಭ್ಯೋ ಯತೀನಾಂ, ತೇಭ್ಯೋಽಪಿ ದೇವಾನಾಮ್ ಉತ್ತಮತ್ವಾದಿತ್ಯಾಶಯಃ ॥)

'ಕುಡುಂಬೀ ಶುಚೌ ದೇಶೇ' ಎಂದು ಪ್ರಾರಂಭಿಸಿ ಗೃಹಸ್ಥರಿಗೆ ಮೋಕ್ಷವನ್ನು ಹೇಳಿ 'ನ ಚ ಪುನರಾವರ್ತತೇ' ಎಂದು ಛಾಂದೋಗ್ಯೋಪನಿಷತ್ತನ್ನು ಉಪಸಂಹಾರ

ಮಾಡಿರುವುದು ದೇವಾನಾಂ=ದೇವತೆಗಳಿಗೆ ಕೃತ್ಸ್ನಭಾವಾತ್=ಪೂರ್ಣಪ್ರಮಾಣದ ಗೃಹಸ್ಥಧರ್ಮವು ಇರುವುದರಿಂದ ದೇವತೆಗಳ ಉತ್ತಮತ್ವವನ್ನು ತಿಳಿಸುವುದಕ್ಕಾಗಿ ಹೊರತು ಗೃಹಸ್ಥರು ಯತಿಗಳಿಗಿಂತಲೂ ಮೋಕ್ಷದಲ್ಲಿ ಅಧಿಕರು ಎನ್ನುವ ಅಭಿಪ್ರಾಯದಲ್ಲಿ ಉಪನಿಷತ್ತಿನ ಉಪಸಂಹಾರವಲ್ಲ.

(ಮುನೇರ್ಭಾವಃ ಮೌನಂ=ಯತಿತ್ವಂ। ತದ್ವತ್ ಇತರಾಶ್ರಮಧರ್ಮಾಣಾಮಪಿ 'ದೇವಾ ಏವ ಬ್ರಹ್ಮಚಾರಿಣಃ' ಇತಿ ಶ್ರುತೌ ಉಪದೇಶಾತ್ ಇತ್ಯರ್ಥಃ। ಯದಾ ಆಶ್ರಮದ್ವಯಕರ್ಮತ್ವೇನೈವ ಯತಿತೋ ದೇವಾನಾಮ್ ಆಧಿಕ್ಯಂ, ಕಿಮು ತದಾ ಸರ್ವಾಶ್ರಮಕರ್ಮಿತ್ವೇನ ಇತಿ ಭಾವಃ॥)

ಮೌನಂ=ಯತಿತ್ವ. ಮೌನವತ್=ಯತಿಧರ್ಮದಂತೆ ಇತರೇಷಾಮಪಿ= ಬ್ರಹ್ಮಚರ್ಯಾದಿಧರ್ಮಗಳನ್ನೂ ಉಪದೇಶಾತ್=ಶ್ರುತಿಯಲ್ಲಿ ಉಪದೇಶ ಮಾಡಿರುವುದರಿಂದ ದೇವತೆಗಳು ಯತಿಗಳಿಗಿಂತಲೂ ಶ್ರೇಷ್ಠರು.

## ಶಾಂಕರಭಾಷ್ಯದಲ್ಲಿ ಸಹಕಾರ್ಯಂತರ ವಿಧ್ಯಧಿಕರಣ

**॥ ಸಹಕಾರ್ಯಂತರವಿಧಿಃ ಪಕ್ಷೇಣ ತೃತೀಯಂ ತದ್ವತೋ ವಿಧ್ಯಾದಿವತ್ ॥**

ತಸ್ಮಾದ್ ಬ್ರಾಹ್ಮಣಃ ಪಾಂಡಿತ್ಯಂ ನಿರ್ವಿದ್ಯ ಬಾಲ್ಯೇನ ತಿಷ್ಠಾಸೇತ್ (ಬೃ.3.5.1) ಈ ಉಪನಿಷದ್‌ವಾಕ್ಯದಲ್ಲಿ ಬಾಲ್ಯದ (ಬಾಲಭಾವ=ಚಿತ್ತಶುದ್ಧಿ) ವಿಧಿಮಾತ್ರವಲ್ಲ. 'ಅಥ ಮುನಿಃ ಮೌನಂ ಚಾಮೌನಂ ಚ ನಿರ್ವಿದ್ಯ' ಎಂದು ಮುಂದೆ ಹೇಳುವಂತೆ 'ಮೌನ' ವಿಧಿಯನ್ನೂ ಮಾಡಲಾಗಿದೆ. ಮೌನವೆಂದರೆ 'ಜ್ಞಾನಾತಿಶಯ' 'ಮನನಾತ್ ಮುನಿಃ' ಎಂದು ಅದರ ವ್ಯುತ್ಪತ್ತಿ. ಈ ಅರ್ಥದಲ್ಲೇ 'ಮುನೀನಾಮಪ್ಯಹಂ ವ್ಯಾಸಃ' ಎಂದು ಭಗವದ್ಗೀತೆಯಲ್ಲೂ ಮುನಿಶಬ್ದವನ್ನು ಪ್ರಯೋಗಿಸಲಾಗಿದೆ. ಶಾಸ್ತ್ರದಿಂದ ಜ್ಞಾನ ಪಡೆದವರು ಪಂಡಿತರು, ಉಪಾಧ್ಯಾಯರು. ಜ್ಞಾನೋತ್ಕರ್ಷ ಇರುವವರು ಮುನಿಗಳು. ತೃತೀಯಂ=ಬಾಲ್ಯ, ಪಾಂಡಿತ್ಯ, ಮೌನ ಇವುಗಳಲ್ಲಿ ಮೌನವು ಮೂರನೆಯದ್ದು. ಈ ಮೌನವೆಂಬ ಮೂರನೆಯ ಸಹಕಾರಿ ವಿಧಿ ತದ್ವತಃ=ಜ್ಞಾನವಿರುವ ಸಂನ್ಯಾಸಿಗಳಿಗೆ ಅನ್ವಯಿಸುತ್ತದೆ. ಏಕೆಂದರೆ, ಈ ಪ್ರಕರಣದಲ್ಲಿ ''ಆತ್ಮಾನಂ ವಿದಿತ್ವಾ ಪುತ್ರಾದ್ಯೇಷಣಾಭ್ಯೋ ವ್ಯುತ್ಥಾಯ ಭಿಕ್ಷಾಚರ್ಯಂ ಚರಂತಿ' ಎಂದು ಸಂನ್ಯಾಸಿಗಳನ್ನೇ ಪ್ರಸ್ತಾಪಿಸಲಾಗಿದೆ. ಮೌನವು ಅಪ್ರಾಪ್ತವಾದರೆ ಅದರ ವಿಧಿ ಯುಕ್ತವಾಗುತ್ತದೆ. ಅದಕ್ಕಾಗಿ 'ಪಕ್ಷೇಣ' ಎಂಬ ಪದವನ್ನು ಸೂತ್ರದಲ್ಲಿ ಪ್ರಯೋಗಿಸಲಾಗಿದೆ. ವಿದ್ಯೋದಯದ ಅಭ್ಯಾಸದಲ್ಲಿರುವವನಿಗೆ ದ್ವೈತದರ್ಶನವೇ ಪ್ರಬಲವಾದುದರಿಂದ

ವಿದ್ಯಾತಿಶಯ(ಅದ್ವೈತದಾರ್ಢ್ಯವು)ಅಪ್ರಾಪ್ತವಾಗುತ್ತದೆ. ಆ ಪಕ್ಷದಲ್ಲಿ ಮೌನವಿಧಿಯು ಯುಕ್ತವಾಗಿದೆ. ವಿಧ್ಯಾದಿವತ್=ದರ್ಶಪೂರ್ಣ ಮಾಸಯಾಗಗಳ ವಿಧಿಯಂತೆ.

**॥ ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ ॥** ಸಂನ್ಯಾಸವೆಂಬ ಆಶ್ರಮಾಂತರ ವಿರುವಾಗ ಛಾಂದೋಗ್ಯದಲ್ಲಿ 'ಅಭಿಸಮಾವೃತ್ಯ ಕುಡುಂಬೇ' ಎಂದು ಗೃಹಸ್ಥಾಶ್ರಮ ವನ್ನೇ ಉಪಸಂಹಾರ ಮಾಡಿ ಪ್ರಶಂಸೆ ಮಾಡಿರುವುದು ಏಕೆ? ಉತ್ತರ— ಕೃತ್ಸ್ನಭಾವಾತ್=ಅನೇಕ ಆಶ್ರಮಕರ್ಮಗಳಾದ ಯಜ್ಞಾದಿಗಳು ಮಾತ್ರವಲ್ಲದೆ, ಆಶ್ರಮಾಂತರಕರ್ಮಗಳಾದ ಅಹಿಂಸೆ, ಇಂದ್ರಿಯನಿಗ್ರಹಾದಿಗಳನ್ನೂ ಗೃಹಸ್ಥನು ಮಾಡಬೇಕು. ಆದ್ದರಿಂದ ಛಾಂದೋಗ್ಯೋಪನಿಷತ್ತಿನಲ್ಲಿ ಗೃಹಸ್ಥಾಶ್ರಮ ನಿರೂಪಣೆ ಮಾಡಿ ಉಪನಿಷತ್ತಿನ ಉಪಸಂಹಾರವನ್ನು ಮಾಡಲಾಗಿದೆ. ತಾವತಾ ಆ ಆಶ್ರಮವೇ ಕೊನೆಯದು ಎಂದು ತಿಳಿಯಬಾರದು.

**॥ ಮೌನವದಿತರೇಷಾಮಪ್ಯುಪದೇಶಾತ್ ॥** ಗೃಹಸ್ಥಾಶ್ರಮ–ಸಂನ್ಯಾಸಗಳಂತೆ ಇತರವಾದ ಬ್ರಹ್ಮಚರ್ಯ–ವಾನಪ್ರಸ್ಥಾಶ್ರಮಗಳನ್ನೂ ಶ್ರುತಿಯಲ್ಲಿ ನಿರೂಪಿಸಲಾಗಿದೆ– 'ತಪ ಏವ ದ್ವಿತೀಯಃ ಬ್ರಹ್ಮಚಾರ್ಯಾಚಾರ್ಯಕುಲವಾಸೀ ತೃತೀಯಃ, (ಛಾಂ.2.23.1). ಬ್ರಹ್ಮಚರ್ಯ–ವಾನಪ್ರಸ್ಥಗಳು–ಎರಡೇ ಆದರೂ ಅವುಗಳ ಅವಾಂತರ ಭೇದದ ದೃಷ್ಟಿಯಿಂದ ಬಹುವಚನವು ಯುಕ್ತವಾಗಿದೆ. ಗಾಯತ್ರ, ಬ್ರಾಹ್ಮ, ಪ್ರಾಜಾಪತ್ಯ, ಬೃಹತ್ ಎಂದು ಬ್ರಹ್ಮಚರ್ಯಾಶ್ರಮ ನಾಲ್ಕು ವಿಧ. ವಾರ್ತಾವೃತ್ತಿಃ, ಶಾಲೀನ ವೃತ್ತಿಃ, ಯಾಯಾವರಃ, ಘೋರಸಂನ್ಯಾಸೀ ಎಂದು ಗೃಹಸ್ಥ ನಾಲ್ಕುವಿಧ. ವಾನಪ್ರಸ್ಥರು ವೈಖಾನಸ, ಔದುಂಬರ, ವಾಲಖಿಲ್ಯ, ಫೇನಪ ಎಂದು ನಾಲ್ಕು ವಿಧರು. ಸಂನ್ಯಾಸಿಗಳೂ ನಾಲ್ಕುವಿಧ–ಕುಟೀಚಕ, ಬಹೂದಕ, ಹಂಸ, ಪರಮಹಂಸ.

**ವಿಮರ್ಶೆ—** ''ಮೌನಂ ಚಾಮೌನಂ ನಿರ್ವಿದ್ಯಾಥ ಬ್ರಾಹ್ಮಣಃ'' (ಬೃ.3.5.1) ಎಂಬ ವಾಕ್ಯದಲ್ಲಿ ಮೌನಾದಿಗಳಿಗೆ ಬ್ರಾಹ್ಮಣಶಬ್ದೋಕ್ತ ಅಪರೋಕ್ಷಜ್ಞಾನಸಮಾನ ಕರ್ತೃಕತ್ವ ಇರುವುದರಿಂದ ಮೌನವೂ ವಿಧಿವಿಷಯವೇ ಆಗಿದೆ. ಆದ್ದರಿಂದ ಪೂರ್ವಪಕ್ಷ ಯುಕ್ತವಲ್ಲ. ಅದು ವಿಧಿ ಎಂಬ ಸಿದ್ಧಾಂತವೂ ಸರಿಯಲ್ಲ. ವಿಧಾಯಕ ಶಬ್ದ ಅಲ್ಲಿಲ್ಲ.

ಸೂತ್ರದಲ್ಲಿ ಸಹಕಾರ್ಯಂತರಸ್ಯ (ಮೌನಸ್ಯ) ವಿಧಿಃ, ಎಂದು ವಿಗ್ರಹ ಮಾಡಿದಾಗ ತೃತೀಯಂ ಶಬ್ದಕ್ಕೆ ಅನ್ವಯವಿಲ್ಲ. ಪಾಂಡಿತ್ಯಶಬ್ದದಿಂದಲೇ ಮೌನದ ಸಂಗ್ರಹವೂ ಆಗಿದೆ, ಎಂಬ ಆಕ್ಷೇಪಪರಿಹಾರಕ್ಕಾಗಿ ತೃತೀಯಂ ಎಂಬುದು ವಿಧೇಯವಿಶೇಷಣ ಎಂದು ಪರಭಾಷ್ಯದಲ್ಲಿ ಅಂಗೀಕರಿಸಲಾಗಿದೆ. ಆದರೆ, ವಿಧೇಯವಾದ ಸಹಕಾರ್ಯಂತರಕ್ಕೆ ತೃತೀಯಂ ಎಂಬುದನ್ನು ವಿಶೇಷಣ ಮಾಡಲು ಬರುವುದಿಲ್ಲ.

## ವಿಶಿಷ್ಟಾದ್ವೈತದರ್ಶನದಲ್ಲಿ ಸೂತ್ರಾರ್ಥ

'ತಸ್ಮಾದ್ ಬ್ರಾಹ್ಮಣಃ' ಎಂಬ ವಾಕ್ಯದಲ್ಲಿ ತದ್ವತಃ=ಜ್ಞಾನಿಗೆ ಮೌನವೂ ವಿಧೇಯ. ವಿಧ್ಯಾದಿವತ್=ಯಜ್ಞಾದಿವತ್=ಯಜ್ಞಾದಿಗಳಂತೆ ಮೌನವೂ ಜ್ಞಾನಿಗೆ ವಿದ್ಯಾಕ್ಕೆ ಸಹಕಾರಿಯಾಗಿ ವಿವಕ್ಷಿತವಾಗಿದೆ. (ವಿಧೀಯತೇ ಇತಿ ವಿಧಿಃ। ಸಹಕಾರ್ಯಂತರಂ ಚ ವಿಧಿಶ್ಚ=ಸಹಕಾರ್ಯಂತರವಿಧಿಃ) 'ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಶಂತಿ ಯಜ್ಞೇನ ದಾನೇನ...'' ಎಂಬಲ್ಲಿ ಯಜ್ಞಾದಿಗಳು ಹೇಗೆ ಜ್ಞಾನಕ್ಕೆ ಸಹಕಾರಿಯಾಗಿ ವಿಹಿತವಾಗಿವೆಯೋ ಅದರಂತೆ ''ತಸ್ಮಾದ್ ಬ್ರಾಹ್ಮಣಃ'' ಎಂಬ ವಾಕ್ಯದಲ್ಲೂ ಪಾಂಡಿತ್ಯ, ಬಾಲ್ಯ, ಮೌನ ಈ ಮೂರು ಜ್ಞಾನಸಹಕಾರಿಗಳಾಗಿ ವಿಧಿಸಲ್ಪಟ್ಟಿವೆ. ಮೌನವೂ ಪಾಂಡಿತ್ಯವೂ ಒಂದೇ ಅಲ್ಲ—'ಪಕ್ಷೇಣ' ಮುನಿಶಬ್ದವನ್ನು ಪ್ರಕೃಷ್ಟಮನನಶೀಲರಾದ ವ್ಯಾಸಾದಿಗಳಲ್ಲಿ ''ಮುನೀನಾಮಪ್ಯಹಂ ವ್ಯಾಸಃ'' ಎಂದು ಪ್ರಯೋಗಿಸಲಾಗಿದೆ. ಆದ್ದರಿಂದ ಅದು ಪಾಂಡಿತ್ಯವಲ್ಲ. ಬಾಲ್ಯ–ಪಾಂಡಿತ್ಯಗಳೊಂದಿಗೆ ಸೇರಿದರೆ ತೃತೀಯಂ=ಮೂರನೆಯದು. (ಮೌನಂ ಶ್ರವಣಪ್ರತಿಷ್ಠಾರ್ಥಾತ್ ಮನನಾತ್ ಅರ್ಥಾಂತರಭೂತಂ ಉಪಾಸನಾಲಂಬನಸ್ಯ ಪುನಃಪುನಃ ಸಂಶೀಲನಮ್–ರಾ.ಭಾ.) ಇದರಿಂದ ಶ್ರುತಿಗೆ ಹೀಗೆ ಅರ್ಥವು ಸಂಪನ್ನವಾಗುತ್ತದೆ–ಬ್ರಾಹ್ಮಣಃ=ಜ್ಞಾನಿಯು ಪಾಂಡಿತ್ಯಂ ನಿರ್ವಿದ್ಯ=ಉಪಾಸ್ಯಬ್ರಹ್ಮತತ್ತ್ವವನ್ನು ಪರಿಶುದ್ಧ ಹಾಗೂ ಪರಿಪೂರ್ಣ ಎಂದು ತಿಳಿದು. ಅಂದರೆ, ಶ್ರವಣ–ಮನನಗಳಿಂದ ಸಿಗದ ನಿಷ್ಕೃಷ್ಟ ಜ್ಞಾನವನ್ನು ಪಡೆದು. ಜ್ಞಾನ ಮತ್ತು ಭಕ್ತಿಯಿಂದಾದ ಸತ್ವಗುಣದ ವೃದ್ಧಿಯಿಂದ ನಿಷ್ಕೃಷ್ಟತತ್ವಜ್ಞಾನವು ಲಭ್ಯವಾಗುತ್ತದೆ. ಅದನ್ನೇ ಕೃಷ್ಣ 'ನಾಹಂ ವೇದೈಃ...ಭಕ್ತ್ಯಾ ತ್ವನನ್ಯಯಾ ಶಕ್ಯಃ' ಎಂದಿರುತ್ತಾನೆ. ಇಂತಹ ಜ್ಞಾನ ಪಡೆದು, ಬಾಲ್ಯೇನ ತಿಷ್ಠಾಸೇತ್=ಮಕ್ಕಳಂತೆ ಯಥೇಚ್ಛಕರ್ಮಾಚರಣೆ ಮಾಡುತ್ತಾ ಡಾಂಭಿಕತನ ರಹಿತನಾಗಬೇಕು. ಬಾಲ್ಯಂ ಚ ಪಾಂಡಿತ್ಯಂ ಚ ನಿರ್ವಿದ್ಯ=ಇಂತಹ ಬಾಲ್ಯ ಮತ್ತು ಪಾಂಡಿತ್ಯವನ್ನು ಪಡೆದು ಮುನಿಃ ಸ್ಯಾತ್=ಮನನಶೀಲೋ ಭವೇತ್=ಮನನಶೀಲನಾಗಬೇಕು. ಅದರಿಂದ ನಿದಿಧ್ಯಾಸನವು ಸಾಧ್ಯವಾಗುತ್ತದೆ.

**॥ ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ ॥** ಕೃತ್ಸ್ನೇಷು ಭಾವಾತ್= ಆಶ್ರಮತ್ರಯಗಳಲ್ಲೂ ಜ್ಞಾನವು ಪ್ರಾಪ್ತವಾಗುವುದರಿಂದ ಗೃಹಸ್ಥನಿಗೂ ಬ್ರಹ್ಮಜ್ಞಾನ ಇದೆ. ಯತಿಗಳಿಗೆ ಮಾತ್ರವಲ್ಲ. ಆದ್ದರಿಂದಲೇ ಛಾಂದೋಗ್ಯದ ಉಪಸಂಹಾರ ಗೃಹಸ್ಥ ಧರ್ಮದೊಂದಿಗೆ ಮಾಡಲಾಗಿದೆ. ಗೃಹಸ್ಥಾಶ್ರಮದಲ್ಲಿ ಸರ್ವಾಶ್ರಮದ ಧರ್ಮ ಮತ್ತು ಅಧರ್ಮಗಳೂ ಸೇರಿವೆ.

ವಿದ್ಯಾತಿಶಯ(ಅದ್ವೈತದಾರ್ಢ್ಯವು)ಅಪ್ರಾಪ್ತವಾಗುತ್ತದೆ. ಆ ಪಕ್ಷದಲ್ಲಿ ಮೌನವಿಧಿಯು ಯುಕ್ತವಾಗಿದೆ. ವಿಧ್ಯಾದಿವತ್=ದರ್ಶಪೂರ್ಣ ಮಾಸಯಾಗಗಳ ವಿಧಿಯಂತೆ.

**॥ ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ ॥** ಸಂನ್ಯಾಸವೆಂಬ ಆಶ್ರಮಾಂತರ ವಿರುವಾಗ ಛಾಂದೋಗ್ಯದಲ್ಲಿ 'ಅಭಿಸಮಾವೃತ್ಯ ಕುಡುಂಬೇ' ಎಂದು ಗೃಹಸ್ಥಾಶ್ರಮ ವನ್ನೇ ಉಪಸಂಹಾರ ಮಾಡಿ ಪ್ರಶಂಸೆ ಮಾಡಿರುವುದು ಏಕೆ? ಉತ್ತರ— ಕೃತ್ಸ್ನಭಾವಾತ್=ಅನೇಕ ಆಶ್ರಮಕರ್ಮಗಳಾದ ಯಜ್ಞಾದಿಗಳು ಮಾತ್ರವಲ್ಲದೆ, ಆಶ್ರಮಾಂತರಕರ್ಮಗಳಾದ ಅಹಿಂಸೆ, ಇಂದ್ರಿಯನಿಗ್ರಹಾದಿಗಳನ್ನೂ ಗೃಹಸ್ಥನು ಮಾಡಬೇಕು. ಆದ್ದರಿಂದ ಛಾಂದೋಗ್ಯೋಪನಿಷತ್ತಿನಲ್ಲಿ ಗೃಹಸ್ಥಾಶ್ರಮ ನಿರೂಪಣೆ ಮಾಡಿ ಉಪನಿಷತ್ತಿನ ಉಪಸಂಹಾರವನ್ನು ಮಾಡಲಾಗಿದೆ. ತಾವತಾ ಆ ಆಶ್ರಮವೇ ಕೊನೆಯದು ಎಂದು ತಿಳಿಯಬಾರದು.

**॥ ಮೌನವದಿತರೇಷಾಮಪ್ಯುಪದೇಶಾತ್ ॥** ಗೃಹಸ್ಥಾಶ್ರಮ–ಸಂನ್ಯಾಸಗಳಂತೆ ಇತರವಾದ ಬ್ರಹ್ಮಚರ್ಯ–ವಾನಪ್ರಸ್ಥಾಶ್ರಮಗಳನ್ನೂ ಶ್ರುತಿಯಲ್ಲಿ ನಿರೂಪಿಸಲಾಗಿದೆ– 'ತಪ ಏವ ದ್ವಿತೀಯಃ ಬ್ರಹ್ಮಚಾರ್ಯಾಚಾರ್ಯಕುಲವಾಸೀ ತೃತೀಯಃ, (ಛಾಂ.2.23.1). ಬ್ರಹ್ಮಚರ್ಯ–ವಾನಪ್ರಸ್ಥಗಳು–ಎರಡೇ ಆದರೂ ಅವುಗಳ ಅವಾಂತರ ಭೇದದ ದೃಷ್ಟಿಯಿಂದ ಬಹುವಚನವು ಯುಕ್ತವಾಗಿದೆ. ಗಾಯತ್ರ, ಬ್ರಾಹ್ಮ, ಪ್ರಾಜಾಪತ್ಯ, ಬೃಹತ್ ಎಂದು ಬ್ರಹ್ಮಚರ್ಯಾಶ್ರಮ ನಾಲ್ಕು ವಿಧ. ವಾರ್ತಾವೃತ್ತಿಃ, ಶಾಲೀನ ವೃತ್ತಿಃ, ಯಾಯಾವರಃ, ಘೋರಸಂನ್ಯಾಸೀ ಎಂದು ಗೃಹಸ್ಥ ನಾಲ್ಕುವಿಧ. ವಾನಪ್ರಸ್ಥರು ವೈಖಾನಸ, ಔದುಂಬರ, ವಾಲಖಿಲ್ಯ, ಫೇನಪ ಎಂದು ನಾಲ್ಕು ವಿಧರು. ಸಂನ್ಯಾಸಿಗಳೂ ನಾಲ್ಕುವಿಧ–ಕುಟೀಚಕ, ಬಹೂದಕ, ಹಂಸ, ಪರಮಹಂಸ.

**ವಿಮರ್ಶೆ—** ''ಮೌನಂ ಚಾಮೌನಂ ನಿರ್ವಿದ್ಯಾಥ ಬ್ರಾಹ್ಮಣಃ'' (ಬೃ.3.5.1) ಎಂಬ ವಾಕ್ಯದಲ್ಲಿ ಮೌನಾದಿಗಳಿಗೆ ಬ್ರಾಹ್ಮಣಶಬ್ದೋಕ್ತ ಅಪರೋಕ್ಷಜ್ಞಾನಸಮಾನ ಕರ್ತೃಕತ್ವ ಇರುವುದರಿಂದ ಮೌನವೂ ವಿಧಿವಿಷಯವೇ ಆಗಿದೆ. ಆದ್ದರಿಂದ ಪೂರ್ವಪಕ್ಷ ಯುಕ್ತವಲ್ಲ. ಅದು ವಿಧಿ ಎಂಬ ಸಿದ್ಧಾಂತವೂ ಸರಿಯಲ್ಲ. ವಿಧಾಯಕ ಶಬ್ದ ಅಲ್ಲಿಲ್ಲ.

ಸೂತ್ರದಲ್ಲಿ ಸಹಕಾರ್ಯಂತರಸ್ಯ (ಮೌನಸ್ಯ) ವಿಧಿಃ, ಎಂದು ವಿಗ್ರಹ ಮಾಡಿದಾಗ ತೃತೀಯಂ ಶಬ್ದಕ್ಕೆ ಅನ್ವಯವಿಲ್ಲ. ಪಾಂಡಿತ್ಯಶಬ್ದದಿಂದಲೇ ಮೌನದ ಸಂಗ್ರಹವೂ ಆಗಿದೆ, ಎಂಬ ಆಕ್ಷೇಪಪರಿಹಾರಕ್ಕಾಗಿ ತೃತೀಯಂ ಎಂಬುದು ವಿಧೇಯವಿಶೇಷಣ ಎಂದು ಪರಭಾಷ್ಯದಲ್ಲಿ ಅಂಗೀಕರಿಸಲಾಗಿದೆ. ಆದರೆ, ವಿಧೇಯವಾದ ಸಹಕಾರ್ಯಂತರಕ್ಕೆ ತೃತೀಯಂ ಎಂಬುದನ್ನು ವಿಶೇಷಣ ಮಾಡಲು ಬರುವುದಿಲ್ಲ.

## ವಿಶಿಷ್ಟಾದ್ವೈತದರ್ಶನದಲ್ಲಿ ಸೂತ್ರಾರ್ಥ

'ತಸ್ಮಾದ್ ಬ್ರಾಹ್ಮಣಃ' ಎಂಬ ವಾಕ್ಯದಲ್ಲಿ ತದ್ವತಃ=ಜ್ಞಾನಿಗೆ ಮೌನವೂ ವಿಧೇಯ. ವಿಧ್ಯಾದಿವತ್=ಯಜ್ಞಾದಿವತ್=ಯಜ್ಞಾದಿಗಳಂತೆ ಮೌನವೂ ಜ್ಞಾನಿಗೆ ವಿದ್ಯಾಕ್ಕೆ ಸಹಕಾರಿಯಾಗಿ ವಿವಕ್ಷಿತವಾಗಿದೆ. (ವಿಧೀಯತೇ ಇತಿ ವಿಧಿಃ। ಸಹಕಾರ್ಯಂತರಂ ಚ ವಿಧಿಶ್ಚ=ಸಹಕಾರ್ಯಂತರವಿಧಿಃ) 'ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಶಂತಿ ಯಜ್ಞೇನ ದಾನೇನ...'' ಎಂಬಲ್ಲಿ ಯಜ್ಞಾದಿಗಳು ಹೇಗೆ ಜ್ಞಾನಕ್ಕೆ ಸಹಕಾರಿಯಾಗಿ ವಿಹಿತವಾಗಿವೆಯೋ ಅದರಂತೆ ''ತಸ್ಮಾದ್ ಬ್ರಾಹ್ಮಣಃ'' ಎಂಬ ವಾಕ್ಯದಲ್ಲೂ ಪಾಂಡಿತ್ಯ, ಬಾಲ್ಯ, ಮೌನ ಈ ಮೂರು ಜ್ಞಾನಸಹಕಾರಿಗಳಾಗಿ ವಿಧಿಸಲ್ಪಟ್ಟಿವೆ. ಮೌನವೂ ಪಾಂಡಿತ್ಯವೂ ಒಂದೇ ಅಲ್ಲ—'ಪಕ್ಷೇಣ' ಮುನಿಶಬ್ದವನ್ನು ಪ್ರಕೃಷ್ಟಮನನಶೀಲರಾದ ವ್ಯಾಸಾದಿಗಳಲ್ಲಿ ''ಮುನೀನಾಮಪ್ಯಹಂ ವ್ಯಾಸಃ'' ಎಂದು ಪ್ರಯೋಗಿಸಲಾಗಿದೆ. ಆದ್ದರಿಂದ ಅದು ಪಾಂಡಿತ್ಯವಲ್ಲ. ಬಾಲ್ಯ-ಪಾಂಡಿತ್ಯಗಳೊಂದಿಗೆ ಸೇರಿದರೆ ತೃತೀಯಂ=ಮೂರನೆಯದು. (ಮೌನಂ ಶ್ರವಣಪ್ರತಿಷ್ಠಾರ್ಥಾತ್ ಮನನಾತ್ ಅರ್ಥಾಂತರಭೂತಂ ಉಪಾಸನಾಲಂಬನಸ್ಯ ಪುನಃಪುನಃ ಸಂಶೀಲನಮ್-ರಾ.ಭಾ.) ಇದರಿಂದ ಶ್ರುತಿಗೆ ಹೀಗೆ ಅರ್ಥವು ಸಂಪನ್ನವಾಗುತ್ತದೆ-ಬ್ರಾಹ್ಮಣಃ=ಜ್ಞಾನಿಯು ಪಾಂಡಿತ್ಯಂ ನಿರ್ವಿದ್ಯ=ಉಪಾಸ್ಯಬ್ರಹ್ಮತತ್ತ್ವವನ್ನು ಪರಿಶುದ್ಧ ಹಾಗೂ ಪರಿಪೂರ್ಣ ಎಂದು ತಿಳಿದು. ಅಂದರೆ, ಶ್ರವಣ-ಮನನಗಳಿಂದ ಸಿಗದ ನಿಷ್ಕೃಷ್ಟ ಜ್ಞಾನವನ್ನು ಪಡೆದು. ಜ್ಞಾನ ಮತ್ತು ಭಕ್ತಿಯಿಂದಾದ ಸತ್ತ್ವಗುಣದ ವೃದ್ಧಿಯಿಂದ ನಿಷ್ಕೃಷ್ಟತತ್ತ್ವಜ್ಞಾನವು ಲಭ್ಯವಾಗುತ್ತದೆ. ಅದನ್ನೇ ಕೃಷ್ಣ 'ನಾಹಂ ವೇದೈಃ...ಭಕ್ತ್ಯಾ ತ್ವನನ್ಯಯಾ ಶಕ್ಯಃ' ಎಂದಿರುತ್ತಾನೆ. ಇಂತಹ ಜ್ಞಾನ ಪಡೆದು, ಬಾಲ್ಯೇನ ತಿಷ್ಠಾಸೇತ್=ಮಕ್ಕಳಂತೆ ಯಥೇಚ್ಛಕರ್ಮಾಚರಣೆ ಮಾಡುತ್ತಾ ಡಾಂಭಿಕತನ ರಹಿತನಾಗಬೇಕು. ಬಾಲ್ಯಂ ಚ ಪಾಂಡಿತ್ಯಂ ಚ ನಿರ್ವಿದ್ಯ=ಇಂತಹ ಬಾಲ್ಯ ಮತ್ತು ಪಾಂಡಿತ್ಯವನ್ನು ಪಡೆದು ಮುನಿಃ ಸ್ಯಾತ್=ಮನನಶೀಲೋ ಭವೇತ್=ಮನನಶೀಲನಾಗಬೇಕು. ಆದರಿಂದ ನಿದಿಧ್ಯಾಸನವು ಸಾಧ್ಯವಾಗುತ್ತದೆ.

**॥ ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ ॥** ಕೃತ್ಸ್ನೇಷು ಭಾವಾತ್= ಆಶ್ರಮತ್ರಯಗಳಲ್ಲೂ ಜ್ಞಾನವು ಪ್ರಾಪ್ತವಾಗುವುದರಿಂದ ಗೃಹಸ್ಥನಿಗೂ ಬ್ರಹ್ಮಜ್ಞಾನ ಇದೆ. ಯತಿಗಳಿಗೆ ಮಾತ್ರವಲ್ಲ. ಆದ್ದರಿಂದಲೇ ಛಾಂದೋಗ್ಯದ ಉಪಸಂಹಾರ ಗೃಹಸ್ಥ ಧರ್ಮದೊಂದಿಗೆ ಮಾಡಲಾಗಿದೆ. ಗೃಹಸ್ಥಾಶ್ರಮದಲ್ಲಿ ಸರ್ವಾಶ್ರಮದ ಧರ್ಮ ಮತ್ತು ಅಧರ್ಮಗಳೂ ಸೇರಿವೆ.

**॥ ಮೌನವದಿತರೇಷಾಮಪ್ಯುಪದೇಶಾತ್ ॥** ಪುತ್ರೇಷಣಾದಿಗಳನ್ನು ಬಿಟ್ಟು ಭಿಕ್ಷಾಟನೆಯನ್ನು ಮಾಡುತ್ತಾ 'ಮನನ ಶೀಲನಾಗಬೇಕು' ಎಂದು ಬೃಹದಾರಣ್ಯಕದಲ್ಲಿ ಯತಿಧರ್ಮವನ್ನು ಹೇಳಿ ಮೌನವತ್=ಅದರೊಂದಿಗೆ 'ಮೌನ'ವನ್ನು ಹೇಳಿರುವಂತೆ ಇತರಾಶ್ರಮಿಗಳಿಗೂ ತಮ್ಮ ತಮ್ಮ ಆಶ್ರಮಧರ್ಮದೊಂದಿಗೆ ಮೌನಗುಣವೂ ಆವಶ್ಯಕ. ''ತ್ರಯೋ ಧರ್ಮಸ್ಕಂಧಾಃ''ಎಂದು ಮೂರು ಆಶ್ರಮಗಳನ್ನು ಹೇಳಿ ''ಬ್ರಹ್ಮಸಂಸ್ಥೋ ಅಮೃತತ್ವಮೇತಿ'' ಎಂದು ಉಪದೇಶ ಮಾಡಿರುವುದರಿಂದಾಗಿ ಮೌನವು ಆಶ್ರಮತ್ರಯಕ್ಕೂ ಅಗತ್ಯವೆಂದು ತಿಳಿಯುತ್ತದೆ.

ಶಾಂಕರಭಾಷ್ಯದಂತೆ ಯತಿಗಳಿಗೆ ಮಾತ್ರವೇ ಮೋಕ್ಷವೆಂದು ತಿಳಿಯುತ್ತದೆ. ಆದರೆ ರಾಮಾನುಜಭಾಷ್ಯದಲ್ಲಿ ಬ್ರಹ್ಮಚರ್ಯಾದಿಆಶ್ರಮದವರಿಗೂ ಮೋಕ್ಷವನ್ನು ಹೇಳಲಾಗಿದೆ. ಇದನ್ನು ಬಿಟ್ಟರೆ ವಿಷಯವಾಕ್ಯ, ಪೂರ್ವಪಕ್ಷ, ಸಿದ್ಧಾಂತಗಳು ಎರಡೂ ಭಾಷ್ಯಗಳಲ್ಲೂ ಸಮಾನವಾಗಿವೆ.

ಇಲ್ಲಿಗೆ ಕೃತ್ಸ್ನಭಾವಾಧಿಕರಣವು ಮುಗಿಯಿತು.

## ೯. ಅನಾವಿಷ್ಕಾರಾಧಿಕರಣಮ್

### ॥ ಓಂ ಅನಾವಿಷ್ಕುರ್ವನ್ನನ್ವಯಾತ್ ಓಂ ॥ ೪೯ ॥

**'ಏತಾಂ ವಿದ್ಯಾಮಧೀತ್ಯ ಬ್ರಹ್ಮದರ್ಶೀ ವಾವ ಭವತಿ । ಸ ಏತಾಂ ಮನುಷ್ಯೇಷು ವಿಬ್ರೂಯಾತ್ । ಯಥಾಯಥಾ ಹ ವೈ ಬ್ರೂಯಾತ್ ತಥಾತಥಾಽಧಿಕೋ ಭವತಿ' ಇತಿ ಮಾಠರಶ್ರುತೌ ವಿದ್ಯಾದಾನಂ ಶ್ರೂಯತೇ ।**

**ತಚ್ಚ ಬಹೂನಾಂ ಸ್ವೀಕರಣಾರ್ಥಮಾವಿಷ್ಕಾರೇಣೇತಿ ನ ಮಂತವ್ಯಮ್ । ಅನ್ವಯಾದ್ ಯುಕ್ತೇಃ । ಆವಿಷ್ಕಾರೇಽಯೋಗ್ಯಾನಾಮಪಿ ಸ್ವೀಕಾರಪ್ರಾಪ್ತಿಃ । ತಚ್ಚ ನಿಷಿದ್ಧಮ್–**

**'ಮಾ ನಃ ಸ್ತೇನೇಭ್ಯೋ ಯೇ ಅಭಿದ್ರುಹಸ್ಪದೇ**
**ನಿರಾಮಿಣೋ ರಿಪವೋಽನ್ನೇಷು ಜಾಗೃಧುಃ । (ಋ.2.23.16)ಇತಿ ।**
**'ವಿದ್ಯಾ ಹ ವೈ ಬ್ರಾಹ್ಮಣಮಾಜಗಾಮ**
**ಗೋಪಾಯ ಮಾಂ ಶೇವಧಿಸ್ತೇ(ಷ್ಟೇ)ಽಹಮಸ್ಮಿ ।**

**ಅನಾರ್ಯಕಾಯಾನೃಜವೇ ಶಠಾಯ**
**ಮಾ ಸ್ಮ ಬ್ರೂಯಾ ಋಜವೇ ಬ್ರೂಹಿ ನಿತ್ಯಮ್ ॥' ಇತಿ ಚ ॥**

'ಏತಾಂ ವಿದ್ಯಾಂ' ಎಂಬ ಮಾಠರಶ್ರುತಿಯಲ್ಲಿ ವಿದ್ಯಾದಾನದ ಮಹತ್ವವನ್ನು ತಿಳಿಸಲಾಗಿದೆ. ಆ ವಿದ್ಯಾದಾನವನ್ನಾದರೋ ಅನೇಕರಿಗೆ ಸಿಗುವಂತೆ ಸಾರ್ವಜನಿಕವಾಗಿ ಮಾಡಬೇಕು, ಎಂದು ತಿಳಿಯಬಾರದು. ಸಾರ್ವಜನಿಕವಾಗಿ ವಿದ್ಯೋಪದೇಶ ಮಾಡಿದರೆ ಅಯೋಗ್ಯರೂ ಅದನ್ನು ತಿಳಿದಾರು. ಅಯೋಗ್ಯರಿಗೆ ವಿದ್ಯಾದಾನವು ನಿಷಿದ್ಧವಾಗಿದೆ. ಋಕ್‌ಸಂಹಿತೆಯ 'ಮಾನಃ ಸ್ತೇನೇಭ್ಯೋ' ಎಂಬ ಮಂತ್ರ ಮತ್ತು 'ವಿದ್ಯಾ ಹವೈ' ಎಂಬ ಮಂತ್ರಗಳು ಅದನ್ನು ನಿಷೇಧಮಾಡುತ್ತವೆ.

**ವಿವರಣೆ**— ಮಾಠರಶ್ರುತಿಯಲ್ಲಿ ''ಯಥಾ ಯಥಾಹ ವೈ ಬ್ರೂಯಾತ್ ತಥಾ ತಥಾ ಅಧಿಕೋ ಭವತಿ–ವಿದ್ಯಾದಾನವನ್ನು ಹೆಚ್ಚು ಮಾಡಿದಂತೆ ಫಲವೂ ಹೆಚ್ಚು ಸಿಗುತ್ತದೆ'' ಎನ್ನಲಾಗಿದೆ. ಏಕಾಂತದಲ್ಲಿ ವಿದ್ಯಾದಾನ ಮಾಡಿದರೆ ಕೆಲವರಿಗೆ ಮಾತ್ರವೇ ಸಿಗುತ್ತದೆ. ಬಹಿರಂಗವಾಗಿ ಮಾಡಿದರೆ ಅನೇಕರಿಗೆ ಲಭ್ಯವಾಗುತ್ತದೆ. ಆದ್ದರಿಂದ ಬಹಿರಂಗವಿದ್ಯಾದಾನವೇ ಹೆಚ್ಚು ಫಲದಾಯಕ ಎಂದು ಪೂರ್ವಪಕ್ಷ. ಅಯೋಗ್ಯರಿಗೆ ವಿದ್ಯೆಯು ಲಭ್ಯವಾಗಬಾರದು, ಎಂದು ಶ್ರುತಿ ಇದೆ. ಆದ್ದರಿಂದ ಯೋಗ್ಯಜಿಜ್ಞಾಸುಗಳಿಗೆ ಏಕಾಂತದಲ್ಲೇ ವಿದ್ಯಾದಾನ ಮಾಡಬೇಕು. ಬಹಿರಂಗವಾಗಿ ಮಾಡಬಾರದು. ಅಯೋಗ್ಯರಿಗೆ ವಿದ್ಯೆಯು ಲಭ್ಯವಾಗಬಾರದು, ಎಂಬುದೇ ಸೂತ್ರದಲ್ಲಿ ಹೇಳಿರುವ ಅನ್ವಯ=ಯುಕ್ತಿ. 'ಅನ್ವೀಯತೇ ಅನೇನ ಸಾಧ್ಯಂ' ಸಾಧ್ಯದೊಂದಿಗೆ ಸಂಬಂಧಪಡುವ ಯುಕ್ತಿಯೇ ಅನ್ವಯ.

**ಶ್ರುತ್ಯರ್ಥ**— ಮಾಠರಶ್ರುತಿ–ಏತಾಂ=ಬ್ರಹ್ಮಜ್ಞಾನಸಾಧನವಾದ ವಿದ್ಯಾಂ=ವೇದ ವಿದ್ಯೆಯನ್ನು ಅಧೀತ್ಯ=ತಿಳಿದು, ವಿಚಾರಮಾಡಿ (ಮನನಮಾಡಿ) ಧ್ಯಾನಮಾಡಿ ಬ್ರಹ್ಮಜ್ಞಾನೀ ಭವತಿ=ಬ್ರಹ್ಮಾಪರೋಕ್ಷವನ್ನು ಪಡೆಯುತ್ತಾನೆ. ಸಃ=ಆ ಬ್ರಹ್ಮಜ್ಞಾನಿಯು ಏತಾಂ=ಈ ವಿದ್ಯೆಯನ್ನು ಮನುಷ್ಯೇಷು=ಬಹಳ ಜನರ ಮಧ್ಯದಲ್ಲಿ ಯಥಾ ಯಥಾ=ಎಷ್ಟು ಹೆಚ್ಚು ಹೆಚ್ಚಾಗಿ ವಿಬ್ರೂಯಾತ್=ಹೇಳುವನೋ ತಥಾತಥಾ= ಅದಕ್ಕನುಗುಣವಾಗಿ ಅಧಿಕೋ ಭವತಿ=ಫಲಾಧಿಕ್ಯವನ್ನು ಪಡೆಯುತ್ತಾನೆ.

**ಋಗ್ವೇದಮಂತ್ರ** (2.23.16)—ಬ್ರಹ್ಮಣಸ್ಪತೇ, ಬ್ರಹ್ಮಣಃ=ವೇದದ ಪತೇ= ಸ್ವಾಮಿಯಾದ ವಾಯುದೇವನೇ ನಿರಾಮಿಣಃ=ರಣರೂಪನಾದ-ಆನಂದರೂಪನಾದ ವಿಷ್ಣುವಿಗೆ ಜೀವಾಭೇದವನ್ನು ತಿಳಿಯುವವರು ಆದ್ದರಿಂದಲೇ ರಿಪವಃ=ಶತ್ರುಗಳು

ಅನ್ನೇಷು=ಭೋಗ್ಯವಸ್ತುಗಳಲ್ಲಿ ಜಾಗೃಧುಃ=ಅಪೇಕ್ಷೆಯನ್ನು ಮಾಡುತ್ತಾರೆ. ಅವರು ಅಭಿದ್ರುಹಸ್ಪದೇ, ಅಭಿತಃ=ಸರ್ವವಿಧವಾದ ದ್ರುಹಸ್ಪದೇ ವಿಷ್ಣು-ವೈಷ್ಣವ-ದ್ವೇಷಫಲ ವಾದ ತಮೋಯೋಗ್ಯರು. ಆದ್ದರಿಂದ ಸ್ತೇನೇಭ್ಯಃ=ಅಂತಹ ಕಳ್ಳರಿಗೆ ಸಮಾನ ವಾದವರಿಗೆ ನಃ=ನಮ್ಮನ್ನು ಮಾ ಬ್ರೂಹಿ=ಹೇಳಬೇಡ. ಏಷಾಂ=ಇವರಿಗೆ ಏತತ್=ಪರಬ್ರಹ್ಮನು ನ=ಇಲ್ಲ. ಅಪರಂ=ಜಗತ್ತೂ ನ=ಇಲ್ಲ. ಕಿಂಚನ= ನಿರ್ಗುಣವಾದ ಬ್ರಹ್ಮ, ನೈಕಂ=ಸದಸದ್ವಿಲಕ್ಷಣವಾದ ಜಗತ್ತೂ ಅಭಿಮತವಾಗಿದೆ.

**ಮಂತ್ರ(೨.೨೩.೧೬)** ಬೃಹಸ್ಪತೇ=ಹೇ ವಾಯೋ, ಶಮೇನ=ಭಗವನ್ನಿಷ್ಠೆಯಿಂದ ಉಪ=ಭಗವಂತನ ಸಮೀಪದಲ್ಲೇ ರತಾಃ=ಆಸಕ್ತರಾದ ಅರ್ಥಾತ್ ಸದಾ ಮನನ ಶೀಲರಾದ ಯೇ=ಯಾರು ಧರ್ಮಿಣಃ=ನಿಷ್ಕಾಮಕರ್ಮಿಗಳೋ ಯೇ ಚ=ಯಾರು ದೇವಾನಾಂ ವ್ರಯಃ=ಸರ್ವದೇವತೆಗಳಿಗೆ ವರತಮನಾದ ಬ್ರಹ್ಮನನ್ನು ಹೃದಿ=ಮನಸ್ಸಿ ನಲ್ಲಿ ವಿ=ಚೆನ್ನಾಗಿ ಓಹತೇ=ಧರಿಸುವರೋ ಸಾಮ್ನಃ=ಸರ್ವತ್ರ ಸಮನಾದುದರಿಂದ ಸಾಮಪದವಾಚ್ಯನಾದ ವಿಷ್ಣುವಿನಿಂದ ಪರಂ=ಉತ್ತಮನಾದವನನ್ನು ನ ವಿದುಃ= ತಿಳಿದಿಲ್ಲವೋ ಅರ್ಥಾತ್ ವಿಷ್ಣುವೇ ಸರ್ವೋತ್ತಮನೆಂದು ತಿಳಿದಿದ್ದಾರೋ ತೇಭ್ಯೋ=ಅವರಿಗೆ ನಃ=ನಮ್ಮನ್ನು ಬ್ರೂಹಿ=ಹೇಳು.

ಇದು ವಿದ್ಯಾಭಿಮಾನಿದೇವತೆಗಳು ವಾಯುದೇವರಲ್ಲಿ ಮಾಡಿದ ವಿನಮ್ರ ಪ್ರಾರ್ಥನೆ, ಎಂದು ಐತರೇಯ ಸಂಹಿತೆಯಲ್ಲಿದೆ—

ವಾಯುಂ ವಿದ್ಯಾ ಸಮಾಸಾದ್ಯ ಸರ್ವಾಸಾಂ ಪತಿಮೂಚಿರೇ ।
ಸ್ತೇನೇಭ್ಯೋ ಮೈವ ನೋ ಬ್ರೂಹಿ ಬ್ರೂಹ್ಯಥೋ ವೈಷ್ಣವೇಷು ಚ ॥

**'ವಿದ್ಯಾಹ ವೈ'** ಶ್ರುತ್ಯರ್ಥ—ವಿದ್ಯಾ=ವಿದ್ಯಾದೇವತೆಯು ಬ್ರಾಹ್ಮಣಂ=ವಾಯು ದೇವನ ಬಳಿಗೆ ಆಜಗಾಮ=ಬಂದಳು. ಬಂದು ಮಾಂ ಗೋಪಾಯ=ವಾಯುದೇವನೇ ನಮ್ಮನ್ನು ರಕ್ಷಿಸು. ಅಹಂ=ನಾನು ಶೇವಧಿಃ ಅಸ್ಮಿ=ನಿಧಿಯಾಗಿದ್ದೇನೆ. ಮಾಂ=ನನ್ನನ್ನು ಅನಾರ್ಯಕಾಯ=ಇಂದ್ರಿಯನಿಗ್ರಹಾದಿ ಆರ್ಯಗುಣ ರಹಿತನಾದವನಿಗೆ ಅನೃಜವೇ=ವಿಪರೀತ ಬುದ್ಧಿ ಇರುವವನಿಗೆ ಶಠಾಯ=ಮೂರ್ಖನಿಗೆ ಮಾ ಸ್ಮ ಬ್ರೂಹಿ=ಉಪದೇಶಿಸಬೇಡ. ನಿತ್ಯಂ=ಸದಾ ಋಜವೇ=ಋಜುಬುದ್ಧಿ ಇರುವವನಿಗೆ ಮಾತ್ರ ಬ್ರೂಹಿ=ಹೇಳು.

ಭಾಗವತದಲ್ಲಿ ಹೇಳಿರುವ ಆರ್ಯಲಕ್ಷಣ—

ತಿತಿಕ್ಷವಃ ಕಾರುಣಿಕಾಃ ಸುಹೃದಃ ಸರ್ವದೇಹಿನಾಮ್ ।
ಅಜಾತಶತ್ರವಃ ಶಾಂತಾಃ ಸಾಧವಃ ಸಾಧುಭೂಷಣಾಃ ॥ ಭಾ.3.27.21)

ಭಾವದೀಪದಲ್ಲಿ ಹೀಗಿದೆ—ಸಾರ್ವಜನಿಕಸಭೆಯಲ್ಲಿ ವೇದವಿದ್ಯೆಯನ್ನು ಹೇಳಿದರೂ ಅಯೋಗ್ಯರಿಗೆ ''ಸರ್ವಥಾಪಿ ತು ತ ಏವ'' (3.4.34) ಎಂಬ ಸೂತ್ರದಲ್ಲಿ ಹೇಳಿರುವಂತೆ ಜ್ಞಾನವೇ ಬರುವುದಿಲ್ಲ. ಆದ್ದರಿಂದ ಮುಕ್ತವಾಗಿ ಉಪನ್ಯಾಸ ಮಾಡಬಹುದು ಎನ್ನುವುದು ಯುಕ್ತವಲ್ಲ. 'ತೇಭ್ಯಃ ಕಥನಸ್ಯೈವ ನಿಂದಿತತ್ವಾತ್= ಅರ್ಥವಾಗಲಿ ಬಿಡಲಿ, ಅಯೋಗ್ಯರಿಗೆ ಹೇಳುವುದೇ ನಿಷಿದ್ಧವಾದುದು'. ಅಷ್ಟೇ ಅಲ್ಲ. ಸಭೆಯಲ್ಲಿ ವಿಷದವಾಗಿ ಹೇಳಿದರೆ ವ್ಯುತ್ಪನ್ನರಾದ ಅಯೋಗ್ಯರಿಗೂ ಜ್ಞಾನ ಬಂದೇ ಬರುತ್ತದೆ. ಆದ್ದರಿಂದ ವೇದವಿದ್ಯೆಯನ್ನು ಬಹಿರಂಗವಾಗಿ ಹೇಳಬಾರದು.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಓಂ ಅನಾವಿಷ್ಕುರ್ವನ್ನನ್ವಯಾತ್ ಓಂ ॥** (ಅತ್ರ ಅಪರೋಕ್ಷಜ್ಞಾನಸಂಗತ ಪರೋಕ್ಷಜ್ಞಾನಸ್ಯ ಅತಿಗೋಪ್ಯತ್ವಂ ಸಾಧ್ಯತೇ । ಅನಾವಿಷ್ಕುರ್ವನ್ ಸಭಾ–ಚತ್ವರಾದಿಷು ಆವಿಷ್ಕಾರಮ್ ಅಕುರ್ವನ್, ಉಪದೇಶಂ ಇತ್ಯನುವರ್ತ್ಯ ಕುರ್ಯಾದಿತಿ ಶೇಷಃ । ಕುತಃ ? ಅನ್ವಯಾತ್=ಉಪಪತ್ತೇಃ ಇತ್ಯರ್ಥಃ। ಆವಿಷ್ಕಾರೇ ಅಯೋಗ್ಯಾನಾಮಪಿ ಜ್ಞಾನಪ್ರಾಪ್ತಿರೂಪಯುಕ್ತೇಃ ಇತ್ಯರ್ಥಃ ।)

ಈ ಅಧಿಕರಣದಲ್ಲಿ ಪರೋಕ್ಷಜ್ಞಾನವು ಅತಿಗೋಪ್ಯ, ಎಂದು ಹೇಳಲಾಗಿದೆ. ಅನಾವಿಷ್ಕುರ್ವನ್=ಸಭೆ–ಸಮಾರಂಭಗಳಲ್ಲಿ ಆವಿಷ್ಕಾರ ಮಾಡದೇ ಜ್ಞಾನವನ್ನು ಯೋಗ್ಯರಿಗೆ ಉಪದೇಶಿಸಬೇಕು. ಅನ್ವಯಾತ್=ಅದಕ್ಕೆ ಸಾಧಕವಾದ ಯುಕ್ತಿಯು ಇರುವುದರಿಂದ. ಆವಿಷ್ಕಾರ ಮಾಡಿದರೆ ಅಯೋಗ್ಯರಿಗೂ ಜ್ಞಾನಪ್ರಾಪ್ತಿಯಾಗುತ್ತದೆ, ಎಂದು ಯುಕ್ತಿ.

## ಶಾಂಕರಭಾಷ್ಯದಲ್ಲಿ ಅನಾವಿಷ್ಕಾರಾಧಿಕರಣ

**॥ ಅನಾವಿಷ್ಕುರ್ವನ್ನನ್ವಯಾತ್ ॥** 'ಬಾಲ್ಯೇನ ತಿಷ್ಠಾಸೇತ್' ಎಂದರೆ ಬಾಲ್ಯಭಾವದಿಂದ ಇರಬೇಕು. ಮಗುವಿನಂತೆ ಮೂತ್ರಪುರೀಷಾದಿಗಳಲ್ಲಿ ಅನಿಯಮವಿರಬೇಕು, ಎಂದು ಅರ್ಥವಲ್ಲ. ಭಾವಶುದ್ಧಿ, ದಂಭ–ದರ್ಪಾದಿರಾಹಿತ್ಯ–ಆತ್ಮಪ್ರಶಂಸೆಗಳು ಇರಬಾರದು ಎಂದರ್ಥ. ಅನಾವಿ ಷ್ಕುರ್ವನ್=ಜ್ಞಾನ–ಅಧ್ಯಯನ–ಧಾರ್ಮಿಕತ್ವಾದಿ ಗುಣಗಳನ್ನು ಆವಿಷ್ಕಾರಗೊಳಿಸದೆ ಅಹಂಕಾರಾದಿರಹಿತನಾಗಿ ಮುಗ್ಧನಾಗಿರಬೇಕು. ಭಾವಶುದ್ಧಿಯು ವಿದ್ಯೆಗೆ ಉಪಕಾರಕವಾದುದು, ಆದ್ದರಿಂದ 'ಬಾಲ್ಯೇನ' ಎಂಬುದಕ್ಕೆ

ಈ ಅರ್ಥವನ್ನು ಮಾಡಿದಾಗ 'ಬಾಲ್ಯಂ ನಿರ್ವಿದ್ಯಾಥ ಮುನಿಃ'ಎಂಬ ಪ್ರಧಾನ ವಿಧಿಯೊಂದಿಗೆ ಬಾಲ್ಯರೂಪವಾದ ಅಂಗವಿಧಿಗೆ ಅನ್ವಯಾತ್=ಅನ್ವಯವಾಗುತ್ತದೆ. ಸ್ಮೃತಿಯೂ ಜ್ಞಾನಿಲಕ್ಷಣವನ್ನು ಹೀಗೆ ಹೇಳುತ್ತದೆ—

ಯಂ ನ ಸಂತಂ ನಚಾಸಂತಂ ನಾಶ್ರುತಂ ನ ಬಹುಶ್ರುತಮ್ ।
ನ ಸುವೃತ್ತಂ ನ ದುರ್ವೃತ್ತಂ ವೇದ ಕಶ್ಚಿತ್ ಸ ಬ್ರಾಹ್ಮಣಃ॥
ಗೂಢಧರ್ಮಾಶ್ರಿತೋ ವಿದ್ವಾನ್ ಅಜ್ಞಾತಚರಿತಂ ಚರೇತ್ ।
ಅಂಧವಜ್ಜಡವಚ್ಚಾಪಿ ಮೂಕವಚ್ಚ ಮಹೀಂ ಚರೇತ್ ॥

ವಿಮರ್ಶೆ– ಜಿಜ್ಞಾಸುವಿಗೆ ಕಾಮಚಾರವಿಧಿಯು 'ಸರ್ವಾಪೇಕ್ಷಾ ಚ..' (3.4.26) ಎಂಬ ಸೂತ್ರಕ್ಕೆ ವಿರುದ್ಧ. ಜ್ಞಾನಿಗೆ 'ಕುರ್ವನ್ನೇವೇಹ ಕರ್ಮಾಣಿ' ಎಂಬ ಶ್ರುತಿಯಲ್ಲಿ ಕರ್ಮಾಲೇಪವು ಶ್ರುತ್ಯುಕ್ತವಾಗಿದೆ. ಆದ್ದರಿಂದ 'ಬಾಲ್ಯೇನ ತಿಷ್ಠಾಸೇತ್' ಎಂಬ ಶ್ರುತಿಗೆ ಕಾಮಚಾರದಿಂದ ಇರಬೇಕು, ಎಂದು ಅರ್ಥ, ಎನ್ನುವ ಪೂರ್ವಪಕ್ಷಕ್ಕೆ ಅವಕಾಶವಿಲ್ಲ.

ಬೃಹದಾರಣ್ಯಕ ಶಾಂಕರಭಾಷ್ಯದಲ್ಲಿ ಈ ಶ್ರುತಿಗೆ 'ಏಷಣಾಭ್ಯೋ ವ್ಯುತ್ಥಾಯ ಜ್ಞಾನಬಲಭಾವೇನ ತಿಷ್ಠಾಸೇತ್' ಎಂದಿದೆ. ಅಲ್ಲಿ 'ಬಲಸ್ಯ ಭಾವಃ=ಬಾಲ್ಯಂ' ಎಂದೇ ಅರ್ಥವನ್ನು ಮಾಡಲಾಗಿದೆ. ಇಲ್ಲಿ 'ಬಾಲಸ್ಯ ಭಾವಃ ಕರ್ಮ ಚ' ಎಂದು ಅರ್ಥೈಸುವುದು ಹೇಗೆ?

ಇಲ್ಲಿಗೆ ಅನಾವಿಷ್ಕಾರಾಧಿಕರಣವು ಮುಗಿಯಿತು.

## ೧೦. ಐಹಿಕಾಧಿಕರಣಮ್

### ॥ ಓಂ ಐಹಿಕಮಪ್ರಸ್ತುತಪ್ರತಿಬಂಧೇ ತದ್ದರ್ಶನಾತ್ ಓಂ ॥ ೫೦ ॥

**'ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' (ಬೃ.ಉ. 4.4.5) ಇತಿ ದರ್ಶನಾರ್ಥಂ ಶ್ರವಣಾದಿ ವಿಧೀಯತೇ ।**

**ತಚ್ಚ ದರ್ಶನಮೈಹಿಕಮೇವ ಪ್ರಾರಬ್ಧಪ್ರತಿಬಂಧಾಭಾವೇ ।**

**'ಶ್ರುತ್ವಾಽಽತ್ಮಾನಂ ಮತಿಪೂರ್ವಂ ಹ್ಯುಪಾಸ್ಯೆ–**
**ಹೈವ ದೃಷ್ಟಿಂ ಪರಮಸ್ಯ ವಿಂದೇತ್ ।**

ಯದ್ಯಾರಬ್ಧಂ ಕರ್ಮ ನಿಬಂಧಕಂ ಸ್ಯಾತ್
ಪ್ರೇತ್ಯೈವ ಪಶ್ಯೇದ್ ಯೋಗಮೇವಾನ್ವವೇಕ್ಷ್ಯ ॥'

ಇತಿ ಸೌಪರ್ಣಶ್ರುತೌ (ತದ್)ದರ್ಶನಾತ್ ॥

'ಅನಾದಿಜನ್ಮಸಂಬದ್ಧಂ ನಿರ್ಭೇತ್ತುಂ ಪಾಪಪಂಜರಮ್ ।
ಯಾವತ್ಯಾ ಸೇವಯಾ ಶಕ್ಯಂ ತಾವತ್ ಕಾರ್ಯಂ ನ ಸಂಶಯಃ ॥
ಯಾವದ್ ದೂರೇ ಸ್ಥಿತೋ ಗಮ್ಯಾತ್ ತಾವದ್ ಗಂತವ್ಯಮೇವ ಹಿ ।
ಇಹ ಜನ್ಮಾಂತರೇ ವಾಽಪಿ ತಾವತ್ಯೈವ ತು ದರ್ಶನಮ್ ॥
ಶ್ರವಣಂ ಮನನಂ ಚೈವ ನಿದಿಧ್ಯಾಸನಮೇವ ಚ ।
ಪರೇ ಗುರೌ ಚ ಯಾ ಭಕ್ತಿಃ ಪರಿಚರ್ಯಾದಿಕಂ ಹರೇಃ ।
ಏಷಾ ಸೇವೇತಿ ಸಂಪ್ರೋಕ್ತಾ ಯಯಾ ತದ್ದರ್ಶನಂ ಭವೇತ್ ॥'

ಇತಿ ಚ ಬೃಹತ್ಸಂಹಿತಾಯಾಮ್ ।

''ಆತ್ಮಾ ವಾರೇ'' ಎಂದು ಶ್ರುತಿಯಲ್ಲಿ ಬ್ರಹ್ಮಾಪರೋಕ್ಷಕ್ಕಾಗಿ ಶ್ರವಣ–ಮನನಾದಿಗಳನ್ನು ವಿಧಿಸಲಾಗಿದೆ. ಶ್ರವಣಾದಿಗಳ ಫಲವಾದ ಭಗವದ್ದರ್ಶನವು ಪ್ರಾರಬ್ಧಕರ್ಮದ ಪ್ರತಿಬಂಧವು ಇಲ್ಲದಿದ್ದರೆ ಈ ಜನ್ಮದಲ್ಲೇ ಆಗುತ್ತದೆ. ಸೌಪರ್ಣಶ್ರುತಿಯಲ್ಲಿದೆ–

ಆತ್ಮವಿಷಯದಲ್ಲಿ ಶಾಸ್ತ್ರದಿಂದ ಕೇಳಿ ತಿಳಿದು ಪರೋಕ್ಷನಿಶ್ಚಯಪೂರ್ವಕವಾಗಿ ಉಪಾಸನೆ ಮಾಡಿದರೆ ಈ ಜನ್ಮದಲ್ಲೇ ಪರಮಾತ್ಮನನ್ನು ನೋಡಬಹುದು. ಪ್ರಾರಬ್ಧಕರ್ಮವೇನಾದರೂ ಪ್ರತಿಬಂಧಕವಾಗಿದ್ದಲ್ಲಿ (ಯೋಗಮೇವ=ಶ್ರವಣಾದಿಗಳನ್ನು ಅನ್ವವೇಕ್ಷ್ಯ=ಜನ್ಮಾಂತರದಲ್ಲಿ ಸ್ವಲ್ಪ ಮಾಡಿ) ದರ್ಶನವಾಗುತ್ತದೆ.

ಬೃಹತ್ಸಂಹಿತೆಯಲ್ಲಿ ಹೀಗಿದೆ—ಅನಾದಿಜನ್ಮಗಳಿಂದ ಸಂಚಿತವಾದ ಪಾಪಸಮೂಹವನ್ನು ಭೇದಿಸಲು ಎಷ್ಟು ಸಾಧ್ಯವೋ ಅಷ್ಟು ಸೇವಾಕಾರ್ಯ ಮಾಡಬೇಕು. ನಮ್ಮ ಗಮ್ಯಸ್ಥಾನವು ಎಷ್ಟು ದೂರದಲ್ಲಿದೆಯೋ ಅಷ್ಟು ದೂರ ಹೋಗಲೇಬೇಕು, ತಾನೆ. ಈ ಜನ್ಮದಲ್ಲೋ ಜನ್ಮಾಂತರದಲ್ಲೋ ಅಷ್ಟು ಸೇವಾಕಾರ್ಯ ಆದಮೇಲೆಯೇ ಭಗವದ್ದರ್ಶನವಾಗುತ್ತದೆ. ಶ್ರವಣ, ಮನನ, ಧ್ಯಾನ, ಪರಮಾತ್ಮ ಮತ್ತು ಗುರುಗಳಲ್ಲಿ ಭಕ್ತಿ, ಅವರ ಪೂಜಾ–ನಮಸ್ಕಾರಾದಿಗಳೇ ಸೇವೆ ಎನಿಸುತ್ತವೆ. ಅದರಿಂದಾಗಿ ಭಗವದ್ದರ್ಶನವಾಗುತ್ತದೆ.

**ವಿವರಣೆ—** ಪತ್ನಿಯಾದ ಮೈತ್ರೇಯೀ ವಿಷಯಾಭಿಲಾಷೆ ಬಿಟ್ಟು ಭಗವಂತನ ಬಗ್ಗೆ ಕೇಳಿದಾಗ ಯಾಜ್ಞವಲ್ಕ್ಯರು ಅವಳಿಗೆ ಮಾಡಿದ ಉಪದೇಶ–'ಆತ್ಮಾ ವಾರೇ' ಎಂದು. ಭಗವಂತನ ದರ್ಶನವಾಗಬೇಕಾದರೆ ಗುರುಮುಖದಿಂದ ಶಾಸ್ತ್ರದ ಶ್ರವಣ, ಮನನ ಮತ್ತು ಧ್ಯಾನಗಳನ್ನು ಮಾಡಬೇಕು, ಎಂದು ಅದರ ಅರ್ಥ. ಶ್ರವಣಾದಿಗಳನ್ನು ಮಾಡಿದಾಗ ಅದೇ ಜನ್ಮದಲ್ಲಿ ಭಗವದ್ದರ್ಶನವಾಗಬೇಕೆಂದಿಲ್ಲ. ಜನ್ಮಾಂತರದಲ್ಲೂ ಆಗಬಹುದು.

'ಯೋಗಮೇವಾನ್ವವೇಕ್ಷ್ಯ' ಎಂಬ ಶ್ರುತಿಯಲ್ಲಿ ಯೋಗಶಬ್ದದ ಅರ್ಥ ಜ್ಞಾನ.

'ಜ್ಞಾನಂ ತು ಯೋಗ ಉದ್ದಿಷ್ಟಂ ಯುಜ್ಯತೇಽನೇನ ಯತ್ಸುಖಮ್ ॥'

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ಐಹಿಕಮಪ್ರಸ್ತುತಪ್ರತಿಬಂಧೇ ತದ್ದರ್ಶನಾತ್ ಓಂ ॥** (ಅತ್ರ ಜ್ಞಾನಸ್ಯ ಪ್ರತಿಬಂಧಾಭಾವೇ ಸಾಧನಸಂಪೂರ್ತಿಜನ್ಮನ್ಯೇವ ಉದಯಃ ಸಾಧ್ಯತೇ । ಇಹ ಜನ್ಮನಿ ಭವಂ–ಐಹಿಕಮ್ । ಜ್ಞಾನಮಿತ್ಯಸ್ತಿ ।

ಅಪ್ರಸ್ತುತ ಪ್ರತಿಬಂಧೇ=ಪ್ರಾರಬ್ಧಪ್ರತಿಬಂಧಾಭಾವೇ ಜ್ಞಾನಮ್ ಐಹಿಕಮ್=ಇಹ ಜನ್ಮನ್ಯೇವ ಭವತಿ । ನ ಚೇತ್ ಜನ್ಮಾಂತರೇ ಇತ್ಯರ್ಥಃ । ಕುತಃ ? ತದ್ದರ್ಶನಾತ್= 'ಶ್ರುತ್ವಾತ್ಮಾನಂ'ಇತಿ ಶ್ರುತೌ ಉಕ್ತಾರ್ಥಸ್ಯ ದರ್ಶನಾತ್, ಇತ್ಯರ್ಥಃ ।)

ಈ ಅಧಿಕರಣದಲ್ಲಿ ಪ್ರತಿಬಂಧಕಗಳು ಇಲ್ಲದಿದ್ದಾಗ, ಯಾವ ಜನ್ಮದಲ್ಲಿ ಶ್ರವಣಾದಿ ಸಾಧನೆಗಳು ಪರಿಪೂರ್ಣವಾಗುತ್ತವೋ ಅದೇ ಜನ್ಮದಲ್ಲಿ ಭಗವಂತನ ಅಪರೋಕ್ಷವೂ ಆಗುತ್ತದೆ, ಎಂದು ಸಾಧಿಸಲಾಗಿದೆ.

ಅಪ್ರಸ್ತುತ ಪ್ರತಿಬಂಧೇ=ಪ್ರಾರಬ್ಧಕರ್ಮರೂಪವಾದ ಪ್ರತಿಬಂಧಕವು ಇಲ್ಲದಿದ್ದರೆ ಅಪರೋಕ್ಷಜ್ಞಾನವು ಐಹಿಕಂ=ಈ ಜನ್ಮದಲ್ಲೇ ಆಗುತ್ತದೆ. ಇಲ್ಲದಿದ್ದಲ್ಲಿ ಜನ್ಮಾಂತರದಲ್ಲಿ.

## ಶಾಂಕರಭಾಷ್ಯದಲ್ಲಿ ಐಹಿಕಾಧಿಕರಣ

ಮಾಧ್ವಭಾಷ್ಯದ ಅರ್ಥವನ್ನೇ ಶಾಂಕರಭಾಷ್ಯದಲ್ಲೂ ಹೇಳಲಾಗಿದೆ—ಯಾಗದ ಫಲವಾದ ಸ್ವರ್ಗ ದೇಹತ್ಯಾಗಾನಂತರವೇ ಬರುತ್ತದೆ. ಆದರೆ, ಶ್ರವಣಾದಿಫಲವಾದ ಅಪರೋಕ್ಷಕ್ಕೆ ದೇಹತ್ಯಾಗದ ಅಗತ್ಯವಿಲ್ಲ. ಆದ್ದರಿಂದ ಅಪರೋಕ್ಷಜ್ಞಾನವು ಶ್ರವಣಾದಿಸಾಧನಗಳ ಐಹಿಕವಾದ ಫಲ. ಆದರೆ ಕರ್ಮವು ಪ್ರತಿಬಂಧಕವಾದರೆ ಅಪರೋಕ್ಷಾತ್ಮಕ ಫಲವು ಉತ್ಪತ್ತಿಯಾಗುವುದಿಲ್ಲ. ಅದನ್ನು ಕಾಠಕದಲ್ಲಿ ಹೇಳಲಾಗಿದೆ—

ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ
ಶೃಣ್ವಂತೋಽಪಿ ಬಹವೋ ಯನ್ನ ವಿದ್ಯುಃ ॥

ವಾಮದೇವ ಋಷಿ ಗರ್ಭದಲ್ಲಿದ್ದಾಗಲೇ ಬ್ರಹ್ಮಜ್ಞಾನವನ್ನು ಗಳಿಸಿದ ಎಂದಿದೆ. ಹೀಗೆ ಕೆಲವೊಮ್ಮೆ ಜನ್ಮಾಂತರದಲ್ಲಿ ಜ್ಞಾನಪ್ರಾಪ್ತಿಯಾಗುವುದೂ ಇದೆ.

ಇಲ್ಲಿಗೆ ಐಹಿಕಾಧಿಕರಣವು ಮುಗಿಯಿತು.

## ೧೧. ಮುಕ್ತಿಫಲಾಧಿಕರಣಮ್

**॥ ಓಂ ಏವಂ ಮುಕ್ತಿಫಲಾನಿಯಮಸ್ತದವಸ್ಥಾವಧೃತೇ-ಸ್ತದವಸ್ಥಾವಧೃತೇಃ ಓಂ ॥ ೫೧ ॥**

ಏವಮೇವ ಪ್ರಾರಬ್ಧಕರ್ಮಾಭಾವೇ ಶರೀರಪಾತಾನಂತರಮೇವ ಮೋಕ್ಷಃ ; ತದ್ಭಾವೇ ಜನ್ಮಾಂತರಾಣೇತ್ಯನಿಯಮಃ ।

'ಧರ್ಮೀ ಸ್ವರ್ಗಂ ವಿಧರ್ಮೀ ನಿರಯಮೇತ್ಯೇವ ಬ್ರಹ್ಮಸಂಸ್ಥೋಽಮೃತಮೇತ್ಯೇವ ಬ್ರಹ್ಮಸಂಸ್ಥೋಽಮೃತಮ್' (ಮೇತ್ಯೇವ) ಇತಿ ಬ್ರಹ್ಮಸಂಸ್ಥಸ್ಯ ಮೋಕ್ಷಸ್ಯೈವಾವಧಾರಣಾತ್ ।

'ವಿದ್ವಾನಮೃತಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।
ಅವಸನ್ನಂ ಯದಾರಬ್ಧಂ ಕರ್ಮ ತತ್ರೈವ ಗಚ್ಛತಿ ।
ನ ಚೇದ್ ಬಹೂನಿ ಜನ್ಮಾನಿ ಪ್ರಾಪ್ಯೈವಾಂತೇ ನ ಸಂಶಯಃ ॥'
ಇತಿ ಚ ನಾರಾಯಣಾಧ್ಯಾತ್ಮೇ ।

ಹೇಗೆ ಶ್ರವಣಫಲವಾದ ಜ್ಞಾನದಲ್ಲಿ ನಿಯಮವಿಲ್ಲವೋ ಅದರಂತೆ ಅಪರೋಕ್ಷ ಫಲವಾದ ಮೋಕ್ಷವೂ ಪ್ರಾರಬ್ಧಕರ್ಮ ಇಲ್ಲದಿದ್ದರೆ ಆ ಶರೀರಪಾತವಾದ ಕೂಡಲೇ ಆಗುತ್ತದೆ. ಪ್ರಾರಬ್ಧಕರ್ಮವಿದ್ದರೆ ಅನೇಕ ಜನ್ಮಗಳು ಬರಬಹುದು. ಆದ್ದರಿಂದ ಅಪರೋಕ್ಷಜ್ಞಾನ ಬಂದ ಶರೀರದ ಪಾತವಾದ ಕೂಡಲೇ ಮೋಕ್ಷನಿಯಮವಿಲ್ಲ. ''ಧಾರ್ಮಿಕನಾದರೆ ಸ್ವರ್ಗಕ್ಕೇ, ಅಧಾರ್ಮಿಕನಾದರೆ ನರಕಕ್ಕೇ ಹೋಗುತ್ತಾನೆ. ಅದರಂತೆ ಬ್ರಹ್ಮಜ್ಞಾನಿಯು ಅಮೃತತ್ವವನ್ನು ಪಡೆದೇ ಪಡೆಯುತ್ತಾನೆ'' ಹೀಗೆ ಶ್ರುತಿಯಲ್ಲಿ

ಬ್ರಹ್ಮಜ್ಞಾನಿಗೆ ಮೋಕ್ಷವಾಗುತ್ತದೆ ಎಂದಿಷ್ಟೇ ನಿರ್ಬಂಧಿಸಲಾಗಿದೆ. ಆ ದೇಹಪಾತಾನಂತರವೇ, ಎಂಬ ನಿರ್ಬಂಧ ಇಲ್ಲ. ನಾರಾಯಣಾಧ್ಯಾತ್ಮದಲ್ಲಿ ಹೀಗಿದೆ—

ಜ್ಞಾನಿಯು ಮೋಕ್ಷವನ್ನು ಹೊಂದುತ್ತಾನೆ ಎಂಬ ವಿಷಯದಲ್ಲಿ ವಿಚಾರವೇ ಇಲ್ಲ. ಆದರೆ, ಪ್ರಾರಬ್ಧಕರ್ಮವು ಅದೇ ದೇಹದಲ್ಲಿ ತೀರಿದರೆ ಆ ದೇಹಪಾತವಾದ ಕೂಡಲೇ ಮೋಕ್ಷವಾಗುತ್ತದೆ. ಇಲ್ಲವಾದರೆ ಪ್ರಾರಬ್ಧ ಫಲವಾದ ಅನೇಕ ಜನ್ಮಗಳನ್ನು ತಾಳಿ ಕೊನೆಗೆ ಮೋಕ್ಷವಾಗುತ್ತದೆ. ಇದರಲ್ಲಿ ಸಂದೇಹ ಬೇಡ.

**ವಿವರಣೆ—** ಶ್ರವಣಫಲದಲ್ಲೂ ಅನಿಯಮ, ಜ್ಞಾನಫಲದಲ್ಲೂ ಅನಿಯಮ ಇದೆ. ಶ್ರವಣ ಮಾಡಿದ ದೇಹದಲ್ಲೇ ಅಪರೋಕ್ಷ ಎಂಬ ನಿಯಮವಿಲ್ಲ. ಅಪರೋಕ್ಷವಾದ ದೇಹಪಾತವಾದ ಕೂಡಲೇ ಮೋಕ್ಷ ಎಂಬ ನಿಯಮವೂ ಇಲ್ಲ. ಆದರೆ, ಶ್ರವಣಾದಿಗಳನ್ನು ಮಾಡಿದರೆ ಅಪರೋಕ್ಷ ನಿಯಮವಿದೆ, ಅಪರೋಕ್ಷವಾದ ಮೇಲೆ ಮೋಕ್ಷದ ನಿಯಮವೂ ಇದೆ.

ಮೋಕ್ಷಸ್ಥಾನಪ್ರಾಪ್ತಿ ಬ್ರಹ್ಮಕಲ್ಪಾವಸಾನದಲ್ಲಿ. ಆದರೆ, ಪ್ರಾರಬ್ಧಪ್ರತಿಬಂಧ ವಿಲ್ಲದಿದ್ದಾಗ ಅಪರೋಕ್ಷವಾದ ದೇಹಪಾತ ಸಮನಂತರದಲ್ಲಿ ಸರ್ವಥಾ ದುಃಖಾಭಾವ, ಬಹುತರವಾದ ಸುಖಾಭಿವ್ಯಕ್ತಿಯಾಗುತ್ತದೆ. ಲಿಂಗದೇಹಭಂಗವಾಗುವುದು ಮಾತ್ರ ಕಲ್ಪಾವಸಾನದಲ್ಲಿ ವಿರಜಾಸ್ನಾನದಿಂದ.

ಗುರ್ವರ್ಥದೀಪಿಕಾದಲ್ಲಿ ದೇಹಪಾತಸಮನಂತರದ ಮೋಕ್ಷವನ್ನು ಹೀಗೆ ನಿರೂಪಿಸಲಾಗಿದೆ—ಅಲ್ಪಾಧಿಕಾರಿಗಳಾದ ಮನುಷ್ಯರಿಗೆ ಚತುರ್ಮುಖಬ್ರಹ್ಮದೇವರ ಚರಮದಿನಾವಸಾನದಲ್ಲಿ ಅದೇ ಜನ್ಮದಲ್ಲಿ ಅಪರೋಕ್ಷ, ತತ್ಪಾತಾನಂತರ ಬ್ರಹ್ಮದೇವ ರೊಂದಿಗೆ ಮೋಕ್ಷ. ''ತದ್ದೇಹಪಾತಾನಂತರಮೇವ ಲಿಂಗದೇಹಭಂಗಃ, ನ ಪುನಃ ಮಧ್ಯೇ ಜನ್ಮಾಂತರಾಪೇಕ್ಷಾ ಇತಿ ಭಾವೇನೋಕ್ತಮ್–ಪ್ರಾರಬ್ಧಕರ್ಮಾಭಾವೇ ಇತಿ ॥

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಓಂ ಏವಂ ಮುಕ್ತಿಫಲಾನಿಯಮಸ್ತದವಸ್ಥಾವಧೃತೇಸ್ತದವಸ್ಥಾವಧೃತೇಃ ಓಂ ॥** (ಅತ್ರ ಜ್ಞಾನಸ್ಯ ಸ್ವೋತ್ಪತ್ತಿಜನ್ಮಾನಂತರಮೇವ ಅಪ್ರತಿಬಂಧೇ ಮುಕ್ತ್ಯಜನಕತ್ವಂ ಸಾಧ್ಯತೇ । ಏವಂ=ಜ್ಞಾನೇ ಇವ, ಮುಕ್ತಿಫಲೇ ಅನಿಯಮಃ=ಅಪ್ರತಿಬಂಧೇ ತದ್ದೇಹಾನಂತರಮೇವ, ನೋ ಚೇತ್ ದೇಹಾಂತರಾವಸಾನೇ, ಇತ್ಯೇವ, ನತು ಜ್ಞಾನೋತ್ಪತ್ತ್ಯನಂತರಮೇವೇತಿ ನಿಯಮ ಇತ್ಯರ್ಥಃ । ಜ್ಞಾನೋತ್ಪತ್ತಿಜನ್ಮನಿ

ಮುಕ್ತ್ಯಭಾವೇ ಕದಾಪಿ ನೇತಿ ಕುತೋ ನ ಕಲ್ಪ್ಯತೇ, ಪ್ರತಿಬಂಧಕಲ್ಪನಾ ಕುತಃ? ತದವಸ್ಥಾವಧೃತೇಃ। ತಸ್ಮಿನ್=ಬ್ರಹ್ಮಣಿ ಅವಸ್ಥಿತಿಃ ಯಸ್ಯ ತಸ್ಯ ಬ್ರಹ್ಮಸಂಸ್ಥಸ್ಯ ಮುಕ್ತಿಫಲಾವಧಾರಣಾತ್। ''ಬ್ರಹ್ಮಸಂಸ್ಥೋ ಅಮೃತತ್ವಮೇತ್ಯೇವ'' ಇತಿ ಶ್ರುತೌ ಇತ್ಯರ್ಥಃ।)

ಈ ಅಧಿಕರಣದಲ್ಲಿ ಪ್ರತಿಬಂಧಕವಿಲ್ಲದಿದ್ದಾಗ ಜ್ಞಾನದಿಂದ ಆ ದೇಹಪಾತವಾದ ಕೂಡಲೇ ಮುಕ್ತಿಜನಕತ್ವವನ್ನು ಸಾಧಿಸಲಾಗಿದೆ. ಏವಂ=ಜ್ಞಾನದಲ್ಲಿ ಹೇಗೋ ಹಾಗೆ, ಮುಕ್ತಿಫಲಾನಿಯಮಃ, ಮುಕ್ತಿಫಲೇ=ಮೋಕ್ಷರೂಪಫಲದಲ್ಲಿ ಅನಿಯಮಃ= ಪ್ರತಿಬಂಧಕ ಇಲ್ಲದೆ ಇದ್ದರೆ ಆ ದೇಹಪಾತವಾದ ಕೂಡಲೇ, ಪ್ರತಿಬಂಧಕವಿದ್ದರೆ ದೇಹಾಂತವರಾವಸಾನದಲ್ಲಿ ಎಂಬ ಅನಿಯಮ ಇರುತ್ತದೆ. ಹೊರತು, ಜ್ಞಾನೋತ್ಪತ್ತಿ ಜನ್ಮ ಮುಗಿದ ಕೂಡಲೇ ಮೋಕ್ಷವೆಂಬ ನಿಯಮವಿಲ್ಲ, ಪ್ರತಿಬಂಧಕವಿಲ್ಲದಾಗ, ಎಂಬ ನಿರ್ಬಂಧ ಏಕೆ? ಜ್ಞಾನೋತ್ಪತ್ತಿಯಾದ ಜನ್ಮದಲ್ಲಿ ಮೋಕ್ಷವಾಗದಿದ್ದರೆ ಮುಂದೆ ಮೋಕ್ಷವೇ ಇಲ್ಲ, ಎಂದೇಕೆ ಕಲ್ಪಿಸಬಾರದು? ತದವಸ್ಥಾವಧೃತೇಃ, ತಸ್ಮಿನ್=ಬ್ರಹ್ಮನಲ್ಲಿ ಅವಸ್ಥಾ=ಸ್ಥಿತಿ ಯಾರಿಗಿದೆಯೋ ಅವನಿಗೆ ಅರ್ಥಾತ್ ಬ್ರಹ್ಮಜ್ಞಾನಿಗೆ ಅವಧೃತೇಃ=ಮೋಕ್ಷರೂಪಫಲವನ್ನು ಶ್ರುತಿಯಲ್ಲಿ ನಿರ್ಧಾರ ಮಾಡಿರುವುದರಿಂದ. ಅಂತಹ ಶ್ರುತಿ–''ಬ್ರಹ್ಮಸಂಸ್ಥೋ ಅಮೃತತ್ವಮೇತ್ಯೇವಃ''.

## ಶಾಂಕರಭಾಷ್ಯದಲ್ಲಿ ಮುಕ್ತಿಫಲಾನಿಯಮಾಧಿಕರಣ

ಏವಂ=ಶ್ರವಣಾದಿಗಳ ಫಲವಾದ ಜ್ಞಾನದಲ್ಲಿ ಹೇಗೆ ಐಹಿಕ–ಆಮುಷ್ಮಿಕ ಎಂಬ ವ್ಯತ್ಯಾಸವಿದೆಯೋ ಅದರಂತೆ ಮುಕ್ತಿಫಲಾನಿಯಮಃ=ಮೋಕ್ಷರೂಪಫಲದಲ್ಲಿ ಉತ್ಕರ್ಷಾಪಕರ್ಷ ಎಂಬ ನಿಯಮವಿಲ್ಲ, ಏಕೆಂದರೆ, ತದವಸ್ಥಾವಧೃತೇಃ= ಏಕರೂಪತ್ವವನ್ನು ನಿರ್ಧರಿಸುವುದರಿಂದ. ಮೋಕ್ಷವೆಂದರೆ ಬ್ರಹ್ಮಭಾವ. ಬ್ರಹ್ಮನಲ್ಲಿ ವಿಶೇಷವಿಲ್ಲವಾದ ಕಾರಣ ತದ್ಭಾವಾಪತ್ತಿಯಲ್ಲೂ ವ್ಯತ್ಯಾಸಗಳಿಲ್ಲ.

**ವಿಮರ್ಶೆ—** ಮೋಕ್ಷಕ್ಕೆ ಸಾಧನ ಬ್ರಹ್ಮಜ್ಞಾನ. ಅದು ಐಹಿಕವಾಗಿರಬಹುದು, ಆಮುಷ್ಮಿಕವಾಗಿರಬಹುದು. ಮೋಕ್ಷವೂ ಇದೇರೀತಿ–ತದ್ದೇಹಪಾತವಾದ ಕೂಡಲೇ ಆಗಬಹುದು, ದೇಹಾಂತರ ಬಂದು ಅದರ ಪಾತಾನಂತರವೂ ಆಗಬಹುದು. ಈ ಅಂಶದಲ್ಲಿ ಶ್ರವಣಾದಿಫಲ ಮತ್ತು ಜ್ಞಾನಫಲದಲ್ಲಿ ಸಾಮ್ಯವಿದೆ. ಇನ್ನು ಮೋಕ್ಷದಲ್ಲಿ ತಾರತಮ್ಯದ ಸಂದೇಹಕ್ಕೆ ಕಾರಣವಿಲ್ಲ, ಏಕೆಂದರೆ, ಹಿಂದಿನ ಸೂತ್ರದಲ್ಲಿ

ಮೋಕ್ಷಸಾಧನವಾದ ಜ್ಞಾನದಲ್ಲಿ ತಾರತಮ್ಯವು ಪ್ರಸ್ತುವಾಗಿಲ್ಲ. ಆದ್ದರಿಂದ ಆ ಪೂರ್ವಪಕ್ಷಕ್ಕೆ ಆಸ್ಪದವೇ ಇಲ್ಲ.

ರಾಮಾನುಜಭಾಷ್ಯದಲ್ಲಿ ಈ ಸೂತ್ರದ ಅರ್ಥ ಸ್ವಲ್ಪ ಭಿನ್ನವಾಗಿದೆ—ಹೇಗೆ ಜ್ಞಾನದಲ್ಲಿ ಕಾಲದ ನಿಯಮವು ಇಲ್ಲವೋ ಅದರಂತೆ ಜ್ಞಾನಫಲವಾದ ಮೋಕ್ಷದಲ್ಲೂ ಕಾಲದ ನಿಯಮವಿಲ್ಲ, ಎಂದು ಅಲ್ಲಿ ಹೇಳಿದ ಸೂತ್ರದ ಅರ್ಥ.

**ಇಲ್ಲಿಗೆ ಮೂರನೆಯ ಅಧ್ಯಾಯದ ನಾಲ್ಕನೆಯ ಪಾದ ಮುಗಿಯಿತು.**

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ

# ಬ್ರಹ್ಮಸೂತ್ರಭಾಷ್ಯಮ್

## ನಾಲ್ಕನೆಯ ಅಧ್ಯಾಯದ ಮೊದಲನೆಯ ಪಾದ

॥ ಹರಿಃ ಓಂ ॥

## ೧. ಆವೃತ್ತ್ಯಧಿಕರಣಮ್

**ಫಲಂ ನಿಗದ್ಯತೇऽಸ್ಮಿನ್ನಧ್ಯಾಯೇ । ಕರ್ಮನಾಶಾಖ್ಯಂ ಫಲಮಸ್ಮಿನ್ ಪಾದೇ । ನಿತ್ಯಶಃ ಕಾರ್ಯಂ ಸರ್ವಥಾ ಭಾವ್ಯಂ ಸಾಧನಂ ಪ್ರಥಮತ ಉಚ್ಯತೇ । ಪ್ರಾಯಿಕತ್ವಾಚ್ಚಾऽಧ್ಯಾಯಾನಾಂ ಪಾದಾನಾಂ ಚ ನ ವಿರೋಧಃ ।**

**॥ ಓಂ ಆವೃತ್ತಿರಸಕೃದುಪದೇಶಾತ್ ಓಂ ॥ ೧ ॥**

**'ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' (ಬೃ.ಉ. 4.4.5) ಇತ್ಯಾದೀನಾಂ ನಾಗ್ನಿಷ್ಟೋಮಾದಿವದೇಕವಾರೇಣೈವ ಫಲಪ್ರಾಪ್ತಿಃ । ಕಿಂತು ? ಆವೃತ್ತಿಃ ಕರ್ತವ್ಯಾ । 'ಸ ಯ ಏಷೋऽಣಿಮಾ ಐತದಾತ್ಮ್ಯಮಿದಂ ಸರ್ವಮ್' (ಛಾಂ.ಉ.6.8.7) ಇತ್ಯಾದ್ಯಸಕೃದುಪದೇಶಾತ್ ॥**

ಈ ಅಧ್ಯಾಯದಲ್ಲಿ ಉಪಾಸನೆಯ ಫಲವನ್ನು ಹೇಳಲಾಗಿದೆ. ಅನೇಕರೂಪವಾದ ಫಲಗಳಲ್ಲಿ ಕರ್ಮನಾಶರೂಪವಾದ ಫಲವನ್ನು ಈ ಪಾದದಲ್ಲಿ ಹೇಳಲಾಗಿದೆ. ಮೊದಲು ಸರ್ವಕಾಲಗಳಲ್ಲೂ, ಸರ್ವಾವಸ್ಥೆಗಳಲ್ಲೂ ಅವಶ್ಯವಾಗಿ ಮಾಡಲೇಬೇಕಾದ ಸಾಧನೆಯನ್ನು ಹೇಳಲಾಗಿದೆ. ಆದರೂ ಅಸಾಂಗತ್ಯವಿಲ್ಲ. ಏಕೆಂದರೆ, ಅಧ್ಯಾಯ ಮತ್ತು ಪಾದಗಳ ವ್ಯವಸ್ಥೆ ಪ್ರಾಯಿಕ ಎಂದರೆ, ಪ್ರಧಾನವಾಗಿ ಹೇಳುವ ವಿಷಯಕ್ಕೆ ಅನುಗುಣವಾಗಿ ಇದೆ.

'ಆತ್ಮಾ ವಾರೇ...' ಇತ್ಯಾದಿಯಾಗಿ ಹೇಳಿರುವ ಶ್ರವಣಾದಿಗಳನ್ನು ಅಗ್ನಿಷ್ಟೋಮಾದಿಗಳನ್ನು ಮಾಡಿದಂತೆ ಒಮ್ಮೆ ಮಾಡಿದರೆ ಫಲಪ್ರಾಪ್ತಿಯಾಗುವುದಿಲ್ಲ. ಹೊರತು, ಮತ್ತೆ ಮತ್ತೆ ಮಾಡುತ್ತಲೇ ಇರಬೇಕು. ಛಾಂದೋಗ್ಯದಲ್ಲಿ 'ಸ ಯ ಏಷೋऽಣಿಮಾ' ಎಂದು ಉದ್ದಾಲಕರು ಶ್ವೇತಕೇತುವಿಗೆ ಒಂಭತ್ತು ಬಾರಿ ಉಪದೇಶಿಸಿದ್ದಾರೆ, ಆದುದರಿಂದ.

**ವಿವರಣೆ**—ಬ್ರಹ್ಮಸೂತ್ರದ ನಾಲ್ಕನೆಯ ಅಧ್ಯಾಯ ಫಲಾಧ್ಯಾಯ. ಫಲ ಎಂದರೆ ಮೋಕ್ಷ. ಅದು ನಾಲ್ಕು ಬಗೆಯದು. (1) ಕರ್ಮಮೋಕ್ಷ (ಕರ್ಮಕ್ಷಯ). ಅಂದರೆ ಸಂಚಿತವಾದ ಅನಿಷ್ಟಪುಣ್ಯ ಮತ್ತು ಪಾಪಗಳ ಕ್ಷಯ. ಇದರಿಂದ ಜ್ಞಾನಿಗಳಿಗೆ ಕರ್ಮನಿಮಿತ್ತವಾದ ದುಃಖವು ಆಗುವುದಿಲ್ಲ. ಈ ಅವಸ್ಥೆಯನ್ನೇ ಜೀವನ್ಮುಕ್ತಿ ಎನ್ನಲಾಗುವುದು. (2) ಎರಡನೆಯದು ಜ್ಞಾನಿಯ ಇಚ್ಛಾನುಸಾರವಾಗಿ ಶರೀರಮೋಕ್ಷ. ಪ್ರಾರಬ್ಧಕರ್ಮದಿಂದ ಶರೀರವನ್ನು ಪ್ರಾರಬ್ಧಾವಸಾನದಲ್ಲಿ ಯೋಗಿಯು ತ್ಯಜಿಸುತ್ತಾನೆ. (3) ಮೂರನೆಯದು ಉತ್ಕ್ರಾಂತಿ. ಚರಮಶರೀರವನ್ನು ತ್ಯಜಿಸಿದ ಜ್ಞಾನಿಯು ಅರ್ಚಿರಾದಿ ಮಾರ್ಗದೇವತೆಗಳ ಸ್ಥಾನವನ್ನು ಹೊಂದಿ ಸತ್ಯಲೋಕಪರ್ಯಂತ ಮೇಲಕ್ಕೆ ಹೋಗುವುದು. ಕೆಲವು ಮುಕ್ತರಿಗೆ ಭೂಲೋಕದಲ್ಲೇ ಅಂತಿಮ ಸ್ಥಿತಿಯಾದರೂ ಅವರೂ ಶ್ವೇತದ್ವೀಪಪರ್ಯಂತವಾಗಿ ಹೋಗಿ ಬ್ರಹ್ಮದರ್ಶನವನ್ನು ಪಡೆಯಲೇಬೇಕು. (4) ನಾಲ್ಕನೆಯದು ಲಿಂಗದೇಹಮೋಕ್ಷ. ಅದರಿಂದ ಸರ್ವದುಃಖನಾಶವೂ ತೃಪ್ತಿಯಾಗುವ ಸ್ವರೂಪಸುಖಾನುಭವೂ ಆಗುವುದು.

ಹೀಗೆ ಈ ನಾಲ್ಕುವಿಧದ ಮೋಕ್ಷಗಳನ್ನು ಈ ಅಧ್ಯಾಯದ ನಾಲ್ಕುಪಾದಗಳಲ್ಲಿ ಹೇಳಲಾಗಿದೆ. ಅದರಿಂದ ಈ ನಾಲ್ಕು ಪಾದಗಳಿಗೆ ಪರ್ಯಾಯವಾಗಿ ಕರ್ಮಕ್ಷಯಪಾದ, ಉತ್ಕ್ರಾಂತಿಪಾದ, ಮಾರ್ಗಪಾದ, ಭೋಗಪಾದ, ಎಂದು ಹೆಸರು.

ಈ ಪ್ರಥಮಪಾದದಲ್ಲಿ ಕರ್ಮಕ್ಷಯವು ಮುಖ್ಯವಿಷಯವಾದರೂ ಅದನ್ನು ಎಂಟನೆಯ ಅಧಿಕರಣದಲ್ಲಿ ಹೇಳಲಾಗಿದೆ. ಪ್ರಥಮಾಧಿಕರಣದಲ್ಲಿ ಪ್ರಾಸಂಗಿಕವಾಗಿ, ಶ್ರವಣ–ಮನನ–ಧ್ಯಾನಗಳನ್ನು ಸರ್ವದಾ ಮತ್ತು ಸರ್ವಥಾ ಮಾಡುತ್ತಿರಬೇಕು, ಎಂದು ಹೇಳಲಾಗಿದೆ. ಸರ್ವಥಾ ಎಂದರೆ, ಜ್ವರಾದಿ ಅನೇಕ ವಿಘ್ನಗಳು ಬಂದರೂ ಮಾಡಬೇಕು, ಎಂದರ್ಥ.

ಶಾಸ್ತ್ರಶ್ರವಣಾದಿಗಳನ್ನು ಒಮ್ಮೆ ಮಾಡಿದರೆ ಸಾಕು. ಅದರಿಂದ ಬ್ರಹ್ಮದರ್ಶನವಾಗಿ ಮೋಕ್ಷವಾಗುತ್ತದೆ. ಜ್ಯೋತಿಷ್ಟೋಮಯಾಗವನ್ನು ಒಂದುಬಾರಿ ಮಾಡಿದರೂ ಸ್ವರ್ಗಪ್ರಾಪ್ತಿಯಾಗುವಂತೆ, ಎಂದು ಪೂರ್ವಪಕ್ಷ. ಒಂದುಬಾರಿ ಮಾಡಿದರೆ ಸಾಲದು. ಸಸ್ಯಗಳಿಗೆ ನೀರುಹಾಕುವಂತೆ ಮತ್ತೆ ಮತ್ತೆ ಮಾಡುತ್ತಿರಬೇಕು ಎಂದು ಸಿದ್ಧಾಂತ. ಅದಕ್ಕೆ 'ಅಸಕೃದ್ ಉಪದೇಶಾತ್' ಎಂದು ಕಾರಣವನ್ನು ಕೊಡಲಾಗಿದೆ. ಉದ್ದಾಲಕರು ಶ್ವೇತಕೇತುವಿಗೆ ಒಂಭತ್ತುಸಲ ಉಪದೇಶ ಮಾಡಿದ್ದಾರೆ. ಅಂದರೆ ಶ್ವೇತಕೇತು ಅನೇಕಬಾರಿ ಶ್ರವಣ ಮಾಡಿದ್ದಾನೆ, ಎಂದು.

**ಶ್ರುತ್ಯರ್ಥ**—ಏಷಃ=ಈ ಪರಮಾತ್ಮನು ಸಃ=ಸಾರರೂಪನು, ಅಣಿಮಾ= ಅತಿಸೂಕ್ಷ್ಮನು. ಇದಂ ಸರ್ವಂ=ಈ ಎಲ್ಲ ಪ್ರಪಂಚವೂ ಐತದಾತ್ಮ್ಯಂ= ಈಶಸ್ವಾಮಿಕವಾದುದು. ಅಂದರೆ ಈಶಾಧೀನವಾದುದು. ಸತ್ಯಂ=ಪರಮಾನಂದಾತ್ಮಕ ವಾದುದು ಆತ್ಮಾ=ಪೂರ್ಣಗುಣವಾದುದು. ಆದ್ದರಿಂದ ನೀನು ಅತತ್ವಮಸಿ=ಅಂತಹ ಆತ್ಮನಲ್ಲ. ''ಸ ಯ ಏಷೋಽಣಿಮಾ, ಐತದಾತ್ಮ್ಯಮಿದಂ ಸರ್ವಂ, ತದೇತತ್ ಸತ್ಯಂ, ಸ ಆತ್ಮಾತತ್ ತ್ವಮಸಿ ಶ್ವೇತಕೇತೋ'' (ಛಾಂ.) ಎಂದು ಉಪನಿಷತ್ತಿನ ಪೂರ್ಣಪಾಠ.

ಸಾಮಸಂಹಿತೆಯಲ್ಲಿ ಈ ಶ್ರುತಿಯ ಅರ್ಥವನ್ನು ಹೀಗೆಯೇ ಹೇಳಲಾಗಿದೆ—

ಯೋಽಸೌ ನಿಯಮನಾದ್ ವಿಷ್ಣುಃ ಸಾರತ್ವಾತ್ ಸ ಇತಿ ಸ್ಮೃತಃ ।
ಅಣಿಮಾ ಸೂಕ್ಷ್ಮತೋ ಗಮ್ಯ ಐತದಾತ್ಮ್ಯಂ ಚ ತದ್ವಶಮ್ ॥
ಪರಾನಂದತ್ವತಃ ಸತ್ಯ(ಮ್) ಆತ್ಮಾ ಪೂರ್ಣಗುಣತ್ವತಃ ।
ಸತ್ಯತೋ ನಾಸಿ ತತ್ ತ್ವಂ ಹಿ ಮಾ ಭೂತ್ ತೇ ಸ್ತಬ್ಧತಾ ತತಃ ॥

## ॥ ಓಂ ಲಿಂಗಾಚ್ಚ ಓಂ ॥ ೨ ॥

**'ಸ ತಪೋಽತಪ್ಯತ.......ಪುನರೇವ ವರುಣಂ ಪಿತರಮುಪಸಸಾರ' (ತೈ.ಉ. 3.1.2) ಇತ್ಯಾದ್ಯಾವರ್ತನಲಿಂಗಾಚ್ಚ ।**

**'ನಿತ್ಯಶಃ ಶ್ರವಣಂ ಚೈವ ಮನನಂ ಧ್ಯಾನಮೇವ ಚ ।**
**ಕರ್ತವ್ಯಮೇವ ಪುರುಷೈರ್ಬ್ರಹ್ಮದರ್ಶನಮಿಚ್ಛುಭಿಃ ॥'**

**ಇತಿ ಹಿ ಬೃಹತ್ತಂತ್ರೇ ॥**

''ಸ ತಪೋಽತಪ್ಯತ=ಭೃಗು ತಪಸ್ಸು ಮಾಡಿ ಅನ್ನಮಯರೂಪದ ಸಾಕ್ಷಾತ್ಕಾರ ಪಡೆದ. ಪುನರೇವ=ಮತ್ತೆ ಪಿತರಂ ವರುಣಂ=ತಂದೆಯಾದ ವರುಣನ ಬಳಿ ಬಂದು ಉಪಸಾರ=ಉಪಸತ್ತಿ ಮಾಡಿದ. ಹೀಗೆ ಮತ್ತೆ ಮತ್ತೆ ಶ್ರವಣಾದಿಸಾಧನೆಗಳ ಪುನರಾವೃತ್ತಿಗೆ ಇದು ಸೂಚಕವಾಗಿದೆ. ಬೃಹತ್ತಂತ್ರದಲ್ಲಿ ಹೀಗಿದೆ— ಬ್ರಹ್ಮದರ್ಶನವನ್ನು ಬಯಸುವವರು ಪ್ರತಿನಿತ್ಯವೂ ಶ್ರವಣವನ್ನೂ ಮನನ-ಧ್ಯಾನಗಳನ್ನೂ ಮಾಡಬೇಕು.

**ವಿವರಣೆ**—''ಉಪದೇಶಾತ್'' ಎಂದು ಹಿಂದಿನ ಸೂತ್ರದಲ್ಲಿ ಹೇಳಿದ ಹೇತು ಗುರುಗಳ ವ್ಯಾಪಾರ. ಇಲ್ಲಿ ಹೇಳಿರುವ ಲಿಂಗ ಶಿಷ್ಯವ್ಯಾಪಾರ. ಮಗನಾದ ಭೃಗು ತಂದೆ

ವರುಣದೇವನಿಂದ ಬ್ರಹ್ಮನ ರೂಪವಿಶೇಷದ ಶ್ರವಣ ಮಾಡಿ, ಧ್ಯಾನದಿಂದ ಪ್ರತ್ಯಕ್ಷ ಮಾಡಿಕೊಂಡು ತಿರುಗಿ ತಂದೆಯ ಬಳಿಗೆ ಬಂದು ಮತ್ತೊಂದು ರೂಪದ ಶ್ರವಣ ಮಾಡಿ ಉಪಾಸನೆ ಮಾಡಿದ ಕ್ರಮವನ್ನು ಭೃಗುವಲ್ಲಿಯಲ್ಲಿ ಹೇಳಲಾಗಿದೆ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ಆವೃತ್ತಿರಸಕೃದುಪದೇಶಾತ್ ಓಂ ॥** (ಅತ್ರ ಶ್ರವಣಾದೇಃ ಆವೃತ್ತಿಃ ಕಾರ್ಯಾ ಇತಿ ಸಾಧ್ಯತೇ । ಜ್ಞಾನಾರ್ಥಂ ಶ್ರವಣಾದೇರಾವೃತ್ತಿಃ ಕಾರ್ಯೇತಿ ಶೇಷಃ । ಕುತಃ? 'ಸ ಆತ್ಮಾತತ್ ತ್ವಮಸಿ' ಇತಿ ಉದ್ದಾಲಕೇನ ಶ್ವೇತಕೇತುಂ ಪ್ರತಿ ಅಸಕೃತ್= ಅನೇಕವಾರಂ ತತ್ತ್ವೋಪದೇಶಾತ್ ಇತ್ಯರ್ಥಃ ।)

ಈ ಅಧಿಕರಣದಲ್ಲಿ ಶ್ರವಣ ಮನನ ಧ್ಯಾನಗಳನ್ನು ಮತ್ತೆಮತ್ತೆ ಮಾಡಬೇಕೆಂದು ಸಾಧಿಸಲಾಗಿದೆ. ಉದ್ದಾಲಕರು ಶ್ವೇತಕೇತುವಿಗೆ ಅಸಕೃತ್=ಅನೇಕ ಬಾರಿ ಉಪದೇಶಾತ್ =ಅತತ್ ತ್ವಮಸಿ ಎಂದು ಉಪದೇಶ ಮಾಡಿರುವುದರಿಂದಾಗಿ ಅಪರೋಕ್ಷವಾಗ ಬೇಕಾದರೆ ಶ್ರವಣಾದಿಗಳ ಆವೃತ್ತಿಃ=ಮತ್ತೆ ಮತ್ತೆ ಆವೃತ್ತಿಯು ಮಾಡಲ್ಪಡಬೇಕು.

**॥ ಓಂ ಲಿಂಗಾಚ್ಚ ಓಂ ॥** ('ಸ ತಪೋಽತಪ್ಯತ । ಪುನರೇವ ವರುಣಂ ಪಿತರಮುಪಸಸಾರ ।' ಇತ್ಯಾದಿನಾ ಶ್ರುತಾತ್ ಭೃಗೋಃ ಶ್ರವಣಾದೇಃ ಆವರ್ತನರೂಪಲಿಂಗಾಚ್ಚ ಶ್ರವಣಾದೀನಾಮ್ ಆವೃತ್ತಿಃ ಕಾರ್ಯಾ, ಇತ್ಯರ್ಥಃ ।)

ಉಪನಿಷತ್ತಿನಲ್ಲಿ ಭೃಗು ಋಷಿಯು ತನ್ನ ತಂದೆಯಾದ ವರುಣನಲ್ಲಿ ಮತ್ತೆ ಮತ್ತೆ ಶ್ರವಣ ಮಾಡಿದ ಎಂದು ಹೇಳಲಾಗಿದೆ. ಲಿಂಗಾತ್=ಈ ಕಾರಣದಿಂದಾಗಿಯೂ ಶ್ರವಣಾದಿಗಳ ಆವೃತ್ತಿಯನ್ನು ಮಾಡಬೇಕು.

## ಶಾಂಕರಭಾಷ್ಯದಲ್ಲಿ ಆವೃತ್ತ್ಯಧಿಕರಣ

**॥ ಆವೃತ್ತಿರಸಕೃದುಪದೇಶಾತ್ ॥** ಈ ಅಧ್ಯಾಯದಲ್ಲಿ ಪರಾಪರವಿದ್ಯಾಫಲ ವನ್ನು ವಿಚಾರಮಾಡಲಾಗಿದೆ. ಪ್ರಸಂಗಾತ್ ಇತರ ವಿಷಯಗಳನ್ನೂ ವಿಚಾರ ಮಾಡಲಾಗಿದೆ. ಈ ಅಧಿಕರಣದಲ್ಲಿ ಶ್ರವಣಾದಿಸಾಧನಗಳನ್ನು ಅನೇಕಬಾರಿ ಮಾಡಬೇಕು, ಎಂದು ಸಿದ್ಧಾಂತ ಮಾಡಲಾಗಿದೆ. ಶ್ರವಣಾದಿಗಳ ಫಲ ಮೋಕ್ಷ. ಅದು ಅದೃಷ್ಟಫಲ. ಅದೃಷ್ಟಫಲಕ ಸಾಧನಗಳನ್ನು 'ಪ್ರಯಾಜಾದಿ'ಗಳಂತೆ ಒಮ್ಮೆ ಮಾಡಿದರೆ ಸಾಕು. ಆದರೆ, ಶ್ರವಣಾದಿಗಳ ಫಲ ಬ್ರಹ್ಮಸಾಕ್ಷಾತ್ಕಾರ ಹೊರತು, ಮೋಕ್ಷವಲ್ಲ. ಆದ್ದರಿಂದ ಅದು ದೃಷ್ಟಫಲಕವಾದ ಸಾಧನ. ಅಂತಹ ಶ್ರವಣಾದಿಗಳನ್ನು ಅನೇಕ ವಿಧಿ

ವಾಕ್ಯಗಳಲ್ಲಿ ಹೇಳಲಾಗಿದೆ. (ಅಸಕೃದುಪದೇಶಾತ್) ಆದ್ದರಿಂದ ಅಪರೋಕ್ಷಜ್ಞಾನ ಬರುವ ಪರ್ಯಂತವೂ ಶ್ರವಣಾದಿಗಳನ್ನು ಮಾಡಬೇಕು.

**॥ ಲಿಂಗಾಚ್ಚ ॥** ಕೌಶೀತಕಿ ತನ್ನ ಮಗನಿಗೆ ಹೇಳಿದ–''ನಾನು ಆದಿತ್ಯನನ್ನು ಉದ್ಗೀಥನೆಂದು ಉಪಾಸನೆ ಮಾಡಿದೆ. ಆದ್ದರಿಂದ ನೀನು ಒಬ್ಬನೇ ಮಗನಾಗಿ ಹುಟ್ಟಿರುವಿ. ನೀನು 'ರಶ್ಮೀಂಸ್ತ್ವಂ ಪರ್ಯಾವರ್ತಯಾತ್' ಸೂರ್ಯರಶ್ಮಿಗಳಲ್ಲಿ ಉದ್ಗೀಥೋಪಾಸನೆಯ ಆವೃತ್ತಿ ಮಾಡು. ಅನೇಕಪುತ್ರಸಂತತಿಯಾಗುತ್ತದೆ.'' ಇದರಿಂದ ಆವೃತ್ತಿಯಿಂದ ಫಲಾಧಿಕ್ಯವು ತಿಳಿಯುತ್ತದೆ. ಈ ಲಿಂಗದಿಂದ ಶ್ರವಣಾದಿಗಳ ಆವೃತ್ತಿಯೂ ತಿಳಿಯುತ್ತದೆ. 'ಅಹಂ ಬ್ರಹ್ಮಾಸ್ಮಿ' ಎಂಬ ತತ್ತ್ವವು ದುರ್ಬೋಧವಾದ ಕಾರಣ 'ತತ್ತ್ವಮಸಿ' ಎಂದು ಅದನ್ನು ಒಂಭತ್ತು ಬಾರಿ ಉಪದೇಶ ಮಾಡಲಾಗಿದೆ. ಉದ್ದಾಲಕರು ಒಂದು ಬಾರಿ ಈ ಉಪದೇಶ ನೀಡಿದಾಗ ಶ್ವೇತಕೇತು 'ಭೂಯ ಏವ ಮಾ ಭವಾನ್ ವಿಜ್ಞಾಪಯತು' ಎಂದು ಮತ್ತೆ ಉಪದೇಶಿಸುವಂತೆ ಕೇಳಿಕೊಂಡ. ಇದರಿಂದಾಗಿ ಇಂತಹ ತತ್ತ್ವಗಳ ಶ್ರವಣವನ್ನು ಒಂದು ಬಾರಿ ಮಾಡಿದರೆ ಜ್ಞಾನ ಬರುವುದಿಲ್ಲ, ಮತ್ತೆ ಮತ್ತೆ ಮಾಡಬೇಕಾಗುತ್ತದೆ, ಎಂದು ತಿಳಿಯುತ್ತದೆ. ಆದ್ದರಿಂದ ಶ್ರವಣಾದಿಗಳ ಅಸಕೃದನುಷ್ಠಾನ ಅಗತ್ಯವಾಗಿದೆ.

**ವಿಮರ್ಶೆ**—ಶ್ರವಣಾದಿಗಳ ಫಲ ಬ್ರಹ್ಮಾಪರೋಕ್ಷ ಎನ್ನುವುದು ಯುಕ್ತವಲ್ಲ. ಶ್ರವಣವೆಂದರೆ ಶಾಸ್ತ್ರವನ್ನು ಕಿವಿಯಿಂದ ಕೇಳುವುದು. ಅದರ ಫಲ ಬ್ರಹ್ಮನ ಪರೋಕ್ಷ ಜ್ಞಾನವೇ ಹೊರತು ಅಪರೋಕ್ಷಜ್ಞಾನವಲ್ಲ. ಆದ್ದರಿಂದ ಅಪರೋಕ್ಷರೂಪವಾದ ದೃಷ್ಟಫಲಕ್ಕಾಗಿ ಶ್ರವಣದ ಆವೃತ್ತಿ ಮಾಡಬೇಕು, ಎನ್ನುವುದು ಯುಕ್ತವಲ್ಲ.

ಹೇಳಿದ್ದನ್ನೇ ಒಂದು ಬಾರಿ ಹೇಳುವುದಕ್ಕೂ ಒಂಬತ್ತು ಬಾರಿ ಹೇಳುವುದಕ್ಕೂ ಯಾವ ವ್ಯತ್ಯಾಸವೂ ಇಲ್ಲ. ಮೊದಲು ಹೇಳಿದ್ದು ಅಲೌಕಿಕವಾದುದರಿಂದ ತಿಳಿಯಲು ಸಾಧ್ಯವಾಗದಿದ್ದಲ್ಲಿ ಯುಕ್ತಿಗಳನ್ನು ಹೇಳಿ ಅದನ್ನು ಮನವರಿಕೆ ಮಾಡಬೇಕು. ಅದು ಬಿಟ್ಟು ಹೇಳಿದ್ದಷ್ಟನ್ನೇ ಮತ್ತೊಮ್ಮೆ ಹೇಳುವುದು ವ್ಯರ್ಥ.

## ವಿಶಿಷ್ಟಾದ್ವೈತ ದರ್ಶದನಲ್ಲಿ ಸೂತ್ರಾರ್ಥ

**॥ ಆವೃತ್ತಿರಸಕೃದುಪದೇಶಾತ್ ॥** ''ಬ್ರಹ್ಮವಿದಾಪ್ನೋತಿ ಪರಂ' ಎಂಬ ಶ್ರುತಿಯಲ್ಲಿ ಬ್ರಹ್ಮಪ್ರಾಪ್ತಿ ಸಾಧನವಾದ ''ವೇದನವು'' (ಜ್ಞಾನವು) ಅಸಕೃದಾವೃತ್ತಿಃ= ಮತ್ತೆ ಮತ್ತೆ ಆವೃತ್ತಿ ರೂಪವಾದುದು. ಉಪದೇಶಾತ್=ಧ್ಯಾನ–ಉಪಾಸನಾಪರ್ಯಾಯ ವಾಚಕವಾದ 'ವೇದನ' ಶಬ್ದದಿಂದ ಅದನ್ನು ಉಪದೇಶ ಮಾಡಿರುವುದರಿಂದ.

ಉಪಾಸನಾ ಶಬ್ದದಿಂದ ಉಪಕ್ರಮ ಮಾಡಿದುದನ್ನು ಉಪನಿಷತ್ತಿನಲ್ಲಿ ವೇದನ ಶಬ್ದದಿಂದ ಉಪಸಂಹಾರ ಮಾಡಲಾಗಿದೆ— 'ಮನೋ ಬ್ರಹ್ಮೇತ್ಯುಪಾಸೀತ' ಎಂದು ಛಾಂದೋಗ್ಯದಲ್ಲಿ ಉಪಕ್ರಮ. ಅದರ ಉಪಸಂಹಾರ 'ಭಾತಿ ತಪತಿ ಚ ಕೀರ್ತ್ಯಾ ಯಶಸಾ ಬ್ರಹ್ಮವರ್ಚಸೇನ ಯ ಏವಂ ವೇದ' ಎಂದು ಇದೆ. ಅದರಂತೆ 'ಯಸ್ತದ್ವೇದ...' ಎಂದು ವೇದನಶಬ್ದದಿಂದ ಉಪಕ್ರಮ ಮಾಡಿ 'ಯಾಂ ದೇವತಾಮುಪಾಸ್ತೇ' ಎಂದು ಉಪಸಂಹರಿಸಲಾಗಿದೆ. ಇದರಿಂದ ವೇದನ ಧ್ಯಾನ, ಉಪಾಸನಾ ಶಬ್ದಗಳು ಪರ್ಯಾಯ ವಾಚಕಗಳೆಂದು ತಿಳಿಯುತ್ತದೆ. ಉಪಾಸನೆ ಜ್ಞಾನ ಸಂತತಿರೂಪವಾದುದು. ಧ್ಯಾನ ಏಕಾಗ್ರಚಿತ್ತವೃತ್ತಿಯ ನೈರಂತರ್ಯ. ತತ್ಸಮಾನಾರ್ಥಕವಾದ ವೇದನವೂ ಅಸಕೃದಾವೃತ್ತಿರೂಪವಾದುದು.

॥ ಲಿಂಗಾಚ್ಚ ॥ ಲಿಂಗ ಎಂದರೆ ಸ್ಮೃತಿ. ಆ ಸ್ಮೃತಿವಾಕ್ಯ ಹೀಗಿದೆ—

ತದ್ರೂಪಪ್ರತ್ಯಯೇ ಚೈಕಾ ಸಂತತಿಶ್ಚಾನ್ಯನಿಸ್ಪೃಹಾ ।
ತದ್‌ಧ್ಯಾನಂ, ಪ್ರಥಮೈಃ ಷಡ್ಭಿಃ ಅಂಗೈರ್ನಿಷ್ಪದ್ಯತೇ ತಥಾ ॥

ಈ ಸ್ಮೃತಿಯಲ್ಲಿ ಪರಮಾತ್ಮನ ಜ್ಞಾನಸಂಸತಿಯೇ ಧ್ಯಾನ, ಎಂದು ಹೇಳಲಾಗಿದೆ.

ವಿಮರ್ಶೆ—''ಅಸಕೃದಾವೃತ್ತಿಃ ವೇದನಂ ಶಾಸ್ತ್ರಾರ್ಥಃ'' ಎಂಬ ರಾಮಾನುಜಮತದಲ್ಲಿ ಸೂತ್ರಯೋಜನೆ. ಇದು ಯುಕ್ತವಲ್ಲ. 'ಆವೃತ್ತಂ ವೇದನಂ' ಎಂದಾಗಬೇಕು. 'ಆವೃತ್ತಿಃ ವೇದನಂ' ಎಂದು ಅನ್ವಯಿಸುವುದು ಸರಿಯಲ್ಲ. ಆವೃತ್ತಿಪದವಷ್ಟೇ ವಿವಕ್ಷಿತವಾದ ಅರ್ಥವನ್ನು ತಿಳಿಸುತ್ತದೆ. ಅಸಕೃತ್ ಪದದ ಅಗತ್ಯವಿಲ್ಲ.

ಇಲ್ಲಿಗೆ ಆವೃತ್ತ್ಯಧಿಕರಣವು ಮುಗಿಯಿತು.

## ೨. ಆತ್ಮೋಪಗಮಾಧಿಕರಣಮ್

### ॥ ಓಂ ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ ಓಂ ॥ ೩ ॥

ಆತ್ಮೇತ್ಯುಪದೇಶ ಉಪಾಸನಂ ಚ ಮೋಕ್ಷಾರ್ಥಿಭಿಃ ಸರ್ವಥಾ ಕಾರ್ಯಮೇವ ।
'ನಾನ್ಯಂ ವಿಚಿಂತಯ ಆತ್ಮಾನಮೇವಾಹಂ ವಿಜಾನೀಯಾಮಾತ್ಮಾನ-ಮುಪಾಸ ಆತ್ಮಾ ಹಿ ಮಮೈಷ ಭವತಿ' ಇತಿ ಹ್ಯುಪಗಚ್ಛಂತಿ । 'ಆತ್ಮೇತ್ಯೇವೋಪಾಸ್ವಾತ್ಮೇತ್ಯೇವ ವಿಜಾನೀಹಿ ನಾನ್ಯಂ ಕಿಂಚನ ವಿಜಾನಥಾ(ಥ) ಆತ್ಮಾ ಹ್ಯೇಷ ಭವತಿ' ಇತಿ ಗ್ರಾಹಯಂತಿ ಚ ।

'ಆತ್ಮೇತ್ಯುಪಾಸನಂ ಕಾರ್ಯಂ ಸರ್ವಥೈವ ಮುಮುಕ್ಷುಭಿಃ ।
ನಾನಾಕ್ಲೇಶಸಮಾಯುಕ್ತೋಽಪ್ಯೇತಾವನ್ನೈವ ವಿಸ್ಮರೇತ್ ॥'

ಇತಿ ಭವಿಷ್ಯತ್ಪರ್ವಣಿ ।

'ಆತ್ಮಾ ವಿಷ್ಣುರಿತಿ ಧ್ಯಾನಂ ವಿಶೇಷಣವಿಶೇಷ್ಯತಃ ।
ಸರ್ವೇಷಾಂ ಚ ಮುಮುಕ್ಷೂಣಾಮುಪದೇಶಶ್ಚ ತಾದೃಶಃ ।
ಕರ್ತವ್ಯೋ ನಾಸ್ಯ ಹಾನೇನ ಕಸ್ಯಚಿನ್ಮೋಕ್ಷ ಇಷ್ಯತೇ ॥'

ಇತಿ ಚ ಬ್ರಾಹ್ಮೇ ॥

'ಆತ್ಮ' ಎಂಬ ಗುಣದ ಉಪದೇಶವನ್ನೂ ಉಪಾಸನೆಯನ್ನೂ ಮೋಕ್ಷಾರ್ಥಿಗಳು ಸರ್ವಥಾ ಮಾಡಲೇಬೇಕು. 'ನಾನ್ಯಂ ವಿಚಿಂತಯೇ' ಎಂಬ ಶ್ರುತಿಯಲ್ಲಿ ಮುಮುಕ್ಷುಗಳು ಬ್ರಹ್ಮನನ್ನು ಆತ್ಮತ್ವೇನ (ಸ್ವಾಮಿತ್ವೇನ) ತಿಳಿದು ಉಪಾಸನೆ ಮಾಡುತ್ತಾರೆ, (ಉಪಗಚ್ಛಂತಿ) ಎಂದು ಹೇಳಲಾಗಿದೆ. 'ಆತ್ಮೇತ್ಯೇವೋಪಾಸ್ವ' ಎಂಬ ಶ್ರುತಿಯಲ್ಲಿ ಗುರುಗಳು ಸಾಧಕನಿಗೆ ಆತ್ಮತ್ವೇನ ಉಪಾಸನೆಯನ್ನು ಉಪದೇಶ ಮಾಡುತ್ತಾರೆ, (ಗ್ರಾಹಯಂತಿ) ಎಂದು ಹೇಳಲಾಗಿದೆ. ಮಹಾಭಾರತದ ಭವಿಷ್ಯತ್‌ಪರ್ವದಲ್ಲಿ ಹೀಗಿದೆ— ಮುಮುಕ್ಷುಗಳು ಮಂದಮತಿಗಳಾದರೂ ಆಪತ್ತಿನಲ್ಲಿದ್ದರೂ ಸರ್ವಥಾ 'ಭಗವಂತನು ನನ್ನ ಸ್ವಾಮಿ' ಎಂದು ಉಪಾಸನೆಯನ್ನು ಮಾಡಬೇಕು. ನಾನಾವಿಧವಾದ ಕಷ್ಟಗಳಲ್ಲಿ ಇದ್ದರೂ ಈ ಉಪಾಸನೆಯನ್ನು ಮರೆಯಬಾರದು. ಬ್ರಾಹ್ಮಪುರಾಣದಲ್ಲಿ ಹೀಗಿದೆ— ಎಲ್ಲಾ ಮುಮುಕ್ಷುಗಳಿಗೂ ಗುರುಗಳು 'ಶ್ರೀಹರಿಯು ನನ್ನ ಸ್ವಾಮಿ' ಎಂಬ ಉಪದೇಶವನ್ನು ಮಾಡಬೇಕು. ಈ ಉಪಾಸನೆ ಇಲ್ಲದೆ ಯಾರಿಗೂ ಮೋಕ್ಷವಿಲ್ಲ.

**ವಿವರಣೆ**—ಆತ್ಮಾ ಎಂಬ ಉಪಾಸನೆ ಎಲ್ಲರಿಗೂ ಅನಿವಾರ್ಯ. 'ನಾನೇ ಆತ್ಮ ಅಂದರೆ, ಬ್ರಹ್ಮ' ಎಂದು ಉಪಾಸನೆಯಲ್ಲ. 'ನನಗೆ ಭಗವಂತನು ಆತ್ಮಾ ಅಂದರೆ ಸ್ವಾಮಿಯಾಗಿದ್ದಾನೆ' ಎಂದು ಉಪಾಸನೆ ಮಾಡಬೇಕು. ರೋಗರುಜಿನಗಳು ಬಂದರೂ ಈ ಉಪಾಸನೆಯನ್ನು ಬಿಡಬಾರದು.

**ಶ್ರುತ್ಯರ್ಥ**—ಅನ್ಯಂ=ಬ್ರಹ್ಮನನ್ನು ಬಿಟ್ಟು ಉಳಿದ ಯಾವುದನ್ನೂ ನಾನು ಉಪಾಸನೆ ಮಾಡುವುದಿಲ್ಲ. ಆತ್ಮನನ್ನೇ ನಾನು ತಿಳಿಯುವೆನು. ಆತ್ಮನನ್ನೇ ಧ್ಯಾನಿಸುವೆನು. ಈ ಪರಮಾತ್ಮನು ನನಗೆ ಸ್ವಾಮಿಯಾಗಿದ್ದಾನೆ.

2. ಬ್ರಹ್ಮನನ್ನು ಸ್ವಾಮಿಯೆಂದು ಧ್ಯಾನಿಸು, ಸ್ವಾಮಿಯೆಂದೇ ತಿಳಿ. ಬೇರಾವುದನ್ನೂ ತಿಳಿಯಬೇಡ. ಬ್ರಹ್ಮನು ನಿನಗೆ ಆತ್ಮನೇ=ಸ್ವಾಮಿಯೇ ಆಗುವನು.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ ಓಂ ॥** (ಅತ್ರ ಆತ್ಮೇತ್ಯುಪಾಸ್ತೇಃ ನಿತ್ಯಶಃ ಕರ್ತವ್ಯತ್ವಂ ಸಾಧ್ಯತೇ । ಆತ್ಮಶಬ್ದ ಸ್ಯಾವೃತ್ತಿಃ । ಆದ್ಯೋ ರೂಢ್ಯಾ ವಿಷ್ಣುಪರಃ । ಅಂತ್ಯಃ 'ಆದತ್ತೇ ಭೃತ್ಯಾನಿತಿ ಸ್ವಾಮಿವಾಚೀ । ತುರೇವ । ಆತ್ಮಾ=ವಿಷ್ಣುಃ ಆತ್ಮಾ=ಮಮ ಸ್ವಾಮೀ ಇತ್ಯೇವ ಉಪಗಚ್ಛಂತಿ=ಉಪಾಸತೇ, ಜಾನಂತಿ ಚ ಸಂತಃ । ಗ್ರಾಹಯಂತಿ ಚ ಶಿಷ್ಯಾನ್=ಶಿಷ್ಯೇಭ್ಯಃ ಉಪದಿಶಂತಿ ಯತಃ ಅತಃ 'ವಿಷ್ಣುರ್ಮೇ ಸ್ವಾಮೀ' ಇತಿ ಸದೋಪಾಸ್ತಿಃ ಸರ್ವಥಾ ಕಾರ್ಯಾ, ಇತ್ಯರ್ಥಃ ।)

ಈ ಅಧಿಕರಣದಲ್ಲಿ ಆತ್ಮಾ ಎಂಬ ಉಪಾಸನೆಯನ್ನು ಸದಾ ಮಾಡುತ್ತಿರಬೇಕೆಂದು ಸಾಧಿಸಲಾಗಿದೆ. ಆತ್ಮಾ=ವಿಷ್ಣುವು ಆತ್ಮಾ=ನನ್ನ ಸ್ವಾಮಿ ಎಂದೇ ಉಪಗಚ್ಛಂತಿ=ಸಜ್ಜನರು ತಿಳಿಯುತ್ತಾರೆ. ಗ್ರಾಹಯಂತಿ ಚ ಶಿಷ್ಯಾನ್=ಶಿಷ್ಯರಿಗೆ ಹಾಗೇ ಉಪದೇಶವನ್ನು ಮಾಡುತ್ತಾರೆ 'ಆತ್ಮೇತ್ಯೇವ ಉಪಾಸೀತ' ಎಂದು.

## ಶಾಂಕರಭಾಷ್ಯದಲ್ಲಿ ಆತ್ಮತ್ವೋಪಾಸನಾಧಿಕರಣ

ಬ್ರಹ್ಮನು ಸಾಧಕನಿಂದ ಆತ್ಮೇತ್ಯೇವ=ತಾನೇ ಎಂಬುದಾಗಿ ತಿಳಿಯಲ್ಪಡಬೇಕು. ಜಾಬಾಲರು ಅವನನ್ನು ಹಾಗೆಯೇ ಉಪಾಸನೆ ಮಾಡುತ್ತಾರೆ(ಉಪಗಚ್ಛಂತಿ) 'ತ್ವಂ ವಾ ಅಹಮಸ್ಮಿ ದೇವತೇ, ಅಹಂ ವೈ ತ್ವಮಸಿ ದೇವತೇ' ಎಂದು. ಉಪನಿಷತ್ತುಗಳೂ ಹೀಗೆಯೇ ತಿಳಿಸಿಕೊಡುತ್ತವೆ. (ಗ್ರಾಹಯಂತಿ ಚ) 'ಏಷ ತೇ ಆತ್ಮಾ ಸರ್ವಾಂತರಃ' (ಬೃ.3.4.1) 'ಸ ಆತ್ಮಾ ತತ್ ತ್ವಮಸಿ' ಎಂದು ಮುಂತಾಗಿ.

**ವಿಮರ್ಶೆ**—ಈ ಅಧಿಕರಣದಲ್ಲಿ ಜೀವನಿಗೆ ಬ್ರಹ್ಮನಿಂದ ಅಭೇದವನ್ನು ಶಾಂಕರಭಾಷ್ಯದಲ್ಲಿ ಪ್ರತಿಪಾದಿಸಿ ಜೀವೇಶರಲ್ಲಿರುವ ವಿರುದ್ಧಧರ್ಮಗಳು ಮಿಥ್ಯಾ ಎಂದು ಸಾಧಿಸಲಾಗಿದೆ.

ಆದರೆ, 'ಮನೋ ಬ್ರಹ್ಮೇತ್ಯುಪಾಸೀತ' ಎಂದಿರುವುದರಿಂದ ಮನಸ್ಸಿನಲ್ಲೂ ಬ್ರಹ್ಮೈಕ್ಯವು ಇದೆ ಎಂದಾದೀತು. ಜಡ–ಚೇತನಗಳಿಗೆ ಐಕ್ಯವು ವಿರುದ್ಧವಾದ ಕಾರಣ ಅವೆರಡಕ್ಕೆ ಅಭೇದವಿಲ್ಲವೆನ್ನುವುದಾದರೆ ಜೀವೇಶರಿಗೆ ವಿರುದ್ಧಧರ್ಮಗಳು ಇರುವುದ ರಿಂದ ಅವರಿಗೂ ಅಭೇದವಿಲ್ಲವೆಂದಾದೀತು.

## ವಿಶಿಷ್ಟಾದ್ವೈತದರ್ಶನದಲ್ಲಿ ಸೂತ್ರಾರ್ಥ

ಉಪಾಸಕನು ಉಪಾಸ್ಯನಾದ ಬ್ರಹ್ಮನನ್ನು ತನಗಿಂತ ಅಭಿನ್ನನೆಂದು ಉಪಾಸನೆ ಮಾಡಬಾರದು. ಜೀವೇಶರಿಗೆ ಅಭೇದವು 'ಅಧಿಕಂ ತು ಭೇದನಿರ್ದೇಶಾತ್ (2.1.22) ನೇತರೋಽನುಪಪತ್ತೇಃ (1.1.17) ಇತ್ಯಾದಿ ಸೂತ್ರಗಳಿಗೆ ವಿರುದ್ಧವಾದುದು. ಆದ್ದರಿಂದ ಜ್ಞಾನಿಗಳು ತಾವು ಹೇಗೆ ಶರೀರಕ್ಕೆ ಆತ್ಮನಂತಿದ್ದಾರೋ ಅದರಂತೆ ತಮಗೆ ಪರಮಾತ್ಮನೂ ಒಳಗೆ ಆತ್ಮನಂತಿದ್ದಾನೆ, ಎಂದೇ ತಿಳಿಯುತ್ತಾರೆ. 'ತ್ವಂ ವಾ ಅಹಮಸ್ಮಿ ಭಗವಃ, ದೇವತೇ ಅಹಂ ವೈ ತ್ವಮಸಿ' (ವಾರಾ.ಉ.2.34) ಶಾಸ್ತ್ರಗಳೂ ಹಾಗೆಯೇ ತಿಳಿಸುತ್ತವೆ (ಗ್ರಾಹಯಂತಿ)— 'ಯ ಆತ್ಮನಿ ತಿಷ್ಠನ್ ಆತ್ಮನೋಽಂತರೋ ಯಮಯತಿ ಯಮಾತ್ಮಾ ನ ವೇದ, ಯಸ್ಯಾತ್ಮಾ ಶರೀರಮ್' ಎಂದು.

ವಿಮರ್ಶೆ—ಸೂತ್ರದಲ್ಲಿ 'ಆತ್ಮೇತಿ ತೂಪಗಚ್ಛಂತಿ' ಎಂದಿರುವುದರಿಂದ ಅನಾತ್ಮೇತ್ಯುಪಾಸನಾ ಮಾಡಬೇಕು ಎಂದೇ ಪೂರ್ವಪಕ್ಷವು ಉಚಿತ. ಹೊರತು ಅಭಿನ್ನತ್ವೇನ ಉಪಾಸ್ಯ ಎಂದು ಪೂರ್ವಪಕ್ಷ ಸೂತ್ರಾಭಿಪ್ರೇತವಲ್ಲ. ಆತ್ಮಶಬ್ದಕ್ಕೆ 'ಶರೀರೀ' ಎಂದರ್ಥವನ್ನು ಮಾಡಿ ಅಶರೀರಿತ್ವೇನ ಉಪಾಸ್ಯ ಎಂದು ಪೂರ್ವಪಕ್ಷ ಮಾಡಿ ಅವನು ಉಪಾಸಕನ ಶರೀರಿತ್ವೇನ ಉಪಾಸ್ಯ ಎಂದೂ ಸಿದ್ಧಾಂತವು ಯುಕ್ತವಲ್ಲ. ಅಶರೀರಿತ್ವೇನ ಉಪಾಸನೆ ಮಾಡಿದಾಗ ಅಭಿನ್ನತ್ವೇನ ಉಪಾಸನೆ ಮಾಡಿದಂತಾಗುವುದಿಲ್ಲ. ಶರೀರಶರೀರಿಭಾವ ಇಲ್ಲದಿದ್ದಾಗ ಅಭೇದಪ್ರಸಕ್ತಿಯೇ ಇಲ್ಲ. ಹೀಗಾಗಿ 'ಅಭಿನ್ನತ್ವೇನ ಉಪಾಸನೆ ಮಿಥ್ಯೋಪಾಸನೆ' ಎಂಬ ಪೂರ್ವಪಕ್ಷಯುಕ್ತಿ ತಪ್ಪಾಗುತ್ತದೆ.

ಇಲ್ಲಿಗೆ ಆತ್ಮೋಪಗಮಾಧಿಕರಣವು ಮುಗಿಯಿತು.

## ೩. ನಪ್ರತೀಕಾಧಿಕರಣಮ್

### ॥ ಓಂ ನ ಪ್ರತೀಕೇ ನ ಹಿ ಸಃ ಓಂ ॥ ೪ ॥

'ನಾಮ ಬ್ರಹ್ಮೇತ್ಯುಪಾಸೀತ' (ಛಾಂ.ಉ. 7.1.5) ಇತ್ಯಾದಿನಾ ಶಬ್ದಭ್ರಾಂತ್ಯಾ ನ ಪ್ರತೀಕೇ ಬ್ರಹ್ಮದೃಷ್ಟಿಃ ಕಾರ್ಯಾ । ಕಿಂತು? ತತ್‌ಸ್ಥತ್ವೇನೈವೋಪಾಸನಂ ಕಾರ್ಯಮ್ । ಬ್ರಹ್ಮತರ್ಕೇ ಚ–

'ನಾಮಾದಿಪ್ರಾಣಪರ್ಯಂತ (ಮು)ಉಭಯೋಃ ಪ್ರಥಮಾತ್ವತಃ ।
ಐಕ್ಯದೃಷ್ಟಿರಿತಿ ಭ್ರಾಂತಿರಬುಧಾನಾಂ ಭವಿಷ್ಯತಿ ॥

**ನಾಮಾದಿಸ್ಥಿತಿರೇವಾತ್ರ ಬ್ರಹ್ಮಣೋ ಹಿ ವಿಧೀಯತೇ ।**
**'ಸರ್ವಾರ್ಥಾ ಪ್ರಥಮಾ ಯಸ್ಮಾತ್ ಸಪ್ತಮ್ಯರ್ಥಾ ತತೋ ಮತಾ ॥'**
**ಇತಿ ।**

'ನಾಮ ಬ್ರಹ್ಮೇತ್ಯುಪಾಸೀತ' ಎಂಬ ಶ್ರುತಿಯಲ್ಲಿ ಸಮಾನವಿಭಕ್ತಿಯ ಶಬ್ದಗಳು ಇರುವುದರಿಂದ ನಾಮಾದಿ 'ಪ್ರತೀಕಗಳೇ ಬ್ರಹ್ಮ' ಎಂಬ ಭಾವನೆಯನ್ನು ಮಾಡಬಾರದು. ಹೊರತು, ಪ್ರತೀಕಸ್ಥಿತತ್ವೇನೈವ ಬ್ರಹ್ಮೋಪಾಸನೆಯನ್ನು ಮಾಡಬೇಕು. 'ನಾಮ ಬ್ರಹ್ಮೇತ್ಯುಪಾಸೀತ' ಎಂದು ಛಾಂದೋಗ್ಯಶ್ರುತಿಯಲ್ಲಿ ನಾಮದಿಂದಾರಂಭಿಸಿ ಪ್ರಾಣಪರ್ಯಂತವಾಗಿ ಹೇಳಿರುವ ಉಪಾಸನೆಯ ಅರ್ಥವನ್ನು ಬ್ರಹ್ಮತರ್ಕದಲ್ಲಿ ಹೇಳಲಾಗಿದೆ– ನಾಮದಿಂದಾರಂಭಿಸಿ ಪ್ರಾಣಪರ್ಯಂತವಾಗಿ ಉಪಾಸನಾವಿಧಾಯಕ ವಾಕ್ಯದಲ್ಲಿ ಉಪಾಸ್ಯ ಮತ್ತು ಉಪಾಸನಾಧಿಷ್ಠಾನವಾಚಕವಾದ ಎರಡೂ ಶಬ್ದಗಳೂ ಪ್ರಥಮಾವಿಭಕ್ತಿಯಲ್ಲಿ ಇರುವುದರಿಂದ ('ನಾಮ ಬ್ರಹ್ಮ ಇತಿ') ಅಜ್ಞಾನಿಗಳಿಗೆ ಅವೆರಡೂ ಒಂದೇ ಎಂದು ಐಕ್ಯೋಪಾಸನೆಯ ಭ್ರಾಂತಿ ಬರುತ್ತದೆ. ಆದರೆ, 'ನಾಮ್ನಿ ಬ್ರಹ್ಮ' ಎಂದು ಪ್ರಥಮಾವಿಭಕ್ತಿಗೆ ಸಪ್ತಮೀವಿಭಕ್ತಿಯ ಅರ್ಥವನ್ನು ಹೇಳಿ ನಾಮಾಭಿಮಾನಿದೇವತೆಗಳಲ್ಲಿ ಬ್ರಹ್ಮನು ನಿಯಾಮಕನಾಗಿದ್ದಾನೆ, ಎಂದೇ ಈ ಶ್ರುತಿಯ ಆದೇಶ. ಸರ್ವವಿಭಕ್ತಿಗಳ ಅರ್ಥವೂ ಪ್ರಥಮಾವಿಭಕ್ತಿಗೆ ಇರುವುದರಿಂದ ಪ್ರಕೃತಶ್ರುತಿಯಲ್ಲಿ ಸಪ್ತಮೀವಿಭಕ್ತಿಯ ಅರ್ಥದಲ್ಲಿ (ಅಧಿಕರಣಾರ್ಥಲ್ಲಿ) 'ನಾಮ' ಎಂಬಲ್ಲಿ ಪ್ರಥಮಾ ವಿಭಕ್ತಿಯು ಇದೆ.

**ವಿವರಣೆ**—ಈ ಪ್ರಪಂಚವು ನಾಮ–ರೂಪಾತ್ಮಕವಾದುದು. ಇವೆಲ್ಲವನ್ನೂ ಬ್ರಹ್ಮನೆಂದು ಉಪಾಸನೆ ಮಾಡಬೇಕು, ಎಂದು ಶ್ರುತಿಯಲ್ಲಿ ಹೇಳಲಾಗಿದೆ. ಆದ್ದರಿಂದ ನಾಮರೂಪಾತ್ಮಕವಾದ ಪ್ರತೀಕಗಳೇ ಬ್ರಹ್ಮನೆಂದು ತಿಳಿಯುವ ಸಂದರ್ಭವಿದೆ. ಆದ್ದರಿಂದಲೇ ಕೆಲವು ಮುಗ್ಧರು ಕಲ್ಲಿನ ಪ್ರತಿಮೆಯೇ ದೇವರೆಂದು ಭಾವಿಸುತ್ತಾರೆ. ಇದು ಅಸತ್ಯೋಪಾಸನೆ. ಇಂತಹ ಉಪಾಸನೆಯು ಅನರ್ಥಕ್ಕೀಡು ಮಾಡುತ್ತದೆ, ಎಂದು ಹೇಳಲಾಗಿದೆ—

ಅಚೇತನಮಸತ್ಯಂ ಚ ತಥೈವಾತಾತ್ವಿಕಂ ಕ್ವಚಿತ್ ।
ನೋಪಾಸೀತ ಪರೋಽನರ್ಥಃ ಸ್ಯಾತ್ ತಥೋಪಾಸನಾಕೃತೇ ॥

ಆದ್ದರಿಂದಲೇ ಇಂತಹ ಉಪಾಸನೆಗಳನ್ನು ಈ ಸೂತ್ರದಲ್ಲಿ ನಿಷೇಧಮಾಡಲಾಗಿದೆ. ಪ್ರತೀಕೆ ನ=ಪ್ರತೀಕಗಳಲ್ಲಿ ಬ್ರಹ್ಮದೃಷ್ಟಿಯನ್ನು ಮಾಡಬಾರದು ಎಂದರೆ, ಪ್ರತೀಕವೇ

ಬ್ರಹ್ಮನೆಂದು ತಿಳಿಯಬಾರದು. ಏಕೆಂದರೆ, ನಹಿ ಸಃ=ಜಡವಾದ ಪ್ರತೀಕ ಬ್ರಹ್ಮನಲ್ಲ. ಪ್ರತೀಕದಲ್ಲಿ ಬ್ರಹ್ಮ.

ಯದ್ಯಪಿ ಛಾಂದೋಗ್ಯದಲ್ಲಿ 'ನಾಮ ಬ್ರಹ್ಮೇತ್ಯುಪಾಸೀತ' ಎಂದಿಲ್ಲ. 'ನಾಮೋಪಾಸ್ಸ್ವ, ನಾಮ ಬ್ರಹ್ಮೇತ್ಯುಪಾಸೇ' ಎಂದೇ ಅಲ್ಲಿರುವುದು. ಆದರೂ ಅದರ ಅರ್ಥ 'ನಾಮ ಬ್ರಹ್ಮೇತ್ಯುಪಾಸೀತ' ಎಂದೇ ಆಗುತ್ತದೆ. ಹೀಗೆ, ಅದರ ಅರ್ಥತಃ ಅನುವಾದವನ್ನು ಭಾಷ್ಯಕಾರರು ಮಾಡಿದ್ದಾರೆ. ಅಥವಾ ಶಾಂಖಾಂತರದಲ್ಲಿ ಅದೇ ರೀತಿಯ ಶ್ರುತಿ ಇರಬಹುದು. ಅದನ್ನು ಭಾಷ್ಯದಲ್ಲಿ ಉಲ್ಲೇಖಮಾಡಲಾಗಿದೆ.

ಇಲ್ಲಿ ತ್ರಿವಿಕ್ರಮ ಪಂಡಿತರು ಪ್ರಬುದ್ಧಕಾವ್ಯಮಯವಾಗಿ ಆಚಾರ್ಯರನ್ನು ಸ್ತುತಿಸಿದ್ದಾರೆ. ಪ್ರಕಾಶಿತಶ್ಚಾಯಮರ್ಥಃ ಪ್ರಭೂತತರ–ಪ್ರಮಾಣಪ್ರದ್ಯೋತ–ಪ್ರಸರ ಮುಖರ–ಮುಖೇಂದುನಾ ಸದಾನಂದ ನಿಷ್ಯಂದಿನಾ ಭಗವತ್ಯೈವಾನುವ್ಯಾಖ್ಯಾನೇ 'ನ ಹಿ ಸಃ' ಇತಿ ಸೂತ್ರಾವಯಮ್ ಅನುವ್ಯಾಚಕ್ಷಾಣೇನ 'ಯಸ್ಯ ಖಲು ಹಂತ ಪರಮದಯಾನಿಧೇಃ ಪರಮಪುರುಷ–ಗುಣಗಣ–ಮಣಿನಿಕರನಿಧಾನಭೂತಯೋಃ ಭಾಷ್ಯಾನುಭಾಷ್ಯಾಮೃತಸಮುದ್ರಯೋಃ ಕಲಿಮಲಕರ್ದಮಮ್ ಅಪವರ್ಜಯಿತುಂ ಸಜ್ಜನಮಾವರ್ಜಯತಃ ಸಮೀಚೀನವಚನಸುಸ್ವಾದು–ಸುಧಾರಸಾಸ್ವಾದ–ಪ್ರಮೋದ ನಿರ್ಭರ ಹೃದಯಾ ವಿಶದಮತಯಃ ಕರತಲವಿಲಸಿತಾಮಲಕವದಖಿಲ–ಪುರುಷಾರ್ಥ ಸಾರ್ಥಕ್ಯಂ ಸದ್ಯಃ ಸಾಧು ಸಮರ್ಥಯಂತಿ ||

'ನಾಮ ಬ್ರಹ್ಮೋಪಾಸತೇ' 'ವಾಚಂ ಬ್ರಹ್ಮೋಪಾಸ್ವ' ಇಲ್ಲಿ ದ್ವಿತೀಯಾವಿಭಕ್ತಿ ಇದೆ. 'ಮನೋ ಹಿ ಬ್ರಹ್ಮ, ಮನ ಉಪಾಸ್ವ' ಇಲ್ಲಿ ಪ್ರಥಮಾ ಇದೆ. 'ಸಪ್ತಸು ಪ್ರಥಮಾ, ಷಟ್‌ಸು ದ್ವಿತೀಯಾ' ಎಂಬ ನಿಯಮದಂತೆ ಇಲ್ಲಿರುವ ಪ್ರಥಮಾ–ದ್ವಿತೀಯಾ ವಿಭಕ್ತಿಗಳಿಗೆ ಸಪ್ತಮೀ ವಿಭಕ್ತಿಯ ಅರ್ಥವನ್ನು ತಿಳಿಯಬೇಕು.

ಅಸದುಪಾಸನೆಯು ನಿರರ್ಥಕಮಾತ್ರವಲ್ಲ ಅನರ್ಥಕರ ಎನ್ನುವುದನ್ನು ಶ್ರೀವಾದಿರಾಜರು ಗುರ್ವರ್ಥದೀಪಿಕೆಯಲ್ಲಿ ಹೀಗೆ ತಿಳಿಸಿದ್ದಾರೆ— ಮರುಮರೀಚಿಕೆ ಯಲ್ಲಿ ನೀರಿದೆ ಎಂದು ಭ್ರಮಿಸುವುದರಿಂದ ಬಾಯಾರಿಕೆ ಪರಿಹಾರವಾಗುವುದಿಲ್ಲ. ಅಷ್ಟೇ ಅಲ್ಲ, ಹಾಗೆ ಭ್ರಮಿಸಿ ಅಷ್ಟು ದೂರ ಓಡುವುದರಿಂದ ಮತ್ತಷ್ಟು ಬಾಯಿ ಒಣಗುತ್ತದೆ.

ಆಚಾರ್ಯರು ಅನುವ್ಯಾಖ್ಯಾನದಲ್ಲಿ ಅನ್ಯಥೋಪಾಸನೆಯಿಂದ ಭಗವಂತನ ಪ್ರೀತಿಯ ಬದಲಾಗಿ ಅವನ ನಿಗ್ರಹಕ್ಕೆ ನಾವು ಪಾತ್ರರಾಗುತ್ತೇವೆ, ಎಂದಿರುತ್ತಾರೆ—

ಪುರತೋ ನರದೇವಸ್ಯ ಚಂಡಾಲೋ ಯದಿ ಪೂಜ್ಯತೇ ।
ರಾಜವತ್ ಕಿಂ ನ ಕೋಪಃ ಸ್ಯಾತ್, ರಾಜ್ಞೋ ಲೋಕೇಽಭಿಪಶ್ಯತಿ ॥

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

॥ ಓಂ ನ ಪ್ರತೀಕೇ ನ ಹಿ ಸಃ ಓಂ ॥ (ಅತ್ರ ವಿಷ್ಣು–ಪ್ರತೀಕಯೋಃ ಐಕ್ಯೋಪಾಸ್ತಿಃ ನಿವಾರ್ಯತೇ । 'ಆತ್ಮೇತಿ' ಪದದ್ವಯಮ್ ಅನುವರ್ತತೇ । ಪ್ರತೀಕೇ ಇತಿ ವಿಷಯಸಪ್ತಮೀ ।

'ನಾಮ ಬ್ರಹ್ಮೇತ್ಯುಪಾಸೀತ' ಇತ್ಯಾದೌ ಶ್ರುತನಾಮಾದೌ ಪ್ರತೀಕೇ ಆತ್ಮೇತ್ಯುಪಾಸ್ತಿಃ ನ ಕಾರ್ಯಾ, ನಾಮಾದಿಕಂ ಬ್ರಹ್ಮೇತಿ ನೋಪಾಸ್ಯಮ್ । ಕುತಃ ? ನ ಹಿ ಸಃ, ಹಿ=ಯಸ್ಮಾತ್ ಸಃ=ಪ್ರಸ್ತುತೋ ವಿಷ್ಣುಃ ಪ್ರತೀಕಂ ನ ಭವತಿ । ಅತಃ ತಯೋರೈಕ್ಯಾಭಾವಾತ್ ನ ತಥೋಪಾಸ್ತಿಃ ಕಾರ್ಯಾ । ಮಿಥ್ಯೋಪಾಸ್ತೇಃ ನಿಷೇಧಾದಿತಿ ಭಾವಃ । ಕಥಂ ತರ್ಹಿ ಕಾರ್ಯಾ ? ಇತ್ಯತೋಽಪಿ–ಪ್ರತೀಕೇ–ಅಧಿಕರಣಸಪ್ತಮೀ । ಆತ್ಮೇತ್ಯಸ್ತಿ । ಪ್ರತಿಮಾತ್ಮಕೇ ನಾಮಾದೌ ಆತ್ಮಾ ಅಸ್ತೀತಿ ಉಪಾಸ್ತಿಃ ಕಾರ್ಯಾ ಇತ್ಯರ್ಥಃ।)

ಈ ಅಧಿಕರಣದಲ್ಲಿ ಪ್ರತೀಕ(ಪ್ರತಿಮೆ) ಮತ್ತು ಭಗವಂತನಿಗೆ ಐಕ್ಯವನ್ನು ತಿಳಿಯಬಾರದು, ಎಂದು ಹೇಳಲಾಗಿದೆ. 'ನಾಮ ಬ್ರಹ್ಮೇತ್ಯುಪಾಸೀತ' ಇತ್ಯಾದಿ ಉಪಾಸನಾವಾಕ್ಯಗಳಲ್ಲಿ ಪ್ರತೀಕವಾದ ನಾಮಾದಿಗಳಲ್ಲಿ ಪರಮಾತ್ಮನ ಅಭೇದಚಿಂತನೆಯನ್ನು ಮಾಡಬಾರದು. ಏಕೆಂದರೆ, ನಹಿ ಸಃ–ಹಿ=ಯಾವ ಕಾರಣದಿಂದ ಸಃ=ಪ್ರಸ್ತುತ ವಿಷ್ಣುವು ನ=ಪ್ರತೀಕವಲ್ಲ. ಮಿಥ್ಯೋಪಾಸನೆಯು ಶ್ರುತಿನಿಷಿದ್ಧ. ಆದ್ದರಿಂದ, ಪ್ರತೀಕೇ=ಪ್ರತಿಮೆಯಲ್ಲಿ ಆತ್ಮನಿದ್ದಾನೆ ಎಂದೇ ಉಪಾಸನೆ ಮಾಡಬೇಕು.

## ಶಾಂಕರಭಾಷ್ಯದಲ್ಲಿ ನ ಪ್ರತೀಕಾಧಿಕರಣ

'ಮನೋ ಬ್ರಹ್ಮೇತ್ಯುಪಾಸೀತ' 'ಸ ಯೋ ನಾಮ ಬ್ರಹ್ಮೇತ್ಯುಪಾಸ್ತೇ' ಎಂದು ಮುಂತಾಗಿ ಜಡಗಳಲ್ಲಿ ಬ್ರಹ್ಮೋಪಾಸನೆಯನ್ನು ಹೇಳಲಾಗಿದೆ. ಜಡಗಳೆಲ್ಲವೂ ಬ್ರಹ್ಮವಿವರ್ತಗಳು. ಉಪಾಸಕನಾದ ಆತ್ಮನೂ ಬ್ರಹ್ಮ. ಆದ್ದರಿಂದ ಉಪಾಸಕನು ಬ್ರಹ್ಮನನ್ನು ತಾನೆಂದು (ಆತ್ಮನೆಂದು) ಉಪಾಸನೆ ಮಾಡಿದಂತೆ ಆದಿತ್ಯಾದಿಗಳನ್ನೂ ಆತ್ಮನೆಂದು (ತಾನೆಂದು) ಉಪಾಸನೆ ಮಾಡಬಾರದು. ನ ಪ್ರತೀಕೇ=ಆದಿತ್ಯಾದಿ ಪ್ರತೀಕಗಳಲ್ಲಿ ಆತ್ಮತ್ವೇನ ಉಪಾಸನೆಯು ಯುಕ್ತವಲ್ಲ. ನಹಿ ಸಃ=ಜೀವಾತ್ಮನೂ ಆದಿತ್ಯಾದಿಪ್ರತೀಕಗಳೂ ಒಂದಲ್ಲ. ಕಟಕವೂ–ಕುಂಡಲವೂ ಬಂಗಾರದ್ದೇ ಆಗಿದ್ದರೂ ಅವೆರಡಕ್ಕೆ ಐಕ್ಯವಿಲ್ಲ. ಅವೆರಡೂ ಬಂಗಾರದಿಂದ ಅಭಿನ್ನಗಳಾಗಿರಬಹುದು. ಆದರೂ

ಪರಸ್ಪರಾಭೇದವಿಲ್ಲ. ಅದರಂತೆ ಪ್ರತೀಕವೂ ಉಪಾಸಕನೂ ಬ್ರಹ್ಮನೇ ಆದರೂ ಪ್ರತೀಕವೇ ಉಪಾಸಕನಲ್ಲ. ಆದ್ದರಿಂದ ಪ್ರತೀಕದಲ್ಲಿ ಆತ್ಮತ್ವೇನ ಉಪಾಸನೆಯು ಯುಕ್ತವಲ್ಲ.

**ವಿಮರ್ಶೆ**—ಬ್ರಹ್ಮನು ಸ್ವಾತ್ಮತ್ವೇನ ಉಪಾಸ್ಯನಾದರೂ ಮನಸ್ಸು, ಆದಿತ್ಯಾದಿ ಪ್ರತೀಕಗಳು ಸ್ವಾತ್ಮತ್ವೇನ ಉಪಾಸ್ಯಗಳು ಎನ್ನಲು ಪ್ರಮಾಣವಿಲ್ಲ. ಆದಕಾರಣ ಅವುಗಳನ್ನು ಸ್ವಾತ್ಮತ್ವೇನ ಉಪಾಸನೆ ಮಾಡಬಾರದು, ಎನ್ನುವುದು ಅಪ್ರಸಕ್ತ ನಿಷೇಧ. 'ಅಹಂ ಬ್ರಹ್ಮಾಸ್ಮಿ' ಎಂಬ ಪ್ರಮಾಣವು ಬ್ರಹ್ಮನನ್ನು ಸ್ವಾತ್ಮತಯಾ ತಿಳಿಸುವಂತೆ ಸ್ವಾತ್ಮಾಭಿನ್ನವಾದ ಬ್ರಹ್ಮನಿಗಿಂತ ಆದಿತ್ಯಾದಿಪ್ರತೀಕಗಳು ಅಭಿನ್ನವಾದುದರಿಂದ ಆದಿತ್ಯಾದಿಗಳಿಗೂ ಸ್ವಾತ್ಮಾಭೇದವನ್ನು ತಿಳಿಸುತ್ತವೆ. ಆದ್ದರಿಂದ ಆದಿತ್ಯಾದಿಗಳಲ್ಲಿ ಸ್ವಾತ್ಮಾಭೇದೋಪಾಸನೆಗೆ 'ಅಹಂ ಬ್ರಹ್ಮಾಸ್ಮಿ' ಎಂಬ ಶ್ರುತಿಯೇ ಪ್ರಮಾಣ. ಹೀಗಿದ್ದ ಮೇಲೆ ಆದಿತ್ಯಾದಿಗಳನ್ನೂ ಸ್ವಾತ್ಮತ್ವೇನ ಏಕೆ ಉಪಾಸನೆ ಮಾಡಬಾರದು?

ಇನ್ನು ಆದಿತ್ಯನಿಗೂ ಸ್ವಾತ್ಮನಿಗೂ ಭೇದವಿರುವುದರಿಂದ ಅಭೇದವು ಬಾಧಿತ, ಎನ್ನಬೇಕು. ಆದರೆ, ಭೇದವು ವ್ಯಾವಹಾರಿಕ, ಅಭೇದವು ಪಾರಮಾರ್ಥಿಕವಾದುದರಿಂದ ಭೇದವು ಅಭೇದಕ್ಕೆ ಬಾಧಕವಾಗುವುದಿಲ್ಲ. ಇಂತಹ ಭೇದವು ಬಾಧಕವಾಗುವುದಾದಲ್ಲಿ ಪ್ರತೀಕಗಳಲ್ಲಿ ಬ್ರಹ್ಮತ್ವೋಪಾಸನೆಯೂ ಅಯುಕ್ತವಾದೀತು. ಅವೆರಡಕ್ಕೂ ವ್ಯಾವಹಾರಿಕವಾದ ಭೇದವಿರುವುದರಿಂದ. ಆದ್ದರಿಂದ ಪ್ರತೀಕಗಳಲ್ಲಿ ಬ್ರಹ್ಮತ್ವೋಪಾಸನೆ ಬ್ರಹ್ಮನಲ್ಲಿ ಸ್ವಾತ್ಮತ್ವೋಪಾಸನೆ ಎಂದು ವ್ಯತ್ಯಾಸಮಾಡಲು ಕಾರಣವಿಲ್ಲ.

ಇಲ್ಲಿಗೆ ನಪ್ರತೀಕಾಧಿಕರಣವು ಮುಗಿಯಿತು.

## ೪. ಬ್ರಹ್ಮದೃಷ್ಟ್ಯಧಿಕರಣಮ್

### ॥ ಓಂ ಬ್ರಹ್ಮದೃಷ್ಟಿರುತ್ಕರ್ಷಾತ್ ಓಂ ॥ ೫ ॥

ಬ್ರಹ್ಮದೃಷ್ಟಿಶ್ಚ ಸರ್ವಥಾ ಕಾರ್ಯೈವ ಪರಮೇಶ್ವರೇ । ಉತ್ಕೃಷ್ಟತ್ವಾತ್ ।

'ಬ್ರಹ್ಮದೃಷ್ಟ್ಯಾ ಸದೋಪಾಸ್ಯೋ ವಿಷ್ಣುಃ ಸರ್ವೈರಪಿ ಧ್ರುವಮ್ ।
ಮಹತ್ತ್ವವಾಚೀ ಶಬ್ದೋಽಯಂ ಮಹತ್ತ್ವಂ ಜ್ಞಾನಮೇವ ಹಿ ।
ಸರ್ವತಃ ಪ್ರೀತಿಜನಕಮತಸ್ತತ್ ಸರ್ವಥಾ ಭವೇತ್ ॥'

**'ಆತ್ಮೇತ್ಯೇವ ಯದೋಪಾಸಾ ತದಾ ಬ್ರಹ್ಮತ್ವಸಂಯುತಾ ।**
**ಕಾರ್ಯೈವ ಸರ್ವಥಾ ವಿಷ್ಣೋರ್ಬ್ರಹ್ಮತ್ವಂ ನ ಪರಿತ್ಯಜೇತ್ ॥'**
**ಇತಿ ಚ ಬ್ರಹ್ಮತರ್ಕೇ ।**

ಆತ್ಮೋಪಾಸನೆಯಂತೆ ಬ್ರಹ್ಮೋಪಾಸನೆಯನ್ನೂ, ಸರ್ವಥಾ ಪರಮಾತ್ಮನಲ್ಲಿ ಮಾಡಲೇಬೇಕು. ಬ್ರಹ್ಮಶಬ್ದವು ಉತ್ಕೃಷ್ಟ=ಸರ್ವತಃ ಶ್ರೇಷ್ಠ ಎಂಬ ಅರ್ಥವನ್ನು ಹೇಳುವುದರಿಂದಾಗಿ. ಬ್ರಹ್ಮತರ್ಕದಲ್ಲಿ ಹೀಗಿದೆ—

ಪರಮಾತ್ಮನನ್ನು ಸರ್ವದಾ ಬ್ರಹ್ಮನೆಂದು ಎಲ್ಲರೂ ಉಪಾಸನೆ ಮಾಡಬೇಕು. ಏಕೆಂದರೆ, ಗುಣಪೂರ್ಣತ್ವವನ್ನು ಬ್ರಹ್ಮಶಬ್ದವು ಹೇಳುತ್ತದೆ. ಮಹತ್ವಜ್ಞಾನವೇ ಎಲ್ಲಕ್ಕಿಂತಲೂ ಅಂದರೆ ಇತರ ಗುಣಗಳ ಉಪಾಸನೆಗಿಂತಲೂ ಹೆಚ್ಚು ಪ್ರೀತಿಜನಕ. ಆದ್ದರಿಂದ ಭಗವಂತನ ಪ್ರಸಾದಸಿದ್ಧಿಗಾಗಿ ಬ್ರಹ್ಮತ್ವೋಪಾಸನೆಯನ್ನು ಮಾಡಲೇಬೇಕು. ಆತ್ಮನೆಂದು ಉಪಾಸನೆ ಮಾಡುವಾಗಲೆಲ್ಲ ಬ್ರಹ್ಮತ್ವಸಹಿತವಾಗಿ ಆತ್ಮತ್ವೋಪಾಸನೆಯನ್ನು ಮಾಡಬೇಕು. ಬ್ರಹ್ಮತ್ವೋಪಾಸನೆಯನ್ನು ಎಂದೂ ಬಿಡಬಾರದು.

**ವಿವರಣೆ**—ಹಿಂದೆ 'ಸಚ್ಚಿದಾನಂದ ಆತ್ಮಾ' ಎಂದು ಚತುರ್ಗುಣೋಪಾಸನೆಯನ್ನು ಹೇಳಲಾಗಿದೆ. ಇಲ್ಲಿ ಬ್ರಹ್ಮತ್ತ್ವೋಪಾಸನೆಯನ್ನು ಅಧಿಕವಾಗಿ ಹೇಳುತ್ತಿಲ್ಲ. ಹೊರತು, ಆತ್ಮತ್ತ್ವೋಪಾಸನೆಯ ಜೊತೆಯಲ್ಲೇ ಬ್ರಹ್ಮತ್ತ್ವೋಪಾಸನೆಯನ್ನು ಮಾಡಬೇಕು. ಬ್ರಹ್ಮತ್ವವಿಶಿಷ್ಟ ಆತ್ಮತ್ತ್ವೋಪಾಸನೆ ಮಾಡಬೇಕು, ಎಂದರ್ಥ.

ಬ್ರಹ್ಮತ್ವಂ ಪೂರ್ಣತಾ ಪ್ರೋಕ್ತಾ ತದಸ್ಯ ಸ್ವತ ಏವ ತು ।
ಸ ಬ್ರಹ್ಮಾತ್ಮಾ ಸಮುದ್ದಿಷ್ಟಃ ವಾಸುದೇವಃ ಸನಾತನಃ ॥

ಬ್ರಹ್ಮಶಬ್ದಾರ್ಥದಲ್ಲಿ ಸರ್ವಗುಣಗಳೂ ಸೇರಿರುವುದರಿಂದ ಬ್ರಹ್ಮತ್ತ್ವೋಪಾಸನೆ ಎಂದರೆ ಉತ್ಕೃಷ್ಟತ್ವೋಪಾಸನೆ. ಇದು ಉತ್ಕರ್ಷಾತ್ ಎಂಬ ಸೂತ್ರೋಕ್ತ ಹೇತುವಿನ ಅಭಿಪ್ರಾಯ. 'ಉತ್‌ಕೃಷ್ಟತ್ವಾತ್=ತಸ್ಯ ಬ್ರಹ್ಮಶಬ್ದಸ್ಯ ಉತ್ಕರ್ಷಾರ್ಥತ್ವಾತ್' ಎಂದು ತತ್ತ್ವಪ್ರದೀಪದಲ್ಲಿದೆ.

'ಆತ್ಮತ್ವಂ=ಸ್ವಸ್ವಾಮಿತ್ವಂ, ಬ್ರಹ್ಮತ್ವಂ=ಸರ್ವೋತ್ಕೃಷ್ಟತ್ವಂ' ಗುರ್ವರ್ಥದೀಪಿಕಾ. 'ಸರ್ವೋತ್ಕೃಷ್ಟನಾದ ನನ್ನ ಸ್ವಾಮಿ' ಎಂದು ಉಪಾಸನೆ ಮಾಡಬೇಕು.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಓಂ ಬ್ರಹ್ಮದೃಷ್ಟಿರುತ್ಕರ್ಷಾತ್ ಓಂ ॥**(ಅತ್ರ ಬ್ರಹ್ಮತ್ವೋಪಾಸ್ತೇರಾವಶ್ಯಕತ್ವಮ್ ಉಚ್ಯತೇ । ಆತ್ಮೇತ್ಯತ ಆತ್ಮಶಬ್ದಃ ಸಪ್ತಮ್ಯಂತಯಾ ವಿಪರಿಣಮ್ಯ ವರ್ತತೇ ।

ಆತ್ಮನಿ ಬ್ರಹ್ಮದೃಷ್ಟಿಃ=ಬ್ರಹ್ಮತ್ವೋಪಾಸನಂ–ಪೂರ್ಣತ್ವೋಪಾಸ್ತಿಃ ಸರ್ವಥಾ ಕಾರ್ಯಾ । ಕುತಃ ? ಉತ್ಕರ್ಷಾತ್=ಸರ್ವಗುಣಪೂರ್ಣತ್ವರೂಪೋತ್ಕರ್ಷಸ್ಯ ಬ್ರಹ್ಮಪದ ಪ್ರವೃತ್ತಿನಿಮಿತ್ತತ್ವಾತ್ ಇತ್ಯರ್ಥಃ। ತಥೋಪಾಸ್ತೇರೇವ ಪ್ರೀತಿಹೇತುತ್ವಾತ್, ಇತಿ ಭಾವಃ ।)

ಈ ಅಧಿಕರಣದಲ್ಲಿ ಬ್ರಹ್ಮತ್ವೋಪಾಸನೆಯನ್ನು ಅವಶ್ಯಮಾಡಬೇಕೆಂದು ಹೇಳಲಾಗಿದೆ. ಆತ್ಮನಲ್ಲಿ ಬ್ರಹ್ಮದೃಷ್ಟಿಃ=ಬ್ರಹ್ಮತ್ವೋಪಾಸನೆಯು ಅಂದರೆ ಪೂರ್ಣತ್ವ ಉಪಾಸನೆಯು ಸರ್ವಥಾ ಮಾಡಲ್ಪಡಬೇಕು. ಏಕೆಂದರೆ, ಉತ್ಕರ್ಷಾತ್=ಸರ್ವಗುಣ ಪೂರ್ಣತ್ವರೂಪ ಉತ್ಕರ್ಷವು ಬ್ರಹ್ಮಪದಕ್ಕೆ ಪ್ರವೃತ್ತಿನಿಮಿತ್ತವಾದುದರಿಂದ. ಆ ರೀತಿಯ ಉತ್ಕರ್ಷಜ್ಞಾನವೇ ಬ್ರಹ್ಮನ ಪ್ರೀತಿಗೆ ಕಾರಣವಾಗುತ್ತದೆ.

ಅಥವಾ ಉತ್ಕರ್ಷಾತ್ ಎಂದರೆ ಬ್ರಹ್ಮತ್ವೋಪಾಸನೆಯು ಇತರ ಗುಣಗಳ ಉಪಾಸನೆಗಿಂತಲೂ ಉತ್ಕೃಷ್ಟವಾದುದು ಎಂದರ್ಥ.

## ಶಾಂಕರಭಾಷ್ಯದಲ್ಲಿ ಬ್ರಹ್ಮದೃಷ್ಟ್ಯಧಿಕರಣ

'ಮನೋ ಬ್ರಹ್ಮ' 'ಆದಿತ್ಯೋ ಬ್ರಹ್ಮ' ಇತ್ಯಾದಿ ಉಪಾಸನಾವಿಧಾಯಕವಾಕ್ಯ ಗಳಲ್ಲಿ ಮನಸ್ಸು, ಆದಿತ್ಯಾದಿಗಳಲ್ಲಿ ಬ್ರಹ್ಮದೃಷ್ಟಿಯನ್ನು ಮಾಡಬೇಕು. ಇದರಿಂದ ನಿಕೃಷ್ಟವಾದ ಆದಿತ್ಯಾದಿಗಳಲ್ಲಿ ಉತ್ಕೃಷ್ಟವಾದ ಬ್ರಹ್ಮದೃಷ್ಟಿಯನ್ನು ಮಾಡಿದಂತಾಗುತ್ತದೆ. ಸೂತನನ್ನು ರಾಜನೆಂದು ತಿಳಿದಂತೆ. ಇದಕ್ಕೆ ವಿರುದ್ಧವಾಗಿ ಬ್ರಹ್ಮನಲ್ಲಿ ಆದಿತ್ಯಭಾವನೆ ಯನ್ನು ಮಾಡಬಾರದು. ಅದು ಉತ್ಕೃಷ್ಟವನ್ನು ನಿಕೃಷ್ಟವನ್ನಾಗಿ ಕಂಡಂತೆ. ರಾಜನನ್ನು ಸೂತನೆಂದು ತಿಳಿದಂತೆ. ಇದು ಪ್ರತ್ಯವಾಯಕ್ಕೆ ಕಾರಣವಾಗುತ್ತದೆ. ಆದ್ದರಿಂದ ಆದಿತ್ಯಾದಿಗಳಲ್ಲಿಯೂ ಬ್ರಹ್ಮದೃಷ್ಟಿಃ=ಬ್ರಹ್ಮತ್ವೋಪಾಸನೆಯನ್ನು ಮಾಡಬೇಕು. ಉತ್ಕರ್ಷಾತ್=ಇದರಿಂದ ಆದಿತ್ಯನಿಗೆ ಉತ್ಕರ್ಷ ಸಿದ್ಧಿಯಾಗುವುದರಿಂದ.

ಉಪಾಸನಾವಾಕ್ಯಗಳಲ್ಲಿ ಇತಿ ಶಬ್ದವಿದೆ. ಆದ್ದರಿಂದ ಆದಿತ್ಯನು ಬ್ರಹ್ಮನಲ್ಲ, ಬ್ರಹ್ಮತ್ವವನ್ನು ತಿಳಿಯಬೇಕು, ಎಂದು ಆ ಉಪಾಸನಾವಾಕ್ಯಗಳ ಅಭಿಪ್ರಾಯ. 'ಹಗ್ಗವನ್ನು ಹಾವೆಂದು ತಿಳಿದ' (ರಜ್ಜುಂ ಸರ್ಪ ಇತಿ ಜಾನಾತಿ.) ಇಲ್ಲಿ ಹಗ್ಗ ಸತ್ಯ, ಹಾವು ಜ್ಞಾನ ಮಾತ್ರ. (ಪಶ್ಯತ್ಯೇವ ಕೇವಲಂ ರಜತಮಿತಿ, ನತು ತತ್ರ ರಜತಮಸ್ತಿ । ಶಾಂ.ಭಾ.) ಆದಿತ್ಯನನ್ನು ಉಪಾಸನೆ ಮಾಡಿದರೂ ಫಲಕೊಡುವವನು ಮಾತ್ರ ಬ್ರಹ್ಮನೇ, ಆದಿತ್ಯನಲ್ಲ. ''ಫಲಮತ ಉಪಪತ್ತೇಃ'' ಎಂದು ಸೂತ್ರದಲ್ಲಿ ಹಾಗೆಯೇ ನಿರ್ಣಯಿಸ ಲಾಗಿದೆ.

**ವಿಮರ್ಶೆ**—ಆದಿತ್ಯನನ್ನು ಬ್ರಹ್ಮತ್ವೇನ ಉಪಾಸನೆ ಮಾಡುವುದಕ್ಕೆ ಉತ್ಕರ್ಷಸಿದ್ಧಿಯು ಯುಕ್ತಿಯಾಗುವಂತೆ ಅದಕ್ಕೆ ವಿಪರೀತವಾಗಿ ಬ್ರಹ್ಮನನ್ನು ಆದಿತ್ಯನೆಂದು ಉಪಾಸನೆ ಮಾಡುವುದಕ್ಕೂ ಒಂದು ಯುಕ್ತಿ ಇದೆ. ಬ್ರಹ್ಮ ಮುಕ್ತಿ ಪರ್ಯಂತಾನುವೃತ್ತನಾಗುತ್ತಾನೆ. ಆದ್ದರಿಂದ ಉಪಾಸ್ಯಸ್ವರೂಪಾಪತ್ತಿರೂಪ ಫಲಪ್ರದತ್ವ ಯುಕ್ತವಾಗುತ್ತದೆ. ಆದರೆ, ಉಪಾಸ್ಯವಾದ ಆದಿತ್ಯಾದಿವಿಕಾರಗಳು ಜ್ಞಾನ ಬಂದ ಕೂಡಲೇ ನಾಶವಾಗುತ್ತವೆ, ಅವುಗಳ ಉಪಾಸನೆಯಿಂದ ಉಪಾಸ್ಯಸ್ವರೂಪಾಪತ್ತಿರೂಪ ಫಲವು ಸಿದ್ಧಿಸುವುದಿಲ್ಲ. ಅಭೇದೋಪಾಸನೆಯ ಫಲ ತದಾಪತ್ತಿ. ಆದ್ದರಿಂದ ಬ್ರಹ್ಮನನ್ನೇ ಆದಿತ್ಯತ್ವೇನ ಉಪಾಸನೆ ಮಾಡಬೇಕಾದೀತು.

## ವಿಶಿಷ್ಟಾದ್ವೈತದರ್ಶನದಲ್ಲಿ ಸೂತ್ರಾರ್ಥ

ರಾಮಾನುಜಭಾಷ್ಯದಲ್ಲಿ 'ನಪ್ರತೀಕೇ' ಸೂತ್ರ ಮತ್ತು 'ಬ್ರಹ್ಮದೃಷ್ಟಿಃ' ಎಂಬ ಸೂತ್ರ ಎರಡೂ ಸೇರಿ ಒಂದು ಅಧಿಕರಣ.

**॥ ನ ಪ್ರತೀಕೇ ನ ಹಿ ಸಃ ॥** ಉಪಾಸಕನು ಬ್ರಹ್ಮನಲ್ಲಿ ಸ್ವಾತ್ಮದೃಷ್ಟಿಯನ್ನು ಅಂದರೆ ನನ್ನ ಅಂತರ್ಯಾಮಿಯಾದ ಆತ್ಮ ಎಂದು ತಿಳಿದಂತೆ ಆದಿತ್ಯಾದಿಪ್ರತೀಕಗಳಲ್ಲೂ ಸ್ವಾತ್ಮ ದೃಷ್ಟಿಯನ್ನು ಮಾಡಬಾರದು. ನ ಹಿ ಸಃ=ನಹಿ ಉಪಾಸಿತುಃ ಆತ್ಮಾ ಪ್ರತೀಕಃ–ಪ್ರತೀಕಗಳು ಉಪಾಸಕನ ಆತ್ಮಗಳಲ್ಲ. ಬ್ರಹ್ಮನಾದರೆ ಆತ್ಮ. ಆದ್ದರಿಂದ ಪ್ರತೀಕಗಳನ್ನು ಸ್ವಾತ್ಮತ್ವೇನ ಉಪಾಸನೆ ಮಾಡಬಾರದು. ಅವುಗಳನ್ನು ಬ್ರಹ್ಮತ್ವೇನ ಉಪಾಸನೆ ಮಾಡಬೇಕು.

ಆದಿತ್ಯಾದಿಗಳನ್ನು ಬ್ರಹ್ಮತ್ವೇನ ಉಪಾಸನೆ ಏಕೆ ಮಾಡಬೇಕು. ಬ್ರಹ್ಮನೇ ಆದಿತ್ಯನೆಂದೇಕೆ ಉಪಾಸನೆ ಮಾಡಬಾರದು? ಇದರಿಂದ ಬ್ರಹ್ಮನಿಗೇ ಉಪಾಸ್ಯತ್ವವನ್ನು ಹೇಳಿದಂತಾಗುತ್ತದೆ ಎಂದರೆ ಅದಕ್ಕುತ್ತರ—

**॥ ಬ್ರಹ್ಮದೃಷ್ಟಿರುತ್ಕರ್ಷಾತ್ ॥** ಬ್ರಹ್ಮನು ಉತ್ಕೃಷ್ಟ, ಆದಿತ್ಯಾದಿಗಳು ಅಪಕೃಷ್ಟ. ಅಪಕೃಷ್ಟವನ್ನು ಉತ್ಕೃಷ್ಟತ್ವೇನ ಉಪಾಸನೆ ಮಾಡಬೇಕು, ಸೂತನನ್ನು ರಾಜನೆಂದು ತಿಳಿವಂತೆ. ಉತ್ಕೃಷ್ಟನನ್ನು ಅಪಕೃಷ್ಟವೆಂದು ತಿಳಿಯಬಾರದು. ರಾಜನನ್ನು ಸೂತನೆಂದು ತಿಳಿಯಬಾರದು.

**ವಿಮರ್ಶೆ**—ಉಪಾಸಕನ ಆತ್ಮ ಬ್ರಹ್ಮನಾದ ಕಾರಣ ಬ್ರಹ್ಮನನ್ನು 'ಸ್ವಾತ್ಮಾ=ನನ್ನ ಆತ್ಮಾ' ಎಂದು ತಿಳಿಯಬಹುದು. ಆದರೆ ಆದಿತ್ಯಾದಿಪ್ರತೀಕಗಳಲ್ಲಿ ಸ್ವಾತ್ಮತ್ವವು ಅಸಂಭಾವಿತವಾದ ಕಾರಣ, ಅವುಗಳನ್ನು ಸ್ವಾತ್ಮತ್ವೇನ ಏಕೆ ಉಪಾಸನೆ ಮಾಡಬಾರದು, ಎಂಬ ಪೂರ್ವಪಕ್ಷಕ್ಕೆ ಅವಕಾಶವೇ ಇಲ್ಲವಾದ ಕಾರಣ, ಈ ಸಿದ್ಧಾಂತದ ಅಗತ್ಯವಿಲ್ಲ.

'ಮನೋ ಬ್ರಹ್ಮೇತಿ ಉಪಾಸತೇ' ಎಂದರೆ ಮನಸ್ಸಿನಲ್ಲಿ ಬ್ರಹ್ಮತ್ವದೃಷ್ಟಿಯನ್ನು ಮಾಡಬೇಕು, ಎಂದರ್ಥ. ಆದರೆ, ಮನಸ್ಸು ಬ್ರಹ್ಮನಲ್ಲ. ಅದನ್ನು ಬ್ರಹ್ಮನೆಂದು ತಿಳಿಯುವುದು ಭ್ರಾಂತಿ ಎನಿಸುತ್ತದೆ. ಇಂತಹ ಭ್ರಾಂತಿಯನ್ನು ವೇದಗಳು ವಿಧಾನ ಮಾಡುವುದು ಉಚಿತವೇ?

ಇಲ್ಲಿಗೆ ಬ್ರಹ್ಮದೃಷ್ಟ್ಯಧಿಕರಣವು ಮುಗಿಯಿತು.

## ೫. ಆದಿತ್ಯಾದಿಮತ್ಯಧಿಕರಣಮ್

### ॥ ಓಂ ಆದಿತ್ಯಾದಿಮತಯಶ್ಚಾಂಗ ಉಪಪತ್ತೇಃ ಓಂ ॥ ೬ ॥

**'ಚಕ್ಷೋಃ ಸೂರ್ಯೋऽ ಅಜಾಯತ' (ಋ. 10.90.13) ಇತ್ಯಾದ್ಯುಪಾಸನಂ ಚ ದೇವಾನಾಂ ಕಾರ್ಯಮೇವ । ಸ್ವೋತ್ಪತ್ತಿಸ್ಥಾನತ್ವಾತ್ ಸ್ವಾಶ್ರಯತ್ವಾನ್ಮುಕ್ತೌ ತತ್ರ ಲಯಸ್ಯಾಪೇಕ್ಷಿತತ್ವಾಚ್ಚೋಪಪನ್ನಂ ತಥೋಪಾಸನಮ್ । ನಾರಾಯಣತಂತ್ರೇ ಚ-**

**'ಆಧಿವ್ಯಾಧಿನಿಮಿತ್ತೇನ ವಿಕ್ಷಿಪ್ತಮನಸೋऽಪಿ ತು ।**
**ಗುಣಾನಾಂ ಸ್ಮರಣಾಶಕ್ತೌ ವಿಷ್ಣೋರ್ಬ್ರಹ್ಮತ್ವಮೇವ ತು ॥**

**ಸ್ಮರ್ತವ್ಯಂ ಸತತಂ ತತ್ತು ನ ಕದಾಚಿತ್ ಪರಿತ್ಯಜೇತ್ ।**
**ಅತ್ರ ಸರ್ವಗುಣಾನಾಂ ಚ ಯತೋऽಂತರ್ಭಾವ ಇಷ್ಯತೇ ॥'**

**'ಸ್ವೋತ್ಪತ್ತ್ಯಂಗಂ ಚ ದೇವಾನಾಂ ವಿಷ್ಣೋಶ್ಚಿಂತ್ಯಂ ಸದೈವ ತು ।**
**ತೇಷಾಂ ತತ್ರ ಪ್ರವೇಶೋ ಹಿ ಮುಕ್ತಿರಿತ್ಯುಚ್ಯತೇ ಬುಧೈಃ ।**
**ತದಾಶ್ರಿತಾಶ್ಚ ತೇ ನಿತ್ಯಂ ತತಶ್ಚಿಂತ್ಯಂ ವಿಶೇಷತಃ ॥' ಇತಿ ।**

''ಚಕ್ಷೋಃ ಸೂರ್ಯೋऽಜಾಯತ=ಕಣ್ಣಿನಿಂದ ಸೂರ್ಯನು ಹುಟ್ಟಿದ'' ಇತ್ಯಾದಿ ಉಪಾಸನೆಗಳನ್ನೂ ದೇವತೆಗಳು ಮಾಡಬೇಕು. ಏಕೆಂದರೆ, ಭಗವಂತನ ಚಕ್ಷುರಾದಿಗಳು ಆಯಾಯ ದೇವತೆಗಳ ಉತ್ಪತ್ತಿಸ್ಥಾನ ಹಾಗೂ ಮೋಕ್ಷಕಾಲದಲ್ಲಿ ಆ ಆ ದೇವತೆಗಳು ತಮ್ಮ ಉತ್ಪತ್ತಿಸ್ಥಾನದಲ್ಲೇ ಲಯವಾಗುತ್ತಾರೆ. ಅದು ಅವರಿಗೆ ಅಪೇಕ್ಷಿತವೂ ಆಗಿದೆ. ಆದ್ದರಿಂದ ಆ ದೇವತೆಗಳು ಹಾಗೆ ಉಪಾಸನೆಮಾಡಬೇಕು. ನಾರಾಯಣ ತಂತ್ರದಲ್ಲಿದೆ- ಮನೋರೋಗ ಅಥವಾ ಶಾರೀರಿಕರೋಗಗಳಿಂದಾಗಿ ಮನಸ್ಸು ವಿಕ್ಷಿಪ್ತವಾಗಿ

ಗುಣಾಂತರಗಳನ್ನು ಸ್ಮರಿಸಲು ಸಾಧ್ಯವಾಗದಿದ್ದರೂ ವಿಷ್ಣು ಬ್ರಹ್ಮ (ಗುಣಪೂರ್ಣ) ಎಂದು ಸತತವಾಗಿ ಸ್ಮರಿಸುತ್ತಿರಬೇಕು. ಎಂದೂ ಅದನ್ನು ಬಿಡಬಾರದು. ಏಕೆಂದರೆ ಬ್ರಹ್ಮತ್ವದಲ್ಲಿ ಎಲ್ಲ ಗುಣಗಳೂ ಸೇರಿವೆ. ದೇವತೆಗಳು ಇದರ ಜೊತೆಗೆ ತಮ್ಮ ಉತ್ಪತ್ತಿಸ್ಥಾನವಾದ ಭಗವಂತನ ಅಂಗಗಳನ್ನೂ ಸ್ಮರಿಸಬೇಕು. ಅವರಿಗೆ ಆಯಾಯಾ ಅಂಗಗಳಲ್ಲಿ ಪ್ರವೇಶವೇ ಮೋಕ್ಷ, ಎಂದು ಜ್ಞಾನಿಗಳು ಹೇಳುತ್ತಾರೆ. ಅಲ್ಲದೆ ಅವರು ಆ ಅಂಗಗಳಲ್ಲಿ ಸರ್ವದಾ ನೆಲೆಸಿಯೂ ಇದ್ದಾರೆ. ಆದ್ದರಿಂದ ವಿಶೇಷವಾಗಿ ಆ ಅಂಗಗಳನ್ನು ಅವರು ಧ್ಯಾನಿಸಬೇಕು.

**ವಿವರಣೆ**—ಯಾವ ತತ್ತ್ವಗಳು ಯಾವುದರಿಂದ ಹುಟ್ಟುತ್ತವೋ ಅವುಗಳಿಗೆ ಅಲ್ಲೇ ಲಯ. ದೇವತೆಗಳು ಭಗವಂತನ ಬೇರೆ ಬೇರೆ ಅಂಗಗಳಿಂದ ಹುಟ್ಟುತ್ತಾರೆ. ಅವರಿಗೆ ಆ ಅಂಗಗಳಲ್ಲೇ ಲಯ. ಹೀಗಾಗಿ ದೇವತೆಗಳು ತಮ್ಮ ಉತ್ಪತ್ತಿ–ಲಯಾಧಿಷ್ಠಾನಗಳನ್ನಾಗಿ ತತ್ತದಂಗಗಳನ್ನು ಉಪಾಸನೆ ಮಾಡಿದರೆ 'ತಂ ಯಥಾ ಯಥೋಪಾಸತೇ ತದೇವ ಭವತಿ' ಎಂಬ ನಿಯಮದಂತೆ ಅವರಿಗೆ ಅಲ್ಲೇ ಲಯವಾಗುತ್ತದೆ.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಓಂ ಆದಿತ್ಯಾದಿಮತಯಶ್ಚಾಂಗ ಉಪಪತ್ತೇಃ ಓಂ ॥** (ಅತ್ರ ಅಂಗಾಶ್ರಿತತ್ವೇನ ದೇವತೋಪಾಸನಸ್ಯ ಆವಶ್ಯಕತ್ವಮುಚ್ಯತೇ । ಅಂಗೇ=ಪ್ರಸ್ತುತಬ್ರಹ್ಮಾಂಗೇ–ತತ್ರ ಸ್ಥಿತತ್ವೇನ ಆದಿತ್ಯಾದಿಮತಯಃ=ಆದಿತ್ಯಾದ್ಯುಪಾಸನಾಶ್ಚ, ಸ್ವಸ್ವಾಶ್ರಯಾಂಗಕತ್ವೇನ ಉಪಾಸನಾ ಇತಿ ಯಾವತ್ ಆದಿತ್ಯಾದಿದೇವೈಃ ಸದಾ ಸರ್ವಥಾ ಕಾರ್ಯಾ ಏವ । ಕುತಃ ? ಉಪಪತ್ತೇಃ=ದೇವಾನಾಮ್ ಅಂಗಜತ್ವೇನ ಮುಕ್ತೌ ತತ್ರ ಲಯಸ್ಯ ಅಪೇಕ್ಷಿತತ್ವಾತ್ ಉಪಾಸನಸ್ಯ ಫಲಸಾಮ್ಯೇನ ಕಾರ್ಯತ್ವಾತ್ । ರೂಪಾಂತರೇಣ ನಿತ್ಯಂ ತತ್ರ ಅವಸ್ಥಿತ್ಯಾ ಮಿಥ್ಯೋಪಾಸನಾಭಾವಾತ್ ಇತಿ ಉಪಪತ್ತೇಃ ಸತ್ವಾದಿತ್ಯರ್ಥಃ ।)

ಈ ಅಧಿಕರಣದಲ್ಲಿ ಭಗವಂತನ ಅಂಗಗಳಲ್ಲಿ ತಾವು ಆಶ್ರಯ ಪಡೆದಿರುತ್ತೇವೆ ಎಂಬ ಉಪಾಸನೆಯನ್ನು ದೇವತೆಗಳು ಮಾಡಬೇಕು ಎಂದು ಹೇಳಲಾಗಿದೆ. ಅಂಗೇ= ಬ್ರಹ್ಮನ ಅಂಗಗಳಲ್ಲಿ ಅಂದರೆ ಅವುಗಳಲ್ಲಿ ತಾವಿದ್ದೇವೆ ಎಂದು ಆದಿತ್ಯಾದಿಮತಯಃ= ಆದಿತ್ಯಾದಿ ಉಪಾಸನೆಗಳು ಮಾಡಲ್ಪಡಬೇಕು. ಅಂದರೆ ಸೂರ್ಯನು ತಾನು ಬ್ರಹ್ಮನ ಕಣ್ಣಿನಲ್ಲಿ ಒಂದು ರೂಪದಿಂದ ಇದ್ದೇನೆ ಎಂದು ಬ್ರಹ್ಮೋಪಾಸನೆಯನ್ನು ಮಾಡಬೇಕು. ಉಪಪತ್ತೇಃ=ಇದು ಯುಕ್ತಿಯುಕ್ತವಾದುದರಿಂದ. ಸೂರ್ಯನು ಹುಟ್ಟಿದ್ದು ಬ್ರಹ್ಮನ ಕಣ್ಣಿನಿಂದಾದುದರಿಂದ ಅವನಿಗೆ ಲಯವೂ ಅಲ್ಲೇ. ತಾನು ಕಣ್ಣಿನಿಂದ ಹುಟ್ಟಿದ್ದೇನೆ,

ಎಂದು ಅವನು ಉಪಾಸನೆ ಮಾಡಿದರೆ ಅದರ ಫಲವಾಗಿ ಅವನಿಗೆ ಅಲ್ಲೇ ಲಯವಾಗುತ್ತದೆ. ಒಂದು ರೂಪದಿಂದ ಸೂರ್ಯನು ಬ್ರಹ್ಮನ ಕಣ್ಣಿನಲ್ಲೂ ಇರುವುದರಿಂದ ಅಂತಹ ಉಪಾಸನೆ ಮಿಥ್ಯೋಪಾಸನೆಯೂ ಆಗುವುದಿಲ್ಲ. ಹೀಗೆ ಯುಕ್ತಿ ಇರುವುದರಿಂದ ಸೂರ್ಯಾದಿದೇವತೆಗಳು ಭಗವದಂಗಾಶ್ರಿತತ್ವೇನ ಬ್ರಹ್ಮೋಪಾಸನೆಯನ್ನು ಮಾಡಬೇಕು.

## ಶಾಂಕರಭಾಷ್ಯದಲ್ಲಿ ಆದಿತ್ಯಾದಿ ಮತ್ಯಧಿಕರಣ

**॥ ಆದಿತ್ಯಾದಿಮತಯಶ್ಚಾಂಗ ಉಪಪತ್ತೇಃ ॥** 'ಯ ಏವಾಸೌ ತಪತಿ ತಮುದ್ಗೀಥಮುಪಾಸೀತ' (ಛಾಂ.1.3.4) ಈ ಶ್ರುತಿಯಲ್ಲಿ ಹೇಳಿರುವುದು ಆದಿತ್ಯನಲ್ಲಿ ಉದ್ಗೀಥೋಪಾಸನೆಯೋ, ಉದ್ಗೀಥದಲ್ಲಿ ಆದಿತ್ಯೋಪಾಸನೆಯೋ, ಎಂದು ಸಂದೇಹ. ಬ್ರಹ್ಮನು ಉತ್ಕೃಷ್ಟನಾದುದರಿಂದ ಅಪಕೃಷ್ಟದಲ್ಲಿ ಉತ್ಕೃಷ್ಟೋಪಾಸನೆ ಎಂದು ನಿರ್ಣಯಿಸಬಹುದು. ಪ್ರಕೃತದಲ್ಲಿ ಎರಡೂ ಸಮಾನವಾದುದರಿಂದ ಈ ನಿರ್ಣಯಕ್ಕೂ ಅವಕಾಶವಿಲ್ಲ. ಹೀಗೆ ಸಂದೇಹ ಬಂದಾಗ ಉದ್ಗೀಥದಲ್ಲೇ ಆದಿತ್ಯೋಪಾಸನೆ ಎಂದು ಈ ಸೂತ್ರದಲ್ಲಿ ಹೇಳಲಾಗಿದೆ. ಅಂಗೇ=ಕರ್ಮಾಂಗವಾದ ಉದ್ಗೀಥಸಾಮದಲ್ಲಿ ಆದಿತ್ಯಾದಿ ಮತಯಃ=ಆದಿತ್ಯಾದಿ ಉಪಾಸನೆಯನ್ನು ಮಾಡಬೇಕು. ಉಪಪತ್ತೇಃ=ಉದ್ಗೀಥವು ಕರ್ಮಾಂಗ. 'ಯದೇವ ವಿದ್ಯಯಾ ಕರೋತಿ...ತದೇವ ವೀರ್ಯವತ್ತರಂ ಭವತಿ' ಎಂದು ಜ್ಞಾನಪೂರ್ವಕವಾಗಿ ಕರ್ಮವನ್ನು ಮಾಡಿದರೆ ಫಲಸಮೃದ್ಧಿಯಾಗುತ್ತದೆ ಎನ್ನುತ್ತಲಿದೆ ಶ್ರುತಿ. ಆದ್ದರಿಂದ ಉದ್ಗೀಥವನ್ನು ಆದಿತ್ಯನೆಂದು ತಿಳಿದು ಕರ್ಮ ಮಾಡಿದರೆ ಕರ್ಮಫಲಸಮೃದ್ಧಿ ಯಾದೀತು. ಆದ್ದರಿಂದ ಉದ್ಗೀಥದಲ್ಲಿ ಆದಿತ್ಯೋಪಾಸನೆಯೇ ಉಪಪನ್ನವಾಗುತ್ತದೆ.

**ವಿಮರ್ಶೆ**—ಇಲ್ಲಿ ಉಪಾಸನಾವಿಧಾಯಕ ವಾಕ್ಯ ಹೀಗಿದೆ—'ಯ ಏವಾಸೌ ತಪತಿ ತಮುದ್ಗೀಥಮ್ ಉಪಾಸೀತ' ಎಂದು. ಈ ವಾಕ್ಯದಲ್ಲಿ ಆದಿತ್ಯನನ್ನು ಅನುವಾದಿಸಿ ಉದ್ಗೀಥಾಭೇದವನ್ನು ಉಪಾಸನೆ ಮಾಡಬೇಕೆಂದು ಸ್ಫುಟವಾಗುತ್ತದೆ. ಅದಕ್ಕೆ ವಿರುದ್ಧವಾಗಿ ಉದ್ಗೀಥವನ್ನು ಆದಿತ್ಯನೆಂದು ಉಪಾಸನೆ ಮಾಡಬೇಕು ಎಂದು ನಿರ್ಣಯಿಸುವುದು ಶ್ರುತಿ ಸಮ್ಮತವಾಗುವುದಿಲ್ಲ.

**ವಿಶಿಷ್ಟಾದ್ವೈತ ಭಾಷ್ಯ**ದಲ್ಲೂ ಇದೇ ಸಿದ್ಧಾಂತವನ್ನು ಮಾಡಲಾಗಿದೆ. ಉಪಪತ್ತೇಃ ಎಂದರೆ ಆದಿತ್ಯನಿಗೆ ಉತ್ಕೃಷ್ಟತ್ವವು ಉಪಪನ್ನವಾಗುತ್ತದೆ, ಎಂದು ಅರ್ಥ.

**ಇಲ್ಲಿಗೆ ಆದಿತ್ಯಾದಿಮತ್ಯಧಿಕರಣವು ಮುಗಿಯಿತು.**

## ೬. ಆಸನಾಧಿಕರಣಮ್

### ॥ ಓಂ ಆಸೀನಃ ಸಂಭವಾತ್ ಓಂ ॥ ೭ ॥

**ಸರ್ವದೋಪಾಸನಂ ಕುರ್ವನ್ನಪ್ಯಾಸೀನೋ ವಿಶೇಷತಃ ಕುರ್ಯಾತ್ । ತದಾ ವಿಕ್ಷೇಪಾಲ್ಪತ್ವೇನ ಸಂಭವಾತ್ ॥**

ಸದಾ ಉಪಾಸನೆಯನ್ನು ಮಾಡುತ್ತಿದ್ದರೂ ಸಾಧಕನು ಕುಳಿತವನಾಗಿ ವಿಶೇಷವಾಗಿ ಉಪಾಸನೆಯನ್ನು ಮಾಡಬೇಕು. ಕುಳಿತಾಗ ಮನೋವಿಕ್ಷೇಪವು ಕಡಿಮೆಯಾದುದರಿಂದ ಏಕಾಗ್ರವಾಗಿ ಧ್ಯಾನ ಸಾಧ್ಯವಾಗುತ್ತದೆ.

**ವಿವರಣೆ—** ಶ್ರವಣಾದಿ ವಿನಾ ನೈವ ಕ್ಷಣಂ ತಿಷ್ಠೇದಪಿ ಕ್ವಚಿತ್ ।
ಅತ್ಯಶಕ್ಯೇ ತು ನಿದ್ರಾದೌ ಪುನರೇವ ಸಮಾರಭೇತ್॥

ಎಂದು ಅನುವ್ಯಾಖ್ಯಾನದಲ್ಲಿ ಹೇಳಿರುವಂತೆ ಸರ್ವದಾ ಅಂದರೆ ನಡೆದಾಡುವಾಗಲೂ ಭಗವಚ್ಚಿಂತನೆಯನ್ನು ಮಾಡುತ್ತಿರಬೇಕು. ಆದರೆ, ನಡೆದಾಡುವಾಗ ನಮ್ಮ ಮನಸ್ಸು ದೇಹ–ದಾರಿಯ ಕಡೆ ಹರಿಯುತ್ತದೆ. ಹೀಗಾಗಿ ಮನಸ್ಸಿನ ಏಕಾಗ್ರತೆ ಇರುವುದಿಲ್ಲ. ಕುಳಿತಾಗ ಈ ಮನೋವಿಕ್ಷೇಪಕ್ಕೆ ಅವಕಾಶವಿಲ್ಲ. ಆದ್ದರಿಂದ ಕುಳಿತು ಧ್ಯಾನ ಮಾಡುವುದು ಒಳ್ಳೆಯದು. ಆದ್ದರಿಂದಲೇ ಭಗವದ್ಗೀತೆಯಲ್ಲಿ—

ಉಪವಿಶ್ಯಾಸನೇ ಯುಂಜ್ಯಾದ್ ಯೋಗಮಾತ್ಮವಿಶುದ್ಧಯೇ ॥

ಎನ್ನಲಾಗಿದೆ. ಸ್ಮೃತಿಯೂ ಹೇಳುತ್ತದೆ—

ಆಸೀನಸ್ಯ ಭವೇತ್ ತತ್ತು ನ ಶಯಾನಸ್ಯ ನಿದ್ರಯಾ ।
ಸ್ಥಿತಸ್ಯ ಗಚ್ಛತೋ ವಾಪಿ ವಿಕ್ಷೇಪಸ್ಯೈವ ಸಂಭವಾತ್॥

ಸ್ಮರಣರೂಪವಾದ ಉಪಾಸನೆಯನ್ನು ನಡೆಯುವಾಗಲೂ ಮಾಡಬಹುದು. ಆದರೆ, ಧ್ಯಾನರೂಪಉಪಾಸನೆಗೆ ಆಸನದ ಅಗತ್ಯವಿದೆ.

### ॥ ಓಂ ಧ್ಯಾನಾಚ್ಚ ಓಂ ॥ ೮ ॥

**'ಸ್ಮರಣೋಪಾಸನಂ ಚೈವ ಧ್ಯಾನಾತ್ಮಕಮಿತಿ ದ್ವಿಧಾ ।**
**ಸ್ಮರಣಂ ಸರ್ವದಾ ಯೋಗ್ಯಂ ಧ್ಯಾನೋಪಾಸನಮಾಸನೇ ॥**

ನೈರಂತರ್ಯಂ ಮನೋವೃತ್ತೇರ್ಧ್ಯಾನಮಿತ್ಯುಚ್ಯತೇ ಬುಧೈಃ ।
ಆಸೀನಸ್ಯ ಭವೇತ್ ತತ್ತು ನ ಶಯಾನಸ್ಯ ನಿದ್ರಯಾ ॥
ಸ್ಥಿತಸ್ಯ ಗಚ್ಛತೋ ವಾಽಪಿ ವಿಕ್ಷೇಪಸ್ಯೈವ ಸಂಭವಾತ್ ।
ಸ್ಮರಣಾತ್ ಪರಮಂ ಜ್ಞೇಯಂ ಧ್ಯಾನಂ ನಾಸ್ತ್ಯತ್ರ ಸಂಶಯಃ' ।

ಇತಿ ಚ ನಾರಾಯಣತಂತ್ರೇ ।

**ಅತೋ ಧ್ಯಾನತ್ವಾಚ್ಚ ॥**

ನಾರಾಯಣತಂತ್ರದಲ್ಲಿದೆ—''ಉಪಾಸನೆಯು ಸ್ಮರಣೆ ಮತ್ತು ಧ್ಯಾನ ಎಂದು ಎರಡು ವಿಧ. ಅವುಗಳಲ್ಲಿ ಸ್ಮರಣೆಯನ್ನು ಯಾವಾಗಲೂ ಮಾಡಬಹುದು. ಆದರೆ, ಧ್ಯಾನವು ಆಸನವಿದ್ದರೆ ಮಾತ್ರ. ಮನಸ್ಸು ನಿರಂತರವಾಗಿ ಭಗವಂತನಲ್ಲಿ ನೆಲೆಗೊಳ್ಳುವುದೇ ಧ್ಯಾನ. ಇಂತಹ ಧ್ಯಾನ ಕುಳಿತವನಿಂದ ಸಾಧ್ಯ, ಮಲಗಿದವನಿಗೆ ನಿದ್ರೆಯಿಂದಾಗಿ ಧ್ಯಾನ ಸಾಧ್ಯವಾಗದು. ನಿಂತಿರುವವನಿಗೆ, ನಡೆಯುವವನಿಗೆ ವಿಕ್ಷೇಪದಿಂದಾಗಿ ಏಕಾಗ್ರತೆ ಬರುವುದಿಲ್ಲ. ಧ್ಯಾನವು ಸ್ಮರಣೆಗಿಂತಲೂ ಶ್ರೇಷ್ಠವೆಂದು ತಿಳಿಯಬೇಕು.'' ಆದ್ದರಿಂದ ಧ್ಯಾನವು ಉಪಾಸನೆಯಾದ ಕಾರಣದಿಂದಲೂ ಆಸನವು ಉಪಾಸನೆಗೆ ಅಗತ್ಯವಾಗಿದೆ.

**ವಿವರಣೆ**—ಸರ್ವದಾ ಉಪಾಸನೆಯನ್ನು ಮಾಡಬೇಕು, ಎಂದೂ ವಿಧಿ ಇದೆ. ಕುಳಿತೇ ಉಪಾಸನೆಯನ್ನು ಮಾಡಬೇಕೆಂದು ನಿರ್ಬಂಧ ಮಾಡಿದರೆ ಆ ವಿಧಿಗೆ ವಿರೋಧ ಮಾಡಿದಂತೆ. ಏಕೆಂದರೆ, ಸಾಧಕರು ಸರ್ವದಾ ಕುಳಿತಿರಲು ಸಾಧ್ಯವಿಲ್ಲ. ಆದ್ದರಿಂದ ಈ ಎರಡೂ ನಿರ್ಬಂಧಗಳನ್ನೂ ಪಾಲಿಸುವುದು ಹೀಗೆ—ಸ್ಮರಣರೂಪವಾದ ಉಪಾಸನೆಯನ್ನು ಸರ್ವದಾ ಮಾಡುತ್ತಿರಬೇಕು. ಧ್ಯಾನರೂಪವಾದ ಉಪಾಸನೆಯನ್ನು ಕುಳಿತೇ ಮಾಡಬೇಕು, ಎಂದು. ಅಂದಮಾತ್ರಕ್ಕೆ ಸ್ಮರಣೆಯೇ ಸಾಕು, ಧ್ಯಾನ ಬೇಡ ಎನ್ನುವಂತಿಲ್ಲ. ಧ್ಯಾನವು ಸ್ಮರಣೆಗಿಂತಲೂ ಶ್ರೇಷ್ಠವಾದ ಸಾಧನ.

**॥ ಓಂ ಅಚಲತ್ವಂ ಚಾಪೇಕ್ಷ್ಯ ಓಂ ॥ ೯ ॥**

'ಅಚಲಂ ಚೇಚ್ಛರೀರಂ ಸ್ಯಾನ್ಮನಸಶ್ಚಾಪ್ಯಚಾಲನಮ್ ।
ಚಲನೇ ತು ಶರೀರಸ್ಯ ಚಂಚಲಂ ತು ಮನೋ ಭವೇತ್ ॥'

ಇತಿ ಚ ಬ್ರಹ್ಮಾಂಡೇ ।

ಬ್ರಹ್ಮಾಂಡಪುರಾಣದಲ್ಲಿದೆ—ಶರೀರವು ನಿಶ್ಚಲವಾಗಿದ್ದಲ್ಲಿ ಮನಸ್ಸೂ ನಿಶ್ಚಲವಾಗಿರುತ್ತದೆ. ಶರೀರದಲ್ಲಿ ಚಲನೆಯಾದರೆ ಮನಸ್ಸಿನಲ್ಲೂ ಚಲನೆಯಾಗುತ್ತದೆ. ಹೀಗೆ ಮನಸ್ಸಿನ ಅಚಲತ್ವವನ್ನು ಸಂಪಾದಿಸಲೂ ಕುಳಿತೇ ಧ್ಯಾನ ಮಾಡಬೇಕು.

**ವಿವರಣೆ**—ಪ್ರತ್ಯಾಹಾರ, ಅಚಲತ್ವ ಮತ್ತು ನಿದ್ರಾಭಾವ ಇವು ಧ್ಯಾನಾಂಗಗಳು. ಪ್ರತ್ಯಾಹಾರ ಎಂದರೆ ಇಂದ್ರಿಯಗಳನ್ನು ವಿಷಯಪದಾರ್ಥಗಳಿಂದ ದೂರವಿಡುವುದು. ಇದಕ್ಕೆ ಆಸನದ ಅಗತ್ಯವಿಲ್ಲದಿದ್ದರೂ ಮನಸ್ಸಿನ ಅಚಲತ್ವ ಮತ್ತು ನಿದ್ರಾವಸ್ಥೆಯನ್ನು ಗೆಲ್ಲುವುದಕ್ಕಾಗಿ ಆಸನವು ಬೇಕು.

## ॥ ಓಂ ಸ್ಮರಂತಿ ಚ ಓಂ ॥ 10 ॥

**'ಸಮಂ ಕಾಯಶಿರೋಗ್ರೀವಂ ಧಾರಯನ್ನಚ(ಲಂ)ಲಃ ಸ್ಥಿರಃ ।**
**ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥'**
**(ಭ.ಗೀ. 6.13) ಇತ್ಯಾದಿ ।**

ಸ್ಮೃತಿಯೂ ಇದೆ—ಶರೀರ-ತಲೆ-ಕುತ್ತಿಗೆ ಇವು ಮೂರು ನೇರವಾಗಿ ಮತ್ತು ನಿಶ್ಚಲವಾಗಿರುವಂತೆ ಮಾಡಿ ನಿಶ್ಚಲ ಮನಸ್ಕನಾಗಿ(ಸ್ಥಿರಃ) ತನ್ನ ಮೂಗಿನ ತುದಿಯನ್ನೇ ನೋಡುತ್ತಾ ದಿಕ್ಕುಗಳನ್ನೂ ನೋಡದೆ ಧ್ಯಾನಿಸಬೇಕು.

**ವಿವರಣೆ**—ನಾಸಿಕಾಗ್ರವನ್ನು ನೋಡುತ್ತಿರಬೇಕು, ಎಂದಿರುವುದರಿಂದ ಕಣ್ಣೂ ನಿಶ್ಚಲವಾಗಿರಬೇಕೆಂದು ತಿಳಿಯುತ್ತದೆ. ಗೀತೆಯ ಈ ವಾಕ್ಯವನ್ನು 'ಉಪವಿಶ್ಯಾಸನೇ ಯುಂಜ್ಯಾತ್' ಎಂಬ ಹಿಂದಿನ ಶ್ಲೋಕದ ಕ್ರಿಯಾಪದದೊಂದಿಗೆ ಅನ್ವಯಿಸಬೇಕು.

## ॥ ಓಂ ಯತ್ರೈಕಾಗ್ರತಾ ತತ್ರಾವಿಶೇಷಾತ್ ಓಂ ॥ ೧೧ ॥

**ದೇಶಕಾಲಾವಸ್ಥಾದಿಷು ಯತ್ರೈಕಾಗ್ರತಾ ಭವತಿ ತತ್ರೈವ ಸ್ಥಾತವ್ಯಮ್ ।**

**'ತಮೇವ ದೇಶಂ ಸೇವೇತ ತಂ ಕಾಲಂ ತಾಮವಸ್ಥಿತಿಮ್ ।**
**ತಾನೇವ ಭೋಗಾನ್ (ಭುಂಜೀತ)ಸೇವೇತ ಮನೋ ಯತ್ರ ಪ್ರಸೀದತಿ ॥**
**ನಹಿ ದೇಶಾದಿಭಿಃ ಕಶ್ಚಿದ್ ವಿಶೇಷಃ ಸಮುದೀರಿತಃ ।**
**ಮನಃಪ್ರಸಾದನಾರ್ಥಂ ಹಿ ದೇಶಕಾಲಾದಿಚಿಂತನಾ ॥'**
**ಇತಿ ಹಿ ವಾರಾಹೇ ॥**

ದೇಶ–ಕಾಲ ಮತ್ತು ಶಾರೀರಿಕ ಅವಸ್ಥೆ ಇವು ಮೂರರಲ್ಲಿ ಯಾವ ದೇಶ–ಕಾಲಾವಸ್ಥೆಗಳಲ್ಲಿ ಮನಸ್ಸಿನ ಏಕಾಗ್ರತೆ ಬರುವುದೋ ಅಂತಹ ದೇಶಾದಿಗಳಲ್ಲೇ ಇದ್ದು ಧ್ಯಾನಿಸಬೇಕು. ವಾರಾಹವಚನ ಹೀಗಿದೆ— ಮನಸ್ಸು ಹೇಗೆ ಪ್ರಸನ್ನವಾಗಿರುತ್ತದೋ ಅಂತಹ ದೇಶ–ಕಾಲ–ಅವಸ್ಥೆಗಳನ್ನು ಅರಸಬೇಕು. ದೇಶಾದಿಗಳಿಂದ ಧ್ಯಾನಕ್ಕೇನೂ ಮಹತ್ವ ಬರುವುದಿಲ್ಲ. ಮನಃಪ್ರಸನ್ನತೆಗಾಗಿ ಮಾತ್ರ ದೇಶ–ಕಾಲಾದಿಗಳ ಚಿಂತೆ.

**ವಿವರಣೆ**—'ಪರ್ವತಾಗ್ರೇ ನದೀತೀರೇ' ಎಂದು ತಪಸ್ಸಿಗೆ ಸ್ಥಾನವಿಶೇಷಗಳನ್ನು ಹೇಳಲಾಗಿದೆ. 'ಬ್ರಾಹ್ಮೇ ಮುಹೂರ್ತೇ ಚೋತ್ಥಾಯ' ಎಂದು ಸಂಧ್ಯಾಕ್ಕೆ ಕಾಲ ವಿಶೇಷವನ್ನು ಹೇಳಲಾಗಿದೆ. ಜಪ ಪೂಜಾದಿಗಳಿಗೆ ಉಪವಾಸದ ನಿರ್ಬಂಧವಿದೆ. ಆದರೆ, ಧ್ಯಾನಕ್ಕೆ ಹೀಗೆ ದೇಶ–ಕಾಲಾದಿಗಳ ನಿರ್ಬಂಧವಿಲ್ಲ. ಯಾವ ದೇಶ ಕಾಲಗಳಲ್ಲಿ ಮನಸ್ಸಿಗೆ ಏಕಾಗ್ರತೆ ಬರುವುದೋ ಅಂತಹ ದೇಶಕಾಲಗಳಲ್ಲಿ ಧ್ಯಾನಿಸಬಹುದು. ಅದರಂತೆ ನಿರಾಹಾರತ್ವಾದಿ ಅವಸ್ಥೆಗಳ ನಿರ್ಬಂಧವೂ ಇಲ್ಲ. ಅದನ್ನು ಗೀತೆಯಲ್ಲಿ ಹೇಳಲಾಗಿದೆ—

ನಾತ್ಯಶ್ನತಸ್ತು ಯೋಗೋಽಸ್ತಿ ನಚೈಕಾಂತಮನಶ್ನತಃ ।
ನ ಚಾತಿಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ಆಸೀನಃ ಸಂಭವಾತ್ ಓಂ ॥** (ಅತ್ರ ಧ್ಯಾನೇ ಆಸನಾದಿನಿಯಮಃ ಸಾಧ್ಯತೇ । ಆಸೀನಃ=ಆಸನೇ ಉಪವಿಷ್ಟಃ ಸದಾ ಉಪಾಸನಂ ಕುರ್ಯಾತ್ । ಕುತಃ ? ಸಂಭವಾತ್=ಆಸೀನಸ್ಯೈವ ಸಂಭವಾತ್, ಅನ್ಯಸ್ಯಾಸಂಭವಾತ್ ಇತ್ಯರ್ಥಃ ।)

ಈ ಅಧಿಕರಣದಲ್ಲಿ ಧ್ಯಾನವನ್ನು ಆಸನದಲ್ಲಿ ಕುಳಿತೇ ಮಾಡಬೇಕು, ಎಂದು ಹೇಳಲಾಗಿದೆ. ಆಸೀನಃ=ಆಸನದಲ್ಲಿ ಕುಳಿತೇ ಸರ್ವದಾ ಉಪಾಸನೆಯನ್ನು ಮಾಡಬೇಕು. ಏಕೆಂದರೆ, ಸಂಭವಾತ್, ಕುಳಿತರೆ ಮಾತ್ರ ಧ್ಯಾನವು ಸಾಧ್ಯ, ಇಲ್ಲದಿದ್ದರೆ ಸಾಧ್ಯವಿಲ್ಲ.

**॥ ಓಂ ಧ್ಯಾನಾಚ್ಚ ಓಂ ॥** (ಭಾವಪ್ರಧಾನಮ್ । ಆಸೀನೇನ ಕ್ರಿಯಮಾಣಸ್ಯ ಧ್ಯಾನರೂಪತ್ವಾತ್ ಅವಿರೋಧಶ್ಚ ಇತ್ಯರ್ಥಃ । ಸ್ಮರಣ–ಧ್ಯಾನಭೇದೇನ ಉಪಾಸನಸ್ಯ ದ್ವೈವಿಧ್ಯಾತ್ ನಿತ್ಯಂ ಕಾರ್ಯಸ್ಯ ಸ್ಮರಣಸ್ಯ ತದನಪೇಕ್ಷತ್ವೇಽಪಿ ಧ್ಯಾನೇ ತದಾವಶ್ಯಕಮ್ । ಅನ್ಯಥಾ ಚಿತ್ತವಿಕ್ಷೇಪಾತ್ ಇತಿ ಭಾವಃ ।)

ಧ್ಯಾನಾಚ್ಚ—ಧ್ಯಾನತ್ವಾಚ್ಚ=ಕುಳಿತು ಮಾಡುವುದೇ ಧ್ಯಾನವಾಗುವುದರಿಂದಾಗಿಯೂ ಧ್ಯಾನಕ್ಕೂ ಕುಳಿತುಕೊಳ್ಳುವುದಕ್ಕೂ ವಿರೋಧವೂ ಇಲ್ಲ. ಉಪಾಸನೆ ಎರಡು ವಿಧ—ಸ್ಮರಣೆ ಮತ್ತು ಧ್ಯಾನ. ಸ್ಮರಣೆ ನಿಂತಾಗ, ನಡೆದಾಗಲೂ ನಡೆಯುತ್ತದೆ. ಆದರೆ ಕುಳಿತು ಮಾಡಿದ ನಿರಂತರ ಸ್ಮರಣೆಯೇ ಧ್ಯಾನ.

**॥ ಓಂ ಅಚಲತ್ವಂ ಚಾಪೇಕ್ಷ್ಯ ಓಂ ॥** (ಮನೋವಿಕ್ಷೇಪಾಭಾವಃ ಇತಿ ಶೇಷಃ । ನ ಕೇವಲಂ ಪ್ರತ್ಯಾಹಾರಾದಿನಾ, ಕಿಂತು ಶರೀರಾಚಲತ್ವಂ ಚಾಪೇಕ್ಷ್ಯ ಮನೋವಿಕ್ಷೇಪಾಭಾವಃ ಭವತಿ, ಇತ್ಯತಃ ಆಸೀನ ಏವ ಧ್ಯಾಯೀತ, ಇತ್ಯರ್ಥಃ। ತತ್ತ್ವಪ್ರದೀಪೇ ತು ಅನಿದ್ರತ್ವಂ ಚಶಬ್ದಾರ್ಥ ಇತ್ಯುಕ್ತಮ್ ।)

ಪ್ರತ್ಯಾಹಾರಾದಿಗಳಿಂದಷ್ಟೇ ಮನಸ್ಸಿನ ಚಂಚಲತೆಯನ್ನು ನಿಗ್ರಹಿಸುವುದಲ್ಲದೆ, ದೇಹದ ಚಲನೆಯನ್ನು ನಿಯಂತ್ರಿಸುವುದರಿಂದಲೂ ಮನೋವಿಕ್ಷೇಪಾಭಾವವನ್ನು ಸಂಪಾದಿಸಬಹುದು. ಆದ್ದರಿಂದಲೂ ಕುಳಿತೇ ಧ್ಯಾನಿಸಬೇಕು. ತತ್ತ್ವಪ್ರದೀಪದಲ್ಲಿ ಚಶಬ್ದಕ್ಕೆ ನಿದ್ರೆ ಮಾಡದಿರುವ ಸ್ಥಿತಿಯನ್ನು ಅರ್ಥವೆಂದು ಹೇಳಲಾಗಿದೆ.

**॥ ಓಂ ಸ್ಮರಂತಿ ಚ ಓಂ ॥** (ಕೃಷ್ಣಾದಯಃ ಉಕ್ತಮರ್ಥಂ ''ಉಪವಿಶ್ಯಾಸನೇ'' 'ಸಮಂ ಕಾಯಶಿರೋಗ್ರೀವಂ' ಇತ್ಯಾದಿನಾ ಸ್ಮರಂತಿ ಇತ್ಯರ್ಥಃ। ಸ್ಮೃತಿಬಹುತ್ವ ಸೂಚನಾಯ ಬಹುವಚನಮ್ ।) ಶ್ರೀಕೃಷ್ಣನೇ ಮುಂತಾದವರೂ 'ಉಪವಿಶ್ಯಾಸನೇ' ಂದು ಕುಳಿತೇ ಧ್ಯಾನಿಸಬೇಕೆಂದು ಹೇಳಿದ್ದಾರೆ ಕೂಡಾ.

**॥ ಓಂ ಯತ್ರೈಕಾಗ್ರತಾ ತತ್ರಾವಿಶೇಷಾತ್ ಓಂ ॥**(ಧ್ಯಾನಸ್ಯೇತಿ ವಿಪರಿಣಮ್ಯಾಸ್ತಿ । ಯತ್ರ=ದೇಶಕಾಲಾದೌ ಧ್ಯಾನಸ್ಯ ಏಕಾಗ್ರತಾ ಸ್ಯಾತ್ ತತ್ರ ಧ್ಯಾನಂ ಕಾರ್ಯಮ್ । ನ ತು ದೇಶವಿಶೇಷನಿಯತಿಃ। ಕುತಃ ? ಕಿಂ ಧ್ಯಾನೋಪಯೋಗಿತಯಾ ಆಸನವತ್ ತದಾವಶ್ಯಕಮ್, ಉತ ತಜ್ಜ್ಞಾನೋಪಯೋಗಿತಯಾ ? ನ ದ್ವಯಮಪಿ। ಅವಿಶೇಷಾತ್=ನಿಯತದೇಶಾದಿನಾ ಧ್ಯಾನೇ ಜ್ಞಾನೇ ವಾ ತೇನ ವಿಶೇಷಾಭಾವಾತ್ ಇತ್ಯರ್ಥಃ ॥)

ಯಾವ ದೇಶ ಕಾಲಗಳಲ್ಲಿ ಮನಸ್ಸಿನ ಏಕಾಗ್ರತೆ ಬರುವುದೋ ಅಂತಹ ಯಾವುದೇ ದೇಶ–ಕಾಲಗಳಲ್ಲಿ ಧ್ಯಾನವನ್ನು ಮಾಡಬಹುದು. ಅದಕ್ಕೆ ದೇಶವಿಶೇಷದ ನಿರ್ಬಂಧವಿಲ್ಲ. ಅವಿಶೇಷಾತ್=ದೇಶ–ಕಾಲವಿಶೇಷಗಳಿಂದ ಜ್ಞಾನಕ್ಕಾಗಲೀ ಧ್ಯಾನಕ್ಕಾಗಲೀ ವಿಶೇಷವೇನೂ ಬರುವುದಿಲ್ಲ.

## ಶಾಂಕರಭಾಷ್ಯದಲ್ಲಿ ಆಸೀನಾಧಿಕರಣ

ಉಪಾಸನಾದಿಗಳನ್ನು ಕುಳಿತೇ ಮಾಡಬೇಕು. ಉಪಾಸನೆ ಎಂದರೆ 'ಸಮಾನಪ್ರತ್ಯಯಪ್ರವಾಹಕರಣಂ, ಒಂದೇ ವಿಧದ ಜ್ಞಾನಪ್ರವಾಹ. ನಡೆವಾಗ, ಓಡುವಾಗ, ನಿಲ್ಲುವಾಗ ಮನಸ್ಸು ದೇಹದ ಕಡೆಗೆ ಗಮನಕೊಡುವುದರಿಂದ ಉಪಾಸನೆಯು ಸಾಧ್ಯವಾಗುವುದಿಲ್ಲ. ಕುಳಿತಿದ್ದಾಗ ಮಾತ್ರ ಇಂತಹ ಉಪಾಸನಾ ಸಾಧ್ಯ. ಆಗ 'ಭೂಯಾನ್ ದೋಷಃ ಸುಪರಿಹರಃ' ಹೆಚ್ಚಿನ ಮನೋವಿಕ್ಷೇಪಕ್ಕೆ ಅವಕಾಶವಿಲ್ಲ.

**|| ಧ್ಯಾನಾಚ್ಚ ||** ಒಂದೇ ವಿಧದ ಜ್ಞಾನಪ್ರವಾಹವೇ ಧ್ಯಾನ. ಧ್ಯಾನವಾದರೋ ಚಿತ್ತವಿಕ್ಷೇಪವಿದ್ದರೆ ಆಗುವುದಿಲ್ಲ. 'ಬಕೋ ಧ್ಯಾಯತಿ, ಪ್ರೋಷಿತಬಂಧುಃ ಧ್ಯಾಯತಿ' ಇಲ್ಲೆಲ್ಲ ಚಿತ್ತೈಕಾಗ್ರ್ಯವೇ ಧ್ಯಾನ. ಕುಳಿತಾಗ ಮಾತ್ರ ಧ್ಯಾನರೂಪವಾದ ಉಪಾಸನೆಯು ಸಾಧ್ಯ. ಆದ್ದರಿಂದಲೂ ಕುಳಿತೇ ಉಪಾಸನೆ ಮಾಡಬೇಕು.

**|| ಅಚಲತ್ವಂ ಚಾಪೇಕ್ಷ್ಯ ||**'ಧ್ಯಾಯತೀವ ಪೃಥಿವೀ' ಇಲ್ಲಿ ಪೃಥಿವಿಯು ಅಚಲವಾದ ಕಾರಣ 'ಧ್ಯಾಯತಿ' ಶಬ್ದದ ಪ್ರಯೋಗವಿದೆ. ಆದ್ದರಿಂದಲೂ ಕುಳಿತೇ ಉಪಾಸನೆ ಮಾಡಬೇಕು. ಕುಳಿತಾಗ ಮಾತ್ರ ಅಚಲತ್ವ ಬರುತ್ತದೆ.

'ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ ||' (ಗೀ.ತಾ.6.11) ಎಂದು ಸ್ಮೃತಿ ಇರುವುದರಿಂದಲೂ ಆಸನ ಬೇಕೇಬೇಕು.

**ವಿಮರ್ಶೆ**—ಶಾಂಕರಭಾಷ್ಯದಲ್ಲಿ ಕರ್ಮಸಮೃದ್ಧಿಗೆ ಕಾರಣವಾದ ಉದ್ಗೀಥಾದಿ ಉಪಾಸನೆಯನ್ನು ಯಜಮಾನ ಮಾಡಬಾರದು. ಯಜಮಾನನಿಗಾಗಿ ಋತ್ವಿಕ್ಕುಗಳೇ ಮಾಡಬೇಕು, ಎಂದು ಸಿದ್ಧಾಂತ ಮಾಡಲಾಗಿದೆ. ಋತ್ವಿಕ್ಕುಗಳು ಯಾಗಕರ್ಮಗಳಲ್ಲಿ ವ್ಯಗ್ರರಾಗಿದ್ದರೂ ಉದ್ಗೀಥೋಪಾಸನೆಯನ್ನು ಮಾಡಬೇಕು ಎಂದು ಅಲ್ಲಿ ಸಿದ್ಧಾಂತಿಸಿ ಇಲ್ಲಿ ಕರ್ಮಾಂತರದಲ್ಲಿ ಆಸಕ್ತರಾಗಿದ್ದರೆ ಉಪಾಸನೆ ಮಾಡಲಾಗುವುದಿಲ್ಲ, ಎಂದು ಸಿದ್ಧಾಂತ ಮಾಡುವುದು ಹೇಗೆ?

## ಶಾಂಕರಭಾಷ್ಯದಲ್ಲಿ ಏಕಾಗ್ರತಾಧಿಕರಣ

**|| ಯತ್ರೈಕಾಗ್ರತಾ ತತ್ರಾವಿಶೇಷಾತ್||** ಧಾರ್ಮಿಕ ಕ್ರಿಯೆಗಳಿಗೆ ದಿಕ್ಕಿನ ನಿರ್ಬಂಧ, ದೇಶದ ನಿಯಮ ಇರುವಂತೆ ಉಪಾಸನೆಗೆ ಇಂತಹ ನಿಯಮಗಳು ಇಲ್ಲ. ಎಲ್ಲಿ ಏಕಾಗ್ರತೆಬರುವುದೋ ಅಲ್ಲಿ ಉಪಾಸನೆ ಮಾಡಬಹುದು.ಶ್ವೇತಾಶ್ವತರೋಪನಿಷತ್ತಿನಲ್ಲಿ-

ಧ್ಯಾನಾಚ್ಚ—ಧ್ಯಾನತ್ವಾಚ್ಚ=ಕುಳಿತು ಮಾಡುವುದೇ ಧ್ಯಾನವಾಗುವುದರಿಂದಾಗಿಯೂ ಧ್ಯಾನಕ್ಕೂ ಕುಳಿತುಕೊಳ್ಳುವುದಕ್ಕೂ ವಿರೋಧವೂ ಇಲ್ಲ. ಉಪಾಸನೆ ಎರಡು ವಿಧ—ಸ್ಮರಣೆ ಮತ್ತು ಧ್ಯಾನ. ಸ್ಮರಣೆ ನಿಂತಾಗ, ನಡೆದಾಗಲೂ ನಡೆಯುತ್ತದೆ. ಆದರೆ ಕುಳಿತು ಮಾಡಿದ ನಿರಂತರ ಸ್ಮರಣೆಯೇ ಧ್ಯಾನ.

**॥ ಓಂ ಅಚಲತ್ವಂ ಚಾಪೇಕ್ಷ್ಯ ಓಂ ॥** (ಮನೋವಿಕ್ಷೇಪಾಭಾವಃ ಇತಿ ಶೇಷಃ । ನ ಕೇವಲಂ ಪ್ರತ್ಯಾಹಾರಾದಿನಾ, ಕಿಂತು ಶರೀರಾಚಲತ್ವಂ ಚಾಪೇಕ್ಷ್ಯ ಮನೋವಿಕ್ಷೇಪಾಭಾವಃ ಭವತಿ, ಇತ್ಯತಃ ಆಸೀನ ಏವ ಧ್ಯಾಯೀತ, ಇತ್ಯರ್ಥಃ । ತತ್ತ್ವಪ್ರದೀಪೇ ತು ಅನಿದ್ರತ್ವಂ ಚಶಬ್ದಾರ್ಥ ಇತ್ಯುಕ್ತಮ್ ।)

ಪ್ರತ್ಯಾಹಾರಾದಿಗಳಿಂದಷ್ಟೇ ಮನಸ್ಸಿನ ಚಂಚಲತೆಯನ್ನು ನಿಗ್ರಹಿಸುವುದಲ್ಲದೆ, ದೇಹದ ಚಲನೆಯನ್ನು ನಿಯಂತ್ರಿಸುವುದರಿಂದಲೂ ಮನೋವಿಕ್ಷೇಪಾಭಾವವನ್ನು ಸಂಪಾದಿಸಬಹುದು. ಆದ್ದರಿಂದಲೂ ಕುಳಿತೇ ಧ್ಯಾನಿಸಬೇಕು. ತತ್ತ್ವಪ್ರದೀಪದಲ್ಲಿ ಚಶಬ್ದಕ್ಕೆ ನಿದ್ರೆ ಮಾಡದಿರುವ ಸ್ಥಿತಿಯನ್ನು ಅರ್ಥವೆಂದು ಹೇಳಲಾಗಿದೆ.

**॥ ಓಂ ಸ್ಮರಂತಿ ಚ ಓಂ ॥** (ಕೃಷ್ಣಾದಯಃ ಉಕ್ತಮರ್ಥಂ ''ಉಪವಿಶ್ಯಾಸನೇ'' 'ಸಮಂ ಕಾಯಶಿರೋಗ್ರೀವಂ' ಇತ್ಯಾದಿನಾ ಸ್ಮರಂತಿ ಇತ್ಯರ್ಥಃ । ಸ್ಮೃತಿಬಹುತ್ವ ಸೂಚನಾಯ ಬಹುವಚನಮ್ ।) ಶ್ರೀಕೃಷ್ಣನೇ ಮುಂತಾದವರೂ 'ಉಪವಿಶ್ಯಾಸನೇ' ಎಂದು ಕುಳಿತೇ ಧ್ಯಾನಿಸಬೇಕೆಂದು ಹೇಳಿದ್ದಾರೆ ಕೂಡಾ.

**॥ ಓಂ ಯತ್ರೈಕಾಗ್ರತಾ ತತ್ರಾವಿಶೇಷಾತ್ ಓಂ ॥**(ಧ್ಯಾನಸ್ಯೇತಿ ವಿಪರಿಣಮ್ಯಾಸ್ತಿ । ಯತ್ರ=ದೇಶಕಾಲಾದೌ ಧ್ಯಾನಸ್ಯ ಏಕಾಗ್ರತಾ ಸ್ಯಾತ್ ತತ್ರ ಧ್ಯಾನಂ ಕಾರ್ಯಮ್ । ನ ತು ದೇಶವಿಶೇಷನಿಯತಿಃ । ಕುತಃ ? ಕಿಂ ಧ್ಯಾನೋಪಯೋಗಿತಯಾ ಆಸನವತ್ ತದಾವಶ್ಯಕಮ್, ಉತ ತಜ್ಜ್ಞಾನೋಪಯೋಗಿತಯಾ ? ನ ದ್ವಯಮಪಿ । ಅವಿಶೇಷಾತ್=ನಿಯತದೇಶಾದಿನಾ ಧ್ಯಾನೇ ಜ್ಞಾನೇ ವಾ ತೇನ ವಿಶೇಷಾಭಾವಾತ್ ಇತ್ಯರ್ಥಃ ॥)

ಯಾವ ದೇಶ ಕಾಲಗಳಲ್ಲಿ ಮನಸ್ಸಿನ ಏಕಾಗ್ರತೆ ಬರುವುದೋ ಅಂತಹ ಯಾವುದೇ ದೇಶ–ಕಾಲಗಳಲ್ಲಿ ಧ್ಯಾನವನ್ನು ಮಾಡಬಹುದು. ಅದಕ್ಕೆ ದೇಶವಿಶೇಷದ ನಿರ್ಬಂಧವಿಲ್ಲ. ಅವಿಶೇಷಾತ್=ದೇಶ–ಕಾಲವಿಶೇಷಗಳಿಂದ ಜ್ಞಾನಕ್ಕಾಗಲೀ ಧ್ಯಾನಕ್ಕಾಗಲೀ ವಿಶೇಷವೇನೂ ಬರುವುದಿಲ್ಲ.

## ಶಾಂಕರಭಾಷ್ಯದಲ್ಲಿ ಆಸೀನಾಧಿಕರಣ

ಉಪಾಸನಾದಿಗಳನ್ನು ಕುಳಿತೇ ಮಾಡಬೇಕು. ಉಪಾಸನೆ ಎಂದರೆ 'ಸಮಾನಪ್ರತ್ಯಯಪ್ರವಾಹಕರಣಂ, ಒಂದೇ ವಿಧದ ಜ್ಞಾನಪ್ರವಾಹ. ನಡೆವಾಗ, ಓಡುವಾಗ, ನಿಲ್ಲುವಾಗ ಮನಸ್ಸು ದೇಹದ ಕಡೆಗೆ ಗಮನಕೊಡುವುದರಿಂದ ಉಪಾಸನೆಯು ಸಾಧ್ಯವಾಗುವುದಿಲ್ಲ. ಕುಳಿತಿದ್ದಾಗ ಮಾತ್ರ ಇಂತಹ ಉಪಾಸನಾ ಸಾಧ್ಯ. ಆಗ 'ಭೂಯಾನ್ ದೋಷಃ ಸುಪರಿಹರಃ' ಹೆಚ್ಚಿನ ಮನೋವಿಕ್ಷೇಪಕ್ಕೆ ಅವಕಾಶವಿಲ್ಲ.

**॥ ಧ್ಯಾನಾಚ್ಚ ॥** ಒಂದೇ ವಿಧದ ಜ್ಞಾನಪ್ರವಾಹವೇ ಧ್ಯಾನ. ಧ್ಯಾನವಾದರೋ ಚಿತ್ತವಿಕ್ಷೇಪವಿದ್ದರೆ ಆಗುವುದಿಲ್ಲ. 'ಬಕೋ ಧ್ಯಾಯತಿ, ಪ್ರೋಷಿತಬಂಧುಃ ಧ್ಯಾಯತಿ' ಇಲ್ಲೆಲ್ಲ ಚಿತ್ತೈಕಾಗ್ರ್ಯವೇ ಧ್ಯಾನ. ಕುಳಿತಾಗ ಮಾತ್ರ ಧ್ಯಾನರೂಪವಾದ ಉಪಾಸನೆಯು ಸಾಧ್ಯ. ಆದ್ದರಿಂದಲೂ ಕುಳಿತೇ ಉಪಾಸನೆ ಮಾಡಬೇಕು.

**॥ ಅಚಲತ್ವಂ ಚಾಪೇಕ್ಷ್ಯ ॥**'ಧ್ಯಾಯತೀವ ಪೃಥಿವೀ' ಇಲ್ಲಿ ಪೃಥಿವಿಯು ಅಚಲವಾದ ಕಾರಣ 'ಧ್ಯಾಯತಿ' ಶಬ್ದದ ಪ್ರಯೋಗವಿದೆ. ಆದ್ದರಿಂದಲೂ ಕುಳಿತೇ ಉಪಾಸನೆ ಮಾಡಬೇಕು. ಕುಳಿತಾಗ ಮಾತ್ರ ಅಚಲತ್ವ ಬರುತ್ತದೆ.

'ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ ॥' (ಗೀ.ತಾ.6.11) ಎಂದು ಸ್ಮೃತಿ ಇರುವುದರಿಂದಲೂ ಆಸನ ಬೇಕೇಬೇಕು.

**ವಿಮರ್ಶೆ**—ಶಾಂಕರಭಾಷ್ಯದಲ್ಲಿ ಕರ್ಮಸಮೃದ್ಧಿಗೆ ಕಾರಣವಾದ ಉದ್ಗೀಥಾದಿ ಉಪಾಸನೆಯನ್ನು ಯಜಮಾನ ಮಾಡಬಾರದು. ಯಜಮಾನನಿಗಾಗಿ ಋತ್ವಿಕ್ಕುಗಳೇ ಮಾಡಬೇಕು, ಎಂದು ಸಿದ್ಧಾಂತ ಮಾಡಲಾಗಿದೆ. ಋತ್ವಿಕ್ಕುಗಳು ಯಾಗಕರ್ಮಗಳಲ್ಲಿ ವ್ಯಗ್ರರಾಗಿದ್ದರೂ ಉದ್ಗೀಥೋಪಾಸನೆಯನ್ನು ಮಾಡಬೇಕು ಎಂದು ಅಲ್ಲಿ ಸಿದ್ಧಾಂತಿಸಿ ಇಲ್ಲಿ ಕರ್ಮಾಂತರದಲ್ಲಿ ಆಸಕ್ತರಾಗಿದ್ದರೆ ಉಪಾಸನೆ ಮಾಡಲಾಗುವುದಿಲ್ಲ, ಎಂದು ಸಿದ್ಧಾಂತ ಮಾಡುವುದು ಹೇಗೆ?

## ಶಾಂಕರಭಾಷ್ಯದಲ್ಲಿ ಏಕಾಗ್ರತಾಧಿಕರಣ

**॥ ಯತ್ರೈಕಾಗ್ರತಾ ತತ್ರಾವಿಶೇಷಾತ್॥** ಧಾರ್ಮಿಕ ಕ್ರಿಯೆಗಳಿಗೆ ದಿಕ್ಕಿನ ನಿರ್ಬಂಧ, ದೇಶದ ನಿಯಮ ಇರುವಂತೆ ಉಪಾಸನೆಗೆ ಇಂತಹ ನಿಯಮಗಳು ಇಲ್ಲ. ಎಲ್ಲಿ ಏಕಾಗ್ರತೆಬರುವುದೋ ಅಲ್ಲಿ ಉಪಾಸನೆ ಮಾಡಬಹುದು.ಶ್ವೇತಾಶ್ವತರೋಪನಿಷತ್ತಿನಲ್ಲಿ-

ಸಮೇ ಶುಚೌ ಶರ್ಕರಾ–ವಹ್ನಿ–ವಾಲುಕಾ–ವಿವರ್ಜಿತೇ ।
ಶಬ್ದಜಲಾಶ್ರಯಾದಿಭಿಃ ಮನೋನುಕೂಲೇ । ನ ತು ಚಕ್ಷುಃಪೀಡನೇ,
ಗುಹಾನಿವಾತಾಶ್ರಯೇ ಪ್ರಯೋಜಯೇತ್ ।

ಎಂದು ದೇಶದ ನಿರ್ಬಂಧವನ್ನು ಹೇಳಲಾಗಿದೆ. ಆದರ ಅಭಿಪ್ರಾಯ ಮನಸ್ಸಿನ ಏಕಾಗ್ರತೆಗೆ ಯೋಗ್ಯವಾಗುವಲ್ಲಿ ಉಪಾಸನೆ ಮಾಡಬೇಕು ಎಂದು. ಶಬ್ದವಿದ್ದಲ್ಲಿ, ಚಕ್ಷುಃಪೀಡನ ಎಂದರೆ ಸೊಳ್ಳೆಗಳಿದ್ದಲ್ಲಿ ಏಕಾಗ್ರತೆಗೆ ಭಂಗ ಬರುತ್ತದೆ, ಎಂದು ಉಪನಿಷತ್ತಿನ ಅಭಿಪ್ರಾಯ.

ರಾಮಾನುಜಭಾಷ್ಯದಲ್ಲಿ ಮಾಧ್ವಭಾಷ್ಯದಂತೆಯೇ ಒಟ್ಟು ಆರು ಸೂತ್ರಗಳು ಸೇರಿ ಒಂದೇ ಅಧಿಕರಣ.

ಇಲ್ಲಿಗೆ ಆಸನಾಧಿಕರಣವು ಮುಗಿಯಿತು.

## ೭. ಪ್ರಾಯಣಾಧಿಕರಣಮ್

**॥ ಓಂ ಆ ಪ್ರಾ(ಪ್ರಾಯಣಾತ್) ತತ್ರಾಪಿ ಹಿ ದೃಷ್ಟಮ್ ಓಂ ॥ ೧೨ ॥**

ಯಾವನ್ಮೋಕ್ಷಸ್ತಾವದುಪಾಸನಾದಿ ಕಾರ್ಯಮ್ ।

'ಸ ಯೋ ಹ ವೈ ತದ್ ಭಗವನ್ಮನುಷ್ಯೇಷು ಪ್ರಾಯಣಾಂತಮ್ ಓಂಕಾರಮಭಿಧ್ಯಾಯೀತ' (ಪ್ರ.5.1) ಇತಿ ಹಿ ಶ್ರುತಿಃ ।

'ಸರ್ವದೈನಮುಪಾಸೀತ ಯಾವದ್ ವಿಮುಕ್ತಿರ್ಮುಕ್ತಾ ಅಪಿ ಹ್ಯೇನಮುಪಾಸತೇ' ಇತಿ ಚ ಸೌಪರ್ಣಶ್ರುತಿಃ ।

'ಶೃಣುಯಾದ್ ಯಾವದಜ್ಞಾನಂ ಮತಿರ್ಯಾವದಯುಕ್ತತಾ ।
ಧ್ಯಾನಂ ಚ ಯಾವದೀಕ್ಷಾ ಸ್ಯಾನ್ನೇಕ್ಷಾ ಕ್ವಚನ ಬಾಧ್ಯತೇ ॥

ದೃಷ್ಟತತ್ತ್ವಸ್ಯ ಚ ಧ್ಯಾನಂ ಯದಾ ದೃಷ್ಟಿರ್ನ ವಿದ್ಯತೇ ।
ಭಕ್ತಿಶ್ಚಾನಂತಕಾಲೀನಾ ಪರಮೇ ಬ್ರಹ್ಮಣಿ ಸ್ಫುಟಾ ।
ಆ ವಿಮುಕ್ತೇರ್ವಿಧಿರ್ನಿತ್ಯಂ ಸ್ವತ ಏವ ತತಃ ಪರಮ್ ॥'

ಇತಿ ಚ ಬ್ರಹ್ಮಾಂಡೇ ।

ಎಲ್ಲಿಯವರೆಗೆ ಮೋಕ್ಷ ದೊರಕುವುದೋ ಅದುವರೆಗೂ ಉಪಾಸನಾರ್ಚನಾದಿ ಗಳನ್ನು ಮಾಡಬೇಕು. 'ಸ ಯೋ ಹ ವೈ' ಎಂಬ ಶ್ರುತಿಯಲ್ಲಿ ಮೋಕ್ಷಪರ್ಯಂತವಾಗಿ ಪ್ರಣವೋಪಾಸನೆಯನ್ನು ಹೇಳಲಾಗಿದೆ. ಸೌಪರ್ಣ ಶ್ರುತಿಯಲ್ಲಿ–ಮೋಕ್ಷಪರ್ಯಂತವೂ ಬ್ರಹ್ಮೋಪಾಸನೆಯನ್ನು ಮಾಡಬೇಕು. ಮುಕ್ತರೂ ಬ್ರಹ್ಮನನ್ನು ಉಪಾಸನೆ ಮಾಡುತ್ತಾರೆ, ಎಂದಿದೆ. ಬ್ರಹ್ಮಾಂಡಪುರಾಣದಲ್ಲಿದೆ—ಅಜ್ಞಾನವಿರುವಷ್ಟು ಕಾಲ ಶ್ರವಣ ಮಾಡಬೇಕು. ಮನೋನಿಗ್ರಹವಾಗುವವರೆಗೂ ಮನನ ಮಾಡಬೇಕು. ಬ್ರಹ್ಮಾಪರೋಕ್ಷಪರ್ಯಂತವೂ ಧ್ಯಾನಿಸಬೇಕು. ಅಪರೋಕ್ಷಜ್ಞಾನವು ಎಂದೂ ಬಾಧಿತವಾಗುವುದಿಲ್ಲ. ಅಪರೋಕ್ಷಜ್ಞಾನವಿರುವವನೂ ಅಪರೋಕ್ಷವಿಲ್ಲದ ಕಾಲದಲ್ಲಿ ಧ್ಯಾನ ಮಾಡಬೇಕು. ಆನಂತಕಾಲೀನವಾದ ಭಕ್ತಿಯು ಸ್ಫುಟವಾಗುವಪರ್ಯಂತವೂ ಈ ಧ್ಯಾನ ಬೇಕು. ಹೀಗೆ ಮುಕ್ತಿಪರ್ಯಂತವಾಗಿ ಧ್ಯಾನದ ನಿರ್ಬಂಧವಿದೆ. ಮೋಕ್ಷದಲ್ಲಿ ಅದು ಸಹಜವಾಗಿರುತ್ತದೆ.

**ವಿವರಣೆ**—ಧ್ಯಾನದ ಫಲ ಬ್ರಹ್ಮಾಪರೋಕ್ಷ. ಆ ಫಲ ಬಂದ ಮೇಲೆ ಧ್ಯಾನ ಬೇಕಾಗಿಲ್ಲ ಎಂಬ ಪೂರ್ವಪಕ್ಷಕ್ಕೆ ಇಲ್ಲಿ ಉತ್ತರವಿದೆ. ಅಪರೋಕ್ಷಜ್ಞಾನಪರ್ಯಂತ ಶ್ರವಣ ಮನನ ಸಹಿತವಾದ ಧ್ಯಾನ, ಆಮೇಲೆ ನೇರವಾಗಿ ಧ್ಯಾನ ಮಾಡಲಾಗದಿದ್ದಾಗ ಮಾತ್ರ ಶ್ರವಣಾದಿಗಳು. ಭಾಗವತದಲ್ಲಿ ಹೀಗೆ ಇದೆ—

ಭೋಕ್ತವ್ಯಕರ್ಮಣ್ಯಕ್ಷೀಣೇ ಜಪೇನ ಕಥಾಯಾಪಿ ವಾ ।
ವರ್ತಯಂತಿ ಮಹಾತ್ಮಾನಃ ತನ್ನಿಷ್ಠಾಸ್ತತ್ಪರಾಯಣಾಃ ॥

ಅಪರೋಕ್ಷಾನಂತರ ಮಾಡಿದ ಧ್ಯಾನಕ್ಕೆ ಆನಂದಾತಿಶಯವೇ ಫಲ. ಇದನ್ನು,

ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ॥

ಎಂದು ಗೀತೆಯಲ್ಲಿ ಹೇಳಲಾಗಿದೆ.

**ಶ್ರುತ್ಯರ್ಥ**—ಷಟ್‌ಪ್ರಶ್ನದಲ್ಲಿ 'ಸ ಯೋ ಹವೈ' ಎಂದು ಪ್ರಶ್ನೆ. ಮನುಷ್ಯರಲ್ಲಿ, ಯಾರು ಮೋಕ್ಷಪರ್ಯಂತವಾಗಿ ಓಂಕಾರಂ=ಶ್ರೀಹರಿಯನ್ನು ಧ್ಯಾನಿಸುವರೋ ಅವರಿಗೆ ಯಾವ ಲೋಕ?' 'ಯಾರು ತ್ರಿಮಾತ್ರೋಂಕಾರದಿಂದ ಪರಮಪುರುಷನನ್ನು ಧ್ಯಾನಿಸುವರೋ ಅವರು ಸತ್ಯಲೋಕಕ್ಕೆ ಹೋಗುತ್ತಾರೆ. ಅಲ್ಲಿ ಬ್ರಹ್ಮದೇವರಿಂದ ಉಪದೇಶ ಪಡೆದು ಪರಮಪುರುಷನನ್ನು ನೋಡುತ್ತಾರೆ' ಎಂದು ಉತ್ತರ.

ಸೂತ್ರದಲ್ಲಿ ಪ್ರಾಯಣ ಎಂದರೆ ಮೋಕ್ಷ. ''ನಾರಾಯಣಂ ಪ್ರತಿ ಪ್ರಯಾಣಾತ್ಮಕಃ ಮೋಕ್ಷಃ' ಎಂದು ತತ್ತ್ವಪ್ರದೀಪದಲ್ಲಿ ಹೇಳಲಾಗಿದೆ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ಆ ಪ್ರಾಯಣಾತ್ ತತ್ರಾಪಿ ಹಿ ದೃಷ್ಟಮ್ ಓಂ ॥** (ಅತ್ರ ಧ್ಯಾನಸ್ಯ ಪ್ರಾಯಣಾಂತತ್ವಂ ಸಾಧ್ಯತೇ। ಆಙ್ ಮರ್ಯಾದಾಯಾಮ್। ಪ್ರಕರ್ಷೇಣ ಅಯನಂ=ಪ್ರಾಯಣಂ=ನಾರಾಯಣಂ ಪ್ರತಿ ಅಯನರೂಪಮೋಕ್ಷಃ। ಆ ಪ್ರಾಯಣಾತ್=ಮೋಕ್ಷಪರ್ಯಂತಂ ಧ್ಯಾನಮ್ ಆವಶ್ಯಕಮಿತಿ ಪ್ರಸ್ತುತಮ್ ಅನ್ವೇತಿ। ಕುತಃ? ದೃಷ್ಟಂ ಹಿ ದೃಷ್ಟಂ=ಶ್ರುತಿಃ। ಹಿ=ಯಸ್ಮಾತ್ 'ಸ ಯೋ ಹ ವೈ' ಇತಿ ಶ್ರುತಿರಸ್ತೀತ್ಯತ ಇತ್ಯರ್ಥಃ। ಕೈಮುತ್ಯನ್ಯಾಯೇನಾಪ್ಯಾಹ-ತತ್ರೇತಿ। ಮುಕ್ತಾವಪಿ ಧ್ಯಾನಂ ಕುರ್ವತೇ, ಕಿಮು ತತಃ ಪ್ರಾಗಿತ್ಯರ್ಥಃ। ತದೇವ ಕುತಃ ? ದೃಷ್ಟಂ ಹಿ 'ಮುಕ್ತಾ ಅಪಿ ಹ್ಯೇನಮುಪಾಸತೇ' ಇತಿ ಶ್ರುತಿಃ ಯತಃ ಅತ ಇತ್ಯರ್ಥಃ। ಆಪ್ರಾಯಣಾದಿತ್ಯುಕ್ತಿಃ ಶ್ರುತ್ಯನುರೋಧೇನ।)

ಈ ಅಧಿಕರಣದಲ್ಲಿ ಮೋಕ್ಷ ದೊರಕುವವರೆಗೂ ಧ್ಯಾನವನ್ನು ಮಾಡುತ್ತಿರಬೇಕು, ಎಂದು ಹೇಳಲಾಗಿದೆ. ಪ್ರಾಯಣ ಎಂದರೆ ಮೋಕ್ಷ. ಏಕೆಂದರೆ ನಾರಾಯಣನ ಬಳಿಗೆ ಪ್ರಕರ್ಷೇಣ=ಹಿಂತಿರುಗಿ ಬರದಂತೆ ಅಯನಂ=ಪ್ರಯಾಣ. ಅದೇ ಮೋಕ್ಷ. ಆ ಪ್ರಾಯಣಾತ್=ಮೋಕ್ಷವಾಗುವವರೆಗೂ ಧ್ಯಾನವನ್ನು ಮಾಡಬೇಕು. ದೃಷ್ಟಂ ಹಿ, ಹಿ=ಯಾವ ಕಾರಣದಿಂದ ದೃಷ್ಟಂ=ಹಾಗೆ ಹೇಳುವ ಶ್ರುತಿ ಇದೆ. ಶ್ರುತಿಯಲ್ಲದೆ ಕೈಮುತ್ಯನ್ಯಾಯದಿಂದಲೂ ಇದು ಸಿದ್ಧವಾಗುತ್ತದೆ. ತತ್ರಾಪಿ=ಮೋಕ್ಷದಲ್ಲೂ ಧ್ಯಾನ ಮಾಡುತ್ತಾರೆ, ಇದೂ ದೃಷ್ಟಂ=ಶ್ರುತಿಯಲ್ಲಿದೆ. ಹೀಗಿದ್ದಮೇಲೆ ಮೋಕ್ಷಕ್ಕೆ ಹೋಗುವವರು ಧ್ಯಾನ ಮಾಡಬೇಕೆಂದು ಹೇಳಬೇಕೇ?

## ಶಾಂಕರಭಾಷ್ಯದಲ್ಲಿ ಆಪ್ರಾಯಣಾಧಿಕರಣ

ಪ್ರಥಮಾಧಿಕರಣದಲ್ಲಿ ಉಪಾಸನಾವೃತ್ತಿಯನ್ನು ಮಾಡಬೇಕು ಎಂದು ಹೇಳಲಾಗಿದೆ. ಉಪಾಸನೆಯಲ್ಲಿ ಕೆಲವು ಬ್ರಹ್ಮದರ್ಶನಕ್ಕೆ ಕಾರಣವಾಗುತ್ತವೆ. ಅಂತಹ ಉಪಾಸನೆಗಳನ್ನು ದರ್ಶನಪರ್ಯಂತ ಮಾಡಬೇಕು. ಮತ್ತೆ ಕೆಲವು ಐಹಿಕಾಮುಷ್ಮಿಕಾಭ್ಯುದಯಕ್ಕೆ ಕಾರಣವಾಗುತ್ತವೆ. ಅಂತಹ ಉಪಾಸನೆಗಳನ್ನು ಸ್ವಲ್ಪಕಾಲ ಮಾಡಿ ನಿಲ್ಲಿಸುವಂತಿಲ್ಲ, ಆಪ್ರಾಯಣಂ=ಮರಣಪರ್ಯಂತವೂ ಮಾಡಬೇಕು. ನಾವು ಮಾಡಿರುವ ಸತ್ಕರ್ಮಗಳು ಜನ್ಮಾಂತರದಲ್ಲಿ ಫಲವನ್ನು ಕೊಡುತ್ತವೆ. ಅಂತಹ ಸತ್ಕರ್ಮಗಳ ಫಲವಾದ ಜನ್ಮಾಂತರದ ಸ್ಮರಣೆಯನ್ನು ಈ ಉಪಾಸನೆಯು ಅಂತ್ಯಕಾಲದಲ್ಲಿ ತಂದುಕೊಡುತ್ತವೆ. 'ಯಚ್ಚಿತ್ತಃ ತೇನೈಷ ಪ್ರಾಣಮಾಯಾತಿ' ಮನಸ್ಸಿನಲ್ಲಿ ಯಾವ

ಲೋಕಪ್ರಾಪ್ತಿಯ ಸಂಕಲ್ಪವಿರುವುದೋ ಅಂತಹ ಫಲದ ಸ್ಫೂರ್ತಿಯ ಅನಂತರ ಮನಸ್ಸು ಪ್ರಾಣನಲ್ಲಿ ಸೇರಿಕೊಳ್ಳುತ್ತದೆ. ಪ್ರಾಣವಾಯುವು, ಉದಾನವಾಯು ಮತ್ತು ಆತ್ಮನೊಂದಿಗೆ ಆ ಲೋಕಕ್ಕೆ ಹೋಗುತ್ತದೆ. ಹೀಗೆ ಜಡವಾದ ಕರ್ಮವೇ ಅಂತ್ಯಕಾಲದಲ್ಲಿ ಫಲಸ್ಫೂರ್ತಿಗೆ ಕಾರಣವಾಗುವಾಗ ಜ್ಞಾನರೂಪವಾದ ಉಪಾಸನೆಯೂ ಸಂಸ್ಕಾರದ ಮೂಲಕ ಫಲಸ್ಫೂರ್ತಿಗೆ ಕಾರಣವಾಗುತ್ತದೆ. ಹಾಗಾಗಬೇಕಾದರೆ ಮರಣ ಪರ್ಯಂತವೂ ಉಪಾಸನೆ ಯನ್ನು ಮಾಡಬೇಕು. ದೃಷ್ಟಂ=ಇದು ಶ್ರುತ್ಯುಕ್ತವೂ ಆಗಿದೆ. 'ಸಃ ಯಾವತ್ ಕ್ರತುರಯಮ್ ಅಸ್ಮಾಲ್ಲೋಕಾತ್ ಪ್ರೈತಿ ತಾವತ್ ಕ್ರತುರ್ಹಾಮುಂ ಲೋಕಂ ಪ್ರೇತ್ಯಾಭಿಸಂಭವತಿ'' ಕ್ರತು ಎಂದರೆ ಸಂಕಲ್ಪ. ಜೀವನಿಗೆ ಮರಣ ಸಮಯದಲ್ಲಿ ಯಾವ ಸಂಕಲ್ಪವಿರುವುದೋ ಅದಕ್ಕೆ ಅನುಗುಣವಾದ ಲೋಕಕ್ಕೆ ಅವನು ಹೋಗುತ್ತಾನೆ, ಎಂದು. ಗೀತೆಯೂ ಹೇಳುತ್ತದೆ—

ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜಂತ್ಯಂತೇ ಕಲೇವರಮ್ ।
ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥ (8.6)

**ವಿಮರ್ಶೆ**—ಉಪಾಸನಾಫಲ ಸಮ್ಯಗ್ ದರ್ಶನ. ಬ್ರಹ್ಮೋಪಾಸನೆಯಿಂದ ಸಮ್ಯಗ್ ದರ್ಶನ ಬಂದಂತೆ, ಅಭ್ಯುದಯಫಲಕವಾದ ಉಪಾಸನೆಯಿಂದಲೂ ಅದೇ ಫಲ ಬರಬೇಕು. ಆದ್ದರಿಂದ ದೃಷ್ಟಫಲಕೋಪಾಸನೆ ಅದೃಷ್ಟಫಲಕೋಪಾಸನೆ ಎಂದು ಉಪಾಸನೆಯಲ್ಲಿ ಭೇದವನ್ನು ಕಲ್ಪಿಸಿ ಕೆಲವನ್ನು 'ಆಪ್ರಾಯಣಾಂತ' ಮಾಡಬೇಕು ಎಂದು ಸಿದ್ಧಾಂತಿಸುವುದು ಯುಕ್ತವಲ್ಲ.

### ವಿಶಿಷ್ಟಾದ್ವೈತದರ್ಶನದಲ್ಲಿ ಸೂತ್ರದ ಅರ್ಥ

ಮೋಕ್ಷಸಾಧನವಾದ ಶ್ರವಣಾದಿಗಳನ್ನು ಮರಣಪರ್ಯಂತವೂ ಮಾಡಬೇಕು. ತತ್ರಾಪಿ=ಮರಣ ಮತ್ತು ಸಾಧನೋದ್ಯೋಗದ ಮಧ್ಯಕಾಲದಲ್ಲಿ ಶ್ರವಣಾದಿಗಳನ್ನು ಮಾಡಬೇಕೆಂದು ಶ್ರುತಿ ಇದೆ—''ಸ ಖಲ್ವೇವಂ ವರ್ತಯನ್ ಯಾವದಾಯುಷಂ ಬ್ರಹ್ಮಲೋಕಮ್ ಅಭಿಸಂಪದ್ಯತೇ'' ಎಂದು.

**ಇಲ್ಲಿಗೆ ಪ್ರಾಯಣಾಧಿಕರಣವು ಮುಗಿಯಿತು.**

## ೮. ತದಧಿಗಮಾಧಿಕರಣಮ್

### ॥ ಓಂ ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್ ಓಂ ॥ ೧೩ ॥

**ಬ್ರಹ್ಮದರ್ಶನೇಉತ್ತರಾಘಸ್ಯಾಶ್ಲೇಷಃ ಪೂರ್ವಸ್ಯ ವಿನಾಶಶ್ಚ ।**
**'ತದ್ ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತ ಏವಮೇವಂವಿದಿ ಪಾಪಂ ಕರ್ಮ ನ ಶ್ಲಿಷ್ಯತೇ' (ಛಾಂ.ಉ. 4.14.3),**
**'ತದ್ ಯಥೇಷೀಕಾತೂಲಮಗ್ನೌ ಪ್ರೋತಂ ಪ್ರದೂಯೇತೈವಂ ಹೈವಾಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೇ' (ಛಾಂ.ಉ. 5.24.3) ಇತಿ ತದ್ವ್ಯಪದೇಶಾತ್ ॥**

ಬ್ರಹ್ಮಾಪರೋಕ್ಷವಾದರೆ ಮುಂದೆ ಮಾಡುವ ಪಾಪಕರ್ಮದ ಫಲಲೇಪವಾಗುವುದಿಲ್ಲ, ಹಿಂದಿನ ಪಾಪ-ಪುಣ್ಯಗಳು ನಾಶವಾಗುತ್ತವೆ. ಉಪನಿಷತ್ತು ಹೇಳುತ್ತದೆ-ಹೇಗೆ ಕಮಲದೆಲೆಯಲ್ಲಿ ನೀರು ಅಂಟುವುದಿಲ್ಲವೋ ಅದರಂತೆ ಬ್ರಹ್ಮಜ್ಞಾನಿಗೆ ಪಾಪಕರ್ಮದ ಲೇಪವಾಗುವುದಿಲ್ಲ. (ಇದು ಮುಂದಿನ ಪಾಪಲೇಪ ಇಲ್ಲ, ಎನ್ನುವುದಕ್ಕೆ ಆಧಾರ. ಹಿಂದಿನ, ಸಂಚಿತ ಪಾಪನಾಶವಾಗುತ್ತದೆ ಎನ್ನುವುದಕ್ಕೆ ಆಧಾರ) 'ಹೇಗೆ ಇಷೀಕಾ ಎಂಬ ಹುಲ್ಲು ಮತ್ತು ಹತ್ತಿಯು ಬೆಂಕಿಯಲ್ಲಿ ಬಿದ್ದರೆ ಭಸ್ಮವಾಗುವುದೋ ಅದರಂತೆ ಬ್ರಹ್ಮಜ್ಞಾನಿಯ ಎಲ್ಲ ಪಾಪಗಳೂ ಸುಟ್ಟು ಹೋಗುತ್ತವೆ.' ಹೀಗೆ ಶ್ರುತಿಯಲ್ಲಿ ಹೇಳಿರುವುದರಿಂದ. (ಇದು ಸೂತ್ರದ ತದ್‌ವ್ಯಪದೇಶಾತ್, ಎಂಬ ಪದದ ಅರ್ಥ.)

**ವಿವರಣೆ**—ಪ್ರಾಸಂಗಿಕವಾದ ವಿಷಯಗಳನ್ನು ಹೇಳಿ ಈ ಅಧಿಕರಣದಲ್ಲಿ ಪಾದಪ್ರತಿಪಾದ್ಯವಾದ ಕರ್ಮಕ್ಷಯವನ್ನು ಹೇಳಲಾಗಿದೆ.

ಅಪರೋಕ್ಷಜ್ಞಾನದಿಂದ ಸಂಚಿತಕರ್ಮವು ನಾಶವಾದರೂ ಪ್ರಾರಬ್ಧಕರ್ಮವು ನಾಶವಾಗುವುದಿಲ್ಲ. 'ನಾಭುಕ್ತಂ ಕ್ಷೀಯತೇ ಕರ್ಮ' ಎಂಬ ನಿಯಮದಂತೆ ಪ್ರಾರಬ್ಧವು ಭೋಗದಿಂದಲೇ ನಾಶವಾಗಬೇಕು. ಆದ್ದರಿಂದ ಜ್ಞಾನಿಗಳಿಗೂ ಪ್ರಾರಬ್ಧವಶಾತ್ ಅನೇಕ ದೇಹಗಳೂ ಬರಬಹುದು.

ಸಂಚಿತ ಪುಣ್ಯವೂ ಮಾನುಷ್ಯಾದಿಫಲಕವಾದರೆ ನಾಶವಾಗುತ್ತದೆ. ಉಪಾಸನಾ ಜನಿತವಾದ, ಮೋಕ್ಷದಲ್ಲಿ ಆನಂದ ವೃದ್ಧಿಗೆ ಕಾರಣವಾದ ಪುಣ್ಯವು ನಾಶವಾಗುವುದಿಲ್ಲ.

ಜ್ಞಾನೋತ್ತರದುಷ್ಕರ್ಮದ ಲೇಪವಿಲ್ಲ ಎಂದರೆ ಸರ್ವಥಾ ಅದರ ಫಲವಿಲ್ಲ ಎಂದು ಅರ್ಥವಲ್ಲ. ಮುಕ್ತಿಯಲ್ಲಿ ಆನಂದಹ್ರಾಸ ಎಂಬ ಫಲವಿದೆ. ಆದರೆ ಇಹದಲ್ಲಿ ದುಷ್ಕರ್ಮ ನಿಮಿತ್ತದಿಂದ ಅವನೊಂದಿಗೆ ಮಾತನ್ನು ಬಿಡುವುದು, ತತ್‌ಪ್ರಯುಕ್ತ ಅಶುದ್ಧ್ಯಾದಿಗಳೂ, ಸತ್ತಮೇಲೆ ನರಕಾದಿ ಅನರ್ಥಗಳೂ ಇಲ್ಲ, ಎಂದರ್ಥ.

## ॥ ಓಂ ಇತರಸ್ಯಾಪ್ಯೇವಮಸಂಶ್ಲೇಷಃ ಪಾತೇ ತು ಓಂ ॥ ೧೪ ॥

**ಪುಣ್ಯಸ್ಯಾಪ್ಯೇವಮಸಂಶ್ಲೇಷಃ ಪಾತೇ । ತುಶಬ್ದೋಽನುತ್ಥಾನವಾಚೀ ।**

**'ಯಥಾಽಶ್ಲೇಷೋ ವಿನಾಶಶ್ಚ ಮುಕ್ತಸ್ಯ ತು ವಿಕರ್ಮಣಃ ।**

**ಏವಂ ಸುಕರ್ಮಣಶ್ಚಾಪಿ ಪತತಸ್ತಮಸಿ ಧ್ರುವಃ(ಮ್) ॥'**

**ಇತಿ ಚಾಽಽಗ್ನೇಯೇ ।**

ದುಷ್ಟರಿಗೆ ತಮಸ್ಸಿನಲ್ಲಿ ಪತನವು ಸನ್ನಿಹಿತವಾದಾಗ, ಜ್ಞಾನಿಗಳಿಗೆ ಪಾಪದ ಅಶ್ಲೇಷವಿರುವಂತೆ, ಅವರಿಗೆ ಪುಣ್ಯಕರ್ಮಗಳ ಫಲದ ಅಶ್ಲೇಷವೂ ಆಗುತ್ತದೆ. (ಹಿಂದಿನ ಪುಣ್ಯದ ನಾಶ ಮುಂದಿನ ಪುಣ್ಯದ ಅಸಂಪರ್ಕವಾಗುತ್ತದೆ) ಸೂತ್ರದ ತುಶಬ್ದವು ದುಷ್ಟರಿಗೆ ನರಕದಿಂದ ಉತ್ಥಾನವಿಲ್ಲ, ಎಂದು ಸೂಚಿಸುತ್ತದೆ. ಆಗ್ನೇಯವಚನ ಹೇಳುತ್ತದೆ— ಹೇಗೆ ಮುಕ್ತನಿಗೆ ಮುಂದೆ ಮಾಡುವ ಅಸತ್ಕರ್ಮದ ಪಾಪಲೇಪವು ಇಲ್ಲ ಮತ್ತು ಅವನು ಹಿಂದೆ ಮಾಡಿರುವ ಪಾಪವು ನಾಶವಾಗುವುದೋ ಅದರಂತೆ ತಮೋಯೋಗ್ಯರಿಗೆ ಹಿಂದಿನ ಪುಣ್ಯಗಳ ನಾಶ ಮುಂದೆ ಮಾಡುವ ಪುಣ್ಯಗಳ ಅಶ್ಲೇಷವು ಆಗುತ್ತವೆ. ಇದು ತಮಸ್ಸಿನಲ್ಲಿ ಬೀಳುವವರ ಸ್ಥಿತಿ.

**ವಿವರಣೆ**—ಸೂತ್ರದಲ್ಲಿ ಇತರಸ್ಯ ಎಂದರೆ ಜ್ಞಾನೀತರನಾದ ಭಗವದ್‌ದ್ವೇಷಿಗೆ ಎಂದರ್ಥ. ಅದರಂತೆ ಪಾಪಕರ್ಮೇತರವಾದ ಪುಣ್ಯಕರ್ಮಕ್ಕೆ ಎಂದೂ ಅರ್ಥ. ನರಕಕ್ಕೆ ಬಿದ್ದರೂ ಅಲ್ಲಿಂದ ಎದ್ದು ಬಂದಮೇಲೆ ಪುಣ್ಯಫಲವನ್ನು ಭಗವದ್‌ದ್ವೇಷಿಗಳೂ ಅನುಭವಿಸಬಹುದಾದ್ದರಿಂದ ಸರ್ವಥಾ ನಾಶವೇಕೆ? ಈ ಪ್ರಶ್ನೆಗೆ ಸೂತ್ರದ ತುಶಬ್ದವು ಉತ್ತರ. ಭಗವದ್‌ದ್ವೇಷಿಗಳಿಗೆ ನರಕದಿಂದ ಪುನರುತ್ಥಾನವೇ ಇಲ್ಲ, ಎಂಬ ವಿಶೇಷವು ಅದಕ್ಕೆ ಅರ್ಥ.

## ॥ ಓಂ ಅನಾರಬ್ಧಕಾರ್ಯೇ ಏವ ತು ಪೂರ್ವೇ ತದವಧೇಃ ಓಂ ॥ ೧೫ ॥

**ಅನಾರಬ್ಧಕಾರ್ಯೇ ಏವ ಪೂರ್ವೇ ಪುಣ್ಯಪಾಪೇ ವಿನಶ್ಯತಃ ।**

**'ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯತೇ' (ಛಾಂ.ಉ. 6.14.2) ಇತಿ ತದವಧೇಃ ।**

ತುಶಬ್ದಃ ಸ್ಮೃತಿದ್ಯೋತಕಃ-

'ಯದನಾರಬ್ಧಪಾಪಂ ಸ್ಯಾತ್ ತದ್ ವಿನಶ್ಯತಿ ನಿಶ್ಚಯಾತ್ ।
ಪಶ್ಯತೋ ಬ್ರಹ್ಮ ನಿರ್ದ್ವಂದ್ವಂ ಹೀನಂ ಚ ಬ್ರಹ್ಮ ಪಶ್ಯತಃ ॥
ದ್ವಿಷತೋ ವಾ ಭವೇತ್ ಪುಣ್ಯನಾಶೋ ನಾಸ್ತ್ಯತ್ರ ಸಂಶಯಃ ।
ತಸ್ಯಾಪ್ಯಾರಬ್ಧಕಾರ್ಯಸ್ಯ ನ ವಿನಾಶೋಽಸ್ತಿ ಕುತ್ರಚಿತ್ ।
ಆರಬ್ಧಯೋಶ್ಚ ನಾಶಃ ಸ್ಯಾದಲ್ಪಯೋಃ ಪುಣ್ಯಪಾಪಯೋಃ ॥'

ಇತಿ ಚ ನಾರಾಯಣತಂತ್ರೇ ।

ಯಾವ ಪುಣ್ಯ ಅಥವಾ ಪಾಪಗಳ ಫಲವನ್ನು ಅನುಭವಿಸಲು ಆರಂಭ ಮಾಡಿಲ್ಲವೋ ಅಂತಹ ಪುಣ್ಯ–ಪಾಪಗಳು ಮಾತ್ರ ಜ್ಞಾನದಿಂದ ನಾಶವಾಗುತ್ತವೆ. ಆರಬ್ಧ ಪುಣ್ಯ–ಪಾಪಗಳ ನಾಶವಿಲ್ಲ. ಅದು ಶ್ರುತಿಸಿದ್ಧ—''ತಸ್ಯ=ಜ್ಞಾನಿಗೆ ತಾವದೇವ= ಅಷ್ಟುಕಾಲ ಮಾತ್ರ ಚಿರಂ=ವಿಳಂಬವಾಗುತ್ತದೆ. ಅಂದರೆ ಪ್ರಾರಬ್ಧಕ್ಷಯವಾಗುವಷ್ಟು ಕಾಲಾವಧಿಯಷ್ಟೇ ವಿಲಂಬ. ಅಥ=ಪ್ರಾರಬ್ಧಾವಸಾನವಾದಾಗ ವಿಮೋಕ್ಷ್ಯೇ– ವಿಮೋಕ್ಷ್ಯತೇ=ಮುಕ್ತನಾಗುತ್ತಾನೆ. ಅಥ=ಮುಕ್ತನಾದಾಗ ಸಂಪತ್ಸ್ಯತೇ=ಬ್ರಹ್ಮ ನೊಡನೆ ಸೇರುತ್ತಾನೆ'' ಹೀಗೆ ಮೋಕ್ಷವು ಪ್ರಾರಬ್ಧಾವಸಾನಾವಧಿಕ ಎಂದು ತಿಳಿಯುತ್ತದೆ.

ಸೂತ್ರದ ತುಶಬ್ದವು ಈ ವಿಷಯದಲ್ಲಿ ಸ್ಮೃತಿಪ್ರಮಾಣವನ್ನು ತಿಳಿಸುತ್ತದೆ. ಆ ಸ್ಮೃತಿ ನಾರಾಯಣತಂತ್ರ. ಅಲ್ಲಿ ಹೀಗಿದೆ—ಯಾವ ಅನಾರಬ್ಧವಾದ ಪಾಪವಿದೆಯೋ ಅದು ನಿಶ್ಚಯವಾಗಿಯೂ ಬ್ರಹ್ಮದರ್ಶಕನಿಗೆ ನಾಶವಾಗುತ್ತದೆ. ಇದರಂತೆ, ಬ್ರಹ್ಮನು ಗುಣಹೀನ, ಎಂದು ದ್ವೇಷಿಸುವವನ ಅನಾರಬ್ಧಪುಣ್ಯವೂ ನಾಶವಾಗುತ್ತದೆ. ಈ ವಿಷಯದಲ್ಲಿ ಸಂದೇಹವಿಲ್ಲ. ಫಲವೀಯಲು ಆರಂಭಿಸಿರುವ ಪಾಪ ಅಥವಾ ಪುಣ್ಯಗಳಿಗೆ ಎಂದೂ ನಾಶವಿಲ್ಲ. ಪ್ರಾರಬ್ಧವಾದ ಪುಣ್ಯ–ಪಾಪಗಳು ಅಲ್ಪವಾಗಿದ್ದರೂ ವಿನಾಶವಿಲ್ಲ. (ಅವುಗಳನ್ನು ಭೋಗಿಸಿಯೇ ತೀರಬೇಕು)

### ॥ ಓಂ ಅಗ್ನಿಹೋತ್ರಾದಿ ತು ತತ್ಕಾರ್ಯಾಯೈವ ತದ್ದರ್ಶನಾತ್ ಓಂ ॥ ೧೬ ॥

ಅಗ್ನಿಹೋತ್ರಾದ್ಯಪಿ ಮೋಕ್ಷೇಽನುಭವಾಯೈವ । ತುಶಬ್ದಾದ್ ಬ್ರಹ್ಮದರ್ಶನ ವತಃ ।

**'ಸ ಏನಮವಿದಿತೋ ನ ಭುನಕ್ತಿ ಯಥಾ ವೇದೋ ವಾಽನನೂಕ್ತೋಽನ್ಯದ್ ವಾ ಕರ್ಮಾಕೃತಂ ಯದಿ ಹ ವಾ ಅಪ್ಯನೇವಂವಿನ್ಮಹತ್ ಪುಣ್ಯಂ ಕರ್ಮ ಕರೋತಿ ತದ್ಧಾಸ್ಯಾಂತತಃ ಕ್ಷೀಯತ ಏವಾಽತ್ಮಾನಮೇವ ಲೋಕಮುಪಾಸೀತ। ಸ ಯ ಆತ್ಮಾನಮೇವ ಲೋಕಮುಪಾಸ್ತೇ ನ ಹಾಸ್ಯ ಕರ್ಮ ಕ್ಷೀಯತೇಽಸ್ಮಾದ್ಧ್ಯೇವಾಽತ್ಮನೋ ಯದ್ಯತ್ ಕಾಮಯತೇ ತತ್ತತ್ ಸೃಜತೇ' (ಬೃ.ಉ. 3.4.15), ಇತಿ ತದ್ದರ್ಶನಾತ್ ॥**

ಅಗ್ನಿಹೋತ್ರ–ಸಂಧ್ಯಾವಂದನೆ–ಪಿತೃಶ್ರಾದ್ಧ ಮುಂತಾದ ನಿತ್ಯನೈಮಿತ್ತಿಕ ಕರ್ಮಗಳನ್ನು ಜ್ಞಾನಿಗಳು ಮಾಡಿದರೆ ಅದರಿಂದ ಬರುವ ಪುಣ್ಯ ಮೋಕ್ಷದ ಆನಂದ ವಿಶೇಷಾನುಭವಕ್ಕೆ ಕಾರಣವಾಗುತ್ತದೆ. ಅದರಿಂದ ಐಹಿಕಭೋಗವಿಲ್ಲ.

ಸೂತ್ರದ ತುಶಬ್ದವು ಈ ನಿಯಮ ಬ್ರಹ್ಮದರ್ಶಿಗೆ ಮಾತ್ರ ಸಂಬಂಧಿಸಿದೆ, ಎಂದು ಸೂಚಿಸುತ್ತದೆ. ಈ ವಿಷಯವು ದರ್ಶನಾತ್=ಬೃಹದಾರಣ್ಯಕಶ್ರುತಿಯಿಂದ ತಿಳಿಯುತ್ತದೆ. ಏನಂ=ಪರಮಾತ್ಮನನ್ನು ಅವಿದಿತಃ=ತಿಳಿಯದವನು ನ ಭುನಕ್ತಿ= ಸತ್‌ಕರ್ಮದಿಂದ ಫಲವನ್ನು ಪಡೆಯಲಾರ. ಹೇಗೆ ಅನನೂಕ್ತಃ ವೇದಃ= ಗುರೂಪದಿಷ್ಟವಲ್ಲದ ವೇದವೋ ಅಕೃತಂ ವಾ ಕರ್ಮ=ಆಚರಿಸದ ಕರ್ಮವೋ (ಅವೆರಡೂ ಫಲ ಕೊಡಲಾರವೋ ಅದರಂತೆ) ಅನೇವಂವಿತ್=ಭಗವಂತನ ಜ್ಞಾನವನ್ನು ಪಡೆಯದವನು ಮಹದಪಿ ಪುಣ್ಯಂ=ದೊಡ್ಡ ಸತ್ಕರ್ಮವನ್ನೇ ಕರೋತಿ=ಮಾಡಿದರೂ ತತ್ ಹ=ಅದಾದರೂ ಅಸ್ಯ=ಅಜ್ಞಾನಿಗೆ ಅಂತತಃ=ಕೊನೆಯಲ್ಲಿ ಕ್ಷೀಯತೇ ಏವ= ನಶಿಸಿಯೇ ತೀರುತ್ತದೆ. ಆದ್ದರಿಂದ ಆತ್ಮಾನಂ ಲೋಕಮೇವ=ಆತ್ಮಸ್ವರೂಪವನ್ನೇ ಉಪಾಸೀತ=ಉಪಾಸನೆ ಮಾಡಬೇಕು. ಸ ಯಃ=ಯಾರು ಆತ್ಮಾನಂ ಲೋಕಂ= ಆತ್ಮಸ್ವರೂಪವನ್ನು ಉಪಾಸ್ತೇ=ಉಪಾಸನೆ ಮಾಡುವನೋ ಅಸ್ಯಕರ್ಮ=ಅವನ ಪುಣ್ಯ ನ ಕ್ಷೀಯತೇ=ಕ್ಷಯವಾಗುವುದಿಲ್ಲ. ಅಸ್ಮಾಧ್ಯೇವಾತ್ಮನಃ=ಉಪಾಸನೆ ಮಾಡಿದ ಆ ಆತ್ಮನಿಂದಲೇ (ಅವನ ಪ್ರಸಾದದಿಂದಲೇ) ಯದ್ಯತ್=ಮುಕ್ತನು ಯಾವುಯಾವುದನ್ನು ಕಾಮಯತೇ=ಮೋಕ್ಷದಲ್ಲಿ ಬಯಸುವನೋ ತತ್ತತ್=ಅವೆಲ್ಲವನ್ನೂ ಸೃಜತೇ= ಸೃಷ್ಟಿಮಾಡುತ್ತಾನೆ.

**॥ ಓಂ ಅತೋಽನ್ಯದಪೀತ್ಯೇಕೇಷಾಮುಭಯೋಃ ಓಂ ॥ ೧೭ ॥**

**ಮುಕ್ತಾವನುಭವಕಾರಣಾದ್ ಯದನ್ಯತ್ ತತ್ ಪುಣ್ಯಮಪಿ ವಿನಶ್ಯತಿ । ಅಪ್ರಾರಬ್ಧಮನಭೀಷ್ಟಂ ಚ । ತಥಾಹ್ಯೇಕೇಷಾಂ ಪಾಠ ಉಭಯೋಸ್ತ್ಯಾಗೇನ ।**

**'ತಸ್ಯ ಪುತ್ರಾ ದಾಯಮುಪಯಂತಿ ಸುಹೃದಃ ಸಾಧುಕೃತ್ಯಾಂ**
**ದ್ವಿಷಂತಃ ಪಾಪಕೃತ್ಯಾಮ್' ಇತಿ ।**
**ಅನಭೀಷ್ಟಮನಾರಬ್ಧಂ ಪುಣ್ಯಮಪ್ಯಸ್ಯ ನಶ್ಯತಿ ।**
**ಕಿಮು ಪಾಪಂ ಪರಬ್ರಹ್ಮಜ್ಞಾನಿನೋ ನಾಸ್ತಿ ಸಂಶಯಃ ॥'**

**ಇತಿ ಪಾದ್ಮೇ ।**

ಮೋಕ್ಷದಲ್ಲಿ ಆನಂದಾನುಭವಕ್ಕೆ ಕಾರಣವಾದ, ಜ್ಞಾನೋತ್ತರ ಮತ್ತು ಪೂರ್ವದಲ್ಲಿ ನಿಷ್ಕಾಮಕರ್ಮದಿಂದ ಜನ್ಯವಾದ ಪುಣ್ಯಕ್ಕಿಂತ ಅತಿರಿಕ್ತವಾದ ಮಾನುಷ್ಯಾದಿ ಫಲಕವಾದ ಪುಣ್ಯವೂ ಜ್ಞಾನದಿಂದ ನಾಶವಾಗುತ್ತದೆ. ಆ ಪುಣ್ಯವು ಅನಾರಬ್ಧವಾದುದು ಅಂದರೆ ಸಂಚಿತವಾದುದು ಮತ್ತು ಜ್ಞಾನಿಗೆ ಅನಭಿಪ್ರೇತವಾದುದು. ಕೆಲವು ಶಾಖಿಗಳ ಪಾಠವು ಪಾಪ-ಪುಣ್ಯಗಳೆರಡರ ತ್ಯಾಗವನ್ನೂ ಹೀಗೆ ಹೇಳುತ್ತದೆ—ಅಪರೋಕ್ಷಜ್ಞಾನಿಯ ಆಸ್ತಿ-ಪಾಸ್ತಿಗಳು ಮಕ್ಕಳಿಗೆ ಹೋಗುತ್ತವೆ. ಪುಣ್ಯವು ಸ್ನೇಹಿತರಿಗೆ ಸೇರುತ್ತದೆ. ಶತ್ರುಗಳು ಪಾಪವನ್ನು ಹಂಚಿಕೊಳ್ಳುತ್ತಾರೆ, ಎಂದು. ಪಾದ್ಮವಚನದಲ್ಲಿ ಹೀಗಿದೆ— ಜ್ಞಾನಿಗಳಿಗೆ ಇಷ್ಟವಲ್ಲದ ಹಾಗೂ ಅನಾರಬ್ಧವಾದ (ಸಂಚಿತವಾದ) ಪುಣ್ಯವೂ ಜ್ಞಾನದಿಂದ ನಾಶವಾಗುತ್ತದೆ. ಹೀಗಿದ್ದಮೇಲೆ ಅನಾರಬ್ಧಪಾಪವು ನಾಶವಾಗುತ್ತದೆ, ಎಂದು ಬೇರೆ ಹೇಳಬೇಕಾಗಿಲ್ಲ.

**ವಿವರಣೆ**—ಅಪರೋಕ್ಷಜ್ಞಾನಿಯ ಅನಾರಬ್ಧ ಪಾಪಗಳು ಸರ್ವಾತ್ಮನಾ ನಾಶವಾಗುತ್ತವೆ, ಮುಂದೆ ಮಾಡಿದ ಅಸತ್ಕರ್ಮಗಳಿಂದ ಪಾಪಲೇಪವೂ ಆಗವುದಿಲ್ಲ. ಆದರೆ ಅನಾರಬ್ಧವಾದರೂ ಪುಣ್ಯವು ಇಷ್ಟವಾಗಿದ್ದರೆ ನಾಶವಾಗುವುದಿಲ್ಲ—'ನ ಹಿ ಇಷ್ಟಪುಣ್ಯಕ್ಷಯೇ ಕಿಂಚಿತ್ ಮಾನಮ್' (ಗೀ.ಭಾ.). ಅದರಂತೆ ಜ್ಞಾನೋತ್ತರದಲ್ಲಿ ಮಾಡಿದ ನಿಷ್ಕಾಮಕರ್ಮಗಳಿಂದ ಆಗುವ ಪುಣ್ಯದ ನಂಟೂ ಜ್ಞಾನಿಗಳಿಗೆ ಇದೆ. 'ಅಭೀಷ್ಟಂ ಚೇದನಾರಬ್ಧಮಪಿ ಭುಕ್ತ್ವಾ ವ್ಯಕ್ಷ್ಯತೇ । ಆರಬ್ಧಂ ಚೇದನಭೀಷ್ಟಮಪಿ ತಥೈವ ಪಾಪವತ್' ಎಂದು ತತ್ತ್ವಪ್ರದೀಪದಲ್ಲಿದೆ.

ಪಾಂಡವರಿಗೆ ಪ್ರಾರಬ್ಧವಶಾತ್ ವನವಾಸಾದಿಗಳಾದರೂ ಅಲ್ಲಿ ಸೂರ್ಯೋಪಾಸನೆಯ ಪುಣ್ಯದಿಂದ ಅಕ್ಷಯಪಾತ್ರೆ ಲಭಿಸಿ ಲಕ್ಷ-ಲಕ್ಷ ಯೋಗಿಶ್ರೇಷ್ಠರಿಗೆ ಬಂಗಾರದ

ಪಾತ್ರೆಯಲ್ಲಿ ಅನ್ನದಾನದ ಅವಕಾಶ ಒದಗಿತು. ಇದರಿಂದ ಜ್ಞಾನೋತ್ತರದಲ್ಲಿ ಮಾಡಿದ ಪುಣ್ಯದ ಲೇಪ ಜ್ಞಾನಿಗಳಿಗೆ ಇದೆ, ಎಂದು ತಿಳಿಯಬಹುದು. (ಗುರ್ವರ್ಥದೀಪಿಕಾ)

## ।। ಓಂ ಯದೇವ ವಿದ್ಯಯೇತಿ ಹಿ ಓಂ ।। ೧೮ ।।

**ಬ್ರಹ್ಮದರ್ಶಿಕೃತಮಲ್ಪಮಪಿ ಪುಣ್ಯಂ ಮಹತ್ತಮಮನಂತಂ ಚ ಭವತಿ ।**

**'ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತಿ' (ಛಾಂ.ಉ.1.1.10) ಇತಿ ಶ್ರುತೇಃ । 'ನ ಹಾಸ್ಯ ಕರ್ಮ ಕ್ಷೀಯತೇ' (ಬೃ.ಉ. 3.4.15) ಇತಿ ಚ ।**

**'ಅಲ್ಪಮಾತ್ರಃ ಕೃತೋ ಧರ್ಮೋ ಭವೇದ್ ಜ್ಞಾನವತೋ ಮಹಾನ್ ।**
**ಮಹಾನಪಿ ಕೃತೋ ಧರ್ಮೋ ಹ್ಯಜ್ಞಾನಾನ್(ನಾಂ) ನಿಷ್ಫಲೋ ಭವೇತ್ ।।'**

**ಇತಿ ಚ ಭಾರತೇ ।**

ಬ್ರಹ್ಮಜ್ಞಾನಿಗಳು ಮಾಡಿದ ಅಲ್ಪಸತ್ಕರ್ಮವೂ ಶ್ರೇಷ್ಠವಾದ ಹಾಗೂ ದೀರ್ಘಕಾಲಪರ್ಯಂತವಾಗಿ ಫಲ ನೀಡುವ ಪುಣ್ಯಕ್ಕೆ ಕಾರಣವಾಗುತ್ತದೆ. 'ಯಾವ ಕರ್ಮವನ್ನು ಜ್ಞಾನಪೂರ್ವಕವಾಗಿ, ಶ್ರದ್ಧೆಯಿಂದ, ಅಪರೋಕ್ಷಜ್ಞಾನೋತ್ತರದಲ್ಲಿ (ವಿದ್ಯಯಾ) ಮಾಡಲಾಗುವುದೋ ಅಂತಹ ಕರ್ಮವೇ ಹೆಚ್ಚು ಫಲ ನೀಡಲು ಸಮರ್ಥವಾಗುತ್ತದೆ.' 'ಜ್ಞಾನಿಯ ಕರ್ಮಕ್ಕೆ ನಾಶವಿಲ್ಲ' ಹೀಗೆ ಶ್ರುತಿಯಲ್ಲಿದೆ. ಮಹಾಭಾರತದಲ್ಲೂ ಇದೆ—ಜ್ಞಾನಿಯು ಮಾಡಿದ ಅಲ್ಪಕರ್ಮವೂ ದೊಡ್ಡಫಲಕ್ಕೆ ಕಾರಣವಾಗುತ್ತದೆ. ದೊಡ್ಡ ಸತ್ಕರ್ಮವನ್ನು ಅಜ್ಞಾನಿಗಳು ಮಾಡಿದರೂ ಅದು ನಿಷ್ಫಲವೇ ಆಗುತ್ತದೆ.

## ।। ಓಂ ಭೋಗೇನ ತ್ವಿತರೇ ಕ್ಷಪಯಿತ್ವಾಽಥ ಸಂಪತ್ಸ್ಯತೇ ಓಂ ।। ೧೯ ।।

**ಆರಬ್ಧಪುಣ್ಯಪಾಪೇ ಭೋಗೇನ ಕ್ಷಪಯಿತ್ವಾ ಬ್ರಹ್ಮ ಸಂಪತ್ಸ್ಯತೇ । ಅಥೇತಿ ನಿಯಮಸೂಚಕಃ ।।**

**'ಆರಬ್ಧಪುಣ್ಯಪಾಪಸ್ಯ ಭೋಗೇನ ಕ್ಷಪಣಾದನು ।**
**ಪ್ರಾಪ್ನೋತ್ಯೇವ ತಮೋ ಘೋರಂ ಬ್ರಹ್ಮ ವಾ ನಾತ್ರ ಸಂಶಯಃ ।।**

**'ಬ್ರಹ್ಮಣಾಂ ಶತಕಾಲಾತ್ತು ಪೂರ್ವಮಾರಬ್ಧಸಂಕ್ಷಯಃ ।**
**ನಿಯಮೇನ ಭವೇನ್ನಾತ್ರ ಕಾರ್ಯಾ ಕಾಚಿದ್ ವಿಚಾರಣಾ ॥'**

**ಇತಿ ಚ ನಾರಾಯಣತಂತ್ರೇ ।**

ಪ್ರಾರಬ್ಧವಾದ ಪುಣ್ಯ ಮತ್ತು ಪಾಪಗಳ ಫಲವಾದ ಸುಖದುಃಖಗಳನ್ನು ಅನುಭವಿಸುವ ಮೂಲಕ ನಾಶಮಾಡಿಕೊಂಡು ಜ್ಞಾನಿಯು ಬ್ರಹ್ಮನನ್ನು ಸೇರುತ್ತಾನೆ. ಸೂತ್ರದ ಅಥಶಬ್ದದಿಂದ ಪ್ರಾರಬ್ಧಾವಸಾನದಲ್ಲಿ ಮೋಕ್ಷವು ನಿಯತವಾದುದು ಎಂದು ಸೂಚಿಸಲಾಗಿದೆ. ನಾರಾಯಣತಂತ್ರದಲ್ಲಿದೆ—ಪ್ರಾರಬ್ಧವಾದ ಪುಣ್ಯ ಮತ್ತು ಪಾಪಗಳನ್ನು ಭೋಗದಿಂದ ನಾಶಮಾಡಿಕೊಂಡಮೇಲೆ ಜ್ಞಾನಿಗಳಿಗೆ ಬ್ರಹ್ಮಪ್ರಾಪ್ತಿಯೂ ಅಜ್ಞಾನಿಗಳಿಗೆ ತಮಃಪ್ರಾಪ್ತಿಯೂ ನಿಶ್ಚಿತವಾದುದು. ಇದರಲ್ಲಿ ಸಂದೇಹವೇ ಇಲ್ಲ. ಚತುರ್ಮುಖಬ್ರಹ್ಮದೇವರ ದೇವಮಾನದ ಶತವರ್ಷಕ್ಕಿಂತ ಮೊದಲೇ ಎಲ್ಲಾ ಜ್ಞಾನಿಗಳ ಪ್ರಾರಬ್ಧ ನಾಶವಾಗಿರುತ್ತದೆ. ಈ ವಿಷಯದಲ್ಲಿ ವಿಚಾರದ ಅಗತ್ಯವಿಲ್ಲ.

**ಇಲ್ಲಿಗೆ ಪ್ರಥಮಪಾದ ಮುಗಿಯಿತು.**

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ಓಂ ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್ ಓಂ ॥** (ಏವಂ ಪ್ರಾಸಂಗಿಕಂ ಸಮಾಪ್ಯ ಅತ್ರ ಈಶಜ್ಞಾನೇನ ಕರ್ಮಕ್ಷಯಾಖ್ಯಫಲಸಿದ್ಧಿಃ ಸಾಧ್ಯತೇ। ತದಿತಿ, ಬ್ರಹ್ಮದೃಷ್ಟಿರಿತಿ ಪ್ರಕೃತಬ್ರಹ್ಮಪರಾಮರ್ಶಃ। ತದಧಿಗಮೇ= ಬ್ರಹ್ಮದರ್ಶನೇ ಸತಿ, ಉತ್ತರ–ಪೂರ್ವಾಘಯೋಃ ಅಶ್ಲೇಷ–ವಿನಾಶೌ=ಉತ್ತರಾಘಸ್ಯ ಅಶ್ಲೇಷಃ, ಪೂರ್ವಾಘಸ್ಯ ವಿನಾಶಃ ಭವತೀತ್ಯರ್ಥಃ। 'ನಾಭುಕ್ತಂ ಕ್ಷೀಯತೇ ಕರ್ಮ' ಇತಿ ಸ್ಮೃತೇಸ್ತು ಅಪ್ರಕೃತಪ್ರಾಯಶ್ಚಿತ್ತ ವಿಷಯತ್ವಸ್ಯ ವಾ ಅಜ್ಞವಿಷಯತ್ವಸ್ಯವಾ ಪ್ರಾರಬ್ಧ ವಿಷಯತ್ವಸ್ಯ ವಾ ಕಲ್ಪನಾದಿತಿ ಭಾವಃ ।

ತದ್ವ್ಯಪದೇಶಾತ್='ತದ್ಯಥಾ ಪುಷ್ಕರಪಲಾಶೇ' ಇತಿ ಶ್ರುತೌ ಅಶ್ಲೇಷಸ್ಯ, 'ತದ್ಯಥೈಷೀಕಾತೂಲಂ' ಇತಿ ಶ್ರುತೌ ನಾಶಸ್ಯ ಚ ವ್ಯಪದೇಶಾತ್ ಇತ್ಯರ್ಥಃ ।

ಅಶ್ಲೇಷೋ ನಾಮ ಇಹ ಜನ್ಮನಿ ಅಶುಚಿತ್ವ–ಅಸಂಭಾಷ್ಯತ್ವಾದ್ಯಭಾವಃ, ಪರತ್ರ ಚ ನರಕಾದ್ಯಹೇತುತ್ವಮ್ । ಆನಂದಹ್ರಾಸಕರತ್ವಾಖ್ಯ–ಶ್ಲೇಷಃ ಅಸ್ತ್ಯೇವ ಇತಿ ಬೋಧ್ಯಮ್।)

ಇದುವರೆಗೆ ಹೇಳಿದ ವಿಷಯ ಪ್ರಾಸಂಗಿಕ. ಈ ಅಧಿಕರಣದಲ್ಲಿ ಪ್ರಕೃತಪಾದ

ಪ್ರತಿಪಾದ್ಯವಿಷಯವನ್ನು ಹೇಳುತ್ತಾರೆ. ತದಧಿಗಮೇ=ಬ್ರಹ್ಮನ ಅಪರೋಕ್ಷವಾದಲ್ಲಿ ಉತ್ತರ–ಪೂರ್ವಾಘಯೋಃ=ಮುಂದಿನ ಮತ್ತು ಹಿಂದೆ ಮಾಡಿದ ಪಾಪಗಳ ಅಶ್ಲೇಷ–ವಿನಾಶೌ=ಮುಂದಿನ ಪಾಪದ ನಂಟಿರುವುದಿಲ್ಲ. ಹಿಂದಿನ ಪಾಪಗಳು ನಾಶವಾಗುತ್ತವೆ. ತದ್‌ವ್ಯಪದೇಶಾತ್=ಶ್ರುತಿಯಲ್ಲಿ ಹಾಗೆ ಹೇಳಿರುವುದರಿಂದ. 'ತದ್ಯಥಾ ಪುಷ್ಕರಪಲಾಶೇ' ಎಂಬ ಶ್ರುತಿಯು ಉತ್ತರಪಾಪದ ಅಶ್ಲೇಷವನ್ನೂ 'ತದ್ಯಥೈಷೀಕಾತೂಲಂ' ಎಂಬ ಶ್ರುತಿಯು ಪೂರ್ವಪಾಪದ ವಿನಾಶವನ್ನೂ ಹೇಳುತ್ತದೆ.

**॥ ಓಂ ಇತರಸ್ಯಾಪ್ಯೇವಮಸಂಶ್ಲೇಷಃ ಪಾತೇ ತು ಓಂ ॥** (ಇತರಸ್ಯೇತಿ ತಂತ್ರಮ್। ಪಾತ ಇತಿ ಸಾಮೀಪ್ಯಸಪ್ತಮೀ। ತಾದರ್ಥ್ಯೇ ವಾ। ಅಸಂಶ್ಲೇಷ ಇತ್ಯುಪಲಕ್ಷಣಮ್। ತುಃ ಅನುತ್ಥಾನರೂಪವಿಶೇಷವಾಚೀ ಸನ್ ಪಾತವಿಶೇಷಣಮ್।

ಇತರಸ್ಯ=ಪ್ರಸ್ತುತ ಜ್ಞಾನೀತರಸ್ಯ ಈಶದ್ವೇಷಿಣಃ ಪಾತೇ ತು=ಅನುತ್ಥಾನಪಾತೇ ಆಸನ್ನೇ ಮಿಥ್ಯಾಜ್ಞಾನೇ ಪೂರ್ಣೇ ಸತಿ ಪುಣ್ಯಸ್ಯಾಪಿ ಏವಂ=ಜ್ಞಾನಿಪಾಪಸ್ಯೇವ ಉತ್ತರ–ಪೂರ್ವಾಘಯೋಃ ಅಶ್ಲೇಷವಿನಾಶೌ ಭವತಃ ಇತ್ಯರ್ಥಃ।)

ಇತರಸ್ಯಾಪಿ=ಪ್ರಸ್ತುತಜ್ಞಾನಿಗಿಂತ ಇತರನಾದ ಭಗವದ್‌ದ್ವೇಷಿಗೂ ಪಾತೇ ತು= ನಿತ್ಯನರಕಪಾತವು ಸನ್ನಿಹಿತವಾದಾಗ ಅರ್ಥಾತ್ ಮಿಥ್ಯಾಜ್ಞಾನವು ಪರಿಪಕ್ವವಾದಾಗ ಇತರಸ್ಯಾಪಿ=ಅವನ ಸತ್ಕರ್ಮಕ್ಕೂ ಏವಂ=ಜ್ಞಾನಿಯ ದುಷ್ಕರ್ಮದಂತೆ ಅಸಂಶ್ಲೇಷಃ= (ಉಪಲಕ್ಷಣಯಾ ವಿನಾಶ) ಹಿಂದಿನ ಪುಣ್ಯದ ನಾಶ ಮುಂದಿನ ಪುಣ್ಯದ ಅಸಂಪರ್ಕವೂ ಆಗುತ್ತದೆ.

**॥ ಓಂ ಅನಾರಬ್ಧಕಾರ್ಯೇ ಏವ ತು ಪೂರ್ವೇ ತದವಧೇಃ ಓಂ ॥** (ಅನಾರಬ್ಧಕಾರ್ಯೇ=ಭೋಕ್ತುಮ್ ಅನುಪಕ್ರಾಂತೇ ಸುಖದುಃಖರೂಪೇ ಕಾರ್ಯೇ ಯಯೋಃ ತೇ ತಾದೃಶೇ ಏವ ಪೂರ್ವೇ=ಪೂರ್ವೋಕ್ತೇ ಪುಣ್ಯಪಾಪೇ ನಶ್ಯತಃ ಇತಿ ಶೇಷಃ। ನತು ಪ್ರಾರಬ್ಧಕಾರ್ಯೇ ಯೇನೋಕ್ತದೋಷಃ ಸ್ಯಾದಿತ್ಯರ್ಥಃ। ಜ್ಞಾನಾನಂತರಂ ಪ್ರಾರಬ್ಧಸತ್ವಂ ಕುತಃ ? ತದವಧೇಃ, ಶ್ರವಣಾದಿತಿ ಶೇಷಃ। ತದಿತಿ ತಂತ್ರಂ ಶ್ರುತಿಸ್ಥಂ ಪರಾಮೃಶತಿ। ತಸ್ಯ=ಮೋಕ್ಷಸ್ಯ ತದವಧೇಃ=ಪ್ರಾರಬ್ಧಕರ್ಮಾವಸಾನಾವಧಿಕತ್ವಸ್ಯ 'ತಸ್ಯ ತಾವದೇವ ಚಿರಂ' ಇತಿ ಶ್ರವಣಾದಿತ್ಯರ್ಥಃ।)

ಅನಾರಬ್ಧಕಾರ್ಯೇ=ಸುಖ–ದುಃಖಗಳ ಅನುಭವರೂಪವಾದ ಕಾರ್ಯವು ಯಾವ ಪುಣ್ಯ–ಪಾಪಗಳಿಂದ ಆಗಿಲ್ಲವೋ ಅಂತಹ ಪೂರ್ವೇ=ಸಂಚಿತ ಪುಣ್ಯಪಾಪಗಳು ಮಾತ್ರ ಜ್ಞಾನದಿಂದ ನಾಶವಾಗುತ್ತವೆ. ಪ್ರಾರಬ್ಧಪುಣ್ಯ–ಪಾಪಗಳಿಗೆ ನಾಶವಿಲ್ಲ.

ಜ್ಞಾನಾನಂತರವೂ ಪ್ರಾರಬ್ಧವು ಇದೆ. ಏಕೆಂದರೆ, ತದವಧೇಃ, ತಸ್ಯ=ಮೋಕ್ಷಕ್ಕೆ ತದವಧೇಃ=ಪ್ರಾರಬ್ಧಾವಸಾನವೇ ಅವಧಿ ಎಂಬುದು 'ತಸ್ಯ ತಾವದೇವ ಚಿರಂ' ಎಂಬ ಶ್ರುತಿಯಿಂದ ಸಿದ್ಧವಾಗಿದೆ.

**॥ ಓಂ ಅಗ್ನಿಹೋತ್ರಾದಿ ತು ತತ್ಕಾರ್ಯಾಯೈವ ತದ್ದರ್ಶನಾತ್ ಓಂ ॥** (ತುಃ 'ಜ್ಞಾನಿನಸ್ತು, ನ ದ್ವೇಷಿಣಃ' ಇತಿ ವಿಶೇಷಾರ್ಥಃ । ತತ್‌ಕಾರ್ಯಮಿತಿ ಕರ್ಮಧಾರಯಃ ತತ್‌ಪುರುಷಶ್ಚ । ತದಿತಿ ಪ್ರಸ್ತುತಾಧಿಗಮಃ ಉಚ್ಯತೇ ।

ಜ್ಞಾನಿನಃ ಅಗ್ನಿಹೋತ್ರಾದ್ಯಕಾಮ್ಯಂ ಕರ್ಮ, ತತ್ಕಾರ್ಯಾಯೈವ=ಜ್ಞಾನಾಖ್ಯ ಕಾರ್ಯಾಯ, ಜ್ಞಾನಕಾರ್ಯಮೋಕ್ಷಾತಿಷಯಾನುಭವಾಯೈವ ಚ । ನತು ನಾಶಾಶ್ಲೇಷೌ ಆಪ್ನೋತಿ । ನಾಪಿ ಬಂಧಕಮ್ । ಜ್ಞಾನಾತ್ ಪೂರ್ವಕೃತಂ ಜ್ಞಾನಾಯ, ಪಾಶ್ಚಾತ್ಯಂ ತು ಅತಿಶಯಾಯ ಇತ್ಯರ್ಥಃ । ತದ್ದರ್ಶನಾತ್='ಯ ಆತ್ಮಾನಮೇವ...' ಇತಿ ಶ್ರುತೌ ಉಕ್ತಾರ್ಥಸ್ಯ ದರ್ಶನಾತ್ ಇತ್ಯರ್ಥಃ ।)

ಜ್ಞಾನಿ ಮಾಡಿದ ಅಗ್ನಿಹೋತ್ರಾದಿ ತು=ಅಗ್ನಿಹೋತ್ರ–ಸಂಧ್ಯಾದಿ ಕರ್ಮದಿಂದಾದ ಅಕಾಮ್ಯ ಪುಣ್ಯವು ತತ್‌ಕಾರ್ಯಾಯೈವ=ಜ್ಞಾನಕ್ಕಾಗಿ ಮತ್ತು ಜ್ಞಾನಕಾರ್ಯವಾದ ಮೋಕ್ಷಾನಂದದ ವೃದ್ಧಿಗಾಗಿಯೇ ಆಗಿರುತ್ತದೆ. ಅದರ ಅಶ್ಲೇಷವಾಗಲೀ, ವಿನಾಶವಾಗಲೀ ಇಲ್ಲ. ತದ್ದರ್ಶನಾತ್='ಯಃ ಆತ್ಮಾನಮೇವ ಲೋಕಮುಪಾಸ್ತೇ' ಎಂಬ ಶ್ರುತಿಯಲ್ಲಿ ಜ್ಞಾನಿಕರ್ಮಕ್ಕೆ ನಾಶವಿಲ್ಲ ಎಂದಿರುವುದರಿಂದ.

**॥ ಓಂ ಅತೋಽನ್ಯದಪೀತ್ಯೇಕೇಷಾಮುಭಯೋಃ ಓಂ ॥**(ಅಪೀತ್ಯತಃ ಅಶ್ಲೇಷ–ವಿನಾಶೌ ಇತ್ಯಸ್ತಿ । ಅನಾರಬ್ಧಕಾರ್ಯಮಿತಿ ಚ । ಅತಃ=ಪ್ರಸ್ತುತಾದಕಾಮ್ಯಾತ್ ಅನ್ಯತ್ ಕಾಮ್ಯಂ ಪೂರ್ವೋತ್ತರಪುಣ್ಯಂ ಚ ಅಪ್ರಾರಬ್ಧಮನಿಷ್ಟಂ ಚ ಇತಿ ಶೇಷಃ, ನಾಶಾಶ್ಲೇಷೌ ಆಪ್ನೋತಿ । ನ ಕೇವಲಮಘಂ ಇತ್ಯಪೇರರ್ಥಃ । ಕುತಃ ? ಇತ್ಯೇಕೇಷಾಮುಭಯೋಃ । ಇತಿ=ಏವಂ ಉಭಯೋಃ=ಪೂರ್ವೋತ್ತರ ಪುಣ್ಯಪಾಪಯೋಃ ತ್ಯಾಗೇನ ಏಕೇಷಾಂ ಶಾಖಿನಾಂ ಪಾಠೋಽಸ್ತಿ 'ತಸ್ಯ ಪುತ್ರಾ ದಾಯಮುಪಯಂತಿ, ಸುಹೃದಃ ಸಾಧುಕೃತ್ಯಾಂ, ದ್ವಿಷಂತಃ ಪಾಪಕೃತ್ಯಾಮ್' ।)

ಜ್ಞಾನಿಗಳು ಮಾಡಿದ ನಿಷ್ಕಾಮಕರ್ಮ ಜನ್ಯವಾದ ಪುಣ್ಯವು ಮುಕ್ತಿಯ ಆನಂದವೃದ್ಧಿಗೆ ಕಾರಣವಾಗುತ್ತದೆ. ಆದರೂ ಕಾಮ್ಯಪುಣ್ಯವು (ಪ್ರಾರಬ್ಧ–ಸಂಚಿತ) ಉಳಿದಿರುವುದರಿಂದ ಮೋಕ್ಷ ಹೇಗೆ? ಅದಕ್ಕೆ ಉತ್ತರ ಈ ಸೂತ್ರ. ಅತಃ=ಪ್ರಸ್ತುತವಾದ

ಅಕಾಮ್ಯಪುಣ್ಯಕ್ಕಿಂತ ಭಿನ್ನವಾದ ಕಾಮ್ಯವಾದ ಜ್ಞಾನಪೂರ್ವೋತ್ತರ ಪುಣ್ಯಗಳು ಅಪ್ರಾರಬ್ಧವಾದ ಅನಿಷ್ಟಪುಣ್ಯಗಳೂ ಕೂಡಾ, ಅಪಿ ಶಬ್ದದಿಂದ ಪಾಪವೂ ಕೂಡ ನಾಶಹೊಂದುವುದು. ಇತಿ=ಈ ಕಾರಣದಿಂದ ಏವಂ ಉಭಯೋಃ=ಪೂರ್ವೋತ್ತರ ಪುಣ್ಯ-ಪಾಪಗಳನ್ನು ತ್ಯಾಗಹೇಳುವ ಏಕೇಷಾಂ=ಕೆಲವು·ಶಾಖಿಗಳ ಪಾಠ ಹೀಗಿದೆ— 'ತಸ್ಯ ಪುತ್ರಾ ದಾಯಮುಪಯಂತಿ, ಸುಹೃದಃ ಸಾಧುಕೃತ್ಯಾಂ, ದ್ವಿಷಂತಃ ಪುಣ್ಯಕೃತ್ಯಾಮ್॥' (ಈ ಶ್ರುತಿ ಶಾಟ್ಯಾಯನ ಎಂಬ ಸಾಮಶಾಖೆಯಲ್ಲಿದೆ.)

**॥ ಓಂ ಯದೇವ ವಿದ್ಯಯೇತಿ ಹಿ ಓಂ ॥** (ಅಗ್ನಿಹೋತ್ರಾದೀತಿ, ತತ್ಕಾರ್ಯಾಯೈವೇತಿ ಚಾಸ್ತಿ। 'ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತಿ' ಇತಿ ಶ್ರುತಿರ್ಹಿ=ಯಸ್ಮಾದಸ್ತಿ ಅತಃ ಅಕಾಮ್ಯಂ ಜ್ಞಾನಿಕರ್ಮ ಮೋಕ್ಷಾಯೋಪಯೋಗಿ, ಇತಿ ಯುಕ್ತಮಿತ್ಯರ್ಥಃ।)

ಹಿ=ಯಾವ ಕಾರಣದಿಂದ 'ಯದೇವ ವಿದ್ಯಯಾ' ಇತಿ='ಯದೇವ ವಿದ್ಯಯಾ ಕರೋತಿ' ಎಂಬ ಶ್ರುತಿ ಇದೆಯೋ ಆ ಕಾರಣದಿಂದ ಜ್ಞಾನಿಕೃತವಾದ ನಿಷ್ಕಾಮಕರ್ಮಜನಿತವಾದ ಪುಣ್ಯವು ಮೋಕ್ಷೋಪಯೋಗಿಯಾಗುತ್ತದೆ. ಇದೇ ನ್ಯಾಯವು ಭಗವದ್‌ದ್ವೇಷಿಗಳು ಮಾಡಿದ ಪುಣ್ಯ-ಪಾಪಗಳಿಗೂ ಅನ್ವಯಿಸುತ್ತದೆ. (ಹಿಂದಿನ ಮೂರು ಸೂತ್ರಗಳಲ್ಲಿ ಜ್ಞಾನಿಗಳಿಗೆ ಹೇಳಿದ ನ್ಯಾಯವು ಭಗವದ್ ದ್ವೇಷಿಗಳಿಗೂ ಅನ್ವಯಿಸುತ್ತದೆ.)

**॥ ಓಂ ಭೋಗೇನ ತ್ವಿತರೇ ಕ್ಷಪಯಿತ್ವಾಽಥ ಸಂಪತ್ಸ್ಯತೇ ಓಂ ॥** (ತುಃ ಜ್ಞಾನಿನಃ ಪ್ರಾರಬ್ಧಭೋಗೇ 'ಉಪಮರ್ದಂ ಚ' ಇತ್ಯುಕ್ತವಿಶೇಷಸೂಚಕಃ। ಅಥಶಬ್ದೋ ನಿಯಮಸೂಚಕಃ।

ಇತರೇ=ಪ್ರಸ್ತುತಾನಾರಬ್ಧಾದನ್ಯೇ ಪ್ರಾರಬ್ಧಪುಣ್ಯ-ಪಾಪೇ ಭೋಗೇನ ಕ್ಷಪಯಿತ್ವಾ ಅಥ=ಪ್ರಾರಬ್ಧಪುಣ್ಯ-ಪಾಪಕ್ಷಪಣಾದನ್ವೇವ, ನತು ಜ್ಞಾನೋತ್ಪತ್ತ್ಯನಂತರಮಿವ ವಿಲಂಬಃ, ಸಂಪತ್ಸ್ಯತೇ=ಬ್ರಹ್ಮ ವಾ ತಮೋ ವಾ ಪ್ರಾಪ್ನೋತಿ, ಇತ್ಯರ್ಥಃ।)

ಇತರೇ=ಪ್ರಸ್ತುತವಾದ ಅನಾರಬ್ಧಾತಿರಿಕ್ತವಾದ ಪ್ರಾರಬ್ಧಪುಣ್ಯ-ಪಾಪಗಳನ್ನು ಭೋಗೇನ=ಅನುಭವಿಸಿ ಕ್ಷಪಯಿತ್ವಾ=ನಾಶಪಡಿಸಿಕೊಂಡು ಅಥ=ಕರ್ಮಕ್ಷಯ ಸಮನಂತರದಲ್ಲೇ ವಿಲಂಬವಿಲ್ಲದೆ ಸಂಪತ್ಸ್ಯತೇ=ಜ್ಞಾನಿಯ ಬ್ರಹ್ಮನನ್ನೂ ದ್ವೇಷಿಯು ತಮಸ್ಸನ್ನೂ ಹೊಂದುತ್ತಾನೆ.

## ಶಾಂಕರಭಾಷ್ಯದಲ್ಲಿ ತದಧಿಗಮಾಧಿಕರಣ

**॥ ತದಧಿಗಮಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್ ॥** ಪುಣ್ಯ-ಪಾಪಗಳು ಸುಖದುಃಖಗಳನ್ನು ಉತ್ಪತ್ತಿ ಮಾಡಿಯೇ ನಾಶವಾಗಬೇಕು. ''ನಾಭುಕ್ತಂ ಕ್ಷೀಯತೇ ಕರ್ಮ'' ಎಂಬ ಶ್ರುತಿ ಹಾಗೆ ಹೇಳುತ್ತದೆ. ಆದರೂ ತದಧಿಗಮೇ=ಬ್ರಹ್ಮಾಪರೋಕ್ಷವಾದಾಗ ಉತ್ತರ-ಪೂರ್ವಾಘಯೋಃ=ಮುಂದಿನ ಮತ್ತು ಹಿಂದಿನ ಪುಣ್ಯಪಾಪಗಳಿಗೆ ಕ್ರಮವಾಗಿ ಅಶ್ಲೇಷ-ವಿನಾಶೌ=ಉತ್ತರ ಪಾಪ-ಪುಣ್ಯಗಳ ಅಲೇಪ ಮತ್ತು ಪೂರ್ವಕೃತ ಪಾಪ-ಪುಣ್ಯಗಳಿಗೆ ವಿನಾಶ. ತದ್‌ವ್ಯಪದೇಶಾತ್, ಹಾಗೆ ಶ್ರುತಿ ಹೇಳಿರುವುದರಿಂದ- ಯಥಾ ಪುಷ್ಕರ ಪಲಾಶೇ ಆಪೋ ನ ಶ್ಲಿಷ್ಯಂತೇ ಏವಮೇವಂವಿದಿ ಪಾಪಂ ಕರ್ಮ ನ ಶ್ಲಿಷ್ಯತೇ'' ಎಂದು ಛಾಂದೋಗ್ಯಶ್ರುತಿಯು ಉತ್ತರ ಪಾಪದ ಅಶ್ಲೇಷವನ್ನು ಹೇಳುತ್ತದೆ. 'ತದ್ಯಥಾ ಈಶೀಕಾತೂಲಮಗ್ನೌ ಪ್ರೋತಂ ಪ್ರದೂಯೇತ ಏವಂ ಹಾಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೇ' ಎಂಬ ಛಾಂದೋಗ್ಯಶ್ರುತಿಯು ಪೂರ್ವಕರ್ಮದ ನಾಶವನ್ನು ಹೇಳುತ್ತದೆ. ಆದ್ದರಿಂದ ಸಾಧಕರು ಯಾವಜ್ಜೀವಪರ್ಯಂತಕರ್ತವ್ಯವನ್ನು ಅನುಷ್ಠಾನ ಮಾಡಬೇಕಾದರೂ ಜ್ಞಾನಿಗಳಿಗೆ ಜ್ಞಾನಬಂದ ಮೇಲೆ ಕರ್ಮಾನುಷ್ಠಾನದ ನಿಯಮವಿಲ್ಲ.

**ವಿಮರ್ಶೆ**—ಬ್ರಹ್ಮಜ್ಞಾನದಿಂದ ''ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ' ಎಂಬ ಶ್ರುತಿ ಹೇಳುವಂತೆ ಅಜ್ಞಾನನಿವೃತ್ತಿಯಾಗಿ ಅಜ್ಞಾನಕಾರ್ಯವಾದ ಪ್ರಪಂಚವೇ ನಿವೃತ್ತಿಯಾಗುತ್ತದೆ. ಪ್ರಪಂಚಾಂತರ್ಗತವಾದ ಪುಣ್ಯಪಾಪಗಳಿಗೂ ನಿವೃತ್ತಿಯು ಸಿದ್ಧ. ಹೀಗಿದ್ದಮೇಲೆ ಉತ್ತರ-ಪೂರ್ವಾಘಗಳು ನಿವೃತ್ತಿಯಾಗುತ್ತವೆ, ಎಂದು ವಿಶೇಷವಾಗಿ ಹೇಳುವ ಪ್ರಸಕ್ತಿ ಇಲ್ಲ.

**ರಾಮಾನುಜಭಾಷ್ಯದಲ್ಲಿ** 'ತದಧಿಗಮೇ' ಎಂಬ ತತ್ ಪದದಿಂದ ಬ್ರಹ್ಮವಿದ್ಯೆಯು ವಾಚ್ಯ. ತದಧಿಗಮೇ=ಬ್ರಹ್ಮವಿದ್ಯಾಪ್ರಾಪ್ತಿಯಾದಾಗ ಎಂದು ಅರ್ಥ. ಏಕೆಂದರೆ, ಅವರ ದರ್ಶನದಂತೆ ಈ ಶರೀರದಿಂದ ಬ್ರಹ್ಮಾಪರೋಕ್ಷವಾಗುವುದಿಲ್ಲ, ಅದಕ್ಕಾಗಿ ತತ್‌ಪದಕ್ಕೆ 'ಬ್ರಹ್ಮವಿದ್ಯಾ' ಎಂದು ಅರ್ಥವನ್ನು ಹೇಳಲಾಗಿದೆ. ಆದರೆ ಹಾಗೆ ಹೇಳಿದಾಗ 'ಅಧಿಗಮ' ಪದದ ಅಗತ್ಯವಿಲ್ಲ, ಅದು ವ್ಯರ್ಥ.

## ಶಾಂಕರಭಾಷ್ಯದಲ್ಲಿ ಇತರಾಧಿಕರಣ

**॥ ಇತರಸ್ಯಾಪ್ಯೇವಮಸಂಶ್ಲೇಷಃ ಪಾತೇ ತು ॥** ಇದು ಪ್ರತ್ಯೇಕವಾದ ಒಂದು ಅಧಿಕರಣ. ಹಿಂದಿನ ಅಧಿಕರಣದಲ್ಲಿ 'ಅಘ' ಶಬ್ದದಿಂದ ಪಾಪವನ್ನು ಹೇಳಿ ಅದು

ನಾಶವಾಗುತ್ತದೆ, ಮುಂದಿನ ಪಾಪದ ಶ್ಲೇಷವಿಲ್ಲ ಎನ್ನಲಾಯಿತು. ಈ ನ್ಯಾಯವನ್ನು ಪುಣ್ಯಕ್ಕೂ ಈ ಅಧಿಕರಣದಲ್ಲಿ ಅನ್ವಯಿಸಲಾಗಿದೆ. ಇತರಸ್ಯಾಪಿ=ಪಾಪೇತರವಾದ ಪುಣ್ಯಕ್ಕೂ ಏವಂ ಅಸಂಶ್ಲೇಷಃ=ಪಾಪದಂತೆ ಉತ್ತರಪುಣ್ಯದ ಶ್ಲೇಷ ಜ್ಞಾನಿಗೆ ಇಲ್ಲ. ಕರ್ಮಫಲಕ್ಕಿಂತಲೂ ಜ್ಞಾನಫಲವು ಶ್ರೇಷ್ಠವಾದುದು. ಹೀಗೆ ಶರೀರಾಂತರ ಕಾರಣವಾದ ಪುಣ್ಯ–ಪಾಪಗಳು ನಾಶವಾಗುವುದರಿಂದ ಪಾತೇ ತು=ಶರೀರಪಾತವಾದ ಕೂಡಲೇ ಮೋಕ್ಷವಾಗುತ್ತದೆ.

**ವಿಮರ್ಶೆ**—ಬ್ರಹ್ಮಜ್ಞಾನದಿಂದ ಪಾಪನಾಶವಾಗುವುದು ಅದೃಷ್ಟವಾದ ವಿಷಯವಲ್ಲ. ಜ್ಞಾನದಿಂದ ಅಜ್ಞಾನನಿವೃತ್ತಿಯಾಗಿ ಅಜ್ಞಾನೋಪಾದಾನಕವಾದ ಪಾಪ ನಿವೃತ್ತಿಯಾಗುತ್ತದೆ. ಅದನ್ನು ಭಾಷ್ಯಟೀಕೆ ಭಾಮತಿಯಲ್ಲಿ ಹೇಳಲಾಗಿದೆ— 'ನೋ ಖಲು ಬ್ರಹ್ಮವಿದ್ಯಾ ಕೇನಚಿದದೃಷ್ಟದ್ವಾರೇಣ ದುಷ್ಕೃತಮಪನಯತಿ, ಅಪಿ ತು ದೃಷ್ಟೇನೈವ ಭೋಕ್ತೃ–ಭೋಕ್ತವ್ಯ–ಭೋಗಾದಿ ಪ್ರವಿಲಯದ್ವಾರೇಣ ।'' ಈ ಪ್ರಕ್ರಿಯೆ ಪುಣ್ಯಕ್ಕೂ ಸಮಾನ. ಅಂದಮೇಲೆ ಮತ್ತೆ ಪೂರ್ವಪಕ್ಷಕ್ಕೆ ಅವಕಾಶವಿಲ್ಲ. ಈ ಅಧಿಕರಣ ಬೇಕಿಲ್ಲ.

**ರಾಮಾನುಜಭಾಷ್ಯದಲ್ಲೂ** ಇದೇ ಅರ್ಥವನ್ನು ಹೇಳಲಾಗಿದೆ. 'ಪಾತೇ ತು' ಎಂದು ಪುಣ್ಯನಾಶದಲ್ಲಿ ಒಂದು ವಿಶೇಷವನ್ನು ಹೇಳಲಾಗಿದೆ. ಪುಣ್ಯವೂ ವಿದ್ಯೆಯಿಂದ ಪೂರ್ಣವಾಗಿ ನಾಶವಾದರೆ ಉಪಾಸನೆಗಾಗಿ ಶರೀರ–ಅನ್ನಪಾನಾದಿಗಳು ಲಭ್ಯವಾಗಲಿಕ್ಕಿಲ್ಲ. ಆದ್ದರಿಂದ ಶರೀರಪಾತವಾದ ಮೇಲೆ ಪುಣ್ಯನಾಶ, ಎಂದು. ಆದರೆ, ತುಲ್ಯನ್ಯಾಯೇನ ಶರೀರಾಂತರಾರ್ಥವಾಗಿ ಪುಣ್ಯವೂ ಉಳಿಯಬೇಕಾದೀತು.

## ಶಾಂಕರಭಾಷ್ಯದಲ್ಲಿ ಅನಾರಬ್ಧಕಾರ್ಯಾಧಿಕರಣ

**॥ ಅನಾರಬ್ಧಕಾರ್ಯೇ ಏವ ತು ಪೂರ್ವೇ ತದವಧೇಃ ॥** ಹಿಂದಿನ ಎರಡು ಅಧಿಕರಣಗಳಲ್ಲಿ ಪುಣ್ಯ–ಪಾಪಗಳ ಕ್ಷಯವನ್ನು ಹೇಳಲಾಗಿದೆ. ಅವೆರಡೂ ನಾಶವಾದರೆ ಅದರ ಫಲವಾದ ದೇಹವೂ ನಾಶವಾಗಬೇಕು. ಆದರೆ, ಜ್ಞಾನಿಗಳೂ ದೇಹಧಾರಣೆ ಮಾಡಿರುತ್ತಾರೆ. ಆದ್ದರಿಂದ ಅನಾರಬ್ಧಕಾರ್ಯೇ ಏವತು=ಸುಖ–ದುಃಖರೂಪವಾದ ಕಾರ್ಯವನ್ನು ಉಂಟುಮಾಡಿರದ ಸಂಚಿತ ಪುಣ್ಯಪಾಪಗಳಿಗೆ ಮಾತ್ರ ಜ್ಞಾನದಿಂದ ವಿನಾಶ. ಪ್ರಾರಬ್ಧಕ್ಕೆ ವಿನಾಶವಿಲ್ಲ. ಚಕ್ರವನ್ನು ಕುಲಾಲನು ತಿರುಗಿಸುವುದನ್ನು ನಿಲ್ಲಿಸಿದರೂ ಮೊದಲು ತಿರುಗಿಸಿರುವುದರಿಂದ ಅದು ತಿರುಗುತ್ತಲೇ ಇರುತ್ತದೆ. ಅದರಂತೆ ಬ್ರಹ್ಮಜ್ಞಾನದಿಂದ ಅವಿದ್ಯೆಯ ನಾಶವಾದರೂ ಅದರ ಫಲವಾದ

ಮಿಥ್ಯಾಜ್ಞಾನವು ಹಾಗೆಯೇ ಮುಂದುವರಿಯುತ್ತದೆ. ಶರೀರ ನಾಶವಾದ ಮೇಲೆ ಅದು ನಾಶವಾಗುತ್ತದೆ. ಮಿಥ್ಯಾಜ್ಞಾನವೂ ಬ್ರಹ್ಮಜ್ಞಾನದಿಂದ ಬಾಧಿತವಾದರೂ ದ್ವಿಚಂದ್ರ ಭ್ರಮೆಯಂತೆ ಸಂಸ್ಕಾರವಶಾತ್ ಅನುವೃತ್ತವಾಗುತ್ತದೆ.

ವಿಮರ್ಶೆ—ಕುಲಾಲನ ಕರಾಭಿಘಾತದಿಂದ ಚಕ್ರದ ಭ್ರಮಣೆಯಾಗುತ್ತದೆ. ಒಮ್ಮೆ ಭ್ರಮಣೆಯಾದ ಚಕ್ರವು ವೇಗಾಖ್ಯಸಂಸ್ಕಾರವು ನಾಶವಾಗುವವರೆಗೂ ತಿರುಗುತ್ತಿರುತ್ತದೆ. ಆ ಭ್ರಮಣಕ್ಕೆ ಕುಲಾಲನ ಕರಾಭಿಘಾತವು ಕಾರಣವಲ್ಲ, ವೇಗವು ಕಾರಣ. ಆದ್ದರಿಂದ ಅಂತಹ ಭ್ರಮಣ ಯುಕ್ತವಾಗುತ್ತದೆ. ಆದರೆ, ಪ್ರಕೃತ ಮಿಥ್ಯಾಜ್ಞಾನ, ಅದರ ಸಂಸ್ಕಾರ ಇವೆಲ್ಲವೂ ಅವಿದ್ಯಾಕಾರ್ಯಗಳು. ಅವಿದ್ಯೆಯು ನಿವೃತ್ತವಾದ ಮೇಲೆ ತದುಪಾದಾನಕವಾದ ಅವೆಲ್ಲವೂ ನಿವೃತ್ತಿಯಾಗಬೇಕು. ಅದರಿಂದ ಬ್ರಹ್ಮಜ್ಞಾನ ಬಂದಕೂಡಲೇ ಶರೀರ ಪಾತವಾಗಬೇಕು. ಜೀವನ್ಮುಕ್ತಿ ಪರಮತದಲ್ಲಿ ಸಾಧ್ಯವಿಲ್ಲ.

ರಾಮಾನುಜಭಾಷ್ಯದಲ್ಲಿ ಜ್ಞಾನೋತ್ತರದಲ್ಲಿ ನಡೆಯುವ ಕ್ರಿಯೆಗಳು ಪ್ರಾರಬ್ಧ ಪುಣ್ಯ–ಪಾಪಗಳ ಫಲಗಳು. ಪುಣ್ಯವೆಂದರೆ ಸತ್ಕರ್ಮದಿಂದ ಉಂಟಾದ ಭಗವತ್ ಪ್ರೀತಿ, ಪಾಪವೆಂದರೆ ಅಸತ್ಕರ್ಮದಿಂದಾದ ಭಗವಂತನ ಅಪ್ರೀತಿ. ಇವುಗಳಿಂದಾಗಿ ಜ್ಞಾನಿಪ್ರವೃತ್ತಿ.

## ಶಾಂಕರಭಾಷ್ಯದಲ್ಲಿ ಅಗ್ನಿಹೋತ್ರಾದ್ಯಧಿಕರಣ

**॥ ಅಗ್ನಿಹೋತ್ರಾದಿ ತು ತತ್ಕಾರ್ಯಾಯೈವ ತದ್ದರ್ಶನಾತ್ ॥** ಅಗ್ನಿಹೋತ್ರಾದಿ ನಿತ್ಯಕರ್ಮದಿಂದ ಜನ್ಯವಾದ ಪುಣ್ಯವು ಜ್ಞಾನದಿಂದ ನಾಶವಾಗುವುದಿಲ್ಲ. ಅಗ್ನಿಹೋತ್ರಾದಿ ತು=ಅಗ್ನಿಹೋತ್ರಾದಿ ನಿತ್ಯಕರ್ಮಗಳು ತತ್‌ಕಾರ್ಯಾಯೈವ= ಜ್ಞಾನದ ಕಾರ್ಯವಾದ ಮೋಕ್ಷಕ್ಕೆ ಕಾರಣವಾಗುತ್ತದೆ. ತದ್ದರ್ಶನಾತ್='ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಶಂತಿ ಯಜ್ಞೇನ ದಾನೇನ' (ಬೃ.4.4.22) ಎಂದು ಶ್ರುತಿ ಹೇಳುತ್ತದೆ. ಅಗ್ನಿಹೋತ್ರಾದಿಗಳು ಮೋಕ್ಷಕಾರಣವಾದರೂ ಜ್ಞಾನದಂತೆ ಸಾಕ್ಷಾತ್ತಾಗಿ ಅಲ್ಲ, ಅಗ್ನಿಹೋತ್ರಾದಿಗಳಿಂದ ಜ್ಞಾನ, ಜ್ಞಾನದಿಂದ ಮೋಕ್ಷ. 'ಲಾಂಗಲೇನ ಜೀವತಿ' ಎಂದಂತೆ ಅಗ್ನಿಹೋತ್ರವು ಮೋಕ್ಷಕ್ಕೆ ಕಾರಣ. ಯದ್ಯಪಿ ಜ್ಞಾನ ಮತ್ತು ಕರ್ಮಗಳು ಪರಸ್ಪರ ವಿರುದ್ಧಗಳು. ಅವುಗಳಿಗೆ ಮೋಕ್ಷರೂಪವಾದ ಏಕಫಲಹೇತುತ್ವವು ಸರಿಯಲ್ಲ, ಆದರೂ 'ದಧಿ' ರೋಗಕ್ಕೆ ಕಾರಣವಾದರೂ ಗುಡಮಿಶ್ರಿತವಾದಾಗ ಆರೋಗ್ಯಕ್ಕೆ ಕಾರಣವಾಗುತ್ತದೆ. ಅದರಂತೆ ಕರ್ಮವು ಬಂಧಕ್ಕೆ ಕಾರಣವಾದರೂ ಜ್ಞಾನಸಹಿತವಾದಾಗ ಮೋಚಕವಾಗುತ್ತದೆ.

**॥ ಅತೋಽನ್ಯಾಪಿ ಹ್ಯೇಕೇಷಾಮುಭಯೋಃ ॥** ಅತೋ ಅನ್ಯಾಪಿ=ಅಗ್ನಿಹೋತ್ರಾದಿ ನಿತ್ಯಕರ್ಮಜನ್ಯವಾದ ಪುಣ್ಯಕ್ಕಿಂತ ಭಿನ್ನವಾದ ಕಾಮ್ಯಪುಣ್ಯಕ್ಕೂ ಕೆಲವು ಶಾಖಿಗಳಂತೆ (ಜೈಮಿನಿಮತದಂತೆ) ವಿನಾಶವಿಲ್ಲ. ಅದು ಜ್ಞಾನಿಯ ಸ್ನೇಹಿತರಿಗೆ ಸೇರುತ್ತದೆ. 'ಸುಹೃದಃ ಸಾಧುಕೃತ್ಯಾಂ, ದ್ವಿಷಂತಃ ಪಾಪಕೃತ್ಯಾಂ' ಪುಣ್ಯವು ಮಿತ್ರರಿಗೆ, ಪಾಪವು ಶತ್ರುಗಳಿಗೆ ಹೋಗುತ್ತದೆ. ಆದರೆ, ಉಭಯೋಃ=ಜೈಮಿನಿ ಮತ್ತು ಬಾದರಾಯಣ ಇವರಿಬ್ಬರಿಗೂ ಕಾಮ್ಯ ಕರ್ಮವು ಜ್ಞಾನಕ್ಕೆ ಕಾರಣವಲ್ಲ, ಎನ್ನುವುದರಲ್ಲಿ ವಿಪ್ರತಿಪತ್ತಿ ಇಲ್ಲ.

'ಅತೋಽನ್ಯದಪೀತ್ಯೇಕೇಷಾಮುಭಯೋಃ' ಎಂದು ದ್ವೈತಸೂತ್ರ ಪಾಠ. 'ಅತೋಽನ್ಯಾಪಿ ಹ್ಯೇಕೇಷಾಮ್ ಉಭಯೋಃ'' ಎಂದು ಶಾಂಕರಭಾಷ್ಯಪಾಠ.

**ವಿಮರ್ಶೆ**—ಬ್ರಹ್ಮಜ್ಞಾನದಿಂದ ಕಾಮ್ಯಪುಣ್ಯಗಳು ನಾಶವಾಗುತ್ತವೆ, ಆದರೂ ನಿತ್ಯಕರ್ಮಜನ್ಯವಾದ ಪುಣ್ಯವು ನಾಶವಾಗುವುದಿಲ್ಲ ಎಂದು ಅಪವಾದವನ್ನು ಈ ಸೂತ್ರದಲ್ಲಿ ಹೇಳಲಾಗಿದೆ. ಆದರೆ, ನಾಶವಾಗದ ಆ ಪುಣ್ಯದ ಸಾಕ್ಷಾತ್ ಫಲ ಮೋಕ್ಷವಲ್ಲ. ಏಕೆಂದರೆ, ಮೋಕ್ಷವು ಕರ್ಮಸಾಧ್ಯವಲ್ಲ. ಅಲ್ಲದೆ ಕರ್ಮವು ಜ್ಞಾನೋತ್ಪತ್ತಿಯಲ್ಲಿ ಉಪಕ್ಷೀಣ ಎಂದು 'ವಿವಿದಿಷಂತಿ' ಎಂಬ ಶ್ರುತಿಯು ಹೇಳುತ್ತದೆ. ಹಾಗಾದರೆ ಆ ಕರ್ಮದ ಫಲ ಜ್ಞಾನ. ಕರ್ಮ ಫಲನಾಶ್ಯ. ಅಂದಮೇಲೆ ನಿಷ್ಕಾಮಕರ್ಮಜನ್ಯವಾದ ಪುಣ್ಯವೂ ಜ್ಞಾನನಾಶ್ಯವೇ ಆಯಿತು, ಹೀಗಿರುವಾಗ ಈ ಸೂತ್ರ ಅಪವಾದ ಸೂತ್ರವಾಗುವುದು ಹೇಗೆ?

**ವಿಶಿಷ್ಟಾದ್ವೈತ ದರ್ಶನದಲ್ಲಿ**– ಈ ಮೂರು ಸೂತ್ರಗಳು ಸೇರಿ ಒಂದು ಅಧಿಕರಣ ಎಂದು ಪರಿಗಣಿಸಲಾಗಿದೆ. ಬ್ರಹ್ಮವಿದ್ಯಾಧಿಗಮದಿಂದ ಪೂರ್ವಪುಣ್ಯಗಳು ನಾಶವಾದರೂ ಅಗ್ನಿಹೋತ್ರಾದಿ ಕರ್ಮಜನ್ಯವಾದ ಪುಣ್ಯವು ನಾಶವಾಗುವುದಿಲ್ಲ. ಅದು ಪ್ರತಿದಿನ ಹುಟ್ಟುವ ಬ್ರಹ್ಮವಿದ್ಯೆಯಲ್ಲಿ ಅತಿಶಯಕ್ಕೆ ಕಾರಣವಾಗುತ್ತದೆ. ಇದಲ್ಲದೆ, ಪೂರ್ವದಲ್ಲಿ ಮಾಡಿದ ಪ್ರತಿಬದ್ಧಫಲಕವಾದ ಪುಣ್ಯಾಪಾಪಗಳೂ ಜ್ಞಾನದಿಂದ ನಾಶವಾಗುವುದಿಲ್ಲ. ಅವು ಶತ್ರು–ಮಿತ್ರರಿಗೆ ಸೇರುತ್ತವೆ.

**॥ ಯದೇವ ವಿದ್ಯಯೇತಿ ಹಿ ॥** ಉದ್ಗೀಥವಿದ್ಯೆಯಿಂದ ಯಜ್ಞಜನ್ಯವಾದ ಪುಣ್ಯವು 'ವೀರ್ಯವತ್ತರಂ ಭವತಿ' ಎಂದು ಹೇಳಿರುವುದರಿಂದ (ವೀರ್ಯವತ್ತರ ಎಂದರೆ ಫಲಕೊಡದೆ ನಾಶವಾಗುವುದಿಲ್ಲ, ಎಂದರ್ಥ) ಅದು ಜ್ಞಾನದಿಂದ ನಾಶವಾಗುವುದಿಲ್ಲ. ಅಂತಹ ಜ್ಞಾನಿಕೃತಪುಣ್ಯಗಳು ಮಿತ್ರರಿಗೆ ಸೇರುತ್ತವೆ. ಜ್ಞಾನಿಗೆ ಅದರ ಫಲ ಸಿಗುವುದಿಲ್ಲ, ಜ್ಞಾನದಿಂದ ಅದು ನಾಶವಾಗುವುದೂ ಇಲ್ಲ.

ವಿಮರ್ಶೆ—ಜ್ಞಾನಿಗೇ ಫಲಕೊಡದ ಅಂತಹ ಪುಣ್ಯ ಅಜ್ಞಾನಿಗಳಾದ ಮಿತ್ರರಿಗೆ ಹೇಗೆ ಫಲ ಕೊಟ್ಟೀತು!

## ಶಾಂಕರಭಾಷ್ಯದಲ್ಲಿ ವಿದ್ಯಾಜ್ಞಾನಸಾಧನತ್ವಾಧಿಕರಣ

॥ ಯದೇವ ವಿದ್ಯಯೇತಿ ಹಿ ॥ ಕರ್ಮಾಂಗವಾದ ಉಪಾಸನಾಸಹಿತವಾದ ಅಗ್ನಿಹೋತ್ರಾದಿಗಳೂ ದುರಿತಕ್ಷಯದ್ವಾರಾ ಸತ್ವಶುದ್ಧಿಯನ್ನುಂಟುಮಾಡಿ ಬ್ರಹ್ಮಾಪರೋಕ್ಷಕ್ಕೆ ಕಾರಣವಾಗುತ್ತವೆ. ಅದರಂತೆ, ಉಪಾಸನಾರಹಿತವಾಗಿ ಮಾಡಿದ ಅಗ್ನಿಹೋತ್ರಾದಿಗಳಿಂದಲೂ ಅಪರೋಕ್ಷವಾಗುತ್ತದೆ. 'ಯಜ್ಞೇನ ದಾನೇನ... ವಿವಿದಿಶಂತಿ' ಎಂಬ ಶ್ರುತಿಯಲ್ಲಿ 'ಯಜ್ಞೇನ' ಎಂಬ ಯಜ್ಞಶಬ್ದದಿಂದ ಎರಡೂ ವಿಧದ ಕರ್ಮಗಳೂ ವಿವಕ್ಷಿತವಾಗಿವೆ. ಆದರೆ, ''ಯದೇವ ವಿದ್ಯಯಾ ಕರೋತಿ...ತದೇವ ವೀರ್ಯವತ್ತರಂ ಭವತಿ'' ಎಂದಿರುವುದರಿಂದ ಉಪಾಸನಾಪೂರ್ವಕವಾದ ಯಜ್ಞವು ವೀರ್ಯವತ್ತರವಾಗುತ್ತದೆ-ಕ್ಷಿಪ್ರಫಲಹೇತುವಾಗುತ್ತದೆ.

ವಿಮರ್ಶೆ—ಉಪಾಸ್ತಿಸಹಿತವಾದ ಕರ್ಮವೇ ವಿದ್ಯಾಂಗವೋ ಉಪಾಸನಾರಹಿತವಾದ ಕರ್ಮವೂ ವಿದ್ಯಾಂಗವೋ? ಈ ಚರ್ಚೆಯ ಪರ್ಯವಸಾನ ಕರ್ಮಾಂಗವಾದ ಉಪಾಸನೆ ಬೇಕೋ ಬೇಡವೋ? ಎನ್ನುವಲ್ಲಿ. ಅದನ್ನು 'ತನ್ನಿರ್ಧಾರಣಾರ್ಥಾನಿಯಮಃ...' (3.3.42) ಎಂಬ ಸೂತ್ರದಲ್ಲಿ ಮಾಡಲಾಗಿದೆ. ಆದ್ದರಿಂದ ಸಂದೇಹಕ್ಕೆ ಆಸ್ಪದವಿಲ್ಲ.

## ಶಾಂಕರಭಾಷ್ಯದಲ್ಲಿ ಭೋಗಾಧಿಕರಣ

ಅನಾರಬ್ಧಪುಣ್ಯ-ಪಾಪಗಳು ಜ್ಞಾನದಿಂದ ನಾಶವಾಗುತ್ತವೆ. ಇತರೇ= ಆರಬ್ಧಪುಣ್ಯಾಪಾಪಗಳನ್ನು ಭೋಗೇನ=ಅನುಭವಿಸಿ ಕ್ಷಪಯಿತ್ವಾ=ನಾಶಗೊಳಿಸಿ ಸಂಪದ್ಯತೇ=ಬ್ರಹ್ಮಸ್ವರೂಪವನ್ನು ಪಡೆಯುತ್ತಾನೆ. ಛಾಂದೋಗ್ಯಶ್ರುತಿ ಹೇಳುತ್ತದೆ (6.14.2) ''ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ ಅಥ ಸಂಪತ್ಸ್ಯೇ'' ಪಾರಬ್ಧವನ್ನು ಅನುಭವಿಸುವಾಗ ದ್ವಿಚಂದ್ರಜ್ಞಾನದಂತೆ ಅನುವೃತ್ತವಾದ ಭೇದಜ್ಞಾನವು ಪ್ರಾರಬ್ಧನಾಶವಾದ ಮೇಲೂ ಶರೀರಾಂತರ ಆರಂಭಕ್ಕೆ ಹೇತುವಾಗುವುದಿಲ್ಲ. ಕರ್ಮರೂಪ ನಿಮಿತ್ತ ಇಲ್ಲವಾದುದರಿಂದ. ಆದ್ದರಿಂದ ಆರಬ್ಧಕ್ಷಯವಾದ ಕೂಡಲೇ ಬ್ರಹ್ಮಸಂಪತ್ತಿಯಾಗುತ್ತದೆ.

ವಿಮರ್ಶೆ—ಬ್ರಹ್ಮಾಪರೋಕ್ಷದಿಂದ ಬ್ರಹ್ಮನಲ್ಲಿ ಆರೋಪಿತವಾದ ಸಕಲ

ಪ್ರಪಂಚವೂ ನಿವೃತ್ತವಾದಮೇಲೆ ಸಕಲಾಂತರ್ಗತವಾದ ಶರೀರ, ತತ್ಕಾರಣವಾದ ಪ್ರಾರಬ್ಧ, ಜನ್ಮಾಂತರ, ಭೋಗಗಳು ನಿವೃತ್ತವಾಗಬೇಕು. ಆದ್ದರಿಂದ ಪ್ರಾರಬ್ಧವಶಾತ್ ಶರೀರ–ಜನ್ಮಾಂತರಗಳು ಬ್ರಹ್ಮಜ್ಞಾನಿಗೂ ಇದೆ, ಎನ್ನುವುದೇ ಸರಿಯಲ್ಲ.

ಅಲ್ಲದೆ, ದೇಹಪಾತಕ್ಕಿಂತ ಮೊದಲು ಬ್ರಹ್ಮಜ್ಞಾನವಿದ್ದರೂ ಅದಕ್ಕೆ ವಿರುದ್ಧವಾದ ಭೇದದರ್ಶನವು ಇರುವುದಾದಲ್ಲಿ ದೇಹಪಾತವಾದ ಮೇಲೂ ಆ ಭೇದದರ್ಶನವು ಏಕಿರಬಾರದು? ನಿಮಿತ್ತಾಭಾವಾತ್ ಅದು ಅನುವೃತ್ತಿಯಾಗುವುದಿಲ್ಲ ಎನ್ನುವಂತಿಲ್ಲ. ಭೇದವಾಸನಾವೇ ಭೇದ ದರ್ಶನಕ್ಕೆ ನಿಮಿತ್ತ. ವಾಸನಾನುವೃತ್ತಿಗಾದರೂ ನಿಮಿತ್ತವೇನು? ಎಂದರೆ, ಪ್ರಾರಬ್ಧ ಶೇಷಾನುವೃತ್ತಿಗೆ ಯಾವುದು ನಿಮಿತ್ತವೋ ಅದೇ ನಿಮಿತ್ತ. ಬ್ರಹ್ಮಜ್ಞಾನ ಬಂದಾಗ ಅಜ್ಞಾನವೇ ನಾಶವಾದ ಮೇಲೆ ತದುಪಾದಾನಕವಾದ ಪ್ರಾರಬ್ಧಶೇಷವೂ ನಾಶವಾಗಬೇಕು. ಆದರೆ, ಅದು ನಾಶವಾಗದೇ ಉಳಿಯುತ್ತದೆ. ಏಕೆ? ಅದಕ್ಕೇನು ನಿಮಿತ್ತವೋ ಭೇದವಾಸನಾನುವೃತ್ತಿಗೂ ಅದೇ ನಿಮಿತ್ತ.

ಎರಡಕ್ಕೂ ಯಾವ ನಿಮಿತ್ತವೂ ಇಲ್ಲ, ಎಂದು ತಾತ್ಪರ್ಯ.

## ವಿಶಿಷ್ಟಾದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಭೋಗೇನ ತ್ವಿತರೇ ಕ್ಷಪಯಿತ್ವಾಽಥ ಸಂಪತ್ಸ್ಯತೇ ॥** ಜ್ಞಾನದಿಂದ ನಾಶವಾಗದ ಪ್ರಾರಬ್ಧ ಪುಣ್ಯಪಾಪಗಳನ್ನು ಭೋಗದಿಂದ ನಾಶಮಾಡಿಕೊಂಡು ಜ್ಞಾನಿಯು ಮುಕ್ತನಾಗುತ್ತಾನೆ. ಆ ಪ್ರಾರಬ್ಧಗಳು ಮುಗಿದಿದ್ದರೆ ಆ ಶರೀರಪಾತಾನಂತರದಲ್ಲೇ ಮೋಕ್ಷ. ಶರೀರಾಂತರಕ್ಕೆ ಕಾರಣವಾದರೆ ಆ ಶರೀರಪಾತವಾದ ಮೇಲೆ ಮೋಕ್ಷ.

ಜ್ಞಾನೋತ್ತರ ಕರ್ಮದ ಅಶ್ಲೇಷ ಜ್ಞಾನಿಗಿದೆ. ಅವನ ದೇಹಪಾತವಾದ ಮೇಲೆ ಆ ಕರ್ಮಗಳು ಮಿತ್ರರಿಗೆ ಸೇರುತ್ತವೆ, ಎಂದೂ ಇಲ್ಲಿ ಹೇಳಲಾಗಿದೆ.

**ವಿಮರ್ಶೆ**—ಇಲ್ಲಿ ಪೂರ್ವಪಕ್ಷಕ್ಕೆ ಅವಕಾಶವೇ ಇಲ್ಲ. ಹಿಂದೆ ಪ್ರಾರಬ್ಧಕ್ಕೆ ನಾಶವಿಲ್ಲ, ಭೋಗದಿಂದಲೇ ನಾಶ ಎಂದು 'ಅನಾರಬ್ಧಕಾರ್ಯೇ ಏವ ತು ಪೂರ್ವೇ'(4.1.15) ಹೇಳಿದ ಮೇಲೆ ಮೋಕ್ಷ ಯಾವಾಗ ಆಗುವುದೆಂದು ನಿರ್ಧಾರವಾಗಿ ಬಿಟ್ಟಿದೆ. ಆದ್ದರಿಂದ ಈ ಸೂತ್ರದ ಅಗತ್ಯವಿಲ್ಲ.

**ಇಲ್ಲಿಗೆ ನಾಲ್ಕನೆಯ ಅಧ್ಯಾಯದ ಮೊದಲ ಪಾದ ಮುಗಿಯಿತು.**

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ

# ಬ್ರಹ್ಮಸೂತ್ರಭಾಷ್ಯಮ್

## ನಾಲ್ಕನೆಯ ಅಧ್ಯಾಯದ ಎರಡನೆಯ ಪಾದ

॥ ಹರಿಃ ಓಂ ॥

## ೧. ವಾಙ್ಮನಸಾಧಿಕರಣಮ್

**ದೇವಾನಾಂ ಮೋಕ್ಷ ಉತ್ಕ್ರಾಂತಿಶ್ಚಾಸ್ಮಿನ್ ಪಾದ ಉಚ್ಯತೇ-**

**॥ ಓಂ ವಾಙ್ಮನಸಿ ದರ್ಶನಾಚ್ಛಬ್ದಾಚ್ಚ ಓಂ ॥ ೧ ॥**

**ವಾಗಭಿಮಾನಿನ್ಯುಮಾ ಮನೋಭಿಮಾನಿನಿ ರುದ್ರೇ ವಿಲೀಯತೇ । ವಾಚೋ ಮನೋವಶತ್ವದರ್ಶನಾತ್ । 'ತಸ್ಯ ಯಾವನ್ನ ವಾಙ್ ಮನಸಿ ಸಂಪದ್ಯತೇ' (ಛಾಂ.ಉ. 6.15.1) ಇತಿ ಶಬ್ದಾಚ್ಚ ।**

**'ಉಮಾ ವೈ ವಾಕ್ ಸಮುದ್ದಿಷ್ಟಾ ಮನೋ ರುದ್ರ ಉದಾಹೃತಃ ।**
**ತದೇತನ್ಮಿಥುನಂ ಜ್ಞಾತ್ವಾ ನ ದಾಂಪತ್ಯಾದ್ ವಿಹೀಯತೇ ॥'**

**ಇತಿ ಹಿ ಸ್ಕಾಂದೇ ।**

ಈ ಪಾದದಲ್ಲಿ ಸ್ವಪದವಿಯಲ್ಲಿರುವ ದೇವತೆಗಳಿಗೆ ತಮಗಿಂತ ಉತ್ತಮ ದೇವತೆಗಳಲ್ಲಿ ಪ್ರವೇಶರೂಪವಾದ ಮೋಕ್ಷ ಹಾಗೂ ಮನುಷ್ಯರಿಗೆ ಶರೀರದಿಂದ ಉತ್ಕ್ರಾಂತಿಯನ್ನೂ ಹೇಳಲಾಗಿದೆ.

ವಾಗಭಿಮಾನಿನಿಯಾದ ಉಮಾದೇವಿಯು ಮನೋಭಿಮಾನಿರುದ್ರನಲ್ಲಿ ಲಯವನ್ನು (ಪ್ರವೇಶವನ್ನು) ಹೊಂದುತ್ತಾಳೆ. ಏಕೆಂದರೆ ವಾಗಿಂದ್ರಿಯವು ಮನಸ್ಸಿನ ಅಧೀನವಾಗಿರುವುದು ಅನುಭವಸಿದ್ಧವಾಗಿದೆ. (ಮನಸ್ಸಿನಲ್ಲಿ ಮೂಡಿದ ಭಾವನೆಯನ್ನು ನಾಲಿಗೆಯಿಂದ ಆಡುತ್ತೇವೆ) 'ಮೃತನಾಗುವ ಮನುಷ್ಯನ ವಾಗಿಂದ್ರಿಯಾಭಿಮಾನಿ ಮನೋಭಿಮಾನಿಯಲ್ಲಿ ಲಯವಾಗುವವರೆಗೆ ಮಾತನಾಡುತ್ತಿರುತ್ತಾನೆ' ಎಂದಿದೆ ಶ್ರುತಿ. ಇದರಿಂದ ಉಮೆಯು ರುದ್ರನಲ್ಲಿ ಲಯಹೊಂದುತ್ತಾಳೆ ಎಂಬುದನ್ನೂ ಉಪನಿಷತ್ತಿನಲ್ಲೇ ಹೇಳಿದಂತಾಯಿತು. ಸ್ಕಾಂದದಲ್ಲಿ ಹೀಗಿದೆ—ವಾಕ್ ಎಂದರೆ ಪಾರ್ವತೀದೇವಿ, ಮನಸ್ಸೆಂದರೆ ರುದ್ರದೇವ. ಈ ರುದ್ರ-ಪಾರ್ವತಿಯರನ್ನು ತಿಳಿದವನ ದಾಂಪತ್ಯಕ್ಕೆ ಚ್ಯುತಿ ಇರದು.

**ವಿವರಣೆ**—ಇಲ್ಲೆಲ್ಲ ಕಡೆಯೂ ಉಮಾ ಎಂಬ ಪದದಿಂದ ಅಜಹಲ್ಲಕ್ಷಣಯಾ ವಾರುಣೀ (ಶೇಷಪತ್ನಿ) ಸುಪರ್ಣೀ (ಗರುಡನ ಪತ್ನಿ) ಇವರಿಬ್ಬರನ್ನೂ ತೆಗೆದುಕೊಳ್ಳಬೇಕು. ರುದ್ರಪದದಿಂದಲೂ ಗರುಡ ಶೇಷರನ್ನು ಪರಿಗ್ರಹಿಸಬೇಕು. ಅವರವರ ಪತ್ನಿಯಂದಿರಿಗೆ ಅವರವರ ಪತಿಯರಲ್ಲಿ ಲಯ. ರುದ್ರ-ಪಾರ್ವತೀ ದೇವಿಯರಿಗೆ ಆ ದೇಹದಲ್ಲಿ ಮೋಕ್ಷವಿಲ್ಲ.

**॥ ಓಂ ಅತ ಏವ ಚ ಸರ್ವಾಣ್ಯನು ಓಂ ॥ ೨ ॥**

**ಅತ ಏವ (ಚ) ಶಬ್ದಾತ್ ಸರ್ವಾಣಿ ದೈವಾ(ವತಾ)ನಿ ಯಥಾನುಕೂಲಂ ವಿಲೀಯಂತೇ ।**

**'ಅಗ್ನೌ ಸರ್ವೇ ದೇವಾ ವಿಲೀಯಂತೇಽಗ್ನಿರಿಂದ್ರ ಇಂದ್ರ ಉಮಾಯಾಮುಮಾ ರುದ್ರೇ ವಿಲೀಯತ । ಏವಮನ್ಯಾನಿ ದೈವಾ(ವತಾ)ನಿ ಯಥಾಽನುಕೂಲಮ್' ಇತಿ ಹಿ ಗೌಪವನಶ್ರುತಿಃ ।**

ಅತ ಏವ=ಶ್ರುತಿಪ್ರಮಾಣವಿರುವುದರಿಂದಾಗಿಯೇ ಎಲ್ಲಾ ದೇವತೆಗಳೂ ತಮ್ಮ ಯೋಗ್ಯತೆಗೆ ಅನುಗುಣವಾಗಿ ಸ್ವೋತ್ತಮರಲ್ಲಿ ಲಯಹೊಂದುತ್ತಾರೆ. ಗೌಪವನ ಶ್ರುತಿಯಲ್ಲಿ ಹೀಗಿದೆ— ಅಗ್ನಿಯಲ್ಲಿ ಎಲ್ಲಾ ದೇವತೆಗಳೂ ಲಯ ಹೊಂದುತ್ತಾರೆ. ಅಗ್ನಿ ಇಂದ್ರನಲ್ಲಿ, ಇಂದ್ರ ಉಮೆಯಲ್ಲಿ, ಉಮೆ ರುದ್ರನಲ್ಲಿ ಲಯ ಹೊಂದುತ್ತಾರೆ. ಇದರಂತೆ ಇತರ ದೇವತೆಗಳೂ ತಮ್ಮ ಯೋಗ್ಯತೆಗೆ ತಕ್ಕಂತೆ.

**ವಿವರಣೆ**—ಉಮೆ ಮತ್ತು ರುದ್ರರು ಶೇಷಪದವಿಗೆ ಬಂದಮೇಲೆ ಮುಂದಿನ ಕಲ್ಪದಲ್ಲಿ ಮುಕ್ತರಾಗುತ್ತಾರೆ. ಆದ್ದರಿಂದ ಇಂದ್ರನು ಸೂರ್ಯನನ್ನು ಪ್ರವೇಶಿಸಿ ಆಮೂಲಕ ಸುಪರ್ಣಿಯನ್ನು ಪ್ರವೇಶಿಸುತ್ತಾನೆ. ಅವಳು ಗರುಡನಲ್ಲಿ ಲಯಹೊಂದುತ್ತಾಳೆ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ವಾಙ್ಮನಸಿ ದರ್ಶನಾಚ್ಛಬ್ದಾಚ್ಚ ಓಂ ॥** (ಅತ್ರ ವಾಚೋ ಮನಸಿ ಲಯಃ ಸಾಧ್ಯತೇ । ಪ್ರಾಕ್ ವಾಗಭಿಮಾನಿನೀ ವಾರುಣೀ ಸುಪರ್ಣೀ ಚ ಮನಸಿ= ಮನೋಭಿಮಾನಿನಿ ಶೇಷೇ ಸುಪರ್ಣೇ ಚ ಲೀಯತಃ ಇತಿ ಶೇಷಃ । ಅಸ್ಮಿನ್ನೇವಾರ್ಥೇ ಸಂಪತ್ಸ್ಯತೇ ಇತ್ಯನುವೃತ್ತಿರ್ವಾ । ಕುತಃ ? ದರ್ಶನಾತ್ । ವಾಚೋ ಮನೋವಶತ್ವಸ್ಯ

ಪ್ರತ್ಯಕ್ಷತ ಏವ ದರ್ಶನಾತ್ । ಮನಸಾ ಸಂಕಲ್ಪಿತಸ್ಯೈವ ವಾಚಾ ವ್ಯಾಹರಣಾತ್ । 'ತಸ್ಯ ಯಾವನ್ನ ವಾಙ್ಮನಸಿ ಸಂಪದ್ಯತೇ' ಇತಿ ಶಬ್ದಾಚ್ಚ ।)

ಈ ಅಧಿಕರಣದಲ್ಲಿ ವಾಗಭಿಮಾನಿಗೆ ಮನೋಭಿಮಾನಿಯಲ್ಲಿ ಲಯವನ್ನು ಹೇಳಲಾಗಿದೆ. ವಾಗಿಂದ್ರಿಯಾಭಿಮಾನಿನಿಯರು ಪಾರ್ವತೀದೇವಿ, ವಾರುಣೀ ಮತ್ತು ಸುಪರ್ಣೀ. ಈ ಮೂವರಲ್ಲಿ ಪಾರ್ವತಿಗೆ ಈ ಕಲ್ಪದಲ್ಲಿ ಮೋಕ್ಷವಿಲ್ಲ. ಮನೋಭಿಮಾನಿಗಳು ಈ ಮೂವರ ಪತಿಯರು—ರುದ್ರ, ಶೇಷ, ಗರುಡ. ಇವರಲ್ಲೂ ರುದ್ರದೇವರಿಗೆ ಈ ಕಲ್ಪದಲ್ಲಿ ಮೋಕ್ಷವಿಲ್ಲ. ಆದ್ದರಿಂದ ವಾಗಭಿಮಾನಿನಿ ವಾರುಣೀಯು ಶೇಷನಲ್ಲೂ, ಸುಪರ್ಣಿಯು ಗರುಡನಲ್ಲೂ ಲಯಹೊಂದುತ್ತಾರೆ. ಏಕೆಂದರೆ, ಮಾತು ಮನಸ್ಸಿನ ಅಧೀನವೆಂದು ನಮ್ಮ ಅನುಭವ. ಅದರಂತೆ ಶ್ರುತಿಯೂ ಹೇಳುತ್ತದೆ.

**॥ ಓಂ ಅತ ಏವ ಚ ಸರ್ವಾಣ್ಯನು ಓಂ ॥** (ಅತ ಇತಿ ಪ್ರಸ್ತುತ ಶಬ್ದಪರಾಮರ್ಶಃ । ಸರ್ವಾಣಿ ದೈವತಾನಿ ಅನು=ಸ್ವನಿಯಮ್ಯ ನಿಯಾಮಕಾನುಸಾರೇಣ ಲೀಯಂತೇ, ಇತ್ಯನುಷಂಗಃ । ಕುತಃ ? 'ಅಗ್ನೌ ಸರ್ವೇ ದೇವಾ ಲೀಯಂತೇ' ಇತ್ಯಾದಿ ಶಬ್ದಾದೇವ ।)

ಸರ್ವಾಣಿ=ಎಲ್ಲಾ ದೇವತೆಗಳೂ ಅನು=ತಮ್ಮ ನಿಯಾಮಕರಿಗೆ ಅನುಗುಣವಾಗಿ ಅವರವರಲ್ಲಿ ಲಯ ಹೊಂದುತ್ತಾರೆ. ಅತ ಏವ=ಶ್ರುತಿ ಇರುವುದರಿಂದಲೇ. ಸೂತ್ರದ ಚಶಬ್ದಕ್ಕೆ ಅಪಿ ಎಂಬ ಅರ್ಥವನ್ನು ಹೇಳಿದಂತೆ ಟೀಕೆಯಲ್ಲಿ ಕಾಣುತ್ತದೆ– ಎಂದಿದ್ದಾರೆ ರಾಯರು. ಆದ್ದರಿಂದ 'ಸರ್ವಾಣ್ಯಪಿ' ಎಂದರ್ಥ. ಆದರೆ, ತತ್ತ್ವಪ್ರದೀಪದಲ್ಲಿ ಚಶಬ್ದವು ಸಮುಚ್ಚಾಯಕ–ಇಂದ್ರಿಯಾಭಿಮಾನಿ ದೇವತೆಗಳೆಲ್ಲರೂ ಯೋಗ್ಯರಲ್ಲಿ ಲಯ ಹೊಂದುತ್ತಾರೆ, ಎಂದರ್ಥ.

## ಶಾಂಕರಭಾಷ್ಯದಲ್ಲಿ ವಾಗಧಿಕರಣ

**॥ ವಾಙ್ಮನಸಿ ದರ್ಶನಾಚ್ಛಬ್ದಾಚ್ಚ ॥** ಜ್ಞಾನಿ–ಅಜ್ಞಾನಿಗಳಿಬ್ಬರಿಗೂ ಉತ್ಕ್ರಾಂತಿಯು ಸಮಾನವಾದುದು. ಛಾಂದೋಗ್ಯದಲ್ಲಿ 'ಅಸ್ಯಸೋಮ್ಯ ಪುರುಷಸ್ಯ ಪ್ರಯತಃ ವಾಙ್ಮನಸಿ ಸಂಪದ್ಯತೇ । ಮನಃ ಪ್ರಾಣೇ, ಪ್ರಾಣಸ್ತೇಜಸಿ, ತೇಜಃ ಪರಸ್ಯಾಂ ದೇವತಾಯಾಮ್ ॥' (ಛಾಂ.6.8.6) ಸೂತ್ರ ಮತ್ತು ಶ್ರುತಿಗಳಲ್ಲಿ 'ವಾಕ್'ಪದದಿಂದ ವಾಗಿಂದ್ರಿಯವ್ಯಾಪಾರ ಎಂದರ್ಥ. ಜ್ಞಾನಿಗಳಿಗೆ ಮಾತ್ರ ವಾಗಿಂದ್ರಿಯಾದಿಗಳೇ ಮನಸ್ಸಿನಲ್ಲಿ ಲಯವಾಗುತ್ತವೆ, ಎಂದು ಮುಂದೆ ಹೇಳುವುದರಿಂದ ಇಲ್ಲಿ ವಾಕ್ಪದದಿಂದ ವಾಗಿಂದ್ರಿಯ ವ್ಯಾಪಾರವನ್ನಷ್ಟೇ ವಿವಕ್ಷೆ ಮಾಡಬೇಕು. ಸಾಯುವ ಸಮಯದಲ್ಲಿ ವಾಗಿಂದ್ರಿಯ

ವ್ಯಾಪಾರವು ಮನಸ್ಸಿನಲ್ಲಿ ಲೀನವಾಗುತ್ತದೆ. ಮನೋವ್ಯಾಪಾರವು ಇರುವಾಗಲೇ ವಾಗ್ ವ್ಯಾಪಾರವು ಲೀನವಾಗುತ್ತದೆ. ದರ್ಶನಾತ್=ಇದು ಎಲ್ಲರೂ ಕಂಡಿರುವ ವಿಷಯ. ಶಬ್ದಾಚ್ಚ=ಶ್ರುತಿಯೂ ಇದೆ. 'ವಾಙ್ಮನಸಿ ಸಂಪದ್ಯತೇ' ಎಂದು ಶ್ರುತಿ. ವೃತ್ತಿ–ವೃತ್ತಿಮತ್‌ಗಳಿಗೆ ಅಭೇದವಿವಕ್ಷೆಯಿಂದ ವಾಗ್‌ವ್ಯಾಪಾರ, ಎನ್ನುವ ಬದಲು ವಾಕ್ ಎಂದು ಶ್ರುತಿಯಲ್ಲಿ ಹೇಳಲಾಗಿದೆ.

**॥ ಅತ ಏವ ಚ ಸರ್ವಾಣ್ಯನು ॥** ಅತಏವ=ದರ್ಶನಾತ್, ಶಬ್ದಾಚ್ಚ=ಅನುಭವ ಮತ್ತು ಶ್ರುತಿಗಳಿಂದಾಗಿಯೇ ಸರ್ವಾಣಿ=ಎಲ್ಲಾ ಇಂದ್ರಿಯವ್ಯಾಪಾರಗಳೂ ಮನೋ ಅನು=ಮನಸ್ಸನ್ನು ಪ್ರವೇಶಮಾಡುತ್ತವೆ. ''ತಸ್ಮಾತ್ ಉಪಶಾಂತತೇಜಾಃ। ಪುನರ್ಭವಮ್ ಇಂದ್ರಿಯೈರ್ಮನಸಿ ಸಂಪದ್ಯಮಾನೈಃ॥ (ಪ್ರಶ್ನ.3.9) ಎಂಬ ಶ್ರುತಿಯೂ ಇದನ್ನು ಹೇಳುತ್ತದೆ. ಎಲ್ಲ ಇಂದ್ರಿಯಗಳು ಮನಸ್ಸಿನಲ್ಲಿ ಸೇರಿಕೊಳ್ಳುವ ವಾದರೂ 'ವಾಙ್ಮನಸಿ ಸಂಪದ್ಯತೇ' ಎಂಬ ಶ್ರುತಿ ಇರುವುದರಿಂದ ಅದನ್ನು ಹೆಸರೆತ್ತಿ ಸೂತ್ರದಲ್ಲಿ ಹೇಳಲಾಗಿದೆ.

**ವಿಮರ್ಶೆ**—ವಾಗ್‌ವೃತ್ತಿಯು ವಾಗಿಂದ್ರಿಯವಿಕಾರವಾದುದರಿಂದ ಘಟಕ್ಕೆ ಮೃತ್ತಿನಲ್ಲಿ ಲಯವಾಗುವಂತೆ ವಾಗ್‌ವೃತ್ತಿಗೆ ವಾಗಿಂದ್ರಿಯದಲ್ಲೇ ಲಯವು ಉಚಿತ, ಮನಸ್ಸಿನಲ್ಲಿ ಲಯವು ಉಚಿತವಲ್ಲ. 'ತಸ್ಮಾತ್ ಮನ ಏವ ಪೂರ್ವರೂಪಮ್' 'ಮನಸ್ಯೈವಾಗ್ರೇ ಸಂಕಲ್ಪಯತಿ ಅಥ ವಾಚಾ ವ್ಯವಹರತಿ' ಎಂದಿರುವುದರಿಂದ ವಾಗಿಂದ್ರಿಯವು ಮನೋವಿಕಾರವೆಂದೂ ಹೇಳಬಹುದು. ಆದ್ದರಿಂದ ವಾಕ್‌ಗೆ ಮನಸ್ಸಿನಲ್ಲಿ ಲಯವೆಂದು ಮುಖ್ಯಾರ್ಥವನ್ನೇ ಮಾಡಬಹುದು.

ರಾಮಾನುಜಭಾಷ್ಯದಲ್ಲಿ ಶ್ರುತಿಯಲ್ಲಿರುವ ವಾಕ್‌ಶಬ್ದಕ್ಕೆ ವಾಗಿಂದ್ರಿಯ ಎಂದು ಮುಖ್ಯಾರ್ಥವನ್ನೇ ಹೇಳಿ ವಾಗಾದಿಇಂದ್ರಿಯಗಳಿಗೆ ಮನಸ್ಸಿನಲ್ಲಿ ಲಯ ಎಂದು ಅಧಿ ಕರಣಾರ್ಥವನ್ನು ಹೇಳಿ ಮನಸ್ಸು ಇಂದ್ರಿಯಗಳಿಗೆ ಪ್ರಕೃತಿ ಅಲ್ಲವಾದ ಕಾರಣ ಇಲ್ಲಿ ಲಯಶಬ್ದಕ್ಕೆ ಸಂಯೋಗ, ಎಂದಿಷ್ಟೇ ಅರ್ಥ ಎಂದು ಹೇಳಲಾಗಿದೆ. ಈ ಅರ್ಥವನ್ನು ಹೇಳಿದರೂ ಸೂತ್ರದ 'ದರ್ಶನಾತ್' ಎಂಬ ಪದ ಸ್ವಾರಸ್ಯವಿಲ್ಲ. ವಾಗಿಂದ್ರಿಯದ ಉಪರಮ ಮಾತ್ರ ನಮಗೆ ಕಣ್ಣಿಗೆ ಕಾಣುತ್ತದೆ. ಆದರೂ ಅದಕ್ಕೆ ಮನೋಯೋಗ ಅಪ್ರತ್ಯಕ್ಷ. ದ್ವೈತದರ್ಶನದಲ್ಲಿ ವಾಗಿಂದ್ರಿಯವು ಮನಇಂದ್ರಿಯದ ಅಧೀನ ಎಂಬುದು ಪ್ರತ್ಯಕ್ಷ. ಅದರಿಂದ ಅದರ ಅಭಿಮಾನಿದೇವತೆಗಳಿಗೆ ನಿಯಮ್ಯನಿಯಾಮಕಭಾವ ಸಿದ್ಧವಾಗುತ್ತದೆ. ಅದರಿಂದಾಗಿ ಲಯವೂ ಉಪಪನ್ನವಾಗುತ್ತದೆ.

**ಇಲ್ಲಿಗೆ ವಾಙ್ಮನಸಾಧಿಕರಣವು ಮುಗಿಯಿತು.**

## ೨. ಮನೋಽಧಿಕರಣಮ್

### ॥ ಓಂ ತನ್ಮನಃ ಪ್ರಾಣ ಉತ್ತರಾತ್ ಓಂ ॥ ೩ ॥

**'ಮನಃ ಪ್ರಾಣೇ' (ಛಾಂ.ಉ.6.15.1) ಇತ್ಯುತ್ತರಾದ್ ವಚನಾನ್ಮನೋಽಭಿಮಾನೀ ರುದ್ರಃ ಪ್ರಾಣೇ ವಾಯೌ ವಿಲೀಯತೇ ।**

**'ವಾಯೋರ್ವಾವ ರುದ್ರ ಉದೇತಿ ವಾಯೌ ವಿಲೀಯತೇ ತಸ್ಮಾದಾಹುರ್ವಾಯುರ್ದೇವಾನಾಂ ಶ್ರೇಷ್ಠಃ'**

**ಇತಿ ಚ ಕೌಂಡಿನ್ಯಶ್ರುತಿಃ ॥**

'(ವಾಙ್ಮನಸಿ ಸಂಪದ್ಯತೇ)ಮನಃ ಪ್ರಾಣೇ' ಎಂಬ ಈ ಉತ್ತರವಾಕ್ಯದಿಂದ ಮನಃಶಬ್ದಿತ ಮನೋಭಿಮಾನಿ ರುದ್ರನು ಪ್ರಾಣೇ=ವಾಯುವಿನಲ್ಲಿ ಲಯವಾಗುತ್ತಾನೆ. ಕೌಂಡಿನ್ಯಶ್ರುತಿಯಲ್ಲಿ ಹೀಗಿದೆ— ವಾಯುದೇವನಿಂದ ರುದ್ರನು ಉದಿಸುತ್ತಾನೆ. ಅವನು ಲಯಕಾಲದಲ್ಲಿ ಮತ್ತೆ ವಾಯುವಿನಲ್ಲೇ ಲಯಹೊಂದುತ್ತಾನೆ. ಆದ್ದರಿಂದಲೇ ವಾಯುವೇ ದೇವತೆಗಳಲ್ಲೆಲ್ಲ ಶ್ರೇಷ್ಠನೆಂದು ಹೇಳುತ್ತಾರೆ.

**ವಿವರಣೆ**—ಇಲ್ಲಿ ಮನಃಪದಕ್ಕೆ ಶೇಷ ಮತ್ತು ಗರುಡ ಎಂದರ್ಥ. ಪ್ರಾಣ ಶಬ್ದಕ್ಕೆ ಚತುರ್ಮುಖಬ್ರಹ್ಮನೆಂದು ಅರ್ಥ. ಗರುಡಶೇಷರು ಸರಸ್ವತೀದ್ವಾರಾ ಚತುರ್ಮುಖನಲ್ಲಿ ಪ್ರವೇಶ ಮಾಡುತ್ತಾರೆ, ಎಂದರ್ಥ. ರುದ್ರ ಮತ್ತು ವಾಯುದೇವರಿಗೆ ಆ ಕಲ್ಪದಲ್ಲಿ ಮುಕ್ತಿ ಇರುವುದಿಲ್ಲವಾದ ಕಾರಣ ಹೀಗೆ ಅರ್ಥವಾಡಬೇಕಾಗುತ್ತದೆ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ತನ್ಮನಃ ಪ್ರಾಣ ಉತ್ತರಾತ್ ಓಂ ॥** (ಅತ್ರ ಮನಸಃ ಪ್ರಾಣೇ ಲಯಃ ಸಾಧ್ಯತೇ । ತತ್='ತತ್ ಪ್ರಾಕ್ ಶ್ರುತೇಃ' ಇತಿ ಈಶಾದುತ್ಪನ್ನತ್ವೇನೋಕ್ತಂ, ಪೂರ್ವಯೋಗೇ ವಾಙ್‌ನಿಯಾಮಕತ್ವೇನ ಪ್ರಸ್ತುತಂ ವಾ ಮನಃ=ಮನೋಭಿಮಾನೀ ಶೇಷಃ ಸುಪರ್ಣಶ್ಚ ಪ್ರಾಣೇ=ವಾಣೀದ್ವಾರಾ ಚತುರ್ಮುಖೇ ಲೀಯತೇ, ಇತ್ಯನುಷಂಗಃ । ಕುತಃ? ಉತ್ತರಾತ್ । ಶಬ್ದಾದಿತ್ಯಸ್ತಿ । ಪೂರ್ವೋಕ್ತ 'ವಾಙ್‌ಮನಸಿ...' ಇತಿ ಶಬ್ದಾತ್ 'ಮನಃ ಪ್ರಾಣೇ'' ಇತಿ ಉತ್ತರಾಚ್ಛಬ್ದಾದಿತ್ಯರ್ಥಃ ।)

ತತ್=ಪೂರ್ವಪ್ರಸ್ತುತವಾದ ಮನಸ್ಸು ಪ್ರಾಣೇ=ಪ್ರಾಣನಲ್ಲಿ ಲಯಹೊಂದುತ್ತದೆ.

ಮನೋಭಿಮಾನಿಗಳಾದ ಶೇಷ–ಗರುಡರು ಸರಸ್ವತಿಯಲ್ಲಿ ಲಯಹೊಂದಿ ಬ್ರಹ್ಮದೇವರಲ್ಲಿ ಲಯವಾಗುತ್ತಾರೆ. ಉತ್ತರಾತ್='ವಾಕ್ ಮನಸಿ' ಎಂಬ ಶ್ರುತಿಯ ಮುಂದಿರುವ ''ಮನಃ ಪ್ರಾಣೇ'' ಎಂಬ ಶ್ರುತಿ ಇರುವುದರಿಂದ.

## ಶಾಂಕರಭಾಷ್ಯದಲ್ಲಿ ಮನೋಧಿಕರಣ

ಅನ್ನಮಯಂ ಹಿ ಸೋಮ್ಯ ಮನಃ ಆಪೋಮಯಃ ಪ್ರಾಣಃ॥ (ಛಾಂ.6.5.4) ಎಂದು ಶ್ರುತಿ ಇರುವುದರಿಂದ ಮನಸ್ಸು ಪೃಥಿವಿಯ ವಿಕಾರ, ಪ್ರಾಣ ನೀರಿನ ವಿಕಾರ. ನೀರಿನಿಂದ ಪೃಥಿವೀ ಹುಟ್ಟುತ್ತದೆ. ನೀರಿಗೂ ಪೃಥಿವಿಗೂ ಪ್ರಕೃತಿ–ವಿಕೃತಿಭಾವ ಇದೆ. ಆದ್ದರಿಂದ ಪ್ರಾಣನಿಗೂ ಮನಸ್ಸಿಗೂ ಪ್ರಕೃತಿ–ವಿಕೃತಿಭಾವ ಇದೆ. ಹೀಗಾಗಿ ''ಮನಃ ಪ್ರಾಣೇ'' ಎಂಬ ಉತ್ತರ ವಾಕ್ಯದಲ್ಲಿ ಮನಸ್ಸು ಪ್ರಾಣನಲ್ಲಿ ಲಯವಾಗುತ್ತದೆ, ಎಂದು ಮುಖ್ಯಾರ್ಥವನ್ನೇ ಮಾಡಬಹುದು ಎನಿಸುತ್ತದೆ. ಆದರೂ ''ತನ್ಮನಃ ಪ್ರಾಣೇ ಉತ್ತರಾತ್'' ಉತ್ತರವಾಕ್ಯೋಕ್ತ ಲಯವೂ ಮನೋವೃತ್ತಿಗೆ ಪ್ರಾಣನಲ್ಲಿ ಲಯ, ಮನಸ್ಸಿಗಲ್ಲ. ನಿದ್ರಾವಸ್ಥೆಯಲ್ಲಿ ಪ್ರಾಣವಾಯುಸಂಚಾರವಿದ್ದರೂ ಮನೋವೃತ್ತಿ ಇಲ್ಲವೆಂದು ಪ್ರತ್ಯಕ್ಷಸಿದ್ಧವಾಗಿದೆ. ಆದ್ದರಿಂದ ಮರಣಕಾಲದಲ್ಲಿಯೂ ಮನೋವೃತ್ತಿಯು ಪ್ರಾಣನಲ್ಲಿ ಲಯವಾಗುತ್ತದೆ. (ಕೊನೆಯಲ್ಲಿ ಉಸಿರಾಟ ಮಾತ್ರವೇ ಇರುತ್ತದೆ.)

ನೀರು ಮತ್ತು ಪೃಥಿವೀಗಳಿಗೆ ಪ್ರಕೃತಿ ವಿಕೃತಿಭಾವ ಇದ್ದರೂ ನೀರಿನ ವಿಕಾರವಾದ ಪ್ರಾಣನಿಗೂ ಪೃಥಿವೀವಿಕಾರವಾದ ಮನಸ್ಸಿಗೂ ಪ್ರಕೃತಿ ವಿಕೃತಿಭಾವ ಇಲ್ಲ. ಆದ್ದರಿಂದ ಇಲ್ಲೂ ಮನಃಶಬ್ದಕ್ಕೆ ಮನೋವೃತ್ತಿ ಎಂದು ಗೌಣಾರ್ಥವನ್ನೇ ಮಾಡಬೇಕು.

**ರಾಮಾನುಜಭಾಷ್ಯ**ದಲ್ಲಿ ಮನಸ್ಸು ಪ್ರಾಣನಲ್ಲಿ ಲಯವಾಗುವುದೆಂದರೆ ಪ್ರಾಣದ ಜೊತೆಗೆ ಸೇರುತ್ತದೆ, ಎಂದಿಷ್ಟೇ ಅರ್ಥ. ಪ್ರಕೃತಿ–ವಿಕೃತಿಭಾವವು ಇಲ್ಲದಿದ್ದರೂ ದಂಡ–ಪುರುಷರಂತೆ ಒಂದು ಇನ್ನೊಂದರ ಜೊತೆಗೆ ಸೇರಬಹುದು, ಎಂದು ಅರ್ಥವನ್ನು ಹೇಳಲಾಗಿದೆ.

**ವಿಮರ್ಶೆ**—ಇಲ್ಲಿ ಲಯಚಿಂತನೆಯನ್ನು ಹೇಳಲಾಗಿದೆ. ಅಂತಹ ಸಂದರ್ಭದಲ್ಲಿ ಒಂದು ಇನ್ನೊಂದರ ಸಂಯೋಗ ಹೊಂದುತ್ತದೆ ಎಂದು ಹೇಳುವುದು ಉಚಿತವಲ್ಲ. ಮನಸ್ಸು ಅನೇಕ ವಸ್ತುಗಳೊಂದಿಗೆ ಸಂಯೋಗ ಹೊಂದುತ್ತಲೇ ಇರುತ್ತದೆ. ಮರಣಕಾಲದ ವಿಶೇಷವೆಂದರೆ ಮನಸ್ಸು ಪ್ರಾಣನಲ್ಲಿ ಸೇರಿಹೋಗುತ್ತದೆ. ಆದ್ದರಿಂದ 'ಮನಃ ಪ್ರಾಣೇ' ಎಂದು ಸಪ್ತಮೀವಿಭಕ್ತಿಯನ್ನು ಶ್ರುತಿಯಲ್ಲಿ ಪ್ರಯೋಗಿಸಲಾಗಿದೆ. ಸಂಯೋಗವು ಅಭಿಪ್ರೇತವಾಗಿದ್ದಲ್ಲಿ ''ಮನಃ ಪ್ರಾಣೇನ'' ಎಂದಿರಬೇಕು.

''ಅನ್ನಮಯಂ ಸೋಮ್ಯಮನಃ'' ಎಂದರೆ ಪೃಥಿವೀವಿಕಾರವೆಂದು ಅರ್ಥವಲ್ಲ. ಮನಸ್ಸು ಅಹಂಕಾರತತ್ತ್ವದ ವಿಕಾರ. ಅದಕ್ಕೆ ಪೃಥಿವಿಯಿಂದ ಉಪಚಯ ಮಾತ್ರ.

ಇಲ್ಲಿಗೆ ಮನೋಽಧಿಕರಣವು ಮುಗಿಯಿತು.

## ೩. ಅಧ್ಯಕ್ಷಾಧಿಕರಣಮ್

### ॥ ಓಂ ಸೋಽಧ್ಯಕ್ಷೇ ತದುಪಗಮಾದಿಭ್ಯಃ ಓಂ ॥ ೪ ॥

ಸ ಪ್ರಾಣಃ ಪರಮಾತ್ಮನಿ ವಿಲೀಯತೇ ।

'ಸರ್ವೇ ಪ್ರಾಣಮುಪಗಚ್ಛಂತಿ ಪ್ರಾಣಃ ಪರಮುಪಗಚ್ಛತಿ ಪ್ರಾಣಂ ದೇವಾ ಅನು ಪ್ರಾಣಂತಿ । ಪ್ರಾಣಃ ಪರಮನುಪ್ರಾಣಿತಿ । ತಸ್ಮಾದಾಹುಃ ಪ್ರಾಣಸ್ಯ ಪ್ರಾಣ ಇತಿ', 'ಪ್ರಾಣಃ ಪರಸ್ಯಾಂ ದೇವತಾಯಾಮ್'

'ಮುಕ್ತಾಃ ಸಂತೋಽಗ್ನಿಮಾವಿಶ್ಯ ದೇವಾಃ ಸರ್ವೇಽಪಿ ಭುಂಜತೇ ।
ಅಗ್ನಿರಿಂದ್ರಂ ತಥೇಂದ್ರಶ್ಚ ವಾಯುಮಾವಿಶ್ಯ ಸೋಽಪಿ ತು ।
ಆವಿಶ್ಯ ಪರಮಾತ್ಮಾನಂ ಭುಂಕ್ತೇ ಭೋಗಾಂಸ್ತು ಬಾಹ್ಯಕಾನ್ ॥
'ನಹ್ಯಾನಂದೋ ನಿಜಸ್ತೇಷಾಂ ಪರೈರ್ಲಭ್ಯಃ ಕಥಂಚನ ।
ಕಿಮು ವಿಷ್ಣೋಃ ಪರಾನಂದೋ ನ ತೇ ವಿಷ್ಣಾವಿತಿ ಶ್ರುತೇಃ ॥'
'ಪ್ರಾಣಸ್ಯ ತೇಜಸಿ ಲಯೋ ಮಾರ್ಗಮಾತ್ರಮುದಾಹೃತಮ್ ।
ಸರ್ವೇಶಿತುಶ್ಚ ಸರ್ವಾದೇಸ್ತಸ್ಯಾನ್ಯತ್ರ ಲಯಃ ಕಥಮ್ ॥'

ಇತ್ಯಾದಿಶ್ರುತಿಸ್ಮೃತಿಭ್ಯಃ ।

ಆ ಪ್ರಾಣನು ಅಂದರೆ ಚತುರ್ಮುಖನು ಪರಮಾತ್ಮನಲ್ಲಿ ಲಯಹೊಂದುತ್ತಾನೆ. ಶ್ರುತಿಯಲ್ಲಿ ಹಾಗಿದೆ—''ಎಲ್ಲಾ ದೇವತೆಗಳೂ ಪ್ರಾಣನನ್ನು (ಚತುರ್ಮುಖನನ್ನು) ಪ್ರವೇಶಿಸುತ್ತಾರೆ. ಚತುರ್ಮುಖ ಪರಮಾತ್ಮನನ್ನು ಪ್ರವೇಶಿಸುತ್ತಾನೆ.'' ''ಚತುರ್ಮುಖನಿಂದಾಗಿ ಇತರೆಲ್ಲಾ ದೇವತೆಗಳಿದ್ದಾರೆ. ಆ ಚತುರ್ಮುಖನು ಪರಮಾತ್ಮನನ್ನು ಅವಲಂಬಿಸಿದ್ದಾನೆ. ಆದ್ದರಿಂದ ಪರಮಾತ್ಮನು ''ಪ್ರಾಣನಿಗೂ ಪ್ರಾಣ ಎನಿಸುತ್ತಾನೆ.'' ''ಪ್ರಾಣನು ಪರದೇವತೆಯಲ್ಲಿ ಪ್ರವೇಶಿಸುತ್ತಾನೆ'' ಈ ಎಲ್ಲ ಶ್ರುತಿಗಳಿಂದ ಚತುರ್ಮುಖನ ಲಯವು ಸಿದ್ಧವಾಗುತ್ತದೆ.

ಸ್ಮೃತಿಯೂ ಇದೆ—ದೇವತೆಗಳು ಮುಕ್ತರಾಗಿ ಅಗ್ನಿಯನ್ನು ಪ್ರವೇಶಿಸಿ ಸುಖವನ್ನು ಭೋಗಿಸುತ್ತಾರೆ. ಅಗ್ನಿ ಇಂದ್ರನನ್ನು, ಇಂದ್ರ ಚತುರ್ಮುಖನನ್ನು ಚತುರ್ಮುಖನೂ ಪರಮಾತ್ಮನನ್ನು ಪ್ರವೇಶಿಸಿ ಬಾಹ್ಯವಿಷಯಗಳನ್ನು ಭೋಗಿಸುತ್ತಾನೆ. ಅವರು ಅನುಭವಿಸುವ ಆನಂದ ಮಾತ್ರ ಅವರವರ ಸ್ವರೂಪಭೂತವಾದುದು. ಒಬ್ಬರ ಆನಂದದ ಅನುಭವ ಮತ್ತೊಬ್ಬರಿಗೆ ಬರುವುದಿಲ್ಲ. ಹೀಗಿದ್ದಮೇಲೆ ವಿಷ್ಣುವಿನ ಆನಂದವನ್ನು ಇನ್ನೊಬ್ಬರು ಅನುಭವಿಸುವುದಿಲ್ಲ, ಎಂದು ಹೇಳಬೇಕಾದ್ದೇನಿದೆ. ಶ್ರುತಿಯೂ 'ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂತಮಾಪ–ವಿಷ್ಣುವೇ, ಹುಟ್ಟಿದವನಾಗಲೀ, ಮುಂದೆ ಹುಟ್ಟುವವನಾಗಲೀ ನಿನ್ನ ಮಹತಿಯನ್ನು ಯಾರೂ ಅನುಭವಿಸಲಾರರು'' ಎನ್ನುತ್ತದೆ. ಚತುರ್ಮುಖನಿಗೆ ತೇಜಃ ಶಬ್ದವಾಚ್ಯಳಾದ ರಮಾದೇವಿಯಲ್ಲಿ ಲಯವನ್ನು 'ಪ್ರಾಣಸ್ತೇಜಸಿ' ಎಂಬ ಶ್ರುತಿಯು ಹೇಳುತ್ತದೆ. ಆದರೆ ರಮೆಯ ಪ್ರಾಪ್ತಿ ಮಾತ್ರ ಹೊರತು ಪ್ರವೇಶವಿಲ್ಲ. ಚತುರ್ಮುಖ ಸಾಕ್ಷಾತ್ತಾಗಿ ವಿಷ್ಣುವಿನಲ್ಲೇ ಲಯಕ್ಕೆ ಯೋಗ್ಯನಾಗಿದ್ದಾನೆ.

**ವಿವರಣೆ**—ದ್ವಾರಮಾತ್ರಾ ತು ಸಾ ದೇವೀ ವಾಯುಪ್ರಾಪ್ಯೋ ಜನಾರ್ದನಃ ॥ ಎಂದು ಸತ್ತತ್ವಗ್ರಂಥದಲ್ಲಿ ಇದೆ. ಆದ್ದರಿಂದ ರಮೆಯು ಬ್ರಹ್ಮಪ್ರಾಪ್ತಿಗೆ ದ್ವಾರ ಮಾತ್ರ. ವಾಯುದೇವರು ಮುಂದಿನ ಕಲ್ಪದಲ್ಲಿ ರಮೆಯಿಂದಲೇ ಜನಿಸುತ್ತಾರೆ. ಆದ್ದರಿಂದ ಅವರಿಗೆ ರಮೆಯಲ್ಲಿ ದೇಹ ಲಯವಿದೆ.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಓಂ ಸೋಽಧ್ಯಕ್ಷೇ ತದುಪಗಮಾದಿಭ್ಯಃ ಓಂ ॥** (ಅತ್ರ ಚತುರ್ಮುಖಸ್ಯ ಈಶೇ ಲಯಃ ಉಚ್ಯತೇ । ಸಃ=ಪ್ರಾಣಃ ಅಧ್ಯಕ್ಷೇ=ಪರಮಾತ್ಮನಿ ಲೀಯತೇ । ಕುತಃ ? ತದುಪಗಮಾದಿಭ್ಯಃ, ತದುಪಗಮೋ=ಅಧ್ಯಕ್ಷಪ್ರಾಪ್ತಿಃ । ಆದಿಪದಾತ್ ಅಧ್ಯಕ್ಷಾನುಪ್ರಾಣನ ತತ್ ಪ್ರವೇಶಾದಿ, ತೇನ ಚ ತದ್‌ಬೋಧಕಶ್ರುತ್ಯಾದಿ ಗೃಹ್ಯತೇ । ''ಪ್ರಾಣಃ ಪರಮ್ ಉಪಗಚ್ಛತಿ, ಪ್ರಾಣಃ ಪರಂ ಅನುಪ್ರಾಣಿತಿ'' ''ಪ್ರಾಣಃ ಪರಸ್ಯಾಂ ದೇವತಾಯಾಮ್'' ಇತ್ಯಾದಿ ತದುಪಗಮಾದಿ ಶ್ರುತಿಸ್ಮೃತಿಭ್ಯಃ ಇತ್ಯರ್ಥಃ । ಪ್ರಾಣಸ್ಯ ತದಧೀನತ್ವಾತ್ ತಸ್ಯ ಈಶೇ ಲಯಃ ಯುಕ್ತ ಇತಿ ಭಾವಃ ।)

ಈ ಅಧಿಕರಣದಲ್ಲಿ ಬ್ರಹ್ಮದೇವರಿಗೆ ಪರಮಾತ್ಮನಲ್ಲಿ ಲಯವನ್ನು ಹೇಳಲಾಗಿದೆ. ಸಃ=ಪ್ರಾಣಶಬ್ದವಾಚ್ಯನಾದ ಚತುರ್ಮುಖನು ಅಧ್ಯಕ್ಷೇ=ಪರಮಾತ್ಮನಲ್ಲಿ ಲಯವಾಗುತ್ತಾನೆ. ತದುಪಗಮಾದಿಭ್ಯಃ=ಪರಮಾತ್ಮನ ಪ್ರಾಪ್ತಿ ಮೊದಲಾದವುಗಳಿಂದಾಗಿ ಇದು

ತಿಳಿಯುತ್ತದೆ. ಆದಿಪದದಿಂದ ಪರಮಾತ್ಮನಿಂದ ಕ್ರಿಯಾಶೀಲನಾಗಿರುವುದು, ಪರಮಾತ್ಮನನ್ನು ಪ್ರವೇಶಿಸುವುದು ಗೃಹೀತವಾಗುತ್ತವೆ. ಅರ್ಥಾತ್ ಇವುಗಳನ್ನು ಹೇಳುವ ಶ್ರುತಿ–ಸ್ಮೃತಿಗಳು ವಿವಕ್ಷಿತವಾಗಿವೆ. ಅಂತಹ ಶ್ರುತಿ–ಸ್ಮೃತಿಗಳು ಇರುವುದರಿಂದ ಪ್ರಾಣನು ಪರಮಾತ್ಮನಲ್ಲಿ ಪ್ರವೇಶಿಸುತ್ತಾನೆ, ಎಂದರ್ಥ.

ಪರಮಾತ್ಮನು ಸ್ವಾಮಿ, ಚತುರ್ಮುಖನು ಅವನ ಅಧೀನ. ಆದ್ದರಿಂದ ಅವನಲ್ಲಿ ಚತುರ್ಮುಖನ ಲಯ ಯುಕ್ತ ಎಂದು ಸೂಚಿಸುವುದಕ್ಕಾಗಿ ಪರಮಾತ್ಮನನ್ನು 'ಅಧ್ಯಕ್ಷ'ನೆಂದು ಹೇಳಲಾಗಿದೆ. ''ಅಧ್ಯಕ್ಷೋಽಧಿಪತಿಃ ಶ್ರೇಷ್ಠಃ ಯದಕ್ಷಾಣ್ಯಸ್ಯ ಚೋಪರಿ'' ಯಾರ ಮೇಲೆ ಎಲ್ಲರ ದೃಷ್ಟಿಯೂ ಇರುವುದೋ ಅವನು ಅಧ್ಯಕ್ಷ. ಶ್ರೇಷ್ಠ ಎಂದರ್ಥ.

**ಇಲ್ಲಿಗೆ ಅಧ್ಯಕ್ಷಾಧಿಕರಣವು ಮುಗಿಯಿತು.**

## ೪. ಭೂತಾಧಿಕರಣಮ್

### ಓಂ ಭೂತೇಷು ತಚ್ಛ್ರುತೇಃ ಓಂ ॥ ೫ ॥

**ಭೂತೇಷ್ವನ್ಯೇಷಾಂ ದೇವಾನಾಂ ಲಯಃ ।**

**'ಭೂತೇಷು ದೇವಾ ವಿಲೀಯಂತೇ ಭೂತಾನಿ ಪರೇ ನ ಪರ ಉದೇತಿ ನಾಸ್ತಮೇತ್ಯೇಕಲ ಏವ ಮಧ್ಯೇ ಸ್ಥಾತಾ' ಇತಿ ಬೃಹಚ್ಛ್ರುತೇಃ ॥**

'ಅಗ್ನೌ ಸರ್ವೇ ದೇವಾ ವಿಲೀಯಂತೇ' ಎಂದಿದ್ದರೂ ಅಗ್ನಿಯಲ್ಲಿ ಪ್ರವೇಶಿಸುವ ದೇವತೆಗಳು ಕೆಲವರು ಮಾತ್ರ. ಇತರ ದೇವತೆಗಳಿಗೆ ಪಂಚಭೂತಾಭಿಮಾನಿದೇವತೆಗಳಲ್ಲಿ ಲಯ. ಹಾಗೆ ಶ್ರುತಿ ಇದೆ—ಭೂತಾಭಿಮಾನಿಗಳಲ್ಲಿ ದೇವತೆಗಳು ಪ್ರವೇಶಿಸುತ್ತಾರೆ. ಆ ಭೂತಾಭಿಮಾನಿಗಳು ಪರಮಾತ್ಮನಲ್ಲಿ ಲೀನರಾಗುತ್ತಾರೆ. ಪರಮಾತ್ಮನಿಗೆ 'ಉದಯ' 'ಅಸ್ತಮಾನ' ಎರಡೂ ಇಲ್ಲ. ಏಕಾಕಿಯಾಗಿ ಹುಟ್ಟು–ಸಾವುಗಳ ಮಧ್ಯದಲ್ಲಿರುತ್ತಾನೆ.

**ವಿವರಣೆ**—ಶ್ರುತಿಯಲ್ಲಿ 'ಭೂತಾನಿ ಪರಂ–ಭೂತಾಭಿಮಾನಿಗಳು ಪರಮಾತ್ಮನಲ್ಲಿ ಪ್ರವೇಶಿಸುತ್ತಾರೆ' ಎಂದಿದ್ದರೂ ಅವರಿಗೆ ನೇರವಾಗಿ ಪರಮಾತ್ಮನಲ್ಲಿ ಪ್ರವೇಶವಲ್ಲ. ಆಕಾಶ ಮತ್ತು ಭೂಮಿಯ ಅಭಿಮಾನಿಗಳು ಬೃಹಸ್ಪತಿಯ ಮೂಲಕ, ಭೂತವಾಯು ಪ್ರವಹ ಇಂದ್ರನ ಮೂಲಕ, ಜಲಾಭಿಮಾನಿ ವರುಣ ಚಂದ್ರನ ಮೂಲಕ ಪರಮಾತ್ಮನನ್ನು ಪ್ರವೇಶಿಸುತ್ತಾರೆ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ಭೂತೇಷು ತಚ್ಛ್ರುತೇಃ ಓಂ ॥**(ಅತ್ರ ಪ್ರಾಕ್ ವಿಶಿಷ್ಯೋಕ್ತಾನ್ಯದೇವಾನಾಂ ಭೂತೇಷು ಲಯಃ ಉಚ್ಯತೇ। ಪ್ರಾಗುಕ್ತೇಭ್ಯೋ ಅನ್ಯೇ ದೇವಾಃ ಪಂಚಸು ಭೂತೇಷು=ಭೂತಾಭಿಮಾನಿಷು ಲೀಯಂತೇ। ನತು ಏಕಸ್ಮಿನ್ನಗ್ನೌ, ಇತಿ ಬಹುವಚನಾರ್ಥಃ। ಕುತಃ ? ತಚ್ಛ್ರುತೇಃ–ತಸ್ಯ=ಭೂತೇಷು ದೇವಾನಾಂ ಲಯಸ್ಯ 'ಭೂತೇಷು ದೇವಾ ಲೀಯಂತೇ' ಇತಿ ಶ್ರವಣಾತ್ ಇತ್ಯರ್ಥಃ।)

ಹಿಂದೆ ಹೆಸರೆತ್ತಿ ಹೇಳಲಾದ ದೇವತೆಗಳಿಗಿಂತ ಇತರ ದೇವತೆಗಳು ಭೂತಾಭಿಮಾನಿಗಳಲ್ಲಿ ಲಯವಾಗುತ್ತಾರೆ, ಎಂದು ಇಲ್ಲಿ ಹೇಳಲಾಗಿದೆ. ಆ ದೇವತೆಗಳು ಭೂತೇಷು=ಪಂಚಭೂತಾಭಿಮಾನಿಗಳಲ್ಲಿ ಲಯ ಹೊಂದುತ್ತಾರೆ. ತಚ್ಛ್ರುತೇಃ—ತಸ್ಯ= ಭೂತಗಳಲ್ಲಿ ದೇವತೆಗಳ ಲಯವು ''ಭೂತೇಷು ದೇವಾ ಲೀಯಂತೇ' ಎಂಬ ಶ್ರುತಿಯಲ್ಲಿ ಹೇಳಿರುವುದರಿಂದಾಗಿ.

ಇಲ್ಲಿಗೆ ಭೂತಾಧಿಕರಣವು ಮುಗಿಯಿತು.

## ೫. ಅನೇಕಲಯಾಧಿಕರಣಮ್ (ನೈಕಸ್ಮಿನ್ನಧಿಕರಣಮ್)

### ॥ ಓಂ ನೈಕಸ್ಮಿನ್ ದರ್ಶಯತೋ ಹಿ ಓಂ ॥ ೬ ॥

**ನೈಕಸ್ಮಿನ್ ಭೂತೇ ಸರ್ವೇಷಾಂ ದೇವಾನಾಂ ಲಯಃ ।**

**'ಪೃಥಿವ್ಯಾಮೃಭವೋ ವಿಲೀಯಂತೇ, ವರುಣೇಽಶ್ವಿನಾವಗ್ನಾವಗ್ನಯೋ, ವಾಯಾವಿಂದ್ರಃ ಸೋಮ ಆದಿತ್ಯೋ ಬೃಹಸ್ಪತಿರಿತ್ಯಾಕಾಶ ಏವ ಸಾಧ್ಯಾ ವಿಲೀಯಂತೇ', 'ಮೃತ್ಯವಃ ಪೃಥಿವ್ಯಾಂ, ವರುಣ ಆಪೋಽಗ್ನಯಸ್ತೇಜಸಿ ಮರುತೋ ಮಾರುತ, ಆಕಾಶೇ ವಿನಾಯಕಾ ವಿಲೀಯಂತೇ' ಇತಿ ಮಹೋಪನಿಷಚ್ಚತುರ್ವೇದಶಿಖಾ ಚ ದರ್ಶಯತಃ ।**

**ಅತಃ 'ಅಗ್ನೌ ದೇವಾ ವಿಲೀಯಂತೇ' ಇತಿ ತತ್ರ, ನಿರ್ದಿಷ್ಟಾನಾಮೇವ ॥**

ಒಂದೇ ಭೂತಾಭಿಮಾನಿ ಧರಾದೇವಿಯಲ್ಲಿ ಎಲ್ಲಾ ದೇವತೆಗಳಿಗೆ ಲಯವಲ್ಲ. ಮಹೋಪನಿಷತ್ತು ಹಾಗೂ ಚತುರ್ವೇದ ಶಿಖೆಗಳು ಹೀಗೆ ತಿಳಿಸುತ್ತವೆ—ಪೃಥಿವೀ

ಅಭಿಮಾನಿನಿ ಧರಾದೇವಿಯಲ್ಲಿ 'ಋಭು' ನಾಮಕದೇವತೆಗಳಿಗೆ ಲಯ. ಜಲಾಭಿಮಾನಿ ವರುಣನಲ್ಲಿ ಅಶ್ವಿನೀದೇವತೆಗಳು ಲಯಹೊಂದುತ್ತಾರೆ. ಅಗ್ನಿಪುತ್ರರು ಅಗ್ನಿಯಲ್ಲಿ, ಪ್ರಧಾನವಾಯುವಿನಲ್ಲಿ ಇಂದ್ರ ಚಂದ್ರ, ಸೂರ್ಯ, ಬೃಹಸ್ಪತಿಗಳಿಗೆ. ಸಾಧ್ಯರು ಆಕಾಶಾಭಿಮಾನಿ ಗಣಪತಿಯಲ್ಲಿ ಲಯಹೊಂದುತ್ತಾರೆ.

ಮೃತ್ಯುದೇವತೆಗಳು ಪೃಥಿವಿಯಲ್ಲಿ. ವರುಣ ಭಿನ್ನರಾದ ಅಭಿಮಾನಿಗಳು, ಅಗ್ನಿಪುತ್ರರು, ಅಗ್ನಿಯಲ್ಲಿ. ಭೂತವಾಯ್ವಭಿಮಾನಿಗಳು ಮರುದ್ದೇವತೆಗಳು ವಾಯುವಿನಲ್ಲಿ (ಚತುರ್ಮುಖನಲ್ಲಿ), ಕ್ಷುದ್ರವಿಘ್ನಾಭಿಮಾನಿಗಳು ವಿನಾಯಕ ಪುತ್ರರು (ವಿನಾಯಕಾಃ) ಆಕಾಶಾಭಿಮಾನಿಗಣಪತಿಯಲ್ಲಿ ಲಯಹೊಂದುತ್ತಾರೆ.

ಆದ್ದರಿಂದ 'ಅಗ್ನೌ ಸರ್ವೇ ದೇವಾ ವಿಲೀಯಂತೇ' ಎಂದರೆ ಶ್ರುತಿನಿರ್ದಿಷ್ಟರಾದ ಅಗ್ನಿಪುತ್ರರಿಗೆ ಅಗ್ನಿಯಲ್ಲಿ ಲಯ.

**ವಿವರಣೆ**—ಇಂದ್ರನಿಗೆ ವಾಯುವಿನಲ್ಲಿ ಲಯ ಎಂದರೆ ಚತುರ್ಮುಖನಲ್ಲಿ ಲಯ. ಅದೂ ಸಾಕ್ಷಾತ್ತಾಗಿ ಅಲ್ಲ. ಹಿಂದೆ ಹೇಳಿರುವಂತೆ ಇಂದ್ರನು ಸೌಪರ್ಣೀ–ಗರುಡ–ಸರಸ್ವತಿ ಮೂಲಕ ಚತುರ್ಮುಖನಲ್ಲಿ ಪ್ರವೇಶಮಾಡುತ್ತಾನೆ. ಚಂದ್ರನು ಅನಿರುದ್ಧ– ಕಾಮ–ವಾರುಣೀ–ಶೇಷ–ಸರಸ್ವತಿಯ ಮೂಲಕ ಬ್ರಹ್ಮನನ್ನು ಪ್ರವೇಶಿಸುತ್ತಾನೆ. ಸೂರ್ಯನು ಬೃಹಸ್ಪತಿ–ಇಂದ್ರ–ಸೌಪರ್ಣೀ–ಗರುಡ–ಸರಸ್ವತಿಯ ಮೂಲಕ ಚತುರ್ಮುಖನನ್ನು ಪ್ರವೇಶಿಸುತ್ತಾನೆ. ಬೃಹಸ್ಪತಿಯು ಇಂದ್ರ–ಸೌಪರ್ಣೀ–ಗರುಡ–ಸರಸ್ವತಿಯ ಮೂಲಕ ಚತುರ್ಮುಖನನ್ನು ಪ್ರವೇಶಿಸುತ್ತಾನೆ. ಹೀಗೆ ಕೆಲವರಿಗೆ ಶೇಷಮಾರ್ಗದ ಮೂಲಕ ಮತ್ತೆ ಕೆಲವರಿಗೆ ಗರುಡಮಾರ್ಗದ ಮೂಲಕ ಚತುರ್ಮುಖಪ್ರವೇಶ.

ಮರುತ್ತುಗಳಿಗೆ ಚತುರ್ಮುಖನಲ್ಲಿ ಲಯ ಸಾಕ್ಷಾತ್ತಾಗಿ ಅಲ್ಲ. ಇಂದ್ರ–ಸೌಪರ್ಣೀ–ಗರುಡ–ಸರಸ್ವತಿಯ ಮೂಲಕ ಲಯ. ಗಣಪತಿಯು ''ಬ್ರಹ್ಮಚಾರಿವೇಷೇಣ ಪ್ರಚ್ಛನ್ನಃ'' ಎಂದಿದೆ ತತ್ತ್ವಪ್ರದೀಪದಲ್ಲಿ. ಆದ್ದರಿಂದ ಅವನೂ ಗೃಹಸ್ಥ. ಅವನ ಪುತ್ರರಿಗೆ ಅವನಲ್ಲಿ ಲಯ. ಅಗ್ನಿಯಲ್ಲಿ ಅಗ್ನಿಪುತ್ರರಿಗೆ ಮಾತ್ರ ಲಯವಲ್ಲ. ಇಲ್ಲಿ ಹೇಳಿರುವ ದೇವತೆಗಳ ಹೊರತಾದ ಎಲ್ಲಾ ದೇವತೆಗಳಿಗೂ ಅಗ್ನಿಯಲ್ಲೇ ಲಯ–ವಿಶಂತಿ ಶಿಷ್ಟಾ ಅಪಿ ಹವ್ಯವಾಹಮ್–ಅನು.

ಭಾಷ್ಯದೀಪಿಕಾದಲ್ಲಿ ಒಟ್ಟಿನಲ್ಲಿ ಲಯಕ್ರಮವನ್ನು ಹೀಗೆ ನಿರೂಪಿಸಲಾಗಿದೆ.

**ಗರುಡಮಾರ್ಗ**

1

ಮನುಷ್ಯೋತ್ತಮರು + ನಿರ್ಋತಿ ಯಮನಲ್ಲಿ

ಯಮ +ಪಿತೃಗಳು + ಮನು + ಚಕ್ರವರ್ತಿಗಳು →

**ಸ್ವಾಯಂಭುವಮನುವಿನಲ್ಲಿ**

2.

ಅ. ಅಗ್ನಿಪುತ್ರರು→ಅಗ್ನಿ→ ಸೂರ್ಯ

ಆ. ಋಭುಗಳು→ ಪೃಥಿವೀ

ಇ. ಸಾಧ್ಯರು→ ಆಕಾಶ

ಸೂರ್ಯ + ಆಕಾಶ + ಪೃಥಿವೀ→ **ಬೃಹಸ್ಪತಿಯಲ್ಲಿ**

3.

ಈ. ಭೃಗ್ವಾದಿ→**ದಕ್ಷ**

ಸ್ವಾಯಂಭುವಮನು + ಬೃಹಸ್ಪತಿ + ದಕ್ಷ + ಶಚೀ + ಮರುದ್ಗಣಗಳು

ಇಂದ್ರನಲ್ಲಿ

ಇಂದ್ರ→ಸೌಪರ್ಣೀ→ಗರುಡ→ಸರಸ್ವತಿ→ಚತುರ್ಮುಖ

**ಶೇಷಮಾರ್ಗ**

1. ಗಂಧರ್ವರು → ಕುಬೇರ

ಅ. ಶಸ್ಥದೇವತೆಗಳು + ಅಶ್ವಿನೀದೇವತೆಗಳು → ವರುಣ

ಆ. ಕುಬೇರ + ವರುಣ → ಸೋಮ

2. ಸೋಮ + ವಿಷ್ವಕ್ಸೇನಾದಿಪಾರ್ಷದರು → ಅನಿರುದ್ಧ.

3. ಅನಿರುದ್ಧ + ಸನಕಾದಿಗಳು + ರತಿ → ಕಾಮ.

4. ಕಾಮ → ವಾರುಣೀ → ಶೇಷ → ಸರಸ್ವತೀ → ಚತುರ್ಮುಖ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ನೈಕಸ್ಮಿನ್ ದರ್ಶಯತೋ ಹಿ ಓಂ ॥** '(ಅತ್ರ ದೇವಾನಾಂ ಸರ್ವಭೂತೇಷು ಲಯಃ ಸಮರ್ಥ್ಯತೇ। ಭೂತ ಇತಿ ವಿಪರಿಣಾಮೇನ ವರ್ತತೇ। ದೇವಾನಾಮ್ ಅಗ್ನೌ ಲಯೇಽಪಿ ತದ್ ದ್ವಾರಾ ವಾಯೌ ಆಕಾಶೇ ಚ ಲಯೇನ 'ಭೂತೇಷು' ಇತಿ ಪ್ರಾಗುಕ್ತ್ಯುಪಪತ್ತೇಃ ಏಕಸ್ಮಿನ್=ಅಗ್ನಾವೇವ ಭೂತೇ ದೇವಾ ವಿಲೀಯಂತೇ ಇತಿ ನ ಭವತಿ। ಕುತಃ ? ಹಿ=ಯಸ್ಮಾತ್ ''ಪೃಥಿವ್ಯಾಂ ಋಭವೋ

ವಿಲೀಯಂತೇ...'' ಇತಿ 'ಋಭವಃ ಪೃಥಿವ್ಯಾಂ' ಇತಿ ಚ ಶ್ರುತೀ ಪ್ರತ್ಯೇಕಂ ಭೂತೇಷು ದೇವತಾಲಯಂ ದರ್ಶಯತಃ; ಅತ ಇತ್ಯರ್ಥಃ ।)

ದೇವತೆಗಳಿಗೆ ಸರ್ವಭೂತಗಳಲ್ಲಿ ಲಯವನ್ನು ಇಲ್ಲಿ ಸಮರ್ಥಿಸಲಾಗಿದೆ. ಏಕಸ್ಮಿನ್=ಅಗ್ನಿಯಲ್ಲಿ ಮಾತ್ರ ದೇವತೆಗಳಿಗೆ ಲಯವೆನ್ನುವುದು ನ=ಅಲ್ಲ. ದರ್ಶಯತೋ ಹಿ=''ಪೃಥಿವ್ಯಾಂ ಋಭವಃ'' ''ಋಭವಃ ಪೃಥಿವ್ಯಾಂ'' ಎಂಬ ಎರಡು ಶ್ರುತಿಗಳು ಯಾರಿಗೆ ಎಲ್ಲಿ ಲಯ ಎನ್ನುವುದನ್ನು ತಿಳಿಸುತ್ತಿದೆಯಾದ ಕಾರಣ, ಅಗ್ನಿಯಲ್ಲಿ ಮಾತ್ರ ಲಯವಲ್ಲ.

## ಶಾಂಕರಭಾಷ್ಯದಲ್ಲಿ ಅಧ್ಯಕ್ಷಾಧಿಕರಣ

**॥ ಸೋಽಧ್ಯಕ್ಷೇ ತದುಪಗಮಾದಿಭ್ಯಃ ॥** ''ಪ್ರಾಣಃ ತೇಜಸಿ''ಎಂದು ಮುಂದಿನ ಶ್ರುತಿ ಇದ್ದರೂ ಸಃ=ಪ್ರಾಣನು ಅಧ್ಯಕ್ಷೇ=ದೇಹೇಂದ್ರಿಯಾದಿ ಅಧ್ಯಕ್ಷನಾದ ಜೀವನನ್ನು ಸೇರಿಕೊಳ್ಳುತ್ತಾನೆ. ಆದ್ದರಿಂದಲೇ ಮರಣಕಾಲದಲ್ಲಿ ಜೀವನು ಊರ್ಧ್ವಶ್ವಾಸ ಬಿಡುತ್ತಾನೆ. 'ತೇಜಸಿ' ಎಂಬುದನ್ನು ಬಿಟ್ಟು ಅಧ್ಯಕ್ಷನಲ್ಲಿ ಎಂದು ನಿರ್ಣಯಿಸಲು ಕಾರಣ— 'ತದುಪಗಮಾದಿಭ್ಯಃ'— ''ತಮುತ್ಕ್ರಾಮಂತಂ ಪ್ರಾಣೋಽನೂತ್ಕ್ರಾಮತಿ'' (ಬೃ.4.4.2) ಎಂದು ಶ್ರುತಿಯಲ್ಲಿ ಜೀವನನ್ನು ಅನುಸರಿಸಿ ಪ್ರಾಣನೂ ಹೋಗುತ್ತಾನೆ, ಎಂಬ 'ಅನುಗಮನ'. ಛಾಂದೋಗ್ಯಶ್ರುತಿಯೂ ಹೇಳುತ್ತದೆ- 'ಏವಮೇವಾತ್ಮಾನಮಂತಕಾಲೇ ಸರ್ವೇ ಪ್ರಾಣಾ ಅಭಿಸಮಾಯಂತಿ ॥' (ಬೃ.6.3.38) ಆದ್ದರಿಂದ ಪ್ರಾಣನಿಗೆ ಜೀವಾತ್ಮನಲ್ಲಿ ಲಯವಲ್ಲ, ಸಂಪತ್ತಿ.

**॥ ಭೂತೇಷು ತಚ್ಛ್ರುತೇಃ ॥** 'ಪ್ರಾಣಃ ತೇಜಸಿ' ಎಂದರೆ ಪ್ರಾಣಯುಕ್ತನಾದ ಜೀವನು ತೇಜೋಪಲಕ್ಷಿತವಾದ ಸೂಕ್ಷ್ಮವಾದ ಪಂಚಭೂತಾತ್ಮಕದೇಹದಲ್ಲಿ ಇರುತ್ತಾನೆ ಎಂದು ಅರ್ಥ.

ಶ್ರುತಿಯಲ್ಲಿ 'ತೇಜಸಿ' ಎಂದಿಷ್ಟೇ ಇದೆ. ಪಂಚಭೂತಾತ್ಮಕಶರೀರ ಎಂದು ಅದಕ್ಕೆ ಅರ್ಥಮಾಡುವುದು ಹೇಗೆ?

**॥ ನೈಕಸ್ಮಿನ್ ದರ್ಶಯತೋ ಹಿ ॥**ಜೀವನು ಒಂದು ದೇಹವನ್ನು ಬಿಟ್ಟು ಇನ್ನೊಂದು ದೇಹವನ್ನು ಪ್ರವೇಶ ಮಾಡುವ ಮಧ್ಯಾವಧಿಯಲ್ಲಿ ತೇಜೋಮಾತ್ರ ಶರೀರದಲ್ಲಿ ಇರುವುದಿಲ್ಲ. ''ಆಪಃ ಪುರುಷವಚಸಃ'' (ಛಾಂ.5.3.3) ಎಂದು ಪ್ರಶ್ನ ಪ್ರತಿವಚನಸಂದರ್ಭದಲ್ಲಿ ಪಂಚಭೂತಾತ್ಮಕವಾದ ಸೂಕ್ಷ್ಮದೇಹದಲ್ಲಿ ಜೀವನು

ಇರುತ್ತಾನೆ, ಎಂದೇ ಹೇಳಲಾಗಿದೆ.

ವಿಮರ್ಶೆ—ಶ್ರುತಿಯಲ್ಲಿ 'ಪ್ರಾಣಃ ತೇಜಸಿ, ತೇಜಃ ಪರಸ್ಯಾಂ ದೇವತಾಯಾಂ' ಎಂದು ಪ್ರಾಣನಿಗೆ ತೇಜಃಪ್ರಾಪ್ತಿಯನ್ನು ಹೇಳಲಾಗಿದೆ. ಅದನ್ನು ಬಿಟ್ಟು ಪ್ರಾಣನಿಗೆ ಜೀವಪ್ರಾಪ್ತಿಯನ್ನು ಹೇಳುವುದು ಉಚಿತವಲ್ಲ. ಇದಕ್ಕೆ ಲೌಕಿಕದೃಷ್ಟಾಂತವೊಂದನ್ನು ಕೊಟ್ಟು ಉತ್ತರಿಸಲಾಗಿದೆ. ಮನೆಗೆ ಹೋಗಬೇಕಾದವನು ಮೊದಲು ವಾಹನ ಏರುತ್ತಾನೆ, ಆಮೇಲೆ ಮನೆಗೆ ಹೋಗುತ್ತಾನೆ. ಅದರಂತೆ ಪ್ರಾಣ ಮೊದಲು ಜೀವನನ್ನು ಸೇರಿ ಆಮೇಲೆ ತೇಜೋಪಲಕ್ಷಿತ ಪಂಚಭೂತವಿಕಾರವಾದ ಸೂಕ್ಷ್ಮದೇಹವನ್ನು ಪ್ರವೇಶಿಸುತ್ತಾನೆ, ಎಂದು. ಲೌಕಿಕದೃಷ್ಟಾಂತವನ್ನು ಹೀಗೂ ಹೇಳಬಹುದು— ಮಂತ್ರಿಯು ರಾಜನ ಬಳಿ ಹೋಗಿ ಇಬ್ಬರೂ ಕೂಡಿ ರಥವೇರಿ ದೇಶಾಂತರಕ್ಕೆ ಹೋಗುತ್ತಾರೆ. ಅದರಂತೆ, ಪ್ರಾಣನು ಜೀವನೊಡನೆ ಪಾಂಚಭೌತಿಕಸೂಕ್ಷ್ಮಶರೀರ ಪ್ರವೇಶಿಸಿ (ತೇಜಸಿ) ಆಮೇಲೆ ಪರದೇವತೆಯನ್ನು ಸೇರುತ್ತಾರೆ. ಹೀಗೆ ಅರ್ಥ ಮಾಡಿದಾಗ 'ಪ್ರಾಣಃ ತೇಜಸಿ' ಎಂಬುದನ್ನು ಬಿಟ್ಟಂತಾಗುವುದಿಲ್ಲ. ಇದು ಪ್ರತ್ಯಕ್ಷಕ್ಕೂ ಅನುಕೂಲವಾಗುತ್ತದೆ. ಪ್ರಾಣವೃತ್ತಿ ಉಪರಮವಾದರೂ ದೇಹದಲ್ಲಿ ಸ್ವಲ್ಪಹೊತ್ತು ತೇಜಸ್ಸು=ಬಿಸಿ ಉಳಿದಿರುತ್ತದೆ.

ರಾಮಾನುಜಭಾಷ್ಯದಲ್ಲಿ 'ಸೋಽಧ್ಯಕ್ಷೇ' ಇದು ಒಂದು ಸೂತ್ರದ ಪ್ರತ್ಯೇಕಾಧಿ ಕರಣ. ಮುಂದಿನ ಎರಡು ಸೂತ್ರಗಳು ಒಂದು ಅಧಿಕರಣ. ಅರ್ಥ ಶಾಂಕರಭಾಷ್ಯದಂತೆಯೇ.

**ಇಲ್ಲಿಗೆ ಅನೇಕಲಯಾಧಿಕರಣವು (ನೈಕಸ್ಮಿನ್ನಧಿಕರಣವು) ಮುಗಿಯಿತು.**

## ೬. ಸಮನಾಧಿಕರಣಮ್

**॥ ಓಂ ಸಮನಾ ಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ ಓಂ ॥ ೭ ॥**

**ದೇಶತಃ ಕಾಲತಶ್ಚ ವ್ಯಾಪ್ತ್ಯಾ ಸಮೋ ನಾ ಪರಮಪುರುಷೋ ಯಸ್ಯಾಃ ಸಾ ಸಮನಾ। ಸಂಸಾರಾನುಪಕ್ರಮಾತ್ ಸ್ವತ ಏವಾಮೃತತ್ವಂ ತಸ್ಯಾಃ। ಬೃಹಚ್ಛ್ರುತಿಶ್ಚ–**

**'ದ್ವೌ ವಾವ ಸೃತ್ಯನುಪಕ್ರಮೌ ಪ್ರಕೃತಿಶ್ಚ ಪರಮಶ್ಚ ದ್ವಾವೇತೌ ನಿತ್ಯಮುಕ್ತೌ ನಿತ್ಯೌ ಚ ಸರ್ವಗತೌ ಚೈತೌ ಜ್ಞಾತ್ವಾ ವಿಮುಚ್ಯತೇ' ಇತಿ ॥**

ದೇಶದ ವ್ಯಾಪ್ತಿ ಮತ್ತು ಕಾಲದ ವ್ಯಾಪ್ತಿಗಳಿಂದ ಸಮಃ=ಸಮಾನತೆ ಇರುವ ನಾ=ಪರಮಪುರುಷನಾಗಿರುವವಳು ರಮೆ–ಸಮ+ನಾ. (ಅಂದರೆ ರಮೆಗೆ ಪರಮಾತ್ಮನಂತೆಯೇ ದೇಶ–ಕಾಲಗಳ ವ್ಯಾಪ್ತಿ ಸಮಾನವಾಗಿರುತ್ತದೆ.) ಅವಳು ಅಸೃತ್ಯುಪಕ್ರಮಾ=ಸಂಸಾರದ ಸಂಬಂಧವಿಲ್ಲದವಳು. ಅವಳಿಗೆ ಮೋಕ್ಷವು ಸ್ವಾಭಾವಿಕ ವಾದುದು. ''ಇಬ್ಬರಿಗೆ ಸಂಸಾರ ಬಂಧವಿಲ್ಲ–ಲಕ್ಷ್ಮೀದೇವಿ ಮತ್ತು ಪರಮಾತ್ಮ. ಇವರಿಬ್ಬರೂ ನಿತ್ಯಮುಕ್ತರು, ನಿತ್ಯರು, ಸರ್ವತ್ರ ವ್ಯಾಪ್ತರು. ಇದನ್ನು ತಿಳಿದವರು ಮುಕ್ತರಾಗುತ್ತಾರೆ'' ಎಂದು ಶ್ರುತಿ ಇದೆ.

ಅಂದಮಾತ್ರಕ್ಕೆ ಲಕ್ಷ್ಮೀದೇವಿ ಪರಮಾತ್ಮನಿಗೆ ಸಮಳಲ್ಲ.

**ವಿವರಣೆ**—ಲಕ್ಷ್ಮೀದೇವಿಗೆ ಪರಮಾತ್ಮನಲ್ಲಿ ಲಯ ಅಂದಮಾತ್ರಕ್ಕೆ ಇತರ ದೇವತೆಗಳಂತೆ ಅವಳಿಗೂ ಮೋಕ್ಷವು ಇದುಮೊದಲಾಗಿ ಆಗುತ್ತದೆ ಎಂದು ತಿಳಿಯಬಾರದು. ಅಸೃತ್ಯುಪಕ್ರಮಾತ್—ಸೃತಿಯ ಉಪಕ್ರಮಾಭಾವವು ಅವಳಿಗೆ ಸಾರ್ವಕಾಲಿಕವಾದುದು. ಆದ್ದರಿಂದ, ಅನುಪೋಷ್ಯ ಅಮೃತತ್ವಂ=ಪರಮಾತ್ಮನನ್ನು ಉಪಾಸನೆ ಮಾಡದೆಯೇ ಸದಾಕಾಲದಲ್ಲಿ ಇರುವ ಅಮೃತತ್ವ ಅವಳಿಗಿದೆ.

ಇಲ್ಲಿ ತ್ರಿವಿಕ್ರಮಪಂಡಿತರು ಆಚಾರ್ಯರ ಬಗ್ಗೆ ಭಾವಪೂರ್ಣವಾಗಿ ನುಡಿದಿದ್ದಾರೆ—ತಸ್ಯೈತಸ್ಯ ಸರ್ವಶ್ರುತಿ–ಇತಿಹಾಸ–ಪುರಾಣ–ತಂತ್ರಯುಕ್ತಿಮೂಲಂ ಪರಮಾತ್ಮ ತತ್ತ್ವವಿಷಯನಿರ್ಣಯಾತ್ಮಕಂ ಸೂತ್ರಜಾತಂ ಜಗತಿ ಸುರವರಪುರಸ್ಸರಕ–ವಿಜನ–ಮನಃಸರಸಿಜಸಮೂಹ–ಸಹಸ್ರಕಿರಣೇಭ್ಯಃ ಗುರುತಮ–ಭಾಷ್ಯಭಟ್ಟಾರಕೇಭ್ಯಃ ಏಭ್ಯೋಽಪರಃ ಕೋ ವ್ಯಾಚಕ್ಷೀತ ।

ಕಿಂತು ಪ್ರಾಜ್ಞತಮಾನಾಮ್ ಏಷಾಮ್ ಆಜ್ಞಾಬಲಮ್ ಅವಲಂಬ್ಯ ಆರೂಢ–ಪ್ರೌಢ–ದುರಧಿಗಮ–ಮಾರ್ಗಾಃ ಕತಿಚನಭಾಷ್ಯಪದಾನಿ ವ್ಯಾಚಿಖ್ಯಾಸವಃ ಸೂತ್ರಮಿಹ ಗುರುಭಿರುದೀರಿತಮುದಾಹರಾಮ ಏವ ಕೇವಲಮ್ । ಕ್ವಾಪಿ ಚ ಮುಖತೋ ವಿವೃತಮಪಿ ಕಿಮಪಿ ಪದಮ್ ಅಭಿಮುಖ–ವಿಕಸಿತ–ಕರತಲ ವಿಲಸಿತ–ಆಮಲಕವತ್ ಅವಿರತಮ್ ಅನುವೀಕ್ಷ್ಯಮಾಣ–ಸೂತ್ರಾರ್ಥಜಾತಾನಾಮ್ ದುರ್ವಿಗಾಹಮಹಾಮತಿ–ಸಮುದ್ರಾಣಾಮ್ ಮಿತಪದಂ ಚೇದಂ ಭಾಷ್ಯಂ

ಬಹ್ವರ್ಥಮಿಹ ಕುರ್ವತಾಂ ಕೃಪಾಲೂನಾಂ ಅನುಗ್ರಹಾತ್ ಅರ್ಥಾದಾಕ್ಷಿಪ್ತಮರ್ಥಂ ಪ್ರದರ್ಶಯಾಮ ಇತಿ ॥

ಸೂತ್ರದಲ್ಲಿ 'ಸೃತ್ಯಭಾವಾತ್' ಎನ್ನದೆ ಅನುಪಕ್ರಮಾತ್ ಎಂದಿರುವುದರಿಂದ ಲಕ್ಷ್ಮೀದೇವಿಗೆ ಎಂದೂ ಸಂಸಾರವಿಲ್ಲ, ಎಂದು ಸೂಚಿಸಿದಂತಾಗಿದೆ. ಹೀಗೆ ತ್ರಿವಿಕ್ರಮ ಪಂಡಿತರು ಹೇಳಿ 'ನಾನು ವಿವರಿಸಿದ ಅರ್ಥ ಭಾಷ್ಯದಲ್ಲಿರುವ 'ಸಂಸಾರಾನುಪ ಕ್ರಮಾತ್' ಎಂಬ ಪದಕ್ಕೆ ಹೊರತು ಸೂತ್ರದ ಪದಕ್ಕಲ್ಲ. ಸೂತ್ರಪದಗಳಿಗೆ ಅರ್ಥಹೇಳುವ ಯೋಗ್ಯತೆ ಅದು ಶ್ರೀಮದಾಚಾರ್ಯರಿಗೆ ಮಾತ್ರ ಎಂದು ಇಲ್ಲಿ ಸೂತ್ರಕಾರರ ಮತ್ತು ಆಚಾರ್ಯರ ಮಹತಿಯನ್ನು ವರ್ಣಿಸಿದ್ದಾರೆ. ವ್ಯಾಸರ ಬುದ್ಧಿಸಾಗರದಲ್ಲಿ ವೇದೋಕ್ತಾರ್ಥವೂ ಒಂದು ಬಿಂದು ಎಂದಿದ್ದಾರೆ ಪಂಡಿತಾಚಾರ್ಯರು—

'...ಸಾಕ್ಷಾತ್ ಪರಮ ಪುರುಷಸ್ಯ ಶ್ರೀಮದ್ ಬಾದರಾಯಣ-ಭಗವತಃ ಅನಂತ ಸದ್ಗುಣಸ್ಯ ಸಕಲವಿಷಯ-ಸತತವಿಕಸಿತಸುಮತೇಃ ಮತಿವಿಲಸಿತಂ ಸಮವಗಾಹಿತುಂ ಶಕ್ನುಯಾತ್। ಯಸ್ಯ ಅನಂತದೇಶ-ಕಾಲ ವ್ಯಾಪಿನಿ ವಿಜ್ಞಾನೇ ಬತ ಪರಮಾಣುತಾಮಣತಿ ನಿಖಿಲೋಽಪಿ ನಿಗಮಸಮೂಹಸಂಭೃತೋಽರ್ಥಜಾತಃ ॥

**ನೈತಾವತಾ ಸಾಮ್ಯಮ್—**

## ॥ ಓಂ ತದಾ(ದ)ಪೀತೇಃ ಸಂಸಾರವ್ಯಪದೇಶಾತ್ ಓಂ ॥ ೮ ॥

**'ಸಮಾವೇತೌ ಪ್ರಕೃತಿಶ್ಚ ಪರಮಶ್ಚ ನಿತ್ಯೌ ಸರ್ವಗತೌ ನಿತ್ಯಮುಕ್ತಾವ ಸಮಾವೇತೌ ಪ್ರಕೃತಿಶ್ಚ ಪರಮಶ್ಚ ವಿಲೀನೋ ಹಿ ಪ್ರಕೃತೌ ಸಂಸಾರಮೇತಿ ವಿಲೀನಃ ಪರಮೇ ಹ್ಯಮೃತ(ತ್ವ)ಮೇತಿ' ಇತಿ ಸೌಪರ್ಣಶ್ರುತೇಃ ।**

ಲಕ್ಷ್ಮೀದೇವಿಯೂ ಪರಮಾತ್ಮನೂ ನಿತ್ಯರು, ಸರ್ವವ್ಯಾಪ್ತರು, ನಿತ್ಯಮುಕ್ತರು. ಆದ್ದರಿಂದ ಅವರಿಬ್ಬರೂ ಈ ವಿಷಯದಲ್ಲಿ ಸಮಾನರು. ಹಾಗೆಂದು ಸರ್ವಥಾ ಸಾಮ್ಯವಿಲ್ಲ. ಅವರಿಬ್ಬರು ಅಸಮಾನರೂ ಆಗಿದ್ದಾರೆ—ಲಕ್ಷ್ಮೀದೇವಿಯಲ್ಲಿ ಲಯವಾದವರು ಸಂಸಾರಿಗಳಾಗುತ್ತಾರೆ, ಪರಮಾತ್ಮನಲ್ಲಿ ಲಯವಾದವರು ಅಮೃತತತ್ವವನ್ನು ಹೊಂದುತ್ತಾರೆ. ಹೀಗೆಂದು ಸೌಪರ್ಣ ಶ್ರುತಿಯಲ್ಲಿದೆ.

**ವಿವರಣೆ**—'ತದಾಪೀತೇಃ' ಎಂದು ತತ್ತ್ವಪ್ರದೀಪವಿವಕ್ಷಿತ ಸೂತ್ರಪಾಠ. 'ತತ್+ಆಪೀತೇಃ' ಎಂದು ಛೇದ. 'ತಸ್ಮಾದಾಪೀತೇಃ' ಪರಮಾತ್ಮನಿಂದಾಗಿ 'ಆಪೀತಿಃ' ಅಪೀತಿ ಎಂದರೆ 'ಅವಿಜ್ಞಾತಂ ಪ್ರವಿಷ್ಟಂ ಯತ್ ಅಪೀತಮಿತಿ ಕೀರ್ತ್ಯತೇ''

ಮತ್ತೊಬ್ಬರಿಗೆ ತಿಳಿಯದಂತೆ ಆಗುವ ಪ್ರವೇಶ ಅಪೀತಿ. ಈ ಪ್ರವೇಶ ಲಕ್ಷ್ಮೀದೇವಿಗೂ ಗೊತ್ತಿಲ್ಲದಂತೆ ನಡೆಯುತ್ತದೆ. ಆದ್ದರಿಂದ ಆ=ಸಮ್ಯಕ್ ಅಪೀತಿ=ಪ್ರವೇಶ. 'ಸ್ವಸ್ಯಾಪಿ ಅಜ್ಞಾತೇ ಏವ ತದಾ ಪ್ರಕೃತೌ ಪ್ರವೇಶ ಇತ್ಯರ್ಥಃ' ತ. ಪ್ರದೀಪ. ಪರಮಾತ್ಮನು ಮೋಚಕ, ಲಕ್ಷ್ಮೀದೇವಿ ಅಮೋಚಕಳು. ಹೀಗಾಗಿ ಅವರಿಗೆ ಸರ್ವಥಾ ಸಾಮ್ಯವಿಲ್ಲ.

## ಓಂ ಸೂಕ್ಷ್ಮಂ ಪ್ರಮಾಣತಶ್ಚ ತಥೋಪಲಬ್ಧೇಃ ಓಂ ॥ ೯ ॥

**ಸೂಕ್ಷ್ಮತ್ವಂ ಚಾಧಿಕಂ ಬ್ರಹ್ಮಣಃ ಪ್ರಕೃತೇಃ । ಜ್ಞಾನಾನಂದೈಶ್ವರ್ಯಾದಿಪ್ರಮಾಣಾಧಿಕ್ಯಂ ಚ ।**

**'ಸರ್ವತಃ ಪ್ರಕೃತಿಃ ಸೂಕ್ಷ್ಮಾ ಪ್ರಕೃತೇಃ ಪರಮೇಶ್ವರಃ ।**
**ಜ್ಞಾನಾನಂದೌ ತಥೈಶ್ವರ್ಯಂ ಗುಣಾಶ್ಚಾನ್ಯೇಽಧಿಕಾಃ ಪ್ರಭೋಃ ॥'**

**ಇತಿ ಹಿ ತುರಶ್ರುತಿಃ ।**

ಲಕ್ಷ್ಮೀದೇವಿಗಿಂತಲೂ ಪರಮಾತ್ಮನ ಸೂಕ್ಷ್ಮತ್ವ ಅಂದರೆ ಅಣುತ್ವ ಹೆಚ್ಚಿನದು. ಅದರಂತೆ, ಜ್ಞಾನ–ಆನಂದ–ಐಶ್ವರ್ಯಾದಿಗುಣಗಳು ಪ್ರಕೃತಿಗಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಪರಮಾತ್ಮನಲ್ಲಿ ಇವೆ. ತುರಶ್ರುತಿಯಲ್ಲಿ ಹೀಗಿದೆ— ಎಲ್ಲ ವಸ್ತುಗಳಿಗಿಂತಲೂ ಲಕ್ಷ್ಮೀದೇವಿಯು ಸೂಕ್ಷ್ಮಳು. ಅವಳಿಗಿಂತಲೂ ಪರಮಾತ್ಮನು ಸೂಕ್ಷ್ಮತರ. ಜ್ಞಾನ ಮತ್ತು ಆನಂದ ಹಾಗೆಯೇ ಐಶ್ವರ್ಯ ಇವೇ ಮುಂತಾದ ಗುಣಗಳು ಪರಮಾತ್ಮನಲ್ಲಿ ಅಧಿಕವಾಗಿವೆ.

ವಿವರಣೆ—ಸೂತ್ರದಲ್ಲಿ 'ಪ್ರಮಾಣತಃ=ಪರಿಮಾಣದಿಂದ ಸೂಕ್ಷ್ಮಂ' ಎಂದರ್ಥ.

## ॥ ಓಂ ನೋಪಮರ್ದೇನಾತಃ ಓಂ ॥ ೧೦ ॥

**ಅತಸ್ತಸ್ಯ ಯೇ ವಿಶೇಷಗುಣಾಸ್ತೇಷಾಮನುಪಮರ್ದೇನೈವ ಸಾಮ್ಯಮ್ ।**

**ದೇಶತಃ ಕಾಲತಶ್ಚೈವ ಸಮಾ ಪ್ರಕೃತಿರೀಶ್ವರೇ ।**
**ಉಭಯೋರಪ್ಯಬದ್ಧತ್ವಂ ತದಬಂಧಃ ಪರಾತ್ಮನಃ ।**
**ಸ್ವತ ಏವ ಪರೇಶಸ್ಯ ಸಾ ಚೋಪಾಸ್ತೇ ಸದಾ ಹರಿಮ್ ॥**
**ಪ್ರಕೃತೇಃ ಪ್ರಾಕೃತಸ್ಯಾಪಿ ಯೇ ಗುಣಾಸ್ತೇ ತು ವಿಷ್ಣುನಾ ।**
**ನಿಯತಾ ನೈವ ಕೇನಾಪಿ ನಿಯತಾ ಹಿ ಹರೇರ್ಗುಣಾಃ ॥'**

**ಇತಿ ಹಿ ಭವಿಷ್ಯತ್ಪರ್ವಣಿ ।**

ಆದ್ದರಿಂದ ಲಕ್ಷ್ಮೀದೇವಿಗೆ ಹರಿ ಸಾಮ್ಯವೆಂದರೆ ಈ ವಿಶೇಷಗುಣಗಳನ್ನು ಹೊರತಾಗಿಯೇ ಸಾಮ್ಯ. ಭವಿಷ್ಯತ್ ಪರ್ವದಲ್ಲಿ ಹೀಗಿದೆ— ದೇಶತಃ ಮತ್ತು ಕಾಲತಃ ವ್ಯಾಪ್ತಿಯಲ್ಲಿ ಲಕ್ಷ್ಮೀದೇವಿಯು ಪರಮಾತ್ಮನಿಗೆ ಸಮಾನಳಾಗಿದ್ದಾಳೆ. ಇಬ್ಬರೂ ಅಬದ್ಧರು=ಅನಾದಿಕಾಲದಿಂದ ಸಂಸಾರ ಬಂಧರಹಿತರು. ಈ ಅಬಂಧವು ಪರಮಾತ್ಮನಿಗೆ ಸ್ವಾಭಾವಿಕವಾದುದು, ಲಕ್ಷ್ಮೀದೇವಿಗೆ ಪರಾಧೀನವಾದುದು. ಆಕೆ ಸದಾ ಶ್ರೀಹರಿಯನ್ನು ಉಪಾಸನೆ ಮಾಡುತ್ತಾಳೆ. ಪ್ರಕೃತೇಃ=ಲಕ್ಷ್ಮೀದೇವಿಯ ಪ್ರಾಕೃತಸ್ಯ=ಬ್ರಹ್ಮಾದಿಗಳ ಏನು ಗುಣಗಳಿವೆಯೋ ಅವೆಲ್ಲವೂ ಶ್ರೀಹರಿಯ ನಿಯಂತ್ರಣಕ್ಕೊಳಪಟ್ಟಿವೆ. ಆದರೆ, ಶ್ರೀಹರಿಯ ಗುಣಗಳು ಯಾರ ನಿಯಂತ್ರಣದಲ್ಲೂ ಇಲ್ಲ.

## ॥ ಓಂ ಅಸ್ಯೈವ ಚೋಪಪತ್ತೇರೂಷ್ಮಾ ಓಂ ॥ ೧೧ ॥

**'ದ್ವಿಧಾ ಹೀದಮವದೃಶ್ಯತ ಊಷ್ಮಾವದನೂಷ್ಮಾವಚ್ಚ। ತತ್ರೋಷ್ಮಾವತ್ ಪರಂ ಬ್ರಹ್ಮ ಯನ್ನ ಜಿಘ್ರಂತಿ ನ ಪಶ್ಯಂತಿ ನ ಶೃಣ್ವಂತಿ ನ ವಿಜಾನಂತ್ಯಥಾನೂಷ್ಮಾವತ್ ಪ್ರಕೃತಿಶ್ಚ ಪ್ರಾಕೃತಂ ಚ ಯನ್ನ ಜಿಘ್ರಂತಿ ಜಿಘ್ರಂತಿ ಚ ಯನ್ನ ಪಶ್ಯಂತಿ ಪಶ್ಯಂತಿ ಚ ಯನ್ನ ಶೃಣ್ವಂತಿ ಶೃಣ್ವಂತಿ ಚ ಯನ್ನ ಜಾನಂತಿ ವಿಜಾನಂತಿ ಚ' ಇತಿ ಸೌಪರ್ಣಶ್ರುತಿಶ್ಚ(ತೇಃ) ಕಿಂಚಿತ್‌ಸಾಮ್ಯೋಪಪತ್ತೇಃ ॥**

ಇದಂ=ಈ ಚೇತನ ಸಮೂಹವು ಎರಡು ರೀತಿಯಾಗಿ ಕಾಣುತ್ತದೆ— ಊಷ್ಮಾವತ್, ಅನೂಷ್ಮಾವತ್ ಎಂದು. ಇವರಿಬ್ಬರಲ್ಲಿ ಬ್ರಹ್ಮನು 'ಊಷ್ಮಾವತ್' ಎನಿಸುತ್ತಾನೆ. ಅಂತಹವನನ್ನು ಮೂಗಿನಿಂದ, ಕಣ್ಣಿನಿಂದ, ಕಿವಿಯಿಂದ ತಿಳಿಯಲಾಗದು. ಪ್ರಕೃತಿ ಎನಿಸಿರುವ ಲಕ್ಷ್ಮೀದೇವಿ ಪ್ರಾಕೃತರಾದ ಬ್ರಹ್ಮಾದಿ ಚೇತನರು 'ಅನೂಷ್ಮಾವತ್'. ಇವರನ್ನು ಮೂಗಿನಿಂದ ತಿಳಿಯಬಹುದು, ಇಲ್ಲ. ಕಣ್ಣಿನಿಂದ ನೋಡಬಹುದು, ಇಲ್ಲ. ಕಿವಿಯಿಂದ ಕೇಳಬಹುದು, ಇಲ್ಲ. ಇತರ ಪ್ರಮಾಣಗಳಿಂದಲೂ ತಿಳಿಯಬಹುದು, ಇಲ್ಲ. ಹೀಗೆ ಸೌಪರ್ಣಶ್ರುತಿ ಇರುವುದರಿಂದ ಅಲ್ಪಸಾಮ್ಯ ಇದೆ.

**ವಿವರಣೆ**—ಊಷ್ಮವಾನ್ ಎಂದರೆ ಸಾಮರ್ಥ್ಯವಾನ್, ಎಂದರ್ಥ. ಐತರೇಯಭಾಷ್ಯದಲ್ಲಿ ಈ ಅರ್ಥವನ್ನು ಹೇಳಲಾಗಿದೆ—

ಊಷ್ಮನಾಮಾ ಸ ಭಗವಾನ್ ಸಮರ್ಥತ್ವಾತ್ ಪ್ರಕೀರ್ತಿತಃ ॥

ಅಂತಹ ಸಾಮರ್ಥ್ಯವಿಶೇಷದಿಂದಾಗಿಯೇ ಪರಮಾತ್ಮನ ಗಂಧಾದಿಗುಣಗಳು

ಘ್ರಾಣಾದಿ ಇಂದ್ರಿಯಗಳಿಗೆ ಗೋಚರವಾಗುವುದಿಲ್ಲ. ಲಕ್ಷ್ಮೀದೇವಿ ಸ್ವತಃ ಇಂದ್ರಿಯಾಗೋಚರಳು. ಆದರೂ ಅಭಿಮನ್ಯಮಾನವಾದ ಪ್ರಕೃತಿತತ್ತ್ವದ ಮೂಲಕ ಇಂದ್ರಿಯ ವಿಷಯಳಾಗುತ್ತಾಳೆ. ಭಗವಂತನು ಯಾವುದಕ್ಕೂ ಅಭಿಮಾನಿಯಲ್ಲದ ಕಾರಣ ಅವನಿಗೆ ಇಂದ್ರಿಯಗೋಚರತ್ವವಿಲ್ಲ.

ಗುರ್ವರ್ಥದೀಪಿಕಾದಲ್ಲಿ 'ಊಷ್ಮಾವತ್ತ್ವಂ ಚ ಉಷ=ದಾಹೇ ಇತಿ ಧಾತೋಃ ಪರಾಭಿತಾಪನಸಾಮರ್ಥ್ಯವಿಶೇಷವತ್ತ್ವಮ್ । ತಚ್ಚ ಪರಮಾತ್ಮನಿ 'ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋಃ''(ಗೀತಾ.) ಇತಿ ವಚನಾತ್ ಸರ್ವದಾ ವಿದ್ಯತೇ ।'' ಎಂದಿದೆ.

'ಊಷ್ಮಾವತ್ತ್ವಂ ನಾಮ ಪರೇಂದ್ರಿಯಶಕ್ತಿತಿರೋಧಾಯಕತ್ವಮ್ । ಊಷ್ಮಾ-ಸೂರ್ಯ ಮಂಡಲಾದಿ ಸಾಧಾರಣಂ ವಿವಕ್ಷಿತಂ—ಸೂರ್ಯಮಂಡಲವನ್ನು ತಲೆಎತ್ತಿ ನೋಡಲಾಗುವುದಿಲ್ಲ. ಅದರಂತೆ ಭಗವಂತ, ಎಂದು ವಾಕ್ಯಾರ್ಥಮಂಜರಿಯಲ್ಲಿದೆ. ಇಷ್ಟಾದರೂ ಭಗವಂತ ತನ್ನ ದರ್ಶನನೀಡುವುದು ಅವನ ಕೃಪೆಯಿಂದಲೇ.

## ॥ ಓಂ ಪ್ರತಿಷೇಧಾದಿತಿ ಚೇನ್ನ ಶಾರೀರಾತ್ ಓಂ ॥ ೧೨ ॥

**'ಅಸಮೋ ವಾ ಏಷ ಪರೋ ನಹಿ ಕಶ್ಚಿದೇವಂ ದೃಶ್ಯತೇ ಸರ್ವೇ ಹ್ಯೇತೇಽಣವೋ ಜಾಯಂತೇ ಚ ಮ್ರಿಯಂತೇ ಚ ಛಿದ್ರಾ ಹ್ಯೇತೇ ಭವಂತ್ಯಥ ಪರೋ ನ ಜಾಯತೇ ನ ಮ್ರಿಯತೇ ಪೂರ್ಣಶ್ಚೈಷ ಭವತಿ' ಇತಿ ಚತುರ್ವೇದಶಿಖಾಯಾಂ ಸಾಮ್ಯಪ್ರತಿಷೇಧಾನ್ನೇತಿ ಚೇತ್,**

**ನ । ಶಾರೀರಾದ್ಧಿ ಸಾಮ್ಯಂ ಪ್ರತಿಷಿಧ್ಯತೇ ॥**

ಚತುರ್ವೇದಶಿಖೆಯಲ್ಲಿ ದೇಶಕಾಲವ್ಯಾಪ್ತಿಯಿಂದ ಸಾಮ್ಯವನ್ನು ನಿಷೇಧಿಸಲಾಗಿದೆ—''ಪರಮಾತ್ಮನು 'ಅಸಮ' ಅವನಿಗೆ ಸಮಾನರು ಯಾರೂ ಕಂಡಿಲ್ಲ. ಏತೇ ಸರ್ವೇ ಅಣವಃ=ಉಳಿದವರೆಲ್ಲರೂ ಅಣುಗಳು. ಅವರು ಹುಟ್ಟುತ್ತಾರೆ, ಸಾಯುತ್ತಾರೆ. ಏತೇ ಛಿದ್ರಾಃ ಭವಂತಿ=ಇವರೆಲ್ಲರೂ ದೋಷಿಗಳು. ಆದರೆ ಪರಮಾತ್ಮನು ಹುಟ್ಟುವುದಿಲ್ಲ, ಸಾಯುವುದೂ ಇಲ್ಲ. ಅವ ಪೂರ್ಣನೇ ಆಗಿರುತ್ತಾನೆ''. ಆದ್ದರಿಂದ ಲಕ್ಷ್ಮಿಯು ಪರಮಾತ್ಮನಿಗೆ ಸಮಾನ ಎಂದಿರುವುದು ಸರಿಯಲ್ಲ, ಎಂದರೆ, ಈ ಶ್ರುತಿಯಲ್ಲಿ ಶಾರೀರರಾದ ಜೀವರಿಂದ ಸಾಮ್ಯವನ್ನಷ್ಟೇ ನಿಷೇಧ ಮಾಡಲಾಗಿದೆ. ಲಕ್ಷ್ಮೀದೇವಿಗೆ ಸಾಮ್ಯ ಇದ್ದೇ ಇದೆ.

ವಿವರಣೆ—ಪ್ರಾಕೃತಚೇತನವರ್ಗಕ್ಕೆ ಶರೀರಾಭಿಮಾನವಿರುವ ಕಾರಣ

ಶರೀರೋತ್ಪತ್ತಿಯಿಂದಾಗಿ ಉತ್ಪತ್ತಿ, ತನ್ನಾಶದಿಂದ ನಾಶವಿದೆ. ಶರೀರಾಂತಃಸ್ಥಿತಿ ಇರುವುದರಿಂದ ಅಣುತ್ವವೂ ಇದೆ. ಆದರೆ ಪರಮಾತ್ಮನಿಗೆ ಇವಾವೂ ಇಲ್ಲ.

ಸೂತ್ರದಲ್ಲಿ 'ಶಾರೀರಾದೇವ' ಎಂದು ವಿವಕ್ಷಿತ. ಶರೀರಪ್ರಯುಕ್ತವಾಗಿಯೇ ಅಣುತ್ವಾದಿಗಳು ಎಂದರ್ಥ. ಲಕ್ಷ್ಮೀದೇವಿಗೆ ಶರೀರವಿಲ್ಲವಾದ ಕಾರಣ ಇಂತಹ ಅಣುತ್ವಾದಿಗಳೂ ಇಲ್ಲ. ಶಾರೀರ=ಎಂದರೆ ಬ್ರಹ್ಮಾದಿಜೀವರಾಶಿಗಳು.

**ಕುತಃ ?**

**॥ ಓಂ ಸ್ಪಷ್ಟೋ ಹ್ಯೇಕೇಷಾಮ್ ಓಂ ॥ ೧೩ ॥**

**'ಅಥಾತಃ ಸಮಾಶ್ಚಾಸಮಾಶ್ಚಾಭಿಧೀಯಂತೇ ಸಮಾಸಮಾಶ್ಚಾಥ ಸಮಾನಿ ಬ್ರಹ್ಮಣೋ ರೂಪಾಣಿ ಯೈರುತ್ಪತ್ತಿಃ ಸ್ಥಿತಿರ್ಲಯೋ ನಿಯತಿರಾಯತಿಶ್ಚ । ಏಕಂ ಹ್ಯೇವೈತದ್ ಭವತ್ಯಥಾಸಮಾ ಬ್ರಹ್ಮೇಂದ್ರೋ ರುದ್ರಃ ಪ್ರಜಾಪತಿರ್ಬೃಹಸ್ಪತಿರ್ಯೇಕೇಚ ದೇವಾ ಗಂಧರ್ವಾ ಮನುಷ್ಯಾಃ ಪಿತರೋಽಸುರಾ ಯತ್ಕಿಂಚೇದಂ ಚರಮಚರಂ ಚಾಥ ಸಮಾಸಮಾ ಪ್ರಕೃತಿರ್ವಾವ ಸಮಾಸಮಾ । ಏಷಾ ಹಿ ನಿತ್ಯಾಽಜರಾ ತದ್ವಶಾ ಚ' ಇತಿ ಸ್ಪಷ್ಟೋ ಹಿ ಮಾಧ್ಯಂದಿನಾಯನಾನಾಂ ಸಮಾದಿವಾದಃ ॥**

''ಅಥ=ಅನಂತರ ಅತಃ=ಪ್ರಯೋಜನ ಇರುವುದರಿಂದ ಸಮರು, ಅಸಮರು ಯಾರೆಂದು ಹೇಳಲಾಗುತ್ತದೆ. ಆದರಂತೆ ಸಮಾಸಮರನ್ನೂ ಹೇಳುತ್ತೇವೆ. ಪರಮಾತ್ಮನ ಅವತಾರರೂಪಗಳು 'ಸಮ'ಗಳು. ಅವುಗಳಿಂದ ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯ, ನಿಯಮನ, ಆಯತಿಃ=ಪ್ರವೃತ್ತಿಗಳು ಆಗುತ್ತವೆ. ಏಕಂ ಚ ಏತದ್ ಭವತಿ=ಅವೆಲ್ಲವೂ ಪರಸ್ಪರಾಭಿನ್ನಗಳು. ಅಸಮರು–ಬ್ರಹ್ಮ ಇಂದ್ರ ರುದ್ರ ದಕ್ಷಪ್ರಜಾಪತಿ ಬೃಹಸ್ಪತ್ಯಾಚಾರ್ಯರು, ಎಷ್ಟೆಷ್ಟು ದೇವತೆಗಳೋ, ಗಂಧರ್ವರೋ ಮನುಷ್ಯರೋ, ಪಿತೃಗಳೋ ಅಸುರರೋ ಇರುವ ಚರಾಚರಗಳೆಲ್ಲವೂ.

ಆಮೇಲೆ ಸಮಾಸಮರು—ಲಕ್ಷ್ಮೀದೇವಿಯು ಸಮಾಸಮಳು. ಅವಳು ನಿತ್ಯಳು, ಮುಪ್ಪಿಲ್ಲದವಳು; ಆದರೆ ಭಗವದಧೀನಳು.

ಹೀಗೆ ಸ್ಪಷ್ಟವಾಗಿ ಮಾಧ್ಯಂದಿನಾಯನಶ್ರುತಿಯು ಯಾರು ಸಮರು, ಅಸಮರು, ಎಂದು ನಿರೂಪಿಸಿ ಕೊನೆಯಲ್ಲಿ ಲಕ್ಷ್ಮೀದೇವಿಯನ್ನು ಸಮಾಸಮಳೆಂದು ಹೇಳಿದೆ.

## ॥ ಓಂ ಸ್ಮರ್ಯತೇ ಚ ಓಂ ॥ ೧೪ ॥

'ಮತ್ಸ್ಯಕೂರ್ಮವರಾಹಾದ್ಯಾಃ ಸಮಾ ವಿಷ್ಣೋರಭೇದತಃ ।
ಬ್ರಹ್ಮಾದ್ಯಾಸ್ತ್ವಸಮಾಃ ಪ್ರೋಕ್ತಾಃ ಪ್ರಕೃತಿಶ್ಚ ಸಮಾಸಮಾ ॥'
ಇತಿ ಚ ವಾರಾಹೇ ।

ವರಾಹಪುರಾಣವೂ ಹೇಳುತ್ತದೆ—ಮತ್ಸ್ಯ-ಕೂರ್ಮ-ವರಾಹಾದಿ ಭಗವದವತಾರರೂಪಗಳು ಭಗವಂತನಿಂದ ಅಭಿನ್ನಗಳಾದುದರಿಂದ 'ಸಮ' ಎನಿಸುತ್ತವೆ. ಬ್ರಹ್ಮಾದಿದೇವತೆಗಳು ಅಸಮರು. ಮಹಾಲಕ್ಷ್ಮಿಯು ಸಮಾಸಮಳೆನಿಸಿದ್ದಾಳೆ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

॥ ಓಂ ಸಮನಾ ಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ ಓಂ ॥ (ಅತ್ರಶ್ರಿಯಃ ವಿಷ್ಣೌ ಲಯಾಭಾವಃ ಸಾಧ್ಯತೇ । ಆದ್ಯಃ ಚಃ ನಞಃ ಅಪಕರ್ಷಕಃ । ಅಂತ್ಯಃ ಅವಧಾರಣೇ ।

ನ ಶ್ರೀಃ ಈಶೇ ಲೀಯತೇ । ಕುತಃ ? ಅನುಪೋಷ್ಯಚ=ಅನುಪಾಸ್ಯೈವ-ಸ್ವತ ಏವ, ಅಮೃತತ್ವಂ=ನಿತ್ಯಮುಕ್ತತ್ವಮ್ ಅಸ್ಯಾಃ ಇತಿ ಯಾವತ್ । ಯತಃ ಅತಃ ಇತಿ ಯೋಜ್ಯಮ್ । ತದೇವ ಕುತಃ ? ಅಸೃತ್ಯುಪಕ್ರಮಾತ್-ಸೃತಿಃ=ಸಂಸಾರಃ, ಕದಾಪಿ ಸಂಸಾರೋಪಕ್ರಮಣಾಭಾವಾತ್ । ತದಪಿ ಕುತಃ ? ಸಮನಾ-ದೇಶಕಾಲಾಭ್ಯಾಂ ವ್ಯಾಪ್ತ್ಯಾ ಸಮಃ ನಾ=ಪರಮಪುರುಷೋ ವಿಷ್ಣುಃ ಯಸ್ಯಾಃ ಸಾ । ಟೀಬಭಾವಃ ಛಾಂದಸಃ । ಹೇತುಗರ್ಭಮ್ । ಈಶವತ್ ನಿತ್ಯತ್ವಾತ್ ಸರ್ವಗತತ್ವಾತ್, ಇತಿ ಉತ್ತರೋತ್ತರಂ ಪ್ರತಿ ಪೂರ್ವಪೂರ್ವಸ್ಯ ಹೇತುತ್ವಂ ಬೋಧ್ಯಮ್ ।)

ಈ ಅಧಿಕರಣದಲ್ಲಿ ಲಕ್ಷ್ಮೀದೇವಿಗೆ ಲಯವಿಲ್ಲವೆಂದು ಹೇಳಲಾಗಿದೆ. ಲಕ್ಷ್ಮೀದೇವಿಯು ಪರಮಾತ್ಮನಲ್ಲಿ ಲಯಹೊಂದುವುದಿಲ್ಲ. ಏಕೆಂದರೆ, ಅನುಪೋಷ್ಯಚ= ಉಪಾಸನೆ ಮಾಡದೆಯೇ ಅರ್ಥಾತ್ ಸ್ವಾಭಾವಿಕವಾಗಿಯೇ ಅವಳಿಗೆ ಅಮೃತತ್ವಂ= ನಿತ್ಯಮುಕ್ತತ್ವವು ಇದೆ. ಅದಾದರೂ ಏಕೆ? ಅಸೃತ್ಯುಪಕ್ರಮಾತ್, ಸೃತಿ=ಸಂಸಾರ. ಅವಳು ಎಂದೂ ಸಂಸಾರದಲ್ಲಿ ಬಿದ್ದವಳಲ್ಲ. ಇದೂ ಏಕೆ? ಸಮನಾ=ದೇಶ-ಕಾಲಗಳ ವ್ಯಾಪ್ತಿಯ ವಿಷಯದಲ್ಲಿ ಸಮನಾದ ಪರಮಾತ್ಮನಾಗಿರುವವಳು. ಅಂದರೆ ದೇಶವ್ಯಾಪ್ತಿ ಮತ್ತು ಕಾಲವ್ಯಾಪ್ತಿಗಳಲ್ಲಿ ಅವಳು ಪರಮಾತ್ಮನಿಗೆ ಸಮಳಾಗಿದ್ದಾಳೆ.

ಹೀಗೆ ಒಂದಕ್ಕೊಂದು ಹೇತುವಾಗಿ ಈ ಸೂತ್ರದಲ್ಲಿ ವಿಶೇಷಣಗಳನ್ನು ಹೇಳಲಾಗಿದೆ.

**॥ ಓಂ ತದಪೀತೇಃ ಸಂಸಾರವ್ಯಪದೇಶಾತ್ ಓಂ ॥** (ತದಪೀತೇಃ=ಪ್ರಸ್ತುತ ಪ್ರಕೃತೌ ಲಯಸ್ಯ ಸಂಸಾರವ್ಯಪದೇಶಾತ್, ಈಶೇ ಲಯಸ್ಯ ಮುಕ್ತಿವ್ಯಪದೇಶಾತ್,

ವಿಲೀನೋ ಹಿ ಪ್ರಕೃತೌ ಸಂಸಾರಮೇತಿ
ವಿಲೀನಃ ಪರಮೇ ಹ್ಯಮೃತತ್ವಮೇತಿ ॥

ಇತಿ ಶ್ರುತೌ ಇತಿ ಉಪಲಕ್ಷಣತ್ವೇನ ಯೋಜ್ಯಮ್ । ಅತಃ ನ ಸರ್ವಸಾಮ್ಯಮ್ ಇತ್ಯರ್ಥಃ ।)

ಸರ್ವಥಾ ಸಾಮ್ಯ ಲಕ್ಷ್ಮೀದೇವಿಗೆ ಇಲ್ಲ. ಏಕೆಂದರೆ, ಪ್ರಕೃತಿಯಲ್ಲಿ ಲಯ ಹೊಂದಿದವರು, ಸಂಸಾರವನ್ನು ಪಡೆಯುತ್ತಾರೆ, ಪರಮಾತ್ಮನಲ್ಲಿ ಲಯಹೊಂದಿದವರು ಮುಕ್ತರೆನಿಸುತ್ತಾರೆ.

**॥ ಓಂ ಸೂಕ್ಷ್ಮಂ ಪ್ರಮಾಣತಶ್ಚ ತಥೋಪಲಬ್ಧೇಃ ಓಂ ॥** (ತದಿತಿ ವಿಭಜ್ಯಾಸ್ತಿ । ಆವರ್ತತೇ ಚ । ಆದ್ಯಂ ಪಂಚಮ್ಯಂತಂ ವಿಪರಿಣಾಮ್ಯಮ್ ।

ತಸ್ಯಾಃ=ಪ್ರಕೃತೇರಪಿ ತದ್=ಬ್ರಹ್ಮ ಸೂಕ್ಷ್ಮಮ್, ಪ್ರಮಾಣತಶ್ಚ=ಪರಿಮಾಣತಶ್ಚ ಜ್ಞಾನಾನಂದಾದಿಗುಣಪರಿಮಾಣೇನ ಚ ಅಧಿಕಮ್, ಇತಿ ಶೇಷಃ । ಕುತಃ ?

ಸರ್ವತಃ ಪ್ರಕೃತಿಃ ಸೂಕ್ಷ್ಮಾ ಪ್ರಕೃತೇಃ ಪರಮೇಶ್ವರಃ ॥

ಇತ್ಯಾದಿಶ್ರುತೌ ದರ್ಶನಾತ್ ಇತ್ಯರ್ಥಃ । ಅತೋಽಪಿ ನ ಸರ್ವಸಾಮ್ಯಮ್ ಇತಿ ಭಾವಃ ॥)

ತತ್–ತಸ್ಯಾಃ=ಪ್ರಕೃತಿಗಿಂತಲೂ ತತ್=ಬ್ರಹ್ಮನು ಸೂಕ್ಷ್ಮಂ=ಅಣುವಾದವನು. ಪ್ರಮಾಣತಶ್ಚ–ಪರಿಮಾಣತಶ್ಚ=ಜ್ಞಾನಾನಂದಾದಿಪರಿಮಾಣಗಳಿಂದಲೂ ಬ್ರಹ್ಮನು ಪ್ರಕೃತಿಗಿಂತ ಅಧಿಕನು. ತಥೋಪಲಬ್ಧೇಃ=ಹಾಗೆ ಶ್ರುತಿಯಲ್ಲಿರುವುದರಿಂದ.

**॥ ಓಂ ನೋಪಮರ್ದೇನಾತಃ ಓಂ ॥** (ಅತಃ=ಸಾಮ್ಯ–ತದಭಾವಯೋರೇವ ಸಾಧಿತತ್ವಾತ್ ಸ್ವಾತಂತ್ರ್ಯಾದಿಗುಣಾನುಪಮರ್ದೇನ ನಿತ್ಯಮುಕ್ತತ್ವಾದಿನಾ ಸಾಮ್ಯಮಿತ್ಯರ್ಥಃ ।)

ಅತಃ=ಪರಮಾತ್ಮನಿಂದ ಸಾಮ್ಯ ಮತ್ತು ಸಾಮ್ಯಾಭಾವವನ್ನು ಸಾಧಿಸಿರುವುದರಿಂದ ನೋಪಮರ್ದೇನ=ಸ್ವಾತಂತ್ರ್ಯಾದಿಗುಣಗಳಿಗೆ ಬಾಧವಿಲ್ಲದಂತೆ ಲಕ್ಷ್ಮೀದೇವಿಗೆ ಸಾಮ್ಯವಿದೆ.

**॥ ಓಂ ಅಸ್ಯೈ ೈವ ಚೋಪಪತ್ತೇರೂಷ್ಮಾ ಓಂ ॥** (ಅಸ್ಯೇತಿ ಪ್ರಸ್ತುತಂ ಕಿಂಚಿತ್‌ಸಾಮ್ಯಮ್ ಉಚ್ಯತೇ । ಚಃ ಸಮುಚ್ಚಯೇ । ಉಪಪತ್ತೇರಿತಿ ಷಷ್ಠೀ । ಊಷ್ಮೇತಿ ತದುಪೇತಶ್ರುತಿರುಚ್ಯತೇ ।

''ದ್ವಿಧಾ ಹೀದಮ್ ಅವದೃಶ್ಯತೇ...'' ಇತ್ಯಾದಿನಾ ಈಶಸ್ಯ ಊಷ್ಮಾವತ್ವಂ ದೇವ್ಯಾಃ ಊಷ್ಮಾವತ್ವಮನೂಷ್ಮಾವತ್ವಂ ಚ ವದಂತೀ ಶ್ರುತಿಃ ದೇವ-ದೇವ್ಯೋಃ ಅಸ್ಯೈ ೈವ=ಕಿಂಚಿತ್ ಸಾಮ್ಯಸ್ಯೈ ೈವ ಉಪಪತ್ತೇಃ ಅರ್ಥೋ ಭವತಿ=ತಸ್ಯ ಉಪಪಾದಿಕಾ ಭವತಿ ಯತೋ ಅತಃ ಕಿಂಚಿತ್ ಸಾಮ್ಯಂ ತಯೋರಿತ್ಯರ್ಥಃ ।)

ಊಷ್ಮಾ='ದ್ವಿಧಾ ಹೀದಂ'ಇತ್ಯಾದಿಯಾಗಿ ಪರಮಾತ್ಮನಿಗೆ ''ಊಷ್ಮಾವತ್ವವನ್ನೂ'' ದೇವಿಗೆ ಊಷ್ಮಾವತ್ವ-ಅನೂಷ್ಮವತ್ವವನ್ನೂ ಹೇಳುವ ಶ್ರುತಿಯು ಲಕ್ಷ್ಮೀ-ಪರಮಾತ್ಮರಿಗೆ ಅಸ್ಯೈ ೈವ=ಕಿಂಚಿತ್‌ಸಾಮ್ಯದ ಉಪಪತ್ತೇಃ=ಉಪಪತ್ತಿಯ ಪ್ರಯೋಜನಕ್ಕಾಗಿ ಆಗುತ್ತದೆ.

ಊಷ್ಮಪದಘಟಿತವಾದ ಶ್ರುತಿಯು ಕಿಂಚಿತ್‌ಸಾಮ್ಯದ ಉಪಪತ್ತಿಗೆ ಅನುಕೂಲವಾಗಿದೆ, ಎಂದು ಅಭಿಪ್ರಾಯ.

(ಊಷ್ಮಾವತ್ವ ಎಂದರೆ ಇಂದ್ರಿಯಾದ್ಯವಿಷಯತ್ವಸಾಮರ್ಥ್ಯ.)

**॥ ಓಂ ಪ್ರತಿಷೇಧಾದಿತಿ ಚೇನ್ನ ಶಾರೀರಾತ್ ಓಂ ॥** (ಅಸ್ಯೇತ್ಯಸ್ತಿ। ''ಸರ್ವೇ ಹ್ಯೇತೇಽಣವೋ ಜಾಯಂತೇ ಮ್ರಿಯಂತೇ ಚ'' ಇತ್ಯಾದಿಶ್ರುತೌ ಈಶಾದನ್ಯೇಷು ನಿತ್ಯಸರ್ವಗತತ್ವಾದ್ಯಭಾವಸ್ಯ, ಈಶೇ ತದ್ಭಾವಸ್ಯ ಚ ಉಕ್ತ್ಯಾ ಅಸ್ಯ ದೇಶಕಾಲ ವ್ಯಾಪ್ತ್ಯಾದಿನಾಪಿ ಸಾಮ್ಯಸ್ಯ ಪ್ರತಿಷೇಧಾತ್ ನ ದೇವದೇವ್ಯೋಃ ದೇಶವ್ಯಾಪ್ತ್ಯಾದಿನಾಪಿ ಸಾಮ್ಯಮ್ ಇತಿ ಚೇನ್ನ । ಶಾರೀರಾತ್=ಜೀವಾತ್ ಸಾಮ್ಯಸ್ಯೈ ೈವ ಈಶಸ್ಯ ಶ್ರುತೌ ಪ್ರತಿಷೇಧಾತ್ । ಪ್ರಕೃತೇಃ ತತ್‌ಪ್ರತಿಷೇಧಾಭಾವಾತ್ ಇತ್ಯರ್ಥಃ ।)

ಪ್ರತಿಷೇಧಾತ್=''ಸರ್ವೇ ಹ್ಯೇತೇ'' ಇತ್ಯಾದಿಶ್ರುತಿಯಲ್ಲಿ ಇತರ ಜೀವರಲ್ಲಿ ನಿತ್ಯತ್ವಸರ್ವಗತ್ವಗಳ ನಿಷೇಧವನ್ನೂ ಪರಮಾತ್ಮನಲ್ಲಿ ಅವುಗಳ ಇರುವಿಕೆಯನ್ನೂ ಹೇಳಿರುವುದರಿಂದ ಲಕ್ಷ್ಮೀ-ಪರಮಾತ್ಮರಿಗೆ ದೇಶಕಾಲವ್ಯಾಪ್ತಿಗಳ ಸಾಮ್ಯವೂ ಇಲ್ಲ. ಇತಿ ಚೇನ್ನ=ಹೀಗೆ ಹೇಳುವುದು ಸರಿಯಲ್ಲ. ಶ್ರುತಿಯಲ್ಲಿ ಶಾರೀರಾತ್=ಜೀವಸಮೂಹ ದೊಂದಿಗೆ ನಿತ್ಯತ್ವ-ಸರ್ವಗತ್ವಸಾಮ್ಯವನ್ನಷ್ಟೇ ನಿಷೇಧಿಸಲಾಗಿದೆ, ಲಕ್ಷ್ಮೀದೇವಿ ಯೊಂದಿಗಲ್ಲ.

**॥ ಓಂ ಸ್ಪಷ್ಟೋ ಹ್ಯೇಕೇಷಾಮ್ ಓಂ ॥** (ಏಕೇಷಾಂ=ಮಾಧ್ಯಂದಿನಾನಾಮ್ ''ಅಥಾಸಮಾ ಬ್ರಹ್ಮೇಂದ್ರೋ ರುದ್ರಃ'' ಇತಿ ಶ್ರುತೌ ಜೀವಾನಾಮೇವಾಸಮತ್ವೋಕ್ತಿ-ಪೂರ್ವಕಂ ಪ್ರಕೃತೇಃ ಸಮಾಸಮತ್ವವಾದಃ ಸ್ಪಷ್ಟೋಽಸ್ತಿ ಯತೋಽತ ಇತ್ಯರ್ಥಃ ।)

ಏಕೇಷಾಂ=ಮಾಧ್ಯಂದಿನಶಾಖೆಯವರ ಶ್ರುತಿಯಲ್ಲಿ ಲಕ್ಷ್ಮೀದೇವಿಗೆ ಪರಮಾತ್ಮನೊಂದಿಗೆ ಸಾಮ್ಯ–ವೈಷಮ್ಯಗಳು ಸ್ಪಷ್ಟಃ=ಸ್ಫುಟವಾಗಿದೆ.

**॥ ಓಂ ಸ್ಮರ್ಯತೇ ಚ ಓಂ ॥** ('ಬ್ರಹ್ಮಾದ್ಯಾಸ್ತ್ವಸಮಾ ಪ್ರೋಕ್ತಾಃ ಪ್ರಕೃತಿಶ್ಚ ಸಮಾಸಮಾ' ಇತಿ ಸ್ಮರ್ಯತೇ ।)

ಬ್ರಹ್ಮಾದ್ಯಾಃ ಎಂಬ ಸ್ಮೃತಿಯಲ್ಲಿ ಲಕ್ಷ್ಮೀದೇವಿಗೆ ಸಮಾಸಮತ್ವವು ಹೇಳಲ್ಪಟ್ಟಿದೆ.

## ಶಾಂಕರಭಾಷ್ಯದಲ್ಲಿ ಸಮಾನಾಧಿಕರಣ

**॥ ಸಮಾನಾ ಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ ॥** ದ್ವೈತಭಾಷ್ಯದಲ್ಲಿ 'ಸಮನಾ' ಎಂದು ಸೂತ್ರಪಾಠ. ಅದ್ವೈತಭಾಷ್ಯಪಾಠ– 'ಸಮಾನಾ' ಎಂದು. ಜ್ಞಾನಿಗಳಿಗೂ ಅಜ್ಞಾನಿಗಳಿಗೂ ದೇಹತ್ಯಾಗ ಮಾಡುವವರೆಗಿನ ಅಂದರೆ ಸೃತ್ಯುಪಕ್ರಮಪರ್ಯಂತವಾದ ಗತಿ ಸಮಾನವಾದುದು. ಅದು ಹಿಂದೆ ಹೇಳಿದಂತೆ. ಸೃತಿ ಎಂದರೆ ಮಾರ್ಗ. (ನೈತೇ ಸೃತೀ ಪಾರ್ಥ ಜಾನನ್–ಗೀತಾ.) ಸೃತಿಯ ಉಪಕ್ರಮ= ದೇವಯಾನಮಾರ್ಗದ ಆರಂಭ. ಆ=ತಾವತ್‌ಪರ್ಯಂತ ಸಮಾನಾ=ಗತಿಯು ಒಂದೇರೀತಿ. ಆಮೇಲೆ ಜ್ಞಾನಿಯು ಜ್ಞಾನಪ್ರಕಾಶಿತವಾದ ನಾಡೀದ್ವಾರಾ ದೇವಯಾನ ಮಾರ್ಗಸೇರಿ ಆಭೂತಸಂಪ್ಲವಸ್ಥಾನಕ್ಕೆ ಹೋಗುತ್ತಾನೆ. ಇಲ್ಲಿ ಜ್ಞಾನಿ ಎಂದರೆ ದಹರಾದಿ ವಿದ್ಯೋಪಾಸಕರು. ಬ್ರಹ್ಮವಿದ್ಯೆಯ ಫಲ ಮಾರ್ಗಪ್ರಾಪ್ತಿಯಲ್ಲ. ಇದ್ದಲ್ಲೇ ಬ್ರಹ್ಮೈಕ್ಯಪ್ರಾಪ್ತಿ. ಅನುಪೋಷ್ಯ=ಅದಗ್ಧ್ವಾ–ಅವಿದ್ಯಾಕ್ಲೇಷಾದಿಗಳನ್ನು ಸಂಪೂರ್ಣವಾಗಿ ಭಸ್ಮ ಮಾಡದವರಿಗೆ ಆಪೇಕ್ಷಿಕವಾದ ಅಮೃತತ್ವ ಪ್ರಾಪ್ತಿ. ಬ್ರಹ್ಮಜ್ಞಾನಿಗಳಿಗಲ್ಲ.

**ವಿಮರ್ಶೆ**—ಪರವಿದ್ಯೆಯು ಪ್ರಸ್ತುತವಾದುದರಿಂದ ಅದರ ಫಲವನ್ನು ಇಲ್ಲಿ ಹೇಳಬೇಕು. ಅದನ್ನು ಬಿಟ್ಟು ಅಪರವಿದ್ಯೆಯ ಫಲವನ್ನು ಹೇಳುವುದು ಸಂಗತವಲ್ಲ. ಪರಾಪರವಿದ್ಯಾಫಲವನ್ನು ಹೇಳುವುದಕ್ಕಾಗಿ ಈ ಅಧ್ಯಾಯ ಇದೆ, ಎಂದು ಶಾಂಕರ ಭಾಷ್ಯದಲ್ಲಿ ಹೇಳಲಾಗಿದೆಯಾದರೂ ಅಪರವಿದ್ಯೆಯ ಫಲವನ್ನು ಹೇಳದಿರುವುದು ಅದಕ್ಕೆ ವಿರುದ್ಧವಾಗುತ್ತದೆ.

## ಶಾಂಕರಭಾಷ್ಯದಲ್ಲಿ ಸಂಸಾರವ್ಯಪದೇಶಾಧಿಕರಣ

**॥ ತದಾಪೀತೇಃ ಸಂಸಾರವ್ಯಪದೇಶಾತ್ ॥** ''ಪ್ರಾಣಸ್ತೇಜಸಿ ತೇಜಃ ಪರಸ್ಯಾಂ ದೇವತಾಯಾಂ'' ಎಂಬ ಛಾಂದೋಗ್ಯಶ್ರುತಿಯಲ್ಲಿ ತೇಜಃಪ್ರಭೃತಿ ಭೂತಸೂಕ್ಷ್ಮಗಳು, ಜೀವ, ಪ್ರಾಣ ಇವರೆಲ್ಲರೂ ಪರದೇವತೆಯಲ್ಲಿ ಅಂದರೆ ಪರಬ್ರಹ್ಮನಲ್ಲಿ ಲಯಹೊಂದುತ್ತಾರೆ, ಎನ್ನಲಾಗಿದೆ. ಈ ಲಯ ಸಬೀಜಲಯ, ನಿದ್ರೆಯಂತೆ. ಆತ್ಯಂತಿಕ ಲಯವಲ್ಲ. ತತ್=ಭೂತಸೂಕ್ಷ್ಮಗಳು ಆಪೀತೇಃ=ಜ್ಞಾನ ನಿಮಿತ್ತವಾದ ಸಂಸಾರದ ಬಿಡುಗಡೆಯಾಗುವವರೆಗೂ ಜೀವನೊಂದಿಗೆ ಇರುತ್ತವೆ. ಸಂಸಾರವ್ಯಪದೇಶಾತ್= ಮರಣ ಹೊಂದಿದ ವ್ಯಕ್ತಿಗೆ,

ಯೋನಿಮನ್ಯೇ ಪ್ರಪದ್ಯಂತೇ ಶರೀರತ್ವಾಯ ದೇಹಿನಃ ॥ (ಕ.5.7)

ಎಂದು ಮತ್ತೆ ಸಂಸಾರವನ್ನು ಹೇಳಿರುವುದರಿಂದ. ಆತ್ಯಂತಿಕ ಲಯವಾದಲ್ಲಿ ಇದು ಸಾಧ್ಯವಿಲ್ಲ.

**॥ ಸೂಕ್ಷ್ಮಂ ಪ್ರಮಾಣತಶ್ಚ ತಥೋಪಲಬ್ಧೇಃ ॥** ಇತರಭೂತಸೂಕ್ಷ್ಮಸಹಿತ ವಾದ, ಜೀವಾಶ್ರಯವಾದ ತೇಜೋದ್ರವ್ಯವು ಪ್ರಮಾಣತಶ್ಚ=ಗಾತ್ರದಿಂದಲೂ ಸೂಕ್ಷ್ಮಂ=ಸೂಕ್ಷ್ಮವಾಗಿರುವುದು. ತಥಾ ಉಪಲಬ್ಧೇಃ= ಸೂಕ್ಷ್ಮ ಶರೀರಕನಾದ ಜೀವನು ದೇಹದ ಅತಿಸೂಕ್ಷ್ಮನಾಡಿಯಿಂದ ಹೊರಹೋಗುತ್ತಾನೆ ಎಂದು ಉಪನಿಷತ್ತುಗಳಲ್ಲಿ ಹೇಳಿರುವುದರಿಂದ ಸೂಕ್ಷ್ಮತ್ವವು ತಿಳಿಯುತ್ತದೆ. ಅದು ಸೂಕ್ಷ್ಮವಾದ ಕಾರಣ ನಾಡೀ ಸಂಚಾರವು ಉಪಪನ್ನವಾಗುತ್ತದೆ, ಬೆಳಕಿನಂತೆ 'ಸ್ವಚ್ಛ'ವಾದುದರಿಂದ ಅದಕ್ಕೆ ತಡೆಯೂ ಇರುವುದಿಲ್ಲ. ಆದ್ದರಿಂದಲೇ ದೇಹದಿಂದ ಹೊರಹೋಗುವಾಗ ಪಕ್ಕದವರಿಗೆ ಕಾಣುವುದಿಲ್ಲ.

**॥ ನೋಪಮರ್ದೇನಾತಃ ॥** ಅತ ಏವ=ಸೂಕ್ಷ್ಮವಾದುದರಿಂದಲೇ ಉಪ ಮರ್ದೇನ=ಶರೀರದ ದಾಹಾದಿನಿಮಿತ್ತವಾದ ಆಘಾತಗಳಿಂದ ನ=ಸೂಕ್ಷ್ಮದೇಹವು ನಾಶವಾಗುವುದಿಲ್ಲ.

**॥ ಅಸ್ಯೈವ ಚೋಪಪತ್ತೇರೂಷ್ಮಾ ॥** ಅಸ್ಯೈವ=ಈ ಸೂಕ್ಷ್ಮಶರೀರದ್ದೇ ಏಷಃ=ಸ್ಥೂಲಶರೀರದಲ್ಲಿ ಅನುಭವಕ್ಕೆ ಬರುವ ಊಷ್ಮಾ=ಬಿಸಿ. ಉಪಪತ್ತೇಃ=ಆ ಸೂಕ್ಷ್ಮ ಶರೀರವು ಇರುವವರೆಗೆ ದೇಹವು ಬಿಸಿಯಾಗಿರುತ್ತದೆ, ಹೋದಮೇಲೆ ತಣ್ಣಗಾಗುತ್ತದೆ.

ಶ್ರುತಿಯೂ ಹೇಳುತ್ತದೆ—'ಉಷ್ಣ ಏಷ ಜೀವಿಷ್ಯನ್ ಶೀತೋ ಮರಿಷ್ಯನ್'

**ವಿಮರ್ಶೆ**—'ವಾಜ್ ಮನಸಿ ಸಂಪದ್ಯತೇ' ಇತ್ಯಾದಿ ಪೂರ್ವೋಕ್ತ ಲಯಗಳಲ್ಲಿ ವೃತ್ತಿಲಯ ಸ್ವರೂಪಲಯವಲ್ಲ ಎಂದು ಸಿದ್ಧಾಂತ ಮಾಡಲಾಗಿದೆ. ಅದಕ್ಕನುಗುಣವಾಗಿ ''ತೇಜಃ ಪರಸ್ಯಾಂ ದೇವತಾಯಾಮ್'' ಎಂಬಲ್ಲೂ ವೃತ್ತಿಲಯವೇ ಆಗಬೇಕು, ಸ್ವರೂಪಲಯವನ್ನು ಪೂರ್ವಪಕ್ಷ ಮಾಡುವುದಕ್ಕೆ ಅವಕಾಶವಿಲ್ಲ. ಅಷ್ಟೇ ಅಲ್ಲ, ಪರದೇವತೆಯು ತೇಜಸ್ಸಿಗೆ ಸಾಕ್ಷಾತ್ ಪ್ರಕೃತಿಯಲ್ಲ, ಆಕಾಶಾದಿದ್ವಾರಾ ಪ್ರಕೃತಿ. ಹೀಗಿರುವಾಗ ತೇಜಸ್ಸಿಗೆ ಪರದೇವತೆಯಲ್ಲಿ ಸ್ವರೂಪಲಯವಾಗುವುದು ಹೇಗೆ?

## ಶಾಂಕರಭಾಷ್ಯದಲ್ಲಿ ಪ್ರತಿಷೇಧಾಧಿಕರಣ

**॥ ಪ್ರತಿಷೇಧಾದಿತಿ ಚೇನ್ನ ಶಾರೀರಾತ್ ॥** ಅಜ್ಞಾನಿಗಳಿಗೆ ಮರಣೋತ್ತರದಲ್ಲಿ ಸಂಸಾರಪ್ರಾಪ್ತಿಯನ್ನು ಹೇಳಿ ಇಲ್ಲಿ ಜ್ಞಾನಿಗಳಿಗೆ ಗತಿ–ಉತ್ಕ್ರಾಂತಿಗಳಿಲ್ಲ ಎನ್ನುವುದನ್ನು ಸಮರ್ಥಿಸಲಾಗಿದೆ. ಪರಬ್ರಹ್ಮಜ್ಞಾನಿಗೆ ಗತಿ–ಉತ್ಕ್ರಾಂತಿಗಳು ಇಲ್ಲ, ಎಂದು ಹಿಂದೆ (ಸೂ.4.2.7)ಹೇಳಲಾಗಿದೆ. ಆದರೆ ಬೃಹದಾರಣ್ಯಕದಲ್ಲಿ ಹೀಗಿದೆ—

ಅಕಾಮಯಮಾನಃ ಯೋऽಕಾಮೋ ನಿಷ್ಕಾಮಃ ಆಪ್ತಕಾಮಃ
ಆತ್ಮಕಾಮೋ ಭವತಿ ನ ತಸ್ಯಪ್ರಾಣಾಃ ಉತ್ಕ್ರಾಮಂತಿ
ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ॥ (ಬೃ.4.4.6)

ಆತ್ಮಕಾಮನ ದೇಹದಿಂದ ಪ್ರಾಣಗಳ ಉತ್ಕ್ರಾಂತಿಯನ್ನು ನಿಷೇಧ ಮಾಡಿರುವುದರಿಂದ ಆತ್ಮಜ್ಞಾನಿಯ ದೇಹದಿಂದ ಪ್ರಾಣಗಳ ಉತ್ಕ್ರಾಂತಿಯೂ ಇಲ್ಲ, ಎಂದರೆ, ಇದು ಸರಿಯಲ್ಲ. ಶಾರೀರಾತ್=ಆ ಶ್ರುತಿಯಲ್ಲಿ ಶಾರೀರ ಆತ್ಮನಿಂದ ಪ್ರಾಣಗಳ ಉತ್ಕ್ರಾಂತಿಯನ್ನು ನಿಷೇಧಮಾಡಲಾಗಿದೆ, ಶರೀರದಿಂದಲ್ಲ. ''ನ ತಸ್ಮಾತ್ ಪ್ರಾಣಾ ಉತ್ಕ್ರಾಮಂತಿ'' ಎಂದು ಶಾಖಾಂತರದಲ್ಲಿ ಬ್ರಹ್ಮಜ್ಞಾನಿಯಾದ ಆತ್ಮನಿಂದ ಪ್ರಾಣಗಳ ಉತ್ಕ್ರಾಂತಿಯನ್ನು ನಿಷೇಧ ಮಾಡಲಾಗಿದೆ. ಆದ್ದರಿಂದ ಪರವಿದ್ಯಾಜ್ಞಾನಿಗೂ ದೇಹದಿಂದ ಅಜ್ಞಾನಿಗಳಂತೆಯೇ ಉತ್ಕ್ರಮಣ ಇದೆ. ಉತ್ಕ್ರಮಣ ನಿಷೇಧ ಆತ್ಮನಿಂದ ಪ್ರಾಣಗಳಿಗೆ ಉತ್ಕ್ರಮಣ ಇಲ್ಲ ಎಂದಷ್ಟೇ ಹೇಳುತ್ತದೆ.

ಇದು ಪೂರ್ವಪಕ್ಷ ಸೂತ್ರ–ಸಿದ್ಧಾಂತ ಸೂತ್ರ ಮುಂದಿನದು.

**॥ ಸ್ಪಷ್ಟೋ ಹ್ಯೇಕೇಷಾಮ್ ॥** ಏಕೇಷಾಂ=ಬೃಹದಾರಣ್ಯಕಶಾಖೆಯಲ್ಲಿ ಸ್ಪಷ್ಟಃ=ಜ್ಞಾನಿಗೆ ಉತ್ಕ್ರಮಣ ಇಲ್ಲವೆನ್ನುವುದು ಸ್ಪಷ್ಟವಾಗಿದೆ. ಅಲ್ಲಿ ಆರ್ತಭಾಗನ ಪ್ರಶ್ನೆ—''ಯತ್ರಾಯಂ ಪುರುಷೋ ಮ್ರಿಯತೇ ಉದಸ್ಮಾತ್ ಪ್ರಾಣಾಃ ಕ್ರಾಮಂತ್ಯ ಹೋ ನೇತಿ'' (ಬೃ.3.2.11) ''ನೇತಿ ಹೋವಾಚ ಯಾಜ್ಞವಲ್ಕ್ಯಃ'' ಯಾಜ್ಞವಲ್ಕ್ಯರು

ಜ್ಞಾನಿಗೆ ಉತ್ಕ್ರಮಣ ಇಲ್ಲ, ಎಂದರು. ಜ್ಞಾನಿಯ ದೇಹ ''ಉಚ್ಛ್ವಯತಿ ಆಧ್ಮಾಯತಿ ಆಧ್ಮಾತೋ ಮೃತಃ ಶೇತೇ'' ಉಚ್ಛ್ವಯತಿ=ಬಾಹ್ಯದೇಹವು ಊದಿಕೊಳ್ಳುತ್ತದೆ, ಆಧ್ಮಾಯತಿ=ಒದ್ದೆಯಾದ ನಗಾರಿಯಂತೆ ಶಬ್ದ ಮಾಡುತ್ತದೆ, ಎಂದು ಹೇಳಿ ''ನ ತಸ್ಮಾತ್ ಪ್ರಾಣಾ ಉತ್ಕ್ರಾಮಂತಿ'' ಎಂದು ಆ ದೇಹವನ್ನೇ ಪರಾಮರ್ಶಮಾಡಿ ದೇಹದಿಂದ ಪ್ರಾಣದ ಉತ್ಕ್ರಮಣವಿಲ್ಲ. ದೇಹದಲ್ಲೇ ಲಯವಾಗುತ್ತದೆ, ಎನ್ನಲಾಗಿದೆ. ಇದು ಆತ್ಮನಿಂದ ಪ್ರಾಣದ ಉತ್ಕ್ರಮಣ ನಿಷೇಧವಲ್ಲ.

**॥ ಸ್ಮರ್ಯತೇ ಚ ॥** ಮಹಾಭಾರತದಲ್ಲಿ ಪರವಿದ್ಯಾಜ್ಞಾನಿಗೆ 'ಗತಿ' ಇಲ್ಲ ಎಂದು ಹೇಳಲಾಗಿದೆ—

ಸರ್ವಭೂತಾತ್ಮಭೂತಸ್ಯ ಸರ್ವಭೂತಾನಿ ಪಶ್ಯತಃ ।
ದೇವಾ ಅಪಿ ಮಾರ್ಗೇ ಮುಹ್ಯಂತಿ ಅಪದಸ್ಯಪದೈಷಿಣಃ ॥

ಸರ್ವಭೂತಾತ್ಮನಾದ ಬ್ರಹ್ಮಭಾವವನ್ನು ಹೊಂದಿದ ಜ್ಞಾನಿಯು ಅಪದ= ಪ್ರಾಪ್ಯವಾದ ಸ್ಥಾನವಿಶೇಷದಿಂದ ಹೀನನಾಗಿದ್ದಾನೆ, ಪದೈಷಿಣಃ=ಮಾರ್ಗವನ್ನು ತಿಳಿಯ ಬಯಸುವ ದೇವಾ ಅಪಿ=ದೇವತೆಗಳೂ ಮುಹ್ಯಂತಿ=ಮಾರ್ಗವನ್ನು ತಿಳಿಯಲಾರರು.

ಬೃಹದಾರಣ್ಯಕದಲ್ಲಿ–ತಮುತ್ಕ್ರಾಂತಂ ಪ್ರಾಣೋಽನೂತ್ಕ್ರಾಮತಿ ।
ಅನ್ಯನ್ನವತರಂ ಕಲ್ಯಾಣತರಂ ರೂಪಂ ಕುರುತೇ ।
ಪ್ರಾಪ್ಯಾಂತಂ ಕರ್ಮಣಸ್ತಸ್ಯ ಯತ್ಕಿಂಚೇಹ ಕರೋತ್ಯಯಮ್ ।
ತಸ್ಮಾಲ್ಲೋಕಾನ್ ಪುನರೇತ್ಯಸ್ಮೈ ಲೋಕಾಯ ಕರ್ಮಣೇ ॥

ಇತಿತು ಕಾಮಯಮಾನಃ ॥ ಎಂದು ಅಜ್ಞಾನಿಗಳ ಬಗ್ಗೆ ಹೇಳಿ ''ಅಥಾಕಾಮಯಮಾನಃ...'' ಎಂದು ಬ್ರಹ್ಮಜ್ಞಾನಿಯ ಬಗ್ಗೆ ಉತ್ಕ್ರಾಂತಿ ಇಲ್ಲದೆ ಬ್ರಹ್ಮಪ್ರಾಪ್ತಿಯನ್ನು ಹೇಳಲಾಗಿದೆ. ಆದ್ದರಿಂದ ಬ್ರಹ್ಮಜ್ಞಾನಿಗಳಿಗೆ ಉತ್ಕ್ರಾಂತಿ–ಮಾರ್ಗಗಳು ಇಲ್ಲ.

ವಿಮರ್ಶೆ—ಉಪನಿಷತ್ತಿನಲ್ಲಿ 'ತಯೋರ್ಧ್ವಮಾಯನ್ ಅಮೃತತ್ವಮೇತಿ' (ಕಠ.2.6.13) ಎಂದು ಉತ್ಕ್ರಾಂತಿಯು ಹೇಳಲ್ಪಟ್ಟಿದೆ. ''ನ ತಸ್ಯಪ್ರಾಣಾ ಉತ್ಕ್ರಾಮಂತಿ'' ಎಂಬ ಶ್ರುತಿಯಲ್ಲಿ ಜ್ಞಾನಿಗೆ ಉತ್ಕ್ರಾಂತ್ಯಭಾವವನ್ನು ಹೇಳಲಾಗಿಲ್ಲ. ಜ್ಞಾನಿಯ ಪ್ರಾಣಗಳಿಗೆ ಇಂದ್ರಿಯಗಳಿಗೆ ಉತ್ಕ್ರಾಂತಿ ಇಲ್ಲ ಎಂದಿಷ್ಟೇ ಹೇಳಲಾಗಿದೆ. ಜ್ಞಾನಿಗೆ ಉತ್ಕ್ರಾಂತಿ ಇಲ್ಲವೆಂದೇನೂ ಅದರ ಅರ್ಥವಲ್ಲ. ಅಜ್ಞಾನಿಗಳಂತೆ ಇಂದ್ರಿಯಗಳು ಭಾಗತಃ ಅವನೊಂದಿಗೆ ಹೋಗದಿರುವುದರಿಂದಲೂ ಇದು ಉಪಪನ್ನವಾಗುತ್ತವೆ. 'ಅತ್ರೈವ

ಸಮವನೀಯಂತೇ=ಇಂದ್ರಿಯಗಳು ಕಾದ ಕಬ್ಬಿಣದಲ್ಲಿ ಬಿದ್ದ ನೀರಿನಂತೆ ದೇಹದಲ್ಲೇ ಕ್ಷಯಿಸುತ್ತವೆ' ಇಂದ್ರಿಯಗಳು ದೇಹದಲ್ಲೇ ವಿಲಯವನ್ನು ಹೊಂದುತ್ತವೆ, ಬ್ರಹ್ಮನಾಡಿಯಿಂದ ಜೀವನು ನಿರ್ಗಮಿಸುವಾಗ ಅಜ್ಞಾನಿಗಳೊಂದಿಗೆ ಹೋಗುವಂತೆ ಇಂದ್ರಿಯಗಳಿಗೆ ನಿರ್ಗಮನವಿಲ್ಲ. ಜ್ಞಾನಿ ಮುಂದೆ ಅರ್ಚಿರಾದಿಮಾರ್ಗದಿಂದ ಹೋಗುತ್ತಾನೆ. ಹೀಗೆ ಜ್ಞಾನಿಗಳಾದ ಮನುಷ್ಯೋತ್ತಮರಿಗೂ ಉತ್ಕ್ರಾಂತಿ ಇದೆ. ಅದ್ವೈತದಲ್ಲಿ ಬ್ರಹ್ಮಭಾವವೇ ಮೋಕ್ಷ, ಬ್ರಹ್ಮ ಸರ್ವಗತ. ಹೀಗಾಗಿ ಜ್ಞಾನಿಗೆ ಉತ್ಕ್ರಾಂತಿ ಇಲ್ಲ, ಎಂದು ಸಾಧಿಸಲಾಗಿದೆ.

**ಇಲ್ಲಿಗೆ ಸಮನಾಧಿಕರಣವು ಮುಗಿಯಿತು.**

## ೭. ಪರಾಧಿಕರಣಮ್

**॥ ಓಂ ತಾನಿ ಪರೇ ತಥಾ ಹ್ಯಾಹ ಓಂ ॥ ೧೫ ॥**

**ಪ್ರಾಣದ್ವಾರೇಣ ಸರ್ವಾಣಿ ದೈವಾ(ವತಾ)ನಿ ಪರಮಾತ್ಮನಿ ಲೀಯಂತೇ ।**
**'ಸರ್ವೇ ದೇವಾಃ ಪ್ರಾಣಮಾವಿಶ್ಯ ದೇವೇ ಮುಕ್ತಾ ಲಯಂ ಪರಮೇ ಯಾಂತ್ಯಚಿಂತ್ಯೇ' ಇತಿ ಹಿ ಕೌಷಾರವಶ್ರುತಿಃ ॥**

ಚತುರ್ಮುಖನ ಮೂಲಕ ಎಲ್ಲಾ ದೇವತೆಗಳೂ ಪರಮಾತ್ಮನಲ್ಲಿ ಲಯ ಹೊಂದುತ್ತಾರೆ. ಕೌಶಾರವಶ್ರುತಿಯಲ್ಲಿದೆ—ಎಲ್ಲಾ ದೇವತೆಗಳೂ ಚತುರ್ಮುಖನಲ್ಲಿ ಸೇರಿ ಅಚಿಂತ್ಯನಾದ ಪರಮಾತ್ಮನ ಬಳಿ ಹೋಗಿ ಮುಕ್ತರಾಗುತ್ತಾರೆ.

ವಿವರಣೆ—ಲಯಕ್ರಮವನ್ನು ಹೇಳುವಾಗ ಪ್ರಾಸಂಗಿಕವಾಗಿ ಲಕ್ಷ್ಮೀದೇವಿಯ ಸ್ವರೂಪನಿರೂಪಣೆಯನ್ನು ಮಾಡಲಾಯಿತು. ಅದನ್ನು ಮುಗಿಸಿ ಈ ಅಧಿಕರಣದಲ್ಲಿ ಅಂತಿಮಲಯವನ್ನು ಹೇಳಲಾಗಿದೆ. ಎಲ್ಲಾ ದೇವತೆಗಳು ಚತುರ್ಮುಖ ಬ್ರಹ್ಮದೇವರಲ್ಲಿ ಲಯ ಹೊಂದಿರುವುದರಿಂದ ಚತುರ್ಮುಖನು ಪರಮಾತ್ಮನಲ್ಲಿ ಲಯಹೊಂದಿದಾಗ ದೇವತೆಗಳೂ ಅವನಲ್ಲೇ ಲಯವನ್ನು ಹೊಂದುತ್ತಾರೆ.

### ದ್ವೈತದರ್ಶನದಲ್ಲಿ ಸೂತ್ರಾರ್ಥ

॥ ಓಂ ತಾನಿ ಪರೇ ತಥಾ ಹ್ಯಾಹ ಓಂ ॥(ಅತ್ರ ವಿರಿಂಚೇತರ ದೇವಾನಾಂ ಈಶೇ

ಲಯಃ ಉಚ್ಯತೇ। 'ತಾನಿ=ಭೂತೇಷು ಲೀಯಂತೇ' ಇತ್ಯುಕ್ತ ಸರ್ವದೈವತಾನಿ ಶ್ರುತ್ಯಂತರೋಕ್ತ ದ್ವಾರಾಂತರ–ಪ್ರವೇಶಪೂರ್ವಕ–ವಿರಿಂಚದ್ವಾರಾ ಪರೇ=ಪರಮಾತ್ಮನಿ ಲೀಯಂತೇ। ನತು ವಿರಿಂಚಾದಿ ಸ್ವಬಿಂಬೇ ಏವ। ಯೇನ ತೇಷಾಂ ಮುಕ್ತಿಃ ನ ಸ್ಯಾತ್। ಕುತಃ? ಹಿ=ಯಸ್ಮಾತ್ ''ಸರ್ವೇ ದೇವಾ'' ಇತಿ ಶ್ರುತಿಃ ತಥಾ ಆಹ ತತಃ, ಇತ್ಯರ್ಥಃ।)

ಇಲ್ಲಿ ಚತುರ್ಮುಖೇತರದೇವತೆಗಳಿಗೆ ಪರಮಾತ್ಮನಲ್ಲಿ ಲಯವನ್ನು ಹೇಳಲಾಗಿದೆ. ತಾನಿ=''ತಾನಿ ಭೂತೇಷು ಲೀಯಂತೇ'' ಎಂದು ಪ್ರಸ್ತುತರಾದ ಎಲ್ಲಾ ದೇವತೆಗಳೂ ಪರೇ=ಪರಮಾತ್ಮನಲ್ಲಿ ಲಯಹೊಂದುತ್ತಾರೆ. ಹಿ=ಏಕೆಂದರೆ, 'ಸರ್ವೇ ದೇವಾಃ' ಎಂಬ ಶ್ರುತಿಯು ತಥಾ ಆಹ=ಹಾಗೆ ಹೇಳುತ್ತದೆ.

## ಶಾಂಕರಭಾಷ್ಯದಲ್ಲಿ ವಾಗಾದಿ ಲಯಾಧಿಕರಣಮ್

**॥ ತಾನಿ ಪರೇ ತಥಾ ಹ್ಯಾಹ ॥** ತಾನಿ=ಇಂದ್ರಿಯಗಳೆಲ್ಲವೂ ಪರೇ=ಪರಮಾತ್ಮನಲ್ಲಿ ಲಯವನ್ನು ಹೊಂದುತ್ತವೆ. ಜ್ಞಾನಿಗಳ ದೃಷ್ಟಿಯಲ್ಲಿ ಬ್ರಹ್ಮಾತಿರಿಕ್ತವಾದುದೆಲ್ಲವೂ ಬ್ರಹ್ಮನಲ್ಲೇ ಲಯವನ್ನು ಹೊಂದುವುದರಿಂದ ಅವನ ಇಂದ್ರಿಯಾದಿಗಳೆಲ್ಲವೂ ಬ್ರಹ್ಮನಲ್ಲೇ ಲಯವಾಗುತ್ತವೆ. ತಥಾಹ್ಯಾಹ=ಶ್ರುತಿಯು ಹಾಗೇ ಹೇಳುತ್ತದೆ—

ಏವಮೇವಾಸ್ಯ ಪರಿದ್ರಷ್ಟುಃ ಇಮಾಃ ಷೋಡಶಕಲಾಃ ಪುರುಷಾಯಣಾಃ

ಪುರುಷಂ ಪ್ರಾಪ್ಯಾಸ್ತಂ ಗಚ್ಛಂತಿ (ಪ್ರಶ್ನ–6.5)

**ವಿಮರ್ಶೆ**—ಪರಮತದಂತೆ ಶುಕ್ತಿರಜತವು ಶುಕ್ತಿಜ್ಞಾನದಿಂದ ವಿಲಯವಾಗುವಂತೆ ಜ್ಞಾನಿಯ ಇಂದ್ರಿಯಗಳೂ ಲಯವಾಗುತ್ತವೆ ಎಂದು ಉಪನಿಷತ್ತು ಹೇಳಬೇಕು. ಆದರೆ, ಬೃಹದಾರಣ್ಯಕೋಪನಿಷತ್ತು ಹಾವಿನ ಉದಾಹರಣೆಯನ್ನು ಕೊಟ್ಟಿದೆ.

ತದ್ಯಥಾಹಿರ್ನಿಲಯನೀ ವಲ್ಮೀಕೇ ಮೃತಾ
ಪ್ರತ್ಯಸ್ತಾ ಶಯೀತ ಏವಮೇವೇದಂ ಶರೀರಂ ಶೇತೇ ॥ (4.4.7)

ಸತ್ತ ಸರ್ಪದ ದೇಹ ಕಾಣುವಂತೆ ಜ್ಞಾನಿಯ ದೇಹವೂ ಕಾಣುತ್ತಿರುವುದರಿಂದ ಬ್ರಹ್ಮನಲ್ಲಿ ಲಯಹೊಂದುತ್ತದೆ, ಎಂದು ಹೇಳುವುದು ಉಚಿತವಲ್ಲ.

## ವಿಶಿಷ್ಟಾದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**ರಾಮಾನುಜಭಾಷ್ಯ**ದಲ್ಲಿ 'ಸಮಾನಾ' ಇತ್ಯಾದಿ ಏಳನೇ ಸೂತ್ರದಿಂದ 'ಸ್ಮರ್ಯತೇ ಚ' ಎಂಬ ಸೂತ್ರದವರೆಗೆ ಒಂದೇ ಅಧಿಕರಣ.

**॥ ಸಮಾನಾ ಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ ॥** ''ಆಸ್ಮತ್ಯುಪ ಕ್ರಮಾತ್'' ಎಂದರೆ ನಾಡೀಪ್ರವೇಶಕ್ಕಿಂತ ಮೊದಲಿನ ಉತ್ಕ್ರಾಂತಿಯು ಜ್ಞಾನಿಗಳಿಗೂ ಅಜ್ಞಾನಿಗಳಿಗೂ ಸಮಾನ. ಆಮೇಲೆ ಜ್ಞಾನಿಯು ದೇಹದ ಬ್ರಹ್ಮನಾಡೀದ್ವಾರಾ ಊರ್ಧ್ವಮುಖನಾಗಿ ಬ್ರಹ್ಮರಂಧ್ರದ ಮೂಲಕ ಹೊರಬಂದು ಅಮೃತತ್ವವನ್ನು ಪಡೆಯುತ್ತಾನೆ. ಕಠಶ್ರುತಿಯಲ್ಲಿ 'ಯದಾ ಸರ್ವೇ...ಅತ್ರ ಬ್ರಹ್ಮ ಸಮಶ್ನುತೇ' ಎಂದು ಉತ್ಕ್ರಮಣ ಇಲ್ಲದೆ ಇಲ್ಲಿಯೇ ಬ್ರಹ್ಮಪ್ರಾಪ್ತಿಯನ್ನು ಹೇಳಲಾಗಿದೆ. ಅದು ಅನುಪೋಷ್ಯ=ದೇಹೇಂದ್ರಿಯಾದಿ ಸಂಬಂಧಗಳು ಉಚ್ಛೇದವಾಗುವ ಮೊದಲೇ ಉತ್ತರ ಪೂರ್ವಾಘಗಳ ಅಶ್ಲೇಷ-ವಿನಾಶರೂಪವಾದ ಅಮೃತತ್ವ. ಅರ್ಥಾತ್ ಉಪಾಸನಾಕಾಲ ದಲ್ಲಿ ಆಗುವ ಬ್ರಹ್ಮಾನುಭವರೂಪವಾದ ಅಮೃತತ್ವ. ಮೋಕ್ಷರೂಪವಾದ ಅಮೃತತ್ವವಲ್ಲ.

**॥ ತದಾಪೀತೇಃ ಸಂಸಾರವ್ಯಪದೇಶಾತ್ ॥**''ಅತ್ರ ಬ್ರಹ್ಮ ಸಮಶ್ನುತೇ'' ಎಂಬ ಶ್ರುತಿಗೆ ಉಪಾಸನಾಕಾಲದ ಬ್ರಹ್ಮಾನುಭವ, ಎಂದೇ ಅರ್ಥವನ್ನು ಮಾಡಬೇಕು. ಆಪೀತೇಃ-ಅಪೀತಿಃ ಎಂದರೆ ಬ್ರಹ್ಮಪ್ರಾಪ್ತಿ. ಅದು ಅರ್ಚಿರಾದಿಮಾರ್ಗದಿಂದ ಹೋಗಿ ದೇಶವಿಶೇಷಪ್ರಾಪ್ತಿ. ಆಪೀತೇಃ=ಅಂತಹ ಬ್ರಹ್ಮಪ್ರಾಪ್ತಿಯವರೆಗೆ ಸಂಸಾರ ವ್ಯಪದೇಶಾತ್, ಸಂಸಾರ ಎಂದರೆ ದೇಹಸಂಬಂಧ. ಅಂತಹ ದೇಹಸಂಬಂಧರೂಪವಾದ ಸಂಸಾರವನ್ನು ಶ್ರುತಿಯಲ್ಲಿ ನಿರೂಪಿಸಲಾಗಿದೆಯಾದ್ದರಿಂದ. ''ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ, ಅಥ ಸಂಪತ್ಸ್ಯೇ'' ಎಂದು ಶ್ರುತಿ.

**॥ ಸೂಕ್ಷ್ಮಂ ಪ್ರಮಾಣತಶ್ಚ ತಥೋಪಲಬ್ಧೇಃ ॥** ಈ ಇನ್ನೊಂದು ಕಾರಣ ದಿಂದಾಗಿಯೂ ಜ್ಞಾನಿಗೆ ಇಹಲೋಕದಲ್ಲಿ ದೇಹಬಂಧವು ನಾಶವಾಗುವುದಿಲ್ಲ— ಸೂಕ್ಷ್ಮಂ ತು=ಸೂಕ್ಷ್ಮವಾದ ಶರೀರವು ಇದ್ದೇ ಇರುತ್ತದೆ. ಪ್ರಮಾಣತಶ್ಚ ತಥೋಪಲಬ್ಧೇಃ= ಪ್ರಮಾಣದಿಂದ ಇದು ತಿಳಿಯುತ್ತದೆ. ದೇವಯಾನಮಾರ್ಗದಿಂದ ಹೋಗುವ ಜ್ಞಾನಿಯು ಚಂದ್ರನೊಂದಿಗೆ ನಡೆಸುವ ಸಂವಾದವು ಉಪನಿಷತ್ತಿನಲ್ಲಿ (ಕೌ.1.2) ಬಂದಿದೆ. ಸಂವಾದ ನಡೆಯಬೇಕಾದರೆ ಶರೀರವು ಇರಲೇಬೇಕು. ಆದ್ದರಿಂದ ಜ್ಞಾನಿಗೆ ಇಲ್ಲೇ ಮೋಕ್ಷವಾಗದು.

**॥ ನೋಪಮರ್ದೇನಾತಃ ॥** ಅತಃ=ಈ ಕಾರಣಗಳಿಂದಾಗಿ ''ಯದಾ ಸರ್ವೇ ಪ್ರಮುಚ್ಯಂತೇ...ಅತ್ರ ಬ್ರಹ್ಮ ಸಮಶ್ನುತೇ'' ಎಂಬ ಶ್ರುತಿಯು ಉಪಮರ್ದೇನ= ಶರೀರ ಬಂಧವನ್ನು ಮೀರಿ ನ=ಬ್ರಹ್ಮಪ್ರಾಪ್ತಿಯನ್ನು ಹೇಳುವುದಿಲ್ಲ.

**॥ ಅಸ್ಯೈವ ಚೋಪಪತ್ತೇರೂಷ್ಮಾ ॥** ಅಸ್ಯೈವ=ಸೂಕ್ಷ್ಮದೇಹದ್ದೇ ಊಷ್ಮಾ=ಬಿಸಿಯು ಸ್ಥೂಲದೇಹದಲ್ಲಿ ಕಾಣುತ್ತದೆ. ಉಪಪತ್ತೇಃ=ಆ ಸೂಕ್ಷ್ಮದೇಹ ಇದ್ದಾಗ ಸ್ಥೂಲದೇಹದಲ್ಲಿ ಬಿಸಿ ಇರುತ್ತದೆ, ಅದು ಉತ್ಕ್ರಮಣವಾದರೆ ದೇಹ ತಣ್ಣಗಾಗುತ್ತದೆ. ಹೀಗೆ ಉಪಪತ್ತಿ ಇರುವುದರಿಂದ ಸೂಕ್ಷ್ಮದೇಹದ್ದೇ ಬಿಸಿ. ಆದ್ದರಿಂದ ಮಾರ್ಗ ಸೇರುವವರೆಗಿನ ಉತ್ಕ್ರಾಂತಿ ಅಜ್ಞಾನಿಯಂತೆ ಜ್ಞಾನಿಗೂ ಸಮಾನವಾದುದು.

**॥ ಪ್ರತಿಷೇಧಾದಿತಿ ಚೇನ್ನ ಶಾರೀರಾತ್ ಸ್ಪಷ್ಟೋ ಹ್ಯೇಕೇಷಾಮ್ ॥** ರಾಮಾನುಜಭಾಷ್ಯದಲ್ಲಿ 12 ಮತ್ತು 13ನೇ ಸೂತ್ರಗಳನ್ನು ಸೇರಿಸಿ ಒಂದೇ ಸೂತ್ರವನ್ನಾಗಿ ಪರಿಗಣಿಸಲಾಗಿದೆ. ಪ್ರತಿಷೇಧಾತ್=ಜ್ಞಾನಿಗೆ ಉತ್ಕ್ರಾಂತಿಯನ್ನು ಬೃಹದಾರಣ್ಯಕದಲ್ಲಿ ನಿರಾಕರಿಸಲಾಗಿದೆ– ''ಸ ಏತಾಃ ತೇಜೋಮಾತ್ರಾಃ...'' ಎಂದು ಆರಂಭಿಸಿ 'ತಮುತ್ಕ್ರಾಂತಂ ಪ್ರಾಣೋಽನೂತ್ಕ್ರಾಮತಿ'' (ಬೃ.6.4.4) ಎಂದು ಅಜ್ಞಾನಿಗಳಿಗೆ ಉತ್ಕ್ರಾಂತಿಯನ್ನು ನಿರೂಪಿಸಿ ''ಅನ್ಯನ್ನವತರಂ ಕಲ್ಯಾಣತರಂ ರೂಪಂ ಕುರುತೇ...ಇತಿ ತು ಕಾಮಯಾನಃ'' ಪುನಃ ದೇಹಾಂತರಪ್ರಾಪ್ತಿಯನ್ನು ಹೇಳಿ ಮುಗಿಸಿ 'ಅಥಾಕಾಮಯಮಾನಃ...ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ'' ಎಂದು ಉತ್ಕ್ರಾಂತಿ ಇಲ್ಲದೆಯೇ ಬ್ರಹ್ಮಪ್ರಾಪ್ತಿಯನ್ನು ಹೇಳಲಾಗಿದೆ. ಆರ್ತಭಾಗನ ಪ್ರಶ್ನೆಗೆ ಉತ್ತರವಾಗಿ ಯಾಜ್ಞವಲ್ಕ್ಯರೂ ಜ್ಞಾನಿಗೆ ಉತ್ಕ್ರಾಂತಿಯನ್ನು ನಿಷೇಧ ಮಾಡಿದ್ದಾರೆ. ಆದ್ದರಿಂದ ಜ್ಞಾನಿಗಳಿಗೆ ಉತ್ಕ್ರಾಂತಿ ಇಲ್ಲ. ಹೀಗೆ ಹೇಳುವುದು ಸರಿಯಲ್ಲ. ಶಾರೀರಾತ್=ಈ ಪ್ರಕರಣದಲ್ಲಿ ಜ್ಞಾನಿಗೆ ಶರೀರದಿಂದ ಉತ್ಕ್ರಾಂತಿಯನ್ನು ನಿಷೇಧ ಮಾಡಿದ್ದಲ್ಲ. ಶಾರೀರನಾದ ಜ್ಞಾನಿಜೀವನಿಂದ ಪ್ರಾಣಾದಿಗಳ ಉತ್ಕ್ರಾಂತಿಯನ್ನು ನಿಷೇಧ ಮಾಡಲಾಗಿದೆ. ''ನ ತಸ್ಯ ಪ್ರಾಣಾಃ ಉತ್ಕ್ರಾಮಂತಿ'' ಈ ನಿಷೇಧ ಶ್ರುತಿಯಲ್ಲಿ ತಸ್ಯ ಎಂದರೆ ಜ್ಞಾನಿಯ ಎಂದರ್ಥ.

ಸ್ಪಷ್ಟೋ ಹಿ ಏಕೇಷಾಂ=ಮಾಧ್ಯಂದಿನಾಯನಶ್ರುತಿಪಾಠದಲ್ಲಿ ಇದು ಸ್ಪಷ್ಟವಾಗಿದೆ— ''ಯೋಽಕಾಮಃ ನಿಷ್ಕಾಮಃ ಆಪ್ತಕಾಮಃ ಆತ್ಮಕಾಮಃ ನ ತಸ್ಮಾತ್ ಪ್ರಾಣಾ ಉತ್ಕ್ರಾಮಂತಿ'' ಎಂದು. ಜ್ಞಾನಿಯು ಬ್ರಹ್ಮಪ್ರಾಪ್ತಿಗೆ ಮೊದಲು ಶರೀರತ್ಯಾಗ ಮಾಡುವಂತೆ ಪ್ರಾಣಸಂಬಂಧವನ್ನೂ ಕಳೆದುಕೊಳ್ಳುತ್ತಾನೆ, ಎಂಬ ಸಂದೇಹ ಪರಿಹಾರಕ್ಕಾಗಿ 'ನ ತಸ್ಮಾತ್ ಪ್ರಾಣಾಃ ಉತ್ಕ್ರಾಮಂತಿ' ಎಂದು ನಿಷೇಧ ಮಾಡಲಾಗಿದೆ.

**॥ ಸ್ಮರ್ಯತೇ ಚ ॥** ಸ್ಮೃತಿಯೂ ಜ್ಞಾನಿಗೆ ಶರೀರದಿಂದ ಉತ್ಕ್ರಾಂತಿಯನ್ನು ಹೇಳುತ್ತಲಿದೆ—

ಊರ್ಧ್ವಮೇಕಃ ಸ್ಥಿತಸ್ತೇಷಾಂ ಯೋ ಭಿತ್ವಾ ಸೂರ್ಯಮಂಡಲಮ್ ।
ಬ್ರಹ್ಮಲೋಕಮತಿಕ್ರಮ್ಯ ತೇನ ಯಾತಿ ಪರಾಂ ಗತಿಮ್ ॥ (ಯಾ.3.167)

## ರಾಮಾನುಜಭಾಷ್ಯದಲ್ಲಿ ಪರಾಪತ್ಯಧಿಕರಣ

**॥ ತಾನಿ ಪರೇ ತಥಾ ಹ್ಯಾಹ ॥** ಇದುವರೆಗೆ ತೇಜಃಪ್ರಭೃತಿಭೂತಸೂಕ್ಷ್ಮ ನಿರ್ಮಿತ ಶರೀರದಲ್ಲಿ ಜ್ಞಾನಿಗೆ ಪ್ರವೇಶವಿಲ್ಲ ಎಂಬ ಆಕ್ಷೇಪವನ್ನು ಪರಿಹರಿಸಲಾಯಿತು. ಈ ಅಧಿಕರಣದಲ್ಲಿ ಜ್ಞಾನಿಯ ಆ ಸೂಕ್ಷ್ಮದೇಹವು (ತಾನಿ=ತೇಜಃಪ್ರಭೃತಿ ಸೂಕ್ಷ್ಮಭೂತಗಳು) ಪರೇ=ಪರಮಾತ್ಮನಲ್ಲಿ ಸೇರುತ್ತವೆ. ತಥಾಹ್ಯಾಹ=''ತೇಜಃ ಪರಸ್ಯಾಂ ದೇವತಾಯಾಂ'' ಎಂಬ ಶ್ರುತಿಯು ಅದನ್ನು ಹೇಳುತ್ತದೆ.

ವಿಮರ್ಶೆ—ಜ್ಞಾನಿಯು ಬ್ರಹ್ಮಪ್ರಲಯಪರ್ಯಂತ ಸತ್ಯಲೋಕದಲ್ಲಿ ಇರುತ್ತಾನೆ. ಆಮೇಲೆ ಲಿಂಗಭಂಗವಾಗುತ್ತದೆ. ಅವನಿಗೆ ಸೂಕ್ಷ್ಮದೇಹ ಸಹಿತವಾಗಿ ಪರಬ್ರಹ್ಮಪ್ರಾಪ್ತಿ ಇಲ್ಲ.

ಇಲ್ಲಿಗೆ ಪರಾಧಿಕರಣವು ಮುಗಿಯಿತು.

# ೮. ಅವಿಭಾಗಾಧಿಕರಣಮ್

### ॥ ಅವಿಭಾಗೋ ವಚನಾತ್ ॥ ೧೬ ॥

**'ಏತೇ ದೇವಾ ಏತಮಾತ್ಮಾನಮನುವಿಶ್ಯ ಸತ್ಯಾಃ ಸತ್ಯಕಾಮಾಃ ಸತ್ಯಸಂಕಲ್ಪಾ ಯಥಾನಿಕಾಮಮಂತರ್ಬಹಿಃ ಪರಿಚರಂತಿ' ಇತಿ ಗೌಪವನಶ್ರುತಿಃ ।**

**ತತ್ ಪರಮೇಶ್ವರಕಾಮಾದ್ಯವಿಭಾಗೇನೈವ ತೇಷಾಂ ಸತ್ಯಕಾಮತ್ವಮ್ ।**

**'ಕಾಮೇನ ಮೇ ಕಾಮ ಆಗಾದ್ಧೃದಯಾದ್ಧೃದಯಂ ಮೃತ್ಯೋಃ' (ತೈ.ಆ. 3.15.4) ಇತಿ ವಚನಾತ್ ।**

**'ಮುಕ್ತಾನಾಂ ಸತ್ಯಕಾಮತ್ವಂ ಸಾಮರ್ಥ್ಯಂ ಚ ಪರಸ್ಯ ತು ।**
**ಕಾಮಾನುಕೂಲಕಾಮತ್ವಂ ನಾನ್ಯತ್ ತೇಷಾಂ ವಿಧೀಯತೇ ॥'**

**ಇತಿ ಹಿ ಬ್ರಾಹ್ಮೇ ।**

(ಮೋಕ್ಷದಲ್ಲಿ ಪರಮಾತ್ಮನ ಇಚ್ಛೆಗೆ ಅವಿಭಾಗಃ=ವಿರೋಧವಿಲ್ಲದಂತೆ ಮುಕ್ತರ ಇಚ್ಛೆಯೂ ಇರುವುದು) ವಚನಾತ್=ಗೌಪವನ ಶ್ರುತಿವಚನದಿಂದಾಗಿ ತಿಳಿಯುತ್ತದೆ— ಈ ದೇವತೆಗಳು ಪರಮಾತ್ಮನನ್ನು ಪ್ರವೇಶಿಸಿ ಸತ್ಯಾಃ=ನಿತ್ಯರಾಗಿ ಸಫಲಕಾಮರೂ ಸತ್ಯಸಂಕಲ್ಪರೂ ಆಗಿ ಸ್ವೇಚ್ಛೆಯಂತೆ ಪರಮಾತ್ಮನ ಒಳಗೆ ಹೊರಗೆ ಸಂಚರಿಸುತ್ತಾರೆ.

ಪರಮಾತ್ಮನು ಇಚ್ಛೆಗೆ ಅನುಗುಣವಾಗಿಯೇ ಅವರಿಗೆ ಸತ್ಯಕಾಮತ್ವ. ಅದೂ ಶ್ರುತಿವಚನದಿಂದಲೇ ತಿಳಿಯುತ್ತದೆ—ಮೃತ್ಯೋಃ=ಸಂಹಾರಕನಾದ ಪರಮಾತ್ಮನ ಕಾಮೇನ=ಇಚ್ಛೆಯಿಂದಲೇ ಮೇ=ನನಗೆ ಕಾಮಃ=ಕಾಮಿತ ವಸ್ತುವು ಆಗಾತ್= ಲಭ್ಯವಾಗಿದೆ. ಏಕೆ ಹಾಗೆ? ಹೃದಯಾತ್ ಹೃದಯಂ=ಭಗವದಿಚ್ಛೆಯಿಂದಾಗಿಯೇ ನನಗೆ ಇಚ್ಛೆಯು ಉದಿಸಿದೆ. ಆದ್ದರಿಂದ ನನಗೆ ಕಾಮಿತಪ್ರಾಪ್ತಿಯು ಭಗವದಿಚ್ಛೆಯಿಂದಲೇ ಆಗಿದೆ.

ಬ್ರಾಹ್ಮವಚನದಲ್ಲೂ ಹೀಗಿದೆ— ಮುಕ್ತರಿಗೆ ಸತ್ಯಕಾಮತ್ವವು ಅವರ ಸಾಮರ್ಥ್ಯ ವಿಶೇಷದಿಂದ (ಆ ಸಾಮರ್ಥ್ಯವೂ ಪರಾಧೀನವಾದುದು.) ಪರಮಾತ್ಮನ ಇಚ್ಛಾಧೀನ ವಾದ ಇಚ್ಛೆ ಇರುವುದೇ ಸತ್ಯಕಾಮತ್ವ. ಇದಲ್ಲದೆ (ಅನ್ಯತ್) ನ ವಿಧೀಯತೇ=ಬೇರೆ ರೀತಿಯ ಸತ್ಯಕಾಮತ್ವವು ಇಲ್ಲ.

**ವಿವರಣೆ**—ಸಂಸಾರದಲ್ಲಿ ನಮ್ಮ ಇಚ್ಛೆಗೂ ಭಗವದಿಚ್ಛೆಗೂ ಆನುಗುಣ್ಯವಿರುವುದಿಲ್ಲ. ನಾವು ಸುಖವನ್ನು ಬಯಸಿದರೆ ಭಗವಂತ ಪೂರ್ವಕರ್ಮಾನುಸಾರಿಯಾದ ದುಃಖವನ್ನು ಬಯಸುತ್ತಾನೆ. ಆದರೆ, ಮೋಕ್ಷದಲ್ಲಿ ಮುಕ್ತರ ಇಚ್ಛೆಗೂ ಪರಮಾತ್ಮನ ಇಚ್ಛೆಗೂ ವಿರೋಧವಿರುವುದಿಲ್ಲ. ಭಗವದಿಚ್ಛೆಗೆ ಅನುಗುಣವಾದ ಇಚ್ಛೆಯೇ ಮುಕ್ತರಿಗೆ ಇರುತ್ತದೆ. ಆದ್ದರಿಂದ ಅವರು 'ಸತ್ಯಕಾಮರು'. ಕಾಮಿಸಿದ ವಿಷಯವು ದೊರಕುವುದೇ ಸತ್ಯಕಾಮತ್ವ. ಈ ಸತ್ಯಕಾಮತ್ವ ಸಾಮರ್ಥ್ಯವೂ ಭಗವಂತನ ಸಂಕಲ್ಪದಿಂದಲೇ ಮುಕ್ತರಿಗೆ ಬರುತ್ತದೆ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಅವಿಭಾಗೋ ವಚನಾತ್ ॥** (ಅತ್ರ ಮುಕ್ತಾನಾಮ್ ಈಶಾಧೀನತ್ವಮ್ ಉಚ್ಯತೇ । ಪ್ರಸ್ತುತದೇವಾದಿಮುಕ್ತಾನಾಂ ಸತ್ಯಕಾಮಾದೇಃ ಈಶೇಚ್ಛಾತಃ ಅವಿಭಾಗಃ=ತಾದಾತ್ಮ್ಯಮ್ । ತೇನ ವಿಷಯತಾದಾತ್ಮ್ಯಂ ಲಕ್ಷ್ಯತೇ । ಇಚ್ಛಾಯಾ ಏಕ ವಿಷಯತ್ವಂ=ತದಿಚ್ಛಾನುಸಾರಿತ್ವಮ್ ಇತಿ ಯಾವತ್ । ನ ಸ್ವಾತಂತ್ರ್ಯಮ್ । ಕುತಃ? ವಚನಾತ್='ಕಾಮೇನ ಮೇ ಕಾಮ ಆಗಾತ್' ಇತಿ ವಚನಾತ್ ಇತ್ಯರ್ಥಃ ॥)

ಈ ಅಧಿಕರಣದಲ್ಲಿ ಮುಕ್ತರೂ ಭಗವದಧೀನರು ಎಂದು ಹೇಳಲಾಗಿದೆ. ಮುಕ್ತರ ಇಚ್ಛೆಗಳು ಭಗವದಿಚ್ಛೆಯಿಂದ ಅವಿಭಾಗಃ=ಅಭಿನ್ನವಾದುದು. ಇಲ್ಲಿ ಇಚ್ಛೆಗಳಿಗೆ ಸ್ವರೂಪತಃ ಅಭೇದವಲ್ಲ, ವಿಷಯಾಭೇದ. ಭಗವದಿಚ್ಛೆಗೆ ಯಾವುದು ವಿಷಯವೋ ಮುಕ್ತರ ಇಚ್ಛೆಗೂ ಅದೇ ವಿಷಯ. ಮುಕ್ತರು ಭಗವಂತನ ಇಚ್ಛೆಗೆ ಅನುಗುಣವಾದ ಇಚ್ಛೆಯನ್ನೇ ಮಾಡುತ್ತಾರೆ ಎಂದರ್ಥ. ತಾವತಾ ಅವರಿಗೆ ಇಚ್ಛಾಸ್ವಾತಂತ್ರ್ಯವಿಲ್ಲ– ವಚನಾತ್='ಕಾಮೇನ...' ಇತ್ಯಾದಿ ಶ್ರುತಿವಚನದಿಂದ ಭಗವದಿಚ್ಛಾನುಸಾರಿಯಾದ ಇಚ್ಛೆಯು ಅವರಿಗೆ ಬರುತ್ತದೆ.

## ಶಾಂಕರಭಾಷ್ಯದಲ್ಲಿ ಅವಿಭಾಗಾಧಿಕರಣ

ಅಜ್ಞಾನಿಗಳಿಗೆ ಪ್ರಾಣಾದಿಪ್ರಲಯ ಸಾವಶೇಷ. ಆದರೆ, ಜ್ಞಾನಿಗಳಿಗೆ ಹೇಳಿರುವ ಷೋಡಶಕಲೆಗಳ ಲಯವು ಅವಿಭಾಗಃ=ನಿಃಶೇಷವಾದುದು. ವಚನಾತ್=ಭಿದ್ಯತೇ ತಾಸಾಂ ನಾಮರೂಪೇ । ಪುರುಷ ಇತ್ಯೇವ ಪ್ರೋಚ್ಯತೇ । ಸ ಏಷೋಽಕಲೋಽಮೃತೋ ಭವತಿ ॥ (ಪ್ರ.6.5) ಕಲೆಗಳು ಅವಿದ್ಯಾನಿಮಿತ್ತಕಗಳು. ಅವಿದ್ಯೆಯು ನಾಶವಾದಾಗ ಕಲೆಗಳೂ ನಿಃಶೇಷವಾಗಿ ನಾಶವಾಗುತ್ತವೆ.

**ವಿಮರ್ಶೆ**—ಅವಿದ್ಯಾನಾಶವಾದಾಗ ಸರ್ವನಾಶ ಎನ್ನುವುದು ಆರಂಭಣಾಧಿ ಕರಣದಲ್ಲೇ ಬಂದಿರುವುದರಿಂದ ಈ ಸೂತ್ರದ ಪೂರ್ವಪಕ್ಷ–ಕಲಾ ನಿಃಶೇಷವಾಗಿ ನಾಶವಾಗುವುದೋ, ಸಶೇಷವೋ? ಎನ್ನುವುದಕ್ಕೆ ಅವಕಾಶವೇ ಇಲ್ಲ. ಭಾಮತಿಯಲ್ಲಿ ಹೀಗೆ ಹೇಳಿ ''ತಥಾಪಿ ಪ್ರವಿಲಯಸಾಮಾನ್ಯಾತ್ ಸಾವಶೇಷತಾಶಂಕಾಂ ಅತಿಮಂದಾನಾಮ್ ಅಪನೇತುಮಿದಂ ಸೂತ್ರಮ್'' ಎಂದು, ಕಥಂಚಿತ್ ಸಾರ್ಥಕ್ಯವನ್ನು ಹೇಳಲಾಗಿದೆ.

## ರಾಮಾನುಜಭಾಷ್ಯದಲ್ಲಿ ಅವಿಭಾಗಾಧಿಕರಣ

ಸಪ್ರಾಣ ಜೀವನಿಗೆ ಪರದೇವತೆಯಲ್ಲಿ ಸಂಪತ್ತಿ ಎಂದರೆ ಮಡಿಕೆ ಮಣ್ಣಾದಂತೆ ಅಲ್ಲ. ಅವಿಭಾಗಃ=ಪರಮಾತ್ಮನೊಂದಿಗೆ ಸಂಯೋಗವಿಶೇಷ. 'ವಾಙ್ಮನಸಿ ಸಂಪದ್ಯತೇ' ಎಂಬಲ್ಲಿರುವ ಸಂಪದ್ಯತೇ ಎಂಬ ವಚನವೇ ಇಲ್ಲೂ ಅನುವೃತ್ತವಾಗುವುದರಿಂದ ಅಲ್ಲೂ ಇಲ್ಲೂ ಒಂದೇ ಅರ್ಥವನ್ನು ಹೇಳಬೇಕು. (ಅವಿಭಾಗಃ=ಪೃಥಕ್ ವ್ಯವಹಾರ ಯೋಗ್ಯತ್ವಾಭಾವ.)

**ವಿಮರ್ಶೆ**—''ವಾಕ್ ಮನಸಿ ಸಂಪದ್ಯತೇ'' ಎಂದು ವಾಕ್ಯದ ಆರಂಭದಲ್ಲಿ

'ಸಂಪದ್ಯತೇ' ಎಂಬ ಶಬ್ದ ಬಂದಿದೆ. 'ಮನಃ ಪ್ರಾಣೇ, ಪ್ರಾಣಃ ತೇಜಸಿ' ಎಂದು ಮುಂದುವರಿದಿದೆ. ಅಲ್ಲೆಲ್ಲ 'ಸಂಪತ್ತಿ' ಎಂದರೇನು? ಎಂದು ಬಾರದ ಪ್ರಶ್ನೆ ಇಲ್ಲೇಕೆ ಬಂತು?

ಇಲ್ಲಿಗೆ ಅವಿಭಾಗಾಧಿಕರಣವು ಮುಗಿಯಿತು

## ೯. ಹೃದಯಾಗ್ರಜ್ವಲನಾಧಿಕರಣಮ್

**॥ ಓಂ ತದೋಕೋಽಗ್ರಜ್ವಲನಂ ತತ್ಪ್ರಕಾಶಿತದ್ವಾರೋ ವಿದ್ಯಾಸಾಮರ್ಥ್ಯಾತ್ ತಚ್ಛೇಷಗತ್ಯನುಸ್ಮೃತಿಯೋಗಾಚ್ಚ ಹಾರ್ದಾನುಗೃಹೀತಃ ಶತಾಧಿಕಯಾ ಓಂ ॥ ೧೭ ॥**

ಉತ್ಕ್ರಾಂತಿಕಾಲೇ ಹೃದಯಾಗ್ರ(ಯಸ್ಯಾಗ್ರೇ) ಜ್ವಲನಂ ಭವತಿ । 'ತಸ್ಯ ಹೈತಸ್ಯ ಹೃದಯಸ್ಯಾಗ್ರಂ ಪ್ರದ್ಯೋತತೇ' (ಬೃ.ಉ. 6.4.2) ಇತಿ ಶ್ರುತೇಃ । ತತ್ಪ್ರಕಾಶಿತದ್ವಾರೋ ನಿಷ್ಕ್ರಾಮತಿ । ವಿದ್ಯಾಸಾಮರ್ಥ್ಯಾತ್ ।

'ಯಂ ಯಂ ವಾಽಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಳೇವರಮ್ ।
ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥' (ಭ.ಗೀ. 8.6)

ಇತಿ ಸ್ಮೃತೇರ್ವಿದ್ಯಾಶೇಷಗತ್ಯನುಸ್ಮರಣಯೋಗಾಚ್ಚ ।

'ಆಚಾರ್ಯಸ್ತು ತೇ ಗತಿಂ ವಕ್ತಾ' (ಛಾಂ.ಉ. 4.14.1)

ಇತಿ ಹಿ ಲಿಂಗಮ್ ।

'ಹೃದಿಸ್ಥೇನೈವ ಹರಿಣಾ ತಸ್ಯೈವಾನುಗ್ರಹೇಣ ತು ।
ಉತ್ಕ್ರಾಂತಿರ್ಬ್ರಹ್ಮರಂಧ್ರೇಣ ತಮೇವೋಪಾಸತೋ ಭವೇತ್ ॥'

ಇತಿ ಚಾಧ್ಯಾತ್ಮೇ ।

'ಶತಂ ಚೈಕಾ ಚ ಹೃದಯಸ್ಯ ನಾಡ್ಯ
ಸ್ತಾಸಾಂ ಮೂರ್ಧಾನಮಭಿನಿಃಸೃತೈಕಾ ।
ತಯೋರ್ಧ್ವಮಾಯನ್ನಮೃತತ್ವಮೇತಿ
ವಿಷ್ವಙನ್ಯಾ ಉತ್ಕ್ರಮಣೇ ಭವಂತಿ ॥' (ಕ.ಉ. 2.6.16) ಇತಿ ಚ ।

ತದಾ=ಉತ್ಕ್ರಾಂತಿಯ ಸಮಯದಲ್ಲಿ ಹೃದಯಾಗ್ರದಲ್ಲಿ ಪ್ರಭೆಯು ಹುಟ್ಟುತ್ತದೆ. ಶ್ರುತಿ ಹಾಗೆ ಹೇಳುತ್ತದೆ—'ತಸ್ಯ ಏತಸ್ಯಹಿ=ಅಂತಹ ಬ್ರಹ್ಮಜ್ಞಾನಿಯ ಹೃದಯದ ಅಗ್ರಭಾಗವು ಪ್ರಜ್ವಲಿಸುತ್ತದೆ'. ಅದರಿಂದ ನಾಡೀದ್ವಾರವು ಬೆಳಗಿ ಅದರ ಮೂಲಕ ದೇಹದಿಂದ ಹೊರಹೋಗುತ್ತಾನೆ. ಪ್ರಾರಬ್ಧಕರ್ಮವಿದ್ದರೂ ಜ್ಞಾನಸಾಮರ್ಥ್ಯದಿಂದಾಗಿ ಇದು ಸಾಧ್ಯವಾಗುತ್ತದೆ.

(ಹಾಗಾದರೆ ಜ್ಞಾನಿಗೆ ಪ್ರಥಮಮರಣದಲ್ಲೇ ಏಕೆ ಹೀಗಾಗುವುದಿಲ್ಲ?) 'ಯಂ ಯಂ ವಾಪಿ...' ಎಂದು ಗೀತಾಸ್ಮೃತಿಯಿಂದಾಗಿ ಹೃದಯವನ್ನು ಆರಂಭಿಸಿ ಬ್ರಹ್ಮಪರ್ಯಂತವಾದ ಮಾರ್ಗಗತಿಯ ಸ್ಮರಣೆಯೂ ವಿದ್ಯಾಶೇಷತ್ವೇನ ಆವಶ್ಯಕ. (ಅದು ಎಲ್ಲಾ ಮರಣಕಾಲದಲ್ಲೂ ಇರುವುದಿಲ್ಲ) ಗತಿ ಸ್ಮರಣೆಯೂ ಸಹಕಾರಿ ಎನ್ನಲು ಲಿಂಗವೂ ಇದೆ—'ಆಚಾರ್ಯಸ್ತು ತೇ ಗತಿಂ ವಕ್ತಾ' (ಗುರುಗಳು ನಿನಗೆ ಮಾರ್ಗವನ್ನು ತಿಳಿಸುತ್ತಾರೆ.) ಎಂದು.

ಹಾರ್ದಾನುಗೃಹೀತಃ- ಅಧ್ಯಾತ್ಮಗ್ರಂಥದಲ್ಲಿ ಇದನ್ನು ವಿವರಿಸಲಾಗಿದೆ—ಹೃದಯಸ್ಥನಾದ ಶ್ರೀಹರಿಯಿಂದ ಅವನ ಅನುಗ್ರಹದಿಂದಲೇ, ಹರಿಯನ್ನು ಉಪಾಸನಾ ಮಾಡುವ ಜ್ಞಾನಿಗೆ ಬ್ರಹ್ಮರಂಧ್ರದಿಂದ ಉತ್ಕ್ರಾಂತಿಯಾಗುವುದು. ಕಾಠಕದಲ್ಲಿ ಹೀಗಿದೆ—ಹೃದಯಕ್ಕೆ ಸಂಬಂಧಿಸಿರುವ ಮುಖ್ಯನಾಡಿಗಳು—ನೂರು ಮತ್ತು ಒಂದು. ಅವುಗಳಲ್ಲಿ ಒಂದು ತಲೆಯವರೆಗೂ ಹರಡಿದೆ. ಆ ನಾಡಿಯಿಂದ ಶರೀರದಿಂದ ಮೇಲಕ್ಕೆ ಹೋದರೆ ಮೋಕ್ಷವನ್ನು ಹೊಂದುತ್ತಾನೆ. ಅಕ್ಕಪಕ್ಕದ ನಾಡಿಗಳಿಂದ ಉತ್ಕ್ರಮಣವು ಇತರ ಲೋಕಪ್ರಾಪ್ತಿಗೆ ಕಾರಣವಾಗುತ್ತದೆ.

**ವಿವರಣೆ**—ಜ್ಞಾನಿಯ ಮರಣಕ್ಕೂ ಅಜ್ಞಾನಿಗಳ ಮರಣಕ್ಕೂ ವ್ಯತ್ಯಾಸವಿದೆ. ಜ್ಞಾನಿಯು ಬ್ರಹ್ಮರಂಧ್ರದ ಮೂಲಕ ದೇಹದಿಂದ ಹೊರಹೋಗುತ್ತಾನೆ. ಜ್ಞಾನದ ಮಹಿಮೆಯಿಂದಾಗಿ ಅವನ ಹೃದಯಾಗ್ರಭಾಗವು ಅಂತ್ಯಕಾಲದಲ್ಲಿ ಪ್ರಜ್ವಲಿಸುತ್ತದೆ. ಆ ಪ್ರಕಾಶದಿಂದ ಅವನಿಗೆ ಸೂಕ್ಷ್ಮವಾದ ಸುಷುಮ್ನಾನಾಡಿಯ ದ್ವಾರವು ಕಾಣುತ್ತದೆ. ಅದಕ್ಕೆ ವಿದ್ಯೆಯ ಜೊತೆಗೆ ಇನ್ನೆರಡು ಸಹಕಾರಿಗಳೂ ಸೇರಬೇಕು–ಗುರುಗಳಿಂದ ಜ್ಞಾನಿಗೆ ಮಾರ್ಗದ ಉಪದೇಶವೂ ಆಗಬೇಕು. ಅದರ ಸ್ಮರಣೆ ಅಂತ್ಯಕಾಲದಲ್ಲಿ ಅವನಿಗೆ ಬರಬೇಕು. ಎಲ್ಲಕ್ಕಿಂತಲೂ ಮುಖ್ಯವಾಗಿ ಭಗವಂತನ ಅನುಗ್ರಹಬೇಕು. ''ಯಂ ಯಂ ವಾಪಿ'' ಎಂಬ ಗೀತಾವಾಕ್ಯದಲ್ಲಿ ಅಂತ್ಯಕಾಲದಲ್ಲಿ ಉಂಟಾಗುವ ಸ್ಮರಣೆಗೆ ಅನುಗುಣವಾಗಿ ಜ್ಞಾನಿಯು ಮರಣೋತ್ತರಸ್ಥಿತಿಯನ್ನು ಹೊಂದುತ್ತಾನೆ, ಎಂದಿದೆ. ಅಂತ್ಯಕಾಲದಲ್ಲಿ ಜ್ಞಾನಿಯು ಬ್ರಹ್ಮಗತಿಯನ್ನು ಸ್ಮರಿಸಿದರೆ ಜ್ಞಾನಿಗೆ ಬ್ರಹ್ಮಗತಿಯಾಗುತ್ತದೆ.

ಉಪಕೋಸಲನಿಗೆ ಅಗ್ನಿಗಳು ಬ್ರಹ್ಮೋಪದೇಶವನ್ನು ನೀಡಿ 'ಆಚಾರ್ಯಸ್ತು ತೇ ಗತಿಂ ವಕ್ತಾ' ಎನ್ನುತ್ತಾರೆ. ಅವನ ಆಚಾರ್ಯ ಸತ್ಯಕಾಮ. 'ಅವನಿಂದ ಬ್ರಹ್ಮನ ಬಳಿ ಹೋಗುವ ಮಾರ್ಗವನ್ನು ತಿಳಿ, ಎಂದರ್ಥ. ಇದರಿಂದ ಗುರೂಪದೇಶದಿಂದಾಗುವ ಮಾರ್ಗಸ್ಮರಣೆಯೂ ಜ್ಞಾನಿಯ ಉತ್ಕ್ರಾಂತಿಗೆ ಕಾರಣ ಎಂದು ತಿಳಿಯುತ್ತದೆ.

ವಿಶ್ವಗನ್ಯಾ ಉತ್ಕ್ರಮಣೇ ಭವಂತಿ—ಎಂಬಲ್ಲಿ ಅನ್ಯಾಃ=ಇತರ ನಾಡಿಗಳು ವಿಶ್ವಗುತ್ಕ್ರಮಣೇ= ಲೋಕಾಂತರ ಗಮನಕ್ಕೆ ಕಾರಣವಾಗುತ್ತವೆ, ಎಂದರ್ಥ.

ಯಾವ ದೇಹದಲ್ಲಿ ಜ್ಞಾನೋದಯವಾಗುವುದೋ ಅದೇ ದೇಹದ ಅಂತ್ಯ ಕಾಲದಲ್ಲಿ ಹರೀಚ್ಛೆಯಾ ಮಾರ್ಗಸ್ಮರಣೆ ಆಗುವುದಿಲ್ಲ. ಪ್ರಾರಬ್ಧಾವಸಾನಪರ್ಯಂತ ಸ್ವರ್ಗದಲ್ಲೋ, ಅಂತರಿಕ್ಷಲೋಕದಲ್ಲೋ ಪ್ರಾರಬ್ಧವನ್ನು ಅನುಭವಿಸುತ್ತಿರುತ್ತಾರೆ. ಪ್ರಾರಬ್ಧಾವಸಾನದಲ್ಲಿ ಹರೀಚ್ಛೆಯಾ ಮಾರ್ಗಸ್ಮರಣೆಯಾಗತ್ತದೆ. ಅದರಿಂದಾಗಿ ಬ್ರಹ್ಮನಾಡಿಯಿಂದ ಉತ್ಕ್ರಮಣ, ಅರ್ಚಿರಾದಿ ಮಾರ್ಗ–ಬ್ರಹ್ಮಲೋಕಪ್ರಾಪ್ತಿ, ಅಥವಾ ವಿಷ್ಣುಲೋಕ ಪ್ರಾಪ್ತಿ. ಅಲ್ಲಿಂದ ಪರಾಂತಕಾಲದಲ್ಲಿ ಬ್ರಹ್ಮದೇವರೊಂದಿಗೆ ಮೋಕ್ಷ.

ಅಧಮಜೀವರಿಗೆ ವಿರಜಾಸ್ನಾನವಿಲ್ಲ. ಅವರ ಲಿಂಗದೇಹಭಂಗ ಹಾವು ಪೊರೆ ಬಿಟ್ಟಂತೆ ಸಾಧನ ಪರಿಪಾಕದಶಾದಲ್ಲಿ ಸ್ವತಏವ ಆಗುತ್ತದೆ—ಗುರ್ವರ್ಥದೀಪಿಕಾ.

ದೇವಲೋಕೇ ಚಿರಂ ರತ್ವಾ ಯಸ್ತು ಮುಕ್ತಿಂ ವ್ರಜಿಷ್ಯತಿ ।
ಸ ತು ತದ್ದೇವತಾದ್ವಾರೇಣೋತ್ಕ್ರಾಮತಿ ನ ಸಂಶಯಃ ।
ವಿಷ್ಣೋರ್ಲೋಕಂ ಪರಂ ಗಚ್ಛನ್ ಉತ್ಕ್ರಮೇನ್ಮೂರ್ಧ್ನ ಏವತು ।
ತಥೈವ ಬ್ರಹ್ಮಣೋ ಲೋಕಂ ಸುಷುಮ್ನಾಯಾ ವಿಭೇದತಃ ॥

ಪ್ರಾರಬ್ಧಕರ್ಮಶೇಷವು 'ವಿರಜಾತರಣಾವಧಿ' ಎಂದಂತೆ ವಿರಜಾನದೀತರಣ ಮಾಡುವಾಗ ಲಿಂಗದೇಹಭಂಗವಾಗುವವರೆಗೂ ಇರುತ್ತದೆ. ''ಆದೇಹಂ ಆರವೇಃ'' ಚರಮದೇಹಪರ್ಯಂತ ಅಥವಾ ರವಿಮಂಡಲಪ್ರವೇಶಪರ್ಯಂತವಾಗಿ ಪ್ರಾರಬ್ಧ ಕರ್ಮವಿರುತ್ತದೆ, ಎನ್ನುವ ಪ್ರಮಾಣದಿಂದ ಆಗಲೇ ಪ್ರಾರಬ್ಧವೆಲ್ಲವೂ ನಾಶವಾಗುತ್ತದೆ, ಎಂದು ಅರ್ಥಮಾಡಬಾರದು.

ಸುಧಾದಲ್ಲಿ ಮೋಕ್ಷಪ್ರಾಪ್ತಿಯ ಕ್ರಮವನ್ನು ಹೀಗೆ ವಿವರಿಸಲಾಗಿದೆ— ಭಗವಜ್ಜ್ಞಾನಭೋಗಾಭ್ಯಾಂ ನಿವೃತ್ತಸಮಸ್ತಾನಿಷ್ಟಕರ್ಮಾಣಃ ಸ್ವೋತ್ತಮಪ್ರವೇಶೇನ (ದೇವತೆಗಳಿಗೆ) ಬ್ರಹ್ಮನಾಡ್ಯೋತ್ಕ್ರಮಣೇನ ವಾ (ಮನುಷ್ಯೋತ್ತಮರಿಗೆ) ಪರಿತ್ಯಕ್ತದೇಹಾಃ ಸ್ವೋಚಿತೇನ (ದೇವತೆಗಳು) ಅರ್ಚಿರಾದಿನಾ ವಾ ಪಥಾ (ದೇವತಾ

ಇತರರು) ವೈಕುಂಠಲೋಕವಾಸಿನಂ (ಅಮುಕ್ತಸ್ಥಾನಗತ) ಭಗವಂತಂ ಹಿರಣ್ಯಗರ್ಭೇಣ ಸಹ ಪ್ರಾಪ್ತಾಃ ಭಿನ್ನಲಿಂಗಶರೀರಾಃ ವಿಧ್ವಸ್ತಪ್ರಕೃತಯಃ ಅತ್ಯಂತನಿವೃತ್ತಾನಿಷ್ಟಾಃ ಸಮ್ಯಗಾವಿರ್ಭೂತಾನಂದಾದಿಗುಣಾಃ ಭಗವತ್ಸಮೀಪೇ ಏವ ತಮುಪಾಸೀನಾಃ....''

ಇಲ್ಲಿ ಅನಿಷ್ಟ ನಿವೃತ್ತಿ ಇಷ್ಟಪ್ರಾಪ್ತಿ ಎರಡನ್ನೂ ಯುಗಪತ್ ಹೇಳಲಾಗಿದೆ. ಆದರೆ, ದೇವತೆಗಳು ಬ್ರಹ್ಮನಲ್ಲಿ ಲಯವಾಗುವುದು ಪ್ರಲಯಕ್ಕಿಂತ ಮೊದಲು. ಭಗವದ್ದರ್ಶನದಿಂದ ಮುಕ್ತಿಯಲ್ಲಿ ಯಥೇಷ್ಟಭೋಗ ಪ್ರಲಯಾನಂತರ ವೈಕುಂಠಲೋಕದಲ್ಲಿ– ಆದ್ದರಿಂದ ಇವೆರಡರ ಮಧ್ಯದ ಅಂತರವನ್ನು ಯಾದುಪತ್ಯ ಮತ್ತು ಶೇಷವಾಕ್ಯಾರ್ಥಚಂದ್ರಿಕಾದಲ್ಲಿ ತುಂಬಿಸಲಾಗಿದೆ– ವೈಕುಂಠಸ್ಥ ಭಗವತ್ಪ್ರಾಪ್ತಿ ಅರ್ಚಿರಾದಿಮಾರ್ಗದಿಂದ ಹೋದವರಿಗೆ ಮಾತ್ರ. ಆದ್ದರಿಂದ ಅರ್ಚಿರಾದಿ ಮಾರ್ಗದಿಂದ ಹೋದವರು ಹಾಗೂ ಬ್ರಹ್ಮಾಂಡಲಯವಾದ ಮೇಲೆ ಸ್ವೋತ್ತಮರಲ್ಲಿ ಲಯಹೊಂದಿ ಗರುಡ–ಶೇಷಮಾರ್ಗದಿಂದ ಚತುರ್ಮುಖನ ಬಳಿ ಬಂದವರು ಇವರೆಲ್ಲರೂ ಸ್ವಗುಣಾಚ್ಛಾದಕವಾದ ಪ್ರಕೃತಿಯಿಂದ (ಲಿಂಗದೇಹದಿಂದ) ಮುಕ್ತರಾಗುತ್ತಾರೆ.

ಪ್ರಧಾನಾವರಣ–ವ್ಯೋಮ್ನೋರಂತರೇ ವಿರಜಾನದೀ ।
ವಿಧೇರ್ದೇಹಾಪಗಮೇ ಲಿಂಗಮಾತ್ರಶರೀರಗಾಃ ॥
ವಿರಜಾಯಾಂ ಕೃತಸ್ನಾನಾಃ ಬ್ರಹ್ಮಣಾ ಸಹ ಸರ್ವಶಃ ।
ತ್ಯಕ್ತಲಿಂಗಾಸ್ತತಃ ಸರ್ವೇ ಸ್ವರೂಪೇಣ ವ್ಯವಸ್ಥಿತಾಃ ॥

''ಬ್ರಹ್ಮಾಂಡದ ಹೊರಗೆ ಬ್ರಹ್ಮಾಂಡಕ್ಕೆ ಆವರಣವಾಗಿರುವ ಪ್ರಕೃತಿ ಮತ್ತು ಆಕಾಶತತ್ತ್ವಗಳ ಮಧ್ಯದಲ್ಲಿರುವ ವಿರಜಾನದಿಯಲ್ಲಿ ಸ್ನಾನಮಾಡಿ ಲಿಂಗದೇಹವನ್ನು ಕಳೆದುಕೊಳ್ಳುತ್ತಾರೆ. ಆಮೇಲೆ ಭಗವಂತನ ಉದರದಲ್ಲಿ ಸೇರುತ್ತಾರೆ. ಮತ್ತೆ ಸೃಷ್ಟಿಕಾಲದಲ್ಲಿ ಶ್ವೇತದ್ವೀಪಸ್ಥ ಭಗವಂತನ ದರ್ಶನವನ್ನು ಪಡೆದು ದೇವತೆಗಳು ಮತ್ತು ಇತರಯೋಗ್ಯರು ಭಗವಂತನ ಬಳಿಯಲ್ಲೂ ಕೆಲವರು ಪೃಥಿವ್ಯಾದಿಲೋಕಗಳಲ್ಲೂ ಸ್ವರೂಪಾನಂದವನ್ನು ಅನುಭವಿಸುತ್ತಿರುತ್ತಾರೆ. ಶ್ವೇತದ್ವೀಪಸ್ಥಭಗವದ್ದರ್ಶನದಿಂದ ಅವರ ಇಚ್ಛಾವರಣಭಂಗವಾಗುತ್ತದೆ.'' ಹೀಗೆ ಈ ಕಲ್ಪದಲ್ಲಿ ಲಿಂಗದೇಹಭಂಗ, ಕಲ್ಪಾಂತರದಲ್ಲಿ ಇಚ್ಛಾವರಣಭಂಗ.

ಜ್ಞಾನಿಯು ಜ್ಞಾನೋತ್ತರದಲ್ಲಿ ಮಾಡಿರುವ ನಿಷ್ಕಾಮಕರ್ಮದಿಂದ ಪ್ರಸನ್ನನಾದ ಭಗವಂತನು ಮುಕ್ತಿಯಲ್ಲಿ ಶುದ್ಧಸತ್ವಾತ್ಮಕವಾದ ಭೋಗ್ಯವಸ್ತುಗಳನ್ನು ಸೃಷ್ಟಿಸಿ ಅವುಗಳ ಭೋಗದಿಂದ, ಜ್ಞಾನದಿಂದ ಅನಭಿವ್ಯಕ್ತವಾದ ಸ್ವರೂಪಸುಖವನ್ನು ವ್ಯಕ್ತಗೊಳಿಸುತ್ತಾನೆ–

'ಅಸ್ಮಾದ್ಧ್ಯೇವಾತ್ಮನಃ ಯದ್ಯತ್ ಕಾಮಯತೇ ತತ್ತತ್ ಸೃಜತೇ' ತತ್ತತ್ ಸೃಜತೇ ಎನ್ನುವುದಕ್ಕೆ ಟೀಕಾ–''ತತ್ತತ್ ಕರ್ಮ ಅಸ್ಮಾತ್ ಪರಮಾತ್ಮನಃ ಸೃಜತೇ'' (ಪ್ರಮೇಯ ದೀ.2.50) ಜ್ಞಾನೋತ್ತರಕರ್ಮದ ಫಲ ಆನಂದವೃದ್ಧಿ ಎಂದರೂ ಇದೇ ಅರ್ಥ. ಅಂತಹ ಕರ್ಮದಿಂದ ಪ್ರಸನ್ನನಾದ ಭಗವಂತ ಕರ್ಮವನ್ನು ನಿಮಿತ್ತಮಾಡಿ ವಿಷಯಗಳನ್ನು ಸೃಜಿಸಿ ಭೋಗಿಸುವಂತೆ ಮಾಡಿ ಸ್ವರೂಪಸುಖವನ್ನು (ಕೇವಲ ಜ್ಞಾನದಿಂದ ಅನಭಿವ್ಯಕ್ತವಾದ) ಅನುಭವಿಸುವಂತೆ ಮಾಡುತ್ತಾನೆ. ಕರ್ಮ ಮಾಡದಿದ್ದಲ್ಲಿ ಈ ಸುಖವು ಜ್ಞಾನಿಗೆ ಸಿಗುವುದಿಲ್ಲ. ಇದೇ ಆನಂದಹ್ರಾಸ.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**II ಓಂ ತದೋಕೋಗ್ರಜ್ವಲನಂ ತತ್ ಪ್ರಕಾಶಿತದ್ವಾರೋ ವಿದ್ಯಾಸಾಮರ್ಥ್ಯಾತ್ ತಚ್ಛೇಷಗತ್ಯನುಸ್ಮೃತಿಯೋಗಾಚ್ಚ ಹಾರ್ದಾನುಗೃಹೀತಃ ಶತಾಧಿಕಯಾ ಓಂ II** (ಏವಂ ದೇವಾನಾಂ ಮೋಕ್ಷಮುಕ್ತ್ವಾ ಅತ್ರ ಮನುಷ್ಯಾಣಾಂ ಮುಖ್ಯಾರ್ಥಂ ದೇಹೋತ್ಕ್ರಮಣಸ್ಯ ಅಜ್ಞಮೃತಿತಃ ವೈಲಕ್ಷಣ್ಯಂ ಸಾಧ್ಯತೇ । ತದಿತಿ 'ಪರ' ಇತಿ ಪ್ರಕೃತಬ್ರಹ್ಮೋಚ್ಯತೇ ।

ಉತ್ಕ್ರಾಂತಿಕಾಲೇ ತದೋಕಸಃ=ಭಗವದೋಕಸಃ ಹೃದಯಸ್ಯ ಅಗ್ರೇ ಜ್ವಲನಂ=ಪ್ರಭಾ ಪ್ರಾದುರ್ಭವತಿ । ತಾವತಾ ಅಜ್ಞಾತ್ ಕೋ ವಿಶೇಷಃ? ಅತ ಉಕ್ತಂ 'ತದಿತಿ' । ತೇನ=ಪ್ರಕಾಶೇನ ಪ್ರಕಾಶಿತ ನಾಡೀದ್ವಾರಃ ಸನ್ ದೇಹಾತ್ ನಿರ್ಯಾತಿ, ಇತಿ ಶೇಷಃ । ಅಜ್ಞಸ್ತು ನೈವಮಿತಿ ತತೋಽಸ್ತಿ ಜ್ಞಾನಿನೋ ವಿಶೇಷ ಇತಿ ಭಾವಃ । ಜ್ಞಸ್ಯಾಪಿ ಪ್ರಾರಬ್ಧಸತ್ವಾತ್ ಕಥಮಯಂ ವಿಶೇಷಃ ? ಅತ ಉಕ್ತಂ ವಿದ್ಯೇತಿ । ಈಶಾಪರೋಕ್ಷಶಕ್ತ್ಯಾ, ಇತ್ಯರ್ಥಃ। ಜ್ಞಾನಸ್ಯ ಸ್ವೋದಯಮಾರಭ್ಯ ಫಲದಾತೃತ್ವಾತ್ । ''ಸ್ವೋದಯಾತ್ ಫಲದಂ ಜ್ಞಾನಂ' ಇತ್ಯಾದೇಃ ಇತಿ ಭಾವಃ ।

ತರ್ಹಿ ಜ್ಞಸ್ಯ ಆದಿಮೃತಿರೇವ ಏವಂ ಕಿಂ ನ ? ಇತ್ಯತ ಉಕ್ತಂ– ತಚ್ಛೇಷಗತ್ಯನುಸ್ಮೃತಿಯೋಗಾಚ್ಚ। ತಸ್ಯಾಃ=ವಿದ್ಯಾಯಾಃ ಶೇಷಃ=ಅಂಗಂ ಯಾ, ಹೃದಯಮಾರಭ್ಯ ಬ್ರಹ್ಮಪ್ರಾಪ್ತಿಪರ್ಯಂತಾಯಾ ಗತೇಃ ಅನುಸ್ಮೃತಿಃ, ತತ್ಸಾಹಿತ್ಯಾಚ್ಚ। ನ ವಿದ್ಯಾಸಾಮರ್ಥ್ಯಮಾತ್ರಾತ್ ಇತ್ಯರ್ಥಃ। ಸಾ ಚ ಸ್ಮೃತಿಃ ಸ್ವಕರ್ಮವಿರಾಮೇ ಏವ ನ ಮೃತ್ಯಂತರೇ। 'ಜ್ಞಾನಿನಾಂ ಕರ್ಮಯುಕ್ತಾನಾಂ' ಇತ್ಯಾದೇಃ ಇತಿ ಭಾವಃ ।

ಕಿಮ್ ಉಕ್ತರೂಪೇಣ ವಿದ್ಯಾಸಾಮರ್ಥ್ಯೇನೈವ ನಿರ್ಯಾತಿ ? ನೇತ್ಯಾಹ–

ಹಾರ್ದೇತಿ ॥ ಹೃತ್‌ಸಂಬಂಧಿನಾ ಹೃತ್‌ಸ್ಥೇನ ವಿದ್ಯಾಪ್ರಸನ್ನೇನ ಈಶೇನ ಅನುಗೃಹೀತಃ ಸನ್ ನಿರ್ಯಾತೀತ್ಯರ್ಥಃ । ಕಯಾ ನಾಡ್ಯಾ ಇತ್ಯತ ಉಕ್ತಂ–ಶತೇತಿ । ಶತಾಧಿಕಯಾ ಸುಷುಮ್ನಾಖ್ಯಯಾ ಇತ್ಯರ್ಥಃ।

ತತ್ವಪ್ರದೀಪೇ ತು ತದೇತಿ ವಿಚ್ಛೇದೇನ ಉತ್ಕ್ರಾಂತಿಕಾಲೇ ಇತ್ಯೇಕೋಽರ್ಥಃ ಉಕ್ತಃ।)

ಈ ಅಧಿಕರಣದಲ್ಲಿ ಜ್ಞಾನಿಯ ದೇಹೋತ್ಕ್ರಮಣದ ವಿಶೇಷವನ್ನು ಹೇಳಲಾಗಿದೆ. ಉತ್ಕ್ರಾಂತಿಕಾಲದಲ್ಲಿ ತದೋಕಸಃ=ಭಗವಂತನ ಮನೆಯಾದ ಹೃದಯದ (ತತ್ವಪ್ರದೀಪ ದಲ್ಲಿ 'ತದಾ' ಎಂದು ಪದವಿಭಾಗ) ಅಗ್ರಜ್ವಲನಂ=ಅಗ್ರಭಾಗದಲ್ಲಿ ಪ್ರಭೆಯು ಉಂಟಾಗುತ್ತದೆ. ಜ್ಞಾನಿಯು ತತ್‌ಪ್ರಕಾಶಿತದ್ವಾರಃ=ಆ ಪ್ರಭೆಯಿಂದ ಬೆಳಗಿದ ನಾಡಿಯ ಪ್ರವೇಶದ್ವಾರವುಳ್ಳವನಾಗಿ ಸುಷುಮ್ನಾನಾಡಿಯ ಮೂಲಕ ದೇಹದಿಂದ ಹೊರಬರು ತ್ತಾನೆ. ಜ್ಞಾನಿಯು ವಿದ್ಯಾಸಾಮರ್ಥ್ಯಾತ್=ಭಗವಂತನ ಅಪರೋಕ್ಷಜ್ಞಾನದ ಸಾಮರ್ಥ್ಯ ದಿಂದ ಹಾಗೂ ತಚ್ಛೇಷಗತ್ಯನುಸ್ಮೃತಿಯೋಗಾಚ್ಚ, ತಸ್ಯಾಃ=ಬ್ರಹ್ಮಾಪರೋಕ್ಷದ ಶೇಷ=ಅಂಗವಾದ ಗತ್ಯನುಸ್ಮೃತಿ=ಹೃದಯದಿಂದ ಬ್ರಹ್ಮನವರೆಗೆ ಇರುವ ಮಾರ್ಗದ ಸ್ಮರಣೆಯಿಂದ ಸಹಿತವಾಗಿ (ಮಾರ್ಗಸ್ಮರಣೆಯಿಂದ ಸಹಕೃತವಾದ ಬ್ರಹ್ಮಾಪರೋಕ್ಷ ಜ್ಞಾನದ ಸಾಮರ್ಥ್ಯದಿಂದಾಗಿ) ಹಾರ್ದಾನುಗೃಹೀತಃ=ಹೃದಯಸ್ಥನಾದ ಪರಮಾತ್ಮ ನಿಂದ ಅನುಗೃಹೀತನಾಗಿ ಶತಾಧಿಕಯಾ=ನೂರ ಒಂದನೆಯದಾದ ಸುಷುಮ್ನಾ ನಾಡಿಯಿಂದ ದೇಹದಿಂದ ನಿರ್ಗಮಿಸುತ್ತಾನೆ.

(ಅದುವರೆಗೆ ಪ್ರಾರಬ್ಧವಶಾತ್ ಬಂದಿರುವ ಅನೇಕದೇಹಗಳಿಂದ ನಿರ್ಗಮಿಸು ವಾಗ ಬರದೇ ಇರುವ ಮಾರ್ಗದ ಸ್ಮರಣೆಯು ಪ್ರಾರಬ್ಧಶೇಷಮಾತ್ರ ಉಳಿದಿರುವ ಅಂತಿಮದೇಹದ ಮರಣಕಾಲದಲ್ಲಿ ಬರುತ್ತದೆ.)

## ॥ ಓಂ ರಶ್ಮ್ಯನುಸಾರೀ ಓಂ ॥ ೧೮ ॥

**ನಿಷ್ಕ್ರಾಮತಿ ।**

**'ಸಹಸ್ರಂ ವಾ ಆದಿತ್ಯಸ್ಯ ರಶ್ಮಯ ಆಸು ನಾಡೀಷ್ವಾತತಾಸ್ತತ್ರ ಶ್ವೇತಃ ಸುಷುಮ್ನೋ ಬ್ರಹ್ಮಯಾನಃ ಸುಷುಮ್ನಾಯಾಮಾತತಸ್ತತ್ಪ್ರಕಾಶೇನೈಷ ನಿರ್ಗಚ್ಛತಿ' ಇತಿ ಹಿ ಪೌತ್ರಾಯಣಶ್ರುತಿಃ ।**

ಬ್ರಹ್ಮಜ್ಞಾನಿಯು ರಶ್ಮಿಯನ್ನು ಅನುಸರಿಸಿದವನಾಗಿ ದೇಹದಿಂದ ಹೊರಹೋಗು ತ್ತಾನೆ. ಪೌತ್ರಾಯಣಶ್ರುತಿ ಹೇಳುತ್ತದೆ—ಹೃದಯದ ನಾಡಿಗಳಲ್ಲಿ ಸಾವಿರಾರು

ಸೂರ್ಯರಶ್ಮಿಗಳು ಹರಡಿಕೊಂಡಿವೆ. ಅವುಗಳಲ್ಲಿ ಬಿಳಿಬಣ್ಣದ ಸುಷುಮ್ನಾ ಹೆಸರಿನ ಕಿರಣ ಬ್ರಹ್ಮನ ಬಳಿಗೆ ಕೊಂಡೊಯ್ಯುವ ದಾರಿ. ಅದು ಸುಷುಮ್ನಾನಾಡಿಯಲ್ಲಿ ವ್ಯಾಪಿಸಿದೆ. ಅದರ ಬೆಳಕಿನಲ್ಲಿ ನಾಡಿಯಿಂದ ಜ್ಞಾನಿಯು ದೇಹದಿಂದ ಹೊರಹೋಗುತ್ತಾನೆ.

**ವಿವರಣೆ**—ಹೃದಯದಲ್ಲಿ ನಾಡಿಗಳಲ್ಲಿರುವ ಅನೇಕ ಬಣ್ಣದ ಸೂರ್ಯರಶ್ಮಿಗಳಲ್ಲಿ ಬಿಳಿಬಣ್ಣದ ರಶ್ಮಿಗೆ ಸುಷುಮ್ನಾ ಎಂದು ಹೆಸರು. ಅದು ಜೀವನನ್ನು ಬ್ರಹ್ಮನ ಸಮೀಪಕ್ಕೆ ಒಯ್ಯುವುದರಿಂದ ಬ್ರಹ್ಮಯಾನ ಎಂದು ಹೆಸರು. ಅದರ ಮೂಲಕ ಜೀವನನ್ನು ಕರೆದುಕೊಂಡು ಹೃದಯಸ್ಥಪರಮಾತ್ಮನು ದೇಹದಿಂದ ಬ್ರಹ್ಮರಂಧ್ರದ ಮೂಲಕ ಹೊರಬರುತ್ತಾನೆ.

## ॥ ಓಂ ನಿಶಿ ನೇತಿ ಚೇನ್ನ ಸಂಬಂಧಾತ್ ಓಂ ॥ ೧೯ ॥

**ರಶ್ಮ್ಯಭಾವಾನ್ನಿಶಿ ಜ್ಞಾನಿನ ಉತ್ಕ್ರಮಣಂ ನ ಯುಕ್ತಮಿತಿ ಚೇತ್, ನ। ಸರ್ವದಾ ಸಂಬಂಧಾದ್ ರಶ್ಮೀನಾಮ್ ॥**

ರಾತ್ರಿಕಾಲದಲ್ಲಿ ಸೂರ್ಯರಶ್ಮಿಯು ಇಲ್ಲದಿರುವುದರಿಂದ ಜ್ಞಾನಿಗೆ ಉತ್ಕ್ರಮಣವು ಯುಕ್ತವಲ್ಲವೆಂದಾದೀತು ಎಂದರೆ ಇದು ಸರಿಯಲ್ಲ. ರಶ್ಮಿಯ ಸಂಬಂಧವು ರಾತ್ರಿ–ಹಗಲು ಸರ್ವದಾ ಇರುತ್ತದೆ.

**ವಿವರಣೆ**—ಈ ರಶ್ಮಿ ಹೊರಗಡೆ ಸೂರ್ಯನದಲ್ಲ. 'ಅಂತಃಸ್ಥಾದಿತ್ಯರಶ್ಮಿ' ಎಂದು ಟೀಕೆಯಲ್ಲಿ ಹೇಳಲಾಗಿದೆ. ಅದಕ್ಕೆ ಗುರ್ವರ್ಥದೀಪಿಕೆಯಲ್ಲಿ 'ಹರೇಃ ಪೀಠತಯಾ ಹೃನ್ಮಧ್ಯಸ್ಥಾದಿತ್ಯರಶ್ಮೀನಾಂ' ಎಂದು ವಿವರಣೆ ಇದೆ. ಹೃದಿಸ್ಥಬಿಂಬರೂಪಕ್ಕೆ ಪೀಠವಾಗಿ ಆದಿತ್ಯಮಂಡಲವಿದೆ. ಅದರ ರಶ್ಮಿಯು ಸರ್ವದಾ ದೇಹದ ನಾಡಿಗಳಲ್ಲಿ ಹರಡಿರುತ್ತದೆ.

**ಕಿಯತ್ಕಾಲಮ್ ?**–

## ॥ ಓಂ ಯಾವದ್ದೇಹಭಾವಿತ್ವಾದ್ ದರ್ಶಯತಿ ಚ ಓಂ ॥ ೨೦ ॥

**ಯಾವದ್ ದೇಹೋ ವಿದ್ಯತೇ ತಾವದ್ ರಶ್ಮಿಸಂಬಂಧೋಽಸ್ತ್ಯೇವ ।**

**'ಸಂಸೃಷ್ಟಾ ವಾ ಏತೇ ರಶ್ಮಯಶ್ಚ ನಾಡ್ಯಶ್ಚ ನೈಷಾಂ ವಿಯೋಗೋ ಯಾವದಿದಂ ಶರೀರಮತ ಏತೈಃ ಪಶ್ಯತ್ಯೇತೈರುತ್ಕ್ರಾಮತ್ಯೇತೈಃ ಪ್ರವರ್ತತೇ ॥' ಇತಿ ಹಿ ಮಾಧ್ಯಂದಿನಾಯನಶ್ರುತಿಃ ॥**

ಆ ರಶ್ಮಿಗಳು ಎಷ್ಟುಕಾಲ ದೇಹದ ಒಳಗೆ ಇರುತ್ತವೆ? ಎಷ್ಟುಕಾಲ ಪರ್ಯಂತ ದೇಹವು ಇರುವುದೋ ಅಷ್ಟೂಕಾಲ ರಶ್ಮಿಸಂಬಂಧವು ಇರುತ್ತದೆ. ಮಾಧ್ಯಂದಿನಾಯನ ಶ್ರುತಿ ಹೇಳುತ್ತದೆ— ರಶ್ಮಿಗಳು ಮತ್ತು ನಾಡಿಗಳು ಒಂದಕ್ಕೊಂದು ಸಂಬದ್ಧವಾಗಿರುತ್ತವೆ. ಅವುಗಳಿಗೆ ಈ ಶರೀರ ಇರುವಷ್ಟು ಕಾಲ ವಿಯೋಗವಿಲ್ಲ. ಈ ರಶ್ಮಿಗಳಿಂದಾಗಿಯೇ ಜೀವನು ತನ್ನ ಉತ್ಕ್ರಾಂತಿದ್ವಾರವನ್ನು ನೋಡುತ್ತಾನೆ, ಇವುಗಳಿಂದಾಗಿಯೇ ಉತ್ಕ್ರಾಂತಿಗಾಗಿ ಪ್ರಯತ್ನಿಸುತ್ತಾನೆ. ಇವುಗಳ ಮೂಲಕವೇ ನಿರ್ಗಮಿಸುತ್ತಾನೆ.

## ॥ ಓಂ ಅತಶ್ಚಾಯನೇಽಪಿ (ಹಿ) ದಕ್ಷಿಣೇ ಓಂ ॥ ೨೧ ॥

‘ದಕ್ಷಿಣೇ ಮರಣಾದ್ ಯಾತಿ ಸ್ವರ್ಗಂ ಬ್ರಹ್ಮೋತ್ತರಾಯಣೇ ।’
ಇತ್ಯುಕ್ತೇಽಪಿ ಜ್ಞಾನಿನೋ ದಕ್ಷಿಣಾಯನೋತ್ಕ್ರಾಂತಿರ್ಯುಜ್ಯತೇ ॥
ಶತಂ ಪಂಚೈವ ಸೂರ್ಯಸ್ಯ ದಕ್ಷಿಣಾಯನರಶ್ಮಯಃ ।
ತಾವಂತ ಏವ ನಿರ್ದಿಷ್ಟಾ ಉತ್ತರಾಯಣರಶ್ಮಯಃ ॥
ತೇ ಸರ್ವೇ ದೇಹಸಂಬದ್ಧಾಃ ಸರ್ವದಾ ಸರ್ವದೇಹಿನಾಮ್ ।
ಮಹರ್ಲೋಕಾದಿಗಂತಾರ ಉತ್ತರಾಯಣರಶ್ಮಿಭಿಃ ।
ನಿರ್ಗಚ್ಛಂತೀತರೈಶ್ಚಾಪಿ ಯೈರೇಷ್ಟವ್ಯೇತರಾ ಗತಿಃ ॥
ಉತ್ತರಂ ದಕ್ಷಿಣಮಿತಿ ತೇ(ತ) ಏವ ತು ನಿಗದ್ಯತೇ ।
ನತು ಕಾಲವಿಶೇಷೋಽಸ್ತಿ ಜ್ಞಾನಿನಾಂ ನಿಯಮಾತ್ ಫಲಮ್ ॥
ದದಾತಿ ಕಾಲೇಽನುಗುಣೇ ಫಲಂ ಕಿಂಚಿದ್ ವಿಶಿಷ್ಯತೇ ।
ಅತ್ಯುತ್ತಮಾನಾಂ ಕೇಷಾಂಚಿನ್ನ ವಿಶೇಷೋಽಸ್ತಿ ಕಾಲತಃ ॥’
ಇತಿ ಹಿ ನಾರಾಯಣಾಧ್ಯಾತ್ಮೇ ।

“ದಕ್ಷಿಣಾಯನಕಾಲದಲ್ಲಿ ಮರಣದಿಂದ ಸ್ವರ್ಗಕ್ಕೆ ಹೋಗುತ್ತಾನೆ, ಉತ್ತರಾಯಣಕಾಲದಲ್ಲಿ ಮರಣದಿಂದ ಬ್ರಹ್ಮನ ಬಳಿ ಸೇರುತ್ತಾನೆ” ಎಂದು ಹೇಳಿದ್ದರೂ ಜ್ಞಾನಿಗೆ ದಕ್ಷಿಣಾಯನಕಾಲದಲ್ಲೂ ಉತ್ಕ್ರಾಂತಿಯು ಯೋಗ್ಯವಾಗುತ್ತದೆ. ನಾರಾಯಣಾಧ್ಯಾತ್ಮದಲ್ಲಿದೆ– ಸೂರ್ಯನ ಐದುನೂರು ರಶ್ಮಿಗಳು ದಕ್ಷಿಣಾಯನ ರಶ್ಮಿಗಳೆನಿಸಿವೆ, ಅಷ್ಟೇ ಸಂಖ್ಯೆಯ ರಶ್ಮಿಗಳು ಉತ್ತರಾಯಣರಶ್ಮಿಗಳು. ಅವೆಲ್ಲವೂ ಎಲ್ಲಾ

ಜೀವಿಗಳ ದೇಹಗಳಲ್ಲಿ ಸಂಬದ್ಧವಾಗಿರುತ್ತವೆ. ಉತ್ತರಾಯಣರಶ್ಮಿಗಳಿಂದ ಮಹರಾದಿ ಲೋಕಕ್ಕೆ ಹೋಗುವವರು ನಿರ್ಗಮಿಸುತ್ತಾರೆ. ಯಾರು ಪುನರಾವೃತ್ತಿ ಇರುವ ಇತರ ಗತಿಗಳಿಗೆ ಹೋಗಬೇಕೋ ಅವರು ಇತರೈಃ=ದಕ್ಷಿಣಾಯನರಶ್ಮಿಗಳ ಮೂಲಕ ನಿರ್ಗಮಿಸುತ್ತಾರೆ. ಉತ್ತರಾಯಣದಕ್ಷಿಣಾಯನ ಎಂದು ಈ ರಶ್ಮಿಗಳಿಗೇ ಹೆಸರು. ಜ್ಞಾನಿಗಳ ಮರಣಕ್ಕೆ ಕಾಲವಿಶೇಷದ ನಿರ್ಬಂಧವು ಇಲ್ಲ. ಅವರಿಗೆ ಜ್ಞಾನವು ನಿಶ್ಚಿತವಾಗಿ ಫಲವನ್ನು ಕೊಡುತ್ತದೆ. ಉತ್ತರಾಯಣ-ಶುಕ್ಲಪಕ್ಷ ಇಂತಹ ಅನುರೂಪಕಾಲದಲ್ಲಿ ಆಗುವ ಮರಣವು ಸ್ವಲ್ಪ ಅತಿಶಯಕ್ಕೆ ಕಾರಣವಾಗುತ್ತದೆ. (ಆದ್ದರಿಂದ ಭೀಷ್ಮಾದಿಗಳು ಉತ್ತರಾಯಣಕಾಲವನ್ನು ಪ್ರತೀಕ್ಷೆ ಮಾಡಿದ್ದಾರೆ.) ಅತ್ಯುತ್ತಮರಾದ ಕೆಲವರಿಗೆ ಮರಣಕಾಲದಿಂದ ಯಾವ ವಿಶೇಷವೂ ಇಲ್ಲ.

**ವಿವರಣೆ**—ಅಜ್ಞಾನಿಗಳು ದಕ್ಷಿಣಾಯನದಲ್ಲಿ ದೇಹತ್ಯಾಗ ಮಾಡುತ್ತಾರೆ. ಜ್ಞಾನಿಗಳಿಗೆ ಕಾಲನಿಯಮವಿಲ್ಲ. ಐತರೇಯಭಾಷ್ಯದಲ್ಲಿ—

ಉತ್ತರಂ ದಕ್ಷಿಣಮಿತಿ ತ ಏವತು ನಿಗದ್ಯತೇ॥ ಎಂದಿದೆ.

'ಉತ್ತರೇ ಮರಣಾದ್ ಯಾತಿ' ಎಂಬ ಪ್ರಮಾಣದಲ್ಲಿ ಉತ್ತರ ದಕ್ಷಿಣ ಪದಗಳಿಂದ ಈ ರಶ್ಮಿಗಳೇ ಹೇಳಲ್ಪಟ್ಟಿವೆ ಎಂದು ಅರ್ಥ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ರಶ್ಮ್ಯನುಸಾರೀ ಓಂ ॥** (''ಸಹಸ್ರಂ ವಾ ಆದಿತ್ಯಸ್ಯ...'' ಇತಿ ಶ್ರುತ್ಯಾ ನಾಡ್ಯಂತರಾತತಸೌರರಶ್ಮ್ಯನುಸಾರೀ ಸನ್ ಜ್ಞಾನೀ ನಿರ್ಯಾತೀತ್ಯಸ್ತಿ, ದ್ವಾರಪ್ರಕಾಶಸ್ಯ ವೈಷ್ಣವತ್ವಾತ್ ಅಂತಃ ಪ್ರಕಾಶಸ್ಯ ಸೌರತ್ವಾತ್ ದ್ವಾರಪದಂ ಅರ್ಥವತ್ । ''ತದಾ ವಿಷ್ಣೋಃ ಸ್ವತೇಜಸಾ ದ್ಯೋತತೇ ಹೃದಯಾಗ್ರಂ' ಇತ್ಯಾದೇರಿತಿ ಭಾವಃ ॥)

ರಶ್ಮ್ಯನುಸಾರೀ=ಸೂರ್ಯರಶ್ಮಿಯನ್ನು ಅನುಸರಿಸಿ ಜ್ಞಾನಿಯು ನಾಡಿಯ ಮೂಲಕ ದೇಹದಿಂದ ನಿರ್ಗಮಿಸುತ್ತಾನೆ. ನಾಡೀದ್ವಾರಪ್ರಕಾಶ ವಿಷ್ಣುಪ್ರಕಾಶ ದಿಂದಾಗುತ್ತದೆ. ಆದ್ದರಿಂದಲೇ ಹಿಂದಿನ ಸೂತ್ರದಲ್ಲಿ ''ಪ್ರಕಾಶಿತದ್ವಾರಃ'' ಎಂಬ ಪದ ಸಾರ್ಥಕ. ದ್ವಾರವನ್ನಷ್ಟೇ ವೈಷ್ಣವ ತೇಜಸ್ಸು ಪ್ರಕಾಶಪಡಿಸುತ್ತದೆ.

**॥ ಓಂ ನಿಶಿ ನೇತಿ ಚೇನ್ನ ಸಂಬಂಧಾತ್ ಓಂ ॥** (ರಾತ್ರೌ ಪರ್ಯವಸಿತ ಕರ್ಮಣಾಮ್ ಉತ್ಕ್ರಾಂತಿಃ ನ ಸ್ಯಾತ್, ತದಾ ರಶ್ಮ್ಯಭಾವಾತ್ ಇತಿ ಚೇನ್ನ । ಸಂಬಂಧಾತ್-ರಶ್ಮೀನಾಮ್ ಇತ್ಯನುಷಂಗಃ, ಬಾಹ್ಯಾದಿತ್ಯಾಭಾವೇಽಪಿ ಅಂತಸ್ಥಾದಿತ್ಯ ರಶ್ಮೀನಾಂ ಸದಾ ನಾಡೀಸಂಬಂಧಾತ್ ಇತ್ಯರ್ಥಃ ।)

ಸೂರ್ಯರಶ್ಮಿಯಿಂದ ನಿರ್ಗಮವೆಂದಾದಲ್ಲಿ ಪ್ರಾರಬ್ಧಕ್ಷಯವಾದ ಜ್ಞಾನಿಗೆ ರಾತ್ರಿಯಲ್ಲಿ ಉತ್ಕ್ರಾಂತಿಯಾಗಬಾರದು, ಎನ್ನುವುದು ಸರಿಯಲ್ಲ. ಸಂಬಂಧಾತ್= ಒಳಗಿನ ಆದಿತ್ಯನ ರಶ್ಮಿಯ ಸಂಬಂಧವು ಸರ್ವದಾ ಇರುವುದರಿಂದ. (ರಾತ್ರಿಕಾಲದಲ್ಲೂ ಜ್ಞಾನಿಗೆ ಉತ್ಕ್ರಾಂತಿಯಾಗಬಹುದು.)

**|| ಓಂ ಯಾವದ್ದೇಹಭಾವಿತ್ವಾದ್ ದರ್ಶಯತಿ ಚ ಓಂ ||** (ಸಂಬಂಧಸ್ಯೇತ್ಯನು-ಷಂಗಃ । ನಾಡೀರಶ್ಮಿಸಂಬಂಧಸ್ಯ ಯಾವದ್ದೇಹಭಾವಿತ್ವಾತ್ । ನಚಾಸಿದ್ಧಮಿದಮ್ ॥ ''ಸಂಸೃಷ್ಟಾ ವಾ ಏತೇ ರಶ್ಮಯಃ'' ಇತಿ ಶ್ರುತಿಃ ದರ್ಶಯತಿ ಯಸ್ಮಾತ್ ತಸ್ಮಾದಿತ್ಯರ್ಥಃ । ಚಃ ಯತ ಇತ್ಯರ್ಥೇ ।)

**|| ಓಂ ಅತಶ್ಚಾಯನೇಽಪಿ ಹಿ ದಕ್ಷಿಣೇ ಓಂ ||** (ಸಾಧ್ಯಸಮುಚ್ಚಯೇ ಚಃ । ಹಿಃ ಹೇತೌ । ಅಪಿಃ ಸ್ಮೃತಿಸಮುಚ್ಚಯೇ । ''ದಕ್ಷಿಣೇ ಮರಣಾತ್'' ಇತಿ ಸ್ಮೃತಿವಚನೇನ ಜ್ಞಾನಿನೋ ದಕ್ಷಿಣಾಯನೋತ್ಕ್ರಾಂತ್ಯಯೋಗದೃಷ್ಟಾಂತೇನ ರಾತ್ರಾವಪಿ ತದಭಾವಃ ನವಾಚ್ಯಃ । 'ದಕ್ಷಿಣೇ ಮರಣಾತ್' ಇತಿ ಸ್ಮೃತಿಸತ್ವೇಽಪಿ ದಕ್ಷಿಣಾಯನೇ ಜ್ಞಾನಿನಃ ಉತ್ಕ್ರಾಂತಿಃ ಯುಕ್ತಾ । ಕುತಃ ? ಅತಃ=ಸೌರರಶ್ಮಿಸಹಸ್ರಸ್ಯ ನಾಡೀಸಂಬಂಧಸತ್ವಾತ್ ಇತ್ಯರ್ಥಃ ।)

'ದಕ್ಷಿಣೇ ಮರಣಾತ್' ಎಂಬ ಸ್ಮೃತಿಯಲ್ಲಿ ದಕ್ಷಿಣಾಯನಮರಣವು ಪುನರಾವೃತ್ತಿಗೆ ಕಾರಣವೆಂದು ಹೇಳಿದ್ದರೂ ಅತಃ=ಸೌರರಶ್ಮಿಗಳು ನಾಡಿಗಳಲ್ಲಿ ಸರ್ವದಾ ಇರುವುದರಿಂದ ದಕ್ಷಿಣಾಯನದ ರಾತ್ರಿಕಾಲದಲ್ಲಿ ಮರಣವಾದರೂ ಜ್ಞಾನಿಯು ಉತ್ತರಾಯಣ ರಶ್ಮಿಯ ಮೂಲಕವೇ ಹೋಗುತ್ತಾನೆ.

## ಶಾಂಕರಭಾಷ್ಯದಲ್ಲಿ ತದೋಕೋಧಿಕರಣ

**|| ತದೋಕೋಗ್ರಜ್ವಲನಂ ತತ್ಪ್ರಕಾಶಿತದ್ವಾರೋ ವಿದ್ಯಾಸಾಮರ್ಥ್ಯಾತ್ ತಚ್ಛೇಷಗತ್ಯನುಸ್ಮೃತಿಯೋಗಾಚ್ಚ ಹಾರ್ದಾನುಗೃಹೀತಃ ಶತಾಧಿಕಯಾ ||** ಪ್ರಾಸಂಗಿಕ ವಾಗಿ ಪರವಿದ್ಯೆಯ ವಿಷಯವನ್ನು ಹೇಳಿ ಅಪರವಿದ್ಯೆಯ ಫಲವಾದ 'ಸೃತ್ಯುಪಕ್ರಮವನ್ನು' ಇಲ್ಲಿ ಹೇಳಲಾಗಿದೆ. ತದೋಕೋಗ್ರಜ್ವಲನಂ, ತಸ್ಯ=ವಾಗಾದಿ ಇಂದ್ರಿಯಗಳಿಂದ ಲಯಹೊಂದಲ್ಪಟ್ಟ ಆತ್ಮನ ಓಕಃ=ಆಶ್ರಯ ಅಂದರೆ ಹೃದಯ ಅದರ ಅಗ್ರಜ್ವಲನಂ=ಅಗ್ರಭಾಗದ ಪ್ರಕಾಶಪೂರ್ವಕವಾಗಿ ದೇಹದ ಚಕ್ಷುರಾದಿ ಅನೇಕ ದ್ವಾರಗಳ ಮೂಲಕ ದೇಹದಿಂದ ಉತ್ಕ್ರಮಣವಾಗುವುದು. ವಾಕ್ ಮನಸ್ಸಿನಲ್ಲಿ ಮನಸ್ಸು ಪ್ರಾಣನಲ್ಲಿ ಹೀಗೆ ಎಲ್ಲ ಇಂದ್ರಿಯಗಳೂ ಲಯವಾದ ಮೇಲೆ ಆತ್ಮನ ಹೃದಯಾಗ್ರವು

ಜ್ವಲಿಸುವುದು. ಆ ಪ್ರಕಾಶದಲ್ಲಿ ದೇಹದಿಂದ ಹೊರಬರುವ ದ್ವಾರಗಳು ಗೋಚರಿಸುತ್ತವೆ. ಆ ಮೂಲಕ ಜೀವನು, ದೇಹದಿಂದ ಅವನವನ ಸಾಧನೆಗೆ ಅನುಗುಣವಾಗಿ, ಬೇರೆ ಬೇರೆ ದ್ವಾರಗಳಿಂದ ಹೊರಬರುತ್ತಾನೆ.

ಇದು ಜ್ಞಾನಿ ಅಜ್ಞಾನಿಗಳಿಗೆ ಸಮಾನವಾದರೂ ಜ್ಞಾನಿಯು ವಿದ್ಯಾಸಾಮರ್ಥ್ಯದಿಂದ ಮತ್ತು ತಾನು ಹೋಗಲಿರುವ ಮಾರ್ಗದ ಸ್ಮರಣೆಯಿಂದ ಹಾಗೂ ಹಾರ್ದಾನುಗೃಹೀತಃ=ಹೃದಯಸ್ಥಬ್ರಹ್ಮನ ಅನುಗ್ರಹದಿಂದ ಶತಾಧಿಕಯಾ=ನೂರ ಒಂದನೆಯ ನಾಡಿಯಿಂದ ಉತ್ಕ್ರಮಣ ಹೊಂದುತ್ತಾನೆ.

**ವಿಮರ್ಶೆ**—ಹಿಂದಿನ ಅಧಿಕರಣಗಳಲ್ಲಿ ಬ್ರಹ್ಮಜ್ಞಾನಿಯು ಹೊಂದುವ ಬ್ರಹ್ಮೈಕ್ಯ ಫಲವನ್ನು ಹೇಳಿ ಇಲ್ಲಿ ಆ ಬ್ರಹ್ಮಜ್ಞಾನಿಗೆ ಆಗುವ ಉತ್ಕ್ರಮಣಾದಿಗಳನ್ನು ಹೇಳುವುದು ಅಸಂಗತವೆನಿಸುತ್ತದೆ. ಹಿಂದಿನ ಅಧಿಕರಣದಲ್ಲಿ ಪ್ರಸಂಗಾತ್ ಬ್ರಹ್ಮಜ್ಞಾನಿಗಳ ಬಗ್ಗೆ ಹೇಳಿ ಪ್ರಧಾನ ಪ್ರಕೃತವಾದ ಅಪರವಿದ್ಯೋಪಾಸಕರ ಬಗ್ಗೆ ಇಲ್ಲಿ ಹೇಳಲಾಗಿದೆ, ಎಂದು ಶಾಂಕರಭಾಷ್ಯ ಹೇಳಿರುವ ಸಂಗತಿ. ಇದನ್ನು ಶೇಷತಾತ್ಪರ್ಯಚಂದ್ರಿಕಾದಲ್ಲಿ ಪರಿಹಾಸ ಮಾಡಲಾಗಿದೆ—''ವೋಢಾರಂ ವಿನಾ ವೈವಾಹಿಕಯಾತ್ರಾಪ್ರಸಂಗಃ'' 'ಮದು ಮಗನೇ ಇಲ್ಲದ ಮದುವೆ'. ಇದು ಫಲಾಧ್ಯಾಯ. ಇಲ್ಲಿ ಬ್ರಹ್ಮಜ್ಞಾನಿಯ ಯಾತ್ರೆಯನ್ನು ಹೇಳಬೇಕು. ಅಬ್ರಹ್ಮಜ್ಞಾನಯಾತ್ರೆ ಪ್ರಾಸಂಗಿಕ. ಆದರೆ ಪ್ರಧಾನ ವಿಷಯ ಅಬ್ರಹ್ಮಜ್ಞಾನಿ ಯಾತ್ರೆ!

## ಶಾಂಕರಭಾಷ್ಯದಲ್ಲಿ ರಶ್ಮ್ಯಧಿಕರಣ

**॥ ರಶ್ಮ್ಯನುಸಾರೀ ॥** ಛಾಂದೋಗ್ಯದಲ್ಲಿ ದಹರವಿದ್ಯೆಯನ್ನು ಹೇಳಿ (8.1.1) ಹೃದಯದ ನಾಡಿಗಳನ್ನು ಪ್ರಸ್ತಾಪ ಮಾಡಿ ''ಅಥ ಯತ್ರೈತತ್ ಅಸ್ಮಾತ್ ಶರೀರಾತ್ ಉತ್ಕ್ರಾಮತಿ ಅಥ ಏತೈರೇವ ರಶ್ಮಿಭಿಃ ಊರ್ಧ್ವಮ್ ಆಕ್ರಮತೇ'' (8.6.5) ನಾಡಿಗಳಲ್ಲಿರುವ ಸೂರ್ಯರಶ್ಮಿಯ ಮೂಲಕ ಜೀವನು ಶರೀರದಿಂದ ಮರಣ ಸಮಯದಲ್ಲಿ ಹೊರಬರುತ್ತಾನೆ, ಎನ್ನಲಾಗಿದೆ. ಮುಂದೆ, ''ತಯೋರ್ಧ್ವಮಾಯನ್ ಅಮೃತತ್ವಮೇತಿ'' ಎಂದು ಜ್ಞಾನಿಯು ನೂರಒಂದನೇ ನಾಡಿಯಿಂದ ಉತ್ಕ್ರಮಿಸಿ ಅಮೃತತ್ವವನ್ನು ಪಡೆಯುತ್ತಾನೆ, ಎಂದಿದೆ. ರಾತ್ರಿಯೋ ಹಗಲೋ ಎಂಬ ವಿಶೇಷವನ್ನು ಹೇಳದೆಯೇ ರಶ್ಮಿಯ ಮೂಲಕ ದಹರೋಪಾಸಕನು ಹೋಗುತ್ತಾನೆ, ಎಂದಿರುವುದರಿಂದ ಜ್ಞಾನಿಯು ರಾತ್ರಿಯಲ್ಲಿ ದೇಹತ್ಯಾಗ ಮಾಡಿದರೂ ರಶ್ಮಿಯ ಮೂಲಕವೇ ಹೊರಬರುತ್ತಾನೆ.

**॥ ನಿಶಿ ನೇತಿ ಚೇನ್ನ ಸಂಬಂಧಸ್ಯ ಯಾವದ್ದೇಹಭಾವಿತ್ವಾದ್ ದರ್ಶಯತಿ ಚ ॥**
ರಾತ್ರಿಯಲ್ಲಿ ಸೂರ್ಯನು ಇರುವುದಿಲ್ಲ. ಆದ್ದರಿಂದ ನಾಡಿಗಳಲ್ಲೂ ಸೂರ್ಯರಶ್ಮಿ ಇರಲು ಸಾಧ್ಯವಿಲ್ಲ ಎನ್ನಬಾರದು. ಸಂಬಂಧಸ್ಯ ಯಾವದ್ದೇಹಭಾವಿತ್ವಾತ್=ರಶ್ಮಿ ಮತ್ತು ನಾಡಿಗಳ ಸಂಬಂಧ ರಾತ್ರಿಹಗಲೆನ್ನದೆ, ದೇಹ ಇರುವವರೆಗೂ ಇರುತ್ತದೆ. ಸೆಖೆಕಾಲದಲ್ಲಿ ರಾತ್ರಿಯೂ ಬಿಸಿ ಇರುತ್ತದೆ, ಆದರೂ ರಶ್ಮಿ ಕಾಣುವುದಿಲ್ಲ. ಮೋಡಗಳಿದ್ದಾಗಲೂ ರಶ್ಮಿ ಕಾಣದಿದ್ದರೂ ಇರುತ್ತದೆ. ಅದರಂತೆ, ನಾಡಿಗಳಲ್ಲಿ ರಾತ್ರಿಕಾಲದಲ್ಲೂ ರಶ್ಮಿ ಇರುತ್ತದೆ. ಶ್ರುತಿ ಹಾಗೇ ಹೇಳುತ್ತದೆ—''ಅಮುಷ್ಮಾದಾದಿತ್ಯಾತ್ ಪ್ರತಾಯಂತೇ ತಾ ಆಸು ನಾಡೀಷು ಸೃಪ್ತಾಃ ಆಭ್ಯೋ ನಾಡೀಭ್ಯಃ ಪ್ರತಾಯಂತೇ''

**ವಿಶೇಷ**—ಶಾಂಕರಭಾಷ್ಯದಲ್ಲಿ 19 ಮತ್ತು 20ನೇ ಸೂತ್ರವನ್ನು ಒಂದಾಗಿ ಪರಿಗಣಿಸಲಾಗಿದೆ. ''ನಿಶಿ ನೇತಿ ಚೇನ್ನ ಸಂಬಂಧಾತ್'-19 'ಯಾವದ್ದೇಹಭಾವಿತ್ವಾತ್ ದರ್ಶಯತಿ ಚ'-20. ಈ ಎರಡನ್ನು ಸೇರಿಸಿ ಒಂದೇ ಸೂತ್ರವನ್ನಾಗಿ ಮಾಡಲಾಗಿದೆ. ''ಸಂಬಂಧಾತ್'' ಎಂಬ ಪದದಲ್ಲಿ ಪಂಚಮೀವಿಭಕ್ತಿಯ ಬದಲು ''ಸಂಬಂಧಸ್ಯ'' ಎಂದು ಷಷ್ಠೀವಿಭಕ್ತಿಯನ್ನು ಹಾಕಲಾಗಿದೆ.

**ರಾಮಾನುಜಭಾಷ್ಯ**ದಲ್ಲಿ ಶಾಂಕರಭಾಷ್ಯದಂತೆ ''ತದೋಕಃ'' ಇತ್ಯಾದಿ 17ನೇ ಸೂತ್ರ ಪ್ರತ್ಯೇಕಾಧಿಕರಣ. 'ತದೋಕಃ+ಅಗ್ರಜ್ವಲನಂ' ಎಂದು ಭಿನ್ನಪದಗಳು. ''ಅಗ್ರೇ ಜ್ವಲನಂ ಯಸ್ಯ'' ಎಂದು ಬಹುವ್ರೀಹಿ ಮಾಡಿದಾಗ 'ತದೋಕಃ' ಎಂಬುದಕ್ಕೆ ವಿಶೇಷಣವಾಗುತ್ತದೆ. 'ಜೀವನ ಮನೆಯಾದ ಹೃದಯಾಗ್ರವು ಪ್ರಕಾಶವಾಗುತ್ತದೆ' ಎಂದರ್ಥ. ಉಳಿದ ಅರ್ಥ ದ್ವೈತಭಾಷ್ಯದಂತೆ.

''ರಶ್ಮ್ಯನುಸಾರೀ'' (ರಾ.ಭಾ.ದಂತೆ 17ನೇ ಸೂತ್ರ) ಇದು ಪ್ರತ್ಯೇಕಾಧಿಕರಣ. ಇಲ್ಲಿ ಜ್ಞಾನಿಯು ರಶ್ಮಿಯನ್ನು ಅನುಸರಿಸಿ ದೇಹದಿಂದ ದೇವಯಾನಮಾರ್ಗ ಸೇರುತ್ತಾನೆ. ಆ ರಶ್ಮಿಗಳು ನಾಡಿಯಲ್ಲಿ ಸದಾ ಇರುತ್ತವೆ. ಇಷ್ಟೂ ಅರ್ಥಗಳನ್ನು ಈ ಅಧಿಕರಣದಲ್ಲಿ ಹೇಳಲಾಗಿದೆ.

''**ನಿಶಿ ನೇತಿ ಚೇನ್ನ ಸಂಬಂಧಸ್ಯ ಯಾವದ್ದೇಹಭಾವಿತ್ವಾತ್**'' ಈ ಸೂತ್ರ ಇನ್ನೊಂದು ಅಧಿಕರಣ. ರಾತ್ರಿಮರಣವು ಶಾಸ್ತ್ರಗಳಲ್ಲಿ ನಿಷಿದ್ಧವಾದುದರಿಂದ ಜ್ಞಾನಿಯು ರಾತ್ರಿಕಾಲದಲ್ಲಿ ಮರಣ ಹೊಂದಿದರೆ ಅಧೋಗತಿಗೆ ಹೋಗುತ್ತಾನೆ, ಎಂದು ಪೂರ್ವಪಕ್ಷ. ಅದಕ್ಕೆ ಉತ್ತರ—ಸಂಬಂಧಸ್ಯ=ಕರ್ಮಸಂಬಂಧವು ಯಾವದ್ದೇಹ ಭಾವಿ. ಜ್ಞಾನ ಬಂದ ಕೂಡಲೇ ಜ್ಞಾನಿಯ ಸಂಚಿತಕರ್ಮಗಳು ನಾಶವಾಗುತ್ತವೆ. ಪ್ರಾರಬ್ಧವನ್ನು

ಅನುಭವಿಸಿದ್ದಾನೆ. ಜ್ಞಾನೋತ್ತರ ಕರ್ಮದ ಲೇಪವಿಲ್ಲ. ಹೀಗೆ ಚರಮದೇಹ ಇರುವವರೆಗೆ ಮಾತ್ರ ಕರ್ಮ. ಚರಮದೇಹವನ್ನು ಬಿಟ್ಟ ಮೇಲೆ ಕರ್ಮವೇ ಇಲ್ಲದಿರುವುದರಿಂದ ಅಧೋಗತಿಗೆ ಹೋಗುವ ಸಂಭವವೇ ಇಲ್ಲ.

ಇಲ್ಲಿಗೆ ಹೃದಯಾಗ್ರಜ್ವಲನಾಧಿಕರಣವು ಮುಗಿಯಿತು.

## ೧೦. ಪ್ರತಿಸ್ಮರಣಾಧಿಕರಣಮ್

**॥ ಓಂ ಯೋಗಿನಃ ಪ್ರತಿ ಸ್ಮರ್ಯೇತೇ ಸ್ಮಾರ್ತೇ ಚೈತೇ ಓಂ ॥ ೨೨ ॥**

ನ ಕೇವಲಂ ಕಾಲಾದಿಕೃತೇ ಬ್ರಹ್ಮಚಂದ್ರಗತೀ ಸ್ಮರ್ಯೇತೇ ಕಿಂತು, ಜ್ಞಾನಯೋಗಿನಃ ಕರ್ಮಯೋಗಿನಶ್ಚ ।

ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।
ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ।
ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ ।
ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ॥
ಇತ್ಯತ್ರ 'ಯೋಗೀ' ಇತಿ ವಿಶೇಷಣಾತ್ ।

ಸ್ಮರಣನಿಮಿತ್ತೇ ಚೈತೇ ಗತೀ–

'ಗತ್ಯನುಸ್ಮರಣಾದ್ ಬ್ರಹ್ಮ ಚಂದ್ರಂ ವಾ ಗಚ್ಛತಿ ಧ್ರುವಮ್ ।
ಅನನುಸ್ಮರತಃ ಕಾಲೇ ಸ್ಮರಣಂ ಪ್ರಾಪ್ಯ ವೈ ಗತಿಃ ॥'
ಇತಿ ಹ್ಯಧ್ಯಾತ್ಮೇ ॥

ಬ್ರಹ್ಮಗತಿ ಮತ್ತು ಚಂದ್ರಗತಿ ಇವೆರಡೂ ಕಾಲವಿಶೇಷಗಳಲ್ಲಿ ಮರಣವಾದಾಗ ಮಾತ್ರ. ಆದ್ದರಿಂದ ಆ ಗತಿಗಳೆರಡೂ ಕಾಲಕೃತ, ಎಂದಿಷ್ಟೇ ''ಅಗ್ನಿರ್ಜ್ಯೋತಿರಹಃ'' ಇತ್ಯಾದಿಗೀತಾವಾಕ್ಯದ ಅಭಿಪ್ರಾಯವಲ್ಲ. ಜ್ಞಾನಯೋಗಿಗಳು ಮತ್ತು ಕರ್ಮಯೋಗಿಗಳನ್ನು ಕುರಿತು ಗೀತಾಸ್ಮೃತಿಯಲ್ಲಿ ಅವುಗಳನ್ನು ಹೇಳಲಾಗಿದೆ. ಅದಕ್ಕಾಗಿಯೇ ಗೀತಾವಾಕ್ಯದಲ್ಲಿ 'ಯೋಗೀ' ಎಂಬ ಪದವಿದೆ. ಇದರಿಂದ ಆ ಮಾರ್ಗಗಳು ಜ್ಞಾನ ಕರ್ಮ ಸಾಧ್ಯಗಳಾಗಿರುವುದರಿಂದಾಗಿ ಜ್ಞಾನಯೋಗಿ, ಕರ್ಮ ಯೋಗಿಗಳಲ್ಲದವರಿಗೆ ಆ ಕಾಲದಲ್ಲಿ ಮೃತಿ ಮಾತ್ರದಿಂದ ಉತ್ತಮಗತಿ ಸಿಗುವುದಿಲ್ಲ, ಎಂದು ತಿಳಿಯುತ್ತದೆ.

''ಅಗ್ನ್ಯಭಿಮಾನಿದೇವತಾಲೋಕ, ಜ್ಯೋತಿಃ=ಅರ್ಚಿರಭಿಮಾನಿಲೋಕ, ಅಹಃ= ಅಹರಭಿಮಾನಿಲೋಕ, ಶುಕ್ಲಃ=ಶುಕ್ಲಪಕ್ಷಾಭಿಮಾನಿಲೋಕ, ಷಣ್ಮಾಸಾ ಉತ್ತರಾಯಣಮ್=ಉತ್ತರಾಯಣಾಭಿಮಾನಿಲೋಕ, ಈ ಮಾರ್ಗದ ಮೂಲಕ ಬ್ರಹ್ಮಜ್ಞಾನಿಗಳು ಹೋಗುತ್ತಾರೆ. ಧೂಮಃ=ಧೂಮಾಭಿಮಾನಿಲೋಕ, ರಾತ್ರಿಃ= ರಾತ್ರ್ಯಭಿಮಾನಿಲೋಕ, ಕೃಷ್ಣಪಕ್ಷಾಭಿಮಾನಿಲೋಕ, ದಕ್ಷಿಣಾಯನಾಭಿಮಾನಿ ಲೋಕ ಈ ಮಾರ್ಗಗಳ ಮೂಲಕ ಚಂದ್ರಲೋಕಕ್ಕೆ ಹೋದವರು ಹಿಂತಿರುಗಿ ಬರುತ್ತಾರೆ.''

ಸ್ಮರಣೆ ಬಂದರೆ ಮಾತ್ರ ಈ ಎರಡು ಮಾರ್ಗಗಳಲ್ಲಿ ಗಮನ. ಅಧ್ಯಾತ್ಮದಲ್ಲಿ ಹೀಗಿದೆ—ಕರ್ಮಯೋಗಿಗಳು ಮತ್ತು ಜ್ಞಾನಯೋಗಿಗಳು ಮಾರ್ಗದ ಸ್ಮರಣೆಯಿಂದ ಬ್ರಹ್ಮನ ಬಳಿಗೋ ಚಂದ್ರಲೋಕಕ್ಕೋ ಹೋಗುತ್ತಾರೆ. ಮೊದಲು ಈ ಮಾರ್ಗಗಳ ಜ್ಞಾನವು ಇಲ್ಲದಿದ್ದರೂ ಮರಣಕಾಲದಲ್ಲಿ ಸ್ಮರಣೆಗೆ ಬಂದೇ ಆ ಮಾರ್ಗದಲ್ಲಿ ಗಮನವಾಗುತ್ತದೆ. (ಅದು ಸೂತ್ರದ 'ಸ್ಮಾರ್ತೇ' ಎಂಬ ಪದದ ಅರ್ಥ.)

**ವಿವರಣೆ**—'ಬ್ರಹ್ಮಚಂದ್ರಗತೀ ಕಾಲಕೃತೇ ನ ಸ್ಮರ್ಯೇತೇ' ಎಂದು ಭಾಷ್ಯ. ಕರ್ಮಿಗಳಿಗೆ ಚಂದ್ರಪ್ರಾಪ್ತಿ ಜ್ಞಾನಿಗಳಿಗೆ ಬ್ರಹ್ಮಪ್ರಾಪ್ತಿ ಇವೆರಡೂ ಕೇವಲ ಮರಣಕಾಲ ವಿಶೇಷದಿಂದಲೇ ಆಗುವುದಿಲ್ಲ. ಜ್ಞಾನ-ಕರ್ಮಗಳ ಜೊತೆಗೆ ಮಾರ್ಗಸ್ಮರಣೆಯಿಂದಲೇ ಆ ಫಲಗಳು ಸಿದ್ಧಿಸುತ್ತವೆ, ಎಂದರ್ಥ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ಯೋಗಿನಃ ಪ್ರತಿ ಸ್ಮರ್ಯೇತೇ ಸ್ಮಾರ್ತೇ ಚೈತೇ ಓಂ ॥** (ಅತ್ರ ವಿದ್ಯಾಗತ್ಯನುಸ್ಮೃತ್ಯೋಃ ಆವಶ್ಯಕತ್ವಂ ಸಾಧ್ಯತೇ । ಯೋಗಿನಃ ಇತಿ ದ್ವಿತೀಯಾಂತಂ । ಏತೇ=ಬ್ರಹ್ಮ-ಚಂದ್ರಗತೀ ಯೋಗಿನಃ=ಜ್ಞಾನ-ಕರ್ಮ ಯೋಗಿನಃ ಪ್ರತಿ ಸ್ಮರ್ಯೇತೇ= ''ಅಗ್ನಿರ್ಜ್ಯೋತಿರಹಃ ಶುಕ್ಲಃ' 'ಧೂಮೋ ರಾತ್ರಿಸ್ತಥಾ ಕೃಷ್ಣಃ' ಇತ್ಯಾದಿ ಸ್ಮೃತ್ಯೋಃ ಉಚ್ಯತೇ । ಜ್ಞಾನಾದಿಸಾಧ್ಯತಯಾ ಸ್ಮರ್ಯೇತೇ ಇತಿ ಯಾವತ್ । ನ ತು ಕಾಲಾದಿಕೃತೇ ಇತ್ಯರ್ಥಃ । ಅನೇನ ಬ್ರಹ್ಮಗತೇಃ ವಿದ್ಯಾಸಾಧ್ಯತ್ವಮುಕ್ತಮ್ ।

ಗತ್ಯನುಸ್ಮೃತಿಸಾಧ್ಯತ್ವಂ ಚಾಹ-ಸ್ಮಾರ್ತೇ ಚೇತಿ ॥ ಸ್ಮೃತೇರಿಮೇ ಸ್ಮಾರ್ತೇ, ಗತ್ಯನುಸ್ಮೃತಿಸಾಧ್ಯೇ ಏವೇತ್ಯರ್ಥಃ । ಸ್ಮರ್ಯೇತೇ ಇತ್ಯನ್ವಯಃ । ಅಗ್ನಿರ್ಜ್ಯೋತಿರಿತಿ ಸ್ಮೃತೌ ಬ್ರಹ್ಮವಿದಃ ಇತಿ ವಿಶೇಷಣಾತ್, 'ಗತ್ಯನುಸ್ಮರಣಾತ್ ಬ್ರಹ್ಮ-ಚಂದ್ರಂ ವಾ ಗಚ್ಛತಿ' ಇತಿ ವಚನಾಚ್ಚ ವಿದ್ಯಾನುಸ್ಮೃತಿಸಾಧ್ಯತ್ವಂ ಗತೇಃ ಇತಿ ಭಾವಃ ।)

ಈ ಅಧಿಕರಣದಲ್ಲಿ ವಿದ್ಯೆ ಮತ್ತು ಮಾರ್ಗದ ಸ್ಮರಣೆಯು ಅಗತ್ಯವೆಂದು ಹೇಳಲಾಗಿದೆ. ಏತೇ=ಬ್ರಹ್ಮಪ್ರಾಪ್ತಿಮಾರ್ಗ ಮತ್ತು ಚಂದ್ರಪ್ರಾಪ್ತಿಯ ಮಾರ್ಗಗಳು ಯೋಗಿನಃ= ಕರ್ಮಯೋಗಿ ಮತ್ತು ಜ್ಞಾನಯೋಗಿಗಳನ್ನು ಕುರಿತು ಸ್ಮರ್ಯೇತೇ='ಅಗ್ನಿರ್ಜ್ಯೋತಿಃ' ಎಂಬಲ್ಲಿ ಜ್ಞಾನಿಗಳ ಮಾರ್ಗವೂ ''ಧೂಮೋ ರಾತ್ರಿಃ'' ಎಂಬಲ್ಲಿ ಕರ್ಮಮಾರ್ಗವೂ ಹೀಗೆ ಎರಡೂ ಮಾರ್ಗಗಳು ಸ್ಮೃತಿಯಲ್ಲಿ (ಗೀತೆಯಲ್ಲಿ) ಹೇಳಲ್ಪಟ್ಟಿವೆ. ಅಂದರೆ, ಒಂದು ಜ್ಞಾನಸಾಧ್ಯವೆಂದೂ ಇನ್ನೊಂದು ಕರ್ಮಸಾಧ್ಯವೆಂದೂ ಹೇಳಲ್ಪಟ್ಟಿವೆ. ಅವುಗಳು ಮರಣದ ಕಾಲವಿಶೇಷದಿಂದ ಮಾತ್ರ ಲಭ್ಯಗಳಲ್ಲ. ಹೀಗೆ ಜ್ಞಾನ-ಕರ್ಮಗಳು ಅರ್ಚಿರಾದಿ ಗತಿಗೂ ಧೂಮಾದಿಗತಿಗೂ ಕ್ರಮವಾಗಿ ಕಾರಣವೆಂದು ಹೇಳಿದಂತಾಯಿತು.

ಏತೇ=ಈ ಎರಡು ಮಾರ್ಗಗಳು(ಗತಿಗಳು) ಸ್ಮಾರ್ತೇ ಚ=ಮಾರ್ಗದ ಸ್ಮರಣೆಯಿಂದಲೂ ಸಾಧ್ಯ. ಇದೂ ಸ್ಮೃತ್ಯುಕ್ತವಾಗಿದೆ. 'ಅಗ್ನಿರ್ಜ್ಯೋತಿಃ' ಎಂಬ ಗೀತೆಯಲ್ಲಿ 'ಬ್ರಹ್ಮ ಬ್ರಹ್ಮವಿದಃ' ಎಂಬ ಪದಗಳಿಂದ ಬ್ರಹ್ಮಜ್ಞಾನವು ಕಾರಣವೆಂದೂ 'ಗತ್ಯನುಸ್ಮರಣಾತ್' ಎಂಬ ಸ್ಮೃತಿಯಿಂದ ಮಾರ್ಗಸ್ಮರಣೆಯೂ ಕಾರಣವೆಂದು ತಿಳಿಯುತ್ತದೆ.

ಒಟ್ಟಿನಲ್ಲಿ ಬ್ರಹ್ಮಪ್ರಾಪ್ತಿಗೆ ಮರಣದ ಕಾಲಮಾತ್ರ ಕಾರಣವಲ್ಲ. ಮಾರ್ಗದ ಸ್ಮರಣೆಯೊಂದಿಗೆ ಬ್ರಹ್ಮಜ್ಞಾನವು ಕಾರಣ.

## ಶಾಂಕರಭಾಷ್ಯದಲ್ಲಿ ದಕ್ಷಿಣಾಯನಾಧಿಕರಣ

**|| ಅತಶ್ಚಾಯನೇಽಪಿ ಹಿ ದಕ್ಷಿಣೇ ||** ಶಾಂಕರಭಾಷ್ಯದಂತೆ ಕೊನೆಯ ಎರಡು ಸೂತ್ರಗಳು ಒಂದು ಅಧಿಕರಣ.

ಅತಃ=ಜ್ಞಾನ ಫಲವು ಕಾಲಾದಿಗಳನ್ನು ಅಪೇಕ್ಷಿಸುವುದಿಲ್ಲವಾದ ಕಾರಣ ದಕ್ಷಿಣೇ ಅಯನೇಽಪಿ=ದಕ್ಷಿಣಾಯನದಲ್ಲಿ ದೇಹತ್ಯಾಗ ಮಾಡಿದರೂ ಜ್ಞಾನಿಯು ಬ್ರಹ್ಮನ ಬಳಿ ಹೋಗುತ್ತಾನೆ.

ಭೀಷ್ಮಾಚಾರ್ಯರು ಉತ್ತರಾಯಣಕಾಲವನ್ನು ನಿರೀಕ್ಷೆ ಮಾಡಿದ್ದು ಅಜ್ಞಾನಿಗಳಾದ ಕರ್ಮಿಗಳಿಗೆ ಉತ್ತರಾಯಣಮರಣವು ಪ್ರಶಸ್ತ, ಎಂಬ ವಾದವನ್ನು ರಕ್ಷಿಸುವುದಕ್ಕಾಗಿ. ಹಾಗೂ ತಾವು ಇಚ್ಛಾಮರಣಿಗಳು ಎನ್ನುವುದನ್ನು ಲೋಕಕ್ಕೆ ತಿಳಿಸುವುದಕ್ಕಾಗಿ.

**॥ ಯೋಗಿನಃ ಪ್ರತಿ ಸ್ಮರ್ಯೇತೇ ಸ್ಮಾರ್ತೇ ಚೈತೇ ॥** ಯೋಗಿಗಳನ್ನು ಕುರಿತು ಸ್ಮರ್ಯೇತೇ=ಕಾಲವಿಶೇಷಗಳು ಗೀತೆಯಲ್ಲಿ ಹೇಳಲ್ಪಟ್ಟಿವೆ. ಅವು ಸ್ಮೃತ್ಯುಕ್ತವಾದ ಸಾಂಖ್ಯ-ಯೋಗಗಳ ಫಲಪ್ರಾಪ್ತಿಗೆ ಸ್ಮೃತಿಯಲ್ಲಿ ಹೇಳಿರುವ ಕಾಲನಿಯಮ. ಆ ನಿಯಮ ಶ್ರೌತಬ್ರಹ್ಮಜ್ಞಾನಕ್ಕೆ ಅನ್ವಯಿಸುವುದಿಲ್ಲ. ಒಂದುವೇಳೆ ಆ ಸ್ಮೃತಿಯಲ್ಲೂ ಕಾಲವಾಚಕವಾದ ಶಬ್ದಗಳಿಗೆ ಕಾಲನಿಯಾಮಕದೇವತೆಗಳು ಎಂದು ಅರ್ಥ ಹೇಳಿದರೆ ಅದನ್ನು ಶ್ರೌತಬ್ರಹ್ಮಜ್ಞಾನಕ್ಕೂ ಅನ್ವಯಿಸಿಕೊಳ್ಳಬಹುದು. ಏಕೆಂದರೆ, ಯಾವುದೇ ಸಮಯದಲ್ಲಿ ದೇಹತ್ಯಾಗ ಮಾಡಿದರೂ ಆ ದೇವತೆಗಳು ಇರುವುದರಿಂದ ವಿರೋಧವಿಲ್ಲ.

## ರಾಮಾನುಜಭಾಷ್ಯದಲ್ಲಿ ಅಧಿಕರಣಾರ್ಥ

ಜ್ಞಾನಿಯು ದಕ್ಷಿಣಾಯನದಲ್ಲಿ ದೇಹತ್ಯಾಗ ಮಾಡಿದರೆ ಗೀತೆಯು ಹೇಳಿದಂತೆ ಚಂದ್ರಲೋಕಕ್ಕೆ ಹೋಗುತ್ತಾರೆ. ಆದರೆ, ಕರ್ಮಿಗಳಂತೆ ಅಲ್ಲಿಂದ ತಿರುಗಿ ಬರುವುದಿಲ್ಲ. ಬ್ರಹ್ಮನಲ್ಲಿಗೆ ಹೋಗುತ್ತಾರೆ. ಇದು ಮೊದಲ ಸೂತ್ರದ ಅರ್ಥ.

ಭಗವದ್ಗೀತೆಯಲ್ಲಿ ಮರಣಕ್ಕೆ ಕಾಲವಿಶೇಷವನ್ನು ಹೇಳಲಾಗಿದ್ದರೂ ಅದು ಜ್ಞಾನಿಗಳಿಗಲ್ಲ, ಯೋಗಿಗಳಿಗೆ. ''ನೈತೇ ಸೃತೀ ಪಾರ್ಥ ಜಾನನ್ ಯೋಗೀ ಕಶ್ಚನ ಮುಹ್ಯತಿ'' ಎಂಬ ಉಪಸಂಹಾರದಿಂದ ಇದು ತಿಳಿಯುತ್ತದೆ. ಕಾಲವಾಚಕಶಬ್ದಗಳಿಗೆ ದೇವತಾಪರವಾಗಿ ಅರ್ಥ ಮಾಡಿದರೆ ಅದು ಜ್ಞಾನಿಗಳಿಗೂ ಅನ್ವಯಿಸುತ್ತದೆ.

**ಇಲ್ಲಿಗೆ ನಾಲ್ಕನೇ ಅಧ್ಯಾಯದ ಎರಡನೆಯ ಪಾದ ಮುಗಿಯಿತು.**

### ಶ್ರೀಮದಾನಂದತೀರ್ಥ ರಚಿತವಾದ

# ಬ್ರಹ್ಮಸೂತ್ರಭಾಷ್ಯ

## ನಾಲ್ಕನೆಯ ಅಧ್ಯಾಯದ ಮೂರನೆಯ ಪಾದ

## ೧. ಅರ್ಚಿರಾದ್ಯಧಿಕರಣ

ಮಾರ್ಗೋ ಗಮ್ಯಂ ಚಾಸ್ಮಿನ್ ಪಾದ ಉಚ್ಯತೇ ।

**॥ ಓಂ ಅರ್ಚಿರಾದಿನಾ ತತ್ಪ್ರಥಿತೇಃ ಓಂ ॥ ೧ ॥**

ತೇಽರ್ಚಿಷಮಭಿಸಂಭವಂತ್ಯರ್ಚಿಷೋಽಹಃ(ಅಹ್ನ ಆ ಪೂರ್ಯಮಾಣ ಪಕ್ಷಮ್) (ಛಾಂ.ಉ. 5.10.1) ಇತ್ಯರ್ಚಿಷಃ ಪ್ರಾಥಮ್ಯಂ ಶ್ರೂಯತೇ । 'ಯದಾ (ಹ)ವೈ ಪುರುಷೋಽಸ್ಮಾಲ್ಲೋಕಾತ್ ಪ್ರೈತಿ ಸ ವಾಯುಮಾಗಚ್ಛತಿ' (ಬೃ.ಉ. 7.10.1) ಇತಿ ವಾಯೋಃ ।

ತತ್ರಾರ್ಚಿಃ(ರ್ಚಿಷಃ) ಪ್ರಾಪ್ತಿರೇವ ಪ್ರಥಮಾ ।

'ದ್ವಾವೇವ ಮಾರ್ಗೌ ಪ್ರಥಿತಾವರ್ಚಿರಾದಿರ್ವಿಪಶ್ಚಿತಾಮ್ ।
ಧೂಮಾದಿಃ ಕರ್ಮಿಣಾಂ ಚೈವ ಸರ್ವವೇದವಿನಿರ್ಣಯಾತ್ ॥
'ಅಗ್ನಿರ್ಜ್ಯೋತಿರಿತಿ ದ್ವೇಧೈವಾರ್ಚಿಷಃ ಸಂಪ್ರತಿಷ್ಠಿತಿಃ ।
ಅಗ್ನಿಂ ಗತ್ವಾ ಜ್ಯೋತಿರೇತಿ ಪ್ರಥಮಂ ಬ್ರಹ್ಮ ಸಂವ್ರಜನ್ ॥' ಇತಿ ।
ಏಕಸ್ಮಿಂಸ್ತು ಪುರೇ ಸಂಸ್ಥೋ ದ್ವಿರೂಪೋಗ್ನೇಃ ಸುತೋ ಮಹಾನ್ ॥'
ಇತಿ (ಚ) ಬ್ರಹ್ಮತರ್ಕೇ ॥

ಈ ಪಾದದಲ್ಲಿ ಚರಮದೇಹವನ್ನು ತೊರೆದು ಜ್ಞಾನಿಗಳು ಬ್ರಹ್ಮಲೋಕಕ್ಕೆ ಹೋಗುವ ಮಾರ್ಗವನ್ನು ಮತ್ತು ಅವರ ಗಮ್ಯಸ್ಥಾನವನ್ನು ಹೇಳಲಾಗಿದೆ.

''ಜ್ಞಾನಿಗಳು ಅರ್ಚಿ ಎಂಬ ಅಗ್ನಿಪುತ್ರನ ಲೋಕಕ್ಕೆ ಹೋಗುತ್ತಾರೆ. ಅಲ್ಲಿಂದ ಅಹರಭಿಮಾನಿಲೋಕಕ್ಕೆ, ಆ ಅಹರ್ಲೋಕದಿಂದ ಶುಕ್ಲಪಕ್ಷಾಭಿಮಾನಿಲೋಕಕ್ಕೆ ಹೋಗುತ್ತಾರೆ'' ಎಂದು ಛಾಂದೋಗ್ಯದಲ್ಲಿದೆ. ಇಲ್ಲಿ ಅರ್ಚಿರ್ಲೋಕಪ್ರಾಪ್ತಿ ಮೊದಲು ಎನ್ನಲಾಗಿದೆ. ಬೃಹದಾರಣ್ಯಕದಲ್ಲಿ ''ಯಾವಾಗ ಜ್ಞಾನಿಯು ಈ ಲೋಕದಿಂದ

ದೇಹಬಿಟ್ಟು ಹೋಗುತ್ತಾನೋ ಅವನು ಮೊದಲು ವಾಯುಲೋಕಕ್ಕೆ ಹೋಗುತ್ತಾನೆ'' ಎನ್ನಲಾಗಿದೆ. ಹೀಗೆ ವ್ಯತ್ಯಾಸಕಂಡಾಗ ಸೂತ್ರದ ನಿರ್ಣಯ–ಅರ್ಚಿರಾದಿನಾ= ಅರ್ಚಿಲೋಕದ ಪ್ರಾಪ್ತಿಯೇ ಮೊದಲು. ಇದು ಪ್ರಸಿದ್ಧವಾಗಿದೆ—

''ಒಟ್ಟು ಎರಡೇ ಮಾರ್ಗಗಳು ಪ್ರಸಿದ್ಧವಾಗಿವೆ— ಜ್ಞಾನಿಗಳಿಗೆ ಅರ್ಚಿರಾದಿಮಾರ್ಗ, ಕರ್ಮಿಗಳಿಗೆ ಧೂಮಾದಿಮಾರ್ಗ. ಇದು ಸಕಲವೇದಗಳ ಮಥಿತಾರ್ಥವಾಗಿದೆ. ಅಗ್ನಿಪುತ್ರನಾದ 'ಅರ್ಚಿಯೇ' ಅಗ್ನಿ–ಜ್ಯೋತಿ ಎಂದು ಎರಡು ರೂಪಗಳಿಂದ ಕಾಣಿಸಿಕೊಳ್ಳುತ್ತಾನೆ. ಆದ್ದರಿಂದ ''ಅಗ್ನಿರ್ಜ್ಯೋತಿರಹಃ'' ಎಂಬ ಗೀತಾವಾಕ್ಯದಲ್ಲಿ ಅಗ್ನಿಯನ್ನು ಮೊದಲು ಹೇಳಲಾಗಿದೆ. ಇಲ್ಲಿ ಅಗ್ನಿ ಎಂದರೆ ಪ್ರಧಾನಾಗ್ನಿಯಲ್ಲ. 'ಅರ್ಚಿ' ಎಂಬ ಅಗ್ನಿಪುತ್ರನ ಅಗ್ನಿರೂಪ. ಜ್ಯೋತಿ ಎಂದರೆ ಅವನದೇ ಅರ್ಚಿರೂಪ. ಆದ್ದರಿಂದ ಅಗ್ನಿರೂಪದ ಅರ್ಚಿಯ ಪ್ರಾಪ್ತಿ ಮೊದಲು ಆಮೇಲೆ ಜ್ಯೋತಿರ್ನಾಮಕ ಅಗ್ನಿಪುತ್ರನಾದ ಅರ್ಚಿರೂಪಪ್ರಾಪ್ತಿ.''

ಬ್ರಹ್ಮತರ್ಕದಲ್ಲಿ ಈ ವಿಷಯ ಬಂದಿದೆ— ''ಒಂದೇ ಲೋಕದಲ್ಲಿ ಅಗ್ನಿಸುತನು ಎರಡು ರೂಪಗಳಿಂದ ಇದ್ದಾನೆ'' ಎಂದು.

**ವಿವರಣೆ**—ಹಿಂದಿನ ಪಾದದಲ್ಲಿ ಉತ್ಕ್ರಾಂತಿಯನ್ನು ಹೇಳಲಾಗಿದೆ. ಈ ಪಾದದಲ್ಲಿ ಜ್ಞಾನಿಯು ಗಮ್ಯಕ್ಕೆ ಹೋಗುವ ಮಾರ್ಗವನ್ನು ಹೇಳುತ್ತಾರೆ. ''ಕಾರ್ಯಂ ಬಾದರಿಃ...'' ಎಂಬ ಏಳನೆಯ ಸೂತ್ರದವರೆಗೆ ಮಾರ್ಗ ನಿರೂಪಣೆ. ಮುಂದೆ ಪ್ರಾಪ್ಯಸ್ಥಾನದ ನಿರೂಪಣೆ. ಹೀಗೆ ಈ ಪಾದದ ವಿಷಯನಿರೂಪಣಾವ್ಯವಸ್ಥೆ.

ಛಾಂದೋಗ್ಯದಲ್ಲಿ ಹೀಗಿದೆ—''ಯೇ ಚೇಮೇಽರಣ್ಯೇ ಶ್ರದ್ಧಾತಪ ಇತ್ಯುಪಾಸತೇ ತೇಽರ್ಚಿಷಮಭಿಸಂಭವಂತಿ'' ಯಾರು ಅರಣ್ಯದಲ್ಲಿ ಶ್ರದ್ಧಾ=ಶ್ರದ್ಧೆಯಿಂದ ತಪ ಇತಿ=ಬ್ರಹ್ಮನು ಜ್ಞಾನರೂಪನೆಂದು ಉಪಾಸನೆ ಮಾಡುವರೋ ಅವರು ಅರ್ಚಿರಾದಿಮಾರ್ಗಕ್ಕೆ ಹೋಗುತ್ತಾರೆ, ಎಂದು. ಅರ್ಚಿಃ ಎಂದರೆ ಅಗ್ನಿಪುತ್ರ. ಅವನ ಲೋಕಪ್ರಾಪ್ತಿ ಮೊದಲು, ಎಂದು ಛಾಂದೋಗ್ಯದ ನಿರೂಪಣೆ. ಬೃಹದಾರಣ್ಯಕದಲ್ಲಿ, ಜ್ಞಾನಿಯು ದೇಹತ್ಯಾಗ ಮಾಡಿ ಮೊದಲು ಹೋಗುವುದು ವಾಯುಲೋಕಕ್ಕೆ ಎಂದಿದೆ. ಹೀಗೆ ವಿರೋಧ ಬಂದಾಗ ಛಾಂದೋಗ್ಯದಲ್ಲಿ ಹೇಳಿರುವಂತೆ ಅರ್ಚಿಲೋಕಪ್ರಾಪ್ತಿಯೇ ಮೊದಲು ಎಂದು ಈ ಸೂತ್ರದಲ್ಲಿ ನಿರ್ಣಯಿಸಲಾಗಿದೆ. ಅರ್ಚಿಲೋಕಪ್ರಾಪ್ತಿಶ್ರುತಿಗೆ ಸ್ಮೃತಿಯ ಸಹಾಯವಿರುವುದರಿಂದ ಅದು ನಿರವಕಾಶ. ವಾಯುಪ್ರಾಪ್ತಿಸ್ಮೃತಿಯು ಅದಕ್ಕಿಂತ

ದುರ್ಬಲ. ಅರ್ಚಿರ್ಲೋಕಪ್ರಾಪ್ತಿಯ ಅನಂತರ ವಾಯುಲೋಕಪ್ರಾಪ್ತಿ ಎಂದು ಅರ್ಥಮಾಡಿಯೂ ಅದನ್ನು ಸಾವಕಾಶಗೊಳಿಸಬಹುದು. ಹಾಗೆಯೇ ಹೇಳುವ ಸ್ಪಷ್ಟ-ನಿರವಕಾಶಶ್ರುತಿಯೂ ಇದೆ— ''ಸರ್ವೇ ವಾ ಏತೇ ಉತ್ಕ್ರಾಮಂತಿ ತೇಽರ್ಚಿಷ-ಮೇವಾಪಿಯಂತಿ ತತೋ ವಾಯುಮ್'' ಎಂದು. ಆದ್ದರಿಂದ ಮೊದಲು ಅರ್ಚಿರ್ಲೋಕಪ್ರಾಪ್ತಿ ಎಂದು ಸಿದ್ಧಾಂತ.

'ಅರ್ಚಿಷಮಭಿಸಂಭವಂತಿ' ಎಂದು ಅರ್ಚಿರ್ಲೋಕಪ್ರಾಪ್ತಿ ಮೊದಲು ಎಂದಿದೆ ಛಾಂದೋಗ್ಯದಲ್ಲಿ. ಭಗವದ್ಗೀತೆಯಲ್ಲಿ ''ಅಗ್ನಿರ್ಜ್ಯೋತಿರಹಃ ಶುಕ್ಲಃ'' ಎಂದು ಅಗ್ನಿಲೋಕಪ್ರಾಪ್ತಿ ಮೊದಲು ಎಂದು ಹೇಳಲಾಗಿದೆ. ಈ ವಿರೋಧವನ್ನು ಬ್ರಹ್ಮತರ್ಕವಚನವು ಪರಿಹರಿಸುತ್ತದೆ. ಅರ್ಚಿ ಅಗ್ನಿಯ ಪುತ್ರ. ಅವನಿಗೆ ಅಗ್ನಿ ಜ್ಯೋತಿ ಎಂದು ಎರಡು ರೂಪಗಳಿವೆ. ಒಂದೇ ಲೋಕದಲ್ಲಿ ಆ ಎರಡೂ ರೂಪಗಳಿವೆ. ಆದ್ದರಿಂದ ಮೊದಲು ಅರ್ಚಿಪ್ರಾಪ್ತಿ ಎಂದರೂ ಅಗ್ನಿಪ್ರಾಪ್ತಿ ಎಂದರೂ ಒಂದೇ ಲೋಕದ ಪ್ರಾಪ್ತಿ. ಅವೆರಡಕ್ಕೆ ವಿರೋಧವಿಲ್ಲ. ಮುಂದೆ 'ಸೋಮಂ-ವೈಶ್ವಾನರಂ' ಎಂದು ಸೋಮನ ಅನಂತರ ಹೇಳಿರುವ ವೈಶ್ವಾನರ ಪ್ರಧಾನಾಗ್ನಿ. ಅದರ ವಿರೋಧವೂ ಇಲ್ಲ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ಅರ್ಚಿರಾದಿನಾ ತತ್ಪ್ರಥಿತೇಃ ಓಂ ॥** (ಅತ್ರ ಈಶಪ್ರಾಪ್ತಿಮಾರ್ಗೇ ಅರ್ಚಿಷಃ ಆದಿತ್ವಂ ಸಾಧ್ಯತೇ । ಬ್ರಹ್ಮ ಗಚ್ಛನ್ ಜ್ಞಾನೀ ''ತೇಽರ್ಚಿಷಮಭಿಸಂವಿಶಂತಿ' ಇತ್ಯುಕ್ತಾರ್ಚಿರಾದಿನಾ ಪಥಾ ಗಚ್ಛತಿ । ನ ತು 'ಸ ವಾಯುಮಾಗಚ್ಛತಿ' ಇತ್ಯುಕ್ತವಾಯ್ವಾದಿನಾ । ಕುತಃ ? ತತ್ಪ್ರಥಿತೇಃ ತಸ್ಯ=ಉಕ್ತಾರ್ಥಸ್ಯ ''ತೇಽರ್ಚಿಷ ಮೇವಾಭಿಸಂಭವಂತಿ' ಇತಿ ಶ್ರುತೌ ''ದ್ವಾವೇವ ಮಾರ್ಗೌ...'' ಇತಿ ಸ್ಮೃತೌ ಚ ಪ್ರಸಿದ್ಧೇಃ ಇತ್ಯರ್ಥಃ ॥)

ಬ್ರಹ್ಮಪ್ರಾಪ್ತಿಯ ಮಾರ್ಗದಲ್ಲಿ ಅರ್ಚಿರ್ಲೋಕಪ್ರಾಪ್ತಿಯೇ ಮೊದಲು ಎಂದು ಈ ಅಧಿಕರಣದಲ್ಲಿ ಸಾಧಿಸಲಾಗಿದೆ. ತತ್-ಪ್ರಥಿತೇಃ, ತಸ್ಯ=ಅರ್ಚಿಲೋಕಪ್ರಾಪ್ತಿಯೇ ಮೊದಲು ಎಂದು ಪ್ರಥಿತೇಃ=ಶ್ರುತಿ-ಸ್ಮೃತಿಗಳಲ್ಲಿ ಪ್ರಸಿದ್ಧವಾದ ಕಾರಣ ಅರ್ಚಿರಾದಿನಾ= ಜ್ಞಾನಿಯು ಮೊದಲು ಅರ್ಚಿರ್ಲೋಕಕ್ಕೆ ಹೋಗುತ್ತಾನೆ, ವಾಯುಲೋಕಕ್ಕಲ್ಲ.

## ಶಾಂಕರಭಾಷ್ಯದಲ್ಲಿ ಅರ್ಚಿರಾದ್ಯಧಿಕರಣ

ಉಪನಿಷತ್ತಿನಲ್ಲಿ ಬ್ರಹ್ಮಲೋಕಕ್ಕೆ ಹೋಗುವ ಮಾರ್ಗವನ್ನು ನಾನಾವಿಧವಾಗಿ ನಿರೂಪಿಸಲಾಗಿದೆ—

1. ಅಥೈತಯೋರೇವ ರಶ್ಮಿಭಿಃ ಊರ್ಧ್ವಂ ಆಕ್ರಮತೇ॥ (ಛಾಂ.8.6.5) ರಶ್ಮಿಯ ಮೂಲಕ ಹೋಗುತ್ತಾನೆ.

2. ''ತೇऽರ್ಚಿಷಮಭಿಸಂಭವಂತಿ, ಅರ್ಚಿಷೋऽಹಃ'' (ಬೃ.6.2.15) ಅರ್ಚಿರಾದಿ ಮಾರ್ಗದಿಂದ ಬ್ರಹ್ಮಲೋಕಗಮನ.

3. ''ಸ ಏತಂ ದೇವಯಾನಂ ಪಂಥಾನಮಾಸಾದ್ಯ ಅಗ್ನಿಲೋಕಮ್ ಆಗಚ್ಛತಿ।'' (ಕೌ.1.3) ದೇವಯಾನಮಾರ್ಗದಲ್ಲಿ ಅಗ್ನಿಲೋಕಕ್ಕೆ ಬರುತ್ತಾನೆ.

4. ''ಯದಾ ವೈ ಪುರುಷೋऽಸ್ಮಾಲ್ಲೋಕಾತ್ ಪ್ರೈತಿ ಸ ವಾಯುಮಾಗಚ್ಛತಿ'' (ಬೃ.5.10.1) ಜ್ಞಾನಿಯು ವಾಯುಲೋಕಕ್ಕೆ ಮೊದಲು ಹೋಗುತ್ತಾನೆ.

5. ''ಸೂರ್ಯದ್ವಾರೇಣ ವಿರಜಾಃ ಪ್ರಯಾಂತಿ'' (ಮುಂ.1.2.11)

ಇವೆಲ್ಲವೂ ಬ್ರಹ್ಮಲೋಕ ಮಾರ್ಗಗಳು. ಉಪಾಸನಾಭೇದದಿಂದ ಮಾರ್ಗಭೇದ ಎಂದು ಪೂರ್ವಪಕ್ಷ. ಪ್ರಾಪ್ಯಸ್ಥಾನ ಬ್ರಹ್ಮಲೋಕ ಒಂದೇ ಆದುದರಿಂದ ಮಾರ್ಗವೂ ಒಂದೇ–ಜ್ಞಾನಿಗಳಿಗೆ ಅರ್ಚಿರಾದಿ ಮಾರ್ಗ, ಕರ್ಮಿಗಳಿಗೆ ಧೂಮಾದಿಮಾರ್ಗ. ಊರ್ಧ್ವಗತಿಯ ಇವೆರಡು ಮಾರ್ಗಗಳನ್ನು ಬಿಟ್ಟರೆ ಬೇರೆ ಮಾರ್ಗ ಅಧೋಗತಿಗೆ ಕಾರಣವಾಗುತ್ತದೆ—''ಅಥೈತಯೋಃ ಪಥೋರ್ನ ಕತರೇಣ ಚ''(ಛಾಂ.5.10.8). ಆದ್ದರಿಂದ ಭಿನ್ನ ಭಿನ್ನ ಲೋಕಗಳ ಪ್ರಸ್ತಾವ ಒಂದೇ ಮಾರ್ಗದ ಭಿನ್ನ ಭಿನ್ನ ಸ್ಥಾನಗಳು.

**ವಿಮರ್ಶೆ**—ಬ್ರಹ್ಮಜ್ಞಾನಿಗೆ ಬ್ರಹ್ಮೈಕ್ಯಪ್ರಾಪ್ತಿಯೇ ಫಲ, ಅದಕ್ಕೆ ಉತ್ಕ್ರಾಂತಿಯಾಗಲೀ ಮಾರ್ಗವಾಗಲೀ ಇಲ್ಲ. ಸರ್ವಗತನಾದವನು ಬ್ರಹ್ಮ. ಅವನ ಬಳಿ ಹೋಗಬೇಕಾದುದಿಲ್ಲ. ಅಪರವಿದ್ಯೆಯಿಂದಲೂ ಪುನರಾವೃತ್ತಿರಹಿತವಾದ ಬ್ರಹ್ಮಲೋಕ ಪ್ರಾಪ್ತಿಯಾಗುವುದಾದಲ್ಲಿ ಪರವಿದ್ಯೆ ಪ್ರಯಾಸಸಾಧ್ಯವಾದುದರಿಂದ ಅದರಲ್ಲಿ ಪ್ರವೃತ್ತಿಯೇ ಆಗಲಿಲ್ಲ.

ರಾಮಾನುಜಭಾಷ್ಯದಲ್ಲಿ ಇದೇ ಅರ್ಥವನ್ನು ಹೇಳಲಾಗಿದೆ.

ಇಲ್ಲಿಗೆ ಅರ್ಚಿರಾದ್ಯಧಿಕರಣವು ಮುಗಿಯಿತು.

## ೨. ವಾಯುಗತ್ಯಧಿಕರಣಮ್

**॥ ಓಂ ವಾಯುಶಬ್ದಾದವಿಶೇಷವಿಶೇಷಾಭ್ಯಾಮ್ ಓಂ ॥ ೨ ॥**

**ಅರ್ಚಿಷೋ ವಾಯುಂ ಗಚ್ಛತಿ । 'ಸ ವಾಯುಮಾಗಚ್ಛತಿ' (ಬೃ.ಉ. 7.10.1) ಇತಿ ಸಾಮಾನ್ಯವಚನಾತ್ ।**

**'ಸ ಇತೋ ಗತೋ ದ್ವಿತೀಯಾಂ ಗತಿಂ ವಾಯುಮಾಗಚ್ಛತಿ ವಾಯೋರಹರಹ್ನ ಆಪೂರ್ಯಮಾಣಪಕ್ಷಮ್'**

**ಇತಿ ವಿಶೇಷ ವಚನಾಚ್ಚ ॥**

ಅರ್ಚಿರ್ಲೋಕದಿಂದ ವಾಯುಲೋಕಕ್ಕೆ ಹೋಗುತ್ತಾನೆ. ''ಸ ವಾಯುಮಾಗಚ್ಛತಿ'' ಎಂದು ಸಾಮಾನ್ಯವಚನವಾಗಿರುವುದರಿಂದ. (ಆ ವಚನದಲ್ಲಿ ವಾಯುಪ್ರಾಪ್ತಿಯನ್ನಷ್ಟೇ ಹೇಳಲಾಗಿದೆ. ಮೊದಲು ವಾಯುಪ್ರಾಪ್ತಿ ಎಂದೇನೂ ಹೇಳಲಾಗಿಲ್ಲ. ಹೀಗಾಗಿ ಅರ್ಚಿರ್ಲೋಕಪ್ರಾಪ್ತಿಯ ಅನಂತರವೇ ವಾಯುಲೋಕ ಪ್ರಾಪ್ತಿ). ''ಸ ಇತೋ ಗತಃ ದ್ವಿತೀಯಾಂ ಗತಿಂ ವಾಯುಮಾಗಚ್ಛತಿ'' ಎಂದು ವಿಶೇಷವಚನವೂ ಇದೆಯಾದ್ದರಿಂದ. (ಈ ವಚನವು ಸ್ಪಷ್ಟವಾಗಿ ದ್ವಿತೀಯಗಮ್ಯಸ್ಥಾನ ವಾಯುಲೋಕ ಎನ್ನುತ್ತದೆ. ಆದರೆ, ಇಂದು ಉಪಲಬ್ಧವಾಗುವ ಯಾವ ಶಾಖೆಯಲ್ಲೂ ಈ ವಾಕ್ಯವಿಲ್ಲ. ಇದರ ಬಗ್ಗೆ ಶೇಷಚಂದ್ರಿಕಾದಲ್ಲಿ ಚರ್ಚಿಸಲಾಗಿದೆ.)

**ವಿವರಣೆ**—ತತ್ತ್ವಪ್ರಕಾಶಿಕಾದಂತೆ ಈ ಅಧಿಕರಣದ ಸಂದೇಹ ಹೀಗೆ– ಜ್ಞಾನಿಮಾರ್ಗದಲ್ಲಿ ದ್ವಿತೀಯ ಪ್ರಾಪ್ಯಸ್ಥಾನ ಅಹರ್ಲೋಕವೋ ವಾಯುಲೋಕವೋ? ಎಂದು. ''ಅರ್ಚಿಷೋಽಹಃ'' ಎಂದು ಛಾಂದೋಗ್ಯದಲ್ಲಿ ಅಹರ್ಲೋಕವು ದ್ವಿತೀಯಪ್ರಾಪ್ತಿಸ್ಥಾನ ಎಂದಿದೆ. 'ಸ ವಾಯುಮಾಗಚ್ಛತಿ' ಎಂದು ಪ್ರಥಮಪ್ರಾಪ್ಯತ್ವೇನ ವಾಯುಲೋಕವನ್ನು ಹೇಳಿದ್ದರೂ ಹಿಂದೆ ಹೇಳಿದಂತೆ ವಿಶೇಷಶ್ರುತಿಯಿಂದ ಬಾಧವಿರುವುದರಿಂದ ಪ್ರಥಮಪ್ರಾಪ್ಯತ್ವವನ್ನು ಬಿಡುವುದು ಅನಿವಾರ್ಯವಾದರೂ ದ್ವಿತೀಯಪ್ರಾಪ್ಯತ್ವವನ್ನು ಹೇಳಲೇಬೇಕಾಗುವುದು. ಹೀಗಾಗಿ, ದ್ವಿತೀಯ ಪ್ರಾಪ್ಯಲೋಕ ಯಾವುದು? ಸಿದ್ಧಾಂತ—ದ್ವಿತೀಯಪ್ರಾಪ್ಯಲೋಕ ವಾಯುಲೋಕವೇ. 'ಅವಿಶೇಷ–ವಿಶೇಷಾಭ್ಯಾಂ' 'ಸ ವಾಯುಮಾಗಚ್ಛತಿ' ಎಂಬ ಸಾಮಾನ್ಯಶ್ರುತಿಗೆ (ಅವಿಶೇಷ) ''ಅರ್ಚಿಷಮಭಿಸಂಭವಂತಿ'' ಎಂಬ ವಿಶೇಷವಚನದ ವಿರೋಧದಿಂದ ಅವಿಶೇಷ–ವಿಶೇಷಾಭ್ಯಾಂ=ಸಾಮಾನ್ಯವಿಶೇಷಭಾವದಿಂದ ವಾಯುಲೋಕಕ್ಕೆ ದ್ವಿತೀಯ ಪ್ರಾಪ್ಯತ್ವವು ನ್ಯಾಯಪ್ರಾಪ್ತವಾದುದು. ಅಥವಾ, ಅವಿಶೇಷವಚನ ''ಸ ವಾಯುಂ ಆಗಚ್ಛತಿ'' ಎಂದು. ಇಲ್ಲಿ ಪ್ರಾಥಮ್ಯಾದಿಗಳು ಶ್ರುತವಾಗಿಲ್ಲದ ಕಾರಣ ಇದು ಸಾಮಾನ್ಯವಚನ. ''ಸ ಇತೋ ಗತಃ ದ್ವಿತೀಯಾಂ ಗತಿಂ'' ಇದು ವಿಶೇಷವಚನ. ಇಲ್ಲಿ

'ದ್ವಿತೀಯಾಂ' ಎಂದು ಪ್ರಾಪ್ಯಕ್ರಮವಿಶೇಷದ ಉಲ್ಲೇಖ ಇದೆ. ಆದ್ದರಿಂದ ವಾಯುಲೋಕ ದ್ವಿತೀಯಪ್ರಾಪ್ಯ.

ತತ್ತ್ವಪ್ರದೀಪದಲ್ಲಿ 'ಅರ್ಚಿರ್ದೇವಂ ಗತ್ವಾ ತತೋ ವಾಯುಂ ಗಚ್ಛತಿ। ನ ಪ್ರಥಮತ ಏವ।' ಎಂದಿದೆ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ವಾಯುಶಬ್ದಾದವಿಶೇಷವಿಶೇಷಾಭ್ಯಾಮ್ ಓಂ ॥** (ಅತ್ರ ವಾಯೋಃ ಅರ್ಚಿರನಂತರಪ್ರಾಪ್ಯತ್ವಂ ಸಾಧ್ಯತೇ। ಅವಿಶೇಷ- ವಿಶೇಷಾಭ್ಯಾಂ ವಾಯುಶಬ್ದಾತ್ ವಾಯೋಃ ಪ್ರಾಪ್ಯತ್ವಶ್ರುತೇಃ ವಾಯೋಃ ದ್ವಿತೀಯಪ್ರಾಪ್ಯತ್ವಮಿತಿ ಶೇಷಃ। 'ಸ ವಾಯುಮಾಗಚ್ಛತಿ' ಇತಿ ಸಾಮಾನ್ಯತಃ ವಾಯೋಃ ಪ್ರಥಮಪ್ರಾಪ್ಯತ್ವೋಕ್ತೇಃ। ತಸ್ಯಾಶ್ಚ ಪೂರ್ವೋಕ್ತಾಶೇಷವಚನಬಾಧೇನ ಅರ್ಚಿಷೋಽನಂತರಪ್ರಾಪ್ಯತ್ವಾರ್ಥತ್ವಸ್ಯ ನ್ಯಾಯ್ಯತ್ವಾತ್। 'ಸ ಇತೋ ಗತೋ ದ್ವಿತೀಯಾಂ ಗತಿಂ ವಾಯುಮಾಗಚ್ಛತಿ' ಇತಿ ವಿಶೇಷೋಕ್ತ್ಯಾ ಚ ತಥೈವಾವಗತೇರಿತಿ ಭಾವಃ।)

ಈ ಅಧಿಕರಣದಲ್ಲಿ ವಾಯುಲೋಕವು ಜ್ಞಾನಿಗಳ ದ್ವಿತೀಯಪ್ರಾಪ್ತಿಸ್ಥಾನ ಎಂದು ಸಾಧಿಸಲಾಗಿದೆ. ಅವಿಶೇಷ-ವಿಶೇಷಾಭ್ಯಾಂ ವಾಯುಶಬ್ದಾತ್=ಸಾಮಾನ್ಯ ವಿಶೇಷಗಳಿಂದ ಕೂಡಿದ ವಾಯುಶಬ್ದದಿಂದಾಗಿ ವಾಯುವು ದ್ವಿತೀಯಪ್ರಾಪ್ಯ. ಈ ದೇಹವನ್ನು ತ್ಯಜಿಸಿದ ಜ್ಞಾನಿಯು ವಾಯುಲೋಕಕ್ಕೆ ಹೋಗುತ್ತಾನೆ, ಎನ್ನುವ ಸಾಮಾನ್ಯ ವಚನವು ಅರ್ಚಿರ್ಲೋಕವು ಪ್ರಥಮಪ್ರಾಪ್ಯವೆನ್ನುವ ವಚನದಿಂದ ಬಾಧ್ಯವಾಗಿದೆ. ಆದ್ದರಿಂದ ವಾಯು ದ್ವಿತೀಯಪ್ರಾಪ್ಯ ಎಂದು ಸಿದ್ಧವಾಗುತ್ತದೆ. ''ದ್ವಿತೀಯಾಂ ಗತಿಂ ವಾಯುಮಾಗಚ್ಛತಿ'' ಎಂಬ ವಿಶೇಷವಚನವು ಸ್ಪಷ್ಟವಾಗಿ ವಾಯುವು ದ್ವಿತೀಯಪ್ರಾಪ್ಯನೆಂದು ಹೇಳುತ್ತದೆ. ಈ ಎರಡು ವಚನಗಳಿಂದ ವಾಯುಲೋಕವು ಜ್ಞಾನಿಯ ದ್ವಿತೀಯಗಮ್ಯಸ್ಥಾನವೆಂದು ಸಿದ್ಧವಾಗುತ್ತದೆ.

## ಶಾಂಕರಭಾಷ್ಯದಲ್ಲಿ ವಾಯ್ವಧಿಕರಣ

**॥ ವಾಯುಮಬ್ದಾದವಿಶೇಷವಿಶೇಷಾಭ್ಯಾಮ್ ॥** ಕೌಶೀತಕೀ ಉಪನಿಷತ್ತಿನಲ್ಲಿ- ''ಸ ಏತಮ್ ದೇವಯಾನಂ ಪಂಥಾನಮಾಪದ್ಯಾಗ್ನಿಲೋಕಮಾಗಚ್ಛತಿ, ಸ ವಾಯುಲೋಕಂ ಸ ವರುಣಲೋಕಂ...'' ಎಂದು ಅಗ್ನಿಲೋಕವು ಪ್ರಥಮಪ್ರಾಪ್ಯವೆಂದು ಶ್ರುತವಾದರೆ ಛಾಂದೋಗ್ಯದಲ್ಲಿ 'ತೇಽರ್ಚಿಷಮಭಿಸಂಭವಂತಿ'

ಎಂದಿದೆ. ಅಗ್ನಿ–ಅರ್ಚಿಶಬ್ದಗಳಿಗೆ ಅರ್ಥವು ಒಂದೇ ಆದುದರಿಂದ ಅವೆರಡರಲ್ಲಿ ವಿರೋಧವಿಲ್ಲ. ಆದರೂ, ಕೌಶೀತಕೀವಾಕ್ಯದಲ್ಲಿ ವಾಯುಲೋಕವು ದ್ವಿತೀಯಪ್ರಾಪ್ತಿಸ್ಥಾನವಾಗಿ ಹೇಳಲ್ಪಟ್ಟಿದೆ. ಛಾಂದೋಗ್ಯದಲ್ಲಿ (5.10.1,2) ವಾಯುಲೋಕದ ಪ್ರಸ್ತಾವವೇ ಇಲ್ಲ. ಆದರೂ 'ಸಂವತ್ಸರಾದಾದಿತ್ಯಮ್' ಎಂದು ಛಾಂದೋಗ್ಯವಾಕ್ಯವು ಮುಕ್ತಾಯವಾಗಿದೆ. ಅಲ್ಲಿ ಆದಿತ್ಯನಿಗಿಂತ ಮೊದಲು ವಾಯುವನ್ನು ಅಧ್ಯಾಹಾರ ಮಾಡಬೇಕು. ಏಕೆಂದರೆ ಬೃಹದಾರಣ್ಯಕದಲ್ಲಿ–ಯದಾ ಪುರುಷೋ ಅಸ್ಮಾಲ್ಲೋಕಾತ್ ಪ್ರೈತಿ ಸ ವಾಯುಮಾಗಚ್ಛತಿ, ತಸ್ಮೈ ಸ ತತ್ರ ವಿಜಿಹೀತೇ ಯಥಾ ರಥಚಕ್ರಸ್ಯ ಖಂ, ತೇನ ಸ ಊರ್ಧ್ವಮಾಕ್ರಮತೇ, ಸ ಆದಿತ್ಯಮಾಗಚ್ಛತಿ'' (5.10.1) ಎಂದಿದೆ. ವಾಯುದೇವ ಜ್ಞಾನಿಗೆ ರಥದ ಚಕ್ರದಲ್ಲಿರುವಂತಹ ರಂಧ್ರವನ್ನು ಮಾಡಿಕೊಡುತ್ತಾನೆ, ಅದರ ಮೂಲಕ ಜ್ಞಾನಿಯು ಊರ್ಧ್ವಮುಖವಾಗಿ ಆದಿತ್ಯಲೋಕಕ್ಕೆ ಹೋಗುತ್ತಾನೆ, ಎಂದು ಅದರ ಅರ್ಥ. ''ಸ ವಾಯುಲೋಕಂ'' ಎಂಬ ಕೌಶೀತಕೀವಚನ ಅವಿಶೇಷವಚನ. ಅಲ್ಲಿ ಕ್ರಮವು ವಿವಕ್ಷಿತವಲ್ಲ. ಬೃಹದಾರಣ್ಯಕವಚನ ವಿಶೇಷವಚನ. ಆದ್ದರಿಂದ ಆದಿತ್ಯಪ್ರವೇಶಕ್ಕಿಂತ ಪೂರ್ವದಲ್ಲಿ ವಾಯುಲೋಕಗಮನ.

**ಶಾಂಕರಭಾಷ್ಯದ ಸೂತ್ರಪಾಠ—** ''ವಾಯುಮ್ ಅಬ್ದಾತ್...'' ಎಂದು ಅಬ್ದಾತ್=ಸಂವತ್ಸರಾಭಿಮಾನಿಲೋಕದಿಂದ ವಾಯುಂ=ವಾಯುಲೋಕಕ್ಕೆ (ಅಲ್ಲಿಂದ ಆದಿತ್ಯಲೋಕಕ್ಕೆ) ಜ್ಞಾನಿಯು ಹೋಗುತ್ತಾನೆ. ''ಮಾಸೇಭ್ಯಃ ಸಂವತ್ಸರಂ ಸಂವತ್ಸರಾದಾದಿತ್ಯಮ್'' ಎಂದು ಛಾಂದೋಗ್ಯವಾಕ್ಯ. ಇಲ್ಲಿ ಸಂವತ್ಸರ(ಅಬ್ದ) ಮತ್ತು ಆದಿತ್ಯರ ಮಧ್ಯದಲ್ಲಿ ವಾಯುವನ್ನು ಸೇರಿಸಬೇಕು, ಎಂದು ಸೂತ್ರದ ನಿರ್ಣಯ.

**ವಿಮರ್ಶೆ—**ಅಗ್ನಿ ಮತ್ತು ಅರ್ಚಿಪದಗಳು ಏಕಾರ್ಥಕ ಎಂದು ಪರಿಗಣಿಸಿ 'ತೇಽರ್ಚಿಷಮಭಿಸಂಭವಂತಿ' ಎಂಬ ಛಾಂದೋಗ್ಯವಚನಕ್ಕೂ ''ಅಗ್ನಿಲೋಕಮಾಗಚ್ಛತಿ'' ಎಂಬ ಕೌಶೀತಕೀವಚನಕ್ಕೂ ವಿರೋಧವನ್ನು ಪರಿಹರಿಸುವುದು ಸರಿಯಲ್ಲ. ಭಗವದ್ಗೀತೆಯಲ್ಲಿ 'ಅಗ್ನಿರ್ಜ್ಯೋತಿರಹಃ ಶುಕ್ಲಃ' ಎಂದು ಎರಡೂ ಶಬ್ದಗಳನ್ನು ಜೊತೆಯಲ್ಲೇ ಪ್ರಯೋಗಿಸಲಾಗಿದೆ. ಆದ್ದರಿಂದ ಆ ಎರಡು ಶಬ್ದಗಳಿಗೆ ಸಮಾನಾರ್ಥತ್ವವನ್ನು ಹೇಳಲಾಗುವುದಿಲ್ಲ.

ಕೌಶೀತಕಿಯಲ್ಲಿ ವಾಯುಪ್ರಥಮಸ್ಥಾನದಲ್ಲಿ ಪಠಿತವಾಗಿದೆ. ಅದಕ್ಕೆ 'ತೇಽರ್ಚಿಷಮಭಿಸಂಭವಂತಿ' ಎಂಬ ಪ್ರಬಲಶ್ರುತಿಯ ಬಾಧವಿರುವುದರಿಂದ ದ್ವಿತೀಯ ಸ್ಥಾನವಿಶೇಷವು ನ್ಯಾಯಪ್ರಾಪ್ತ. ದ್ವಿತೀಯಸ್ಥಾನವು ಬೃಹದಾರಣ್ಯಕ ಶ್ರುತಿಸಿದ್ಧವೂ

ಆಗಿದೆ. ಹೀಗಿರುವಾಗ ಅದಕ್ಕೆ ಆರನೆಯ ಸ್ಥಾನ ಕಲ್ಪನೆ ಉಚಿತವಲ್ಲ. ವಾಯುಚ್ಛಿದ್ರದ ಮೂಲಕ ಆದಿತ್ಯಪ್ರಾಪ್ತಿಯನ್ನು ದ್ವಿತೀಯಸ್ಥಾನದಲ್ಲಿದ್ದರೂ ಕೂಡಿಸಬಹುದು. ವಾಯುದೇವ ಜೀವನೊಂದಿಗೆ ಸಂವತ್ಸರಲೋಕಪರ್ಯಂತವೂ ಬರುತ್ತಾನೆ. ಅಲ್ಲಿಂದ ಜೀವನಿಗೆ ಛಿದ್ರದ ಮೂಲಕ ಆದಿತ್ಯಲೋಕಪ್ರವೇಶಕ್ಕೆ ಅನುವು ಮಾಡಿಕೊಡುತ್ತಾನೆ.

**ರಾಮಾನುಜಭಾಷ್ಯದಲ್ಲಿ ಸೂತ್ರಾರ್ಥ—** ಛಾಂದೋಗ್ಯದಲ್ಲಿ ''ಮಾಸೇಭ್ಯಃ ಸಂವತ್ಸರಂ, ಸಂವತ್ಸರಾದಾದಿತ್ಯಮ್' (4.15.5) ಎಂದು ಸಂವತ್ಸರದಿಂದ ಆದಿತ್ಯಲೋಕ ಪ್ರಾಪ್ತಿಯನ್ನು ಹೇಳಲಾಗಿದೆ. ಬೃಹದಾರಣ್ಯಕದಲ್ಲಿ ''ಮಾಸೇಭ್ಯೋ ದೇವಲೋಕಂ ದೇವಲೋಕಾದಾದಿತ್ಯಲೋಕಂ''(8.2.15) ಎಂದಿದೆ. ಅಲ್ಲಿ ಮಾಸಾನಂತರ ಸಂವತ್ಸರದ ಬದಲು ದೇವಲೋಕಶಬ್ದವಿದೆ. ಅಲ್ಲಿಂದ ಆದಿತ್ಯಲೋಕ ಎಂದಿದೆ. ಆದರೆ, ದಿನ, ಪಕ್ಷ, ಮಾಸ ಈ ಕ್ರಮದಲ್ಲಿ ಮಾಸಾನಂತರ ಸಂವತ್ಸರವೇ ಇರಬೇಕಾದ ಕಾರಣ ಸಂವತ್ಸಾರಾನಂತರ ದೇವಲೋಕ ಎಂದು ಅಲ್ಲಿ ತಿಳಿಯಬಹುದು. ಆದರೆ, ಆದಿತ್ಯಲೋಕಕ್ಕಿಂತ ಮೊದಲು ದೇವಲೋಕವೋ (ಬೃಹದಾರಣ್ಯಕದಲ್ಲಿ ಹೇಳಿದಂತೆ) ವಾಯುಲೋಕವೋ ಎಂಬ ಸಂಶಯ ಉಳಿಯುತ್ತದೆ. ಇದಕ್ಕೆ ಸೂತ್ರದ ನಿರ್ಣಯ— 'ಅಬ್ದಾದ್ ವಾಯುಂ' ಸಂವತ್ಸರಾನಂತರ ವಾಯುಲೋಕಪ್ರಾಪ್ತಿ. ದೇವಲೋಕಶಬ್ದಕ್ಕೂ ವಾಯುಲೋಕವೆಂದೇ ಅರ್ಥ. ''ಯೋಽಯಂ ಪವತೇ ಏಷ ದೇವಾನಾಂ ಗೃಹಃ'' (ಜೈ.ಉಪ.ಬ್ರಾ.) ಎಂದಂತೆ ವಾಯುದೇವ ದೇವತೆಗಳಿಗೆ ಮನೆಯಂತಿರುವುದರಿಂದ ದೇವಲೋಕ ಎಂದರೆ ವಾಯುದೇವರು. ಹೀಗೆ 'ದೇವಲೋಕ' ಎಂಬ ಅವಿಶೇಷಶಬ್ದ=ಸಾಮಾನ್ಯಶಬ್ದ ವಿಶೇಷಾಭ್ಯಾಂ=ವಾಯುಲೋಕ ಎಂಬ ವಿಶೇಷಶಬ್ದ ಗಳಿಂದ ವಾಯುಲೋಕದಿಂದ ಆದಿತ್ಯಲೋಕ ಎಂದು ನಿರ್ಣಯಿಸಬೇಕು.

**ವಿಮರ್ಶೆ—**ವಾಯುಲೋಕವನ್ನು ಕೊನೆಗೆ ಒಯ್ದರೆ ಪ್ರಥಮಪ್ರಾಪ್ಯತ್ವೇನ ಶ್ರುತವಾದ ಕೌಶೀತಕೀವಾಕ್ಯಕ್ಕೆ ಅತ್ಯಂತಬಾಧವನ್ನು ಹೇಳಬೇಕಾಗುತ್ತದೆ. ದ್ವೈತಭಾಷ್ಯ ದಂತೆ ಪ್ರಥಮಪ್ರಾಪ್ತಿ ಅರ್ಚಿರ್ಲೋಕ ಎಂಬ ಸ್ಪಷ್ಟಶ್ರುತಿ ಇರುವುದರಿಂದ ಅದರ ವಿರೋಧಧ ಪರಿಹಾರಕ್ಕಾಗಿ ದ್ವಿತೀಯಸ್ಥಾನದಲ್ಲಿ ವಾಯುಲೋಕವನ್ನು ಇಡಲಾಗಿದೆ. ಅದನ್ನೂ ಬಿಟ್ಟು ಅಂತ್ಯಸ್ಥಾನವನ್ನು ನೀಡುವುದು ಉಚಿತವಲ್ಲ.

**ಇಲ್ಲಿಗೆ ವಾಯುಗತ್ಯಧಿಕರಣವು ಮುಗಿಯಿತು.**

## ೩. ತಟಿದಧಿಕರಣಮ್

**॥ ಓಂ ತಟಿತೋಽಧಿ ವರುಣಃ ಸಂಬಂಧಾತ್ ಓಂ ॥ ೩ ॥**

**'ಮಾಸೇಭ್ಯಃ ಸಂವತ್ಸರಂ, ಸಂವತ್ಸರಾದ್ ವರುಣಲೋಕಂ,**
**ವರುಣ ಲೋಕಾತ್ ಪ್ರಜಾಪತಿಲೋಕಮ್'**
**ಇತಿ ಕೌಂಡಿನ್ಯಶ್ರುತಿಃ ।**

**'ಸಂವತ್ಸರಾತ್ ತಟಿತಮಾಗಚ್ಛತಿ ತಟಿತಃ ಪ್ರಜಾಪತಿಲೋಕಮ್'**
**ಇತಿ ಚ ಗೌಪವನಶ್ರುತಿಃ ।**

**ತತ್ರ, ತಟಿತೋ ವರುಣಂ ಗಚ್ಛತಿ ।**
**'ತಟಿತಾ ಹ್ಯೂಹ್ಯತೇ ವರುಣಲೋಕಸ್ತಟಿದುಪರಿ ಮುಕ್ತಾಮಯೋ ರಾಜತೇ । ತತ್ರಾಸೌ ವರುಣೋ ರಾಜಾ ಸತ್ಯಾನೃತೇ ವಿವಿಂಚತಿ' ಇತ್ಯುಪರಿಸಂಬದ್ಧತ್ವಶ್ರುತೇಃ ॥**

''ಉತ್ತರಾಯಣದ ಆರು ಮಾಸಾಧಿಪತಿಗಳಾದ ದೇವತೆಗಳ ಲೋಕದಿಂದ ಸಂವತ್ಸರಾಧಿಪತಿಲೋಕಕ್ಕೆ, ಅಲ್ಲಿಂದ ವರುಣಲೋಕಕ್ಕೆ, ಅಲ್ಲಿಂದ ಪ್ರಜಾಪತಿಲೋಕಕ್ಕೆ ಬ್ರಹ್ಮಜ್ಞಾನಿಗಳು ಹೋಗುತ್ತಾರೆ'' ಎಂದು ಕೌಂಡಿನ್ಯಶ್ರುತಿಯಲ್ಲಿದೆ. ''ಸಂವತ್ಸರಾಧಿಪತಿಲೋಕದಿಂದ ತಟಿದಭಿಮಾನಿ (ಮಿಂಚಿಗೆ ಅಭಿಮಾನಿ)ಲೋಕಕ್ಕೆ, ಅಲ್ಲಿಂದ ಪ್ರಜಾಪತಿಲೋಕಕ್ಕೆ'' ಎಂದು ಗೌಪವನಶ್ರುತಿಯಲ್ಲಿದೆ. (ಇವೆರಡರಲ್ಲಿ ವಿರೋಧ ಬಂದಾಗ ಸೂತ್ರದಲ್ಲಿ, ಸಂವತ್ಸರದಿಂದ ತಟಿಲ್ಲೋಕಕ್ಕೆ, ಅಲ್ಲಿಂದ ತತ್‌ಸಂಬದ್ಧವಾದ ವರುಣಲೋಕಕ್ಕೆ, ಎಂದು ನಿರ್ಣಯಿಸಲಾಗಿದೆ. ಅದಕ್ಕೆ ಶ್ರುತಿಸಂವಾದ ಕೊಟ್ಟು ಭಾಷ್ಯದಲ್ಲಿ ನಿರ್ಣಯಿಸಲಾಗಿದೆ.) ತಟಿಲ್ಲೋಕದಿಂದ ವರುಣಲೋಕಕ್ಕೆ ಹೋಗುತ್ತಾನೆ. ಏಕೆಂದರೆ, ತಟಿಲ್ಲೋಕದಿಂದಲೇ ವರುಣಲೋಕವು ಧರಿಸಲ್ಪಟ್ಟಿದೆ. ತಟಿಲ್ಲೋಕದ ಮೇಲಿರುವ ವರುಣಲೋಕದಲ್ಲಿ ಮುಕ್ತಾಮಯಃ=ರೋಗರಹಿತನಾಗಿ ರಾಜತೇ= ಜ್ಞಾನಿಯು ವಿರಾಜಮಾನನಾಗುತ್ತಾನೆ. ಅಲ್ಲಿ ರಾಜನಾದ ವರುಣನು ತನ್ನ ಪ್ರಜೆಗಳ ಸತ್ಯಾನೃತೇ=ಪುಣ್ಯ–ಪಾಪಗಳನ್ನು ವಿವಿಂಚತಿ=ವಿವೇಚಿಸುತ್ತಾನೆ. ಈ ಶ್ರುತಿಯಲ್ಲಿ ಊಹ್ಯತೇ ಎಂದು ಹೇಳುವ ಮೂಲಕ ವರುಣಲೋಕವು ತಟಿಲ್ಲೋಕದ ಮೇಲಿದೆ ಎಂದು ತಿಳಿಯುತ್ತದೆ.

**ವಿವರಣೆ**—ಸಂವತ್ಸರ ಪರ್ಯಂತ ಮಾರ್ಗದ ನಿರ್ಣಯವಾಗಿದೆ. ಸಂವತ್ಸರಾನಂತರದಲ್ಲಿ ತಟಿಲ್ಲೋಕಪ್ರಾಪ್ತಿ ಎಂದು ಗೌಪವನಶ್ರುತಿಯಲ್ಲಿದೆ, ವರುಣಲೋಕಪ್ರಾಪ್ತಿ, ಎಂದು ಕೌಂಡಿನ್ಯಶ್ರುತಿಯಲ್ಲಿದೆ. ಇವೆರಡು ವಿರುದ್ಧವಾದುದು. ಆದರ ನಿರ್ಣಯಕ್ಕಾಗಿ ಈ ಅಧಿಕರಣವಿದೆ. ''ವಿದ್ಯುದ್ವೈ ವಿದ್ಯುತ್ಯ ವೃಷ್ಟಿಮನುಪ್ರವಿಶತಿ–ಮಿಂಚು ಮಿಂಚಿ ಮಳೆಯಲ್ಲಿ ಸೇರಿಕೊಳ್ಳುತ್ತದೆ'' ಎಂದು ಶ್ರುತಿ ಇದೆ. ಮಳೆ ಎಂದರೆ ನೀರು. ನೀರಿನ ಅಭಿಮಾನಿ ವರುಣ. ಹೀಗೆ ವರುಣನ ಸಂಬಂಧಿಯಾದುದರಿಂದ ತಟಿಲ್ಲೋಕವನ್ನೂ ವರುಣಲೋಕವೆಂದೇ ಪರಿಗಣಿಸಿ ತಟಿಲ್ಲೋಕವನ್ನು ಪ್ರತ್ಯೇಕಗೊಳಿಸದೆ ಕೌಂಡಿನ್ಯ ಶ್ರುತಿಯು ಸಂವತ್ಸರದಿಂದ ವರುಣಲೋಕಪ್ರಾಪ್ತಿ, ಎಂದಿದೆ. ಆದಕ್ಕೆ ತಟಿಲ್ಲೋಕಪ್ರಾಪ್ತಿಯೂ ಸಮ್ಮತವಾಗಿದೆ.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**।। ಓಂ ತಟಿತೋಽಧಿ ವರುಣಃ ಸಂಬಂಧಾತ್ ಓಂ ।।** (ಅತ್ರ ತಟಿಲ್ಲೋಕಸ್ಯ ಸಂವತ್ಸರಲೋಕಾದನಂತರಪ್ರಾಪ್ಯತ್ವಂ ಸಾಧ್ಯತೇ । ತಟಿತಃ=ತಲ್ಲೋಕಾತ್ ಅಧಿ= ಉಪರಿ, ತಟಿಲ್ಲೋಕಪ್ರಾಪ್ಯನಂತರಂ ವರುಣಃ ಪ್ರಾಪ್ಯಃ ನತು 'ಸಂವತ್ಸರಾದ್ ವರುಣ ಲೋಕಂ' ಇತಿ ಶ್ರುತ್ಯಾ ತದನಂತರಮೇವ । ಕುತಃ ? ಸಂಬಂಧಾತ್ । 'ತಟಿತಾ ಹ್ಯೂಹ್ಯತೇ ವರುಣಲೋಕಃ' ಇತಿ ತಸ್ಯ ತಟಿತೋಽಧಿಸಂಬಂಧಶ್ರವಣಾದಿತ್ಯರ್ಥಃ ।)

ಈ ಅಧಿಕರಣದಲ್ಲಿ ತಟಿಲ್ಲೋಕಪ್ರಾಪ್ತಿಯು ಸಂವತ್ಸರಾನಂತರ ಎಂದು ಸಿದ್ಧಾಂತಿಸಲಾಗಿದೆ. ತಟಿತಃ=ತಟಿಲ್ಲೋಕಕ್ಕಿಂತಲೂ ಅಧಿ=ಮೇಲ್ಭಾಗದಲ್ಲಿ ಅಂದರೆ ಆ ಲೋಕಪ್ರಾಪ್ತಿಯಾದ ಮೇಲೆ ವರುಣಃ=ವರುಣಲೋಕವು ಪ್ರಾಪ್ಯ ಎಂದು. ಹೊರತು, ಕೌಂಡಿನ್ಯಶ್ರುತಿ ಹೇಳುವಂತೆ ಸಂವತ್ಸರಪ್ರಾಪ್ತಿಯಾದ ಕೂಡಲೇ ವರುಣಲೋಕ ಪ್ರಾಪ್ತಿಯಲ್ಲ. ಸಂಬಂಧಾತ್='ತಟಿತಾ ಹ್ಯೂಹ್ಯತೇ ವರುಣಲೋಕಃ' ಎಂದು ತಟಿಲ್ಲೋಕದ ಮೇಲಿನ ಸಂಬಂಧವು ವರುಣಲೋಕಕ್ಕೆ ಶ್ರುತವಾಗಿರುವುದರಿಂದ.

## ಶಾಂಕರಭಾಷ್ಯದಲ್ಲಿ ತಟಿದಧಿಕರಣ

ಕೌಶೀತಕೀಬ್ರಾಹ್ಮಣದಲ್ಲಿ ''ಸ ವರುಣಲೋಕಂ ಸ ಆದಿತ್ಯಲೋಕಂ, ಸ ಇಂದ್ರಲೋಕಂ, ಸ ಪ್ರಜಾಪತಿಲೋಕಂ'' ಎಂದಿದೆ. ಛಾಂದೋಗ್ಯದಲ್ಲಿ (4.15.5) ''ಆದಿತ್ಯಾಚ್ಚಂದ್ರಮಸಂ ಚಂದ್ರಮಸೋ ವಿದ್ಯುತಂ'' ಎಂದು ವಿದ್ಯುಲ್ಲೋಕ ಪ್ರಾಪ್ತಿಯನ್ನು ಹೇಳಲಾಗಿದೆ. ಆದ್ದರಿಂದ ತಡಿತಃ ಅಧಿ=ವಿದ್ಯುಲ್ಲೋಕಾನಂತರವೇ ವರುಣಲೋಕಪ್ರಾಪ್ತಿ. ಸಂಬಂಧಾತ್=ವಿದ್ಯುತ್ ಮತ್ತು ವರುಣರಿಗೆ

ಸಂಬಂಧವಿರುವುದರಿಂದ. ''ಯದಾ ಹಿ ವಿಶಾಲಾ ವಿದ್ಯುತಃ ತೀವ್ರಸ್ತನಿತನಿರ್ಘೋಷಾ ಜೀಮೂತೋದರೇಷು ಪ್ರನೃತ್ಯಂತಿ ಅಥ ಆಪಃ ಪ್ರಪತಂತಿ। ವಿದ್ಯೋತತೇ, ಸ್ತನಯತಿ, ವರ್ಷಿಷ್ಯತಿ ವಾ''(ಛಾಂ.7.11.1) ಮೋಡದ ಮಧ್ಯದಲ್ಲಿ ವಿದ್ಯುತ್ತಿದೆ. ಮೋಡದ ಸಂಬಂಧ ನೀರಿಗಿದೆ. ನೀರು ಮೋಡದ ಮೇಲಿರುತ್ತದೆ. ನೀರಿಗೆ ಅಧಿಪತಿ ವರುಣ. ಆದ್ದರಿಂದ ತಡಿಲ್ಲೋಕಾನಂತರ ವರುಣಲೋಕ.

**ವಿಮರ್ಶೆ**—''ತತ್ ಪುರುಷೋಽಮಾನವಃ । ಸ ಏನಾನ್ ಬ್ರಹ್ಮ ಗಮಯತಿ'' ಎಂಬ ಛಾಂದೋಗ್ಯವಾಕ್ಯದಲ್ಲಿ ಬ್ರಹ್ಮನಲ್ಲಿಗೆ ತಲುಪಿಸುವ ಆತಿವಾಹಿಕ ಪುರುಷ ವಿದ್ಯುತ್‌ಪುರುಷ, ಎಂದು ಶಾಂಕರಭಾಷ್ಯದಲ್ಲಿದೆ. ಅವನನ್ನು ವರುಣಾತ್ ಪೂರ್ವದಲ್ಲಿ ನಿವೇಶಮಾಡಿದರೆ ಮಧ್ಯದಲ್ಲಿ ಬಹುವ್ಯವಧಾನ ಬರುವುದರಿಂದ 'ಸ ಏನಾನ್' ಎಂದು ತಚ್ಛಬ್ದದಿಂದ ಪರಾಮರ್ಶಮಾಡಲಾಗದು. ಅಷ್ಟೇ ಅಲ್ಲದೆ ವಿದ್ಯುದನಂತರ ವರುಣ ಎನ್ನಲು ಭಾಷ್ಯಕಾರರು ಕೊಟ್ಟಿರುವ ಯುಕ್ತಿ ಮೋಡದಲ್ಲಿ ವಿದ್ಯುತ್ ಕೆಳಗಿರುತ್ತದೆ. ನೀರು ಆಮೇಲಿರುತ್ತದೆ, ಎಂದು. ಇದಕ್ಕೆ ಆಧಾರವಿಲ್ಲ, ಕಲ್ಪನಾಮಾತ್ರ.

**ರಾಮಾನುಜಭಾಷ್ಯದಲ್ಲೂ ಇದೇ ಅರ್ಥವನ್ನು ಹೇಳಲಾಗಿದೆ.**

**ಇಲ್ಲಿಗೆ ತಟಿದಧಿಕರಣವು ಮುಗಿಯಿತು.**

## ೪. ಆತಿವಾಹಿಕಾಧಿಕರಣಮ್

## ।। ಓಂ ಆತಿವಾಹಿಕಸ್ತಲ್ಲಿಂಗಾತ್ ಓಂ ।। ೪ ।।

**ಪೂರ್ವತ್ರೋಕ್ತಸ್ತ್ವಾತಿವಾಹಿಕೋ ವಾಯುಃ । ಪೂರ್ವಗಮನಲಿಂಗಾತ್ ।**

ಅರ್ಚಿರಾದಿಮಾರ್ಗದಲ್ಲಿ ಅರ್ಚಿಯ ಅನಂತರದಲ್ಲಿ ಪ್ರಾಪ್ಯತ್ವೇನ ಹೇಳಲ್ಪಟ್ಟ ವಾಯು ಮುಖ್ಯವಾಯುವಲ್ಲ, ಆತಿವಾಹಿಕವಾಯು. ಅದಕ್ಕೆ ಪೂರ್ವಪ್ರಾಪ್ಯತ್ವವೇ ಹೇತು.

**ವಿವರಣೆ**—''ದ್ಯಾವ್ಯರ್ವಾವ ವಿದ್ಯುತ್, ತತ್ಪತಿಂ ವಾಯುಮುಪಗಮ್ಯ ತೇನೈವ ಪರಮಭಿಗಚ್ಛತಿ'' ಎಂದು ಶ್ರುತಿಯಲ್ಲಿ ವಿದ್ಯುತ್ಪತಿಯಾದ ವಾಯುವು ಕೊನೆಯಲ್ಲಿ ಪ್ರಾಪ್ಯ. ಅವನೇ ಮುಕ್ತನನ್ನು ಬ್ರಹ್ಮನ ಬಳಿ ಕರೆದೊಯ್ಯುತ್ತಾನೆ, ಎಂದಿದೆ. ''ಸ ಇತೋ

ಗತಃ ದ್ವಿತೀಯಂ ಸ ವಾಯುಂ'' ಎಂದು ದ್ವಿತೀಯಪ್ರಾಪ್ಯನೂ ವಾಯು ಎಂದು ಶ್ರುತವಾಗಿದೆ. ಆದ್ದರಿಂದ ಅರ್ಚಿರ್ದೇವನಂತೆ ವಾಯುವಿಗೂ ಎರಡು ರೂಪಗಳಿವೆ ಎಂದು ಸಂದೇಹ ಬಂದಾಗ ಈ ಅಧಿಕರಣದಲ್ಲಿ ಪರಿಹರಿಸಲಾಗಿದೆ. ಮೊದಲು ಪ್ರಾಪ್ಯತ್ವೇನ ಹೇಳಲ್ಪಟ್ಟಿರುವ ವಾಯು, ವಾಯುಪುತ್ರನಾದ ಆತಿವಾಹಿಕವಾಯು. ಕೊನೆಯಲ್ಲಿ ಶ್ರುತನಾದ ವಾಯು ಪ್ರಧಾನವಾಯು. ಹೀಗೆ ವ್ಯವಸ್ಥೆ ಮಾಡಬೇಕು. ದ್ವಿರೂಪತ್ವವು ಪ್ರಾಮಾಣಿಕವಲ್ಲ.

ಮುಖ್ಯವಾಯು ಅರ್ಚಿರನಂತರದಲ್ಲಿ ಪ್ರಾಪ್ಯನಲ್ಲ, ಎನ್ನುವುದಕ್ಕೆ ಪ್ರಥಮ ಪ್ರಾಪ್ಯತ್ವವೇ ಲಿಂಗ. ಪೂರ್ವಪೂರ್ವದಲ್ಲಿ ಉಕ್ತರಾದ ದೇವತೆಗಳು ತಾರತಮ್ಯದಲ್ಲಿ ಕಡಿಮೆಯವರು. ಆದ್ದರಿಂದ ಪ್ರಥಮಪ್ರಾಪ್ಯನಾದ ವಾಯು ಮುಖ್ಯವಾಯುವಲ್ಲ.

**ಕುತಃ ?-**

## ll ಓಂ ಉಭಯವ್ಯಾಮೋಹಾತ್ ತತ್ಸಿದ್ಧೇಃ ಓಂ ll ೫ ll

'ಸ ವಾಯುಮಾಗಚ್ಛತಿ' (ಬೃ.ಉ. 7.10.1) ಇತಿ ಪ್ರಥಮಮುಚ್ಯತೇ । 'ಉತ್ಕ್ರಾಂತೋ ವಿದ್ವಾನ್ ಪರಮಭಿಗಚ್ಛನ್ ವಿದ್ಯುತಮೇವಾಂತತ ಉಪಗಚ್ಛತಿ । ದ್ಯೌರ್ವಾವ ವಿದ್ಯುತ್ । ತತ್ಪತಿಂ ವಾಯುಮುಪಗಮ್ಯ ತೇನೈವ ಬ್ರಹ್ಮ ಗಚ್ಛತಿ' ಇತ್ಯಂತೇಽಪಿ ವಾಯುಗಮನಶ್ರುತೇಃ ಪೂರ್ವೋಕ್ತ ಆತಿವಾಹಿಕಃ ಪರೋ ವೇತಿ ವ್ಯಾಮೋಹೇ (ವ್ಯಾಮೋಹಃ- ವಾ.ರಾ.ಪಾಠ), ಉತ್ತರೇ ದಿವಸ್ಪತಿರಿತಿ ವಿಶೇಷಣಾತ್ ಪೂರ್ವತ್ರಾಽತಿವಾಹಿಕಸ್ಯೈವ ಸಿದ್ಧೇಃ ।

ಬ್ರಹ್ಮತರ್ಕೇ ಚ-

'ಉತ್ಕ್ರಾಂತಸ್ತು ಶರೀರಾತ್ ಸ್ವಾದ್ ಗಚ್ಛತ್ಯರ್ಚಿಷಮೇವ ತು ।
ತತೋ ಹಿ ವಾಯೋಃ ಪುತ್ರಂ ಚ ಯೋಽಸೌ ನಾಮ್ನಾಽತಿವಾಹಿಕಃ ॥

ತತೋಽಹಃ ಪೂರ್ವಪಕ್ಷಂ ಚಾಪ್ಯುದಕ್ ಸಂವತ್ಸರಂ ತಥಾ ।
ತಟಿತಂ ವರುಣಂ ಚೈವ ಪ್ರಜಾಪಂ ಸೂರ್ಯಮೇವ ಚ ॥

ಸೋಮಂ ವೈಶ್ವಾನರಂ ಚೇಂದ್ರಂ ಧ್ರುವಂ ದೇವೀಂ ದಿವಂ ತಥಾ ।
ತತೋ ವಾಯುಂ ಪರಂ ಪ್ರಾಪ್ಯ ತೇನೈತಿ ಪುರುಷೋತ್ತಮಮ್ ॥'

ಇತಿ ।

''ಸ ವಾಯುಮಾಗಚ್ಛತಿ'' ಎಂದು ಮೊದಲು ಶ್ರುತವಾಗಿದೆ. 'ಉತ್ಕ್ರಾಂತೋ ವಿದ್ವಾನ್' ಎಂಬ ಶ್ರುತಿಯಲ್ಲಿ ಅಂತ್ಯಪ್ರಾಪ್ಯನೂ ವಾಯುವೆಂದು ಶ್ರುತವಾಗಿದೆ. ಇವರಿಬ್ಬರಲ್ಲಿ ಆತಿವಾಹಿಕವಾಯು ಪೂರ್ವೋಕ್ತನಾದವನೋ, ಕೊನೆಯಲ್ಲಿ ಪ್ರಾಪ್ಯತ್ವೇನ ಉಕ್ತನಾದವನೋ ಎಂಬ ವ್ಯಾಮೋಹ ಬಂದಾಗ ಅಂತ್ಯಪ್ರಾಪ್ಯನಿಗೆ 'ವಿದ್ಯುತ್ಪತಿ' (ದಿವಸ್ಪತಿ) ಎಂಬ ವಿಶೇಷಣವಿರುವ ಕಾರಣ ಮೊದಲು ಹೇಳಿದ ವಾಯುವೇ ಆತಿವಾಹಿಕ ಎಂದು ಸಿದ್ಧವಾಗುತ್ತದೆ. ಬ್ರಹ್ಮತರ್ಕದಲ್ಲಿ ಇದು ಸ್ಪಷ್ಟವಾಗಿದೆ—

ಜ್ಞಾನಿಯು ತನ್ನ ದೇಹದಿಂದ ಉತ್ಕ್ರಮಿಸಿ ಅರ್ಚಿರ್ದೇವತೆಯನ್ನು ಹೊಂದುತ್ತಾನೆ. ಆಮೇಲೆ ವಾಯುಪುತ್ರನಾದ ಆತಿವಾಹಿಕಹೆಸರಿನ ವಾಯುವನ್ನು ಹೊಂದುತ್ತಾನೆ. ಆಮೇಲೆ ಅಹರಭಿಮಾನಿಯನ್ನು, ಶುಕ್ಲಪಕ್ಷಾಭಿಮಾನಿಯನ್ನು, ಉತ್ತರಾಯಣಾಭಿ ಮಾನಿಯನ್ನು, ತಟಿದಭಿಮಾನಿಯನ್ನು, ವರುಣನನ್ನು, ಪ್ರಜಾಪತಿಯನ್ನು, ಸೂರ್ಯನನ್ನು, ಚಂದ್ರನನ್ನು, ಅಗ್ನಿಯನ್ನು, ಇಂದ್ರನನ್ನು, ಧ್ರುವಲೋಕವನ್ನು, ದಿವಂ ದೇವೀಂ=ದ್ಯುಲೋಕಾಭಿಮಾನಿನಿಯಾದ ಭಾರತೀದೇವಿಯನ್ನು ಕ್ರಮವಾಗಿ ಹೊಂದಿ ಕೊನೆಯಲ್ಲಿ ವಾಯುದೇವನನ್ನು ತಲುಪಿ ಅವನ ಮೂಲಕ ಪುರುಷೋತ್ತಮನ ಬಳಿಗೆ ಸೇರುತ್ತಾನೆ.

**ವಿವರಣೆ**—'ದಿವಸ್ಪತಿ' ಎಂದರೆ ಭಾರತೀಪತಿ. 'ದ್ಯೌರ್ವಾವ ವಿದ್ಯುತ್, ತತ್ಪತಿಂ ವಾಯುಂ' ಎಂದು ಶ್ರುತಿಯಲ್ಲಿದೆ. ಭಾರತೀದೇವಿ 'ದ್ಯೌಃ, ದ್ಯೌರ್ವಾವ ವಿದ್ಯುತ್= ಅಂತಹ ಭಾರತೀದೇವಿಯೇ ವಿದ್ಯುತ್. ತತ್ಪತಿಂ=ಆ ಭಾರತೀಯ ಪತಿಯನ್ನು, ಎಂದು ಅಂತಿಮಪ್ರಾಪ್ಯನಾದ ವಾಯುವಿಗೆ ವಿಶೇಷಣವಿದೆ. ಇದರಿಂದ ಅವನು ಮುಖ್ಯ ವಾಯು ಎಂದು ನಿರ್ಧಾರವಾಗುತ್ತದೆ. ಅದರಿಂದಾಗಿ ಪ್ರಥಮಪ್ರಾಪ್ಯನಾದವನು ವಾಯುಪುತ್ರನಾದ ಆತಿವಾಹಿಕ ಎಂದೂ ನಿಶ್ಚಯವಾಗುತ್ತದೆ.

ವಾದಿರಾಜರು ಸೂತ್ರದಲ್ಲಿ 'ಉಭಯವ್ಯಾಮೋಹಾತ್' ಎಂದು ಲ್ಯಬ್ಲೋಪ ಪಂಚಮೀ. 'ಉಭಯವ್ಯಾಮೋಹಂ ನಿರಾಕೃತ್ಯ' ಎಂದರ್ಥ. ಎರಡು ವಿಧವಾದ ವ್ಯಾಮೋಹವನ್ನು ಬಿಟ್ಟು 'ದಿವಸ್ಪತಿ' ಎಂಬ ವಿಶೇಷಣದಿಂದ ಅಂತಿಮಪ್ರಾಪ್ಯಪ್ರಧಾನ ವಾಯು ಎಂದು ಸಿದ್ಧವಾಗುತ್ತದೆ. ಭಾಷ್ಯದಲ್ಲಿ 'ವ್ಯಾಮೋಹಃ' ಎಂದು ಪ್ರಥಮಾಂತಪಾಠ. 'ನ' ಎಂದು ಅಧ್ಯಾಹಾರ. 'ಇತಿ ವ್ಯಾಮೋಹಃ ನ' ಎಂದರ್ಥ. ಹೀಗೆ ವ್ಯಾಖ್ಯಾನ ಮಾಡಿದ್ದಾರೆ. ಭಾವಬೋಧದಲ್ಲಿ 'ಪಂಚಮ್ಯಾಃ ಅನುಪಯೋಗಾತ್ ಸಪ್ತಮ್ಯರ್ಥತ್ವಂ ಚಾಭಿಪ್ರೇತ್ಯ ಭಾಷ್ಯೇ 'ವ್ಯಾಮೋಹೇ' ಇತ್ಯುಕ್ತಮ್' ಎಂದಿದೆ. 'ವ್ಯಾಮೋಹೇ=ವ್ಯಾಕುಲ ಬುದ್ಧಿತಾಯಾಂ' ಎಂದು ತತ್ತ್ವಪ್ರದೀಪದಲ್ಲಿದೆ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ಆತಿವಾಹಿಕಸ್ತಲ್ಲಿಂಗಾತ್ ಓಂ ॥** (ಅತ್ರ ಅರ್ಚಿಷೋಽನಂತರಂ ಪ್ರಾಪ್ಯವಾಯೋಃ ಆತಿವಾಹಿಕತ್ವಂ ಸಾಧ್ಯತೇ। ದ್ವಿತೀಯಪ್ರಾಪ್ಯತಯಾ ಪ್ರಾಗುಕ್ತೋ ವಾಯುಃ ಆತಿವಾಹಿಕಾಖ್ಯಃ ಮುಖ್ಯವಾಯುಪುತ್ರಃ ಕಶ್ಚಿತ್। ನ ಮುಖ್ಯವಾಯುಃ। ಕುತಃ? ಪೂರ್ವಪ್ರಾಪ್ಯತ್ವರೂಪ ತಲ್ಲಿಂಗಾದಿತ್ಯರ್ಥಃ।)

ಈ ಅಧಿಕರಣದಲ್ಲಿ ಅರ್ಚಿರ್ದೇವತೆಯ ಅನಂತರ ಪ್ರಾಪ್ಯನಾದವನು ವಾಯುಪುತ್ರನಾದ ಆತಿವಾಹಕವಾಯು ಎಂದು ಸಾಧಿಸಲಾಗಿದೆ. ದ್ವಿತೀಯಪ್ರಾಪ್ಯನಾಗಿ ಹೇಳಲ್ಪಟ್ಟವನು ಆತಿವಾಹಿಕಃ=ವಾಯುಪುತ್ರನಾದ ಆತಿವಾಹಿಕವಾಯು, ತಲ್ಲಿಂಗಾತ್=ಪೂರ್ವಪ್ರಾಪ್ಯತ್ವಲಿಂಗದಿಂದ.

**॥ ಓಂ ಉಭಯವ್ಯಾಮೋಹಾತ್ ತತ್ಸಿದ್ಧೇಃ ಓಂ ॥** (ಸಪ್ತಮ್ಯರ್ಥೇ ಪಂಚಮೀ। ಉಭಯಸ್ಮಿನ್ ವಾಯುಶಬ್ದೇ ಆತಿವಾಹಿಕೋ ಮುಖ್ಯೋ ವಾ ಇತಿ ವ್ಯಾಮೋಹೇ=ಸಂದೇಹೇಽಪಿ ತತ್ಸಿದ್ಧೇಃ=ಪೂರ್ವೋಕ್ತಃ ಆತಿವಾಹಿಕಃ, ಪಶ್ಚಾದುಕ್ತಃ ಮುಖ್ಯಃ ಇತ್ಯಸ್ಯಾರ್ಥಸ್ಯ ಸಿದ್ಧೇಃ। ಪಶ್ಚಾತ್ತನಸ್ಯ ದಿವಸ್ಪತಿತ್ವಲಿಂಗಾತ್।)

ಸೂತ್ರದ ಪಂಚಮೀವಿಭಕ್ತಿಗೆ ಸಪ್ತಮೀವಿಭಕ್ತಿಯ ಅರ್ಥವನ್ನು ಮಾಡಬೇಕು. ದ್ವಿತೀಯಪ್ರಾಪ್ಯ ಮತ್ತು ಅಂತಿಮಪ್ರಾಪ್ಯ ಇವರಿಬ್ಬರಲ್ಲೂ ವಾಯುಶಬ್ದವು ಶ್ರುತವಾಗಿರುವಾಗ ಯಾರು ಮುಖ್ಯವಾಯು ಯಾರು ಆತಿವಾಹಿಕ ಎಂಬ ಸಂದೇಹಕ್ಕೆ ಅವಕಾಶವಿದ್ದರೂ ತತ್ಸಿದ್ಧೇಃ=ಉತ್ತರೋಕ್ತನಿಗೆ 'ದಿವಸ್ಪತಿ' ಎಂಬ ವಿಶೇಷಣವು ಇರುವುದರಿಂದ ಅವನು ಮುಖ್ಯವಾಯು ಎಂದು ನಿರ್ಣಯವಾದ ಮೇಲೆ ಪ್ರಥಮೋಕ್ತನಾದವನು ಆತಿವಾಹಿಕ ಎಂದೇ ಸಿದ್ಧವಾಗುತ್ತದೆ.

**ಇಲ್ಲಿಗೆ ಆತಿವಾಹಿಕಾಧಿಕರಣವು ಮುಗಿಯಿತು.**

## ೫. ವೈದ್ಯುತಾಧಿಕರಣಮ್

### ॥ ಓಂ ವೈದ್ಯುತೇನೈವ ತತಸ್ತಚ್ಛ್ರುತೇಃ ಓಂ ॥ ೬ ॥

**ಪ್ರಕಾರಾಂತರೇಣ ತತ್ರ ತತ್ರೋಚ್ಯಮಾನತ್ವಾದ್ ವಾಯೋರಪಿ ಪರತೋ ಬ್ರಹ್ಮಣೋಽರ್ವಾಗ್ ಗಂತವ್ಯೋಽ(ಸ್ಮೀ)ಸ್ತೀತಿ ನಾಽಶಂಕನೀಯಮ್।**

**ವಿದ್ಯುತ್ಪತಿನಾ ವಾಯುನೈವ 'ಸ ಏನಾನ್ ಬ್ರಹ್ಮ ಗಮಯತಿ' (ಛಾಂ.ಉ. 4.15.6) ಇತಿ ಬ್ರಹ್ಮಗಮನಶ್ರುತೇಃ ।**

**'ವಿದ್ಯುತ್ಪತಿರ್ವಾಯುರೇವ ನಯೇದ್ ಬ್ರಹ್ಮ ನಚಾಪರಃ ।**
**ಕುತೋಽನ್ಯಸ್ಯ ಭವೇಚ್ಛಕ್ತಿಸ್ತಮೃತೇ ಪ್ರಾಣನಾಯಕಮ್ ॥'**

**ಇತಿ ಚ ಬೃಹತ್ತಂತ್ರೇ ।**

ಪ್ರಕಾರಾಂತರೇಣ=ತಾರತಮ್ಯಪ್ರಕಾರವಲ್ಲದೆ ಬೇರೆ ಕ್ರಮದಿಂದಲೂ ಮುಕ್ತರಿಂದ ಪ್ರಾಪ್ಯದೇವತೆಗಳನ್ನು ''ಸೋಮಾದಗ್ನಿಂ ಅಗ್ನೇಃ ಇಂದ್ರಂ'' ಎಂದೂ ಹೇಳಿರುವುದರಿಂದ ವಾಯುದೇವನ ಅನಂತರ ಪರಮಾತ್ಮನಿಗಿಂತ ಮೊದಲು (ಅವರಿಬ್ಬರ ಮಧ್ಯದಲ್ಲಿ) ಪ್ರಾಪ್ಯನಾದ ದೇವತಾಂತರ ಇದೆ ಎಂದು ಸಂದೇಹ ಪಡಬಾರದು. ಭಾರತೀಪತಿಯಾದ ವಾಯುದೇವನಿಂದಲೇ 'ಸ ಏನಾನ್ ಬ್ರಹ್ಮ ಗಮಯತಿ' ಎಂಬ ಶ್ರುತಿಯಿಂದ ಭಗವತ್ಪ್ರಾಪ್ತಿಯು ಹೇಳಲ್ಪಟ್ಟಿದೆ. ಬೃಹತ್ತಂತ್ರದಲ್ಲಿದೆ— ವಿದ್ಯುತ್‌ಪತಿಯಾದ ಅಂದರೆ ಭಾರತೀಪತಿಯಾದ ವಾಯುದೇವನೇ ಜ್ಞಾನಿಯನ್ನು ಪರಮಾತ್ಮನ ಬಳಿಗೆ ಒಯ್ಯುತ್ತಾನೆ, ಬೇರೆಯವರಲ್ಲ. ಪ್ರಾಣನಾಯಕನಾದ ಅವನಿಗಲ್ಲದೆ ಇನ್ನಾರಿಗೆ ತಾನೇ ಆ ಶಕ್ತಿ ಇದ್ದೀತು?

**ವಿವರಣೆ**—ಜ್ಞಾನಿಯು ಹೋಗುವ ಅರ್ಚಿರಾದಿಮಾರ್ಗದಲ್ಲಿ ಪ್ರಾಪ್ಯರಾದ ದೇವತೆಗಳಲ್ಲಿ ತಾರತಮ್ಯಕ್ರಮವು ವಿವಕ್ಷಿತವಲ್ಲ. ಸೋಮನ ಪ್ರಾಪ್ತಿಯಾದ ಮೇಲೆ ಅವನಿಗಿಂತ ಅವರನಾದ ಅಗ್ನಿಯ ಪ್ರಾಪ್ತಿಯಾಗುತ್ತದೆ. ಆದ್ದರಿಂದ ವಾಯುದೇವ ಜೀವೋತ್ತಮನಾದರೂ ಅವನೇ ಅಂತಿಮಪ್ರಾಪ್ಯನಾಗಬೇಕಿಲ್ಲ. ಅವನಿಗಿಂತ ಅವರನಾದ ದೇವತೆಯೂ ಅವನ ನಂತರ ಪ್ರಾಪ್ಯನಾಗಿರಬಹುದು ಎಂಬ ಸಂದೇಹವನ್ನು ಈ ಸೂತ್ರದಲ್ಲಿ ಪರಿಹರಿಸಲಾಗಿದೆ. ''ನಹಿ ರಾಜಾನಂ ಯಃ ಕಶ್ಚಿತ್ ಪ್ರಾಪಯತಿ' ಎಂದು ನ್ಯಾಯವಿವರಣದಲ್ಲಿದೆ. ರಾಜನ ಬಳಿಗೆ ರಾಜನಿಗೆ ಅತ್ಯಂತ ಆಪ್ತರೇ ಕರೆದುಕೊಂಡು ಹೋಗಬೇಕು, ಎಂದರ್ಥ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ವೈದ್ಯುತೇನೈವ ತತಸ್ತಚ್ಛ್ರುತೇಃ ಓಂ ॥** (ಅತ್ರ ಈಶಪ್ರಾಪ್ತಿಮಾರ್ಗೇ ಮುಖ್ಯವಾಯೋಃ ಅಂತಿಮತ್ವಂ ಸಾಧ್ಯತೇ। ತತ ಇತ್ಯನಂತರಮ್ 'ಅನ್ಯಃ ಪ್ರಾಪ್ಯೋಽಸ್ತೀತಿ ನ ಶಂಕ್ಯಮ್' ಇತಿ ಶೇಷಃ। ವಿದ್ಯುತೋಽಯಂ=ವೈದ್ಯುತಃ, ತೇನ

ವಿದ್ಯುತ್‌ಪತಿನಾ ವಾಯುನೈವ ಬ್ರಹ್ಮಗಮನಶ್ರವಣಾತ್, 'ಸ ಏನಾನ್ ಬ್ರಹ್ಮ ಗಮಯತಿ' ಇತಿ ಶ್ರವಣಾತ್ ಇತ್ಯರ್ಥಃ। ಯದ್ವಾ, ವೈದ್ಯುತೇನೈವ ಬ್ರಹ್ಮಪ್ರಾಪ್ತಿಃ ಯತಃ ತಸ್ಮಾದ್ಧೇತೋಃ ಸ ಏವ ಅಂತಿಮಪ್ರಾಪ್ಯಃ, ಇತಿ ಶೇಷಃ। ತಚ್ಛ್ರುತೇಃ= ವೈದ್ಯುತೇನೈವ ಬ್ರಹ್ಮಗಮನಶ್ರವಣಾದಿತ್ಯರ್ಥಃ। ಅನ್ಯಸ್ಯಾಂತಿಮಪ್ರಾಪ್ಯತ್ವೇ ತಸ್ಯ ಬ್ರಹ್ಮಪ್ರಾಪಕತ್ವಂ ಸ್ಯಾತ್ । ತಚ್ಚ ನಾಸ್ತೀತಿ ಭಾವಃ ।)

ಈ ಅಧಿಕರಣದಲ್ಲಿ ಜ್ಞಾನಿಮಾರ್ಗದ ಅಂತಿಮಪ್ರಾಪ್ಯವಾಯುದೇವ ಎಂದು ಸಮರ್ಥಿಸಲಾಗಿದೆ. ವೈದ್ಯುತೇನೈವ=ವಿದ್ಯುತ್(ಭಾರತೀ) ಪತಿಯಾದ ವಾಯುದೇವ ನಿಂದಲೇ ತತಃ=ಬ್ರಹ್ಮಪ್ರಾಪ್ತಿಯಾದ ಕಾರಣದಿಂದಾಗಿ ಅವನೇ ಅಂತಿಮಪ್ರಾಪ್ಯ. ತಚ್ಛ್ರುತೇಃ=ಅವನಿಂದಲೇ ಬ್ರಹ್ಮಪ್ರಾಪ್ತಿಯು ಶ್ರುತ್ಯುಕ್ತವಾದುದರಿಂದ.

## ಶಾಂಕರಭಾಷ್ಯದಲ್ಲಿ ಆತಿವಾಹಿಕಾಧಿಕರಣ

**॥ ಆತಿವಾಹಿಕಸ್ತಲ್ಲಿಂಗಾತ್ ॥** ಇದುವರೆಗೆ ಹೇಳಿರುವುದು ಜ್ಞಾನಿಹೋಗುವ ಮಾರ್ಗದ ಚಿಹ್ನೆಗಳೋ, ಅಥವಾ ಅವನ ಭೋಗಸ್ಥಾನಗಳೋ ಅಥವಾ ಅವನನ್ನು ಬ್ರಹ್ಮನ ಬಳಿಗೆ ಒಯ್ಯುವ ದೇವತೆಗಳೋ? ಹೀಗೆ ಸಂದೇಹ ಬಂದಾಗ, ಸೂತ್ರದಲ್ಲಿ 'ಆತಿವಾಹಿಕಃ' ಎಂದು ಸಂದೇಹವನ್ನು ಪರಿಹರಿಸಲಾಗಿದೆ. ಅದಕ್ಕೆ ಸೂತ್ರಕಾರರು ಕೊಟ್ಟಿರುವ ಕಾರಣ— 'ತಲ್ಲಿಂಗಾತ್' ಎಂದು. ''ಚಂದ್ರಮಸೋ ವಿದ್ಯುತಂ ತತ್‌ಪುರುಷೋ ಅಮಾನವಃ ಸ ಏನಾನ್ ಬ್ರಹ್ಮ ಗಮಯತಿ।'' (ಛಾಂ.4.15.5) ಎಂದು ಅಂತಿಮ'ವಿದ್ಯುತ್ತನ್ನು, ಅಮಾನವಪುರುಷನೆಂದು ಹೇಳಿರುವುದರಿಂದಾಗಿ ಅದಕ್ಕಿಂತ ಹಿಂದಿರುವವರೆಲ್ಲರೂ ಅಮಾನವರಾದ ಆತಿವಾಹಿಕ ಪುರುಷರೇ ಆಗಿದ್ದಾರೆ.

**॥ ಉಭಯವ್ಯಾಮೋಹಾತ್ ತತ್ಸಿದ್ಧೇಃ ॥** ಮೃತನಾದವನಿಗೆ ಸ್ಥೂಲದೇಹವಿಲ್ಲ, ಸೂಕ್ಷ್ಮದೇಹ ಮಾತ್ರ ಇರುತ್ತದೆ. ಆದ್ದರಿಂದ ಅವನ ಕರಣೇಂದ್ರಿಯಗಳು ಸ್ತಬ್ಧವಾಗಿರುತ್ತವೆ. ಅವನಿಗೆ ಒಬ್ಬ ನೇತೃ ಇಲ್ಲದಿದ್ದರೆ ಗಮನವೇ ಸಾಧ್ಯವಿಲ್ಲ. ಅರ್ಚಿರಾದಿಗಳು ಮಾರ್ಗಚಿಹ್ನೆಗಳೋ, ಲೋಕಗಳೋ ಆಗಿದ್ದಲ್ಲಿ ಅವೆರಡಕ್ಕೂ ಜ್ಞಾನವಿಲ್ಲವಾದ ಕಾರಣ ಪರಾಧೀನನಾದ ಜ್ಞಾನಿಯನ್ನು ಅವುಗಳು ನಡೆಸಲಾರವು. ಹೀಗೆ ಉಭಯವ್ಯಾಮೋಹಾತ್ ಅರ್ಚಿರಾದಿಲೋಕಾಭಿಮಾನಿದೇವತೆಗಳೇ ಅರ್ಚಿರಾದಿ ಶಬ್ದಗಳಿಂದ ಹೇಳಲ್ಪಡುತ್ತಾರೆ. ಆದ್ದರಿಂದ ಜ್ಞಾನಿಯು ರಾತ್ರಿ ಮರಣ ಹೊಂದಿದರೂ 'ಅಹಃ'=ಹಗಲಿನ ಅಭಿಮಾನಿದೇವತೆಯ ಬಳಿ ಹೋಗುತ್ತಾನೆ. ಅಹಃ ಶಬ್ದಕ್ಕೆ 'ಬೆಳಗಿನ ಸಮಯ' ಎಂದು ಅರ್ಥಮಾಡುವುದು ಆಗ ಅನುಚಿತವಾಗುತ್ತದೆ.

॥ ವೈದ್ಯುತೇನೈವ ತತಸ್ತಚ್ಛ್ರುತೇಃ ॥ ತತಃ=ವಿದ್ಯುಲ್ಲೋಕದಿಂದ ವೈದ್ಯುತೇನೈವ=ವಿದ್ಯುಲ್ಲೋಕಕ್ಕೆ ಬಂದ ಅಮಾನವಪುರುಷನಿಂದಲೇ ವರುಣಾದಿ ಲೋಕಗಳ ಮೂಲಕ ಬ್ರಹ್ಮಪ್ರಾಪ್ತಿ. ವರುಣಾದಿಗಳು ಅವನನ್ನು ಕರೆದುಕೊಂಡು ಹೋಗುವುದಲ್ಲ. ಅವರು ಜ್ಞಾನಿಗೆ ಪ್ರತಿಬಂಧಕವನ್ನು ಮಾಡದೇ ಸಹಕಾರಿಗಳಾಗಿರುತ್ತಾರೆ. ''ತಾನ್ ವೈದ್ಯುತಾತ್ ಪುರುಷೋಽಮಾನವಃ, ಸ ಏತ್ಯ, ಬ್ರಹ್ಮಲೋಕಂ ಗಮಯತಿ'' ಎಂದು ಶ್ರುತಿ ಹೇಳುತ್ತದೆ.

ವಿಮರ್ಶೆ— ಮೃತರಾದ ಜ್ಞಾನಿಗಳು ಗಮನಕ್ಕೆ ಅನರ್ಹರು. ಅವರನ್ನು ಅರ್ಚಿರಾದಿಗಳು ಕೈಹಿಡಿದು ಮತ್ತ–ಮೂರ್ಛಿತರನ್ನು ನಡೆಸುವಂತೆ ನಡೆಸುತ್ತಾರೆ, ಎಂದು ಹೇಳುವುದು ಉಚಿತವಲ್ಲ. ಹೇಗೆ ಸ್ವರ್ಗದಲ್ಲಿರುವವರಿಗೆ ಸ್ಥೂಲದೇಹವು ಇಲ್ಲದಿದ್ದರೂ ತೇಜೋಮಯವಾದ ದೇಹವು ಇರುವುದರಿಂದ ಅವರು ವಿಹಾರಾದಿಗಳನ್ನು ಮಾಡುತ್ತಾರೋ ಆದರಂತೆ ಜ್ಞಾನಿಗಳೂ ತೇಜೋಮಯ ಶರೀರದಿಂದ ಗಮನಸಮರ್ಥರಾಗಿರುತ್ತಾರೆ. ಇಲ್ಲದಿದ್ದರೆ ಕರ್ಮಕ್ಕಿಂತಲೂ ಜ್ಞಾನದ ಫಲ ನಿಕೃಷ್ಟವಾದೀತು. ಆದ್ದರಿಂದ ಅಗ್ನ್ಯಾದಿಗಳು 'ಆತಿವಾಹಿಕರಲ್ಲ'. ತಾವು ಮುಂದಕ್ಕೆ ಹೋಗುತ್ತಾ ಜ್ಞಾನಿಗಳಿಗೆ ಮಾರ್ಗದರ್ಶಕರಾಗಿರುತ್ತಾರೆ.

ಇಲ್ಲಿಗೆ ವೈದ್ಯುತಾಧಿಕರಣವು ಮುಗಿಯಿತು.

## ೬. ಕಾರ್ಯಾಧಿಕರಣಮ್

### ॥ ಓಂ ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇಃ ಓಂ ॥ ೭ ॥

**'ಸ ಏನಾನ್ ಬ್ರಹ್ಮ ಗಮಯತಿ' (ಛಾಂ.ಉ. 5.10.2) ಇತಿ ಕಾರ್ಯಂ ಬ್ರಹ್ಮ ಗಮಯತೀತಿ ಬಾದರಿರ್ಮನ್ಯತೇ ।**

**'ಋತೇ ದೇವಾನ್ ಪರಂ ಬ್ರಹ್ಮ**
**ಕಃ ಪುಮಾನ್ ಪ್ರಾಪ್ನುಯಾತ್ ಕ್ವಚಿತ್ ।**
**ಯದ್ಯಪಿ ಬ್ರಹ್ಮದೃಷ್ಟಿಃ ಸ್ಯಾದ್**
**ಬ್ರಹ್ಮಲೋಕಮವಾಪ್ನುಯಾತ್ ॥'**

**ಇತ್ಯಧ್ಯಾತ್ಮವಚನಾತ್ ತಸ್ಯೈವ ಗತ್ಯುಪಪತ್ತೇಃ ॥**

'ಸ ಏನಾನ್ ಬ್ರಹ್ಮ ಗಮಯತಿ' ಎಂದರೆ ಕಾರ್ಯ ಬ್ರಹ್ಮನ ಬಳಿಗೆ ಅಂದರೆ ಚತುರ್ಮುಖಬ್ರಹ್ಮನ ಬಳಿಗೆ ವಾಯುದೇವ ಜ್ಞಾನಿಗಳನ್ನು ಮುಟ್ಟಿಸುತ್ತಾನೆ, ಎಂದರ್ಥ. ಹೀಗೆ ವ್ಯಾಸಶಿಷ್ಯರಾದ ಬಾದರಿಗಳು ಹೇಳುತ್ತಾರೆ. ''ಮನುಷ್ಯರಿಗೆ ಬ್ರಹ್ಮಜ್ಞಾನವೇನೋ ಬರುತ್ತದೆ. ಆದರೂ ದೇವತೆಗಳ ಹೊರತಾಗಿ (ಲಿಂಗದೇಹವಿರುವಾಗ) ಯಾರು ತಾನೇ ಬ್ರಹ್ಮನ ಬಳಿಗೆ ಹೋಗಲು ಸಮರ್ಥರಾದಾರು?'' ಹೀಗೆ ಅಧ್ಯಾತ್ಮಗ್ರಂಥದಲ್ಲಿ ಹೇಳಿರುವುದರಿಂದ ಜ್ಞಾನಿಗಳು ಚತುರ್ಮುಖನ ಬಳಿಗೆ ಹೋಗುವುದೇ ಉಚಿತವಾದುದು.

**ವಿವರಣೆ**—ಇದುವರೆಗೆ ಮಾರ್ಗವನ್ನು ಹೇಳಿ ಇಲ್ಲಿ ಗಮ್ಯವನ್ನು ವಿಚಾರಮಾಡಲಾಗಿದೆ. ಬ್ರಹ್ಮಶಬ್ದಕ್ಕೆ ವಿಷ್ಣುವೇ ಮುಖ್ಯಾರ್ಥನಾದರೂ ''ಸ ಏನಾನ್ ಬ್ರಹ್ಮ ಗಮಯತಿ' ಎಂಬಲ್ಲಿ ಬ್ರಹ್ಮಶಬ್ದಕ್ಕೆ ಚತುರ್ಮುಖ ಎಂಬ ಅಮುಖ್ಯಾರ್ಥವನ್ನು ಮಾಡಬೇಕು.

ತಥಾಪಿ ಪ್ರಕೃತೇರ್ಬಂಧಃ ಬ್ರಹ್ಮಣಾ ಸಹ ಭಿದ್ಯತೇ ||

ಎಂಬ ಪ್ರಮಾಣದಲ್ಲಿ ಚತುರ್ಮುಖಬ್ರಹ್ಮದೇವರ ಮುಕ್ತಿಪರ್ಯಂತವಾಗಿ ಜ್ಞಾನಿಗಳಿಗೆ ಬಂಧನವು ಇದೆ, ಎನ್ನಲಾಗಿದೆ. ಬಂಧವು ಇರುವವರೆಗೆ ಪರಬ್ರಹ್ಮಪ್ರಾಪ್ತಿ ಇಲ್ಲ. ಆದಕಾರಣ ಪ್ರಕೃತ ಬ್ರಹ್ಮಶಬ್ದಕ್ಕೆ ಅಮುಖ್ಯಾರ್ಥವನ್ನು ಮಾಡಬೇಕು.

## || ಓಂ ವಿಶೇಷಿತತ್ವಾಚ್ಚ ಓಂ || ೮ ||

**'ಯದಿ ಹ ವಾವ ಪರಮಭಿಪಶ್ಯತಿ, ಪ್ರಾಪ್ನೋತಿ ಬ್ರಹ್ಮಾಣಂ ಚತುರ್ಮುಖಂ ಪ್ರಾಪ್ನೋತಿ ಬ್ರಹ್ಮಾಣಂ ಚತುರ್ಮುಖಮ್' ಇತಿ ಕೌಷಾರವಶ್ರುತೌ ||**

''ಪರಬ್ರಹ್ಮನನ್ನು ದರ್ಶನಮಾಡಿದರೆ ಜ್ಞಾನಿಯು ಚತುರ್ಮುಖನನ್ನು ಹೊಂದುತ್ತಾನೆ. ಚತುರ್ಮುಖಬ್ರಹ್ಮನನ್ನು ಹೊಂದುತ್ತಾನೆ'' ಎಂದು ಕೌಷಾರವ ಶ್ರುತಿಯಲ್ಲಿ ಪ್ರಾಪ್ಯನಿಗೆ 'ಚತುರ್ಮುಖ' ಎಂದು ವಿಶೇಷವನ್ನು ಹೇಳಿರುವುದರಿಂದ ಬಾದರಿ ಹೇಳಿರುವಂತೆ ಜ್ಞಾನಿಯು ಚತುರ್ಮುಖನ ಬಳಿಗೇ ವಾಯುದೇವರಿಂದ ಒಯ್ಯಲ್ಪಡುತ್ತಾನೆ.

## || ಓಂ ಸಾಮೀಪ್ಯಾತ್ತು ತದ್‌ವ್ಯಪದೇಶಃ ಓಂ || ೯ ||

**'ಬ್ರಹ್ಮವಿದಾಪ್ನೋತಿ ಪರಮ್' (ತೈ.ಉ. 2.1) ಇತಿ ವ್ಯಪದೇಶಸ್ತು ಸಮೀಪ ಏವ ಪರಮಪಿ ಪ್ರಾಪ್ನೋತೀತ್ಯೇತದರ್ಥಮೇ(ಏ)ವ ||**

''ಬ್ರಹ್ಮವಿದಾಪ್ನೋತಿ ಪರಂ=ಬ್ರಹ್ಮಜ್ಞಾನಿಯು ಪರಬ್ರಹ್ಮನ ಬಳಿಗೆ ಹೋಗುತ್ತಾನೆ'' ಎಂದಿರುವುದು ಚತುರ್ಮುಖನ ಬಳಿ ಹೋದ ಅನತಿಕಾಲದಲ್ಲೇ ಪರಬ್ರಹ್ಮನ ಬಳಿಗೆ ಹೋಗುತ್ತಾನೆ, ಎಂಬ ಅಭಿಪ್ರಾಯದಿಂದ.

**ವಿವರಣೆ**—ಜ್ಞಾನಿಯು ಚತುರ್ಮುಖನ ಬಳಿಗೆ ಹೋಗುವುದಾದಲ್ಲಿ ಅವನು ಪರಬ್ರಹ್ಮನ ಬಳಿ ಹೋಗುತ್ತಾನೆ, ಎನ್ನುವ ತೈತ್ತಿರೀಯ ಶ್ರುತಿಗೆ ಏನರ್ಥ? ಎಂದು ಪ್ರಶ್ನೆ ಬಂದರೆ ಅದರ ಪರಿಹಾರಕ್ಕಾಗಿ ಈ ಸೂತ್ರ. ಚತುರ್ಮುಖಬ್ರಹ್ಮನ ಬಳಿಗೆ ಹೋದ ಜ್ಞಾನಿಯು ಶೀಘ್ರದಲ್ಲೇ ಲಿಂಗದೇಹಭಂಗವನ್ನು ಹೊಂದಿ ಪರಮಾತ್ಮನ ಬಳಿಗೆ ಹೋಗುತ್ತಾನೆ, ಎಂದು ಅಭಿಪ್ರಾಯ. ಆ ಶ್ರುತಿಯು ಬ್ರಹ್ಮಪ್ರಾಪ್ತಿಯನ್ನು ಹೇಳುತ್ತದೆ, ಚತುರ್ಮುಖಪ್ರಾಪ್ತಿಯನ್ನು ನಿಷೇಧಿಸುತ್ತಿಲ್ಲ.

**ಕದಾ ?-**

## ॥ ಓಂ ಕಾರ್ಯಾತ್ಯಯೇ ತದಧ್ಯಕ್ಷೇಣ ಸಹಾತಃ ಪರಮಭಿಧಾನಾತ್ ಓಂ ॥ ೧೦ ॥

**'ತೇ ಹ ಬ್ರಹ್ಮಾಣಮಭಿಸಂಪದ್ಯ ಯದ್ವೈತದ್ ವಿಲೀಯತೇಽಥ ಸಹ ಬ್ರಹ್ಮಣಾ ಪರಮಭಿಗಚ್ಛಂತಿ' ಇತಿ ಸೌಪರ್ಣಶ್ರುತೇಃ ಮಹಾಪ್ರಳಯೇ ತದಧ್ಯಕ್ಷೇಣ ಬ್ರಹ್ಮಣಾ ಸಹ ಗಚ್ಛ(ಚ್ಛಂ)ತಿ ॥**

ಯಾವಾಗ ಪರಬ್ರಹ್ಮನ ಬಳಿಗೆ ಜ್ಞಾನಿಯು ಹೋಗುತ್ತಾನೆ? ''ಕಾರ್ಯಾತ್ಯಯೇ...'' ''ಜ್ಞಾನಿಗಳು ಚತುರ್ಮುಖನ ಬಳಿ ಹೋಗಿ, ಯಾವಾಗ ಈ ಪ್ರಪಂಚವು ಲಯವಾಗುವುದೋ ಆಗ ಬ್ರಹ್ಮದೇವರ ಜೊತೆಯಲ್ಲಿ ಪರಬ್ರಹ್ಮನನ್ನು ಸೇರುತ್ತಾರೆ''. ಹೀಗೆ ಸೌಪರ್ಣಶ್ರುತಿ ಇರುವುದರಿಂದ ತದಧ್ಯಕ್ಷೇಣ ಸಹ=ಕಾರ್ಯಪ್ರಪಂಚಕ್ಕೆ ಒಡೆಯನಾದ ಚತುರ್ಮುಖನೊಂದಿಗೆ ಪರಬ್ರಹ್ಮನಲ್ಲಿಗೆ ಹೋಗುತ್ತಾರೆ.

## ॥ ಓಂ ಸ್ಮೃತೇಶ್ಚ ಓಂ ॥ ೧೧ ॥

**'ಬ್ರಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿಸಂಚರೇ ।**
**ಪರಸ್ಯಾಂತೇ ಪರಾತ್ಮಾನಃ ಪ್ರವಿಶಂತಿ ಪರಂ ಪದಮ್ ॥' ಇತಿ ॥**

ಸ್ಮೃತಿಯೂ ಇದೆ— ಪ್ರತಿಸಂಚರೇ ಸಂಪ್ರಾಪ್ತೇ=ಜಗತ್ತಿನ ಪ್ರಲಯವು ಬಂದಾಗ

ಪರಸ್ಯ=ಬ್ರಹ್ಮನ ಆಯುಷ್ಯವಾದ 'ಪರ' ಎಂಬ ಕಾಲದ ಅಂತೇ=ಕೊನೆಯಲ್ಲಿ ಪರಾತ್ಮಾನಃ=ಪರಮಾತ್ಮಮನಸ್ಕರಾದ ತೇ ಸರ್ವೇ=ಆ ಜ್ಞಾನಿಗಳೆಲ್ಲರೂ ಬ್ರಹ್ಮಣಾ ಸಹ=ಚತುರ್ಮುಖ ಬ್ರಹ್ಮನೊಂದಿಗೆ ಪರಂ ಪದಂ=ಪರಬ್ರಹ್ಮನನ್ನು ಪ್ರವಿಶಂತಿ=ಪ್ರವೇಶ ಮಾಡುತ್ತಾರೆ.

## ॥ ಓಂ ಪರಂ ಜೈಮಿನಿರ್ಮುಖ್ಯತ್ವಾತ್ ಓಂ ॥ ೧೨ ॥

**ಬ್ರಹ್ಮಶಬ್ದಸ್ಯ ತತ್ರೈವ ಮುಖ್ಯತ್ವಾತ್ ಪರಮೇವ ಬ್ರಹ್ಮ ಗಮಯತೀತಿ ಜೈಮಿನಿರ್ಮನ್ಯತೇ ॥**

ಬ್ರಹ್ಮಶಬ್ದಕ್ಕೆ ಪರಬ್ರಹ್ಮನೇ ಮುಖ್ಯಾರ್ಥವಾದ ಕಾರಣ ವಾಯುದೇವರು ಜ್ಞಾನಿಗಳನ್ನು 'ಬ್ರಹ್ಮ ಗಮಯತಿ' ಎಂದರೆ ಪರಬ್ರಹ್ಮನ ಬಳಿಗೆ ಒಯ್ಯುತ್ತಾರೆ, ಎಂದೇ ಅರ್ಥ. ಹೀಗೆಂದು ಜೈಮಿನಿಗಳು ಹೇಳುತ್ತಾರೆ.

## ॥ ಓಂ ದರ್ಶನಾಚ್ಚ ಓಂ ॥ ೧೩ ॥

**ದೃಷ್ಟತ್ವಾಚ್ಚ ಪರಬ್ರಹ್ಮಣಃ ॥**

ಜ್ಞಾನಿಗಳು ಪರಬ್ರಹ್ಮನನ್ನೇ ಶ್ರವಣ–ಧ್ಯಾನಾದಿಗಳ ಮೂಲಕ ಕಂಡಿರುವುದ ರಿಂದಾಗಿಯೂ ಪರಬ್ರಹ್ಮನ ಬಳಿಗೆ ಹೋಗುವುದೇ ಉಚಿತವಾಗಿದೆ.

## ॥ ಓಂ ನಚ ಕಾರ್ಯೇ ಪ್ರತಿಪತ್ತ್ಯಭಿಸಂಧಿಃ ಓಂ ॥ ೧೪ ॥

**ನಹಿ ಕಾರ್ಯೇ ಪ್ರತಿಪತ್ತಿಃ ಪ್ರಾಪ್ತವಾನಿತ್ಯಭಿಸಂಧಿಶ್ಚ ।**

**'ಯದುಪಾಸ್ತೇ ಪುಮಾನ್ ಜೀವನ್**
**ಯತ್ ಪ್ರಾಪ್ತುಮಭಿವಾಂಛತಿ ।**
**ಯಚ್ಚ ಪಶ್ಯತಿ ತೃಪ್ತಃ ಸಂಸ್ತತ್**
**ಪ್ರಾಪ್ನೋತಿ ಮೃತೇರನು ॥' ಇತಿ ಹಿ ಪಾದ್ಮೇ ।**

ಜ್ಞಾನಿಗಳು ಚತುರ್ಮುಖಬ್ರಹ್ಮನನ್ನು ಕುರಿತು ಉಪಾಸನೆಯನ್ನೂ ಮಾಡಿಲ್ಲ. ಅಥವಾ, ಅವನನ್ನು ಹೊಂದಬೇಕು, ಎನ್ನುವ ಇಚ್ಛೆಯೂ ಅವರಿಗಿಲ್ಲ. ಪಾದ್ಮಪುರಾಣದಲ್ಲಿದೆ— ''ಮನುಷ್ಯನು ಜೀವನದಲ್ಲಿ ಯಾರನ್ನು ಉಪಾಸನೆ

ಮಾಡುವನೋ, ಯಾರನ್ನು ಹೊಂದಲು ಬಯಸುತ್ತಾನೋ, ಯಾರನ್ನು ತೃಪ್ತಿಯಿಂದ ನೋಡುತ್ತಾನೋ ಸತ್ತಮೇಲೆ ಅವನನ್ನೇ ಹೊಂದುತ್ತಾನೆ.''

**।। ಓಂ ಅಪ್ರತೀಕಾಲಂಬನಾನ್ನಯತೀತಿ ಬಾದರಾಯಣ ಉಭಯಥಾ ಚ ದೋಷಾತ್ ತತ್‌ಕ್ರತುಶ್ಚ ಓಂ ।। ೧೫ ।।**

'ಪ್ರತೀಕಂ ದೇಹ ಉದ್ದಿಷ್ಟೋ ಯೇಷಾಂ ತತ್ರೈವ ದರ್ಶನಮ್ ।
ನತು ವ್ಯಾಪ್ತತಯಾ ಕ್ವಾಪಿ ಪ್ರತೀಕಾಲಂಬನಾಸ್ತು ತೇ ।।
ಅಪ್ರತೀಕಾ ದೇವತಾಸ್ತು ಋಷೀಣಾಂ ಶತಮೇವ ಚ ।
ರಾಜ್ಞಾಂ ಚ ಶತಮುದ್ದಿಷ್ಟಂ ಗಂಧರ್ವಾದಿಶತಂ ತಥಾ ।।
ಏತೇಽಧಿಕಾರಿಣೋ ವ್ಯಾಪ್ತಿದರ್ಶನೇಽನ್ಯೇ ನತು ಕ್ವಚಿತ್ ।
ಅಯೋಗ್ಯದರ್ಶನೇ ಯತ್ನಾದ್ ಭ್ರಂಶಃ ಪೂರ್ವಸ್ಯ ಚಾಪಿ ತು ।।
ಅಪ್ರತೀಕಾಶ್ರಯಾ ಯೇ ಹಿ ತೇ ಯಾಂತಿ ಪರಮೇವ ತು ।
ಸ್ವದೇಹೇ ಬ್ರಹ್ಮದೃಷ್ಟ್ಯೈವ ಗಚ್ಛೇದ್ ಬ್ರಹ್ಮಸಲೋಕತಾಮ್ ।
ಬ್ರಹ್ಮಣಾ ಸಹ ಸಂಪ್ರಾಪ್ತೇ ಸಂಹಾರೇ ಪರಮಂ ಪದಮ್' ।।
ಇತಿ ಗಾರುಡವಚನಾತ್ ।

**ಉಭಯತ್ರೋಕ್ತದೋಷಾಚ್ಚಾಪ್ರತೀಕಾಲಂಬನಾನ್ ಪರಂ ನಯತಿ । 'ಸ ಯಥಾಕಾಮೋ ಭವತಿ ತತ್‌ಕ್ರತುರ್ಭವತಿ, ಯತ್‌ಕ್ರತುರ್ಭವತಿ ತತ್ ಕರ್ಮ ಕುರುತೇ, ಯತ್ ಕರ್ಮ ಕುರುತೇ ತದಭಿಸಂಪದ್ಯತೇ' (ಬೃ.ಉ. 6.4.5) ಇತಿ ಶ್ರುತೇಶ್ಚ । ಅತ್ರ ಕರ್ಮೋಪಾಸನಮೇವ । ಅನ್ಯಾನ್ ಕಾರ್ಯಂ ನಯತೀತಿ ಭಗವನ್ಮತಮ್ ।।**

''ಪ್ರತೀಕವೆಂದರೆ ಸ್ವದೇಹ. ಯಾರಿಗೆ ತಮ್ಮ ದೇಹದಲ್ಲೇ ಬ್ರಹ್ಮದರ್ಶನವಾಗುವುದೋ ವ್ಯಾಪ್ತಭಗವದ್ರೂಪದ ದರ್ಶನವು ಆಗುವುದಿಲ್ಲವೋ ಅಂತಹವರು ಪ್ರತೀಕಾಲಂಬನರು. ಎಲ್ಲಾ ದೇವತೆಗಳು, ನೂರುಮಂದಿ ಋಷಿಗಳು, ನೂರು ಚಕ್ರವರ್ತಿಗಳು, ನೂರುಮಂದಿ ಗಂಧರ್ವರು, ಇವರು ಅಪ್ರತೀಕಾಲಂಬನರು.

ಈ ಅಧಿಕಾರಿಗಳು ವ್ಯಾಪ್ತದರ್ಶಿಗಳು. ಇತರರು ಎಂದಿಗೂ ವ್ಯಾಪ್ತದರ್ಶಿಗಳಲ್ಲ. ತಮಗೆ ಅಯೋಗ್ಯವಾದ ರೂಪದ ದರ್ಶನಕ್ಕಾಗಿ ಪ್ರಯತ್ನಿಸಿದಲ್ಲಿ ಯೋಗ್ಯದರ್ಶನದ ಫಲವೂ ನಾಶವಾಗುವುದು. ಅಪ್ರತೀಕಾಲಂಬನರು ಯಾರೋ ಅವರು ಸಾಕ್ಷಾತ್ ಪರಬ್ರಹ್ಮನನ್ನೇ ಹೊಂದುತ್ತಾರೆ. ತಮ್ಮ ದೇಹದಲ್ಲೇ ಬ್ರಹ್ಮದರ್ಶನದಿಂದ ಜ್ಞಾನಿಗಳು ಚತುರ್ಮುಖ ಬ್ರಹ್ಮಲೋಕವನ್ನಷ್ಟೇ ಪಡೆಯುತ್ತಾರೆ. ಸಂಹಾರೇ ಸಂಪ್ರಾಪ್ತೇ=ಪ್ರಲಯವಾಗುತ್ತಿರಲು ಚತುರ್ಮುಖನೊಂದಿಗೆ ಪರಮಾತ್ಮನಲ್ಲಿ ಸೇರುತ್ತಾರೆ.'' ಹೀಗೆ ಗಾರುಡವಚನ ವಿರುವುದರಿಂದ, ಎರಡೂ ಪಕ್ಷಗಳಲ್ಲೂ ದೋಷವಿರುವುದರಿಂದಲೂ ಅಪ್ರತೀಕಾಲಂಬನ ರಾದ ಜ್ಞಾನಿಗಳನ್ನು ವಾಯುದೇವರು ಪರಬ್ರಹ್ಮನ ಬಳಿಗೆ ಕರೆದೊಯ್ಯುತ್ತಾರೆ.

ಸಃ=ಭಗವಂತನು ಯಥಾಕಾಮಃ ಭವತಿ=ಯಾವ ಇಚ್ಛೆಯನ್ನು ಮಾಡುವನೋ ಜೀವನೂ ಅದನ್ನೇ ಇಚ್ಛಿಸುತ್ತಾನೆ. ಇಚ್ಛೆಗೆ ಅನುಗುಣವಾಗಿ ತತ್ಕ್ರತುಃ ಭವತಿ=ಅದೇ ರೀತಿಯ ನಿರ್ಧಾರವನ್ನೂ ಮಾಡುತ್ತಾನೆ. ಅದಕ್ಕನುಗುಣವಾಗಿ ತತ್‌ಕರ್ಮ ಕುರುತೇ=ಅದೇ ಕರ್ಮವನ್ನು ಮಾಡುತ್ತಾನೆ. ಯಾವ ರೀತಿಯ ಕರ್ಮ ಮಾಡುತ್ತಾನೋ ಅದಕ್ಕೆ ಅನುಗುಣವಾದ ಫಲವನ್ನು ಪಡೆಯುತ್ತಾನೆ'' ಎಂದು ಶ್ರುತಿಯೂ ಇದೆ. ಈ ಶ್ರುತಿಯಲ್ಲಿ ಕರ್ಮ ಎಂದರೆ ಉಪಾಸನೆ.

ಅನ್ಯಾನ್=ಪ್ರತೀಕಾಲಂಬನರನ್ನು ಚತುರ್ಮುಖನ ಬಳಿಗೆ ಒಯ್ಯುತ್ತಾರೆ, ಎಂದು ವ್ಯಾಸರ ಮತ.

**ವಿವರಣೆ**—ಜ್ಞಾನಿಗಳು ಚತುರ್ಮುಖನ ಬಳಿ ಹೋಗುತ್ತಾರೆ, ಎಂದು ಬಾದರಿಗಳಮತ. ಪರಬ್ರಹ್ಮನ ಬಳಿಗೆ, ಎಂದು ಜೈಮಿನಿಗಳ ಮತ. ಇವೆರಡಕ್ಕೂ ಸಮರ್ಥನೆಯನ್ನೂ ಅವರು ಹೇಳಿದ್ದಾರೆ. ಎಲ್ಲರೂ ಪರಮಾತ್ಮನ ಬಳಿಗೆ ಮೊದಲೇ ಹೋಗಲು ಸಾಧ್ಯವಿಲ್ಲ, ಅವರು ಇನ್ನೂ ಬದ್ಧರು ಎಂದು ಬಾದರಿಗಳು ಹೇಳಿರುವ ಯುಕ್ತಿ. ಸಾಧಕರಿಗೆ ಪರಮಾತ್ಮನ ಪ್ರಾಪ್ತಿಯೇ ಅಭಿಲಷಿತ, ಎಂದು ಜೈಮಿನಿಗಳ ಯುಕ್ತಿ. ಹೀಗೆ ಉಭಯಥಾ ಚ ದೋಷಾತ್=ಎರಡೂ ಪಕ್ಷಗಳಲ್ಲೂ ಅನುಪಪತ್ತಿಗಳು ಇರುವುದರಿಂದ ಬಾದರಾಯಣರು ಹೀಗೆ ವ್ಯವಸ್ಥೆ ಮಾಡುತ್ತಾರೆ—ಅಪ್ರತೀಕಾಲಂಬನರಿಗೆ ಪರಬ್ರಹ್ಮಪ್ರಾಪ್ತಿ, ಪ್ರತೀಕಾಲಂಬನರಿಗೆ ಚತುರ್ಮುಖಪ್ರಾಪ್ತಿ, ತದ್ವಾರಾ ಬ್ರಹ್ಮಪ್ರಾಪ್ತಿ, ಎಂದು.

ಪ್ರತೀಕಾಲಂಬನರಿಗೆ ದೇಹತ್ಯಾಗವಾದ ಕೂಡಲೇ ಬ್ರಹ್ಮಪ್ರಾಪ್ತಿ ಇಲ್ಲ, ಅವರು ಬ್ರಹ್ಮಲೋಕಕ್ಕೆ ಹೋಗಿ ಅಲ್ಲಿ ಬ್ರಹ್ಮದೇವರಿಂದ ಉಪದೇಶ ಪಡೆದು, ಉಪಾಸನಾ

ಪರಿಪಾಕದಿಂದ ಸಮೃದ್ಧಜ್ಞಾನಪ್ರಾಪ್ತಿಯಾಗಿ ಮಹಾಪ್ರಲಯಪರ್ಯಂತ ಇದ್ದು ಪ್ರಲಯಕಾಲದಲ್ಲಿ ಪರಬ್ರಹ್ಮನ ಉದರಪ್ರವೇಶ. ಆದರೆ, ದೇವತೆಗಳು ದೇಹತ್ಯಾಗವಾದ ಮೇಲೆ ಹೀಗೆ ಕಾಯಬೇಕಾಗಿಲ್ಲ. ಅವರಿಗೆ ಸ್ವಪದತ್ಯಾಗದವರೆಗೆ ಮಾತ್ರ ಪ್ರಾರಬ್ಧವಾದುದರಿಂದ ದೇಹತ್ಯಾಗಸಮನಂತರದಲ್ಲೇ ಪರಬ್ರಹ್ಮಪ್ರಾಪ್ತಿ. ಅದೂ ಪ್ರಲಯಾತ್ ಪೂರ್ವದಲ್ಲಿ.

ಯಾಂತಿ ದೇವಂ ಪರಂ ಕೇಚಿತ್, ಪೂರ್ವಂ ಕೇಚಿಲ್ಲಯೇ ವಿಭುಮ್ ।
ಯೋಗ್ಯತಾತಾರತಮ್ಯೇನ ವಿಶೇಷೋಽಯಮಪೀಷ್ಯತೇ ॥ (ಶ್ರುತಿ. 4.3.15)

## ॥ ಓಂ ವಿಶೇಷಂ ಚ ದರ್ಶಯತಿ ಓಂ ॥ ೧೬ ॥

**'ಅಂತಃಪ್ರಕಾಶಾ ಬಹಿಃಪ್ರಕಾಶಾಃ ಸರ್ವಪ್ರಕಾಶಾಃ, ದೇವಾ ವಾವ ಸರ್ವಪ್ರಕಾಶಾ ಋಷಯೋಽಂತಃಪ್ರಕಾಶಾ ಮಾನುಷಾ ಏವ ಬಹಿಃಪ್ರಕಾಶಾಃ' ಇತಿ ಚತುರ್ವೇದಶಿಖಾಯಾಮ್ ।**

''ಕೆಲವರಿಗೆ ಹೃದಯದಲ್ಲಿ ಭಗವದಪರೋಕ್ಷ, ಇನ್ನು ಕೆಲವರಿಗೆ ಹೊರಗಡೆ ಅಪರೋಕ್ಷ, ಮತ್ತೆ ಕೆಲವರಿಗೆ ಸರ್ವತ್ರಾಪರೋಕ್ಷವಾಗುತ್ತದೆ. ದೇವತೆಗಳು ಮಾತ್ರ ಸರ್ವಾಪರೋಕ್ಷಿಗಳು. ಋಷಿಗಳು ದೇಹದ ಒಳಗೆ ಅಪರೋಕ್ಷಜ್ಞಾನವನ್ನು ಪಡೆಯುತ್ತಾರೆ, ಮನುಷ್ಯರು ಮಾತ್ರವೇ ದೇಹದ ಹೊರಗೆ ಅಪರೋಕ್ಷಜ್ಞಾನವನ್ನು ಪಡೆಯುತ್ತಾರೆ.'' ಹೀಗೆ ಚತುರ್ವೇದಶಿಖೆಯಲ್ಲಿದೆ.

**ವಿವರಣೆ**—ಬ್ರಹ್ಮಪ್ರಾಪ್ತಿಯು ಜ್ಞಾನಿಗಳ ಇಚ್ಛೆಯಂತೆ ಆಗುವುದಿಲ್ಲ. ಅವರು ಮಾಡುವ ಉಪಾಸನೆಗೆ ತಕ್ಕಂತೆ ಆಗುತ್ತದೆ. ಉಪಾಸನೆಯಲ್ಲೂ ವಿಶೇಷವನ್ನು ಶ್ರುತಿ ತಿಳಿಸುತ್ತದೆ. ಮನುಷ್ಯರು ಏನಿದ್ದರೂ 'ಬಹಿಃ ಪ್ರಕಾಶರು'. ಇದನ್ನು ಶ್ರೀವಾದಿರಾಜರು ಹೀಗೆ ತಿಳಿಸಿದ್ದಾರೆ— ಬಹಿಃ=ಪ್ರತಿಮಾದೌ ಪ್ರಕಾಶಃ=ಅಪರೋಕ್ಷಜ್ಞಾನಂ ಯೇಷಾಂ ತೇ ಬಹಿಃಪ್ರಕಾಶಾಃ । ಅವರಿಗೆ ಅಂತರ್ ಧ್ಯಾನಕ್ಕಾಗಲೀ ವ್ಯಾಪ್ತರೂಪದ ಧ್ಯಾನಕ್ಕಾಗಲೀ ಸಾಮರ್ಥ್ಯವಿಲ್ಲ. ಅವರು ಪ್ರತಿಮೆಯಲ್ಲೇ ಧ್ಯಾನಿಸಿ ತಮ್ಮ ಬಿಂಬದರ್ಶನವನ್ನು ಪಡೆಯುತ್ತಾರೆ.

ಇಲ್ಲಿ ''ಜ್ಞಾನಿನಾಂ ಪ್ರಲಯೇ, ಪೂರ್ವಂ ಚ ಬ್ರಹ್ಮಪ್ರಾಪ್ತಿಸದ್ಭಾವಾತ್' ಎಂದಿದೆ. ಅದಕ್ಕೆ ಶ್ರೀರಾಘವೇಂದ್ರಸ್ವಾಮಿಗಳ ವಿವರಣೆ— ಪ್ರಲಯಾತ್ ಪೂರ್ವಂ–ಚತುರ್ಮುಖಂ ಅಪ್ರಾಪ್ಯ ಸಾಕ್ಷಾದೇವ ಇತ್ಯರ್ಥಃ । ''ಭೇಜೇ ಖಗೇಂದ್ರಧ್ವಜಪಾದ

ಮೂಲಮ್'' ಇತ್ಯಾದೇಃ। ಪ್ರಲಯಕ್ಕಿಂತ ಮೊದಲು ಚತುರ್ಮುಖಬ್ರಹ್ಮದೇವರ ಪ್ರಾಪ್ತಿ ಇಲ್ಲದೆಯೂ ಕೆಲವರು ಮುಕ್ತರಾಗುತ್ತಾರೆ. ಅದಕ್ಕೆ ಪರೀಕ್ಷಿದ್ರಾಜನು ನಿದರ್ಶನ.

**ಶ್ರೀನಿವಾಸತೀರ್ಥರ ವಿವರಣೆ—** ಪ್ರತೀಕಾಲಂಬನರಿಗೂ ಅಪ್ರತೀಕಾಲಂಬನರಿಗೂ ಎಲ್ಲರಿಗೂ ಪ್ರಲಯಕಾಲದಲ್ಲಿ ಚತುರ್ಮುಖನೊಂದಿಗೆ ಬ್ರಹ್ಮಪ್ರಾಪ್ತಿ. ಅಪ್ರತೀಕಾಲಂಬನರಿಗೆ ಪೂರ್ವಂ ಚ=ಮೊದಲು ವೈಕುಂಠಸ್ಥ ಬ್ರಹ್ಮಪ್ರಾಪ್ತಿ ಇದೆ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇಃ ಓಂ ॥** (ಏವಂ ಮಾರ್ಗಂ ನಿರೂಪ್ಯ ಗಮ್ಯಮ್ ಅತ್ರ ನಿರೂಪ್ಯತೇ । ಕಾರ್ಯಂ=ಉತ್ಪತ್ತಿಮತ್ । ತದ್ ಬ್ರಹ್ಮೇತ್ಯನ್ವೇತಿ । ''ಸ ಏನಾನ್ ಬ್ರಹ್ಮ'' ಇತಿ ಶ್ರುತೌ ಕಾರ್ಯಂ ಬ್ರಹ್ಮ ಚತುರ್ಮುಖಾಖ್ಯಮೇವ ವಾಯುರ್ನಯತಿ ಇತಿ ಬಾದರಿರ್ಮನ್ಯತೇ। ಬ್ರಹ್ಮಶಬ್ದಸ್ಯ ಈಶೇ ಮುಖ್ಯತ್ವಾತ್। ಕಥಮೇತತ್? ಇತ್ಯತ ಉಕ್ತಮ್–ಅಸ್ಯೇತಿ ॥ ''ತಥಾಪಿ ಪ್ರಕೃತೇರ್ಬಂಧೋ ಬ್ರಹ್ಮಣಾ ಸಹ ಭಿದ್ಯತೇ'' ಇತ್ಯುಕ್ತ್ಯಾ ಚತುರ್ಮುಖಮುಕ್ತಿಪರ್ಯಂತಂ ಬಂಧಸ್ಯ ಸಂತತತ್ವೇನ ತತೋ ಅರ್ವಾಕ್ ಅಸ್ಯೈವ ಗತ್ಯುಪಪತ್ತೇಃ, ಇತ್ಯರ್ಥಃ। ಬದ್ಧತ್ವೇನ ಪ್ರಾಪ್ತ್ಯಯೋಗರೂಪಯುಕ್ತಿಬಲಾತ್ ಬ್ರಹ್ಮಶ್ರುತೇಃ ಅಮುಖ್ಯಾರ್ಥತ್ವಮ್ ಇತಿ ಭಾವಃ ।)

ಈ ಅಧಿಕರಣದಲ್ಲಿ ಜ್ಞಾನಿಗಳ ಗಮ್ಯವನ್ನು ನಿರೂಪಿಸಲಾಗಿದೆ. ಕಾರ್ಯಂ ಬ್ರಹ್ಮ ಎಂದರೆ ಉತ್ಪತ್ತಿ ಇರುವ ಬ್ರಹ್ಮ ಅಂದರೆ ಚತುರ್ಮುಖಬ್ರಹ್ಮ. ''ಸ ಏನಾನ್ ಬ್ರಹ್ಮ ಗಮಯತಿ' ಎಂಬ ಶ್ರುತ್ಯುಕ್ತಬ್ರಹ್ಮ ಚತುರ್ಮುಖಬ್ರಹ್ಮ. ಅವನ ಬಳಿಗೆ ವಾಯುದೇವರು ಜ್ಞಾನಿಗಳನ್ನು ತಲುಪಿಸುತ್ತಾರೆ. ಬ್ರಹ್ಮಶಬ್ದಕ್ಕೆ ಮುಖ್ಯಾರ್ಥ ಪರಬ್ರಹ್ಮನಾದರೂ ಬಾಧಕವಿರುವ ಕಾರಣದಿಂದ ಇಲ್ಲಿ ಅಮುಖ್ಯಬ್ರಹ್ಮ ಎಂದು ಅರ್ಥ ಹೇಳಬೇಕು. ಆ ಬಾಧಕವಾದರೂ, ಗತ್ಯುಪಪತ್ತೇಃ— ಜ್ಞಾನಿಯು ಲಿಂಗದೇಹ ಭಂಗವಾಗುವವರೆಗೂ ಬದ್ಧನಾದುದರಿಂದ ಪರಬ್ರಹ್ಮಪ್ರಾಪ್ತಿಯಾಗದು. ಆದ್ದರಿಂದ ಚತುರ್ಮುಖನ ಬಳಿಗೇ ಜ್ಞಾನಿಯ ಗತಿಯು ಉಪಪನ್ನವಾಗುತ್ತದೆ. ಇದು ವ್ಯಾಸಶಿಷ್ಯರಾದ ಬಾದರಿಗಳ ಮತ.

**॥ ಓಂ ವಿಶೇಷಿತತ್ವಾಚ್ಚ ಓಂ ॥** ('ಯದಿ ವಾವ ಪರಮಭಿಪಶ್ಯತಿ ಪ್ರಾಪ್ನೋತಿ ಬ್ರಹ್ಮಾಣಂ ಚತುರ್ಮುಖಂ' ಇತಿ ಶ್ರುತೌ ಚತುರ್ಮುಖತ್ವೇನ ಬ್ರಹ್ಮಣೋ ವಿಶೇಷಿತತ್ವಾಚ್ಚ ಕಾರ್ಯಮೇವ ಬ್ರಹ್ಮಪದಾರ್ಥಃ ।)

'ಯದಿ ವಾವ' ಇತ್ಯಾದಿಶ್ರುತಿಯಲ್ಲಿ ಜ್ಞಾನಿಪ್ರಾಪ್ಯನಾದ ಬ್ರಹ್ಮನಿಗೆ 'ಚತುರ್ಮುಖಂ=ನಾಲ್ಮೊಗದವ' ಎಂದು ವಿಶೇಷವನ್ನು ಹೇಳಿರುವುದರಿಂದಲೂ ಜ್ಞಾನಿಗಳಿಂದ ಮೊದಲು ಪ್ರಾಪ್ಯನಾದವನು ಚತುರ್ಮುಖಬ್ರಹ್ಮನೇ ಆಗಿದ್ದಾನೆ.

**॥ ಓಂ ಸಾಮೀಪ್ಯಾತ್ತು ತದ್‌ವ್ಯಪದೇಶಃ ಓಂ ॥** (ತುರೇವ। ಜ್ಞಾನಿನಃ ಪರಪ್ರಾಪ್ತಿವ್ಯಪದೇಶಃ ಪರಪ್ರಾಪ್ತೇಃ ಕಾಲತಃ ಸಾಮೀಪ್ಯಾದೇವ ಹೇತೋಃ, ನತು ಕಾರ್ಯಸ್ಯ ಅಪ್ರಾಪ್ಯತ್ವಾತ್, ನ ಪರಸ್ಯ ಪ್ರಥಮಪ್ರಾಪ್ಯತ್ವಾತ್ ।)

'ಬ್ರಹ್ಮವಿದಾಪ್ನೋತಿ ಪರಮ್' ಈ ಶ್ರುತಿಯಲ್ಲಿ ಜ್ಞಾನಿಯು ಬ್ರಹ್ಮನ ಬಳಿ ಹೋಗುತ್ತಾನೆ, ಎಂದು ಹೇಳಿರುವುದಕ್ಕೆ ಅವನು ಪ್ರಥಮ ಪ್ರಾಪ್ಯ, ಎಂದು ಅರ್ಥವಲ್ಲ. ಚತುರ್ಮುಖಪ್ರಾಪ್ತಿಯಾದ ಅನತಿಕಾಲದಲ್ಲೇ ಅವನು ಪ್ರಾಪ್ಯ ಎನ್ನುವ ಕಾರಣದಿಂದ ಆ ರೀತಿ ವ್ಯಪದೇಶ ಮಾಡಲಾಗಿದೆ.

**॥ ಓಂ ಕಾರ್ಯಾತ್ಯಯೇ ತದಧ್ಯಕ್ಷೇಣ ಸಹಾತಃ ಪರಮಭಿಧಾನಾತ್ ಓಂ ॥** (ಕಾರ್ಯಾಣಾಮ್ ಅತ್ಯಯೇ=ನಾಶರೂಪಪ್ರಲಯೇ, ತದಧ್ಯಕ್ಷೇಣ=ಕಾರ್ಯಾಣಾಂ ಸ್ವಾಮಿನಾ ಚತುರ್ಮುಖೇನ ಸಹ, ಅತಃ=ಚತುರ್ಮುಖಾತ್ ಪರಂ ಬ್ರಹ್ಮಜ್ಞಾನೀ ಗಚ್ಛತಿ। ಕುತಃ? 'ತೇ ಹ ಬ್ರಹ್ಮಾಣಮಭಿಸಂಪದ್ಯ' ಇತಿ ಶ್ರುತೌ ತದಭಿಧಾನಾದಿತ್ಯರ್ಥಃ ।)

ಕಾರ್ಯಾತ್ಯಯೇ=ಕಾರ್ಯಪ್ರಪಂಚದ ನಾಶವಾಗುತ್ತಿರಲು ಅಂದರೆ ಪ್ರಲಯ ಕಾಲದಲ್ಲಿ ತದಧ್ಯಕ್ಷೇಣ=ಕಾರ್ಯಪ್ರಪಂಚಕ್ಕೆ ಸ್ವಾಮಿಯಾದ ಚತುರ್ಮುಖನೊಂದಿಗೆ ಅತಃ= ಚತುರ್ಮುಖನಿಂದಲೂ ಪರಂ=ಉತ್ತಮನಾದ ಪರಬ್ರಹ್ಮನ ಬಳಿಗೆ ಜ್ಞಾನಿಯು ಹೋಗುತ್ತಾನೆ. ಅಭಿಧಾನಾತ್=''ತೇಹ'' ಇತ್ಯಾದಿಶ್ರುತಿಯಲ್ಲಿ ಹಾಗೆ ಹೇಳಿರುವುದ ರಿಂದ.

**॥ ಓಂ ಸ್ಮೃತೇಶ್ಚ ಓಂ ॥**

(ಬ್ರಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿಸಂಚರೇ ।
ಪರಸ್ಯಾಂತೇ ಪರಾತ್ಮಾನಃ ಪ್ರವಿಶಂತಿ ಪರಂ ಪದಮ್ ॥
ಇತಿ ಸ್ಮೃತೇಶ್ಚ ಕಾರ್ಯಾತ್ಯಯೇ ಇತ್ಯುಕ್ತ ಏವಾರ್ಥಃ ಜ್ಞಾಯತೇ ಇತ್ಯರ್ಥಃ ।)

'ಬ್ರಹ್ಮಣಾ ಸಹ' ಇತ್ಯಾದಿ ಸ್ಮೃತಿಯಿಂದಲೂ 'ಕಾರ್ಯಾತ್ಯಯೇ' ಎಂದು ಹಿಂದೆ ಹೇಳಿರುವ ವಿಷಯವು ತಿಳಿಯುತ್ತದೆ.

**|| ಓಂ ಪರಂ ಜೈಮಿನಿರ್ಮುಖ್ಯತ್ವಾತ್ ಓಂ ||** ('ಸ ಏನಾನ್ ಬ್ರಹ್ಮ ಗಮಯತಿ' ಇತಿ ಶ್ರುತೌ ಪರಂ ಬ್ರಹ್ಮ ವಾಯುಃ ಗಮಯತಿ । ನ ಕಾರ್ಯಮಿತ್ಯರ್ಥಃ । ಕುತಃ ? ಬ್ರಹ್ಮಶಬ್ದಸ್ಯ ತತ್ರ ಮುಖ್ಯಾತ್ವಾದಿತ್ಯರ್ಥಃ ।)

'ಸ ಏನಾನ್' ಇತ್ಯಾದಿಶ್ರುತಿಯಲ್ಲಿರುವ ಬ್ರಹ್ಮಶಬ್ದಾರ್ಥವು ಮುಖ್ಯವಾಗಿ ಪರಬ್ರಹ್ಮನಿಗೇ ಸಲ್ಲುವುದರಿಂದ ವಾಯುದೇವರು ಪರಬ್ರಹ್ಮನ ಬಳಿಗೇ ಜ್ಞಾನಿಗಳನ್ನು ಕರೆದುಕೊಂಡು ಹೋಗುತ್ತಾರೆ, ಹೀಗೆಂದು ಜೈಮಿನಿಗಳು ಹೇಳುತ್ತಾರೆ.

**|| ಓಂ ದರ್ಶನಾಚ್ಚ ಓಂ ||**(ಪರಸ್ಯೇತ್ಯನುವರ್ತ್ಯಮ್ । ಶ್ರವಣಾದಿಸಾಧನೈಃ ಅಪರೋಕ್ಷತಯಾ ಪರಸ್ಯೈವ ಬ್ರಹ್ಮಣಃ ದರ್ಶನಾಚ್ಚ, ಅನ್ಯಸ್ಯ ತದಭಾವಾತ್, ಯುಕ್ತ ಏವಾತ್ರ ಮುಖ್ಯಾರ್ಥಸ್ವೀಕಾರಃ ।)

ಶ್ರವಣ-ಮನನ-ಧ್ಯಾನಗಳಿಂದ ಪರಬ್ರಹ್ಮನದೇ ಅಪರೋಕ್ಷವಾಗಿರುವುದರಿಂದ ''ಬ್ರಹ್ಮ ಗಮಯತಿ'' ಎಂಬ ಶ್ರುತಿಯಲ್ಲಿ ಬ್ರಹ್ಮಶಬ್ದಕ್ಕೆ ಮುಖ್ಯಾರ್ಥವನ್ನು ಹೇಳುವುದೇ ಯುಕ್ತವಾಗಿದೆ.

**|| ಓಂ ನಚ ಕಾರ್ಯೇ ಪ್ರತಿಪತ್ತ್ಯಭಿಸಂಧಿಃ ಓಂ ||** (ಪ್ರತಿಪತ್ತಿಃ ಉಪಾಸ್ತಿಃ । ತತ್ಸಹಿತೋಽಭಿಸಂಧಿಃ=ಇಚ್ಛಾ-ಪ್ರತಿಪತ್ತ್ಯಭಿಸಂಧಿಃ । ಕಾರ್ಯೇ ಬ್ರಹ್ಮಣಿ ಪ್ರತಿಪತ್ತಿಃ, 'ಕಾರ್ಯಂ ಬ್ರಹ್ಮ ಪ್ರಾಪ್ನುವಾನಿ' ಇತ್ಯಭಿಸಂಧಿಶ್ಚ ನಾಸ್ತಿ ಯತಃ ಅತಃ ಪರಮೇವ ಪ್ರಾಪ್ಯಮ್, ನ ಕಾರ್ಯಮಿತ್ಯರ್ಥಃ । ಹೇತುಸಮುಚ್ಚಯೇ ಚಃ ।)

ಪ್ರತಿಪತ್ತಿ ಎಂದರೆ ಉಪಾಸನೆ, ಅಭಿಸಂಧಿ ಎಂದರೆ ಇಚ್ಛೆ, 'ನಾನು ಕಾರ್ಯಬ್ರಹ್ಮನ ಬಳಿಗೆ ಹೋಗುತ್ತೇನೆ' ಎಂದು ಇಚ್ಛೆ. ಉಪಾಸನಾಸಹಿತವಾದ ಈ ರೀತಿಯ ಇಚ್ಛೆಯು ಜ್ಞಾನಿಗಳಿಗೆ ಇರುವುದಿಲ್ಲ. ಅಂದರೆ, ಚತುರ್ಮುಖನ ಉಪಾಸನೆಯನ್ನೂ ಜ್ಞಾನಿಗಳು ಮಾಡಿಲ್ಲ. ಅವನ ಬಳಿ ಹೋಗುವ ಇಚ್ಛೆಯೂ ಅವರಿಗಿಲ್ಲ. ಆದ್ದರಿಂದಲೂ ಜ್ಞಾನಿಗಮ್ಯನಾದವನು ಪರಬ್ರಹ್ಮನೇ, ಕಾರ್ಯಬ್ರಹ್ಮನಲ್ಲ.

**|| ಓಂ ಅಪ್ರತೀಕಾಲಂಬನಾನ್ನಯತೀತಿ ಬಾದರಾಯಣ ಉಭಯಥಾ ಚ ದೋಷಾತ್ ತತ್ಕ್ರತುಶ್ಚ ಓಂ ||** (ಪ್ರತೀಕಂ=ದೇಹಃ । ಉಪಲಕ್ಷಣಮೇತತ್ । ತತ್ರೈವ=ದೇಹಾದಾವೇವ ಬ್ರಹ್ಮ ಪಶ್ಯಂತಃ-ಪ್ರತೀಕಾಲಂಬನಾಃ । ತದನ್ಯೇ ಅಪ್ರತೀಕಾಲಂಬನಾಃ । ವ್ಯಾಪ್ತತಯಾ ಬ್ರಹ್ಮ ಪಶ್ಯಂತಃ ಇತ್ಯರ್ಥಃ । ತಾನ್ ಪರಂ ನಯತಿ, ನತು ಸರ್ವಾನ್ । ಅನ್ಯಾನೇವ ಚ ಕಾರ್ಯಮ್, ಇತಿ ಶ್ರುತ್ಯರ್ಥಃ, ಇತಿ ಬಾದರಾಯಣೋ ಮನ್ಯತೇ । ಕುತಃ? ಉಭಯಥಾ ಚ ದೋಷಾತ್ । ಕಾಂಶ್ಚಿತ್

ಕಾರ್ಯಂ, ಕಾಂಶ್ಚಿತ್ ಪರಮ್, ಇತ್ಯನಂಗೀಕೃತ್ಯ ಸರ್ವಾನ್ ಕಾರ್ಯಮೇವ ನಯತಿ ನಪರಂ, ಪರಮೇವ ನ ಕಾರ್ಯಮ್ ಇತ್ಯಂಗೀಕಾರೇ ದೋಷಸತ್ವಾದಿತ್ಯರ್ಥಃ । ಆದ್ಯೇ ಬ್ರಹ್ಮಶಬ್ದಸ್ಯ ತತ್ರ ಮುಖ್ಯತ್ವಮ್, ತದ್ದರ್ಶನಂ, ತತ್ರೈವ ಉಪಾಸ್ತ್ಯಾದಿ ಸತ್ವಮ್, ಇತಿ ಪರಪ್ರಾಪ್ತಿಪಕ್ಷೇ ಯತ್ ಸಾಧಕಮುಕ್ತಂ ತದಯುಕ್ತಂ ಸ್ಯಾತ್ । ಅಂತ್ಯೇ ಕಾರ್ಯಸ್ಯೈವ ಗಮ್ಯತ್ವೋಪಪತ್ತಿಃ, 'ಬ್ರಹ್ಮಾಣಂ ಚತುರ್ಮುಖಮ್' ಇತಿ ವಿಶೇಷಿತತ್ತ್ವಂ ಇತ್ಯಾದಿ ಯತ್ ಕಾರ್ಯಪ್ರಾಪ್ತಿಪಕ್ಷೇ ಸಾಧಕಮ್ ಉಕ್ತಂ ತದಯುಕ್ತಂ ಸ್ಯಾದಿತಿ ಭಾವಃ ।

'ಯತ್ ಪ್ರಾಪ್ತುಮಿಚ್ಛತಿ ತತ್ ಪ್ರಾಪ್ನೋತಿ' ಇತಿ ವಚನಾತ್ ಇಚ್ಛಾನುಸಾರೇಣ, ತಯೋಃ ಪ್ರಾಪ್ತಿರಿತ್ಯತ ಉಕ್ತಮ್–ತತ್‌ಕ್ರತುಶ್ಚೇತಿ । ಶ್ರುತಿಗ್ರಹಣಮೇತತ್ ।

''ಸ ಯಥಾಕಾಮೋ ಭವತಿ ತತ್‌ಕ್ರತುರ್ಭವತಿ...''

ಇತಿ ಶ್ರುತಿಃ ಯತಃ ಅತಃ ನೇಚ್ಛಾನುಸಾರೇಣ ತತ್‌ಪ್ರಾಪ್ತಿಃ, ಕಿಂತು ಕೇನಚಿತ್ ಕ್ರಮೇಣೈವ, ಇತ್ಯರ್ಥಃ। ಅತ್ರ ಶ್ರುತೌ ಯತ್‌ಪ್ರಾಪ್ತೀಚ್ಛಾ ತಜ್ಜ್ಞಾನೋಪಾಸನಾ-ಪರೋಕ್ಷೈರೇವ ತತ್‌ಪ್ರಾಪ್ತೇರುಕ್ತತ್ವಾತ್, ಇತಿ ಭಾವಃ ॥)

ಉಭಯಥಾ ಚ=ಕಾರ್ಯಬ್ರಹ್ಮಪ್ರಾಪ್ತಿ ಎಂದರೂ ಪರಬ್ರಹ್ಮಪ್ರಾಪ್ತಿ ಎಂದರೂ ದೋಷಾತ್=ಹಿಂದೆ ಹೇಳಿರುವ ದೋಷಗಳು ಇರುವುದರಿಂದ ಬಾದರಾಯಣಃ= ವೇದವ್ಯಾಸರು ಅಪ್ರತೀಕಾಲಂಬನಾನ್=ವ್ಯಾಪ್ತದರ್ಶಿಗಳನ್ನು ವಾಯುದೇವರು ಪರಬ್ರಹ್ಮನ ಬಳಿಗೆ ಒಯ್ಯುತ್ತಾರೆ, ಪ್ರತೀಕಾಲಂಬನರನ್ನು ಕಾರ್ಯಬ್ರಹ್ಮನ ಬಳಿಗೆ ಕರೆದೊಯ್ಯುತ್ತಾರೆ ಇತಿ=ಹೀಗೆ ಹೇಳುತ್ತಾರೆ.

'ಜ್ಞಾನಿಯು ಯಾರ ಬಳಿ ಹೋಗಲು ಬಯಸುವನೋ ಅವನ ಬಳಿಯೇ ಹೋಗುತ್ತಾನೆ' ಎನ್ನುವ ಶ್ರುತಿ ಇರುವುದರಿಂದ ಇಚ್ಛಾನುಸಾರೇಣ ಜ್ಞಾನಿ ಬೇಕಾದಲ್ಲಿ ಹೋಗುತ್ತಾನೆ ಎಂದು ತಿಳಿಯಬಾರದು. 'ತತ್‌ಕ್ರತುಶ್ಚ' ಸೂತ್ರದ ಈ ಶಬ್ದವು ಶ್ರುತಿಸೂಚಕ ವಾಗಿದೆ. ಆ ಶ್ರುತಿ ಇದು— 'ಸ ಯಥಾಕಾಮೋ ಭವತಿ ತತ್‌ಕ್ರತುರ್ಭವತಿ' ಭಗವದಿಚ್ಛೆಗೆ ಅನುಸಾರವಾಗಿಯೇ ಸಾಧಕರಿಗೆ ಬೇರೆಬೇರೆ ಸಾಧನೆಯ ಇಚ್ಛೆ ಬಂದು ಅದೇ ರೀತಿಯ ಸಾಧನೆ ನಡೆಯುತ್ತದೆ. ಆದಕ್ಕನುಗುಣವಾಗಿಯೇ ಅವನು ಕಾರ್ಯಬ್ರಹ್ಮನ ಬಳಿಗೋ ಪರಬ್ರಹ್ಮನ ಬಳಿಗೋ ಹೋಗುತ್ತಾನೆ.

**॥ ಓಂ ವಿಶೇಷಂ ಚ ದರ್ಶಯತಿ ಓಂ ॥** (ಅಪ್ರತೀಕಾಲಂಬನತ್ವಾದಿ ವಿಶೇಷಂ ಚ 'ದೇವಾ ವಾವ ಸರ್ವಪ್ರಕಾಶಾಃ' ಇತಿ ಶ್ರುತಿಃ ದರ್ಶಯತಿ, ಇತ್ಯರ್ಥಃ ।)

'ದೇವಾ ವಾವ' ಎಂಬ ಈ ಶ್ರುತಿಯು ಪರಬ್ರಹ್ಮಪ್ರಾಪ್ತಿ, ಕಾರ್ಯಬ್ರಹ್ಮಪ್ರಾಪ್ತಿಗಳಿಗೆ ಸಾಧಕರಲ್ಲಿ ಇರಬೇಕಾದ ವಿಶೇಷವನ್ನು ತಿಳಿಸುತ್ತದೆ.

ಉಭಯಥಾ ಚ ದೋಷಾತ್=ಪರಬ್ರಹ್ಮಪ್ರಾಪ್ತಿಯನ್ನು ಹೇಳಿದರೆ ಅನುಪಪತ್ತಿ–ಬಂಧವು ಅಪರೋಕ್ಷಜ್ಞಾನ ಬಂದ ಮೇಲೂ ಇರುವುದರಿಂದ ಜ್ಞಾನಿಯು ಬದ್ಧನಾದುದರಿಂದ ಪರಬ್ರಹ್ಮ ಪ್ರಾಪ್ತಿಯು ಸಾಧ್ಯವಿಲ್ಲ. 'ಬ್ರಹ್ಮಾಣಂ ಚತುರ್ಮುಖಂ' ಎಂಬ ವಿಶೇಷಣಾವೂ ಅನುಪಪನ್ನ. ಕಾರ್ಯಬ್ರಹ್ಮಪ್ರಾಪ್ತಿಯನ್ನು ಹೇಳಿದಾಗ ''ಬ್ರಹ್ಮ ಗಮಯತಿ' ಎಂಬ ಶ್ರುತಿಯಲ್ಲಿರುವ ಬ್ರಹ್ಮಶಬ್ದದ ಮುಖ್ಯಾರ್ಥತ್ವಾನುಪಪತ್ತಿ, ಬ್ರಹ್ಮದರ್ಶನ. ಆದರೆ, ಕಾರ್ಯಬ್ರಹ್ಮಪ್ರಾಪ್ತಿ ಎಂಬ ಅನುಪಪತ್ತಿ. ಹೀಗೆ ಎರಡೂ ಕಡೆ ದೋಷಗಳಿವೆ.

## ಶಾಂಕರಭಾಷ್ಯದಲ್ಲಿ ಕಾರ್ಯಾಧಿಕರಣ

**।। ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇಃ ।।** 'ಸ ಏನಾನ್ ಬ್ರಹ್ಮ ಗಮಯತಿ' ಎಂಬ ಶ್ರುತ್ಯುಕ್ತವಾದ ಜ್ಞಾನಿಪ್ರಾಪ್ಯ ಬ್ರಹ್ಮನೆಂದರೆ ಸಗುಣ ಬ್ರಹ್ಮ, ಮುಖ್ಯಬ್ರಹ್ಮನಲ್ಲ. ಪ್ರದೇಶವಿಶೇಷಾವಚ್ಛಿನ್ನನಾದ ಬ್ರಹ್ಮನೇ ಕಾರ್ಯಬ್ರಹ್ಮ. ಆ ಪ್ರದೇಶವಿಶೇಷಕ್ಕೆ ಗತ್ಯುಪಪತ್ತೇಃ=ಗಮನವು ಸಾಧ್ಯವಾದುದರಿಂದ ಕಾರ್ಯಬ್ರಹ್ಮನು ಜ್ಞಾನಿಗಳಿಂದ ಪ್ರಾಪ್ಯ. ನಿರ್ಗುಣ ಬ್ರಹ್ಮನು ವ್ಯಾಪ್ತನಾದುದರಿಂದ ಅವನು ನಿತ್ಯಪ್ರಾಪ್ತ.

**।। ವಿಶೇಷಿತತ್ವಾಚ್ಚ ।।** 'ಬ್ರಹ್ಮಲೋಕಾನ್ ಗಮಯತಿ' (ಬೃ.6.2.15) ಎಂದು ಬೃಹದಾರಣ್ಯಕಶ್ರುತಿಯಲ್ಲಿ ಲೋಕಶಬ್ದ, ಬಹುವಚನಗಳಿಂದ ವಿಶೇಷಿತನಾದ ಬ್ರಹ್ಮ ಕಾರ್ಯಬ್ರಹ್ಮನೇ ಆಗಿರುತ್ತಾನೆ. ಲೋಕವೆಂದರೆ ಭೋಗಭೂಮಿ. 'ಬ್ರಹ್ಮಣಃ ಲೋಕಃ' ಎಂದು ತತ್ಪುರುಷಸಮಾಸ. 'ಬ್ರಹ್ಮೈವ ಲೋಕಃ' ಎಂದು ಅರ್ಥಮಾಡುವುದು ಕ್ಲಿಷ್ಟಕಲ್ಪನೆ. ಆದ್ದರಿಂದಲೂ ಕಾರ್ಯಬ್ರಹ್ಮಪ್ರಾಪ್ತಿಯೇ ವಿವಕ್ಷಿತ.

**।। ಸಾಮೀಪ್ಯಾತ್ತು ತದ್ವ್ಯಪದೇಶಃ।।** ಪರಬ್ರಹ್ಮನ ಸಾಮೀಪ್ಯವು ಅಪರಬ್ರಹ್ಮನಿಗೆ ಇರುವುದರಿಂದ ಬ್ರಹ್ಮಶಬ್ದಪ್ರಯೋಗವೂ ಅವನಲ್ಲಿ ಉಪಪನ್ನವಾಗುತ್ತದೆ. ಪರಬ್ರಹ್ಮನೇ ಉಪಾಸನೆಗಾಗಿ ಶ್ರುತ್ಯುಕ್ತವಾದ ಮನೋಮಯತ್ವಾದಿ ಉಪಾಧಿಗಳಿಂದಾಗಿ ಅಪರಬ್ರಹ್ಮನೆನಿಸುವುದರಿಂದಾಗಿ ಅವನಿಗೂ ಬ್ರಹ್ಮಶಬ್ದವಾಚ್ಯತ್ವವಿದೆ. ಇದರಿಂದಾಗಿ 'ಸ ಏನಾನ್ ಬ್ರಹ್ಮ ಗಮಯತಿ' ಎಂಬ ಶ್ರುತಿಯು ಅವನನ್ನು ಹೇಳುತ್ತದೆ.

**।। ಕಾರ್ಯಾತ್ಯಯೇ ತದಧ್ಯಕ್ಷೇಣ ಸಹಾತಃ ಪರಮಭಿಧಾನಾತ್ ।।** ದೇವಯಾನ ಮಾರ್ಗದಿಂದ ಹೋದ ಜ್ಞಾನಿಗಳಿಗೆ ಪುನರಾವೃತ್ತಿ ಇಲ್ಲ ಎನ್ನಲಾಗಿದೆ— 'ಏತೇನ

ಪ್ರತಿಪದ್ಯಮಾನಾಃ ಇಮಂ ಮಾನವಮ್ ಆವರ್ತಂ ನಾವರ್ತಂತೇ' ಅದನ್ನು ಹೀಗೆ ಕೂಡಿಸಬೇಕು— ಕಾರ್ಯಾತ್ಯಯೇ=ಬ್ರಹ್ಮಲೋಕವು ನಾಶವಾಗುವ ಪ್ರಲಯಕಾಲವು ಬಂದಾಗ ಆ ಲೋಕದಲ್ಲೇ ಸಮ್ಯಗ್‌ಜ್ಞಾನವನ್ನು ಪಡೆದು ತದಧ್ಯಕ್ಷೇಣ=ಆ ಲೋಕಾಧಿ ಪತಿಯಾದ ಹಿರಣ್ಯಗರ್ಭನೊಂದಿಗೆ ಪರಂ=ವಿಷ್ಣುವಿನ ಪರಮಸ್ಥಾನವನ್ನು (ವಿಷ್ಣೋಃ ಪರಮಂ ಪದಂ ಪ್ರತಿಪದ್ಯಂತೇ–ಶಾಂ.ಭಾ.) ಹೀಗೆ ಕ್ರಮಮುಕ್ತಿಯು ಅನಾವೃತ್ತಿಶಬ್ದದಿಂದ ವಿವಕ್ಷಿತ.

**॥ ಸ್ಮೃತೇಶ್ಚ ॥**

ಬ್ರಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿಸಂಚರೇ ।
ಪರಸ್ಯಾಂತೇ ಕೃತಾತ್ಮಾನಃ ಪ್ರವಿಶಂತಿ ಪರಂ ಪದಮ್ ॥

ಈ ಸ್ಮೃತಿಯಿಂದಲೂ ಹಿಂದೆ ಹೇಳಿರುವ ವಿಷಯವು ಸಿದ್ಧವಾಗಿದೆ.

ಈ ಐದು ಸೂತ್ರಗಳಲ್ಲಿ ಮಾಡಿರುವ ಬಾದರಿಗಳ ಸಿದ್ಧಾಂತಕ್ಕೆ ಮುಂದಿನ ಮೂರು ಸೂತ್ರಗಳು ಪೂರ್ವಪಕ್ಷಗಳಾಗಿವೆ.

**॥ ಪರಂ ಜೈಮಿನಿರ್ಮುಖ್ಯತ್ವಾತ್ ॥** ಜೈಮಿನಿಗಳಾದರೋ 'ಸ ಏನಾನ್ ಬ್ರಹ್ಮ ಗಮಯತಿ' (4.15.6 ಛಾಂ.) ಎಂಬಲ್ಲಿ ಹೇಳಿರುವ ಬ್ರಹ್ಮನೆಂದರೆ ಪರಬ್ರಹ್ಮನೇ ಆಗಿದ್ದಾನೆ. ಬ್ರಹ್ಮಶಬ್ದಕ್ಕೆ ಅವನೇ ಮುಖ್ಯಾರ್ಥನಾದುದರಿಂದ, ಎನ್ನುತ್ತಾರೆ.

**॥ ದರ್ಶನಾಚ್ಚ ॥** ''ತಯೋರ್ಧ್ವಮಾಯನ್ನಮೃತತ್ವಮೇತಿ'(ಛಾಂ.8.6.6) ಈ ಛಾಂದೋಗ್ಯಶ್ರುತಿಯಲ್ಲಿ ಜ್ಞಾನಿಯು ಸುಷುಮ್ನಾನಾಡಿಯ ಮೂಲಕ ದೇಹದಿಂದ ಹೊರಬಂದು ಅರ್ಚಿರಾದಿಮಾರ್ಗಗಮನಪೂರ್ವಕ ಅಮೃತತತ್ವವನ್ನು ಹೊಂದುತ್ತಾನೆ, ಎಂದಿದೆ. ಕಾರ್ಯಬ್ರಹ್ಮಪ್ರಾಪ್ತಿಯಾದರೆ ಆ ಫಲಕ್ಕೆ ನಾಶವಿದೆ–'ಅಥ ಯತ್ರಾನ್ಯತ್ ಪಶ್ಯತಿ ತತ್ ಮರ್ತ್ಯಮ್'' (ಛಾಂ.7.24.1)

**॥ ನ ಚ ಕಾರ್ಯೇ ಪ್ರತಿಪತ್ತ್ಯಭಿಸಂಧಿಃ ॥** ''ಪ್ರಜಾಪತೇಃ ಸಭಾಂ ವೇಶ್ಮ ಪ್ರಪದ್ಯೇ'' (ಛಾಂ.8.14.1) ಎಂದು ಕಾರ್ಯಬ್ರಹ್ಮನ ಪ್ರಾಪ್ತಿಯೇ ಜ್ಞಾನಿಯ ಇಚ್ಛೆಯಾಗಿದೆ. ಆದಕ್ಕೆ ವಿರುದ್ಧವಾಗಿ ಪರಬ್ರಹ್ಮಪ್ರಾಪ್ತಿಯನ್ನು ಹೇಳುವುದು ಸರಿಯಲ್ಲ, ಎನ್ನುವುದು ನಚ=ಯುಕ್ತವಲ್ಲ. ಛಾಂದೋಗ್ಯದ ಈ ವಾಕ್ಯಕ್ಕೆ ''ಯಶೋಽಹಂ ಭವಾನಿ ಬ್ರಾಹ್ಮಣಾನಾಮ್'' (ಛಾಂ.8.14.1) ಎಂದು ಉಪಕ್ರಮವಿದೆ. ಇಲ್ಲಿ ಜ್ಞಾನಿಯ ಸರ್ವವಿನಾಶಪೂರ್ವಕ ಸರ್ವಾಭಾವಾಭಿಸಂಧಿಯು (ಇಚ್ಛಾ) ಪ್ರಸ್ತುತವಾಗಿದೆ. ಬ್ರಹ್ಮಲೋಕವನ್ನೂ 'ಅಕೃತಂ ಕೃತಾತ್ಮಾ ಬ್ರಹ್ಮಲೋಕಮಭಿಸಂಭವಾಮಿ' (8.13.1)

'ಅಕೃತಂ' (ಅಕಾರ್ಯ) ಎಂದು ಉಲ್ಲೇಖಿಸಲಾಗಿದೆ. ಆದ್ದರಿಂದ 'ಬ್ರಹ್ಮ ಚಾಸೌ ಲೋಕಶ್ಚ' ಎಂದು ಕರ್ಮಧಾರಯ ಸಮಾಸಮಾಡಿ ಲೋಕಶಬ್ದಕ್ಕೆ ಪ್ರಕಾಶ ವಿಶೇಷ ಎಂದು ಅರ್ಥವನ್ನು ಹೇಳಬೇಕು. ಇದರಿಂದ ಬ್ರಹ್ಮಾತ್ಮಕತ್ವಪ್ರಾಪ್ತಿಯೇ ಜ್ಞಾನೀಚ್ಛೆ ಎಂದು ನಿರ್ಣಯವಾಗುತ್ತದೆ. ಗತಿಶ್ರುತಿಯೂ ವಿರುದ್ಧವಲ್ಲ. ಅವಿದ್ಯಾನಿವೃತ್ತಿಯು ಸ್ಥಾನವಿಶೇಷದಲ್ಲಿ ಆಗುವುದರಿಂದ ಸ್ಥಾನವಿಶೇಷಗತಿಯೂ ಉಪಪನ್ನವಾಗುತ್ತದೆ.

ಇವು ಮೂರು ಸೂತ್ರಗಳು ಜೈಮಿನಿಮತವಾದರೂ ಸಿದ್ಧಾಂತವಲ್ಲ. ಪೂರ್ವಪಕ್ಷ. ಶಾಂಕರಭಾಷ್ಯದಲ್ಲಿ ಮೊದಲ ಐದು ಸೂತ್ರಗಳು ಪೂರ್ವಪಕ್ಷಸೂತ್ರಗಳು, ಕೊನೆಯ ಮೂರು ಸಿದ್ಧಾಂತಸೂತ್ರಗಳು ಎಂದು ಹೇಳುವ ಪಕ್ಷವನ್ನು 'ಕೇಚಿತ್ತು' ಎಂದು ಉಲ್ಲೇಖಿಸಿ ''ತದನುಪಪನ್ನಂ, ಗಂತವ್ಯತ್ವಾನುಪಪತ್ತೇಃ ಬ್ರಹ್ಮಣಃ' ಎಂದು ನಿರಾಕರಿಸಲಾಗಿದೆ. ಆದ್ದರಿಂದ ಬ್ರಹ್ಮಜ್ಞಾನಿಯು ಕಾರ್ಯಬ್ರಹ್ಮಲೋಕಕ್ಕೆ ಹೋಗಿ ಅಲ್ಲಿಂದ ಬ್ರಹ್ಮಭಾವವನ್ನು ಹೊಂದುತ್ತಾನೆ ಎಂದೇ ಭಾಷ್ಯಸಿದ್ಧಾಂತ. ಭಾಮತಿಯಲ್ಲೂ ''ತಸ್ಮಾತ್ ಸಾಧುದರ್ಶೀ ಸ ಭಗವಾನ್ ಬಾದರಿಃ ಅಸಾಧುದರ್ಶೀ ಜೈಮಿನಿಃ ಇತಿ ಸಿದ್ಧಮ್'' ಎನ್ನಲಾಗಿದೆ.

**ವಿಮರ್ಶೆ**—ಮೊದಲು ಪೂರ್ವಪಕ್ಷಸೂತ್ರ, ಆಮೇಲೆ ಸಿದ್ಧಾಂತ ಸೂತ್ರ, ಎಂದು ಸೂತ್ರಕ್ರಮ. ಇಲ್ಲಿ ಮಾತ್ರ ಮೊದಲು ಸಿದ್ಧಾಂತ ಸೂತ್ರ ಬಂದಿದೆ, ಆಮೇಲೆ ಪೂರ್ವಪಕ್ಷ ಸೂತ್ರವಿದೆ. ಇದು ಸೂತ್ರಕ್ರಮಕ್ಕೆ ವಿರುದ್ಧ. 'ಬಾದರಿ' ಎಂದು ಸೂತ್ರದಲ್ಲಿ ಗೃಹೀತವಾದುದರಿಂದ ಅದೂ ಸಿದ್ಧಾಂತಸೂತ್ರವೇ ಆಗಬೇಕು. ಬಾದರಿ ತತ್ತ್ವದರ್ಶಿ, ಜೈಮಿನಿ ಭ್ರಾಂತ ಎಂದು ನಿರ್ಣಯಿಸುವುದು ಸಾಹಸ. ''ಕಥಮಿದಂ ಲೋಕೋತ್ತರ ಪ್ರಜ್ಞೇನ ಅವಗತಮ್?'' (ಶೇಷ.ತಾತ್ಪರ್ಯ ಚಂದ್ರಿಕಾ.)

## ಶಾಂಕರಭಾಷ್ಯದಲ್ಲಿ ಅಪ್ರತೀಕಾಲಂಬನಾಧಿಕರಣ

**॥ ಅಪ್ರತೀಕಾಲಂಬನಾನ್ನಯತೀತಿ ಬಾದರಾಯಣ ಉಭಯಥಾ ಚಾದೋಷಾತ್ ತತ್ಕ್ರತುಶ್ಚ ॥** ಉಭಯಥಾ ಚ ಅದೋಷಾತ್=ಪ್ರತೀಕಾಲಂಬನರನ್ನು ಅಮಾನ ಪುರುಷ ಬ್ರಹ್ಮನ ಬಳಿಗೆ ಕರೆದುಕೊಂಡು ಹೋಗುವುದಿಲ್ಲ, ಕೆಲವು ವಿಕಾರಾಲಂಬನರನ್ನು ಕರೆದುಕೊಂಡು ಹೋಗುತ್ತಾನೆ. ಈ ಎರಡೂ ಪಕ್ಷಗಳಲ್ಲಿ ದೋಷವಿಲ್ಲದಿರುವುದರಿಂದ ಅಪ್ರತೀಕಾಲಂಬನಾನ್=''ನಾಮಾದಿಗಳಲ್ಲಿ ಬ್ರಹ್ಮೋಪಾಸಕರು'' (''ನಾಮ ಬ್ರಹ್ಮೇತ್ಯುಪಾಸೀತ'') ಪ್ರತೀಕಾಲಂಬನರು. ಇಂತಹವರನ್ನು ಬಿಟ್ಟು ಮನೋಮಯತ್ವಾದಿನಾ ಬ್ರಹ್ಮೋಪಾಸಕರು ಅಪ್ರತೀಕಾಲಂಬನರು. ಅವರೆಲ್ಲರನ್ನೂ

ಅಮಾನವ ಪುರುಷನು ಕಾರ್ಯಬ್ರಹ್ಮನ ಬಳಿಗೆ ಕರೆದುಕೊಂಡು ಹೋಗುತ್ತಾನೆ. ''ಅನಿಯಮಃ ಸರ್ವೇಷಾಮ್'' ಎಂಬ ಸೂತ್ರದಲ್ಲಿ ಹೇಳಿರುವ 'ಸರ್ವೇಷಾಂ' ಎಂದರೆ 'ಎಲ್ಲಾ ಅಪ್ರತೀಕಾಲಂಬನರಿಗೂ' ಎಂದರ್ಥ. ತತ್‌ಕ್ರತುಶ್ಚ=''ತತ್‌ಕ್ರತುನ್ಯಾಯವೂ'' ಉಭಯಥಾಭಾವಕ್ಕೆ ಸಾಧಕವಾಗಿದೆ. 'ಯಾರು ಯಾವ ರೀತಿ ಧ್ಯಾನಿಸುವರೋ ಅವರು ಆ ವಿಧದ ಬ್ರಹ್ಮೈಶ್ವರ್ಯವನ್ನು ಪಡೆಯುತ್ತಾರೆ' ಇದು ಯಥಾಕ್ರತು ನ್ಯಾಯ. ಪ್ರತೀಕ ಧ್ಯಾನಿಗಳು ಬ್ರಹ್ಮಧ್ಯಾನಿಗಳಲ್ಲ. ಅವರ ಧ್ಯಾನದಲ್ಲಿ ನಾಮಾದಿಪ್ರತೀಕಗಳಿಗೇ ಪ್ರಾಧಾನ್ಯ, ಬ್ರಹ್ಮನಿಗಲ್ಲ. ಆದ್ದರಿಂದ ಅವರಿಗೆ ಬ್ರಹ್ಮಪ್ರಾಪ್ತಿ ಇಲ್ಲ. ಇತರರು ಎಲ್ಲರೂ ಬ್ರಹ್ಮಕ್ರತುಗಳು=ಬ್ರಹ್ಮಧ್ಯಾನಿಗಳು. ಆದ್ದರಿಂದ ಅವರಿಗೆ ಕಾರ್ಯಬ್ರಹ್ಮಪ್ರಾಪ್ತಿ ಯಾಗುತ್ತದೆ. ಇದು ಬಾದರಾಯಣರ ಮತ.

**॥ ವಿಶೇಷಂ ಚ ದರ್ಶಯತಿ ॥** ನಾಮಾದಿಪ್ರತೀಕಗಳಲ್ಲಿ ಬ್ರಹ್ಮೋಪಾಸಕರಿಗೆ ಉತ್ತರೋತ್ತರ ವಿಶೇಷವನ್ನು ಶ್ರುತಿಯಲ್ಲಿ ಹೇಳಲಾಗಿದೆ. ''ನಾಮ ಬ್ರಹ್ಮೇತ್ಯುಪಾಸೀತ'' (ಛಾಂ.7.1.4) ಎಂದು ನಾಮೋಪಾಸನೆಯನ್ನು ಅದಕ್ಕೆ ಮುಂದೆ ಫಲವನ್ನೂ ಹೇಳಿ ''ವಾಗ್ವಾವ ನಾಮ್ನೋ ಭೂಯಸೀ'' (ಛಾಂ.7.2.1) ಎಂದೂ ''ಮನೋ ವಾವ ವಾಚೋ ಭೂಯಃ'' ಎಂದೂ ಉತ್ತರೋತ್ತರಉಪಾಸನೆಗೆ ಫಲವಿಶೇಷವನ್ನು ಹೇಳಲಾಗಿದೆ. ಇಲ್ಲಿ ಹೇಳಿರುವ ಫಲವಿಶೇಷವು ಉಪಾಸ್ಯತಂತ್ರ. ಉಪಾಸ್ಯ ಅಬ್ರಹ್ಮವಸ್ತುಗಳು. ಆದ್ದರಿಂದ ಈ ಉಪಾಸನೆಗಳು ಬ್ರಹ್ಮೋಪಾಸನೆಗಳಲ್ಲ. ಬ್ರಹ್ಮೋಪಾಸನೆಯಲ್ಲಿ ಬ್ರಹ್ಮನೊಬ್ಬನೇ ಉಪಾಸ್ಯನಾದುದರಿಂದ ಎಲ್ಲಾ ಉಪಾಸನೆಗಳ ಫಲವೂ ಒಂದೇ–ಕಾರ್ಯ ಬ್ರಹ್ಮಪ್ರಾಪ್ತಿ. ಆದ್ದರಿಂದ ಅಪ್ರತೀಕಾಲಂಬನಾನ್ನಯತಿ, ಎಂದು ಹಿಂದೆ ಮಾಡಿದ ಸಿದ್ಧಾಂತವು ಯುಕ್ತವಾಗಿದೆ.

**ವಿಮರ್ಶೆ**—''ಸಪ್ರತೀಕಾಶ್ಚತುರ್ಮುಖಮ್, ಅಪ್ರತೀಕಾಃ ಪರಮು ಹೈತೇ ಗಚ್ಛಂತಿ'' ಎಂದು ಶ್ರುತಿಯ ನಿರ್ಣಯಕ್ಕೆ ಇದು ವಿರುದ್ಧ. ಪ್ರತೀಕಾಲಂಬನಶಬ್ದಕ್ಕೆ ಅರ್ಥವನ್ನು ''ಪ್ರತೀಕಂ ದೇಹ ಉದ್ದಿಷ್ಟಃ'' ಎಂದು ಗಾರುಡವಚನವು ಹೇಳಿದೆ. ಅದಕ್ಕೆ ವಿರುದ್ಧವಾಗಿ ಅದಕ್ಕೆ ಅರ್ಥಹೇಳುವುದು ಸರಿಯಲ್ಲ.

**ವಿಶಿಷ್ಟಾದ್ವೈತದರ್ಶನದಲ್ಲಿಯೂ** ಅಧಿಕರಣಕ್ರಮ ಮತ್ತು ಸೂತ್ರಾರ್ಥಗಳು ಸಮಾನ. ಆದರೆ ಅದ್ವೈತದಲ್ಲಿ ಸಗುಣಬ್ರಹ್ಮ ಕಾರ್ಯ ಬ್ರಹ್ಮ, ರಾಮಾನುಜ ಭಾಷ್ಯದಲ್ಲಿ ದ್ವೈತಭಾಷ್ಯದಂತೆ ಚತುರ್ಮುಖಬ್ರಹ್ಮನೇ ಕಾರ್ಯಬ್ರಹ್ಮ. ಜ್ಞಾನಿಗಳು ಅರ್ಚಿರಾದಿ ಆತಿವಾಹಿಕ ದೇವತೆಗಳಿಂದ ಚತುರ್ಮುಖನ ಬಳಿ ಒಯ್ಯಲ್ಪಟ್ಟು

''ಸ್ವಯಮಪಿ ತತ್ರಾಧಿಗತವಿದ್ಯಃ'' ಬ್ರಹ್ಮದೇವರಿಂದ ಉಪದೇಶ ಪಡೆದು ಪ್ರಲಯಕಾಲದಲ್ಲಿ ಬ್ರಹ್ಮದೇವರೊಂದಿಗೆ ಪರಬ್ರಹ್ಮನ ಬಳಿ ಸೇರುತ್ತಾರೆ. ಚತುರ್ಮುಖನಿಗೆ ಬ್ರಹ್ಮಶಬ್ದವು ಸಾಮೀಪ್ಯಾತ್ ಎಂದಿದೆ ಸೂತ್ರ. ಪರಬ್ರಹ್ಮನ ಪ್ರಥಮ ಪುತ್ರನಾದ ಚತುರ್ಮುಖನು ಬ್ರಹ್ಮನಿಗೆ ಸಮೀಪನಾಗಿದ್ದಾನೆ. ಹೀಗಾಗಿ ಅವನನ್ನೇ ಬ್ರಹ್ಮ ಎನ್ನಲಾಗಿದೆ. ಜೈಮಿನಿಮತ ಬಾದರಿಮತಕ್ಕೆ ವಿರುದ್ಧವಾದುದು. ಜ್ಞಾನಿಗಳು ಪರಬ್ರಹ್ಮನ ಬಳಿಗೇ ಹೋಗುತ್ತಾರೆ, ಎಂದು ಅವರ ಮತ. ಪರಬ್ರಹ್ಮನು ಸರ್ವಗತನಾದರೂ ಸ್ಥಾನವಿಶೇಷದಲ್ಲಿ ಜ್ಞಾನಿಗಳ ಅವಿದ್ಯಾನಿವೃತ್ತಿಯಾಗುವುದರಿಂದ ಜ್ಞಾನಿಗಳಿಗೆ 'ಗತಿ'ಯು ಯುಕ್ತವಾಗಿದೆ. ಪರಬ್ರಹ್ಮನಿಂದ ನಿರ್ಮಿತವಾದ ಅಪ್ರಾಕೃತ ಲೋಕಗಳು ಅನೇಕ ಇವೆ. ''ಬ್ರಹ್ಮಲೋಕಾನ್'' ಎಂಬ ಬಹುವಚನವೂ, ಅವುಗಳೆಲ್ಲವೂ ಬ್ರಹ್ಮಾತ್ಮಕವಾಗಿರುವುದರಿಂದ ಬ್ರಹ್ಮ-ಲೋಕಶಬ್ದವೂ ಉಪಪನ್ನವಾಗುತ್ತದೆ.

ಶಾಂಕರಭಾಷ್ಯದಂತೆಯೇ ರಾಮಾನುಜಭಾಷ್ಯದಲ್ಲೂ ಕೊನೆಯ ಎರಡು ಸೂತ್ರಗಳು ಒಂದು ಅಧಿಕರಣ. ಆದರೆ, ಶಾಂಕರಭಾಷ್ಯದಲ್ಲಿ 'ಉಭಯಥಾ ಅದೋಷಾತ್' ಎಂದು ಪದವಿಭಾಗ. ರಾಮಾನುಜಭಾಷ್ಯದಲ್ಲಿ ಮಾಧ್ವಭಾಷ್ಯದಂತೆ 'ಉಭಯಥಾ ದೋಷಾತ್' ಎಂದು ಪದವಿಭಾಗ. ಉಪಾಸಕರೆಲ್ಲರೂ ಕಾರ್ಯಬ್ರಹ್ಮನ ಬಳಿಗೇ ಹೋಗುತ್ತಾರೆ ಎನ್ನುವುದು ''ಅಸ್ಮಾಚ್ಛರೀರಾದುತ್ಥಾಯ ಪರಂಜ್ಯೋತಿರುಪ ಸಂಪದ್ಯ'' ಎಂಬ ಛಾಂದೋಗ್ಯಶ್ರುತಿಗೆ ವಿರುದ್ಧ. ಎಲ್ಲರೂ, ಪರಬ್ರಹ್ಮನ ಬಳಿಗೇ ಹೋಗುತ್ತಾರೆ, ಎನ್ನುವುದು ''ತೇಽರ್ಚಿಷಮಭಿಸಂಭವಂತಿ'' ಎನ್ನುವ ಛಾಂದೋಗ್ಯ ವಾಕ್ಯಕ್ಕೆ ವಿರುದ್ಧ. ಆದ್ದರಿಂದ ಬಾದರಾಯಣರು, ಅಪ್ರತೀಕಾಲಂಬನರನ್ನು ಪರಬ್ರಹ್ಮನ ಬಳಿಗೆ ಕರೆದೊಯ್ಯುತ್ತಾರೆ, ಎಂದು ಅಭಿಪ್ರಾಯಪಡುತ್ತಾರೆ. ಯಾರು ಪರಬ್ರಹ್ಮನ ಉಪಾಸನೆ ಮಾಡುವರೋ ಅಥವಾ ಪ್ರಕೃತಿವಿಯುಕ್ತನಾದ ಶುದ್ಧಾತ್ಮನನ್ನು ಉಪಾಸನೆ ಮಾಡುವರೋ ಅವರು ಅಪ್ರತೀಕಾಲಂಬನರು. ಸಿಂಹಸದೃಶನಾದವನನ್ನು ಸಿಂಹ ಎಂದು ತಿಳಿವಂತೆ ಬ್ರಹ್ಮಸೃಷ್ಟವಾದ ನಾಮಾದಿಗಳನ್ನು ಬ್ರಹ್ಮನೆಂದು ಉಪಾಸನೆ ಮಾಡುವವರು ಪ್ರತೀಕಾಲಂಬನರು. ಅವರು ಪರಬ್ರಹ್ಮನ ಬಳಿಗೆ ಹೋಗುವುದಿಲ್ಲ. ಇದು ರಾಮಾನುಜಭಾಷ್ಯದ ವಿಶೇಷಾಂಶ.

**ಇಲ್ಲಿಗೆ ನಾಲ್ಕನೆಯ ಅಧ್ಯಾಯದ ಮೂರನೆಯ ಪಾದ ಮುಗಿಯಿತು.**

### ಶ್ರೀಮದಾನಂದತೀರ್ಥ ರಚಿತವಾದ

# ಬ್ರಹ್ಮಸೂತ್ರಭಾಷ್ಯ

## ನಾಲ್ಕನೆಯ ಅಧ್ಯಾಯದ ನಾಲ್ಕನೆಯ ಪಾದ

## ೧. ಸಂಪದ್ಯಾಧಿಕರಣಮ್

ಭೋಗಮಾಹಾಸ್ಮಿನ್ ಪಾದೇ ।

**॥ ಓಂ ಸಂಪದ್ಯಾವಿಹಾಯ ಸ್ವೇನ ಶಬ್ದಾತ್ ಓಂ ॥ ೧ ॥**

'ಸ ಯ ಏವಂವಿದೇವಂ ಮನ್ವಾನ ಏವಂ ಪಶ್ಯನ್ನಾತ್ಮಾನಮಭಿಸಂಪದ್ಯೈತೇನಾತ್ಮನಾ ಯಥಾಕಾಮಂ ಸರ್ವಾನ್ ಕಾಮಾನನುಭವತಿ'

ಇತಿ ಸೌಪರ್ಣಶ್ರುತಿಃ ।

'ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' (ಛಾಂ.ಉ. 8.3.4) ಇತಿ ಚ ।

'ಏತಂ ಸೇತುಂ ತೀರ್ತ್ವಾಽಂಧಃ ಸನ್ನನಂಧೋ ಭವತಿ' (ಛಾಂ.ಉ. 8.4.2) ಇತಿ ಚ ।

ತತ್ರ ತರಣಂ ನಾಮ ತತ್ಪ್ರಾಪ್ತಯೇಽನ್ಯತರಣಮೇವ ।

'ಇಮಾಂ ಘೋರಾಮಶಿವಾಂ ನದೀಂ ತೀರ್ತ್ವೈತಂ ಸೇತುಮಾಪ್ಯ ಏತೇನೈವ ಸೇತುನಾ ಮೋದತೇ ಪ್ರಮೋದತ ಆನಂದೀಭವತಿ'

ಇತಿ ಮೌದ್ಗಲ್ಯಶ್ರುತೇಃ ॥

ನಾಲ್ಕು ಫಲಗಳಲ್ಲಿ ಈವರೆಗೆ ಮೂರು ಪಾದಗಳಲ್ಲಿ ಮೂರುಫಲಗಳನ್ನು ಹೇಳಿ ಈ ಪಾದದಲ್ಲಿ ಭೋಗರೂಪವಾದ ಫಲವನ್ನು ಹೇಳುತ್ತಾರೆ.

ಪರಬ್ರಹ್ಮನನ್ನು ಪೂರ್ವೋಕ್ತರೀತಿಯಿಂದ ತಿಳಿದು, ಅದೇ ರೀತಿಯಿಂದ ಉಪಾಸನೆ ಮಾಡಿ, ಉಪಾಸನೆ ಮಾಡಿದ ರೀತಿಯಲ್ಲೇ ನೋಡಿ, ಪರಮಾತ್ಮನನ್ನು ಹೊಂದಿ, ಆ ಪರಮಾತ್ಮನಿಂದಲೇ ಸರ್ವಾಭೀಷ್ಟಗಳನ್ನೂ ಅನುಭವಿಸುತ್ತಾನೆ. ಹೀಗೆ ಸೌಪರ್ಣ ಶ್ರುತಿಯು ಹೇಳುತ್ತದೆ.

''ಶ್ರೇಷ್ಠಪ್ರಕಾಶರೂಪನಾದ ಪರಮಾತ್ಮನನ್ನು ಸಮೀಪಿಸಿ ತನ್ನ ನಿಜರೂಪದಿಂದ ಸಾಧಕನು ಅಭಿವ್ಯಕ್ತನಾಗುತ್ತಾನೆ'' ಎಂದೂ ಶ್ರುತಿ ಇದೆ. ''ತೀರ್ತ್ವಾ=ದಾಟಿ ಅಂಧಃ ಸನ್=ಅಜ್ಞಾನಿಯಾಗಿದ್ದವನು ಏತಂ ಸೇತುಂ=ಈ ಜಗದ್ಧಾರಕನಾದ ಪರಬ್ರಹ್ಮನನ್ನು ಹೊಂದಿ ಅನಂಧೋ ಭವತಿ=ಅವಿದ್ಯೆಯಿಂದ ಮುಕ್ತನಾಗಿ ಪೂರ್ಣಜ್ಞಾನಿಯಾಗುತ್ತಾನೆ. ಈ ಶ್ರುತಿಯಲ್ಲಿ 'ತೀರ್ತ್ವಾ' ಎಂದು ಹೇಳಿದ 'ತರಣ' ಎಂದರೆ ಬ್ರಹ್ಮಪ್ರಾಪ್ತಿಗಾಗಿ ಸಂಸಾರದ ತರಣ.

ಮೌದ್ಗಲ್ಯ ಶ್ರುತಿ ಹೀಗಿದೆ—ಈ ಅಶಿವಾಂ=ಅಮಂಗಲವಾದ, ಘೋರಾಂ= ಭಯಂಕರವಾದ ಸಂಸಾರ ನದಿಯನ್ನು ತೀರ್ತ್ವಾ=ದಾಟಿ, ಸೇತುಂ=ಜಗದ್ಧಾರಕನಾದ ಬ್ರಹ್ಮನನ್ನು ಹೊಂದಿ ಅನೇನೈವ ಸೇತುನಾ=ತನಗೆ ಮೋಕ್ಷಪ್ರದನಾದ ಬ್ರಹ್ಮನಿಂದಲೇ (ಅವನನ್ನು ಮೀರದೆ) ಮೋದತೇ=ಸಾಮಾನ್ಯವಿಷಯಾನುಭವ ಜನ್ಯವಾದ ಸುಖವನ್ನು ಅನುಭವಿಸುತ್ತಾನೆ, ಪ್ರಮೋದತೇ=ಉತ್ಕೃಷ್ಟವಿಷಯಗಳ ಅನುಭವದಿಂದಾದ ಆನಂದ ವನ್ನು ಅನುಭವಿಸುತ್ತಾನೆ. ಆನಂದೀಭವತಿ=ಸ್ವರೂಪಾನಂದವನ್ನು ಅನುಭವಿಸುತ್ತಾನೆ.

**ವಿವರಣೆ**—ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ ಈ ಮೂರು ಜ್ಞಾನಫಲಗಳನ್ನು ಮೂರು ಪಾದಗಳಲ್ಲಿ ಹೇಳಿ ಈ ಪಾದದಲ್ಲಿ ಭೋಗಾಖ್ಯಫಲವನ್ನು ನಿರೂಪಿಸಲಾಗಿದೆ. ''ಉಕ್ತಪ್ರಕಾರದ್ವಯೇನ ಪರಂ ಬ್ರಹ್ಮ ಪ್ರಾಪ್ತಾನಾಂ, ಪ್ರಲಯೇ ಪ್ರಾಗುಕ್ತಪ್ರಕಾರೇಣ ಪ್ರವಿಷ್ಟಾನಾಂ, ಸ್ವರೂಪಾನಂದಾನುಭಾವಿನಾಂ, ಸರ್ಗೇ ನಿರ್ಗತಾನಾಂ ಮುಕ್ತಾನಾಂ ಬಹುವಿಧಾನಂದಭೋಗಮಾಹ ಅಸ್ಮಿನ್ ಪಾದೇ'' ಎಂದು ತತ್ತ್ವಪ್ರದೀಪಿಕಾದಲ್ಲಿದೆ. ಪ್ರಲಯದಲ್ಲಿ ಭಗವಂತನ ಉದರದಲ್ಲಿದ್ದ ಮುಕ್ತರು ಸೃಷ್ಟಿಕಾಲದಲ್ಲಿ ಹೊರಬಂದು ವೈಕುಂಠಾದಿಲೋಕಗಳಲ್ಲಿ ಆನಂದವನ್ನು ಅನುಭವಿಸುವ ಕ್ರಮವನ್ನು ಈ ಪಾದದಲ್ಲಿ ಹೇಳುತ್ತಾರೆ, ಎಂದರ್ಥ.

'ಏತಂ ಸೇತುಂ ತೀರ್ತ್ವಾ' (ಛಾಂ.8.4.2) ಎಂದು ಛಾಂದೋಗ್ಯದಲ್ಲಿ 'ಜಗದಾಧಾರನಾದ (ಸೇತುಂ) ಪರಮಾತ್ಮನನ್ನು ಮೀರಿ ಮುಕ್ತನು ಅನಂಧೋ ಭವತಿ=ದುಃಖಾದಿ ದೋಷಗಳನ್ನು ಕಳೆದುಕೊಳ್ಳುವನು' ಎಂದಿದೆ. ಸೂತ್ರದಲ್ಲಿ 'ಪರಂ ಅವಿಹಾಯ' ಎಂದಿದೆ. ವಿರೋಧಪರಿಹಾರ ಹೇಗೆ? ಶಬ್ದಾತ್='ಇಮಾಂ ಘೋರಾಮ್' ಎಂಬ ಶ್ರುತಿಯಲ್ಲಿ 'ಸೇತುಂ ಆಪ್ಯ, ಏತೇನ ಸೇತುನೈವ' ಎಂದು ಸ್ಪಷ್ಟವಾಗಿ ಪರಬ್ರಹ್ಮನನ್ನು ಹೊಂದಿ ಅವನಿಂದಲೇ 'ಮೋದತೇ' ಎಂದಿದೆ. ಅದಕ್ಕೆ ಅನುಸಾರವಾಗಿ 'ಸೇತುಂ ತೀರ್ತ್ವಾ' ಎನ್ನುವುದಕ್ಕೆ ತೀರ್ತ್ವಾ=ಸಂಸಾರವನ್ನು ದಾಟಿ, ಸೇತುಂ ಪ್ರಾಪ್ಯ=ಪರಮಾತ್ಮನನ್ನು ಹೊಂದಿ, ಎಂದೇ ಅರ್ಥವನ್ನು ಮಾಡಬೇಕು.

ಈ ವಿಷಯವು ''ಸೇತುಂ ತೀರ್ತ್ವಾ'' ಇತ್ಯಾದಿಶ್ರುತೇಃ ತಮತಿಕ್ರಮ್ಯ ಭುಂಕ್ತೇ ಇತಿ ನಾಶಂಕನೀಯಮ್ ಇತಿ 'ಅವಿಹಾಯ' ಇತಿ ಮೌದ್ಗಲ್ಯಶ್ರುತಿಂ ಸೂಚಯತಿ' ಎಂಬ ತತ್ತ್ವಪ್ರದೀಪಿಕಾವಾಕ್ಯದಿಂದ ತಿಳಿಯುತ್ತದೆ.

ಸುಖಂ ಸ್ವರೂಪಭೂತಂ ಯತ್ ಆನಂದ ಇತಿ ಕೀರ್ತಿತಮ್ ।
ಮುನ್ನಾಮ ವಿಷಯೋತ್ಥಂ ಯತ್ ಪ್ರಕೃಷ್ಟವಿಷಯಾತ್ ಪ್ರಮುತ್ ॥

ಈ ಮಹಾಸಂಹಿತಾವಚನದಂತೆ ಮೋದ–ಪ್ರಮೋದ–ಆನಂದ ಶಬ್ದಗಳ ಅರ್ಥವನ್ನು ತತ್ತ್ವಪ್ರದೀಪಿಕಾದಲ್ಲಿ ಹೇಳಲಾಗಿದೆ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ಸಂಪದ್ಯಾವಿಹಾಯ ಸ್ವೇನ ಶಬ್ದಾತ್ ಓಂ ॥** (ಅತ್ರ ಮುಕ್ತಾನಾಂ ಬ್ರಹ್ಮಾನತಿಕ್ರಮೇಣೈವ ಭೋಗಃ ಸಾಧ್ಯತೇ । ಪರಮಿತ್ಯಸ್ತಿ ।

ಜ್ಞಾನೀ ಪರಂ=ಬ್ರಹ್ಮ ಸಂಪದ್ಯ=ಪ್ರಾಪ್ಯ ಅವಿಹಾಯ ಪರಂ=ಬ್ರಹ್ಮಾನತಿಕ್ರಮ್ಯ ಸ್ವೇನ ರೂಪೇಣ, ಅವಸ್ಥಿತಃ ಸನ್ ಭೋಗಾನ್ ಭುಂಕ್ತೇ ಇತಿ ಶೇಷಃ । 'ಇಮಾಂ ಘೋರಾಮ್ ಅಶಿವಾಂ ನದೀಂ ತೀರ್ತ್ವಾ ಏತಂ ಸೇತುಮ್ ಆಪ್ಯ ಏತೇನೈವ ಸೇತುನಾ ಮೋದತೇ' ಇತ್ಯಾದಿಶ್ರುತೇರಿತ್ಯರ್ಥಃ । ಏತತ್ ಶ್ರುತ್ಯನುರೋಧೇನ ಪ್ರಾಗುಕ್ತಸಾಮಾನ್ಯಶ್ರುತೇಃ ಅರ್ಥೋ ವಾಚ್ಯಃ ಇತ್ಯರ್ಥಃ ।)

ಈ ಅಧಿಕರಣದಲ್ಲಿ ಮುಕ್ತರು ಬ್ರಹ್ಮನ ಅಧೀನರಾಗಿದ್ದುಕೊಂಡೇ ಸುಖಭೋಗವನ್ನು ಅನುಭವಿಸುತ್ತಾರೆ, ಎಂದು ಸಾಧಿಸಲಾಗಿದೆ. ಜ್ಞಾನಿಯು, ಸಂಪದ್ಯ=ಪರಬ್ರಹ್ಮನ ಬಳಿ ಹೋಗಿ ಪರಂ ಅವಿಹಾಯ=ಪರಮಾತ್ಮನನ್ನು ಅತಿಕ್ರಮಿಸದೆಯೇ ಸ್ವೇನ=ತನ್ನ ನಿಜರೂಪದಲ್ಲಿದ್ದು ಭೋಗವನ್ನು ಅನುಭವಿಸುತ್ತಾನೆ. ಶಬ್ದಾತ್=ಹಾಗೆ ಹೇಳುವ ಶ್ರುತಿ ಇರುವುದರಿಂದ.

ಸೂತ್ರದ ಸಂಪದ್ಯ ಎಂಬ ಪದದಿಂದ ಆ ಶಬ್ದಘಟಿತವಾದ ''ಸ ಏವಂವಿತ್...'' ಇತ್ಯಾದಿಶ್ರುತಿಯೂ, ಸ್ವೇನ ಪದದಿಂದ ''ಪರಂಜ್ಯೋತಿಃ ಉಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂಬ ಶ್ರುತಿಯೂ ಸೂಚಿತವಾಗಿದೆ.

**ಇಲ್ಲಿಗೆ ಸಂಪದ್ಯಾಧಿಕರಣವು ಮುಗಿಯಿತು**

# ೨. ಮುಕ್ತಾಧಿಕರಣಮ್

## ॥ ಓಂ ಮುಕ್ತಃ ಪ್ರತಿಜ್ಞಾನಾತ್ ಓಂ ॥ ೨ ॥

**ಮುಕ್ತ ಏವ ಚಾತ್ರೋಚ್ಯತೇ ।**

**'ಅಹರಹರೇನಮನುಪ್ರವಿಶತ್ಯುಪಸಂಕ್ರಮೇ ಚ ನ ತತ್ರ ಮೋದತೇ ನ ಪ್ರಮೋದತೇ ನ ಕಾಮಾನನುಭವತಿ ಬದ್ಧೋ ಹ್ಯೇಷ ತದಾ ಭವತ್ಯಥ ಯದ್ಯೈನಂ ಮುಕ್ತೋಽನುಪ್ರವಿಶತಿ ಮೋದತೇ ಚ ಪ್ರಮೋದತೇ ಚ ಕಾಮಾಂಶ್ಚೈವಾನುಭವತಿ ಕಾಮಾಂಶ್ಚೈವಾನುಭವತಿ' ಇತಿ ಬೃಹಚ್ಛ್ರುತೌ ಪ್ರತಿಜ್ಞಾನಾತ್ ॥**

ಹಿಂದಿನ ಸೂತ್ರದಲ್ಲಿ ಸೂಚಿತವಾದ ''ಸ್ವೇನ ರೂಪೇಣಾಭಿನಿಷ್ಪದ್ಯತೇ, ಸ ಉತ್ತಮಃ ಪುರುಷಃ, ಸ ತತ್ರ ಪರ್ಯೇತಿ, ಜಕ್ಷನ್ ಕ್ರೀಡನ್ ರಮಮಾಣಃ'' ಎಂಬ ಶ್ರುತಿಯಲ್ಲಿ ಮುಕ್ತನೇ ಹೇಳಲ್ಪಟ್ಟಿದ್ದಾನೆ. 'ಅಹರಹಃ' ಎಂಬ ಬೃಹದಾರಣ್ಯಕಶ್ರುತಿಯಲ್ಲಿ ''ಮುಕ್ತೋಽನುಪ್ರವಿಶತಿ, ಮೊದತೇ ಚ ಪ್ರಮೋದತೇ ಚ ಕಾಮಾಂಶ್ಚೈವಾನುಭವತಿ' ಎಂದು ಮುಕ್ತನೇ ಕಾಮಗಳನ್ನು ಅನುಭವಿಸುತ್ತಾನೆ, ಎಂದು ಹೇಳಿರುವುದರಿಂದ.

**ವಿವರಣೆ**—''ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣ ಅಭಿನಿಷ್ಪದ್ಯತೇ'' ಎಂದು ಪ್ರಸ್ತಾವನೆಯಲ್ಲಿ ಹೇಳಿ '' ಸ ತತ್ರ ಪರ್ಯೇತಿ'' ಎಂದು ಛಾಂದೋಗ್ಯ ಶ್ರುತಿಯಲ್ಲಿ (8.3.4) ಜಕ್ಷನ್=ತಿನ್ನುತ್ತಾ, ಕ್ರೀಡನ್=ಆಡುತ್ತಾ ರಮಮಾಣಃ= ಸ್ತ್ರೀಯರೊಂದಿಗೆ ರಮಿಸುತ್ತಾ, ಎಂದು ಮುಂತಾಗಿ ವಿಷಯಭೋಗವನ್ನು ಹೇಳಲಾಗಿದೆ. ಮುಕ್ತನಿಗೆ ಇಂದ್ರಿಯಾದಿಗಳೇ ಇಲ್ಲದಿರುವಾಗ ವಿಷಯಭೋಗವು ಸಾಧ್ಯವಿಲ್ಲ. ಮುಕ್ತಿಯಲ್ಲಿ ವಿಷಯಭೋಗವಿದ್ದಲ್ಲಿ ವಿಷಯಗಳು ಮುಗಿದಾಗ ದುಃಖವಾಗುವ ಸಾಧ್ಯತೆ ಇದೆ. ದೇಹವಿಲ್ಲದ ಅವನಿಗೆ ಕ್ರಿಯೆಯೂ ಇಲ್ಲ. ಆದ್ದರಿಂದ 'ಸ ತತ್ರ ಪರ್ಯೇತಿ' ಎಂಬ ಶ್ರುತಿಯು ಮುಕ್ತಪರವಲ್ಲ. ಅದು ದಹರವಿದ್ಯಾರೂಪ ಸಗುಣೋಪಾಸನೆಯಿಂದ ಲಭ್ಯವಾದ ಸಗುಣಮುಕ್ತಿ. ಅಲ್ಲಿ ಬ್ರಹ್ಮಪ್ರಾಪ್ತಿ ಇದ್ದರೂ ನಿದ್ರೆಯಂತೆ ಅದು ಅನಿತ್ಯಮೋಕ್ಷ. ಆತ್ಯಂತಿಕ ಮೋಕ್ಷವಲ್ಲ. ಹೀಗೆ ಪೂರ್ವಪಕ್ಷ ಬಂದಾಗ ಈ ಸೂತ್ರದಲ್ಲಿ ಬೃಹತ್ ಶ್ರುತಿಯನ್ನು ಉಲ್ಲೇಖಿಸಿ ಮೋಕ್ಷದಲ್ಲೂ ವಿಷಯಭೋಗವಿದೆ, ಕ್ರಿಯೆ ಇದೆ, ಎಂದು ಸಮರ್ಥಿಸಲಾಗಿದೆ. ಆ ಶ್ರುತಿಯಲ್ಲಿ 'ಅಹರಹಃ ಏನಂ ಅನುಪ್ರವಿಶತಿ, ಉಪಸಂಕ್ರಮೇ ಚ ನ ತತ್ರ ಮೋದತೇ

ಪ್ರಮೋದತೇ'' ಪ್ರತಿದಿನವೂ ಜೀವನು ನಿದ್ರಾಕಾಲದಲ್ಲಿ ಪರಬ್ರಹ್ಮನ ಬಳಿ ಹೋದರೂ ಪೂರ್ಣಸುಖವಿಲ್ಲ, ಎಂದು ಹೇಳಿ 'ಯದ್ಯೈನಂ ಮುಕ್ತೋಽನುಪ್ರವಿಶತಿ ಮೋದತೇ ಚ ಪ್ರಮೋದತೇ ಚ' ಎಂದು ಸ್ಪಷ್ಟವಾಗಿ ಮುಕ್ತನಾಗಿ ಪರಮಾತ್ಮನನ್ನು ಹೊಂದಿದಾಗ ಮೋದ, ಪ್ರಮೋದಗಳನ್ನು ಹೇಳಲಾಗಿದೆ.

ತತ್ತ್ವಪ್ರದೀಪದಲ್ಲಿ, ಬೃಹಚ್ಛ್ರುತಿಯಲ್ಲಿ ಹೇಳಲಾದ ''ಕಾಮಾಂಶ್ಚೈವಾನುಭವತಿ'' ಎಂಬ ಕಾಮಾನುಭವವನ್ನು ಮುಕ್ತ ಲಿಂಗವಾಗಿ ಪರಿಗಣಿಸಲಾಗಿದೆ. ''ಕಾಮಿತಾನೇವ ಅನುಭವತಿ ನೇತರಾನ್। ಕಾಮಿತಾನನುಭವತ್ಯೇವ ಚ।'' ಎಂದು ಅದರ ಅರ್ಥ. ಸಂಸಾರದಲ್ಲಿ ಕಾಮಿತವಾದುದನ್ನೇ ಅನುಭವಿಸುವ ನಿಯಮವಿಲ್ಲ. ಅಕಾಮಿತವಾದ ದುಃಖಾದ್ಯನುಭವವೂ ಇದೆ. ಮೋಕ್ಷದಲ್ಲಿ ಕಾಮಿತವೇ ಅನುಭವಕ್ಕೆ ಬರುತ್ತದೆ. ಸಂಸಾರದಲ್ಲಿ ಕಾಮಿತವಾದುದು ಸಿಗುತ್ತದೆ, ಎಂಬ ನಿಯಮವೂ ಇಲ್ಲ. ಆದರೆ, ಮೋಕ್ಷದಲ್ಲಿ ಕಾಮಿತವಾದುದೆಲ್ಲವೂ ಸಿಗುತ್ತದೆ. ವಿಷಯಗಳು ಇಲ್ಲದಿದ್ದಾಗಲೂ ಸ್ವರೂಪಸುಖವು ಇರುವುದರಿಂದ ದುಃಖವಾಗುವ ಪ್ರಸಂಗವೂ ಇಲ್ಲ.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಓಂ ಮುಕ್ತಃ ಪ್ರತಿಜ್ಞಾನಾತ್ ಓಂ ॥** (ಅತ್ರ ಬ್ರಹ್ಮ ಪ್ರಾಪ್ಯ ತದವಿಹಾಯ ಭೋಗಾನ್ ಭುಂಜಾನಸ್ಯ ಮುಕ್ತತ್ವಂ ಸಾಧ್ಯತೇ। ''ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್' ಇತ್ಯತ್ರ ಮುಕ್ತಃ ಉಚ್ಯತೇ। ನತು ಕ್ರಿಯಾಪ್ರತೀತ್ಯಾ ಸಂಸಾರೀ। ಕುತಃ ? ''ಅಥ ಯದ್ಯೈನಂ' ಇತಿ ಶ್ರುತ್ಯಂತರೇ ಮುಕ್ತಸ್ಯೈವ ಏವಂವಿಧಭೋಗ ಪ್ರತಿಜ್ಞಾನಾತ್ ಇತ್ಯರ್ಥಃ। 'ಸ್ವೇನ ರೂಪೇಣಾಭಿನಿಷ್ಪದ್ಯತೇ' ಇತ್ಯುಪಕ್ರಮೇ ಸ್ಪಷ್ಟಂ ಮುಕ್ತತ್ವಸ್ಯ ಪ್ರತಿಭಾನಾತ್ ಇತಿ ಚಾರ್ಥಃ। ಶ್ರುತಿವಿರೋಧಾತ್ ಮುಕ್ತಸ್ಯ ಅಕ್ರಿಯತ್ವಂ ಬಾಧಿತಮಿತ್ಯರ್ಥಃ ॥)

ಈ ಅಧಿಕರಣದಲ್ಲಿ ಭೋಗವನ್ನು ಅನುಭವಿಸುವವನು ಮುಕ್ತನೇ ಎಂದು ಸಾಧಿಸಲಾಗಿದೆ. ''ಸ ತತ್ರ ಪರ್ಯೇತಿ'' ಎಂಬ ಬೃಹದಾರಣ್ಯಕ ಶ್ರುತಿಯಲ್ಲಿ ಹೇಳಲ್ಪಟ್ಟವನು ಮುಕ್ತನೇ, ಸಂಸಾರಿಯಲ್ಲ. 'ಅಥ ಯದ್ಯೈನಂ' ಎಂಬ ಬೃಹಚ್ಛ್ರುತಿಯಲ್ಲಿ ಮುಕ್ತನಾದವನಿಗೇ ಈ ರೀತಿಯಾದ ಭೋಗಗಳನ್ನು ಹೇಳಲಾಗಿದೆಯಾದ್ದರಿಂದ. ಸೂತ್ರದ 'ಚ' ಶಬ್ದದಿಂದ 'ಸ ತತ್ರ ಪರ್ಯೇತಿ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟವನು ಮುಕ್ತನೇ ಆಗಿರುವನು ಎನ್ನುವುದಕ್ಕೆ ಯುಕ್ತ್ಯಂತರವನ್ನು ಹೇಳಲಾಗಿದೆ. ಆ ಶ್ರುತಿಯ ಉಪಕ್ರಮವಾಕ್ಯದಲ್ಲಿ 'ಸ್ವೇನ ರೂಪೇಣ ಅಭಿನಿಷ್ಪದ್ಯತೇ'

ಎಂದಿದೆ. ಅಲ್ಲಿ ಸ್ವರೂಪಾವಿರ್ಭಾವವನ್ನು ಹೇಳಿರುವುದರಿಂದ ಅವನು ಮುಕ್ತನೇ ಎಂದು ತಿಳಿಯುತ್ತದೆ.

ಇಲ್ಲಿಗೆ ಮುಕ್ತಾಧಿಕರಣವು ಮುಗಿಯಿತು.

## ೩. ಆತ್ಮಾಧಿಕರಣಮ್

### ॥ ಓಂ ಆತ್ಮಾ ಪ್ರಕರಣಾತ್ ಓಂ ॥ ೩ ॥

**ಪರಂಜ್ಯೋತಿಃಶಬ್ದೇನ ಪರಮಾತ್ಮೈವೋಚ್ಯತೇ । ತತ್ಪ್ರಕರಣತ್ವಾತ್ ।**

**'ಪರಂಜ್ಯೋತಿಃ ಪರಂಬ್ರಹ್ಮ ಪರಮಾತ್ಮಾದಿಕಾ ಗಿರಃ ।**
**ಸರ್ವತ್ರ ಹರಿಮೇವೈಕಂ ಬ್ರೂಯುರ್ನಾನ್ಯಂ ಕಥಂಚನ ॥'**

**ಇತಿ ಚ ಬ್ರಹ್ಮಾಂಡೇ ।**

''ಪಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣ ಅಭಿನಿಷ್ಪದ್ಯತೇ'' ಎಂಬ ಛಾಂದೋಗ್ಯಶ್ರುತ್ಯುಕ್ತವಾದ ಪರಂಜ್ಯೋತಿಪದದಿಂದ ಪರಬ್ರಹ್ಮನೇ ವಾಚ್ಯನಾಗಿದ್ದಾನೆ. ''ಯ ಆತ್ಮಾ ಅಪಹತಪಾಪ್ಮಾ' ಎಂಬ ಆತ್ಮಪ್ರಕರಣದಿಂದಾಗಿ ಇದು ತಿಳಿಯುತ್ತದೆ. ಬ್ರಹ್ಮಾಂಡ ಪುರಾಣದಲ್ಲಿ ಹೀಗಿದೆ—''ಪರಂಜ್ಯೋತಿ, ಪರಂ ಬ್ರಹ್ಮ, ಪರಮಾತ್ಮಾ ಈ ಮೊದಲಾದ ಹೆಸರುಗಳು ಸರ್ವತ್ರ ಶ್ರೀಹರಿಯನ್ನೇ ಹೇಳುತ್ತವೆ, ಸರ್ವಥಾ ಮತ್ತೊಬ್ಬರನ್ನಲ್ಲ.''

**ವಿವರಣೆ**—ಛಾಂದೋಗ್ಯದಲ್ಲಿ ಪರಂಜ್ಯೋತಿಯನ್ನು ಹೊಂದಿದವನು ಕಾಮಭೋಗವನ್ನು ಮಾಡುತ್ತಾನೆ, ಎನ್ನಲಾಗಿದೆ. ಈ ಪರಂಜ್ಯೋತಿ ಸೂರ್ಯ. ''ಸೂರ್ಯಮಗನ್ಮ ಜ್ಯೋತಿರುತ್ತಮಂ' ಎಂದು ಸೂರ್ಯನಿಗೂ ಆ ಹೆಸರಿದೆ. ಹೀಗೆ ಅರ್ಥ ಮಾಡಿದಾಗ 'ಸ ತೇಜಸಿ ಸೂರ್ಯೇ ಸಂಪನ್ನಃ ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತೇ ಏವಂ ಹ್ಯೆವ ಸಃ ಪಾಪ್ಮನಾ ವಿನಿರ್ಮುಕ್ತಃ' ಎಂಬ ಷಟ್‌ಪ್ರಶ್ನಶ್ರುತಿಯ ಸಂವಾದವೂ ಸಿಗುತ್ತದೆ ಎಂದು ಈ ಸೂತ್ರದ ಪೂರ್ವಪಕ್ಷ. ಈ ಸಮಾಖ್ಯಾಕ್ಕಿಂತಲೂ ಪ್ರಕರಣವು ಪ್ರಬಲವಾದುದರಿಂದ ಪ್ರಕರಣಬಲಾತ್ ''ಪರಂ ಜ್ಯೋತಿ'' ಶಬ್ದವು ಬ್ರಹ್ಮಪರ ಎಂದು ಸಿದ್ಧಾಂತ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ಆತ್ಮಾ ಪ್ರಕರಣಾತ್ ಓಂ ॥** (ಅತ್ರ ಮುಕ್ತಪ್ರಾಪ್ಯಜ್ಯೋತಿಷಃ ಬ್ರಹ್ಮತ್ವಂ ಸಾಧ್ಯತೇ । ''ಪರಂಜ್ಯೋತಿರುಪಸಂಪದ್ಯ' ಇತಿ ಶ್ರುತಂ ಮುಕ್ತಪ್ರಾಪ್ಯಂ ಜ್ಯೋತಿಃ ಆತ್ಮಾ=ಪರಮಾತ್ಮೈವ । ನತು ಸೂರ್ಯಃ । ಕುತಃ ? ''ಯ ಆತ್ಮಾ ಅಪಹತಪಾಪ್ಮಾ' ಇತಿ ಪರಮಾತ್ಮಪ್ರಕಾರಣಾತ್, ಇತ್ಯರ್ಥಃ ।)

'ಪರಂಜ್ಯೋತಿರುಪಸಂಪದ್ಯ' ಎಂಬ ಛಂದೋಗಶ್ರುತಿಯಲ್ಲಿ ಹೇಳಲ್ಪಟ್ಟ ಜ್ಯೋತಿಯು ಆತ್ಮಾ=ಪರಮಾತ್ಮ. ಹೊರತು ಸೂರ್ಯನಲ್ಲ. ಪ್ರಕರಣಾತ್='ಯ ಆತ್ಮಾ ಅಪಹತಪಾಪ್ಮಾ' ಎಂದು ಪರಮಾತ್ಮಪ್ರಕರಣದಲ್ಲಿ ಪಠಿತವಾದುದರಿಂದ.

## ಶಾಂಕರಭಾಷ್ಯದಲ್ಲಿ ಸಂಪದ್ಯಾವಿರ್ಭಾವಾಧಿಕರಣ

ಶಾಂಕರಭಾಷ್ಯದಲ್ಲಿ ಈ ಮೂರೂ ಸೂತ್ರಗಳೂ ಸೇರಿ ಒಂದೇ ಅಧಿಕರಣ.

**॥ ಸಂಪದ್ಯಾವಿಹಾಯ ಸ್ವೇನ ಶಬ್ದಾತ್ ॥** ''ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ'' ಎಂದು ಛಾಂದೋಗ್ಯಶ್ರುತಿಯಲ್ಲಿ ಹೇಳಿರುವ ಅಭಿನಿಷ್ಪತ್ತಿಯು ಸ್ವರ್ಗಾದಿಲೋಕಗಳಿರುವಂತೆ ಆತ್ಮನಲ್ಲಿ ಉಂಟಾಗುವ ಆಗಂತುಕ ವಿಶೇಷವಲ್ಲ. 'ಸ್ವೇನ' ಎಂದು ಆತ್ಮಸ್ವರೂಪ ವಿಶೇಷಣವಿರುವುದರಿಂದ ಸಂಪದ್ಯ= ಪರಬ್ರಹ್ಮಸಂಪತ್ತಿಯಿಂದಾಗಿ ಆವಿರ್ಭಾವಃ=ಆತ್ಮಸ್ವರೂಪದ ನೈಜವಾದ ಆವಿರ್ಭಾವ, ಹೊರತು ಆಗಂತುಕವಾದ ವಿಶೇಷವಲ್ಲ. ಅಲ್ಲಿ ಶುದ್ಧಾತ್ಮನೇ ಇರುತ್ತಾನೆ. ಆರೋಪಿತವಾದ ಧರ್ಮಾಂತರಗಳು ಅವನಲ್ಲಿ ಇರುವುದಿಲ್ಲ. ರೋಗಿಯು ರೋಗಪರಿಹಾರವಾದಾಗ ''ಅರೋಗೋ ಅಭಿನಿಷ್ಪದ್ಯತೇ'' ಎಂದಂತೆ ಅಭಿನಿಷ್ಪತ್ತಿ ಶಬ್ದಪ್ರಯೋಗವನ್ನು ತಿಳಿಯಬೇಕು.

**॥ ಮುಕ್ತಃ ಪ್ರತಿಜ್ಞಾನಾತ್ ॥** ಈ ಪ್ರಕರಣೋಕ್ತನಾದವನು ಮುಕ್ತನೇ, ಏಕೆಂದರೆ ಪ್ರತಿಜ್ಞಾನಾತ್='ಏತಂ ತ್ವೇವ ತೇ ಭೂಯಃ ಅನುವ್ಯಾಖ್ಯಾಸ್ಯಾಮಿ' (ಛಾಂ.8.9.3) ಎಂದು ಮತ್ತೆ ಮತ್ತೆ ಆತ್ಮನನ್ನು ಹೇಳುತ್ತೇನೆ ಎಂದು ಈ ಪ್ರಕರಣದಲ್ಲಿ ಪ್ರತಿಜ್ಞೆ ಮಾಡಿರುವುದರಿಂದಾಗಿ. ಹಾಗೆ ಪ್ರತಿಜ್ಞೆ ಮಾಡಿ ಕೊನೆಯಲ್ಲಿ ''ಪರಂಜ್ಯೋತಿರು ಸಂಪದ್ಯ'' (8.12.3) ಎಂದು ಹೇಳಲಾಗಿದೆ. ಆದ್ದರಿಂದ ಇಲ್ಲಿ ಮುಕ್ತಾತ್ಮನನ್ನೇ ಹೇಳಲಾಗಿದೆ.

**॥ ಆತ್ಮಾ ಪ್ರಕರಣಾತ್ ॥** ಇಲ್ಲಿ ಹೇಳಲಾಗಿರುವ ಪರಂಜ್ಯೋತಿಯು ಪ್ರಾಕೃತಜ್ಯೋತಿಯಲ್ಲ. ಪರಬ್ರಹ್ಮನೇ. ಪ್ರಕರಣಾತ್='ಯ ಆತ್ಮಾ ಅಪಹತಪಾಪ್ಮಾ'

ಎಂದು ಆರಂಭವಾಗುವುದರಿಂದ ಇದು ಆತ್ಮಪ್ರಕರಣ. ಅದರಿಂದಾಗಿ ಆ ಪ್ರಕರಣಪಠಿತಜ್ಯೋತಿಯೂ ಪರಬ್ರಹ್ಮನೇ, ಪ್ರಾಕೃತ ಜ್ಯೋತಿಯಲ್ಲ.

**ವಿಮರ್ಶೆ**—ಈ ಅಧಿಕರಣದಲ್ಲಿ ನಿರ್ಗುಣಬ್ರಹ್ಮೋಪಾಸನೆಯ ಫಲವನ್ನು ಹೇಳಲಾಗಿದೆ. ಅದರ ಫಲ ಬ್ರಹ್ಮಭಾವ. ಆದರೆ ಇಲ್ಲಿ ''ಪರಂಜ್ಯೋತಿಃ ಉಪಸಂಪದ್ಯ'' ಎಂದು ಬ್ರಹ್ಮಭಾವವನ್ನು ಹೇಳಿ ಆ ಮೇಲೆ 'ಸ್ವೇನ ರೂಪೇಣ ಅಭಿನಿಷ್ಪತ್ತಿ=ಬ್ರಹ್ಮರೂಪೇಣ ಅಭಿವ್ಯಕ್ತಿಯನ್ನು' ಹೇಳಲಾಗಿದೆ. ಕ್ತ್ವಾ ಪ್ರತ್ಯಯದಿಂದ ಒಂದು ಮೊದಲು ಇನ್ನೊಂದು ಆಮೇಲೆ ಎಂದು ತಿಳಿಯುತ್ತದೆ. ಆದರೆ, ಅವೆರಡೂ ಒಂದೇ ಆದಕಾರಣ ಈ ಪೌರ್ವಾಪರ್ಯವು ಕೂಡುವುದಿಲ್ಲ. ಉಪಸಂಪದ್ಯಶಬ್ದಕ್ಕೆ ಪ್ರಾಪ್ಯ=ಬ್ರಹ್ಮನ ಬಳಿ ಹೋಗಿ, ಎಂಬ ಅರ್ಥವನ್ನು ಹೇಳಲಾಗದು. ನಿರ್ಗುಣ ಮುಕ್ತಿಯಲ್ಲಿ ಪ್ರಾಪ್ತಿ ಎಂಬುದೇ ಇಲ್ಲ. ಬ್ರಹ್ಮ ಸರ್ವಗತನಾದುದರಿಂದ.

**ರಾಮಾನುಜಭಾಷ್ಯದಲ್ಲೂ** ಅಧಿಕರಣವ್ಯವಸ್ಥೆ ಮತ್ತು ಪ್ರಥಮಸೂತ್ರಾರ್ಥ ಶಾಂಕರಭಾಷ್ಯದಂತೆಯೇ. ಆದರೆ, ಬ್ರಹ್ಮಸ್ವರೂಪಾವಿರ್ಭಾವ ಶಾಂಕರಮೋಕ್ಷವಾದರೆ ಕರ್ಮಾದಿಗಳಿಂದ ಪ್ರತಿಬದ್ಧವಾದ ಆತ್ಮಸ್ವರೂಪಾವಿರ್ಭಾವ ರಾಮಾನುಜದರ್ಶನದಲ್ಲಿ ಮೋಕ್ಷ. ಸ್ವರೂಪವು ಜ್ಞಾನರೂಪವಾದ ಕಾರಣ, ಅನುಕೂಲವೇದನವೇ ಆನಂದವಾದುದರಿಂದ ಆನಂದವು ನಿತ್ಯಪ್ರಾಪ್ತವಾಗಿದೆ. ಸ್ವರೂಪಾವಿರ್ಭಾವ ಹೇಗೆ? ಅದಕ್ಕೆ ಎರಡನೆಯ ಸೂತ್ರ ಉತ್ತರ. ಮುಕ್ತಃ=ಕರ್ಮಸಂಬಂಧ ಮತ್ತು ಕರ್ಮಕೃತದೇಹಸಂಬಂಧದಿಂದ ಮುಕ್ತನಾದ ಜೀವನನ್ನೇ ಶ್ರುತಿ ''ಸ್ವೇನ ರೂಪೇಣ ಅಭಿನಿಷ್ಪದ್ಯತೇ' ಎಂದಿದೆ. ಪ್ರತಿಜ್ಞಾನಾತ್=ಛಾಂದೋಗ್ಯದ ಈ ಪ್ರಕರಣದಲ್ಲಿ ಅಂತಹ ಆತ್ಮರೂಪವೇ ಪ್ರತಿಪಾದ್ಯತಯಾ ಪ್ರತಿಜ್ಞಾತವಾಗಿದೆ— ''ಏತಂ ತ್ವೇವ ತೇ ಭೂಯೋಽನುವ್ಯಾಖ್ಯಾಸ್ಯಾಮಿ'' ಎಂದು. ಈ ಪ್ರಕರಣ ಆತ್ಮಪ್ರಕರಣವೆಂದು 'ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು'(1.3.18) ಎಂಬ ಸೂತ್ರದಲ್ಲಿ ಹೇಳಲಾಗಿದೆ. ಶೌನಕವಚನ ಹೇಳುತ್ತದೆ—

ಯಥಾ ನ ಕ್ರಿಯತೇ ಜ್ಯೋತ್ಸ್ನಾ ಮಲಪ್ರಕ್ಷಾಲನ್ಮಾಣೇಃ ।
ದೋಷಪ್ರಹಾಣಾನ್ನ ಜ್ಞಾನಮಾತ್ಮನಃ ಕ್ರಿಯತೇ ತಥಾ ॥

ಮಣಿಯನ್ನು ತೊಳೆದಾಗ ಮಣ್ಣು ಹೋಗಿ ಪ್ರಕಾಶವಾಗುವಂತೆ ಆತ್ಮನ ದೋಷನಾಶವಾದಾಗ ಜ್ಞಾನಜ್ಯೋತಿಯು ಬೆಳಗುತ್ತದೆ.

**ಇಲ್ಲಿಗೆ ಆತ್ಮಾಧಿಕರಣವು ಮುಗಿಯಿತು.**

## ೪. ಅವಿಭಾಗಾಧಿಕರಣಮ್

### ।। ಓಂ ಅವಿಭಾಗೇನ ದೃಷ್ಟತ್ವಾತ್ ಓಂ ।। ೪ ।।

ಯೇ ಭೋಗಾಃ ಪರಮಾತ್ಮನಾ ಭುಜ್ಯಂತೇ ತ ಏವ ಮುಕ್ತೈರ್ಭುಜ್ಯಂತೇ ।

'ಯಾನೇವಾಹಂ ಶೃಣೋಮಿ ಯಾನ್ ಪಶ್ಯಾಮಿ ಯಾನ್ ಜಿಘ್ರಾಮಿ ತಾನೇವೈತ ಇದಂ ಶರೀರಂ ವಿಮುಚ್ಯಾನುಭವಂತಿ' ಇತಿ ದೃಷ್ಟತ್ವಾಚ್ಚತುರ್ವೇದಶಿಖಾಯಾಮ್ ।

ಭವಿಷ್ಯತ್ಪುರಾಣೇ ಚ-

'ಮುಕ್ತಾಃ ಪ್ರಾಪ್ಯ ಪರಂ ವಿಷ್ಣುಂ ತದ್‌ಭೋಗಾನ್ ಲೇಶತಃ ಕ್ವಚಿತ್ ।
ಬಹಿಷ್ಠಾನ್ ಭುಂಜತೇ ನಿತ್ಯಂ ನಾऽನಂದಾದೀನ್ ಕಥಂಚನ ।।' ಇತಿ ।

ಯಾವ ಭೋಗ್ಯವಸ್ತುಗಳನ್ನು ಪರಮಾತ್ಮನು ಅನುಭವಿಸುವನೋ ಅವುಗಳನ್ನೇ (ಸಾಯುಜ್ಯ) ಮುಕ್ತರೂ ಭೋಗಿಸುತ್ತಾರೆ. ಚತುರ್ವೇದ ಶಿಖೆಯಲ್ಲಿ ಹಾಗೆಯೇ ಇದೆ— ಏನನ್ನು ನಾನು ಕೇಳುವೆನೋ, ಯಾವುದನ್ನು ನೋಡುವೆನೋ, ಯಾವುದನ್ನು ಮೂಸುವೆನೋ ಅವುಗಳನ್ನೇ, ಈ ಶರೀರವನ್ನು ತೊರೆದು ಮುಕ್ತರು ಅನುಭವಿಸುತ್ತಾರೆ'' (ಇದು ಭಗವದ್ವಾಕ್ಯ) ಭವಿಷ್ಯತ್ ಪುರಾಣದಲ್ಲೂ ಇದೆ. 'ಮುಕ್ತರು ಭಗವಂತನನ್ನು ಹೊಂದಿ ಭಗವಂತನಿಂದ ಭೋಗ್ಯವಾದ ಬಾಹ್ಯವಿಷಯ ಪದಾರ್ಥಗಳನ್ನು ಅಲ್ಪವಾಗಿ ಸದಾ ಭೋಗಿಸುತ್ತಾರೆ. ಆದರೆ ಭಗವಂತನ ಆನಂದಾದಿ ಗುಣಗಳ ಭೋಗ ಅವರಿಗಿಲ್ಲ.'

**ವಿವರಣೆ**—ಇಲ್ಲಿ ಹೇಳಿರುವ ಭೋಗ ಸಾಯುಜ್ಯಮುಕ್ತರಿಗೆ ಮಾತ್ರ. ಸಾಲೋಕ್ಯ, ಸಾಮೀಪ್ಯ ಮುಕ್ತಿಯನ್ನು ಹೊಂದಿದವರಿಗೆ ಅಲ್ಲ. ಭೋಗವೆಂದರೆ ವಿಷಯ ಪದಾರ್ಥಗಳ ಅನುಭವ. ಅದರಿಂದ ಸ್ವರೂಪಸುಖವು ವ್ಯಕ್ತವಾಗುತ್ತದೆ. ಇದು ಜ್ಞಾನೋತ್ತರಾನುಷ್ಠಿತವಾದ ಕರ್ಮದ ಫಲ. ಪ್ರಮೇಯದೀಪಿಕಾದಲ್ಲಿ ಹಾಗೆ ಹೇಳಲಾಗಿದೆ– ಜ್ಞಾನೋತ್ತರಾನುಷ್ಠಿತ ನಿವೃತ್ತಕರ್ಮಣಾ ಪ್ರಸನ್ನಃ ಪರಮೇಶ್ವರಃ ಮುಕ್ತೌ ವಿಷಯಾನ್ ಉತ್ಪಾದ್ಯ ತದ್ಭೋಗೇನ ಜ್ಞಾನಾನಭಿವ್ಯಕ್ತಮಪಿ ಸ್ವರೂಪಸುಖಂ ವ್ಯಕ್ತೀಕರೋತಿ ।।' (ಪ್ರ.ದೀ.ಗೀತಾ.2)

ಭಗವಂತನು ಭೋಗಿಸುವ ವಿಷಯಗಳನ್ನೇ ಮುಕ್ತರೂ ಭೋಗಿಸುತ್ತಾರೆ

ಎನ್ನುವುದಕ್ಕೆ ತತ್ತ್ವಪ್ರದೀಪದಲ್ಲಿ ಈ ದೃಷ್ಟಾಂತವನ್ನು ಕೊಡಲಾಗಿದೆ— ರಾಜನು ನೋಡುವ ನೃತ್ಯಗಳನ್ನು ಸಂಗೀತಗಳನ್ನೂ ಮಂತ್ರಿಗಳೂ ನೋಡಿ ಕೇಳಿ ಆನಂದಿಸುತ್ತಾರೆ. ಅದರಂತೆ ಮುಕ್ತರೂ ಭಗವಂತ ನೋಡುವ ಕೇಳುವ ವಿಷಯಗಳನ್ನು ತಾವೂ ನೋಡಿ ಕೇಳಿ ತಮ್ಮ ಯೋಗ್ಯತೆಗೆ ತಕ್ಕಂತೆ ವ್ಯಕ್ತವಾದ ಆನಂದವನ್ನು ಅನುಭವಿಸುತ್ತಾರೆ. ಆದರೆ ಅಂತಃಪುರಸುಖ ರಾಜನಿಗೇ ಮೀಸಲು, ಮಂತ್ರಿಗಳಿಗಿಲ್ಲ. ಅದರಂತೆ ಪರಮಾತ್ಮ ಮಾತ್ರ ಕೆಲವು ಭೋಗ್ಯಗಳನ್ನು ಲೀಲೆಗಾಗಿ ಅನುಭವಿಸುತ್ತಾನೆ. ಅವುಗಳ ಭೋಗ ಮುಕ್ತರಿಗಿಲ್ಲ.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**॥ ಓಂ ಅವಿಭಾಗೇನ ದೃಷ್ಟತ್ವಾತ್ ಓಂ ॥** (ಅತ್ರ ಸಾಯುಜ್ಯಭಾಜಾಂ ಈಶಭುಕ್ತ ಭೋಗವತ್ತ್ವಂ ಸಾಧ್ಯತೇ । ಅವಿಭಾಗೇನ=ಪರಮಾತ್ಮಭೋಗಾವಿಭಾಗೇನ ಸಾಯುಜ್ಯ ಭಾಜೋ ಭೋಗಾನ್ ಭುಂಜತೇ। ತದ್ಭೋಗಾನೇವ ಕಾಂಶ್ಚಿದ್ ಭುಂಜತೇ, ನ ಪಾರ್ಥಕ್ಯೇನ ಇತಿ ಯಾವತ್ । ಕುತಃ? ದೃಷ್ಟತ್ವಾತ್? ''ಯಾನೇವಾಹಂ ಶೃಣೋಮಿ'' ಇತ್ಯಾದಿಶ್ರುತೌ ತಥಾ ದೃಷ್ಟತ್ವಾತ್ ಇತ್ಯರ್ಥಃ ।)

ಈ ಅಧಿಕರಣದಲ್ಲಿ ಸಾಯುಜ್ಯಮುಕ್ತರಿಗೆ ಈಶಭುಕ್ತವಾದ ವಿಷಯಪದಾರ್ಥಗಳ ಭೋಗವನ್ನು ಸಾಧಿಸಲಾಗಿದೆ. ಅವಿಭಾಗೇನ=ಇದು ಪರಮಾತ್ಮನದು,ಇದು ಮುಕ್ತರದು ಎಂಬ ವಿಭಾಗವಿಲ್ಲದೆ ಸಾಯುಜ್ಯಮುಕ್ತರು ವಿಷಯಗಳನ್ನು ಅನುಭವಿಸುತ್ತಾರೆ. ಏಕೆಂದರೆ–ದೃಷ್ಟತ್ವಾತ್ । ಶ್ರುತಿಯು ಇರುವುದರಿಂದಾಗಿ ಇದನ್ನು ಅಂಗೀಕರಿಸಬೇಕು.

## ಶಾಂಕರಭಾಷ್ಯದಲ್ಲಿ ಅವಿಭಾಗಾಧಿಕರಣ

**॥ ಅವಿಭಾಗೇನ ದೃಷ್ಟತ್ವಾತ್ ॥** 'ಪರಂಜ್ಯೋತಿಃ ಉಪಸಂಪದ್ಯ' ಎಂಬ ಮುಕ್ತಿಯನ್ನು ನಿರೂಪಿಸುವ ಶ್ರುತಿಯಲ್ಲಿ ಮುಕ್ತನಿಗೂ ಬ್ರಹ್ಮನಿಗೂ ಭೇದವು ತಿಳಿಯುತ್ತಿದ್ದರೂ ಮುಕ್ತರು ಪರಬ್ರಹ್ಮನಿಂದ ಅವಿಭಾಗೇನ=ಅಭಿನ್ನರಾಗಿಯೇ ಇರುತ್ತಾರೆ. 'ಅಹಂ ಬ್ರಹ್ಮಾಸ್ಮಿ' 'ತತ್ತ್ವಮಸಿ' ಮುಂತಾದ ವಾಕ್ಯಗಳು ಜೀವ–ಬ್ರಹ್ಮರಿಗೆ ಅಭೇದವನ್ನೇ ತಿಳಿಸುತ್ತವೆ. ಆದ್ದರಿಂದ ಸಾಧಕರು ಹಾಗೆಯೇ ಉಪಾಸನೆ ಮಾಡುತ್ತಾರೆ. ಯಥಾಕ್ರತುನ್ಯಾಯದಂತೆ ಮೋಕ್ಷದಲ್ಲೂ ಅಭೇದವೇ ಬರುತ್ತದೆ. (ಇದು 'ದೃಷ್ಟತ್ವಾತ್' ಎಂಬ ಸೂತ್ರಪದದ ಅರ್ಥ.) ದೃಷ್ಟತ್ವಾತ್='ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ'' ಎಂಬ ಕಾಠಕವಾಕ್ಯದಲ್ಲೂ ಅಭೇದಪ್ರಾಪ್ತಿಯೇ ಮೋಕ್ಷವೆಂದಿದೆ.

**ವಿಮರ್ಶೆ**—'ತಾದೃಗೇವ ಭವತಿ' ಎಂಬ ಕಾಠಕವಾಕ್ಯದಲ್ಲಿ ಪರಬ್ರಹ್ಮ

ಸಾಮ್ಯವನ್ನಷ್ಟೇ ಹೇಳಲಾಗಿದೆ. ಏವಕಾರದಿಂದ ಐಕ್ಯವನ್ನು ನಿಷೇಧಿಸಲಾಗಿದೆ. ಆದ್ದರಿಂದ ಮೋಕ್ಷದಲ್ಲಿ ಅಭೇದ ದೃಷ್ಟ=ಶ್ರುತ್ಯುಕ್ತ ಎನ್ನುವುದು ಸರಿಯಲ್ಲ.

## ರಾಮಾನುಜಭಾಷ್ಯದಲ್ಲಿ ಅವಿಭಾಗೇನ ದೃಷ್ಟತ್ವಾಧಿಕರಣ

**॥ ಅವಿಭಾಗೇನ ದೃಷ್ಟತ್ವಾತ್ ॥** ಮುಕ್ತನು ತನ್ನನ್ನು ಬ್ರಹ್ಮಭಿನ್ನತ್ವೇನ ಅನುಭವಿಸುವನೋ? ಎಂದು ಸಂದೇಹ ''ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ'' ''ನಿರಂಜನಃ ಪರಮಂ ಸಾಮ್ಯಮುಪೈತಿ'' ಇತ್ಯಾದಿ ಶ್ರುತಿಗಳು ಭೇದವನ್ನು ಹೇಳುತ್ತವೆ. ಆದ್ದರಿಂದ ಭೇದೇನ ಅನುಭವಿಸುತ್ತಾನೆ, ಎಂದು ಪೂರ್ವಪಕ್ಷ. ಅವಿಭಾಗೇನ=ಅಭೇದೇನ ಅನುಭವಿಸುತ್ತಾನೆ, ದೃಷ್ಟತ್ವಾತ್=ಬ್ರಹ್ಮಸಂಪತ್ತಿಯಿಂದಾಗಿ ಅವಿದ್ಯಾತಿರೋಧಾನವಾಗಿ ಸ್ವಾತ್ಮಾನುಭವ ಜ್ಞಾನಿಗೆ ಆಗುತ್ತಾನೆ. ಸ್ವಾತ್ಮನೇ ಬ್ರಹ್ಮ. 'ತತ್ತ್ವಮಸಿ' 'ಅಯಮಾತ್ಮಾ ಬ್ರಹ್ಮ' 'ಐತದಾತ್ಮ್ಯಮಿದಂ ಸರ್ವಂ' ಇತ್ಯಾದಿ ಶ್ರುತಿಗಳು 'ಆತ್ಮನೇ ಬ್ರಹ್ಮ' ಎನ್ನುತ್ತವೆ. ಇದನ್ನು 'ಅವಸ್ಥಿತೇರಿತಿ ಕಾಶಕೃತ್ಸ್ನಃ' (1.4.22) ಎಂಬ ಸೂತ್ರದಲ್ಲಿ ಹೇಳಲಾಗಿದೆ. ಆದ್ದರಿಂದ ಮುಕ್ತನು ತನ್ನನ್ನು 'ಅಹಂ ಬ್ರಹ್ಮಾಸ್ಮಿ' ಎಂದೇ ಅನುಭವಿಸುತ್ತಾನೆ. ಸಾಮ್ಯಶ್ರುತಿಗೆ, ಜೀವನು ಬ್ರಹ್ಮನಂತೆ, ಮನುಷ್ಯತ್ವ ದೇವತ್ವಾದಿ ಧರ್ಮಗಳನ್ನು ಕಳೆದುಕೊಳ್ಳುತ್ತಾನೆ, ಎಂದು ಅರ್ಥ. 'ಬ್ರಹ್ಮಣಾ ಸಹ ಅಶ್ನುತೇ' ಎಂದರೆ ಬ್ರಹ್ಮಗುಣಗಳನ್ನು ಅನುಭವಿಸುತ್ತಾನೆ, ಎಂದರ್ಥ. (ಬ್ರಹ್ಮಣಾ ಸಹ ತದ್ಗುಣಾನುಭವಂ ಪ್ರತಿಪಾದಯತಿ–ರಾ.ಭಾ.)

**ವಿಮರ್ಶೆ**—ಅಭೇದೇನ ಅನುಭವಿಸುತ್ತಾನೆ ಎನ್ನುವುದು 'ಪ್ರಚ್ಛನ್ನಾದ್ವೈತ' (ಪ್ರಚ್ಛನ್ನಾದ್ವೈತತ್ವಪ್ರಸಕ್ತೇಃ–ಶೇ.ತಾ.ಚಂ.) ಅವನು ಬ್ರಹ್ಮಭಿನ್ನನಾದುದರಿಂದ ಅಭೇದಾನುಭವವು ಭ್ರಾಂತಿಯೂ ಆಗುತ್ತದೆ. ಶರೀರ–ಶರೀರಿಭಾವಾನುಭವವೇ ಅಭೇದಾನುಭವ ಎಂಬ ಮೋಡಿಯ ಮಾತು ಅಪ್ರೌಢಿವಾದವೆನಿಸೀತು. (ಶರೀರ–ಶರೀರಿತಯಾಽನುಭವ ಏವಾಭೇದಾನುಭವ ಇತ್ಯಾದಿಚಮತ್ಕಾರಸ್ತು ಅಪ್ರೌಢತಾಮಾವಹತೀತ್ಯಲಂ ಜ್ಞಾನದರಿದ್ರಕಲಹೇನ–ಶೇ.ತಾ.ಚಂ.)

ಇಲ್ಲಿಗೆ ಅವಿಭಾಗಾಧಿಕರಣವು ಮುಗಿಯಿತು.

## ೫. ಬ್ರಾಹ್ಮಾಧಿಕರಣಮ್ (ಚಿತಿಮಾತ್ರಾಧಿಕರಣಮ್)

**॥ ಓಂ ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ ಓಂ ॥ ೫ ॥**

ಸರ್ವದೇಹಪರಿತ್ಯಾಗೇನ ಮುಕ್ತಾಃ ಸಂತೋ ಬ್ರಾಹ್ಮೇಣೈವ ದೇಹೇನ ಭೋಗಾನ್ ಭುಂಜತ ಇತಿ ಜೈಮಿನಿರ್ಮನ್ಯತೇ ।

'ಸ ವಾ ಏಷ ಬ್ರಹ್ಮನಿಷ್ಠ ಇದಂ ಶರೀರಂ ಮರ್ತ್ಯಮತಿಸೃಜ್ಯ ಬ್ರಹ್ಮಾಭಿಸಂಪದ್ಯ ಬ್ರಹ್ಮಣಾ ಪಶ್ಯತಿ ಬ್ರಹ್ಮಣಾ ಶೃಣೋತಿ ಬ್ರಹ್ಮಣೈವೇದಂ ಸರ್ವಮನುಭವತಿ' ಇತಿ ಮಾಧ್ಯಂದಿನಾಯನಶ್ರುತಾವುಪನ್ಯಾಸಾತ್ ।

'ಆದತ್ತೇ ಹರಿಹಸ್ತೇನ ಹರಿದೃಷ್ಟ್ಯೈವ ಪಶ್ಯತಿ ।
ಗಚ್ಛೇಚ್ಚ ಹರಿಪಾದೇನ ಮುಕ್ತಸ್ಯೈಷಾ ಸ್ಥಿತಿರ್ಭವೇತ್ ॥'

ಇತಿ ಸ್ಮೃತೇಃ ।

'ಗಚ್ಛಾಮಿ ವಿಷ್ಣುಪಾದಾಭ್ಯಾಂ ವಿಷ್ಣುದೃಷ್ಟ್ಯಾ ಚ ದರ್ಶನಮ್ ।
ಇತ್ಯಾದಿಪೂರ್ವಸ್ಮರಣಾನ್ಮುಕ್ತಸ್ಯೈತದ್ ಭವಿಷ್ಯತಿ ॥'

ಇತಿ ಬೃಹತ್ತಂತ್ರೋಕ್ತಯುಕ್ತೇಶ್ಚ ।

ಸ್ಥೂಲ–ಸೂಕ್ಷ್ಮ ಈ ಎರಡೂ ದೇಹಗಳನ್ನು ಪರಿತ್ಯಜಿಸಿ ಮುಕ್ತರಾದವರು ಪರಬ್ರಹ್ಮನ ದೇಹದಿಂದಲೇ ವಿಷಯಗಳನ್ನು ಅನುಭವಿಸುತ್ತಾರೆ, ಎಂದು ಜೈಮಿನಿಗಳು ಹೇಳುತ್ತಾರೆ. ''ಆ ಈ ಬ್ರಹ್ಮಜ್ಞಾನಿಯು ವಿನಾಶಿಯಾದ ಈ ಸ್ಥೂಲ ಸೂಕ್ಷ್ಮದೇಹಗಳನ್ನು ಬಿಟ್ಟು ಬ್ರಹ್ಮನನ್ನು ಹೊಂದಿ, ಬ್ರಹ್ಮನ ದೇಹದಿಂದ ನೋಡುತ್ತಾನೆ, ಬ್ರಹ್ಮನ ದೇಹದಿಂದಲೇ ಕೇಳುತ್ತಾನೆ, ಬ್ರಹ್ಮದೇಹದಿಂದಲೇ ವಿಷಯಗಳೆಲ್ಲವನ್ನೂ ಅನುಭವಿಸುತ್ತಾನೆ''. ಹೀಗೆ ಮಾಧ್ಯಂದಿನಾಯನ ಶ್ರುತಿಯಲ್ಲಿ ಹೇಳಿರುವುದರಿಂದ. ಸ್ಮೃತಿಯಿಂದಲೂ ತಿಳಿಯುತ್ತದೆ— ಶ್ರೀಹರಿಯ ಕೈಗಳಿಂದಲೇ ಮುಕ್ತನು ತೆಗೆದುಕೊಳ್ಳುತ್ತಾನೆ, ಶ್ರೀಹರಿಯ ಕಣ್ಣುಗಳಿಂದಲೇ ನೋಡುತ್ತಾನೆ, ಶ್ರೀಹರಿಯ ಕಾಲುಗಳಿಂದ ನಡೆಯುತ್ತಾನೆ, ಮುಕ್ತನ ಸ್ಥಿತಿ ಈ ತೆರನಾದುದು. ಬೃಹತ್ತಂತ್ರದ ಉಕ್ತಿಯಿಂದಲೂ ಇದು ಸತ್ಯ—ನಾನು ವಿಷ್ಣುವಿನ ಕಾಲುಗಳಿಂದಲೇ ನಡೆಯುತ್ತಿದ್ದೇನೆ, ವಿಷ್ಣುವಿನ ಕಣ್ಣುಗಳಿಂದಲೇ ನೋಡುತ್ತಿದ್ದೇನೆ, ಈ ರೀತಿಯಾಗಿ ಸಾಧಕನು ಮೊದಲು ತಿಳಿದಿರುವುದರಿಂದ ಮೋಕ್ಷದಲ್ಲೂ ವಿಷ್ಣು ಅದೇ ರೀತಿಯ ಫಲವನ್ನೇ ಕೊಡುತ್ತಾನೆ.

**ವಿವರಣೆ**—ಭಾಷ್ಯದಲ್ಲಿ ಸರ್ವದೇಹಪರಿತ್ಯಾಗ ಎಂದರೆ ಸ್ಥೂಲಸೂಕ್ಷ್ಮ ದೇಹಗಳ ಪರಿತ್ಯಾಗಮಾತ್ರ. ಚಿನ್ಮಯವಾದ ದೇಹದ ಪರಿತ್ಯಾಗ ಇಲ್ಲ. ಅದನ್ನು ''ಮರ್ತ್ಯಂ

ಅತಿಸೃಜ್ಯ' ಎಂಬ ಪ್ರಮಾಣವಾಕ್ಯವು ತಿಳಿಸುತ್ತದೆ. ''ಇದಂ ಶರೀರಂ ಅತಿಸೃಜ್ಯ' ಎಂದು ಆ ಶ್ರುತಿಯಲ್ಲಿ ಇದಂ ಎಂದಿರುವುದರಿಂದ ಕಣ್ಣಿಗೆ ಕಾಣುವ ಸ್ಥೂಲದೇಹದ ಪರಿತ್ಯಾಗ ಮಾತ್ರ ಎಂಬ ಭ್ರಾಂತಿ ಬರಬಾರದು ಎನ್ನುವುದಕ್ಕಾಗಿ ಭಾಷ್ಯದಲ್ಲಿ ''ಸರ್ವದೇಹ ಪರಿತ್ಯಾಗೇನ'' ಎಂದು ಹೇಳಲಾಗಿದೆ. ಪ್ರತ್ಯಕ್ಷಸಿದ್ಧವಾದ ಸ್ಥೂಲ ದೇಹದ ಒಂದು ಭಾಗ ಸೂಕ್ಷ್ಮದೇಹವಾದುದರಿಂದ ಸೂಕ್ಷ್ಮದೇಹವನ್ನೂ ''ಇದಂ'' ಎನ್ನುತ್ತದೆ ಶ್ರುತಿ. ಈ ಸೂಕ್ಷ್ಮದೇಹಕ್ಕೆ ಪ್ರಲಯಕಾಲದಲ್ಲಿ ಅಪಚಯವಿದೆ. ಮುಕ್ತಿಕಾಲದಲ್ಲಿ ನಾಶವಿದೆ.

## ॥ ಓಂ ಚಿತಿಮಾತ್ರೇಣ ತದಾತ್ಮಕತ್ವಾದಿತ್ಯೌಡುಲೋಮಿಃ ಓಂ ॥ ೬ ॥

**ಚಿತಿಮಾತ್ರೋ ದೇಹೋ ಮುಕ್ತಾನಾಂ ಪೃಥಗ್ ವಿದ್ಯತೇ ತೇನ ಭುಂಜತೇ ।**

**'ಸರ್ವಂ ವಾ ಏತದಚಿತ್ ಪರಿತ್ಯಜ್ಯ ಚಿನ್ಮಾತ್ರ ಏವೈಷ ಭವತಿ ಚಿನ್ಮಾತ್ರ ಏವಾವತಿಷ್ಠತೇ ತಾಮೇತಾಂ ಮುಕ್ತಿರಿತ್ಯಾಚಕ್ಷತೇ' ಇತ್ಯುದ್ದಾಲಕ ಶ್ರುತೇಶ್ಚಿದಾತ್ಮಕತ್ವಾದಿತ್ಯೌಡುಲೋಮಿರ್ಮನ್ಯತೇ ॥**

ಚಿನ್ಮಾತ್ರವಾದ ತಮ್ಮದೇ ಆದ, ಜಡಭಿನ್ನವಾದ ದೇಹವು ಮುಕ್ತರಿಗಿದೆ. ಆ ದೇಹದಿಂದ ಅವರು ವಿಷಯಭೋಗವನ್ನು ಮಾಡುತ್ತಾರೆ. ''ಈ ಎಲ್ಲ ಜಡಸಂಪರ್ಕ ವನ್ನು ತೊರೆದು ಮುಕ್ತನು ಚೇತನ ಮಾತ್ರನಾಗಿ ಉಳಿಯುತ್ತಾನೆ. ಈ ಅವಸ್ಥೆಯನ್ನೇ ಮುಕ್ತಿ ಎನ್ನುತ್ತಾರೆ'' ಹೀಗೆ ಉದ್ದಾಲಕಶ್ರುತಿಯು ಹೇಳುತ್ತಿರುವುದರಿಂದ ಮುಕ್ತರು ಚಿದಾತ್ಮಕರಾಗಿರುವುದರಿಂದ (ಚಿದಾತ್ಮಕದೇಹದಿಂದ ಅವರು ವಿಷಯಭೋಗವನ್ನು ಮಾಡುತ್ತಾರೆ.) ಎಂದು ಔಡುಲೋಮಿಗಳು ತಿಳಿಯುತ್ತಾರೆ.

**ವಿವರಣೆ**—ಮುಕ್ತರಿಗೆ ಜಡಾತ್ಮಕವಾದ ದೇಹವಿಲ್ಲ. ಆದರೂ ಚಿದಾತ್ಮಕ ದೇಹವಿದೆ. ಅದರಿಂದ ಅವರು ವಿಷಯಭೋಗವನ್ನು ಮಾಡುತ್ತಾರೆ. ಇದು ಔಡುಲೋಮಿಗಳ ಸಿದ್ಧಾಂತ.

## ॥ ಓಂ ಏವಮಪ್ಯುಪನ್ಯಾಸಾತ್ ಪೂರ್ವಭಾವಾದವಿರೋಧಂ ಬಾದರಾಯಣಃ ಓಂ ॥ ೭ ॥

**'ಸ ವಾ ಏಷ ಏತಸ್ಮಾನ್ಮರ್ತ್ಯಾದ್ ವಿಮುಕ್ತಶ್ಚಿನ್ಮಾತ್ರೀಭವತ್ಯಥ ತೇನೈವ ರೂಪೇಣಾಭಿಪಶ್ಯತ್ಯಭಿಶೃಣೋತ್ಯಭಿಮನುತೇಽಭಿವಿಜಾನಾತಿ ತಾಮಾಹುರ್ಮುಕ್ತಿಃ' ।**

ಇತಿ ಸೌಪರ್ಣಶ್ರುತೌ ಚಿನ್ಮಾತ್ರೇಣಾಪ್ಯುಪನ್ಯಾಸಾಜ್ಜೈಮಿನ್ಯುಕ್ತಸ್ಯ (ಚ) ಭಾವಾದುಭಯತ್ರಾಪ್ಯವಿರೋಧಂ ಬಾದರಾಯಣೋ ಮನ್ಯತೇ ॥

ನಾರಾಯಣಾಧ್ಯಾತ್ಮೇ ಚ-

'ಮರ್ತ್ಯಂ ದೇಹಂ ಪರಿತ್ಯಜ್ಯ ಚಿತಿಮಾತ್ರಾತ್ಮದೇಹಿನಃ ।
ಚಿತಿಮಾತ್ರೇಂದ್ರಿಯಾಶ್ಚೈವ ಪ್ರವಿಷ್ಟಾ ವಿಷ್ಣುಮವ್ಯಯಮ್ ॥
ತದಂಗಾನುಗೃಹೀತೈಶ್ಚ ಸ್ವಾಂಗೈರೇವ ಪ್ರವರ್ತನಮ್ ।
ಕುರ್ವಂತಿ ಭುಂಜತೇ ಭೋಗಾಂಸ್ತದಂತರ್ಬಹಿರೇವ ವಾ ।
ಯಥೇಷ್ಟಂ ಪರಿವರ್ತಂತೇ ತಸ್ಯೈವಾನುಗ್ರಹೇರಿತಾಃ ॥' ಇತಿ ॥

'ಸ ವಾ ಏಷ' ಎಂಬ ಸೌಪರ್ಣ ಶ್ರುತಿಯಲ್ಲಿ ಚಿನ್ಮಾತ್ರದೇಹದಿಂದಲೂ ಭೋಗವನ್ನು ಹೇಳಿರುವುದರಿಂದ ಹಾಗೂ ಜೈಮಿನಿಗಳು ಹೇಳಿರುವಂತೆ ಪರಬ್ರಹ್ಮನ ದೇಹದಿಂದಲೂ ಭೋಗವಿರುವುದರಿಂದಲೂ ಉಭಯತ್ರಾಪಿ=ಬ್ರಹ್ಮನ ದೇಹದಿಂದ ಮತ್ತು ತಮ್ಮ ಚಿದಾತ್ಮಕದೇಹದಿಂದಲೂ ಭೋಗವು ಇದೆ ಎನ್ನಲು ವಿರೋಧವಿಲ್ಲ ಎಂದು ಬಾದರಾಯಣರು ಹೇಳುತ್ತಾರೆ. ನಾರಾಯಣಾಧ್ಯಾತ್ಮದಲ್ಲಿದೆ— ನಶ್ವರವಾದ ದೇಹವನ್ನು ಬಿಟ್ಟು ಚಿನ್ಮಾತ್ರದೇಹಯುಕ್ತರಾಗಿ, ಚಿನ್ಮಯವಾದ ಇಂದ್ರಿಯಗಳಿಂದ ಯುಕ್ತರಾಗಿ ನಾಶರಹಿತನಾದ ವಿಷ್ಣುವಿನ ಒಳಗೆ ಪ್ರವೇಶಿಸಿ ಅವನ ಅಂಗಗಳಿಂದ ಅನುಗೃಹೀತವಾದ ತಮ್ಮ ಅಂಗಗಳಿಂದಲೇ ಮುಕ್ತರು ಪ್ರವೃತ್ತಿಯನ್ನು ಮಾಡುತ್ತಾರೆ. ಹೀಗೆ ಅವನ ದೇಹದ ಒಳಗೂ ಹೊರಗೂ ವಿಷಯಪದಾರ್ಥಗಳನ್ನು ಅನುಭವಿಸುತ್ತಾರೆ. ತಮಗೆ ಇಷ್ಟಬಂದಂತೆ ಭಗವದನುಗ್ರಹದಿಂದ ಇರುತ್ತಾರೆ.

**ವಿವರಣೆ**—ಮುಕ್ತರು ಭಗವಂತನ ದೇಹದಿಂದಲೇ ವಿಷಯಭೋಗವನ್ನು ಮಾಡುತ್ತಾರೆ ಎಂದು ಜೈಮಿನಿಗಳ ಮತ. ತಮ್ಮದೇ ಆದ ಚಿನ್ಮಾತ್ರದೇಹದಿಂದ ಭೋಗವನ್ನು ಮಾಡುತ್ತಾರೆ, ಎಂದು ಔಡುಲೋಮಿಗಳ ಮತ. ಎರಡೂ ಮತಗಳಿಗೂ ಪ್ರಮಾಣಗಳಿವೆ. ಔಡುಲೋಮಿಗಳ ಮತಕ್ಕೆ ಈ ಸೂತ್ರದಲ್ಲಿ ಪ್ರಮಾಣವನ್ನು ಹೇಳಲಾಗಿದೆ. ಹೀಗೆ, ಪ್ರಮಾಣಸಿದ್ಧವಾಗಿರುವುದರಿಂದ ಎರಡೂ ಸರಿ ಎಂದು ಬಾದರಾಯಣರು ಹೇಳುತ್ತಾರೆ. ಸಾಯುಜ್ಯಮೋಕ್ಷವನ್ನು ಪಡೆದ ಬ್ರಹ್ಮಾದಿ ಭಾಗವತೋತ್ತಮರು ಬ್ರಹ್ಮನ ಅಂಗಾಂಗಗಳಲ್ಲೇ ಇರುವ ತಮ್ಮ ಚಿನ್ಮಾತ್ರದೇಹದಿಂದ ಪರಬ್ರಹ್ಮನೊಳಗೆ ಹಾಗೂ ಬ್ರಹ್ಮನ ದೇಹದ ಹೊರಗೆ ಭೋಗವನ್ನು ಅನುಭವಿಸುತ್ತಾರೆ.

ಸಾಲೋಕ್ಯಾದಿಮೋಕ್ಷವನ್ನು ಪಡೆದವರು ಪರಮಾತ್ಮನ ದೇಹದ ಹೊರಗಡೆ ಇದ್ದು ಚಿನ್ಮಾತ್ರದೇಹದಿಂದ ವಿಷಯಗಳನ್ನು ಭೋಗಿಸುತ್ತಾರೆ. ಆದ್ದರಿಂದ ಎರಡೂ ಮತಗಳೂ ಯುಕ್ತವಾಗಿವೆ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ ಓಂ ॥** (ಅತ್ರ ಮುಕ್ತಸ್ಯ ದೇಹಾಭಾವಪ್ರಯುಕ್ತಾಭೋಕ್ತೃತ್ವಂ ನಿರಸ್ಯ ಭೋಕ್ತೃತ್ವಂ ಸಾಧ್ಯತೇ। ಮುಕ್ತಸ್ಯ ದೇಹಾಭಾವೇಽಪಿ ಈಶಪ್ರವಿಷ್ಟಸ್ಯ ಬ್ರಾಹ್ಮೇಣ=ಬ್ರಹ್ಮಸಂಬಂಧಿನಾ ದೇಹೇನ ಗ್ರಹವತ್ ಭೋಗೋಽಸ್ತೀತಿ ಜೈಮಿನಿಃ ಮನ್ಯತೇ। ಕುತಃ ? ''ಬ್ರಹ್ಮಣಾ ಪಶ್ಯತಿ, ಬ್ರಹ್ಮಣಾ ಶೃಣೋತಿ'' ಇತಿ ಶ್ರುತೌ ತಥೋಪನ್ಯಾಸಾತ್। ಆದಿಪದಸ್ಯ ''ಆದತ್ತೇ ಹರಿಹಸ್ತೇನ ಹರಿದೃಷ್ಟ್ಯೈವ ಪಶ್ಯತಿ'' ಇತ್ಯಾದಿಸ್ಮೃತೇಃ ''ಗಚ್ಛಾಮಿ ಹರಿಪಾದಾಭ್ಯಾಂ'' ಇತ್ಯಾದಿ ಪೂರ್ವಸ್ಮರಣಾತ್ ''ಮುಕ್ತಸ್ಯ ಏತದ್ ಭವಿಷ್ಯತಿ''ಇತಿ ಸ್ಮೃತ್ಯುಕ್ತಯುಕ್ತೇಶ್ಚ ಇತ್ಯರ್ಥಃ ॥)

ಉಪನ್ಯಾಸಾದಿಭ್ಯಃ=''ಬ್ರಹ್ಮಣಾ ಪಶ್ಯತಿ'' ಎಂಬ ಶ್ರುತಿ ಹೇಳಿರುವುದರಿಂದ, ''ಆದತ್ತೇ ಹರಿಹಸ್ತೇನ'' ಎಂಬ ಸ್ಮೃತಿಯಿಂದ ಹಾಗೂ ಉಪಾಸಕನು ಭಗವಂತನನ್ನು ''ಭಗವಚ್ಛರೀರದಿಂದಲೇ ವಿಷಯಭೋಗ ಮಾಡುತ್ತೇನೆ'' ಎಂಬ ಉಪಾಸನೆ ಮಾಡಿರುತ್ತಾನೆ, ಈ ಯುಕ್ತಿಯಿಂದಲೂ ಬ್ರಾಹ್ಮೇಣ=ಬ್ರಹ್ಮನ ದೇಹದಿಂದಲೇ ಮುಕ್ತನು ವಿಷಯಭೋಗವನ್ನು ಮಾಡುತ್ತಾನೆ, ಎಂದು ಜೈಮಿನಿಗಳು ಹೇಳುತ್ತಾರೆ.

**॥ ಓಂ ಚಿತಿಮಾತ್ರೇಣ ತದಾತ್ಮಕತ್ವಾದಿತ್ಯೌಡುಲೋಮಿಃ ಓಂ ॥** (ಚಿತಿಮಾತ್ರೇಣ=ಚಿನ್ಮಾತ್ರರೂಪೇಣ ದೇಹೇನ ಮುಕ್ತಃ ಭೋಗಾನ್ ಭುಂಕ್ತೇ। ನ ಚೈವಂ ದೇಹಿತ್ವೇ ಸಂಸಾರಿಸಮಾನತ್ವಮ್। ಚಿನ್ಮಾತ್ರದೇಹಸ್ಯ ತದಾತ್ಮಕತ್ವಾತ್। ತಸ್ಯಾಕೃತ್ರಿಮತ್ವೇನ ಕೃತ್ರಿಮದೇಹಸ್ಯೈವ ತತ್‌ಸಾಮ್ಯಾಪಾದಕತ್ವಮ್ ಇತಿ ಔಡುಲೋಮಿಃ ಮನ್ಯತೇ ಇತ್ಯರ್ಥಃ।)

ಚಿತಿಮಾತ್ರೇಣ=ಜ್ಞಾನಮಾತ್ರರೂಪವಾದ ದೇಹದಿಂದ ಮುಕ್ತನು ವಿಷಯ ಪದಾರ್ಥಗಳನ್ನು ಅನುಭವಿಸುತ್ತಾನೆ. ಆ ದೇಹವು ತದಾತ್ಮಕತ್ವಾತ್=ಚಿನ್ಮಾತ್ರ ವಾಗಿರುವುದರಿಂದ ತದಭಿನ್ನವಾಗಿದೆ. ಆದ್ದರಿಂದ ದೇಹಪ್ರಯುಕ್ತವಾಗಿ ಮುಕ್ತನಿಗೆ ಸಂಸಾರಿತ್ವಾಪತ್ತಿ ಇಲ್ಲ. ಹೀಗೆಂದು ಔಡುಲೋಮಿಗಳು ತಿಳಿಯುತ್ತಾರೆ.

**॥ ಓಂ ಏವಮಪ್ಯುಪನ್ಯಾಸಾತ್ ಪೂರ್ವಭಾವಾದವಿರೋಧಂ ಬಾದರಾಯಣಃ ಓಂ ॥** ಏವಮಪಿ=ಹೀಗೂ ಅಂದರೆ ಔಡುಲೋಮಿಗಳು ಹೇಳಿದಂತೆ, ಎನ್ನುವು

ದಾಗಿಯೂ ಉಪನ್ಯಾಸಾತ್=''ಸ ವಾ ಏಷಃ'' ಎಂಬ ಶ್ರುತಿಯಲ್ಲಿ ಹೇಳಿರುವುದರಿಂದ ಪೂರ್ವಭಾವಾತ್, ಪೂರ್ವಸ್ಯ=ಹಿಂದೆ ಜೈಮಿನಿಗಳು ಹೇಳಿರುವಂತೆ ಭಾವಾತ್=ಶ್ರುತಿಯಲ್ಲಿ ಹೇಳಿರುವುದರಿಂದ ಅರ್ಥಾತ್ ಎರಡೂ ಪ್ರಾಮಾಣಿಕವಾದುದರಿಂದ ಬಾದರಾಯಣಃ ಶ್ರೀವೇದವ್ಯಾಸರು ಅವಿರೋಧಂ=ಜೈಮಿನಿ ಮತ್ತು ಔಡುಲೋಮಿ ಮತಗಳಿಗೆ ಅವಿರೋಧವನ್ನು ಹೇಳುತ್ತಾರೆ.

(ಏವಮಪಿ=ಚಿನ್ಮಾತ್ರದೇಹೇನ ಭೋಗಾನ್ ಭುಂಜತೇ ಇತ್ಯೇವಂ ಪ್ರಕಾರೇಣಾಪಿ 'ಸ ವಾ ಏಷಃ' ಇತಿ ಶ್ರುತೌ ಉಪನ್ಯಾಸಾತ್, ಪೂರ್ವಭಾವಾತ್, ಪೂರ್ವಸ್ಯ=ಜೈಮಿನ್ಯುಕ್ತದೇಹಾಭಾವಸ್ಯಾಪಿ ಭಾವಾತ್=ತತ್ರೋಕ್ತಶ್ರುತ್ಯಾ ಸತ್ವಾವಗಮಾತ್–ದ್ವಯೋರಪಿ ಪ್ರಾಮಾಣಿಕತ್ವಾದಿತಿ ಯಾವತ್ ಅವಿರೋಧಂ=ಜೈಮಿನಿ–ಔಡುಲೋಮಿಮತಯೋಃ ಮರ್ತ್ಯಾಮರ್ತ್ಯ–ದೇಹಾಭಾವ–ಭಾವಾಭ್ಯುಪಗಮೇನ ಅವಿರೋಧಂ ಬಾದರಾಯಣೋ ಮನ್ಯತೇ, ಇತ್ಯರ್ಥಃ। ಔಡುಲೋಮಿಮತೇ ಪ್ರಾಕ್ ಮಾನಾನುಕ್ತೇಃ ಇಹ ''ಉಪನ್ಯಾಸಾತ್'' ಇತ್ಯುಕ್ತಿಃ)

## ಶಾಂಕರಭಾಷ್ಯದಲ್ಲಿ ಬ್ರಾಹ್ಮಾಧಿಕರಣ

**॥ ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ ॥** ಉಪನ್ಯಾಸಾದಿಭ್ಯಃ, 'ಯ ಆತ್ಮಾ ಅಪಹತಪಾಪ್ಮಾ' ಇಲ್ಲಿ ಉದ್ದೇಶ–ವಿಧೇಯಭಾವದ ಉಪನ್ಯಾಸ, ''ಸ ತತ್ರ ಪರ್ಯೇತಿ'' ಎಂದು ಅಜ್ಞಾತ ಜ್ಞಾಪನರೂಪವಿಧಿ, 'ಸರ್ವಜ್ಞಃ ಸರ್ವೇಶ್ವರಃ' ಎಂದು ವ್ಯಪದೇಶ. ಹೀಗೆ ಉಪನ್ಯಾಸ–ವಿಧಿ–ವ್ಯಪದೇಶಗಳಿಂದ ಮುಕ್ತನಿಗೆ ಬ್ರಹ್ಮಾಕಾರವು ತಿಳಿಯುತ್ತದೆ. ಈ ಬ್ರಾಹ್ಮ ಆಕಾರದಿಂದಲೇ ಮುಕ್ತನೂ ಇರುತ್ತಾನೆ, ಎಂದು ಜೈಮಿನಿಗಳು ಹೇಳುತ್ತಾರೆ. ಧರ್ಮಧರ್ಮಿಗಳಿಗೆ ಅಭೇದವಿರುವುದರಿಂದ ಬ್ರಹ್ಮನ ಈ ಧರ್ಮಗಳಿಂದಾಗಿ ಅದ್ವೈತ ಹಾನಿಯೂ ಇಲ್ಲ.

**॥ ಚಿತಿಮಾತ್ರೇಣ ತದಾತ್ಮಕತ್ವಾದಿತ್ಯೌಡುಲೋಮಿಃ ॥** ಅಪಹತಪಾಪ್ಮತ್ವಾದಿ ಧರ್ಮಗಳು ಕಾಲ್ಪನಿಕಗಳು. ಅವುಗಳೂ ಪಾರಮಾರ್ಥಿಕಗಳಾದರೆ ಅದ್ವೈತಹಾನಿ. ಅನೇಕವಾಗಿರುವುದರಿಂದ ಏಕಬ್ರಹ್ಮಾತ್ಮಕಗಳಾದರೆ ಧರ್ಮಗಳಿಗೆ ಅನೇಕತ್ವಹಾನಿ. ಅಭಾವಧರ್ಮಗಳಿಂದ ಅದ್ವೈತಹಾನಿ ಇಲ್ಲದಿದ್ದರೂ ಭಾವಧರ್ಮ ಕಾಲ್ಪನಿಕವಾದುದರಿಂದ ಅಭಾವವೂ ಕಾಲ್ಪನಿಕ. ಆದ್ದರಿಂದ ತದಾತ್ಮಕತ್ವಾತ್=ಆತ್ಮಸ್ವರೂಪವು ಚಿನ್ಮಾತ್ರವಾದುದರಿಂದ ಚಿತಿಮಾತ್ರೇಣ=ಚಿನ್ಮಾತ್ರರೂಪದಿಂದಲೇ ಮುಕ್ತನು ಇರುತ್ತಾನೆ, ಎಂದು ಔಡುಲೋಮಿಗಳು ಹೇಳುತ್ತಾರೆ.

**॥ ಏವಮಪ್ಯುಪನ್ಯಾಸಾತ್ ಪೂರ್ವಭಾವಾದವಿರೋಧಂ ಬಾದರಾಯಣಃ ॥**
ಏವಮಪಿ=ಮುಕ್ತಿಯಲ್ಲಿ ಪಾರಮಾರ್ಥಿಕ ಚೈತನ್ಯಮಾತ್ರ ಇರುತ್ತದೆ ಎಂದು ಹೇಳಿದರೂ ಉಪನ್ಯಾಸಾತ್=ಹಿಂದೆ ಹೇಳಿರುವ ಉಪನ್ಯಾಸಾದಿಗಳಿಂದ, ಪೂರ್ವಭಾವಾತ್= ಮುಕ್ತಾವಸ್ಥೆಗಿಂತ ಪೂರ್ವದಲ್ಲಿ ಅಪಹತಪಾಪ್ಮತ್ವಾದಿವ್ಯಾವಹಾರಿಕಧರ್ಮಗಳು ಇರುವುದರಿಂದ ಮುಕ್ತಿಯಲ್ಲಿ ''ಯ ಆತ್ಮಾ ಅಪಹತಪಾಪ್ಮಾ' 'ಜಕ್ಷನ್ ಕ್ರೀಡನ್' ಇತ್ಯಾದಿ ಶ್ರುತಿವ್ಯಪದೇಶವು ಯುಕ್ತವಾಗಿದೆ. ಇದು ಬಾದರಾಯಣರ ಸಿದ್ಧಾಂತ. (ಇಲ್ಲಿ ಭಾಷ್ಯರತ್ನ ಪ್ರಭಾವ್ಯಾಖ್ಯಾನದಲ್ಲಿ ಅವಿದ್ಯೈಕತ್ವಪಕ್ಷವನ್ನು ಅವಲಂಬಿಸಿ ಅಂಶಭೇದದಿಂದ ಮುಕ್ತಾಮುಕ್ತವ್ಯವಸ್ಥೆಯನ್ನು ಕೂಡಿಸಿ ಮುಕ್ತನಿಗೂ ಅಮುಕ್ತ–ಈಶ್ವರ ಧರ್ಮವ್ಯಪದೇಶವನ್ನು ಕೂಡಿಸಲಾಗಿದೆ.)

ಭಾಮತಿಯಲ್ಲಿ ಜೈಮಿನಿಮತದ ಸಂಗ್ರಹರೂಪವಾದ ಶ್ಲೋಕ ಹೀಗಿದೆ—

ಭಾವಾಭಾವಾತ್ಮಕೈಃ ರೂಪೈಃ ಭಾವಿಕೈಃ ಪರಮೇಶ್ವರಃ ।
ಮುಕ್ತಃ ಸಂಪದ್ಯತೇ ಸ್ವೈಃ ಇತ್ಯಾಹ ಸ್ಮ ಕಿಲ ಜೈಮಿನಿಃ ॥

ಔಡುಲೋಮಿಯ ಮತದ ಬಗ್ಗೆ ಭಾಮತಿಕಾರನ ಅಭಿಪ್ರಾಯ–

ತದೇತದಿತಿ ಶೌಂಡೀರ್ಯಂ ಔಡುಲೋಮೇರ್ನ ಮೃಶ್ಯತೇ ।
ಬಾದರಾಯಣ ಆಚಾರ್ಯೋ ಮೃಶನ್ನಪಿ ಹಿ ತನ್ಮತಮ್ ॥

ಸೂತ್ರದಲ್ಲಿ ಏವಮಪಿ ಎನ್ನುವುದರಿಂದ ಸೂತ್ರಕಾರರು ಔಡುಲೋಮಿಮತವನ್ನು ಒಪ್ಪಿಕೊಳ್ಳುತ್ತಾರೆ. ಆದರೆ, ಔಡುಲೋಮಿಗಳು ಹೇಳಿರುವ ''ಶಬ್ದವಿಕಲ್ಪಾ ಏವೈತೇ'' ಎಂಬ ಶೌಂಡೀರ್ಯವನ್ನು ಬಾದರಾಯಣರು ಸಹಿಸುವುದಿಲ್ಲ– ಅವರು ಹೇಳುವಂತೆ ಸತ್ಯಕಾಮತ್ವಾದಿಗಳು ಅವಾಸ್ತವಗಳಲ್ಲ, ವ್ಯಾವ ಹಾರಿಕಗಳಾಗಿರುವುದರಿಂದ ಇದನ್ನು ''ಪೂರ್ವಭಾವಾತ್ ಉಪನ್ಯಾಸಾತ್'' ಎಂದು ಸೂತ್ರಕಾರರು ಸಮರ್ಥಿಸಿದ್ದಾರೆ. ಹೀಗೆ ಔಡುಲೋಮಿಗಳ ಮತ ಭಾಗಶಃ ಸೂತ್ರಕಾರರಿಗೆ ಸಮ್ಮತ.

ವಿಮರ್ಶೆ——ಸತ್ಯ–ಜ್ಞಾನ–ಆನಂದ ಈ ಧರ್ಮಗಳು ಸತ್ಯವಾಗಿವೆ, ಬ್ರಹ್ಮ ಸ್ವರೂಪವೂ ಆಗಿವೆ, ಎಂದು ಅದ್ವೈತಸಿದ್ಧಾಂತ. ಆದರೆ, ಅಲ್ಲಿ ಅನೇಕ ಧರ್ಮಗಳು ಏಕಬ್ರಹ್ಮರೂಪಗಳಾದರೆ ಅನೇಕತ್ವಹಾನಿ, ಅಥವಾ ಬ್ರಹ್ಮನಿಗೆ ಏಕತ್ವಹಾನಿ, ಎಂದು ಆಕ್ಷೇಪಗಳನ್ನು ಮಾಡಲಾಗುವುದಿಲ್ಲ. ಅಲ್ಲಿ ಮಾಡದ ಆಕ್ಷೇಪಗಳನ್ನು ಅಪಹತ ಪಾಪ್ಮತ್ವ, ಸತ್ಯಕಾಮತ್ವ, ಸರ್ವಜ್ಞತ್ವಾದಿಧರ್ಮಗಳ ಬಗ್ಗೆ ಮಾತ್ರ ಮಾಡುವುದಕ್ಕೆ ಕಾರಣವೇನು? ಜ್ಞಾನಾನಂದಾದಿ ಧರ್ಮಗಳಂತೆ ಈ ಧರ್ಮಗಳೂ ಬ್ರಹ್ಮಸ್ವರೂಪಗಳೇ ಏಕಾಗಬಾರದು?

## ರಾಮಾನುಜಭಾಷ್ಯದಲ್ಲಿ ಸೂತ್ರಗಳ ಅರ್ಥ

**॥ ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ ॥** ಮುಕ್ತನು ''ಸ್ವೇನ ರೂಪೇಣ ಅಭಿನಿಷ್ಪದ್ಯತೇ'' ಎನ್ನಲಾಗಿದೆ. ಅವನು ಯಾವ ರೂಪದಿಂದ ಅಭಿವ್ಯಕ್ತನಾಗಿರುತ್ತಾನೆ? ಅದಕ್ಕುತ್ತರ 'ಬ್ರಾಹ್ಮೇಣ'. 'ದಹರ' ವಾಕ್ಯದಲ್ಲಿ ಅಪಹತಪಾಪ್ಮತ್ವಾದಿಗಳು ಬ್ರಹ್ಮಧರ್ಮಗಳು ಎಂದು ಹೇಳಲಾಗಿದೆ. ಅಂತಹ ಬ್ರಹ್ಮಸಂಬಂಧಿಯಾದ ಧರ್ಮಗಳಿಂದ ಮುಕ್ತನು ಅಭಿವ್ಯಕ್ತನಾಗುತ್ತಾನೆ. ಉಪನ್ಯಾಸಾದಿಭ್ಯಃ=ಮುಕ್ತನಾದ ಆತ್ಮನಿಗೂ ಅಪಹತಪಾಪ್ಮತ್ವಾದಿ ಧರ್ಮಗಳನ್ನು ಛಾಂದೋಗ್ಯದ ಈ ಪ್ರಕರಣದಲ್ಲಿ ಹೇಳಲಾಗಿದೆ. ''ಯ ಆತ್ಮಾ ಅಪಹತಪಾಪ್ಮಾ'' (8.7.1) ''ಸತ್ಯಸಂಕಲ್ಪಃ (8.7.1) ಎಂದು ಕೊನೆಯಲ್ಲಿ ಹೇಳಿ 'ಜಕ್ಷನ್ ಕ್ರೀಡನ್ ರಮಮಾಣಃ' (8.12.3) ಎಂದೂ ಹೇಳಲಾಗಿದೆ. ಹೀಗೆ ಬ್ರಹ್ಮಸಂಬಂಧಿಯಾದ ಎಲ್ಲಾ ಧರ್ಮಗಳಿಂದಲೂ ಮುಕ್ತನು ಅಭಿವ್ಯಕ್ತನಾಗಿರುತ್ತಾನೆ. ಇದು ಜೈಮಿನಿಗಳ ಮತ.

**॥ ಚಿತಿಮಾತ್ರೇಣ ತದಾತ್ಮಕತ್ವಾದಿತ್ಯೌಡುಲೋಮಿಃ ॥** ಚೈತನ್ಯಮಾತ್ರವೇ ಜೀವನ ಸ್ವರೂಪ. ಆದ್ದರಿಂದ ಚೈತನ್ಯರೂಪದಿಂದ ಮಾತ್ರ ಮುಕ್ತನು ಅಭಿವ್ಯಕ್ತನಾಗುತ್ತಾನೆ. ತದಾತ್ಮಕತ್ವಾತ್=ಉಪ್ಪಿನಕಲ್ಲು ಸರ್ವತಃ ಉಪ್ಪೇ ಆಗಿರುವಂತೆ ಜೀವನು ಚೈತನ್ಯ ಮಾತ್ರರೂಪನಾದ ಕಾರಣ ''ವಿಜ್ಞಾನ ಘನ ಏವ'' (ಬೃ.ಉ.4.4.12) ಎನ್ನುತ್ತದೆ ಉಪನಿಷತ್ತು. ಇದು ಔಡುಲೋಮಿಗಳ ಮತ.

**॥ ಏವಮಪ್ಯುಪನ್ಯಾಸಾತ್ ಪೂರ್ವಭಾವಾದವಿರೋಧಂ ಬಾದರಾಯಣಃ ॥** ಏವಮಪಿ=ವಿಜ್ಞಾನ ಸ್ವರೂಪತ್ವವನ್ನು ಹೇಳಲಾಗಿದ್ದರೂ, ಸತ್ಯಕಾಮತ್ವಾದಿಗಳೂ ಜೀವನ ಸ್ವರೂಪಭೂತಗುಣಗಳು. ಉಪನ್ಯಾಸಾತ್ ಪೂರ್ವಭಾವಾತ್=''ಯ ಆತ್ಮಾ ಅಪಹತ ಪಾಪ್ಮಾ'' ಇತ್ಯಾದಿ ಪ್ರಮಾಣಗಳಿಂದಾಗಿ ಪೂರ್ವಭಾವಾತ್ ಪೂರ್ವೇಷಾಂ= ಅಪಹತಪಾಪ್ಮತ್ವ-ಸತ್ಯಕಾಮತ್ವಾದಿ ಗುಣಗಳೂ ಭಾವಾತ್=ಇರುವುದರಿಂದ ಚಿನ್ಮಾತ್ರತ್ವಕ್ಕೂ ಅಪಹತಪಾಪ್ಮತ್ವಾದಿಗುಣಗಳಿಗೂ ಅವಿರೋಧಾತ್=ವಿರೋಧವಿಲ್ಲ ವಾದುದರಿಂದ ಶ್ರುತ್ಯುಕ್ತವಾದ ಎಲ್ಲ ಗುಣಗಳನ್ನೂ ಆತ್ಮಸ್ವರೂಪಗಳೆಂದು ಪರಿಗಣಿಸಬಹುದು. ''ವಿಜ್ಞಾನಘನ ಏವ'' ಎಂದರೆ ಎಲ್ಲಾ ಭಾಗಗಳಲ್ಲೂ ಆತ್ಮನು ಜ್ಞಾನರೂಪ ಎಂದು ಅರ್ಥ. ಅದಕ್ಕೆ ಉಪ್ಪಿನ ಉದಾಹರಣೆಯನ್ನು ಕೊಟ್ಟಿರುವುದರಿಂದ ಇದು ಸ್ಪಷ್ಟವಾಗುತ್ತದೆ. ಮಾವಿನ ಹಣ್ಣಿನ ಸಿಪ್ಪೆ ಕಹಿ, ಒಳಗಿನ ಸಾರಭಾಗ ಸಿಹಿ. ಇದರಂತೆ ಉಪ್ಪಿಲ್ಲ, ಅದು ಎಲ್ಲ ಭಾಗದಲ್ಲೂ ಕಹಿಯೇ. ಅದರಂತೆ ಆತ್ಮನೂ ವಿಜ್ಞಾನಘನ.

ವಿಜ್ಞಾನಸ್ವರೂಪವಲ್ಲದ ಭಾಗ ಆತ್ಮನಲ್ಲಿ ಯಾವುದೂ ಇಲ್ಲ. ಇದೇ ''ವಿಜ್ಞಾನ ಘನ ಏವ'' ಎಂಬ ಏವಪದದಿಂದ ವ್ಯಾವರ್ತ್ಯ. ಹೊರತು ಗುಣಾಂತರಗಳು ವ್ಯಾವರ್ತ್ಯಗಳಲ್ಲ.

**ಇಲ್ಲಿಗೆ ಬ್ರಾಹ್ಮಾಧಿಕರಣ (ಚಿತಿಮಾತ್ರಾಧಿಕರಣ)ವು ಮುಗಿಯಿತು.**

## ೬. ಸಂಕಲ್ಪಾಧಿಕರಣಮ್

### ॥ ಓಂ ಸಂಕಲ್ಪಾದೇವ ಚ ತಚ್ಛ್ರುತೇಃ ಓಂ ॥ ೮ ॥

**ನ ತೇಷಾಂ ಭೋಗಾದಿಷು ಪ್ರಯತ್ನಾಪೇಕ್ಷಾ ।**

**'ಸ ಯದಿ ಪಿತೃಲೋಕಕಾಮೋ ಭವತಿ । ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠಂತಿ' (ಛಾ.ಉ. 8-2-1) ಇತ್ಯಾದಿಶ್ರುತೇಃ ॥**

ಮುಕ್ತರು ವಿಷಯಭೋಗಕ್ಕಾಗಿ ಪ್ರಯತ್ನಿಸಬೇಕಾಗಿಲ್ಲ. ''ಮುಕ್ತನಿಗೆ ತನ್ನ ತಂದೆಯನ್ನು ನೋಡಬೇಕು, ಎಂದು ಬಯಕೆ ಬಂದರೆ, ಸಂಕಲ್ಪಮಾತ್ರದಿಂದಲೇ ಅವನ ಪಿತೃಗಳು ಎದ್ದುಬರುತ್ತಾರೆ'' ಎಂದು ಛಾಂದೋಗ್ಯಶ್ರುತಿಯಲ್ಲಿ ಹೇಳಿರುವುದರಿಂದ.

**ವಿವರಣೆ**—ಸಂಸಾರದ ವಿಷಯಸಂಪಾದನೆ ಕ್ಲೇಷಕರ. ಆದರೂ, ಮೋಕ್ಷದಲ್ಲಿ ಅದಕ್ಕೆ ಕ್ಲೇಷಪಡಬೇಕಾಗಿಲ್ಲ. ಸಂಕಲ್ಪ ಮಾಡಿದರೆ ಸಾಕು. ತನ್ಮಾತ್ರದಿಂದ ಮುಕ್ತರಿಗೆ ಬೇಕಾದ ವಿಷಯಗಳು ಲಭ್ಯವಾಗುತ್ತವೆ. ಛಾಂದೋಗ್ಯೋಪನಿಷತ್ತಿನಲ್ಲಿ ಹಾಗೆ ಹೇಳಿದೆ. ಪಿತೃಗಳು ಎಂದರೆ ಅವನ ಸ್ವರೂಪಕ್ಕೆ ಸಂಬಂಧಿಸಿದ ಪಿತೃಗಳು. ಮೋಕ್ಷಹೊಂದುವ ಅವ್ಯವಹಿತ ಪೂರ್ವಜನ್ಮದ ಪಿತೃಗಳು. ''ಅಂತ್ಯದೇಹೋ ಯಥಾ ನಿಜಃ' ಎಂದಿರುವುದರಿಂದ ಆ ದೇಹವು ಸ್ವರೂಪದೇಹಕ್ಕೆ ಅನುಗುಣವಾಗಿಯೇ ಇರುತ್ತದೆ. ಅಲ್ಲಿ ಪಿತೃಗಳೂ ನಿಜಪಿತೃಗಳೇ ಇರುತ್ತಾರೆ. ಅವರಿಗೆ ಪಿತೃಲೋಕಪ್ರಾಪ್ತಿಯಾಗಿ ನನಗೆ ಕಾಣಸಿಗಲಿ ಎಂದು ಮುಕ್ತನು ಬಯಸಿದರೆ ಅವನ ಬಯಕೆ ಈಡೇರುತ್ತದೆ.

### ದ್ವೈತದರ್ಶನದಲ್ಲಿ ಸೂತ್ರಾರ್ಥ

॥ ಓಂ ಸಂಕಲ್ಪಾದೇವ ಚ ತಚ್ಛ್ರುತೇಃ ಓಂ ॥ (ಅತ್ರ ಮುಕ್ತಸ್ಯ ಸಂಕಲ್ಪಮಾತ್ರಸಾಧ್ಯ-ಭೋಗವತ್ವಂ ಸಾಧ್ಯತೇ । ಮುಕ್ತಾನಾಂ ಸಂಕಲ್ಪಾದೇವ ಭೋಗಸಿದ್ಧಿಃ । ಕುತಃ ? ತಚ್ಛ್ರುತೇಃ-ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠಂತಿ'' ಇತಿ

ತಸ್ಯ ಶ್ರವಣಾತ್, ಇತ್ಯರ್ಥಃ। ಚಶಬ್ದಸ್ತು ಲೋಕೇ ಭೋಗಸ್ಯ ಕರ್ಮಸಾಧ್ಯತ್ವಾತ್ ಮುಕ್ತಭೋಗಸ್ಯಾಪಿ ಪ್ರಯತ್ನಾಪೇಕ್ಷೇತಿ ನ ವಾಚ್ಯಮ್ ಇತಿ ಶಂಕಾವ್ಯಾವೃತ್ತ್ಯರ್ಥಃ ಇತಿ ಟೀಕಾ। ಚಕಾರಾದನಿಷ್ಟಭೋಗೋಪರಮಶ್ಚ ಇತಿ ತತ್ತ್ವಪ್ರದೀಪೋಕ್ತಿಃ।)

ಮುಕ್ತರಿಗೆ ಸಂಕಲ್ಪಾದೇವ=ಇಚ್ಛಾಮಾತ್ರದಿಂದಲೇ ವಿಷಯಭೋಗವು ಸಿದ್ಧವಾಗುತ್ತದೆ. ಅದಕ್ಕಾಗಿ ಅವರು ಪ್ರಯಾಸಪಡಬೇಕಿಲ್ಲ. ತಚ್ಛ್ರುತೇಃ=ಹಾಗೆ ಹೇಳುವ ''ಸಂಕಲ್ಪಾದೇವ'' ಎಂಬ ಶ್ರುತಿ ಇದೆಯಾದ್ದರಿಂದ.

ಇಲ್ಲಿಗೆ ಸಂಕಲ್ಪಾಧಿಕರಣವು ಮುಗಿಯಿತು.

## ೭. ಅನನ್ಯಾಧಿಪತ್ಯಧಿಕರಣಮ್

### ॥ ಓಂ ಅತ ಏವ ಚಾನನ್ಯಾಧಿಪತಿಃ ಓಂ ॥ ೯ ॥

**ಸತ್ಯಸಂಕಲ್ಪತ್ವಾದೇವ ।**

**'ಪರಮೋಽಧಿಪತಿಸ್ತೇಷಾಂ ವಿಷ್ಣುರೇವ ನ ಸಂಶಯಃ ।**
**ಬ್ರಹ್ಮಾದಿಮಾನುಷಾಂತಾನಾಂ ಸರ್ವೇಷಾಮವಿಶೇಷತಃ ॥**
**ತತಃ ಪ್ರಾಣಾದಿನಾಮಾಂತಾಃ ಸರ್ವೇಽಪಿ ಪತಯಃ ಕ್ರಮಾತ್ ।**
**ಆಚಾರ್ಯಾಶ್ಚೈವ ಸರ್ವೇಽಪಿ ಯೈರ್ಜ್ಞಾನಂ ಸುಪ್ರತಿಷ್ಠಿತಮ್ ।**
**ಏತೇಭ್ಯೋಽನ್ಯಃ ಪತಿರ್ನೈವ ಮುಕ್ತಾನಾಂ ನಾತ್ರ ಸಂಶಯಃ ॥'**

**ಇತಿ ಹಿ ವಾರಾಹೇ ।**

(ಸೂತ್ರದಲ್ಲಿರುವ 'ಅತ ಏವ' ಎಂದರೆ) ಸತ್ಯಸಂಕಲ್ಪತ್ವವು ಮುಕ್ತರಿಗೆ ಇರುವುದರಿಂದ. ವಾರಾಹವಚನ ಹೀಗಿದೆ— ಮುಕ್ತರ ಪರಮ ಒಡೆಯ ವಿಷ್ಣುವೇ, ಅದರಲ್ಲಿ ಸಂದೇಹವಿಲ್ಲ. ಬ್ರಹ್ಮನಿಂದ ಹಿಡಿದು ಮನುಷ್ಯಮುಕ್ತರ ಪರ್ಯಂತ ಎಲ್ಲರಿಗೂ, ಯಾವ ವ್ಯತ್ಯಾಸವೂ ಇಲ್ಲದಂತೆ ವಿಷ್ಣುವೇ ಅಧಿಪತಿ. ವಿಷ್ಣುವಿನ ಅನಂತರ ಪ್ರಾಣನಿಂದಾರಂಭಿಸಿ ನಾಮಾಭಿಮಾನಿನಿ ಉಷೆಯವರೆಗೂ ಎಲ್ಲರೂ ಕ್ರಮವಾಗಿ ಅವರರಿಗೆ ಅಧಿಪತಿಗಳು. ಇದಲ್ಲದೆ, ಯಾರಿಂದ ಜ್ಞಾನವು ದೃಢವಾಗಿದೆಯೋ ಅದಕ್ಕೆ ಕಾರಣರಾದ ಗುರುಗಳೂ ಅಧಿಪತಿಗಳು. ಇವರನ್ನು ಬಿಟ್ಟು ಮುಕ್ತರಿಗೆ ಬೇರೆ ಅಧಿಪತಿಗಳು ಇಲ್ಲ. ಇದರಲ್ಲಿ ಸಂದೇಹವಿಲ್ಲ.

**ವಿವರಣೆ**—ರಾಜನ ಅರಮನೆಗಳಲ್ಲಿ ಅಧಮರಾದ ದ್ವಾರಪಾಲಕಾದಿಗಳೂ ಅಧಿಪತಿಗಳಾಗುವ ಸಂಭವ ಇದೆ. ಆದರೆ, ಮೋಕ್ಷದಲ್ಲಿ ಉತ್ತಮರಿಗೆ ಅಧಮರು ಅಧಿಪತಿಗಳಾಗಿ ಇರುವುದಿಲ್ಲ. ಅವರು ಸತ್ಯಸಂಕಲ್ಪರು. ಅವರ ಸಂಕಲ್ಪಕ್ಕೆ ವಿರುದ್ಧವಾಗಿ ನಡೆಯುವುದಿಲ್ಲ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ಅತ ಏವ ಚಾನನ್ಯಾಧಿಪತಿಃ ಓಂ ॥** (ಅತ ಏವ=ಪ್ರಾಗುಕ್ತಾತ್ 'ಅಹಮ್ ಇಯತಾಮೇವ ನಿಯಮ್ಯಃ ಸ್ಯಾಮಿತಿ' ಸತ್ಯಸಂಕಲ್ಪಾದೇವ ಮುಕ್ತಃ ಅನನ್ಯಾಧಿಪತಿಃ=ಕ್ಲೃಪ್ತ–ಸ್ವೋತ್ತಮೇಭ್ಯಃ ಅನ್ಯಾಧಿಪತಿಹೀನಃ ಇತ್ಯರ್ಥಃ। ಚಸ್ತು ರಾಜಗೃಹಂ ಪ್ರವಿಷ್ಟಸ್ಯ ಪ್ರತೀಹಾರಾದಿನಿಯತತ್ವವತ್ ಮುಕ್ತಸ್ಯಾಪಿ ಈಶಗೃಹಂ ಪ್ರವಿಷ್ಟಸ್ಯ ಅವರನಿಯಮ್ಯತಾ ಸ್ಯಾತ್ ಇತಿ ಶಂಕಾನಿವೃತ್ಯರ್ಥಾ ಇತಿ ಟೀಕಾ। 'ಪರಮೋಽಧಿಪತಿಸ್ತ್ವೇಷಾಮ್' ಇತ್ಯಾದಿ ಪ್ರಮಾಣಸಮುಚ್ಚಯಃ ಇತಿ ತತ್ವಪ್ರದೀಪೋಕ್ತಿಃ।)

ಅತ ಏವ=ಸತ್ಯಸಂಕಲ್ಪನಾದುದರಿಂದಲೇ ಮುಕ್ತನು ಅನನ್ಯಾಧಿಪತಿಃ= ಸ್ವೋತ್ತಮರಿಗಿಂತ ಬೇರೆ ಅಧಿಪತಿಗಳು ಅವನಿಗಿಲ್ಲ. ಅವನಿಗೆ 'ಇವರಿಂದ ಮಾತ್ರ ನಾನು ನಿಯಮ್ಯನಾಗಿರಬೇಕು' ಎಂಬ ಸಂಕಲ್ಪವಿದೆ. ಅದಕ್ಕೆ ಅನುಗುಣವಾಗಿಯೇ ಅಧಿಪತಿಗಳು ಅವನಿಗಿರುತ್ತಾರೆ.

## ಶಾಂಕರಭಾಷ್ಯದಲ್ಲಿ ಸಂಕಲ್ಪಾಧಿಕರಣ

**॥ಸಂಕಲ್ಪಾದೇವ ಚ ತಚ್ಛ್ರುತೇಃ ॥** ಲೋಕದಲ್ಲಿ ಅಭೀಷ್ಟಪ್ರಾಪ್ತಿಯಾಗಬೇಕಾದರೆ ಸಂಕಲ್ಪ ಮಾತ್ರ ಸಾಲದು. ಸಂಕಲ್ಪ ಮಾಡಿ ಪ್ರಯತ್ನ ಮಾಡಿರಬೇಕು. ಆದರೆ, ಮೋಕ್ಷದಲ್ಲಿ ಸಂಕಲ್ಪವನ್ನಷ್ಟೇ ಮಾಡಿದರೂ ಸಾಕು, ಇಷ್ಟಸಿದ್ಧಿಯಾಗುತ್ತದೆ. 'ಸಂಕಲ್ಪಾದೇವಾಸ್ಯ ಪಿತರಸ್ಸಮುತ್ತಿಷ್ಠಂತಿ' ಎಂದು ಶ್ರುತಿಯಲ್ಲಿ ಏವಕಾರದಿಂದ ಪ್ರಯತ್ನದ ಅಗತ್ಯವಿಲ್ಲ, ಎಂದು ತಿಳಿಸಲಾಗಿದೆ.

**॥ ಅತ ಏವ ಚಾನನ್ಯಾಧಿಪತಿಃ ॥** ಅತಏವ=ಆದ್ದರಿಂದಲೇ ಅಂದರೆ ಸತ್ಯಸಂಕಲ್ಪನಾದುದರಿಂದಲೇ ಮುಕ್ತನು ಅನನ್ಯಾಧಿಪತಿಃ=ಮತ್ತೊಬ್ಬರು ಅವನಿಗೆ ಅಧಿಪತಿಗಳಿಲ್ಲ. 'ನನ್ನನ್ನು ಯಾರೂ ಕೇಳಬಾರದು' ಎಂದು ಎಂದೇ ಮುಕ್ತನ ಸಂಕಲ್ಪ. ಅವನು ಸತ್ಯಸಂಕಲ್ಪನಾದುದರಿಂದ ಹಾಗೆಯೇ ಆಗುತ್ತದೆ.

ವಿಮರ್ಶೆ—ನಿರ್ಗುಣವಿದ್ಯೆಯ ಫಲವಾದ ಮೋಕ್ಷದಲ್ಲಿ ಪ್ರಪಂಚವೇ ಜ್ಞಾನಿಗೆ ಇರುವುದಿಲ್ಲ. ಹೀಗಿರುವಾಗ, 'ಪಿತೃಲೋಕ ಕಾಮಃ' ಎಂದು ಉಪನಿಷತ್ತು ಹೇಳುವುದೇ ಅಸಂಗತ. ಆದಕ್ಕಾಗಿ, ಇದು ಸಗುಣವಿದ್ಯೆಯ ಫಲಕಥನ ಎನ್ನುವುದು ಪಾದಕ್ಕೆ ಸಂಗತವಲ್ಲ.

ರಾಮಾನುಜಭಾಷ್ಯದಲ್ಲೂ ಇದೇ ರೀತಿಯ ಅಧಿಕರಣವನ್ನೂ ಅರ್ಥವನ್ನೂ ಹೇಳಲಾಗಿದೆ.

ಇಲ್ಲಿಗೆ ಅನನ್ಯಾಧಿಪತ್ಯಧಿಕರಣವು ಮುಗಿಯಿತು.

## ೮. ಅಭಾವಾಧಿಕರಣಮ್

**॥ ಓಂ ಅಭಾವಂ ಬಾದರಿರಾಹ ಹ್ಯೇವಮ್ ಓಂ ॥ ೧೦ ॥**

**ಚಿನ್ಮಾತ್ರಂ ವಿನಾಽನ್ಯೋ ದೇಹಸ್ತೇಷಾಂ ನ ವಿದ್ಯತ ಇತಿ ಬಾದರಿಃ ।**
**'ಅಶರೀರೋ ವಾವ ತದಾ ಭವತ್ಯಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತೋ ಯಾಭ್ಯಾಂ ಹ್ಯೇಷ ಉನ್ಮಥ್ಯತೇ' ಇತ್ಯೇವಂ ಕೌಂಠರವ್ಯಶ್ರುತಾವಾಹ ಹಿ ॥**

ಮುಕ್ತರಿಗೆ ಚಿನ್ಮಾತ್ರ ದೇಹ ಬಿಟ್ಟು ಬೇರೆ ಜಡದೇಹ ಇಲ್ಲ, ಎಂದು ಬಾದರಿಗಳು ಹೇಳುತ್ತಾರೆ. ಹೀಗೆಯೇ ಕೌಂಠರವ್ಯಶ್ರುತಿಯಲ್ಲಿ ಹೇಳಿದೆ— ತದಾ=ಮುಕ್ತನಾದಾಗ ಅಶರೀರೋ ವಾವ ಭವತಿ=ಶರೀರ ರಹಿತನಾಗಿಯೇ ಇರುತ್ತಾನೆ. ಅಶರೀರನಾಗಿರುವ ಮುಕ್ತನನ್ನು, ಯಾವ ವಸ್ತುಗಳ ಸಂಪರ್ಕದಿಂದ ಅವನು ಉದ್ವೇಗಕ್ಕೆ ಒಳಗಾಗಬಹುದೋ ಅಂತಹ ಪ್ರಿಯ ಮತ್ತು ಅಪ್ರಿಯ ವಸ್ತುಗಳು ಮುಟ್ಟುವುದಿಲ್ಲ.

ವಿವರಣೆ—ಮುಕ್ತರಿಗೆ ಶರೀರವಿದ್ದರೆ ಸಂಸಾರಿಗಳಂತೆ ದೇಹಾಭಿಮಾನ ಪ್ರಯುಕ್ತವಾಗಿ ದುಃಖಾದಿಗಳೂ ಆಗಬೇಕು. ದೇಹಾಭಿಮಾನವಿಲ್ಲದೆ ಹೋದರೆ ಸುಷುಪ್ತಿಯಂತೆ ಸುಖವೂ ಆಗಬಾರದು. ಶರೀರವೇ ಇಲ್ಲದೇ ಹೋದರೆ ವಿಷಯಭೋಗ ಆಗಲು ಸಾಧ್ಯವಿಲ್ಲ. ವಿಷಯಭೋಗ ಇಲ್ಲದಿದ್ದಲ್ಲಿ ವೈಷಯಿಕ ಸುಖಾನುಭವವೂ ಇರಲಾರದು. ಈ ಆಕ್ಷೇಪಕ್ಕೆ ಸೂತ್ರದ ಉತ್ತರ—ಮುಕ್ತರಿಗೆ ಜಡದೇಹವಿಲ್ಲ, ಆದರೂ ಚಿದಾತ್ಮಕದೇಹವು ಇದೆ. ಆದರಿಂದ ನಿದ್ರಾವಸ್ಥೆಯಲ್ಲಿ ಇದ್ದಂತೆ ಸ್ವರೂಪಸುಖದ ಅನುಭವ ಇದೆ. ಇದು ವ್ಯಾಸಶಿಷ್ಯರಾದ ಬಾದರಿಗಳ ಅಭಿಪ್ರಾಯ

## ॥ ಓಂ ಭಾವಂ ಜೈಮಿನಿರ್ವಿಕಲ್ಪಾಮ್ನಾನಾತ್ ಓಂ ॥ ೧೧ ॥

**'ಸ ವಾ ಏಷ ಏವಂವಿತ್ ಪರಮಭಿಪಶ್ಯತ್ಯಭಿಶೃಣೋತಿ ಜ್ಯೋತಿಷ್ಯೈವ ರೂಪೇಣ ಚಿತಾ ವಾಽಚಿತಾ ವಾ ನಿತ್ಯೇನ ವಾಽನಿತ್ಯೇನ ವಾಽಥಾಽನಂದೀ ಹ್ಯೇವೈಷ ಭವತಿ ನಾನಾನಂದಂ ಕಂಚಿದುಪಸ್ಪೃಶತಿ'**

**ಇತ್ಯೌದ್ದಾಲಕಾಯನಶ್ರುತೌ ವಿಕಲ್ಪಾಮ್ನಾನಾದ್ ಅನ್ಯದೇಹಸ್ಯಾಪಿ ಭಾವಂ ಜೈಮಿನಿರ್ಮನ್ಯತೇ ॥**

ಔದ್ದಾಲಕ ಶ್ರುತಿಯಲ್ಲಿ 'ಚಿತಾ ವಾ ಅಚಿತಾ ವಾ' ಎಂದು ವಿಕಲ್ಪವನ್ನು ಹೇಳಿರುವುದರಿಂದ ಚಿನ್ಮಾತ್ರದೇಹಕ್ಕಿಂತ ಭಿನ್ನವಾದ ಜಡದೇಹವೂ ಮುಕ್ತರಿಗೆ ಇದೆ, ಎಂದು ಜೈಮಿನಿಗಳು ಹೇಳುತ್ತಾರೆ.

ಶ್ರುತ್ಯರ್ಥ—''ಪರಮಾತ್ಮನನ್ನು ಅಪರೋಕ್ಷೀಕರಿಸಿಕೊಂಡ ಮುಕ್ತನು ಮೋಕ್ಷದಲ್ಲಿ ಪರಮಾತ್ಮನನ್ನು ಪ್ರಕಾಶಾತ್ಮಕ ಚಿದ್ರೂಪವಾದ ಅಥವಾ ಜಡವಾದ ಅದರಂತೆ ನಿತ್ಯವಾದ ಅಥವಾ ಅನಿತ್ಯವಾದ ದೇಹದಿಂದ ನೋಡುತ್ತಾನೆ, ಕೇಳುತ್ತಾನೆ. ಅನಂತರ ಆನಂದವನ್ನು ಅನುಭವಿಸುತ್ತಾನೆ, ಅವನು ಆನಂದರೂಪನೇ ಆಗಿರುತ್ತಾನೆ, ದುಃಖವನ್ನು ಅಲ್ಪವೂ ಅನುಭವಿಸುವುದಿಲ್ಲ.''

## ॥ ಓಂ ದ್ವಾದಶಾಹವದುಭಯವಿಧಂ ಬಾದರಾಯಣೋಽತಃ ಓಂ ॥ ೧೨ ॥

**ಯಥಾ ದ್ವಾದಶಾಹಃ ಕ್ರತ್ವಾತ್ಮಕಃ ಸತ್ರಾತ್ಮಕಶ್ಚ ಭವತಿ, ಏವಂ ಮುಕ್ತಭೋಗೋ ಬಾಹ್ಯಶರೀರಕೃತಶ್ಚಿನ್ಮಾತ್ರಕೃತಶ್ಚ ಭವತೀತಿ ಬಾದರಾಯಣೋ ಮನ್ಯತೇ ॥**

ಹೇಗೆ ಹನ್ನೆರಡುದಿನ ನಿರಂತರವಾಗಿ ನಡೆಸಲ್ಪಡುವ ಯಾಗವು 'ಅಹೀನವೂ' 'ಸತ್ರಾತ್ಮಕವೂ' ಆಗುವುದೋ ಅದರಂತೆ, ಮುಕ್ತನ ಭೋಗವು ಬಾಹ್ಯಜಡಶರೀರ ದಿಂದಲೂ ಚಿನ್ಮಾತ್ರದೇಹದಿಂದಲೂ ನಡೆಯುತ್ತದೆ. ಹೀಗೆಂದು ಬಾದರಾಯಣರು ಹೇಳುತ್ತಾರೆ.

ವಿವರಣೆ—ಅನೇಕ ದಿನಗಳ ಪರ್ಯಂತ ನಡೆಯುವ ಯಾಗ ಅಹೀನ, ಎನಿಸುತ್ತದೆ. ಅಂತಹ ಯಾಗಕ್ಕೆ ಕರ್ತೃಗಳು ಅನೇಕರಿದ್ದರೆ ಅದು ಸತ್ರಯಾಗ

ಎನಿಸುತ್ತದೆ. ಹೀಗೆ, 'ದ್ವಾದಶಾಹ' ಕ್ರತುವು ವಿವಕ್ಷಾಭೇದೇನ ಅಹೀನವೂ ಆಗುತ್ತದೆ, ಸತ್ರವೂ ಆಗುತ್ತದೆ. ಆಪಸ್ತಂಬ ಸೂತ್ರದಲ್ಲಿ ''ಏಕೋ ದ್ವಾದಶಾಹೇನ ಯಜೇತ, ಷಡ್, ದ್ವಾದಶ, ತ್ರಯೋದಶ ವಾ'' ಎಂದು ಹೇಳಲಾಗಿದೆ. ಅದು ಏಕಕರ್ತೃಕವಾದರೆ ಅಹೀನ ಎನಿಸುತ್ತದೆ. ಅನೇಕಕರ್ತೃಕವಾದರೆ 'ಸತ್ರ' ಎನಿಸುತ್ತದೆ. ಕೇಶವಸ್ವಾಮಿ ಎಂಬ ಮೀಮಾಂಸಕ ಹೇಳುತ್ತಾನೆ— ''ದ್ವಾದಶಾಹೋ ದ್ವಿವಿಧಃ, ಅಹೀನಃ ಸತ್ರಂ ಚ । ಯದ್ಯೇಕೋ ದೀಕ್ಷತೇ ಅಹೀನಃ, ಯದಿ ಬಹವೋ ದೀಕ್ಷಂತೇ ಸತ್ರಮ್ ।'' ಅದರಂತೆ ಮುಕ್ತರು ಸಶರೀರರೂ ಆಗುತ್ತಾರೆ, ಅಶರೀರರೂ ಆಗುತ್ತಾರೆ, ಸ್ವೇಚ್ಛೆಯಿಂದ ಶುದ್ಧಸತ್ವಾತ್ಮಕವಾದ ಜಡಶರೀರವನ್ನು ಸ್ವೀಕರಿಸಿದಾಗ ಸಶರೀರರು, ಚಿನ್ಮಾತ್ರಶರೀರ ರಾಗಿದ್ದರೆ ಅಶರೀರರು.

ಭಾಷ್ಯದಲ್ಲಿ ದ್ವಾದಶಾಹವು ಕ್ರತು ಅಥವಾ ಸತ್ರ ಎನಿಸುತ್ತದೆ, ಎಂದಿದೆ. ಇಲ್ಲಿ ಕ್ರತುಶಬ್ದಕ್ಕೆ 'ಅಹೀನ' ಎಂದು ಅರ್ಥವನ್ನು ತತ್ತ್ವಪ್ರದೀಪದಲ್ಲಿ ಮಾಡಲಾಗಿದೆ. 'ಕ್ರತು ರಹೀನೋ ವಿವಕ್ಷ್ಯತೇ'। 'ಅಹೀನ' ಎಂಬ ಹೆಸರಿನಿಂದ ಕರೆಯಲ್ಪಡುವ ಏಕಾಹ ಯಾಗಗಳಲ್ಲಿ 'ದ್ವಾದಶಾಹವು' ಶ್ರೇಷ್ಠ ಎನ್ನುವ ಅಭಿಪ್ರಾಯದಿಂದ ಭಾಷ್ಯದಲ್ಲಿ ಕ್ರತುಶಬ್ದವನ್ನು ಪ್ರಯೋಗಿಸಲಾಗಿದೆ. ಶ್ರುತಿಯು ಅದನ್ನು ಹೇಳುತ್ತದೆ— 'ಶ್ರೇಷ್ಠೋ ವಾ ಯತ್ ದ್ವಾದಶಾಹಃ' ಎಂದು. ಹೀಗೆ ಕ್ರತುಶಬ್ದಕ್ಕೆ ಅಹೀನ, ಎಂದು ಅರ್ಥಮಾಡುವುದರಿಂದ ಮೀಮಾಂಸಕರ ಆಕ್ಷೇಪಕ್ಕೆ ಅವಕಾಶವಿಲ್ಲ ಎಂದಿದ್ದಾರೆ ಶ್ರೀ ರಾಘವೇಂದ್ರ ಸ್ವಾಮಿಗಳು—''ತೇನ ಕಸ್ಯಚಿತ್ ಮೀಮಾಂಸಾವಿರೋಧಾ-ಪಲಾಪಾನವಕಾಶಃ''

**ಉಪಪತ್ತಿಶ್ಚ-**

## ॥ ಓಂ ತನ್ವಭಾವೇ ಸಂಧ್ಯವದುಪಪತ್ತೇಃ ಓಂ ॥ ೧೩ ॥

**ಸಂಧ್ಯಂ ಸ್ವಪ್ನಃ । 'ಸಂಧ್ಯಂ ತೃತೀಯಂ ಸ್ವಪ್ನಸ್ಥಾನಮ್' (ಬೃ.ಉ. 6.3.9) ಇತಿ ಶ್ರುತೇಃ ॥**

ಈ ವಿಷಯದಲ್ಲಿ ಯುಕ್ತಿಯೂ ಇದೆ. ಸಂಧ್ಯ ಎಂದರೆ ಸ್ವಪ್ನ. ''ಸಂಧ್ಯ ಎಂದರೆ ಜಾಗ್ರದಾದಿ ಮೂರು ಅವಸ್ಥೆಗಳಲ್ಲಿ ಮೂರನೆಯದಾದ ಸ್ವಪ್ನಾವಸ್ಥೆ'' ಎಂದು ಬೃಹದಾರಣ್ಯಕ ಶ್ರುತಿ ಇದೆ.

**ವಿವರಣೆ**—ಮುಕ್ತರಿಗೆ ದೇಹವಿಲ್ಲದೆಯೂ, ನಮಗೆ ಸ್ವಪ್ನಾವಸ್ಥೆಯಲ್ಲಿ

ಭೋಗವಿರುವಂತೆ, ಅವರಿಗೂ ಭೋಗವು ಇರಬಹುದು. ಸ್ವಪ್ನಾವಸ್ಥೆಯಲ್ಲಿ ದೇಹವಿದ್ದರೂ ಅದರ ಮೇಲೆ ಅಭಿಮಾನ ಇರುವುದಿಲ್ಲ. ಹೀಗಾಗಿ ದೇಹ ಇದ್ದರೂ ಇಲ್ಲದಂತೆ. ಆದರೂ ವಿಷಯಾನುಭವ, ತತ್ಪ್ರಯುಕ್ತವಾದ ಸುಖ ದುಃಖದ ಅನುಭವ ಆಗುತ್ತದೆ. ಅದರಂತೆ ಮುಕ್ತನಿಗೂ ದೇಹವಿಲ್ಲದಿದ್ದರೂ ಸುಖಾನುಭವವು ಆಗುತ್ತದೆ. ದೇಹವಿದ್ದರೂ ಅದರ ಮೇಲೆ ಅಭಿಮಾನವು ಇಲ್ಲದಿರುವುದರಿಂದ ದುಃಖವಾಗುವುದಿಲ್ಲ, ಸ್ವಪ್ನದಂತೆ ಸುಖವೇ ಆಗುತ್ತದೆ.

## ॥ ಓಂ ಭಾವೇ ಜಾಗ್ರದ್ವತ್ ಓಂ ॥ ೧೪ ॥

ಬ್ರಹ್ಮವೈವರ್ತೇ ಚ-

‘ಸ್ವಪ್ನಸ್ಥಾನಾಂ ಯಥಾ ಭೋಗೋ ವಿನಾ ದೇಹೇನ ಯುಜ್ಯತೇ ।
ಏವಂ ಮುಕ್ತಾವಪಿ ಭವೇದ್ ವಿನಾ ದೇಹೇನ ಭೋಜನಮ್ ॥
ಸ್ವೇಚ್ಛಯಾ ವಾ ಶರೀರಾಣಿ ತೇಜೋರೂಪಾಣಿ ಕಾನಿಚಿತ್ ।
ಸ್ವೀಕೃತ್ಯ ಜಾಗರಿತವದ್ ಭುಕ್ತ್ವಾ ತ್ಯಾಗಃ ಕದಾಚನ ॥’ ಇತಿ ॥

ದೇಹವಿದ್ದಾಗಲಂತೂ ನಮಗೆ ಎಚ್ಚರಾವಸ್ಥೆಯಲ್ಲಿ ಆಗುವಂತೆ ಮುಕ್ತರಿಗೆ ವಿಷಯಭೋಗವು ಆಗಿಯೇ ಆಗುತ್ತದೆ. ಬ್ರಹ್ಮವೈವರ್ತದಲ್ಲಿದೆ— ಸ್ವಪ್ನಾವಸ್ಥೆಯಲ್ಲಿ ಇರುವವರಿಗೆ ಹೇಗೆ ದೇಹಾಭಿಮಾನ ಇಲ್ಲದಿದ್ದರೂ ಭೋಗವು ಆಗುವುದೋ ಅದರಂತೆ ಮುಕ್ತಿಯಲ್ಲೂ ದೇಹವಿಲ್ಲದೆಯೂ ವಿಷಯಭೋಗವು ಆಗುತ್ತದೆ. ಅಥವಾ ಕೆಲವೊಮ್ಮೆ ಮುಕ್ತರು ಸ್ವೇಚ್ಛೆಯಿಂದ ತೇಜೋಮಯಶರೀರವನ್ನು ಸ್ವೀಕರಿಸಿ ನಮ್ಮ ಜಾಗ್ರದವಸ್ಥೆಯಂತೆ ವಿಷಯಗಳನ್ನು ಭೋಗಿಸಿ ಆ ಶರೀರವನ್ನು ತ್ಯಜಿಸುತ್ತಾರೆ.

## ॥ ಓಂ ಪ್ರದೀಪವದಾವೇಶಸ್ತಥಾ ಹಿ ದರ್ಶಯತಿ ಓಂ ॥ ೧೫ ॥

ಶರೀರಮನುವಿಶ್ಯಾಪಿ ತತ್ ಪ್ರಕಾಶಯಂತಃ ಪುಣ್ಯಾನೇವ ಭೋಗಾನನುಭವಂತಿ । ನತು ದುಃಖಾದೀನ್ । ಯಥಾ ಪ್ರದೀಪೋ ದೀಪಿಕಾದಿಷು ಪ್ರವಿಷ್ಟಃ, ತತ್ಸ್ಥಂ ತೈಲಾದ್ಯೇವ ಭುಂಕ್ತೇ, ನತು ತತ್ಕಾಷ್ಠಾರ್ಣ್ಯಾದಿ ।
‘ತೀರ್ಣೋ ಹಿ ತದಾ ಸರ್ವಾನ್ ಶೋಕಾನ್ ಹೃದಯಸ್ಯ ಭವತಿ’ (ಬೃ.ಉ. 6.3.22) ಇತಿ ಹಿ ದರ್ಶಯತಿ ॥

ಮುಕ್ತರು ಶರೀರವನ್ನು ಪ್ರವೇಶಿಸಿಯೂ ಆ ಶರೀರಕ್ಕಿಂತ ತಮ್ಮನ್ನು ಭಿನ್ನರನ್ನಾಗಿ ತಿಳಿದು ಪುಣ್ಯದ ಫಲವಾದ ಸುಖಭೋಗವನ್ನು ಮಾತ್ರ ಅನುಭವಿಸುತ್ತಾರೆ, ದುಃಖಾದಿಗಳನ್ನು ಅನುಭವಿಸುವುದಿಲ್ಲ. ಹೇಗೆ ದೀಪಜ್ವಾಲೆಯು ಬತ್ತಿಯಲ್ಲಿ ಸೇರಿಕೊಂಡು ಬತ್ತಿಯಲ್ಲಿರುವ ಎಣ್ಣೆಯನ್ನಷ್ಟೇ ಕುಡಿಯುತ್ತದೆ, ಬತ್ತಿಯಲ್ಲಿರುವ ಕರಿಯನ್ನು ತಿನ್ನುವುದಿಲ್ಲವೋ ಅದರಂತೆ. ಶ್ರುತಿ ಹಾಗೆಯೇ ಹೇಳುತ್ತದೆ— ಮೋಕ್ಷದೊರಕಿದಾಗ ಹೃದಯದ ಎಲ್ಲಾ ದುಃಖಗಳನ್ನೂ ದಾಟುತ್ತಾನೆ.

**ವಿವರಣೆ**—''ನ ಹ ವೈ ಸಶರೀರಸ್ಯ ಸತಃ ಪ್ರಿಯಾಪ್ರಿಯಯೋಃ ಅಪಹತಿರಸ್ತಿ'' ಈ ಶ್ರುತಿಯಿಂದ ಶರೀರವಿದ್ದಲ್ಲಿ ಸುಖ-ದುಃಖಗಳು ಇರಲೇಬೇಕು, ಎಂದು ತಿಳಿಯುತ್ತದೆ. ಮುಕ್ತನಿಗೆ ಶರೀರವಿದ್ದರೆ ಸುಖದಂತೆ ದುಃಖವೂ ಅನಿವಾರ್ಯ ಎಂಬ ಆಕ್ಷೇಪಕ್ಕೆ ಹೀಗೆ ಸಮಾಧಾನ-ಕರ್ಮನಿರ್ಮಿತ ಶರೀರಕ್ಕೆ ಈ ನಿಯಮ. ಮುಕ್ತನ ಶರೀರ ಸ್ವೇಚ್ಛಾಗೃಹೀತ. ಆದ್ದರಿಂದ ಈ ನಿಯಮ ಅನ್ವಯಿಸುವುದಿಲ್ಲ.

ಭಾಷ್ಯದಲ್ಲಿ ''ತತ್ ಪ್ರಕಾಶಯಂತಃ'' ಎಂದಿದೆ. ಇದಕ್ಕೆ ''ಶರೀರವನ್ನು ಬೆಳಗುತ್ತಾ'' ಎಂದು ಅರ್ಥವಲ್ಲ. ದೇಹಾತ್ಮವಿವೇಕವುಳ್ಳವರಾಗಿ, ಎಂದರ್ಥ.

**ನಚ 'ಸ್ವರ್ಗೇ ಲೋಕೇ ನ ಭಯಂ ಕಿಂಚನಾಸ್ತಿ' (ಕ.ಉ. 1.12) ಇತ್ಯಾದಿನಾ ಸ್ವರ್ಗಾದಿಸ್ಥಸ್ಯೈತದಿತಿ ವಾಚ್ಯಮ್ । ಯತಃ,**

## ।। ಓಂ ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷ-ಮಾವಿಷ್ಕೃತಂ ಹಿ ಓಂ ।। ೧೬ ।।

**ಸುಪ್ತೌ ಮೋಕ್ಷೇ ವಾ ತದುಚ್ಯತೇ ।**

**'ಅತ್ರ ಪಿತಾಽಪಿತಾ ಭವತಿ', 'ಅನನ್ವಾಗತಂ ಪುಣ್ಯೇನನ್ವಾಗತಂ ಪಾಪೇನ' (ಬೃ.ಉ. 6.3.22) ಇತ್ಯಾದ್ಯಾವಿಷ್ಕೃತತ್ವಾತ್ ।**

**ಬ್ರಹ್ಮವೈವರ್ತೇ ಚ-**

**'ಜ್ಯೋತಿರ್ಮಯೇಷು ದೇಹೇಷು ಸ್ವೇಚ್ಛಯಾ ವಿಶ್ವಮೋಕ್ಷಿಣಃ ।**
**ಭುಂಜತೇ ಸುಸುಖಾನ್ಯೇವ ನ ದುಃಖಾದೀನ್ ಕದಾಚನ ।।**

**ತೀರ್ಣಾ ಹಿ ಸರ್ವಶೋಕಾಂಸ್ತೇ ಪುಣ್ಯಪಾಪಾದಿವರ್ಜಿತಾಃ ।**

**(ನಿವೃತ್ತಸರ್ವದೋಷಾಸ್ತೇ ಪುಣ್ಯಪಾಪವಿರ್ಜಿತಾಃ ।)**
**ಸರ್ವದೋಷನಿವೃತ್ತಾಸ್ತೇ ಗುಣಮಾತ್ರಸ್ವರೂಪಿಣಃ ॥' ಇತಿ ॥**

ಕಾಠಕದಲ್ಲಿ 'ಸ್ವರ್ಗಲೋಕದಲ್ಲಿ ಯಾವುದೇ ಭಯವಿಲ್ಲ'' ಎಂದಿದೆ. ಆದ್ದರಿಂದ ''ತೀರ್ಣೋ ಹಿ ತದಾ' ಎಂಬ ಶ್ರುತಿಯು ಸ್ವರ್ಗದಲ್ಲಿ ದುಃಖತರಣವನ್ನು ಹೇಳುತ್ತದೆ, ಮೋಕ್ಷದಲ್ಲಿ ಅಲ್ಲ ಎನ್ನುವುದು ಯುಕ್ತವಲ್ಲ. ಏಕೆಂದರೆ, ನಿದ್ರಾವಸ್ಥೆಯಲ್ಲಿ ಅಥವಾ ಮೋಕ್ಷದಲ್ಲಿ ದುಃಖತರಣವನ್ನೇ ಅಲ್ಲಿ ಹೇಳಲಾಗಿದೆ. ಏಕೆಂದರೆ, ಬೃಹದಾರಣ್ಯಕ ಶ್ರುತಿಯಲ್ಲಿ ಇದೇ ಸಂದರ್ಭದಲ್ಲಿ ಹೀಗಿದೆ— ''ಇಲ್ಲಿ ತಂದೆಯು ತಂದೆಯಾಗಿರುವುದಿಲ್ಲ, ಪುಣ್ಯ-ಪಾಪಗಳ ಸಂಬಂಧವೂ ಇರುವುದಿಲ್ಲ'' ಎಂದು. ಸ್ವರ್ಗಸ್ಥರು ಮಕ್ಕಳು ಮಾಡಿದ ಶ್ರಾದ್ಧಭೋಕ್ತೃಗಳಾಗಿ ಇರುವುದರಿಂದ 'ಅಪಿತಾ ಭವತಿ' ತಂದೆ ಇಲ್ಲದವರು ಆಗಲಾರರು. ಅವರಿಗೆ ಪುಣ್ಯ-ಪಾಪಗಳ ಸಂಚಯವೂ ಇರುತ್ತದೆ. ಬ್ರಹ್ಮವೈವರ್ತದಲ್ಲಿದೆ— ''ಮುಕ್ತರು ಜ್ಯೋತಿರ್ಮಯದೇಹಗಳಲ್ಲಿ ಸ್ವೇಚ್ಛೆಯಿಂದ ಸುಖಗಳನ್ನು ಮಾತ್ರವೇ ಅನುಭವಿಸುತ್ತಾರೆ. ಎಂದೂ ದುಃಖವನ್ನು ಅನುಭವಿಸುವು ದಿಲ್ಲ. ಅವರು ಸಕಲ ದುಃಖಗಳನ್ನೂ ದಾಟಿರುತ್ತಾರೆ. ಅನಿಷ್ಟ ಪುಣ್ಯ-ಪಾಪಗಳು ಅವರಿಗಿಲ್ಲ. ಸಕಲದೋಷರಹಿತರು ಅವರು. ಗುಣಮಾತ್ರರೂಪರು'' ಎಂದು.

**ವಿವರಣೆ**—'ತೀರ್ಣೋ ಹಿ' ಎಂಬ ಬೃಹದಾರಣ್ಯಕಶ್ರುತಿಯು 'ತದಾ=ಆಗ' ಎಂದಿಷ್ಟೇ ಹೇಳುತ್ತದೆ. ಅದು 'ಸ್ವರ್ಗ ದೊರೆತಾಗ' ಎಂದೂ ಆಗಬಹುದು. ಆದ್ದರಿಂದ ಮುಕ್ತರಿಗೆ ದುಃಖವಿಲ್ಲ, ಎನ್ನುವುದಕ್ಕೆ ಅದು ನಿರವಕಾಶ ಪ್ರಮಾಣವಾಗುವುದಿಲ್ಲ. ಈ ಆಕ್ಷೇಪಕ್ಕೆ ಉತ್ತರ—ಬೃಹದಾರಣ್ಯಕದ 'ತೀರ್ಣೋಽಹಿ' ಎಂಬ ವಾಕ್ಯದ ಜೊತೆಯಲ್ಲಿ ''ಅತ್ರ ಪಿತಾಽಪಿತಾ ಭವತಿ' ಎಂದು ಮುಂತಾಗಿ ಹೇಳಲಾಗಿದೆ. ಇದು ಮೋಕ್ಷಕ್ಕೆ ಮಾತ್ರವೇ ಅನ್ವಯಿಸುತ್ತದೆ. ಆದ್ದರಿಂದ 'ತೀರ್ಣೋಽಹಿ' ಎಂಬ ವಾಕ್ಯ ಮೋಕ್ಷಪರ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ಅಭಾವಂ ಬಾದರಿರಾಹ ಹ್ಯೇವಮ್ ಓಂ ॥** (ಅತ್ರ ಮುಕ್ತಸ್ಯ ಭೋಗಾನುಪಪತ್ತಿಃ ನಿರಸ್ಯತೇ । ಅಭಾವಂ=ಚಿನ್ಮಾತ್ರದೇಹಾನ್ಯ-ಪ್ರಾಕೃತದೇಹಸ್ಯ ಅಭಾವಂ ಮುಕ್ತಾನಾಂ ಬಾದರಿಃ ಮನ್ಯತೇ, ಯೇನ ದುಃಖಾದಿಕಮ್ ಆಶಂಕ್ಯಂ ಸ್ಯಾತ್ । ಕುತಃ? ''ಅಶರೀರೋ ವಾವ ತದಾ ಭವತಿ'' ಇತಿ ಶ್ರುತಿರೇವಮಾಹ ಹಿ=ಯಸ್ಮಾತ್ ತಸ್ಮಾದಿತ್ಯರ್ಥಃ ।)

ಈ ಅಧಿಕರಣದಲ್ಲಿ ಮುಕ್ತರಿಗೆ ಭೋಗವು ಅನುಪಪನ್ನ ಎನ್ನುವುದನ್ನು

ನಿರಾಕರಿಸಲಾಗಿದೆ. ಅಭಾವಂ=ಚಿನ್ಮಾತ್ರದೇಹಾತಿರಿಕ್ತವಾದ ಪ್ರಾಕೃತದೇಹವು ಮುಕ್ತರಿಗೆ ಇಲ್ಲ, ಎಂದು ಬಾದರಿಗಳು ಹೇಳುತ್ತಾರೆ. ಅಂತಹ ದೇಹವಿದ್ದಲ್ಲಿ ದುಃಖವು ಬರುತ್ತಿತ್ತು. ಆದರೆ, ದುಃಖಕಾರಣವಾದ ಪ್ರಾಕೃತದೇಹವು ಮುಕ್ತರಿಗಿಲ್ಲ. ಏಕೆಂದರೆ, 'ಅಶರೀರೋ ವಾವ ತದಾ ಭವತಿ' ಎಂಬ ಶ್ರುತಿಯು ಹಾಗೆ ಹೇಳುತ್ತದೆ.

**॥ ಓಂ ಭಾವಂ ಜೈಮಿನಿರ್ವಿಕಲ್ಪಾಮ್ನಾನಾತ್ ಓಂ ॥** (ಕದಾಚಿತ್ ಭೋಗಾರ್ಥಂ ಮುಕ್ತಾನಾಂ ಚಿನ್ಮಾತ್ರದೇಹಾನ್ಯ–ಪ್ರಾಕೃತದೇಹಸ್ಯ ಭಾವಂ=ಸತ್ವಂ ಜೈಮಿನಿಃ ಮನ್ಯತೇ । ಕುತಃ? 'ಚಿತಾ ವಾ ಅಚಿತಾ ವಾ' ಇತಿ ಶ್ರುತೌ ವಿಕಲ್ಪಾಮ್ನಾನಾತ್ ಇತ್ಯರ್ಥಃ ।)

ಕೆಲವೊಮ್ಮೆ ಸುಖಭೋಗಕ್ಕಾಗಿ ಮುಕ್ತರಿಗೆ ಚಿನ್ಮಾತ್ರದೇಹಕ್ಕಿಂತ ಭಿನ್ನವಾದ ಪ್ರಾಕೃತದೇಹದ ಭಾವಂ=ಅಸ್ತಿತ್ವವನ್ನು ಜೈಮಿನಿಗಳು ಒಪ್ಪುತ್ತಾರೆ. ವಿಕಲ್ಪಾಮ್ನಾನಾತ್='ಚಿತಾ ವಾ ಅಚಿತಾ ವಾ' ಎಂಬ ಶ್ರುತಿಯಲ್ಲಿ 'ಚಿತ್ ಅಥವಾ ಅಚಿತ್‌ದೇಹದಿಂದ' ಎಂದು ವಿಕಲ್ಪವನ್ನು ಹೇಳಿರುವುದರಿಂದ.

**॥ ಓಂ ದ್ವಾದಶಾಹವದುಭಯವಿಧಂ ಬಾದರಾಯಣೋಽತಃ ಓಂ ॥** (ಅತ ಇತಿ ಮತದ್ವಯೋಕ್ತ–ಪ್ರಮಾಣಪರಾಮರ್ಶಃ । ಉಭಯವಿಧಂ=ಮುಕ್ತಾನಾಂ ದೇಹ ಭಾವಾಭಾವಾಖ್ಯಂ ಪ್ರಾಗುಕ್ತಮ್ ಉಭಯವಿಧಂ ಬಾದರಾಯಣಃ ಸ್ವಮತಂ ಮನ್ಯತೇ। ಕುತಃ? ಅತಃ=ಉಭಯೋರಪಿ ಪ್ರಮಾಣವತ್ವಾತ್, ಇತ್ಯರ್ಥಃ ।

ವಿರುದ್ಧಂ ಕಥಂ ಸ್ವಮತಂ? ಅತ ಉಕ್ತಂ–ದ್ವಾದಶೇತಿ ॥ ಯಥಾ ದ್ವಾದಶಾಹಾಖ್ಯ ಯಾಗಸ್ಯ ಕ್ರತುತ್ವಂ ಸತ್ರತ್ವಂ ಯಜಮಾನೇಚ್ಛಯಾ ಏಕಾನೇಕಯಜಮಾನತ್ವಾಭ್ಯಾಂ ಅವಿರುದ್ಧಮ್ ತಥಾ ಮುಕ್ತಾನಾಂ ಇಚ್ಛಯಾ ದೇಹಭಾವಾಭಾವೌ ನ ವಿರುದ್ಧೌ। ಅತ್ರ ಭಾಷ್ಯೇ ಕ್ರತುಶಬ್ದೋ ಅಹರ್ಗಣಾಖ್ಯಾಹೀನಪರಃ ಇತಿ ಗುರುಪಾದಾಃ ।)

ಅತಃ=ಪ್ರಾಕೃತದೇಹಭಾವ–ಅಭಾವಗಳಿಗೆ ಪ್ರಮಾಣವಿರುವುದರಿಂದ ದ್ವಾದಶಾಹವತ್='ದ್ವಾದಶಾಹ' ಎಂಬ ಯಾಗದಂತೆ ಉಭಯವಿಧಂ=ಹಿಂದೆ ಹೇಳಿರುವ ಎರಡೂ ವೈವಿಧ್ಯಗಳನ್ನೂ ಬಾದರಾಯಣಃ=ಶ್ರೀವೇದವ್ಯಾಸರು ತಿಳಿಯುತ್ತಾರೆ.

**॥ ಓಂ ತನ್ವಭಾವೇ ಸಂಧ್ಯವದುಪಪತ್ತೇಃ ಓಂ ॥** (ತನ್ವಭಾವೇ=ಮುಕ್ತೌ ಬಾಹ್ಯದೇಹಾಭಾವೇಽಪಿ ಉಪಪತ್ತೇಃ, ಭೋಗಸ್ಯ ಇತಿ ಶೇಷಃ । ಕಥಂ ? ಸಂಧ್ಯವತ್ । ಸ್ವಪ್ನಾವಸ್ಥಾಯಾಂ ದೇಹಾಭಿಮಾನಾಭಾವೇಽಪಿ ಯಥಾ ಭೋಗಃ ತಥೇತಿ । ಅನಭಿಮಾನಸ್ಯ ಅಭಾವಸಾಮ್ಯಾತ್ ।)

ತನ್ವಭಾವೇ=ಮುಕ್ತಿಯಲ್ಲಿ ಬಾಹ್ಯದೇಹವು ಇಲ್ಲದೇ ಇದ್ದರೂ ಸಂಧ್ಯವತ್=ಸ್ವಪ್ನಾವಸ್ಥೆಯಂತೆ ಉಪಪತ್ತೇಃ=ಭೋಗವು ಮುಕ್ತರಿಗೆ ಉಪಪನ್ನವಾಗುವುದರಿಂದ ಬಾಹ್ಯದೇಹದ ಅಗತ್ಯವಿಲ್ಲ.

**॥ ಓಂ ಭಾವೇ ಜಾಗ್ರದ್ವತ್ ಓಂ ॥** (ಯಥಾ ಜಾಗ್ರದ್ದಶಾಯಾಂ ದೇಹಭಾವೇ ಭೋಗಃ ತಥಾ ಮುಕ್ತಾವಪಿ ದೇಹಭಾವೇ ಭೋಗೋ ಯುಕ್ತಃ ಇತ್ಯರ್ಥಃ। ದೇಹಸತ್ವಪಕ್ಷೇ ಭೋಗಾಯೋಗಾಭಾವಾತ್ ಅಯಂ ಯೋಗಃ ಅವಕ್ತುಂ ಶಕ್ಯಃ ಇತಿ ಚೇನ್ನ। 'ಪ್ರದೀಪವತ್' ಇತಿ ವಕ್ಷ್ಯಮಾಣದೋಷನಿರಾಸಪ್ರಸ್ತಾವಾರ್ಥತ್ವಾದಸ್ಯ। ಅನ್ಯಥಾ ಏತದ್ವಿಷಯತಾ ತಸ್ಯ ನ ಜ್ಞಾಯೇತ ಇತಿ ಭಾವಃ। )

ಭಾವೇ=ದೇಹವು ಇದ್ದಲ್ಲಿ ಜಾಗ್ರದ್ವತ್=ಜಾಗ್ರದವಸ್ಥೆಯಂತೆ ಮುಕ್ತರಿಗೂ ಭೋಗವು ಯುಕ್ತವಾಗುತ್ತದೆ.

ವಸ್ತುತಃ 'ದೇಹವಿದ್ದರೆ ಭೋಗ ಹೇಗೆ?' ಎನ್ನುವ ಪ್ರಶ್ನೆಯೇ ಇಲ್ಲವಾದುದರಿಂದ ಈ ಸೂತ್ರದ ಅಗತ್ಯವಿಲ್ಲ. ಆದರೂ ದೇಹವಿದ್ದರೆ ದುಃಖವೂ ಬಂದೀತು! ಎಂಬ ಆಕ್ಷೇಪಕ್ಕೆ ಆಸ್ಪದ ಮಾಡಿಕೊಟ್ಟು ಮುಂದಿನ ಸೂತ್ರದ ಸಾರ್ಥಕ್ಯಕ್ಕಾಗಿ ಈ ಸೂತ್ರ ಬೇಕಾಗಿದೆ.

**॥ ಓಂ ಪ್ರದೀಪವದಾವೇಶಸ್ತಥಾ ಹಿ ದರ್ಶಯತಿ ಓಂ ॥** (ಮುಕ್ತಾನಾಮ್ ಆವೇಶಃ=ಶುದ್ಧ ಪ್ರಕೃತಿಮಯ–ಜ್ಯೋತೀರೂಪ–ಬಾಹ್ಯದೇಹಪ್ರವೇಶಃ ಪ್ರದೀಪವತ್=ಪ್ರದೀಪಸ್ಯ ದೀಪಿಕಾವೇಶ ಇವ। ಯಥಾ ಪ್ರದೀಪಃ ದೀಪಿಕಾವಿಷ್ಟಃ ಸನ್ ತತ್‌ಸ್ಥತೈಲಾದ್ಯೇವ ಭುಂಕ್ತೇ ನ ಕಾಷ್ಠಾರ್ಣ್ಯಾದಿ ತಥಾ ಮುಕ್ತಃ ಜಡದೇಹಪ್ರವಿಷ್ಟೋಽಪಿ ನ ದುಃಖಂ ಭುಂಕ್ತೇ ಕಿಂತು ಸುಖಮೇವ। ಕುತಃ ? 'ತೀರ್ಣೋ ಹಿ ತದಾ ಸರ್ವಾನ್ ಶೋಕಾನ್ ಹೃದಯಸ್ಯ ಭವತಿ' ಇತಿ ಶ್ರುತಿಃ · ತಥಾ=ಮುಕ್ತೌ ದುಃಖಾಭಾವಂ ದರ್ಶಯತಿ ಹಿ ಯತಃ ಅತ ಇತಿ ।)

ಆವೇಶಃ=ಶುದ್ಧಪ್ರಾಕೃತ ಜ್ಯೋತಿರ್ಮಯದೇಹದ ಪ್ರವೇಶವು ಮುಕ್ತರಿಗೆ ಪ್ರದೀಪವತ್=ದೀಪಕ್ಕೆ ಬತ್ತಿಯಲ್ಲಿ ಪ್ರವೇಶದಂತೆ. ತಥಾ=ಮುಕ್ತನು ಜಡದೇಹದಲ್ಲಿ ಪ್ರವೇಶ ಮಾಡಿದರೂ ಅವನಿಗೆ ದುಃಖವಿಲ್ಲ, ಎಂದು ದರ್ಶಯತಿ=ಶ್ರುತಿ ಇದೆ.

**॥ ಓಂ ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ ಓಂ ॥** (ಸ್ವಾಪ್ಯಯಃ ಸುಪ್ತಿಃ। ಸಂಪತ್ತಿಃ ಮುಕ್ತಿಃ। ಅನ್ಯತರಶಬ್ದಃ ಅತ್ರ ಉಭಯಪರಃ।

''ತೀರ್ಣೋ ಹಿ'' ಇತಿ ವಾಕ್ಯಂ ಸುಪ್ತಿ–ಮುಕ್ತ್ಯುಭಯಪರಮ್, ನ ಸ್ವರ್ಗವಿಷಯಮ್। ಕುತಃ? ಹಿ=ಯಸ್ಮಾತ್ ಆವಿಷ್ಕೃತಂ=ತದುಭಯವಿಷಯತ್ವಮ್ ಅಸ್ಯ ವಾಕ್ಯಸ್ಯ ವಿಸ್ಪಷ್ಟಮ್ ಇತ್ಯರ್ಥಃ। 'ಅತ್ರ 'ಪಿತಾಪಿತಾ ಭವತ್ಯನನ್ವಾಗತಂ ಪುಣ್ಯೇನ' ಇತಿ ಅಪಿತೃತ್ವ–ಪುಣ್ಯಪಾಪಾದ್ಯಸಂಗತ್ವ ಲಿಂಗಶ್ರವಣಾತ್ ಇತಿ ಭಾವಃ।)

ಸ್ವಾಪ್ಯಯ ಎಂದರೆ ನಿದ್ರೆ, ಸಂಪತ್ತಿ ಎಂದರೆ ಮೋಕ್ಷ. ಹಿ=ಯಾವ ಕಾರಣದಿಂದ 'ತೀರ್ಣೋ ಹಿ' ಎಂಬ ವಾಕ್ಯಕ್ಕೆ ಆವಿಷ್ಕೃತಂ=ನಿದ್ರೆ ಮತ್ತು ಮೋಕ್ಷವಿಷಯಕತ್ವವು ''ಪಿತಾ ಅಪಿತಾ ಭವತಿ'' ಎನ್ನುವ ಮೂಲಕ ಸ್ಫುಟವಾಗಿದೆಯೋ ಆದ ಕಾರಣ ಆ ವಾಕ್ಯವು ಸ್ವಾಪ್ಯಯ–ಸಂಪತ್ತ್ಯೋಃ=ನಿದ್ರೆ ಮತ್ತು ಮೋಕ್ಷಗಳ ಅನ್ಯತರಾಪೇಕ್ಷಂ= ಉಭಯ ವಿಷಯಕವಾಗಿದೆ, ಸ್ವರ್ಗವಿಷಯಕವಲ್ಲ.

## ಶಾಂಕರಭಾಷ್ಯದಲ್ಲಿ ಅಭಾವಾಧಿಕರಣ

**॥ ಅಭಾವಂ ಬಾದರಿರಾಹ ಹ್ಯೇವಮ್ ॥** ''ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠಂತಿ'' ಎಂದು ಮುಕ್ತನಿಗೆ ಸಂಕಲ್ಪವನ್ನು ಹೇಳಿರುವ ಕಾರಣ ಮನಸ್ಸು ಇದೆ, ಎಂದಂತಾಯಿತು. ಮನಸ್ಸು ಮಾತ್ರವೇ ಹೊರತು ಇತರ ಶರೀರೇಂದ್ರಿಯಾದಿಗಳು ಅವನಿಗೆ ಇರುವುದಿಲ್ಲ. ''ಮನಸೈವೇತಾನ್ ಕಾಮಾನ್ ಪಶ್ಯನ್ ರಮತೇ' ಎಂದು ಛಾಂದೋಗ್ಯಶ್ರುತಿ ಇರುವುದರಿಂದ ಇತರ ದೇಹೇಂದ್ರಿಯಾದಿಗಳು ಇಲ್ಲವೆಂದು ತಿಳಿಯುತ್ತದೆ. ಇದು ಬಾದರಿಗಳ ಮತ.

**॥ ಭಾವಂ ಜೈಮಿನಿರ್ವಿಕಲ್ಪಾಮ್ನಾನಾತ್ ॥** ಜೈಮಿನಿಗಳಾದರೋ ಮನಸ್ಸಿನಂತೆಯೇ ಶರೀರೇಂದ್ರಿಯಗಳೂ ಮುಕ್ತನಿಗೆ ಇದೆ ಎಂದು ಹೇಳುತ್ತಾರೆ. ''ಸ ಏಕಧಾ ಭವತಿ। ಸ ತ್ರಿಧಾ ಭವತಿ'' ಎಂದು ಏಕರೂಪನಾಗಿಯೂ ಅನೇಕರೂಪನಾಗಿಯೂ ಮುಕ್ತನು ಇರುತ್ತಾನೆ, ಎಂದು ರೂಪವಿಕಲ್ಪಗಳನ್ನು ಹೇಳಲಾಗಿದೆಯಾದ್ದರಿಂದ.

**॥ ಓಂ ದ್ವಾದಶಾಹವದುಭಯವಿಧಂ ಬಾದರಾಯಣೋಽತಃ ಓಂ ॥** ಬಾದರಾಯಣರು ಸಶರೀರತ್ವ–ಅಶರೀರತ್ವಗಳೆರಡನ್ನೂ ಮುಕ್ತನಿಗೆ ಅಂಗೀಕರಿಸುತ್ತಾರೆ. ಅತ ಏವ=ಎರಡಕ್ಕೂ ಶ್ರುತಿ ಪ್ರಮಾಣವಿರುವುದರಿಂದ. ಮುಕ್ತನು ಸತ್ಯಸಂಕಲ್ಪನಾದುದರಿಂದ ಅವನ ಸಂಕಲ್ಪಕ್ಕೆ ಅನುಗುಣವಾಗಿ ಶರೀರವೂ ಬರುತ್ತದೆ, ಶರೀರಾಭಾವವೂ ಇರುತ್ತದೆ. ದ್ವಾದಶಾಹಕ್ರತು ಏಕಾನೇಕಕರ್ತೃಭೇದೇನ ಅಹೀನ ಮತ್ತು ಸತ್ರ ಎನಿಸಿದಂತೆ.

**॥ ಓಂ ತನ್ವಭಾವೇ ಸಂಧ್ಯವದುಪಪತ್ತೇಃ ಓಂ ॥** ಶರೀರವು ಇಲ್ಲದಿರುವಾಗ ಸಂಧ್ಯವತ್=ಸ್ವಪ್ನದಂತೆ ಉಪಪತ್ತೇಃ=ವಿಷಯಭೋಗವು ಬರುತ್ತದೆ. ಸ್ವಪ್ನಾವಸ್ಥೆಯಲ್ಲಿ ಶರೀರಾದಿಗಳಿಲ್ಲದೆಯೂ ಜ್ಞಾನ ಮಾತ್ರದಿಂದಲೇ ವಿಷಯಭೋಗವಾಗುವಂತೆ ಮೋಕ್ಷ ದಲ್ಲೂ ಇಂದ್ರಿಯಾದಿಗಳು ಇಲ್ಲದೆಯೂ ಪಿತ್ರಾದಿಕಾಮನೆಯು ಪೂರ್ಣಗೊಳ್ಳುತ್ತವೆ.

**॥ ಓಂ ಭಾವೇ ಜಾಗ್ರದ್ವತ್ ಓಂ ॥** ಶರೀರಾದಿಗಳು ಇದ್ದರೆ ಎಚ್ಚರದಲ್ಲಿ ನಮಗೆ ಆಗುವಂತೆ ಸ್ಥೂಲಭೋಗವೇ ಮುಕ್ತರಿಗೂ ಆಗುತ್ತದೆ.

## ಶಾಂಕರಭಾಷ್ಯದಲ್ಲಿ ಪ್ರದೀಪಾಧಿಕರಣ

**॥ ಪ್ರದೀಪವದಾವೇಶಸ್ತಥಾ ಹಿ ದರ್ಶಯತಿ ॥** ಸುಗುಣೋಪಾಸಕನು ಮೋಕ್ಷದಲ್ಲಿ ''ಸ ಏಕಧಾ ಭವತಿ, ತ್ರಿಧಾ ಭವತಿ, ಪಂಚಧಾ, ಸಪ್ತಧಾ, ನವಧಾ'' (ಛಾಂ.7.26.2) ಎಂದು ಉಪನಿಷತ್ತಿನಲ್ಲಿ ಹೇಳಲಾಗಿದೆ. ಆದರೆ ಅಂತಃಕರಣಾವಚ್ಛಿನ್ನಚೇತನ ಜೀವ. ಅಂತಃಕರಣ ಒಂದೇ. ಅದಕ್ಕೆ ದೂರ ದೂರದ ಅನೇಕ ಶರೀರದೊಂದಿಗೆ ಸಂಬಂಧ ಹೇಗೆ? ಸಂಬಂಧವಿಲ್ಲದೇ ಹೋದರೆ ದೇಹವು ಮರದಗೊಂಬೆಯಂತಾದೀತು? ಈ ಆಕ್ಷೇಪಕ್ಕೆ ಸೂತ್ರವು ಪ್ರದೀಪದೃಷ್ಟಾಂತದಿಂದ ಸಮಾಧಾನ ಕೊಟ್ಟಿದೆ. ಒಂದೇ ದೀಪವನ್ನು ಅನೇಕ ಬತ್ತಿಗಳಿಗೆ ಹಚ್ಚಿ ಅನೇಕವನ್ನಾಗಿ ಮಾಡಬಹುದು. ಅದರಂತೆ ಯೋಗಿಯು ತನ್ನ ಯೋಗಸಾಮರ್ಥ್ಯದಿಂದ ಸಮನಸ್ಕ-ಸೇಂದ್ರಿಯಶರೀರಗಳನ್ನು ಸೃಷ್ಟಿಮಾಡುತ್ತಾನೆ. ತತ್ತದ್ದೇಹಗತ ಅಂತಃಕರಣಗಳಲ್ಲಿ ಅವಿದ್ಯೋಪಹಿತನಾದ ಯೋಗಿಯು ಅಭಿವ್ಯಕ್ತನಾಗುತ್ತಾನೆ. ಭಾಮತಿಯಲ್ಲಿ ''ತಾನಿಚ ಏಕಪದೇ ಪ್ರವಿಶ್ಯ'' ಎಂದಿದೆ. ತನ್ನಿಂದ ಸೇಂದ್ರಿಯ-ಸಮನಸ್ಕವಾಗಿ ಸೃಷ್ಟವಾದ ಅನೇಕ ದೇಹಗಳಲ್ಲಿ ಯೋಗಿಯು ಪ್ರವೇಶ ಮಾಡುತ್ತಾನೆ, ಎಂದು ಅರ್ಥ. ಆದರೆ, ಯೋಗಿಯ ಅಂತಃಕರಣವು ಒಂದೇ ಮತ್ತು ಪರಿಚ್ಛಿನ್ನ. ಆದುದರಿಂದ ತದಂತಃಕರಣಾವಚ್ಛಿನ್ನನಾದ ಯೋಗಿಯು ಅನೇಕ ಶರೀರಗಳಲ್ಲಿ ಪ್ರವೇಶ ಮಾಡಲು ಸಾಧ್ಯವಿಲ್ಲ. ಅದಕ್ಕಾಗಿ ಕಲ್ಪತರು ವ್ಯಾಖ್ಯಾನದಲ್ಲಿ ಹೀಗೆ ವ್ಯಾಖ್ಯಾನಿಸಲಾಗಿದೆ. ''ನೈಜಾದಂತಃಕರಣಾತ್ ಬಹಿರಪಿ ಯೋಗಪ್ರಭಾವಾತ್ ವ್ಯಾಪ್ತಿಸಂಭವಾತ್ ಅಂತಃಕರಣಾಂತರೇಷು ಸೃಷ್ಟೇಷು ಅಸ್ಯಾತ್ಮನೋ ಅಭಿವ್ಯಕ್ತಿಃ ಸಂಭವೇತ್, ತದ್ವಶಾಚ್ಚ ಶರೀರಾಂತರೇಷ್ವಪಿ ಭೋಗಸಂಭವಃ'' ಯೋಗಿಯ ಯೋಗಸಾಮರ್ಥ್ಯದಿಂದಾಗಿ ಅವನ ಅಂತಃಕರಣದ ವ್ಯಾಪ್ತಿ ದೇಹದಿಂದ ಹೊರಗೂ ಇದೆ. ಆದ್ದರಿಂದ ದೇಹಾಂತರ ದಲ್ಲಿರುವ ಅಂತಃಕರಣದಲ್ಲೂ ಅವನ ಅಭಿವ್ಯಕ್ತಿಯಾಗಿ ತಚ್ಛರೀರಾವಚ್ಛೇದೇನ ಅವನಿಗೆ

ಭೋಗವಾಗುತ್ತದೆ. ಇಲ್ಲಿಯೂ 'ವ್ಯಾಪ್ತಿಸಂಭವಾತ್' ಎಂದರೆ ಯಾವುದರ ವ್ಯಾಪ್ತಿಸಂಭವ? ಎಂದು ಸ್ಪಷ್ಟವಾಗುವುದಿಲ್ಲ. ಆದಕ್ಕಾಗಿ ಕಲ್ಪತರು ಪರಿಮಳದಲ್ಲಿ ಅದನ್ನು ವಿವರಿಸಲಾಗಿದೆ–ಅವಿದ್ಯೋಪಹಿತಸ್ಯ ಸಗುಣಾವಿದ್ಯಾತ್ಮನಃ ತತ್ತದಂತಃಕರಣೇಷು ಯಾ ಅಭಿವ್ಯಕ್ತಿಃ ತದಭಿಪ್ರಾಯೋऽತ್ರ ವ್ಯಾಪ್ತಿಶಬ್ದಃ'' ಎಂದು. ಅನೇಕ ಅಂತಃಕರಣಗಳಲ್ಲಿ ಅವಿದ್ಯೋಪಹಿತನಾದ ಯೋಗಿಯು ಅಭಿವ್ಯಕ್ತನಾಗುತ್ತಾನೆ, ಎಂದರ್ಥ.

ಇಲ್ಲಿ ಪ್ರದೀಪದ ದೃಷ್ಟಾಂತವಿದೆ. ಒಂದೇ ದೀಪದಿಂದ ಬೆಳಗಿದ ಅನೇಕ ದೀಪಗಳಿಗೆ ಯದ್ಯಪಿ ಸ್ವರೂಪೈಕ್ಯವಿಲ್ಲ. ''ತಸ್ಯೈಕ್ಯಂ ಸಾದೃಶ್ಯಾದ್ ಉಪಚರ್ಯತೇ'' ಎಂದು ಕಲ್ಪತರುವಿನಲ್ಲಿದೆ.

**॥ ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ ॥** ಮೋಕ್ಷದಲ್ಲಿ ''ತತ್ ಕೇನ ಕಂ ಪಶ್ಯೇತ್'' (ಬೃ.4.5.15) ಎಂದು ದರ್ಶನಾದಿಗಳೇ ಇಲ್ಲವೆಂದು ಶ್ರುತಿ ಹೇಳುತ್ತದೆ. ಹೀಗಿರುವಾಗ ಯೋಗಿಯು ಅನೇಕ ಶರೀರಗಳಲ್ಲಿ ಭೋಗಮಾಡುತ್ತಾನೆ, ಎನ್ನುವುದು ಹೇಗೆ? ಆದಕ್ಕೆ ಈ ಸೂತ್ರದ ಸಮಾಧಾನ–ದರ್ಶನಾದ್ಯಭಾವವನ್ನು ಹೇಳಿರುವುದು ಸ್ವಾಪ್ಯಯ=ನಿದ್ರಾವಸ್ಥೆ, ಸಂಪತ್ತಿ=ಬ್ರಹ್ಮಭಾವಗಳಲ್ಲಿ ಮಾತ್ರ. ಇದು ಸ್ವರ್ಗಾದಿಗಳಂತೆ ಸ್ಥಾನಾಂತರ. ಆದ್ದರಿಂದ ದರ್ಶನಾದಿಗಳು ಈ ಮುಕ್ತಿಯಲ್ಲಿ ಇವೆ. ದರ್ಶನಾದ್ಯಭಾವೋಕ್ತಿ ನಿದ್ರಾವಸ್ಥೆ– ಬ್ರಹ್ಮಭಾವಾವಸ್ಥೆಗಳಲ್ಲಿ ಎನ್ನುವುದನ್ನು ಆವಿಷ್ಕೃತಂ ಹಿ=ಬೃಹದಾರಣ್ಯಕದ ಆ ಪ್ರಕರಣದಲ್ಲೇ ಸ್ಪಷ್ಟೀಕರಿಸಲಾಗಿದೆ. ''ಏತೇಭ್ಯೋ ಭೂತೇಭ್ಯಃ ಸಮುತ್ಥಾಯ ತಾನ್ಯೇವಾನು ವಿನಶ್ಯತಿ'' ''ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್'' (ಬೃ.4.3.14) ''ಯತ್ರ ಸುಪ್ತೋ ನ ಕಂಚನ ಕಾಮಂ ಕಾಮಯತೇ'' (ಬೃ.4.3.19) ಎಂದು ಮುಂತಾಗಿ.

ಹೀಗೆ ಶಾಂಕರಭಾಷ್ಯದಲ್ಲಿ ಕೊನೆಯ ಎರಡು ಸೂತ್ರಗಳು ಪ್ರತ್ಯೇಕಾಧಿಕರಣಗಳು.

**ರಾಮಾನುಜಭಾಷ್ಯ**ದಲ್ಲಿ ದ್ವೈತಭಾಷ್ಯದಂತೆ ''ಅಭಾವಂ ಬಾದರಿರಾಹ ಹಿ'' ಎಂಬಲ್ಲಿಂದ 7 ಸೂತ್ರಗಳ ಒಂದೇ ಅಧಿಕರಣ. ಸೂತ್ರಾರ್ಥದಲ್ಲಿ ಸ್ವಲ್ಪ ವ್ಯತ್ಯಾಸಗಳಿವೆ.

**॥ ತನ್ವಭಾವೇ ಸಂಧ್ಯವದುಪಪತ್ತೇಃ ॥** ಸ್ವಪ್ನದಲ್ಲಿ ಪದಾರ್ಥಗಳನ್ನು ಪರಮಾತ್ಮನೇ ಸೃಜಿಸಿದಂತೆ ಮೋಕ್ಷದಲ್ಲೂ ಕೆಲವೊಮ್ಮೆ ಪರಮಾತ್ಮನೇ ಮುಕ್ತನಿಗೆ ತನು–ಉಪಕರಣಾದಿಗಳನ್ನು ಸೃಷ್ಟಿಸಿಕೊಡುತ್ತಾನೆ, ಎಂದರ್ಥ.

**॥ ಭಾವೇ ಜಾಗ್ರದ್ವತ್ ॥** ಮುಕ್ತನು ತನ್ನ ಸಂಕಲ್ಪದಿಂದಲೇ ಶರೀರ

ಪಿತೃಲೋಕಾದಿಗಳನ್ನು ಸೃಷ್ಟಿಮಾಡಿದಂತೆ ಎಚ್ಚರದಲ್ಲಿರುವ ವ್ಯಕ್ತಿಯಂತೆ ಅದನ್ನು ಅನುಭವಿಸುತ್ತಾನೆ. ಪರಮಾತ್ಮನೂ ದಶರಥ–ವಸುದೇವಾದಿ ಪಿತೃಲೋಕಗಳನ್ನು ಸೃಷ್ಟಿ ಮಾಡುತ್ತಾನೆ.

**।। ಪ್ರದೀಪವದಾವೇಶಸ್ತಥಾ ಹಿ ದರ್ಶಯತಿ ।।** ಸಾಂಸಾರಿಕ ಆತ್ಮನಿಗೆ ದೇಹದಲ್ಲಿ ಮಾತ್ರ ಜ್ಞಾನವ್ಯಾಪ್ತಿ. ಮುಕ್ತನು ತನ್ನ ಚೈತನ್ಯಪ್ರಭೆಯಿಂದ ಅನೇಕ ದೇಹಗಳಲ್ಲಿ ವ್ಯಾಪಿಸುತ್ತಾನೆ.

**।। ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ ।।** 'ನ ಬಾಹ್ಯಂ ಕಿಂಚನ ವೇದ' ಎಂದು ಹೇಳಿರುವ ಜ್ಞಾನಾಭಾವವು ಮೋಕ್ಷ ವಿಷಯಕವಲ್ಲ. ಸ್ವಾಪ್ಯಯ=ನಿದ್ರೆ, ಸಂಪತ್ತಿ=ಮರಣವಿಷಯಕ. ಆದ್ದರಿಂದ ಮೋಕ್ಷದಲ್ಲಿ ಜ್ಞಾನವಿದೆ. ಮುಕ್ತನಿಗೆ ಶ್ರುತಿಯಿಂದ ಸರ್ವಜ್ಞತ್ವವು ಆವಿಷ್ಕೃತಂ ಹಿ=''ಸವಾ ಏಷ ದಿವ್ಯೇನ ಚಕ್ಷುಷಾ...' (ಛಾಂ.8.12.5) ಎಂಬ ಶ್ರುತಿಯಲ್ಲಿ ಹೇಳಲಾಗಿದೆ.

**ಇಲ್ಲಿಗೆ ಅಭಾವಾಧಿಕರಣವು ಮುಗಿಯಿತು.**

## ೯. ಸರ್ವಕಾಮಾಧಿಕರಣಮ್

### ।। ಓಂ ಜಗದ್ವ್ಯಾಪಾರವರ್ಜಮ್ ಓಂ ।। ೧೭ ।।

**'ಸರ್ವಾನ್ ಕಾಮಾನಾಪ್ತ್ವಾಽಮೃತಃ ಸಮಭವತ್'(ಐ.ಆ. 2.5.4) ಇತ್ಯುಚ್ಯತೇ । ತತ್ರ ಸೃಷ್ಟ್ಯಾದಿಭ್ಯೋಽನ್ಯಾನಾಪ್ನೋತಿ ।।**

ಐತರೇಯಾರಣ್ಯಕದಲ್ಲಿ ಮುಕ್ತನು ಸಕಲಾಭೀಷ್ಟಗಳನ್ನೂ ಹೊಂದಿ ಅಮೃತನಾಗುತ್ತಾನೆ, ಎಂದಿದೆ. ಇಲ್ಲಿ ಸಕಲಾಭೀಷ್ಟವೆಂದರೆ ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವ ಇಚ್ಛೆ ಬಿಟ್ಟು ಇತರ ಇಚ್ಛೆಗಳು. ಸೃಷ್ಟ್ಯಾದಿಕ್ರಿಯೆಗಳನ್ನು ಹೊರತಾದ ಇತರ ಕ್ರಿಯೆಗಳನ್ನು ಮುಕ್ತನು ಮಾಡುತ್ತಾನೆ. ಸೃಷ್ಟ್ಯಾದಿಕ್ರಿಯೆಗಳು ಭಗವಂತನಿಗೆ ಮಾತ್ರ ಮೀಸಲು.

**ಕುತಃ ? –**

### ।। ಓಂ ಪ್ರಕರಣಾದಸನ್ನಿಹಿತತ್ವಾಚ್ಚ ಓಂ ।। ೧೮ ।।

**ಜೀವಪ್ರಕರಣತ್ವಾಜ್ಜೀವಾನಾಂ ತಾದೃಕ್ಸಾಮರ್ಥ್ಯವಿದೂರತ್ವಾಚ್ಚ । ವಾರಾಹೇ ಚ-**

**'ಸ್ವಾಧಿಕಾನಂದಸಂಪ್ರಾಪ್ತೌ ಸೃಷ್ಟ್ಯಾದಿವ್ಯಾಪೃತಿಷ್ವಪಿ ।**
**ಮುಕ್ತಾನಾಂ ನೈವ ಕಾಮಃ ಸ್ಯಾದನ್ಯಾನ್ ಕಾಮಾಂಸ್ತು ಭುಂಜತೇ ॥**

**ತದ್ಯೋಗ್ಯತಾ ನೈವ ತೇಷಾಂ ಕದಾಚಿತ್ ಕ್ವಾಪಿ ವಿದ್ಯತೇ ।**
**ನಚಾಯೋಗ್ಯಂ ವಿಮುಕ್ತೋಽಪಿ ಪ್ರಾಪ್ನುಯಾನ್ನ ಚ ಕಾಮಯೇತ್ ॥'**

**ಇತಿ ॥**

ಏಕೆ ಜಗದ್‌ವ್ಯಾಪಾರವು ಮುಕ್ತನಿಗಿಲ್ಲ? ಪ್ರಕರಣಾತ್=''ಸರ್ವಾನ್ ಕಾಮಾನ್'' ಎಂಬುದು ಜೀವಪ್ರಕರಣವಾಗಿದ್ದು ಅಸನ್ನಿಹಿತತ್ವಾತ್=ಜೀವರಿಗೆ ಜಗದ್ವ್ಯಾಪಾರದ ಸಾಮರ್ಥ್ಯವು ಅತಿದೂರವಾದುದರಿಂದ. ವಾರಾಹವಚನದಲ್ಲಿ ಹೀಗಿದೆ—ತನ್ನ ಯೋಗ್ಯತೆಗೆ ಮೀರಿದ ಆನಂದಪ್ರಾಪ್ತಿಯಲ್ಲೂ ಸೃಷ್ಟ್ಯಾದಿವ್ಯಾಪಾರದಲ್ಲೂ ಮುಕ್ತರಿಗೆ ಅಭಿಲಾಷೆಯು ಎಂದೂ ಬರುವುದಿಲ್ಲ. ಇತರ ಅಭೀಷ್ಟಗಳನ್ನು ಅವರು ಪಡೆಯುತ್ತಾರೆ. ಸೃಷ್ಟ್ಯಾದಿವ್ಯಾಪಾರಯೋಗ್ಯತೆಯು ಅವರಿಗೆ ಎಲ್ಲೂ ಯಾವ ಕಾಲಕ್ಕೂ ಇಲ್ಲ. ಮುಕ್ತನೂ ತನಗೆ ಅಯೋಗ್ಯವಾದುದನ್ನು ಬಯಸುವುದೂ ಇಲ್ಲ. ಅವನಿಗೆ ಅದು ಸಿಗುವುದೂ ಇಲ್ಲ.

**ವಿವರಣೆ**—''ಶರೀಭೇದಾದೂರ್ಧ್ವಮುತ್ಕ್ರಮ್ಯ'' ಎಂದು ಐತರೇಯದ ಪ್ರಕರಣವು ಆರಂಭವಾಗಿ ಆ ಪ್ರಕರಣದಲ್ಲಿ ''ಸರ್ವಾನ್ ಕಾಮಾನ್'' ಎಂಬ ವಾಕ್ಯವು ಪಠಿತವಾಗಿದೆ. ಶರೀರ ಬಿಟ್ಟು ಹೋಗುವವನು ಜೀವ. ಆದ್ದರಿಂದ ಇದು ಜೀವಪ್ರಕರಣ. ಜೀವನಿಗೆ ಜಗತ್ ಸೃಷ್ಟಿಯನ್ನು ಮಾಡುವ ಸಾಮರ್ಥ್ಯವಿಲ್ಲ. ಹೀಗಾಗಿ, 'ಸರ್ವಾನ್ ಕಾಮಾನ್' ಎಂಬ ಶ್ರುತಿಯಲ್ಲಿರುವ ಸರ್ವಶಬ್ದಕ್ಕೆ ಅರ್ಥ 'ಸಂಕೋಚ' ಮಾಡಬೇಕು.

## ॥ ಓಂ ಪ್ರತ್ಯಕ್ಷೋಪದೇಶಾದಿತಿ ಚೇನ್ನಾಧಿಕಾರಿಕ ಮಂಡಲಸ್ಥೋಕ್ತೇಃ ಓಂ ॥ ೧೮ ॥

**'ತಾ ಯೋ ವೇದ । ಸ ವೇದ ಬ್ರಹ್ಮ । ಸರ್ವೇಽಸ್ಮೈ ದೇವಾ ಬಲಿಮಾವಹಂತಿ' (ತೈ.ಉ. 1.5) ಇತಿ ಪ್ರತ್ಯಕ್ಷೋಪದೇಶಾಜ್ಜಗದೈಶ್ವರ್ಯಮಪ್ಯಸ್ತೀತಿ ಚೇತ್, ನ । ಆಧಿಕಾರಿಕಮಂಡಲಾಧಿಪತಿರ್ಬ್ರಹ್ಮಾ ಹಿ ತತ್ರೋಚ್ಯತೇ । ಗಾರುಡೇ ಚ-**

'ಆತ್ಮೇತ್ಯೇವ ಪರಂ ದೇವಮುಪಾಸ್ಯ ಹರಿಮವ್ಯಯಮ್ ।
ಕೇಚಿದತ್ರೈವ ಮುಚ್ಯಂತೇ ನೋತ್ಕ್ರಾಮಂತಿ ಕದಾಚನ ॥

ಅತ್ರೈವ ಚ ಸ್ಥಿತಿಸ್ತೇಷಾಮಂತರಿಕ್ಷೇ ತು ಕೇಚನ ।
ಕೇಚಿತ್ ಸ್ವರ್ಗೇ ಮಹರ್ಲೋಕೇ ಜನೇ ತಪಸಿ ಚಾಪರೇ ॥

ಕೇಚಿತ್ ಸತ್ಯೇ ಮಹಾಜ್ಞಾನಾ ಗಚ್ಛಂತಿ ಕ್ಷೀರಸಾಗರಮ್ ।
ತತ್ರಾಪಿ ಕ್ರಮಯೋಗೇನ ಜ್ಞಾನಾಧಿಕ್ಯಾತ್ ಸಮೀಪಗಾಃ ॥

ಸಾಲೋಕ್ಯಂ ಚ ಸರೂಪತ್ವಂ ಸಾಮೀಪ್ಯಂ ಯೋಗಮೇವ ಚ ।
ಇಮಾಮಾರಭ್ಯ ಸರ್ವತ್ರ ಯಾವತ್ ಸುಕ್ಷೀರಸಾಗರೇ ॥

ಪುರುಷೋಽನಂತಶಯನಃ ಶ್ರೀಮನ್ನಾರಾಯಣಾಭಿಧಃ ।
ಮಾನುಷಾ ವರ್ಣಭೇದೇನ ತಥೈವಾಽಶ್ರಮಭೇದತಃ ॥

ಕ್ಷಿತಿಪಾ ಮನುಷ್ಯಗಂಧರ್ವಾ ದೇವಾಶ್ಚ ಪಿತರಶ್ಚಿರಾಃ ।
ಆಜಾನಜಾಃ ಕರ್ಮಜಾಶ್ಚ ತಾತ್ತ್ವಿಕಾಶ್ಚ ಶಚೀಪತಿಃ ॥

ರುದ್ರೋ ಬ್ರಹ್ಮೇತಿ ಕ್ರಮಶಸ್ತೇಷು ಚೈವೋತ್ತಮೋತ್ತಮಾಃ ।
ನಿತ್ಯಾನಂದೇ ಚ ಭೋಗೇನ ಜ್ಞಾನೈಶ್ವರ್ಯಗುಣೇಷು ಚ ।
ಸರ್ವೇ ಶತಗುಣೋದ್ರಿಕ್ತಾಃ ಪೂರ್ವಸ್ಮಾದುತ್ತರೋತ್ತರಮ್ ॥

ಪೂಜ್ಯಂತೇ ಚಾವರೈಸ್ತೇ ತು ಸರ್ವಪೂಜ್ಯಶ್ಚತುರ್ಮುಖಃ ।
ಸ್ವಜಗದ್ವ್ಯಾಪೃತಿಸ್ತೇಷಾಂ ಪೂರ್ವವತ್ ಸಮುದೀರಿತಾ ॥

ಸಯುಜಃ ಪರಮಾತ್ಮಾನಂ ಪ್ರವಿಶ್ಯ ಚ ಬಹಿರ್ಗತಾಃ ।
ತದ್ರೂಪಾನ್ ಪ್ರಾಕೃತಾಂಶ್ಚಾಪಿ ವಿನಾ ಭೋಗಾಂಸ್ತು ಕಾಂಶ್ಚನ ।
ಭುಂಜತೇ ಮುಕ್ತಿರೇವಂ ತೇ ವಿಸ್ಪಷ್ಟಂ ಸಮುದಾಹೃತಾ ॥' ಇತಿ ।

ತೈತ್ತಿರೀಯದಲ್ಲಿ 'ತಾ ಯೋ ವೇದ'=ವ್ಯಾಹೃತಿ ಪ್ರತಿಪಾದ್ಯಗಳಾದ ಭಗವದ್ರೂಪಗಳನ್ನು ಯಾರು ತಿಳಿಯುವರೋ, ಅವುಗಳನ್ನು 'ಸ ವೇದ ಬ್ರಹ್ಮಾ'=ಚತುರ್ಮುಖನು ತಿಳಿದಿರುತ್ತಾನೆ. ಅವನಿಗೆ ಎಲ್ಲಾ ದೇವತೆಗಳೂ ಪೂಜೆಯನ್ನು

ಸಲ್ಲಿಸುತ್ತಾರೆ.'' ಎಂದಿದೆ. ದೇವತೆಗಳಿಂದ ಪೂಜಿಸಲ್ಪಡುವುದು ಹೀಗೆ ಈ ಪ್ರತ್ಯಕ್ಷಶ್ರುತಿಯಿಂದ ತಿಳಿಯಲ್ಪಡುವುದರಿಂದ ಜಗತ್ತಿನ ಒಡೆತನವೂ ಮುಕ್ತರಿಗಿದೆ, ಎಂದರೆ, ಇಲ್ಲ. ತೈತ್ತಿರೀಯದ ಈ ಪ್ರಕರಣದಲ್ಲಿ ಅಧಿಕಾರಸ್ಥ ದೇವತಾಗುಂಪಿನ ಅಧಿಪತಿಯಾದ ಚತುರ್ಮುಖಬ್ರಹ್ಮನು ಪ್ರತಿಪಾದ್ಯನಾಗಿದ್ದಾನೆ. ಇತರ ಮುಕ್ತರಲ್ಲ. (ಆದ್ದರಿಂದ ಸೃಷ್ಟಿಕರ್ತನಾದ ಅವನಿಗೆ ಮಾತ್ರ ದೇವತಾಪೂಜ್ಯತ್ವ, ಇತರ ಮುಕ್ತರಿಗೆ ಇಲ್ಲ.) ಗಾರುಡದಲ್ಲಿ ಹೀಗಿದೆ— ನಾಶರಹಿತನಾದ ಶ್ರೀಹರಿಯನ್ನು ''ಆತ್ಮಾ=ಸ್ವಾಮಿ'' ಎಂದು ಉಪಾಸನೆ ಮಾಡಿ ಕೆಲವರು ಭೂಮಿಯಲ್ಲೇ ಮುಕ್ತರಾಗುತ್ತಾರೆ. ಸೃಷ್ಟಿಯಾಗುವಾಗ ಶ್ವೇತದ್ವೀಪಸ್ಥ ಭಗವಂತನ ದರ್ಶನ ಮಾಡಿ ಭೂಮಿಗೆ ಬಂದಮೇಲೆ ಎಂದೂ ಅವರಿಗೆ ಇಲ್ಲಿಂದ ಉತ್ಕ್ರಮಣವಿಲ್ಲ. ಅವರಿಗೆ ಭೂಮಿಯಲ್ಲೇ ಸ್ಥಿತಿ. ಇನ್ನು ಕೆಲವರು ಅಂತರಿಕ್ಷಲೋಕದಲ್ಲಿರುತ್ತಾರೆ. ಇನ್ನು ಕೆಲವರು ಸ್ವರ್ಗದಲ್ಲೂ, ಮಹರ್ಲೋಕದಲ್ಲೂ, ಜನಲೋಕದಲ್ಲೂ, ತಪೋಲೋಕದಲ್ಲೂ, ಸತ್ಯಲೋಕದಲ್ಲೂ ಇರುತ್ತಾರೆ. ಮಹಾಜ್ಞಾನಿಗಳು ಕ್ಷೀರಸಮುದ್ರದಲ್ಲಿರುವ ವಿಷ್ಣು ಧಾಮಕ್ಕೆ ಹೋಗುತ್ತಾರೆ. ಅಲ್ಲೂ ಅವರವರ ಯೋಗ್ಯತೆಗೆ ಅನುಸಾರವಾಗಿ ಜ್ಞಾನದ ಆಧಿಕ್ಯದಿಂದಾಗಿ ಭಗವಂತನ ಹೆಚ್ಚೆಚ್ಚು ಸಮೀಪದಲ್ಲಿ ಇರುತ್ತಾರೆ. ಸಾಲೋಕ್ಯ, ಸಾರೂಪ್ಯ, ಸಾಮೀಪ್ಯ, ಸಾಯುಜ್ಯ ಎಂದು ನಾಲ್ಕು ವಿಧದ ಮೋಕ್ಷವಿದೆ. ಇಮಾಮಾರಭ್ಯ=ಈ ಭೂಲೋಕವನ್ನು ಆರಂಭಿಸಿ ಅಂತರಿಕ್ಷಾದಿ ಎಷ್ಟುಲೋಕಗಳಲ್ಲಿ ಭಗವಂತನಿರುವನೋ ಅಷ್ಟೂಸ್ಥಾನಗಳಲ್ಲಿರುವ ಮುಕ್ತರಿಗೆ ಸಾಲೋಕ್ಯಮೋಕ್ಷ. (ಸಾಲೋಕ್ಯವೆಂದರೆ ವಿಷ್ಣುಸಮಾನಲೋಕ) ಕ್ಷೀರಸಾಗರದಲ್ಲಿ ಶೇಷಶಾಯಿಯಾದ ಪುರುಷನೇ ನಾರಾಯಣ ಎಂಬ ಹೆಸರಿನವನು.

ಮುಕ್ತರ ಆರೋಹಣಕ್ರಮದ ತಾರತಮ್ಯ ಹೀಗಿದೆ— ವರ್ಣ ಮತ್ತು ಆಶ್ರಮ ಭೇದದಿಂದ ಭಿನ್ನರಾದ ಮನುಷ್ಯರು, ಚಕ್ರವರ್ತಿಗಳು, ಮನುಷ್ಯ ಗಂಧರ್ವರು, ದೇವತೆಗಳು, ಶಾಶ್ವತಪಿತೃಗಳು, ಆಜಾನಜದೇವತೆಗಳು, ಕರ್ಮಜದೇವತೆಗಳು, ತತ್ತ್ವಾಭಿಮಾನಿದೇವತೆಗಳು, ಇಂದ್ರ, ರುದ್ರ, ಬ್ರಹ್ಮ ಹೀಗೆ. ಇವರು ಕ್ರಮವಾಗಿ ಒಬ್ಬರಿಂದ ಒಬ್ಬರು ಶ್ರೇಷ್ಠರು. ಇವರಲ್ಲಿ ಸ್ವರೂಪಭೂತವಾದ ಆನಂದ, ವಿಷಯಭೋಗ, ಈಶ್ವರತ್ವಾದಿ ಗುಣಗಳು ಇವುಗಳಲ್ಲಿ ಹಿಂದಿನ ಒಬ್ಬರಿಂದ ಮುಂದಿನ ಮತ್ತೊಬ್ಬರು ನೂರು ಗುಣಗಳಿಂದ ಉತ್ತಮರು. ಅವರರಿಂದ ಉತ್ತಮರು ಪೂಜಿಸಲ್ಪಡುತ್ತಾರೆ. ಎಲ್ಲರಿಂದಲೂ ಪೂಜ್ಯನಾದವನು ಚತುರ್ಮುಖ. ಅವರಿಗೆ ತಮ್ಮ ತಮ್ಮ ಜಗದ್ವ್ಯಾಪಾರವು ಹಿಂದಿನಂತೆ ಹೇಳಲ್ಪಟ್ಟಿದೆ. (ಮುಕ್ತರಾದ ಉತ್ತಮರಿಂದ ಮುಕ್ತರಾದ ಅವರರು ನಿಯಮ್ಯರು.) ಅವರು ಸಾಯುಜ್ಯಮೋಕ್ಷ ಭಾಗಿಗಳು.

ಪರಮಾತ್ಮನೊಳಗೆ ಪ್ರವೇಶಿಸಿ ಹೊರಬರುತ್ತಿರುತ್ತಾರೆ. ಮುಕ್ತರು ಚಿದ್ರೂಪ ಆನಂದವನ್ನು ಅನುಭವಿಸುತ್ತಾರೆ. ಕೆಲವು ಪ್ರಾಕೃತಗಳನ್ನು ಬಿಟ್ಟು ಪ್ರಾಕೃತಭೋಗಗಳನ್ನು ಮಾಡುತ್ತಾರೆ. ಹೀಗೆ, ನಿನಗೆ(?) ಮುಕ್ತಿಯ ಸ್ವರೂಪವು ಸ್ಪಷ್ಟವಾಗಿ ಹೇಳಲ್ಪಟ್ಟಿದೆ.

**ವಿವರಣೆ**—ಕೇಚಿದತ್ರೈವ ಮುಚ್ಯಂತೇ ನೋತ್‌ಕ್ರಾಮಂತಿ ಕದಾಚನ ॥

ಎಂಬ ಗಾರುಡವಾಕ್ಯದಿಂದ ಕೆಲವರು ದೇಹದಿಂದ ಉತ್ಕ್ರಮಣ ಇಲ್ಲದೆಯೇ ಭೂಮಿಯಲ್ಲೇ ಮೋಕ್ಷವನ್ನು ಪಡೆಯುತ್ತಾರೆ, ಎಂದು ತಿಳಿಯುತ್ತದೆ. ಆದರೆ ''ಆನಂದಾದಯಃ ಪ್ರಧಾನಸ್ಯ'' ಎಂಬ ಸೂತ್ರದಲ್ಲಿ (3.3.12) ಆನಂದಾದಿ ಚತುರ್ಗುಣೋಪಾಸಕರಿಗೆ ಮೋಕ್ಷವು (ಚತುರ್ವಿಧಮೋಕ್ಷಗಳಲ್ಲಿ ಒಂದು) ಸಿಗುತ್ತದೆ, ಎಂದು ಹೇಳಲಾಗಿದೆ. ಆದರೆ, ದೇಹದಿಂದ ಉತ್ಕ್ರಮಣ ಇಲ್ಲದಿದ್ದಲ್ಲಿ ಲಿಂಗಭಂಗ ವಾಗದು. ಅದಿಲ್ಲದೆ, ಮೋಕ್ಷವು ಸಾಧ್ಯವಿಲ್ಲ. ಆದಕ್ಕಾಗಿ ಬೃಹದಾರಣ್ಯಕಭಾಷ್ಯದಲ್ಲಿ ಹೇಳಿದಂತೆ ''ನೋತ್ಕ್ರಾಮಂತಿ ಕದಾಚನ'' ಎನ್ನುವುದಕ್ಕೆ ಅರ್ಥವನ್ನು ತಿಳಿಯಬೇಕು—

ಕೇಚಿತ್ತು ಮಾನುಷಾ ಮುಕ್ತಿಮ್ ಅನುತ್ಕ್ರಮ್ಯೈವ ದೇಹತಃ ।<br>
ದೇಹಪಾತೇ ತು ದೇಹಸ್ಯ ದೋಷಾನ್ ಭುಕ್ತ್ವೈವ ಸರ್ವಶಃ ।<br>
ಮರಣೋಚ್ಛೂನತಾದೀಂಸ್ತು ಸ್ವಕೀಯಾರಬ್ಧಕರ್ಮಜಾನ್ ।<br>
ದೇಹೇ ಜೀರ್ಣೇ ತು ಗಚ್ಛಂತಿ ದೃಷ್ಟ್ವಾ ವಿಷ್ಣುಮ್ ಅನುಜ್ಞಯಾ ।<br>
ಪುನರತ್ರೈವ ತಿಷ್ಠಂತಿ ನಿತ್ಯಾನಂದೈಕ ಭೋಗಿನಃ ॥

ಇಲ್ಲಿ 'ದೇಹತಃ ಅನುತ್ಕ್ರಮ್ಯ' ಎಂದರೆ ಬ್ರಹ್ಮನಾಡಿಯಿಂದ ಸ್ವೇಚ್ಛಯಾ ಉತ್ಕ್ರಮಣ ಇಲ್ಲ, ಎಂದಿಷ್ಟೇ ಅರ್ಥ. ಅವರಿಗೂ ಚಕ್ಷುರಾದಿ ದ್ವಾರಗಳಿಂದ ಉತ್‌ಕ್ರಮಣ ಇದೆ. ಆದ್ದರಿಂದಲೇ ''ದೃಷ್ಟ್ವಾ ವಿಷ್ಣುಂ'' ಎನ್ನಲಾಗಿದೆ.

ತತ್ತ್ವಪ್ರದೀಪದಲ್ಲಿ, 'ನೋತ್ಕ್ರಾಮಂತಿ' ಎಂದರೆ ಒಮ್ಮೆ ಶ್ವೇತದ್ವೀಪಕ್ಕೆ ಹೋಗಿ ಅಲ್ಲಿರುವ ಭಗವದ್ದರ್ಶನ ಪಡೆದು ಅವನ ಅನುಜ್ಞೆಯಂತೆ ಭೂಮಿಗೆ ಬರುತ್ತಾರೆ. ಅಲ್ಲಿಂದ ಮತ್ತೆ ಅವರಿಗೆ ಉತ್ಕ್ರಮಣ ಇಲ್ಲ, ಎಂದು ಅರ್ಥವನ್ನು ಹೇಳಲಾಗಿದೆ.

ಶ್ವೇತದ್ವೀಪಂ ತಥಾ ಗತ್ವಾ ದೃಷ್ಟ್ವಾ ವಿಷ್ಣುಂ ಚ ತೇ ತತಃ ।<br>
ಅನುಜ್ಞಾತಾಃ ಪ್ರಮೋದಂತೇ ನಿರ್ದುಃಖಾಸ್ತು ಧರಾದಿಷು ॥

ಗಾರುಡದಲ್ಲಿ ''ಆತ್ಮೇತ್ಯೇವ ಪರಂ ದೇವಂ... ಕೇಚಿದತ್ರೈವ ಮುಚ್ಯಂತೇ॥'' ಎಂದಿದೆ. ಇಲ್ಲಿ ಆತ್ಮತ್ವಗುಣವನ್ನು ಮಾತ್ರ ಉಪಾಸನೆ ಮಾಡಿದವರಿಗೆ ಮೋಕ್ಷವಿದೆ, ಎಂದು ತಿಳಿಯುತ್ತದೆ. ಆದರೆ, ಹಿಂದೆ ಆನಂದಾದಿಚತುರ್ಗುಣೋಪಾಸನೆಯಿಂದಲೇ

ಮೋಕ್ಷವೆಂದು ಹೇಳಲಾಗಿದೆ. ಅದಕ್ಕೆ ವಿರೋಧ ಬರುತ್ತದೆ. ಇದು ''ನ ಚಾನೇನ 'ಆನಂದಾದಯಃ ಪ್ರಧಾನಸ್ಯ''ಇತ್ಯುಕ್ತವಿರೋಧಃ। ಎಂಬ ಟೀಕಾದ ಆಕ್ಷೇಪಗ್ರಂಥದ ಅಭಿಪ್ರಾಯ. ಅದಕ್ಕೆ ಸಮಾಧಾನ ''ತದುಪಾಸನಸ್ಯ ಸಂಪೂರ್ಣಮೋಕ್ಷಾರ್ಥತ್ವಾತ್। ಅತ್ರ ಸಂಪೂರ್ಣಮೋಕ್ಷಾಭಾವೋಕ್ತೇಃ'' (ತ.ಪ್ರ.ಟೀಕಾ) ಚತುರ್ಗುಣೋಪಾಸಕರಿಗೆ ಸಂಪೂರ್ಣಮೋಕ್ಷ.(ಸಾಲೋಕ್ಯಾದಿ ನಾಲ್ಕರಲ್ಲಿ ಒಂದು ವಿಧದ ಮೋಕ್ಷ) ಏಕಗುಣೋಪಾಸಕರಿಗೆ ಅದಿಲ್ಲ, ಎಂದು ಟೀಕೆಯ ಅರ್ಥ. ಏಕಗುಣೋಪಾಸಕರು 'ನೋತ್‌ಕ್ರಾಮಂತಿ ಕದಾಚನ' ಎಂದರೆ ಮೇರುವನ್ನು ದಾಟಲು ಅಸಮರ್ಥರು, ಎಂದು ಅರ್ಥ. ಚತುರ್ಗುಣೋಪಾಸಕರು ಸರ್ವತ್ರ ಸಂಚಾರ ಯೋಗ್ಯರು. ಹೀಗೆ ಟೀಕಾಕ್ಕೆ ಅರ್ಥ ಹೇಳಿ ಗುರ್ವರ್ಥ ದೀಪಿಕಾದಲ್ಲಿ ''ವಸ್ತುತಸ್ತು ಶಂಕೈವೇಯಂ ವಿಸ್ಮರಣಶೀಲಸ್ಯ ಮಂದಸ್ಯ'' ಎಂದು ಹೇಳಲಾಗಿದೆ. ಏಕಗುಣೋಪಾಸಕರು ಆತ್ಮಶಬ್ದಾರ್ಥತಯಾ ಚತುರ್ಗುಣಗಳನ್ನೂ ಉಪಾಸನೆ ಮಾಡುತ್ತಾರೆ, ಎಂದು ''ಆತ್ಮಗೃಹೀತಿಃ ಇತರವದುತ್ತರಾತ್'' (3.3.17) ಹಿಂದೆ ಹೇಳಲಾಗಿದೆ. ಅದನ್ನು ಮರೆತವನು ಮಾಡಿದ ಶಂಕೆ, ಎಂದು ಅರ್ಥ. ಅದಕ್ಕೆ ಪ್ರೌಢಿವಾದೇನ ಟೀಕೆಯ ಸಮಾಧಾನ.

## ॥ ಓಂ ವಿಕಾರಾವರ್ತಿ ಚ ತಥಾಹಿ ದರ್ಶಯತಿ ಓಂ ॥ ೨೦ ॥

**ವಿಕಾರಾವರ್ತೀ ವ್ಯಾಪಾರೋ ಮುಕ್ತಾನಾಂ ನ ವಿದ್ಯತೇ। 'ಇಮಂ ಮಾನವಮಾವರ್ತಂ ನಾಽವರ್ತಂತೇ' (ಛಾಂ.ಉ. 4.15.6)ಇತಿ ಹಿ ಶ್ರುತಿಃ।**

**ವಾರಾಹೇ ಚ–**

**'ಸ್ವಾಧಿಕಾರೇಣ ವರ್ತಂತೇ ದೇವಾ ಮುಕ್ತಾವಪಿ ಸ್ಫುಟಮ್ ।**
**ಬಲಿಂ ಹರಂತಿ ಮುಕ್ತಾಯ ವಿರಿಂಚಾಯ ಚ ಪೂರ್ವವತ್ ॥**
**ಸಬ್ರಹ್ಮಕಾಸ್ತು ತೇ ದೇವಾ ವಿಷ್ಣವೇ ಚ ವಿಶೇಷತಃ ।**
**ನ ವಿಕಾರಾಧಿಕಾರಸ್ತು ಮುಕ್ತಾನಾಮನ್ಯ ಏವ ತು ।**
**ವಿಕಾರಾಧಿಕೃತಾ ಜ್ಞೇಯಾ ಯೇ ನಿಯುಕ್ತಾಸ್ತು ವಿಷ್ಣುನಾ ॥' ಇತಿ ।**

ಸಂಸಾರದಲ್ಲಿರುವ ವ್ಯಾಪಾರವು ಮುಕ್ತರಿಗಿಲ್ಲ. ಛಾಂದೋಗ್ಯದಲ್ಲಿ ''ಮುಕ್ತರು (ಮಾನವಂ ಆವರ್ತಂ) ಸಂಸಾರವನ್ನು (ನಾವರ್ತಂತೇ=ನಾವರ್ತಯಂತಿ) ನಿಯಂತ್ರಿಸುವುದಿಲ್ಲ'' ಎಂದಿದೆ. ವಾರಾಹವಚನದಲ್ಲಿ ಹೀಗಿದೆ— ದೇವತೆಗಳಿಗೆ ತಮ್ಮ

ತಮ್ಮ ಅಧಿಕಾರವು ಮೋಕ್ಷದಲ್ಲೂ ಇದೆ. ಅವರು ಹಿಂದಿನಂತೆಯೇ ಬ್ರಹ್ಮದೇವರಿಗೆ ಸತ್ಕಾರವನ್ನು ಮಾಡುತ್ತಾರೆ. ಬ್ರಹ್ಮಸಹಿತರಾದ ದೇವತೆಗಳು ವಿಷ್ಣುವಿಗೆ ವಿಶೇಷವಾದ ಪೂಜೆಯನ್ನು ಸಲ್ಲಿಸುತ್ತಾರೆ. ಅವರಿಗೆ ಸಂಸಾರದಲ್ಲಿದ್ದ ಜೀವನಿಯಮನಾದಿ ಯಾವ ಕ್ರಿಯೆಗಳೂ ಅಲ್ಲಿಲ್ಲ, ಅವರ ಕ್ರಿಯೆಗಳು ವಿಲಕ್ಷಣವಾದುದು. ವಿಷ್ಣುವಿನಿಂದ ಸಾಂಸಾರಿಕ ಅಧಿಕಾರದಲ್ಲಿ ನಿಯುಕ್ತರಾದವರೇ ಸಾಂಸಾರಿಕಾಧಿಕಾರಿಗಳು. ಮೋಕ್ಷದಲ್ಲಿ ಆ ಅಧಿಕಾರ ಅವರಿಗಿಲ್ಲ.

(ಹೀಗೆ ಮುಕ್ತರಿಗೆ ಜಗದ್‌ವ್ಯಾಪಾರಗಳಿಲ್ಲ.)

**ವಿವರಣೆ**—ಸೂತ್ರದ ಚಶಬ್ದವು ನಿಷೇಧವಾಚಕಪದವನ್ನು ಅನುವೃತ್ತಿ ಮಾಡುತ್ತದೆ. ವಿಕಾರ ಎಂದರೆ ಸಂಸಾರ, ಮೋಕ್ಷಪೂರ್ವಾವಸ್ಥೆ. ಅದನ್ನು ಆವರ್ತಯತೀತಿ=ಆವರ್ತಿ. ಸಂಸಾರವಿಷಯಕವಾದ ವ್ಯಾಪಾರಗಳು ಎಂದರ್ಥ. ಅದು ಮುಕ್ತರಿಗೆ ಇಲ್ಲ. ಅವರು ಮೋಕ್ಷಕ್ಕೆ ಹೋಗುವ ಮೊದಲು ಸಂಸಾರದಲ್ಲಿರುವ ಅನೇಕರಿಗೆ ನಿಯಾಮಕರಾಗಿರುತ್ತಾರೆ. ಮೋಕ್ಷಕ್ಕೆ ಹೋದಮೇಲೆ ಅದು ಯಾವುದೂ ಅವರಿಗಿಲ್ಲ. 'ಜಗದ್‌ವ್ಯಾಪಾರವರ್ಜಂ' ಎಂದರೆ ಇದೂ ಅರ್ಥ.

ಶ್ರುತಿಯಲ್ಲಿ 'ಮಾನವಂ ಆವರ್ತಂ' ಎಂದಿದೆ. ಮನುಷ್ಯರು ಎಲ್ಲಿ ಜನ್ಮ-ಮರಣಗಳ ಆವೃತ್ತಿಯನ್ನು ಹೊಂದುವರೋ ಅದು 'ಮಾನವ-ಆವರ್ತ' ಅಂದರೆ, ಸಂಸಾರ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**II ಓಂ ಜಗದ್ವ್ಯಾಪಾರವರ್ಜಮ್ ಓಂ II** (ಅತ್ರ ಮುಕ್ತಸ್ಯ ಭೋಗೇಯತ್ತಾ ಸಾಧ್ಯತೇ। ಸೃಷ್ಟ್ಯಾದಿ ಜಗದ್ವ್ಯಾಪಾರವರ್ಜಂ ಕಾಮಂ ಮುಕ್ತಃ ಆಪ್ನೋತಿ। ನತು 'ಸರ್ವಾನ್ ಕಾಮಾನಾಪ್ತ್ವಾಮೃತಃ' ಇತಿ ಶ್ರುತ್ಯಾ ಸೃಷ್ಟ್ಯಾದಿಕಮ್ ಅಪೀತ್ಯರ್ಥಃ।)

ಈ ಅಧಿಕರಣದಲ್ಲಿ ಮುಕ್ತರ ಭೋಗಕ್ಕೆ ಮಿತಿಯನ್ನು ಸಾಧಿಸಲಾಗಿದೆ. ಮೋಕ್ಷದಲ್ಲಿ ಜಗದ್-ವ್ಯಾಪಾರವರ್ಜಂ=ಜಗತ್ತಿನ ಸೃಷ್ಟ್ಯಾದಿವ್ಯಾಪಾರದ ಹೊರತಾದ ಭೋಗಗಳನ್ನು ಅವರು ಅನುಭವಿಸುತ್ತಾರೆ. 'ಸರ್ವಾನ್ ಕಾಮಾನ್' ಎಂಬ ಶ್ರುತಿ ಹೇಳುವಂತೆ ಸೃಷ್ಟಿಕರ್ತೃತ್ವ ಭೋಗ ಅವರಿಗಿಲ್ಲ.

**II ಓಂ ಪ್ರಕರಣಾದಸನ್ನಿಹಿತತ್ವಾಚ್ಚ ಓಂ II** ('ಶರೀರಭೇದಾದೂರ್ಧ್ವಮ್ ಉತ್ಕ್ರಮ್ಯ' ಇತಿ ಜೀವಪ್ರಕರಣಾತ್ ಜೀವಾನಾಂ ಜಗಜ್ಜನನಾದಿಸಾಮರ್ಥ್ಯೇ

ಅಸನ್ನಿಹಿತತ್ವಾತ್, ತದ್ವಿದೂರತ್ವಾತ್, ತದ್ಧೀನತ್ವಾತ್ ಇತಿ ಯಾವತ್, ''ಸರ್ವಾನ್ ಕಾಮಾನ್'' ಇತಿ ಶ್ರುತೇಃ ಸಂಕೋಚಃ ಯುಕ್ತಃ ಇತ್ಯರ್ಥಃ ।)

'ಸರ್ವಾನ್ ಕಾಮಾನ್' ಎಂಬ ಐತರೇಯಪ್ರಕರಣವು ಮುಕ್ತಜೀವನ ಬಗ್ಗೆ ಹೇಳುತ್ತದೆ. ಏಕೆಂದರೆ, ''ಶರೀರಭೇದಾದೂರ್ಧ್ವಮುತ್ಕ್ರಮ್ಯ'' ಎಂದು ಆ ಪ್ರಕರಣ ದಲ್ಲಿದೆ. ಉತ್ಕ್ರಮಣ–ಮಾರ್ಗಗಳು ಜೀವರಿಗೆ. ಹೀಗೆ ಪ್ರಕರಣಾತ್= ಜೀವಪ್ರಕರಣವಾದ ಕಾರಣ ಅಸನ್ನಿಹಿತತ್ವಾತ್=ಜೀವರಿಗೆ ಆ ವ್ಯಾಪಾರಗಳು ಅತ್ಯಂತ ದೂರದ್ದಾಗಿವೆ ಅಂದರೆ ಅವನ ಸಾಮರ್ಥ್ಯಕ್ಕೆ ಮೀರಿದ್ದಾವೆ. ಆದಕಾರಣ ''ಸರ್ವಾನ್ ಕಾಮಾನ್'' ಎಂಬ ಶ್ರುತಿಯ ಸರ್ವಶಬ್ದಕ್ಕೆ ಅಸಂಕುಚಿತಾರ್ಥವನ್ನು ಹೇಳಬಾರದು.

**॥ ಓಂ ಪ್ರತ್ಯಕ್ಷೋಪದೇಶಾದಿತಿ ಚೇನ್ನಾಽಧಿಕಾರಿಕಮಂಡಲಸ್ಥೋಕ್ತೇಃ ಓಂ ॥**

(''ತಾ ಯೋ ವೇದ । ಸ ವೇದ ಬ್ರಹ್ಮ । ಸರ್ವೇಽಸ್ಮೈ ದೇವಾ ಬಲಿಮಾವಹಂತಿ'' ಇತಿ ಪ್ರತ್ಯಕ್ಷಂ=ಸ್ಪಷ್ಟಂ ಮುಕ್ತಸ್ಯ ಸರ್ವದೇವಪೂಜ್ಯತ್ವೋಪದೇಶಾತ್ ಮುಕ್ತಾನಾಂ ಜಗದೈಶ್ವರ್ಯಮಸ್ತಿ ಇತಿ ಚೇನ್ನ । ಕುತಃ ? ಆಧಿಕಾರಿಕ ಮಂಡಲಸ್ಥೋಕ್ತೇಃ, ಅಧಿಕಾರೇ ನಿಯುಕ್ತಾಃ=ಆಧಿಕಾರಿಕಾಃ–ತತ್ರ ನಿಯುಕ್ತಾ–ಇತಿ ಠಕ್ । ಸ್ವಯೋಗ್ಯಪದವೀಂ ಪ್ರಾಪ್ತಾಃ ದೇವಾಃ । ತೇಷಾಂ ಮಂಡಲೇ ನಿಯಾಮಕತಯಾ ಸ್ಥಿತಸ್ಯ ಮುಕ್ತವಿರಿಂಚಸ್ಯೈವ ತತ್ರೋಕ್ತೇಃ ನಾಶೇಷಮುಕ್ತಾನಾಂ ಜಗದೈಶ್ವರ್ಯಮ್ ।)

ತೈತ್ತಿರೀಯದಲ್ಲಿ ಪ್ರಣವಪ್ರತಿಪಾದ್ಯರೂಪಗಳನ್ನು ತಿಳಿದು ಮುಕ್ತರಾದವರಿಗೆ ಎಲ್ಲಾ ದೇವತೆಗಳೂ ಪೂಜೆ ಸಲ್ಲಿಸುತ್ತಾರೆ, ಎಂದು ಪ್ರತ್ಯಕ್ಷೋಪದೇಶಾತ್=ಸ್ಪಷ್ಟವಾಗಿ ಹೇಳಿರುವುದರಿಂದ ಮುಕ್ತರಿಗೆ ಜಗತ್ತಿನ ಒಡೆತನವಿದೆ, ಎಂದು ತಿಳಿಯಬಾರದು. ಆ ಉಪನಿಷತ್ತಿನಲ್ಲಿ ತತ್ತದಧಿಕಾರದಲ್ಲಿ ನಿಯುಕ್ತರಾದ ದೇವತಾಮಂಡಲಕ್ಕೆ ನಿಯಾಮಕ ನಾಗಿರುವ (ಆಧಿಕಾರಿಕಮಂಡಲಸ್ಥೋಕ್ತೇಃ) ಚತುರ್ಮುಖಬ್ರಹ್ಮನ ಕುರಿತಾಗಿ ಹೇಳಲಾಗಿದೆ, ಅದು ಎಲ್ಲ ದೇವತೆಗಳಿಗೆ ಅನ್ವಯಿಸುವುದಿಲ್ಲ. ಸಂಸಾರದಶಾದಲ್ಲಿ ಯಾವ ಬ್ರಹ್ಮದೇವರು ಯಾವ ದೇವತಾಗಣಕ್ಕೆ ನಿಯಾಮಕರಾಗಿದ್ದರೋ ಆ ಬ್ರಹ್ಮದೇವರು ಆ ದೇವತಾಗಣಗಳಿಗೆ ಮೋಕ್ಷದಲ್ಲಿ ನಿಯಾಮಕರಾಗಿರುತ್ತಾರೆ. ಎಲ್ಲ ದೇವತೆಗಳೂ ಹೀಗಿರುವುದಿಲ್ಲ.

ಸೂತ್ರದಲ್ಲಿ ದೇವತಾಮಂಡಲ ಎನ್ನುವ ಬದಲು ಆಧಿಕಾರಿಕ–ಅಧಿಕಾರನಿಯುಕ್ತ– ಎಂದು ಹೇಳಿರುವುದರಿಂದ ಮುಕ್ತದೇವತೆಗಳು ತಮಗಿಂತ ಅವರರಾದ ದೇವತೆಗಳಿಗೆ ಮೋಕ್ಷದಲ್ಲೂ ನಿಯಾಮಕರಾಗಿರುತ್ತಾರೆ, ಎಂದು ತಿಳಿಯುತ್ತದೆ. ತತ್ತ್ವಪ್ರದೀಪದಲ್ಲಿ

''ತತ್ರತತ್ರ ಸ್ಥಿತ್ವಾ ಭೋಗಾನ್ ಭುಂಕ್ತೇ, ಇತಿ ಮಂಡಲಸ್ಯೇತ್ಯುಕ್ತಮ್– ಚತುರ್ಮುಖಬ್ರಹ್ಮದೇವರುಗಳು ಆ ಆ ಮುಕ್ತಮಂಡಲದೊಳಗಿದ್ದು ಭೋಗಗಳನ್ನು ಅನುಭವಿಸುತ್ತಾರೆ, ಎಂದರ್ಥ–ಎಂದಿದೆ.

**॥ ಓಂ ವಿಕಾರಾವರ್ತಿ ಚ ತಥಾಹಿ ದರ್ಶಯತಿ ಓಂ ॥** (ಮುಕ್ತಬ್ರಹ್ಮಾದೀನಾಂ ಅಮುಕ್ತಜಗದ್ವ್ಯಾಪಾರಃ ಕುತೋ ನ ? ಇತ್ಯತ ಆಹ–ವಿಕಾರವರ್ತಿ ಚ ತಥಾಹಿ ದರ್ಶಯತಿ। ಚಃ ನೇತ್ಯನುಕರ್ಷಾರ್ಥಃ। ವಿಕಾರಂ=ಸಂಸಾರಮ್ ಆವರ್ತಯತಿ ಇತಿ=ವಿಕಾರವರ್ತಿ । ತದ್ವಿಷಯಂ ವ್ಯಾಪರಣಂ ಮುಕ್ತಾನಾಂ ನಾಸ್ತಿ । ಕುತಃ? ''ಇಮಂ ಮಾನವಮಾವರ್ತಂ ನಾವರ್ತಂತೇ'' ಇತಿ ಶ್ರುತಿಃ ತಥಾ ದರ್ಶಯತಿ ಹಿ=ಯತಃ ಅತ ಇತ್ಯರ್ಥಃ।

ಮುಕ್ತಬ್ರಹ್ಮಾದಿದೇವತೆಗಳಿಗೆ ಅಮುಕ್ತಜಗದ್ವ್ಯಾಪಾರವು ಇಲ್ಲ ಎನ್ನುವುದನ್ನು ಇಲ್ಲಿ ಹೇಳಲಾಗಿದೆ. ವಿಕಾರವರ್ತಿ=ಸಂಸಾರವಿಷಯಕವಾದ ಚಟುವಟಿಕೆಗಳು ಮುಕ್ತರಿಗೆ ಇಲ್ಲ. ತಥಾಹಿ ದರ್ಶಯತಿ='ಇಮಂ ಮಾನವಮ್ ಆವರ್ತಂ ನಾವರ್ತಂತೇ' ಎಂಬ ಶ್ರುತಿಯು ಹಾಗೆ ಹೇಳುತ್ತದೆಯಾದ ಕಾರಣ.

**ಇಲ್ಲಿಗೆ ಸರ್ವಕಾಮಾಧಿಕರಣವು ಮುಗಿಯಿತು.**

## ೧೦. ಸ್ಥಿತ್ಯಧಿಕರಣಮ್

## ॥ ಓಂ ಸ್ಥಿತಿಮಾಹ ದರ್ಶಯತಶ್ಚೈವಂ ಪ್ರತ್ಯಕ್ಷಾನುಮಾನೇ ಓಂ ॥ ೨೧ ॥

**'ಏತತ್ ಸಾಮ ಗಾಯನ್ನಾಸ್ತೇ'(ತೈ .ಉ.3.10)ಇತ್ಯುಚ್ಯತೇ । ತತ್ರಾऽನಂದಾದೀನಾಂ ವೃದ್ಧಿಹ್ರಾಸಶ್ಚ ನ ವಿದ್ಯತೇ । ಏಕಪ್ರಕಾರೇಣೈವ ಸರ್ವದಾ ಸ್ಥಿತಿಃ ।**

> **'ಸ ಏಷ ಏತಸ್ಮಿನ್ ಬ್ರಹ್ಮಣಿ ಸಂಪನ್ನೋ ನ ಜಾಯತೇ ನ ಮ್ರಿಯತೇ ನ ಹೀಯತೇ ನ ವರ್ಧತೇ ಸ್ಥಿತ ಏವ ಸದಾ ಭವತಿ ದರ್ಶನ್ನೇವ ಬ್ರಹ್ಮ ದರ್ಶನ್ನೇವಾऽತ್ಮಾನಂ ತಸ್ಯೈವಂ ದರ್ಶಯತೋ ನಾऽಪತ್ತಿರ್ನ ವಿಪತ್ತಿಃ' ಇತ್ಯಾಹ ಜಾಬಾಲಶ್ರುತೌ ।**

'ಯತ್ರ ಗತ್ವಾ ನ ಮ್ರಿಯತೇ ಯತ್ರ ಗತ್ವಾ ನ ಜಾಯತೇ ।
ನ ಹೀಯತೇ ಯತ್ರ ಗತ್ವಾ ಯತ್ರ ಗತ್ವಾ ನ ವರ್ಧತೇ ॥'
ಇತಿ ಮೋಕ್ಷಧರ್ಮೇ ।

ತೈತ್ತಿರೀಯದಲ್ಲಿ "ಮುಕ್ತನು ಸಾಮಗಾನ ಮಾಡುತ್ತಿರುತ್ತಾನೆ" ಎಂದಿದೆ. ಆದರಿಂದ ಅವನಿಗೆ ಮೋಕ್ಷದಲ್ಲಿ ಭಗವದಾರಾಧನೆಯಿಂದ ಆನಂದವೃದ್ಧಿ ಇದೆ, ಎಂದು ತಿಳಿಯಬಾರದು. ಅಲ್ಲಿ ಆನಂದದ ವೃದ್ಧಿಯಾಗಲೀ ಹ್ರಾಸವಾಗಲೀ ಇರುವುದಿಲ್ಲ. ಹೊರತು ಒಂದೇ ರೀತಿಯಿಂದ ಸರ್ವದಾ ಸ್ಥಿತಿಯು ಅಲ್ಲಿರುತ್ತದೆ. ಜಾಬಾಲಶ್ರುತಿಯು ಹೇಳುತ್ತಲೂ ಇದೆ– ಸ ಏಷಃ=ಈ ಮುಕ್ತನು ಏತಸ್ಮಿನ್ ಬ್ರಹ್ಮಣಿ=ಈ ಬ್ರಹ್ಮನಲ್ಲಿ ಸಂಪನ್ನಃ=ಸಂಬಂಧ ಪಡೆದವನಾಗಿ ನ ಜಾಯತೇ=ಹುಟ್ಟುವುದಿಲ್ಲ, ಮರಣ ಹೊಂದುವುದಿಲ್ಲ, ಹ್ರಾಸವೂ ಇಲ್ಲ, ವೃದ್ಧಿಯೂ ಇಲ್ಲ. ಸ್ಥಿತ ಏವ ಸರ್ವದಾ ಭವತಿ=ಸದಾ ಇದ್ದಂತೆಯೇ ಇರುತ್ತಾನೆ, ಬ್ರಹ್ಮನನ್ನು ದರ್ಶನ್ನೇವ=ಉಪಾಸನೆ ಮಾಡುತ್ತಲೇ ಆತ್ಮನನ್ನು ಆರಾಧಿಸುತ್ತಲೇ, ಇರುತ್ತಾನೆ. ಹೀಗೆ ಆರಾಧಿಸುತ್ತಿರುವ ಅವನಿಗೆ ಆಯವೂ ಇಲ್ಲ, ವ್ಯಯವೂ ಇಲ್ಲ". ಮಹಾಭಾರತದ ಮೋಕ್ಷಧರ್ಮಪರ್ವದಲ್ಲೂ ಇದೆ. 'ಮೋಕ್ಷಕ್ಕೆ ಹೋದಮೇಲೆ ಸಾಯುವುದಿಲ್ಲ. ಹುಟ್ಟುವುದಿಲ್ಲ. ಹ್ರಾಸವೂ ಇಲ್ಲ, ವೃದ್ಧಿಯೂ ಇಲ್ಲ.'

ವಿದ್ವತ್ಪ್ರತ್ಯಕ್ಷಾತ್ ಕಾರಣಾಭಾವಲಿಂಗಾಚ್ಚ । ಬ್ರಹ್ಮವೈವರ್ತೇ ಚ-

'ನ ಹ್ರಾಸೋ ನಚ ವೃದ್ಧಿರ್ವಾ ಮುಕ್ತಾನಾಂ ವಿದ್ಯತೇ ಕ್ವಚಿತ್ ।
ವಿದ್ವತ್ಪ್ರತ್ಯಕ್ಷಸಿದ್ಧತ್ವಾತ್ ಕಾರಣಾಭಾವತೋಽನುಮಾ ॥

ಹರೇರುಪಾಸನಾ ಚಾತ್ರ ಸದೈವ ಸುಖರೂಪಿಣೀ ।
ನತು ಸಾಧನಭೂತಾ ಸಾ ಸಿದ್ಧಿರೇವಾತ್ರ ಸಾ ಯತಃ ॥' ಇತಿ ।

ಜ್ಞಾನಿಗಳ ಪ್ರತ್ಯಕ್ಷ ಮತ್ತು ಕಾರಣಾಭಾವಾನುಮಾನಗಳಿಂದಲೂ ಈ ವಿಷಯ ಸಿದ್ಧವಾಗುತ್ತದೆ. ಬ್ರಹ್ಮವೈವರ್ತದಲ್ಲಿದೆ–ಮುಕ್ತರಿಗೆ ವೃದ್ಧಿಯಾಗಲೀ ಹ್ರಾಸವಾಗಲೀ ಎಂದೂ ಇಲ್ಲ. ಇದು ಜ್ಞಾನಿಪ್ರತ್ಯಕ್ಷದಿಂದಲೂ ಕಾರಣಾಭಾವಾನುಮಾನದಿಂದಲೂ ಸಿದ್ಧವಾಗಿದೆ. ಮೋಕ್ಷದಲ್ಲಿ ಎಲ್ಲವೂ ಸಿದ್ಧಿಯೇ ಹೊರತು ಸಾಧನೆ ಇಲ್ಲ. ಆದ ಕಾರಣ ಅಲ್ಲಿ ಭಗವದುಪಾಸನೆಯು ಸದಾ ಸುಖರೂಪವಾದುದು.

**ವಿವರಣೆ**—ಆನಂದಾತಿಷಯವನ್ನು ಎಲ್ಲರೂ ಬಯಸುತ್ತಾರೆ. ಮುಕ್ತರಿಗೆ ಅಣಿಮಾದಿಅಷ್ಟಸಿದ್ಧಿಗಳಿವೆ. ಅವುಗಳಲ್ಲಿ ವಶಿತ್ವವೂ ಒಂದು. ವಶಿತ್ವ ಎಂದರೆ

ಆಲೋಲತಾ. ಆದ್ದರಿಂದ ಮುಕ್ತರೂ ಆನಂದಾಧಿಕ್ಯವನ್ನು ಬಯಸುತ್ತಾರೆ. ಬಯಸಿದ್ದೆಲ್ಲ ಕೈಗೂಡುತ್ತದೆ. ಆದ್ದರಿಂದ ಆನಂದವೃದ್ಧಿ ಅಲ್ಲಿಯೂ ಇದೆ. ಅಲ್ಲದೆ ಅವರು ಸಾಮಗಾನ ಮಾಡುತ್ತಿರುತ್ತಾರೆ, ಎಂದಿದೆ. ಅದು ಭಗವತ್ ಪ್ರೀತಿಗಾಗಿ ಮಾಡುವ ಸಾಧನೆ. ಅದರ ಫಲ ಆನಂದ ವೃದ್ಧಿ. ಹೀಗೆ ಮೋಕ್ಷದಲ್ಲೂ ವೃದ್ಧಿ-ಕ್ಷಯಗಳಿವೆ, ಎಂದು ಪೂರ್ವಪಕ್ಷ. ಶ್ರುತಿಯಲ್ಲಿ ನಿಷೇಧ ಮಾಡಿರುವುದರಿಂದ ವೃದ್ಧಿಕ್ಷಯಗಳಿಲ್ಲ. ಜ್ಞಾನಿಗಳಿಗೆ ವೃದ್ಧಿ-ಕ್ಷಯಾಭಾವವು ಪ್ರತ್ಯಕ್ಷ ಎಂದು ಪ್ರಮಾಣವಿದೆ. ಕಾರಣವಿಲ್ಲವಾದುದರಿಂದ ವೃದ್ಧಿ-ಕ್ಷಯಗಳಿಲ್ಲ, ಎಂದು ಅನುಮಾನವು ಇದೆ. ಈ ಮೂರು ಪ್ರಮಾಣಗಳಿಂದ ವೃದ್ಧಿ-ಕ್ಷಯಾಭಾವಗಳು ಸಿದ್ಧವಾಗುತ್ತವೆ. ಹರಿಯ ಉಪಾಸನೆಯು ಸಾಧನರೂಪವಾಗಿ ಇರುವುದಿಲ್ಲ ಎಂದು ಬ್ರಹ್ಮವೈವರ್ತದಲ್ಲಿ ಹೇಳಿರುವುದರಿಂದ ವೃದ್ಧಿಗೆ ಕಾರಣಾಭಾವವು ಸಿದ್ಧವಾಗುತ್ತದೆ.

## ॥ ಓಂ ಭೋಗಮಾತ್ರಸಾಮ್ಯಲಿಂಗಾಚ್ಚ ಓಂ ॥ ೨೨ ॥

ನಚ ಭೋಗವಿಶೇಷಾದಿವಿರೋಧಃ ।

'ಏತಮಾನಂದಮಯಮಾತ್ಮಾನಮನುವಿಶ್ಯ ನ ಜಾಯತೇ ನ ಮ್ರಿಯತೇ ನ ಹ್ರಸತೇ ನ ವರ್ಧತೇ ಯಥಾಕಾಮಂ ಚರತಿ ಯಥಾಕಾಮಂ ಪಿಬತಿ ಯಥಾಕಾಮಂ ರಮತೇ ಯಥಾಕಾಮ-ಮುಪರಮತೇ'(ತೈ.ಉ. 2.8)ಇತಿ ಭೋಗಮಾತ್ರಸಾಮ್ಯಲಿಂಗಾತ್ ।

'ಅವೃದ್ಧಿಹ್ರಾಸರೂಪತ್ವಂ ಮುಕ್ತಾನಾಂ ಪ್ರಾಯಿಕಂ ಭವೇತ್ ।
ಕಾದಾಚಿತ್ಕವಿಶೇಷಸ್ತು ನೈವ ತೇಷಾಂ ನಿಷಿಧ್ಯತೇ' ॥
ಇತಿ ಚ ಕೌರ್ಮೇ ।

'ಪ್ರವಾಹತಸ್ತು ವೃದ್ಧಿರ್ವಾ ಹ್ರಾಸೋ ವಾ ನೈವ ಕುತ್ರಚಿತ್ ।
ನಾಪ್ರಿಯಂ ಕಿಂಚಿದಪಿ ತು ಮುಕ್ತಾನಾಂ ವಿದ್ಯತೇ ಕ್ವಚಿತ್ ॥
ಕುತ ಏವ ತು ದುಃಖಂ ಸ್ಯಾತ್ ಸುಖಮೇವ ಸದೋದಿತಮ್ ।
ಭೋಗಾನಾಂ ತು ವಿಶೇಷೇಷು ವೈಚಿತ್ರ್ಯಂ ಲಭ್ಯತೇ ಕ್ವಚಿತ್ ॥'
ಇತಿ ಚ ನಾರಾಯಣತಂತ್ರೇ ।

ಮುಕ್ತರಿಗೆ ವೃದ್ಧಿಹ್ರಾಸಗಳಿಲ್ಲ ಎನ್ನುವುದಕ್ಕೆ ಅವರಿಗೆ ವಿಷಯಭೋಗವಿಶೇಷವು ಇದೆ, ಎನ್ನುವುದರಿಂದ ವಿರೋಧ ಬರುತ್ತದೆ ಎನ್ನಬಾರದು. ''ಏತಮಾನಂದ ಮಯಮಾತ್ಮಾನಂ'' ಎಂಬ ಶ್ರುತಿಯಲ್ಲಿ ಮುಕ್ತನಿಗೆ ವೃದ್ಧಿ-ಹ್ರಾಸಗಳು ಇಲ್ಲವೆಂದು ಹೇಳಿ ವಿಷಯಭೋಗ ಮತ್ತು ಭೋಗಾಭಾವಗಳನ್ನು (ಯಥಾಕಾಮಮ್ ಉಪರಮತೇ) ನಿರೂಪಿಸಲಾಗಿದೆ. ಇದು ಅವರಿಗೆ ವೃದ್ಧಿ-ಹ್ರಾಸಗಳಿಲ್ಲ ಎನ್ನುವುದಕ್ಕೆ ಲಿಂಗವಾಗಿದೆ. ಕೂರ್ಮಪುರಾಣದಲ್ಲಿ ಹೀಗಿದೆ— ''ಮುಕ್ತರಿಗೆ ವೃದ್ಧಿ-ಹ್ರಾಸಗಳು ಇಲ್ಲ ಎನ್ನುವುದು ಸಾಮಾನ್ಯ ಮಾತು. ಕೆಲವೊಮ್ಮೆ ಅವರಿಗೆ ಆನಂದವಿಶೇಷವನ್ನು ಇಲ್ಲ, ಎಂದು ನಿಷೇಧ ಮಾಡಲಾಗದು.

ನಾರಾಯಣತಂತ್ರದಲ್ಲಿ ಹೀಗಿದೆ— ಮುಕ್ತರಿಗೆ ನಿತ್ಯವೂ ಪ್ರವಾಹರೂಪದಲ್ಲಿ ವೃದ್ಧಿಯಾಗಲೀ ಹ್ರಾಸವಾಗಲೀ ಇರುವುದಿಲ್ಲ. ಅವರಿಗೆ ಅಪ್ರಿಯವಾದ ಅಲ್ಪವೂ ಎಂದೂ ಆಗುವುದಿಲ್ಲ. ಹೀಗಿರುವಾಗ ದುಃಖ ಬರಲು ಹೇಗೆ ಸಾಧ್ಯ? ಸದಾ ಸುಖವೇ ಪ್ರಮಾಣಗಳಲ್ಲಿ ಹೇಳಲ್ಪಟ್ಟಿದೆ. ಕೆಲವು ಭೋಗವಿಶೇಷದಿಂದ ಆನಂದದಲ್ಲಿ ವಿಶೇಷವು ಕೆಲವೊಮ್ಮೆ ಆಗುತ್ತದೆ.

**ವಿವರಣೆ**—ಮುಕ್ತರಿಗೆ ವಿಷಯಭೋಗವು ಪ್ರಮಾಣಸಿದ್ಧವಾಗಿದೆ. ಅವರಿಗೆ ಆನಂದದಲ್ಲಿ ವೃದ್ಧಿ ಇಲ್ಲವೆಂದಾದಲ್ಲಿ ಸ್ವರೂಪಸುಖ ಸಿದ್ಧವಾಗಿರುವಾಗ ವಿಷಯಭೋಗದ ಅಗತ್ಯವೇನು? ಆದ್ದರಿಂದ ವಿಷಯಭೋಗ ಪ್ರಯುಕ್ತವಾಗಿ ಅವರ ಆನಂದದಲ್ಲಿ ವೃದ್ಧಿ ಇದೆ. ಆದ್ದರಿಂದ ಹಿಂದಿನ ಸೂತ್ರದಲ್ಲಿ ಕಾರಣಾಭಾವಾತ್ ವೃದ್ಧಿ ಇಲ್ಲ ಎಂದಿರುವುದು ಸರಿಯಲ್ಲ, ಎಂದು ಪೂರ್ವಪಕ್ಷ. ಶ್ರುತಿಯಲ್ಲಿ ವೃದ್ಧಿಹ್ರಾಸ ನಿಷೇಧಪೂರ್ವಕವಾಗಿ ವಿಷಯಭೋಗವನ್ನೂ ಭೋಗಾಭಾವವನ್ನೂ ಹೇಳಲಾಗಿದೆ. ಒಂದುವೇಳೆ ವಿಷಯಭೋಗದಿಂದ ಮುಕ್ತರಿಗೆ ವೃದ್ಧಿ ಇದ್ದಲ್ಲಿ ಭೋಗಾಭಾವ ಇದ್ದಾಗಲೂ ಹ್ರಾಸ ಇಲ್ಲ, ಎಂದಿರುವುದು ಅಯುಕ್ತವಾದೀತು. ಹೀಗೆ ಈ ಶ್ರುತ್ಯುಕ್ತಾರ್ಥವು, ಮುಕ್ತಾನಂದದಲ್ಲಿ ವೃದ್ಧಿ-ಹ್ರಾಸರೂಪವಾದ ವಿಶೇಷವಿಲ್ಲ, ಎನ್ನುವುದಕ್ಕೆ, ಲಿಂಗರೂಪವಾಗಿದೆ.

ಸೂತ್ರದಲ್ಲಿ ಮಾತ್ರಶಬ್ದಕ್ಕೆ ಕೃತ್ಸ್ನ=ಎಲ್ಲಾ, ಎಂದು ಅರ್ಥವಲ್ಲ. ಸಾಮಾನ್ಯ ಎಂದು ಅರ್ಥ. ''ತಥಾ ಚಾಸ್ಮನ್ಮತೇ ಮಾತ್ರಶಬ್ದಃ ಸಾಮಾನ್ಯಾರ್ಥ ಏವ। ನತು ಕಾತ್ಸ್ನಾರ್ಥಃ ಇತಿ ಭಾವಃ।'' (ನ್ಯಾಯಾ.ಆಮೋದ. 3.5) ಹೀಗೆ ಇಲ್ಲಿ ಭೋಗಸಾಮಾನ್ಯಕ್ಕೆ ಆನಂದವೃದ್ಧಿಹೇತುತ್ವವನ್ನು ನಿಷೇಧ ಮಾಡಲಾಗಿದೆ. ಆದರೆ, ಕೆಲವೊಮ್ಮೆ ಭೋಗವಿಶೇಷವು ವೃದ್ಧಿಗೆ ಕಾರಣವಾಗುತ್ತದೆ.

ಭೋಗಾನಾಂ ತು ವಿಶೇಷೇ ತು ವೈಚಿತ್ರ್ಯಂ ಲಭ್ಯತೇ ಕ್ವಚಿತ್ ॥

ಅದನ್ನು ಗೀತಾಭಾಷ್ಯ ಪ್ರಮೇಯದೀಪಿಕಾದಲ್ಲಿ ಹೇಳಲಾಗಿದೆ— ಜ್ಞಾನಿಯು ಜ್ಞಾನೋತ್ತರದಲ್ಲಿ ಮಾಡಿದ ಕರ್ಮಗಳಿಂದ ಭಗವಂತ ಮೋಕ್ಷದಲ್ಲಿ ವಿಷಯಗಳನ್ನು ಸೃಷ್ಟಿಮಾಡಿ ಜ್ಞಾನಾನಭಿವ್ಯಕ್ತವಾದ ಆನಂದವನ್ನೂ ಅಭಿವ್ಯಕ್ತಗೊಳಿಸುತ್ತಾನೆ. ಜ್ಞಾನದಿಂದ ಅವಿದ್ಯಾವರಣ ನಿವೃತ್ತಿಯಾದರೂ ಇಚ್ಛಾವರಣವು ಉಳಿದಿರುತ್ತದೆ. ನಿಷ್ಕಾಮಕರ್ಮ ಜನ್ಯವಾದ ಭಗವತ್‌ಪ್ರಸಾದವು ಇಚ್ಛಾವರಣದ ಅಪಸರಣೆಗೆ ಕಾರಣವಾಗುತ್ತದೆ.

ತತ್ತ್ವಪ್ರದೀಪದಲ್ಲಿ 'ಯಥಾಕಾಮಂ ರಮತೇ ಉಪರಮತೇ' ಇತಿ ಅಭೀಷ್ಟಸುಖ ಭೋಗಸ್ಯ ಸರ್ವದಾ ಸಮತ್ವೇ ಹಿ ಲಿಂಗಮ್। ನಹಿ ಭವತಿ ಸುಖಂ ಉಪರಮೇಚ್ಛಾಯಾಂ ಅನುಪರಮೇಽಪಿ'' ಶ್ರುತಿಯಲ್ಲಿ ತನ್ನಿಚ್ಛೆಯಂತೆ ರಮಣ ಹಾಗೂ ಇಚ್ಛೆಯಿಂದಲೇ ಭೋಗದಿಂದ ಉಪರಮವನ್ನು ಹೇಳಲಾಗಿದೆ. ಇದು ಸುಖಭೋಗವು ಸರ್ವದಾ ಸಮಾನ ಎನ್ನುವುದಕ್ಕೆ ಗಮಕ. ಏಕೆಂದರೆ, ಭೋಗದಿಂದ ಉಪರಮ ಇಚ್ಛೆ ಬಂದಾಗಲೂ ಭೋಗೋಪರಮವಾಗದಿದ್ದಲ್ಲಿ ಸುಖವಾಗಲು ಸಾಧ್ಯವಿಲ್ಲ. ಸ್ವೇಚ್ಛೆಯಿಂದಲೇ ಉಪರಮವಿದೆ ಎಂದರೆ ಭೋಗಪ್ರಯುಕ್ತ ಸುಖವಿದ್ದಂತೆಯೇ ತದುಪರಮಕಾಲದಲ್ಲೂ ಸುಖವಿದೆ, ಎಂದರ್ಥ. ಆಗಲೂ ಸ್ವರೂಪಾನಂದಾನುಭವ ಇರುತ್ತದೆ.

''ಪಿಬತೇ ರಮತೇ ಉಪರಮತೇ'' ಇತಿ ವಿಶೇಷದರ್ಶನಾತ್ ಮಾತ್ರಪದೋಕ್ತಿಃ'' (ತ.ಪ್ರದೀ.) ಭೋಗ, ಭೋಗಾಭಾವರೂಪವಿಶೇಷವು ಮುಕ್ತರಿಗಿದೆ. ಜ್ಞಾನದಿಂದ ಅನಭಿವ್ಯಕ್ತವಾದ ಶಕ್ತ್ಯಾತ್ಮನಾ ಇರುವ ಸುಖವು ಮುಕ್ತರಿಗೆ ಭೋಗದಿಂದ ವ್ಯಕ್ತವಾಗುತ್ತದೆ. ಇಂತಹ ವಿಶೇಷವು ಸಿದ್ಧಾಂತಕ್ಕೆ ಸಮ್ಮತವಾಗಿದೆ.

ತತ್ವಪ್ರಕಾಶಿಕಾದಲ್ಲಿ ''ಭೋಗಮಾತ್ರಸ್ಯ ವಿಶೇಷೇ ಸತ್ಯಪಿ ಮುಕ್ತಸ್ಯ ಸಾಮ್ಯಮೇವ'' ಎಂದಿದೆ. ವಿಷಯಭೋಗ ಎಂಬ ಕಾರಣವಿಶೇಷ ಇದ್ದರೂ ತತ್‌ಪ್ರಯುಕ್ತವಾಗಿ ಆನಂದ ವೃದ್ಧಿ ಇಲ್ಲ–ಸಾಮ್ಯವೇ ಇರುತ್ತದೆ, ಎಂದರ್ಥ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಓಂ ಸ್ಥಿತಿಮಾಹ ದರ್ಶಯತಶ್ಚೈವಂ ಪ್ರತ್ಯಕ್ಷಾನುಮಾನೇ ಓಂ ॥** (ಅತ್ರ ಮುಕ್ತಾನಾಂ ಭೋಗಾದಿನಾ ವೃದ್ಧಿ–ಹ್ರಾಸೌ ನೇತ್ಯುಚ್ಯತೇ । 'ಬ್ರಹ್ಮಣಿ ಸಂಪನ್ನೋ ನ ಜಾಯತೇ ನ ಮ್ರಿಯತೇ ನ ಹೀಯತೇ ನ ವರ್ಧತೇ' ಇತಿ ಶ್ರುತಿಃ ಸ್ಥಿತಿಂ=ಮುಕ್ತಾನಾಂ

ಏಕಪ್ರಕಾರೇಣ ಅವಸ್ಥಾನಮ್ ಆಹ। ಮಹತಾಂ ಪ್ರತ್ಯಕ್ಷಂ, 'ಮುಕ್ತೋ ನ ವೃದ್ಧ್ಯಾದಿಮಾನ್, ತದ್ಧೇತುಶೂನ್ಯತ್ವಾತ್ ಇತ್ಯನುಮಾನಂ ಚ ಏವಂ=ಏಕಪ್ರಕಾರೇಣ ಅವಸ್ಥಿತಿಂ ದರ್ಶಯತಃ। ಮಹತಾಂ ಪ್ರತ್ಯಕ್ಷಮಸ್ತೀತ್ಯೇತತ್ 'ನ ಹ್ರಾಸೋ ನಚ ವೃದ್ಧಿರ್ವಾ' ಇತ್ಯಾದಿಸ್ಮೃತ್ಯಾ ಅವಸೇಯಮ್ ।)

ಈ ಅಧಿಕರಣದಲ್ಲಿ ಮುಕ್ತರಿಗೆ ಭೋಗಾದಿಗಳಿಂದ ವೃದ್ಧಿ-ಹ್ರಾಸಗಳಿಲ್ಲ, ಎಂದು ಸಾಧಿಸಲಾಗಿದೆ. ''ಬ್ರಹ್ಮಣಿ ಸಂಪನ್ನಃ'' ಎಂಬ ಶ್ರುತಿಯಲ್ಲಿ ಸ್ಥಿತಿಂ=ಮುಕ್ತರಿಗೆ ವೃದ್ಧಿಹ್ರಾಸಗಳಿಲ್ಲದ ಸ್ಥಿತಿಯನ್ನು ಹೇಳಲಾಗಿದೆ. ಇದಲ್ಲದೆ, ಜ್ಞಾನಿಗಳ ಪ್ರತ್ಯಕ್ಷ ಮತ್ತು ಕಾರಣಾಭಾವಹೇತುಕಾನುಮಾನಗಳೂ ಏವಂ=ವ್ಯತ್ಯಾಸವಿಲ್ಲದ ಸ್ಥಿತಿಯನ್ನು ಪ್ರಮಾಣೀಕರಿಸುತ್ತವೆ. ''ನ ಹ್ರಾಸೋ'' ಎಂಬ ಸ್ಮೃತಿಯಿಂದ ಈ ಬಗ್ಗೆ ಜ್ಞಾನಿಗಳ ಪ್ರತ್ಯಕ್ಷವು ತಿಳಿಯುತ್ತದೆ.

**॥ ಓಂ ಭೋಗಮಾತ್ರಸಾಮ್ಯಲಿಂಗಾಚ್ಚ ಓಂ ॥** (ಭೋಗಮಾತ್ರಸ್ಯ, ಸಾಮ್ಯೇ= ಮುಕ್ತಸ್ಯ ಆನಂದವೃದ್ಧ್ಯಾದ್ಯಕಾರಣತ್ವೇ ಲಿಂಗಾಚ್ಚ=ಲಿಂಗಸ್ಯ ಸತ್ವಾಚ್ಚ ಇತ್ಯರ್ಥಃ। ''ಏತಮಾನಂದಮಯಂ'' ಇತಿ ಶ್ರುತೌ ಮುಕ್ತಸ್ಯ ವೃದ್ಧ್ಯಾದ್ಯಭಾವೋಕ್ತಿಪೂರ್ವಂ ಭೋಗ-ಭೋಗಾಭಾವೋಕ್ತೇಃ ಭೋಗವಿಶೇಷಃ ನಾನಂದಾದಿವೃದ್ಧಿಹೇತುಃ ಇತ್ಯರ್ಥೇ ಲಿಂಗಸತ್ವಾದಿತಿ ಭಾವಃ।)

ಮುಕ್ತನ ಆನಂದಾದಿವೃದ್ಧಿಗೆ ಭೋಗಸಾಮಾನ್ಯವು ಕಾರಣವಲ್ಲ ಎನ್ನುವುದಕ್ಕೆ ಲಿಂಗವೂ ಇದೆ. ಶ್ರುತಿಯಲ್ಲಿ ಆನಂದ ವೃದ್ಧ್ಯಭಾವವನ್ನು ಹೇಳುತ್ತಲೇ ಭೋಗ-ಭೋಗಾಭಾವಗಳನ್ನು ಹೇಳಿರುವುದರಿಂದ ಭೋಗವಿಶೇಷವು ಆನಂದವೃದ್ಧಿಗೆ ಕಾರಣವಲ್ಲ, ಎನ್ನುವುದಕ್ಕೆ 'ಲಿಂಗ' ಇದೆ.

ಇಲ್ಲಿಗೆ ಸ್ಥಿತ್ಯಧಿಕರಣವು ಮುಗಿಯಿತು.

## ೧೧. ಅನಾವೃತ್ತ್ಯಧಿಕರಣಮ್

**॥ ಓಂ ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್ ಓಂ ॥ ೨೩ ॥**

**'ನಚ ಪುನರಾವರ್ತತೇ ನಚ ಪುನರಾವರ್ತತೇ' (ಛಾಂ.ಉ. 8.15.1), 'ಸರ್ವಾನ್ ಕಾಮಾನಾಪ್ತ್ವಾಽಮೃತಃ ಸಮಭವತ್' (ಐ.ಆ. 2.5.1-15) ಇತ್ಯಾದಿಶ್ರುತಿಭ್ಯಃ ॥**

'ಮುಕ್ತನು ತಿರುಗಿ ಸಂಸಾರಕ್ಕೆ ಬರುವುದಿಲ್ಲ, ತಿರುಗಿ ಬರುವುದಿಲ್ಲ' ಎಂದು ಛಾಂದೋಗ್ಯಶ್ರುತಿ ಇದೆ. ''ಸಕಲಕಾಮನೆಗಳನ್ನು ಹೊಂದಿ ಸಾಧಕನು ಅಮೃತನಾದನು' ಎಂದು ಐತರೇಯಾರಣ್ಯಕದಲ್ಲಿದೆ. ಈ ಶ್ರುತಿಗಳಿಂದ ಮುಕ್ತನಿಗೆ ಪುನರಾವೃತ್ತಿ ಇಲ್ಲ. ಎಂದು ತಿಳಿಯುತ್ತದೆ.

**ವಿವರಣೆ**—ಸ್ವರ್ಗಸ್ಥರಾದವರಿಗೆ ಪುನರಾವೃತ್ತಿ ಇರುವಂತೆ ಮುಕ್ತರಿಗೂ ಪುನರಾವೃತ್ತಿ ಇದೆ, ಎಂಬ ಶಂಕೆಯನ್ನು ಈ ಅಧಿಕರಣದಲ್ಲಿ ನಿರಾಕರಿಸಲಾಗಿದೆ. ಅಷ್ಟೇ ಅಲ್ಲ, ಕಾಲವೇ ಸಮಾಪ್ತಿಯಾದಾಗ ಮತ್ತೆ ಅವರು ಸಂಸಾರಿಗಳಾದಾರು ಎಂಬ ಸಂದೇಹವೂ ಶ್ರುತಿಯಿಂದ ಪರಿಹಾರವಾಗುತ್ತದೆ.

ಮುಕ್ತರಿಗೆ ಪುನರಾವೃತ್ತಿ ಇಲ್ಲ ಎನ್ನಲು ಐತರೇಯಾರಣ್ಯಕವು ಒಂದು ಯುಕ್ತಿಯನ್ನೂ ಹೇಳಿದೆ. ಮೋಕ್ಷದಲ್ಲಿ ಕಾಮಿತವಾದದ್ದೇ ಆಗುತ್ತದೆ. ಮುಕ್ತನು ಎಂದೂ ಸಂಸಾರಿಯಾಗಬೇಕೆಂದು ಬಯಸುವುದಿಲ್ಲ. ಅಂದಮೇಲೆ ಅದು ಆಗುವುದಿಲ್ಲ.

## ಭಾಷ್ಯದ ಅಂತಿಮ ಮಂಗಳ

**ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ**
**ಬಟ್ ತದ್ ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ ।**
**ವಾಯೋ ರಾಮವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪುಃ**
**ಮಧ್ವೋ ಯತ್ತು ತೃತೀಯಮೇತದಮುನಾ ಭಾಷ್ಯಂ ಕೃತಂ ಕೇಶವೇ ॥**
**(ಮಧ್ವೋ ಯತ್ತು ತೃತೀಯಕಂ ಕೃತಮಿದಂ ಭಾಷ್ಯಂ ಹರೌ ತೇನ ಹಿ)**

**ಜ್ಞಾನಾನಂದಾದಿಭಿಃ ಸರ್ವೈರ್ಗುಣೈಃ ಪೂರ್ಣಾಯ ವಿಷ್ಣವೇ ।**
**ನಮೋಽಸ್ತು ಗುರವೇ ನಿತ್ಯಂ ಸರ್ವಥಾಽತಿಪ್ರಿಯಾಯ ಮೇ ॥**

**ನಿತ್ಯಾನಂದೋ ಹರಿಃ ಪೂರ್ಣೋ ನಿತ್ಯದಾ ಪ್ರೀಯತಾಂ ಮಮ ।**
**ನಮಸ್ತಸ್ಮೈ ನಮಸ್ತಸ್ಮೈ ನಮಸ್ತಸ್ಮೈ ಚ ವಿಷ್ಣವೇ ॥**

ಭಾಷ್ಯವು ಆಪ್ತಪ್ರಣೀತವಾದುದು ಎಂದು ತಿಳಿಸಲು ಶ್ರುತಿಸಿದ್ಧವಾದ ಆಪ್ತತ್ವವನ್ನು ಆಚಾರ್ಯರು ಅಂತಿಮ ಮಂಗಳಪದ್ಯದಲ್ಲಿ ತಿಳಿಸಿದ್ದಾರೆ.

ಯಸ್ಯ=ಯಾವ ವಾಯುದೇವರ ತ್ರೀಣಿ ರೂಪಾಣಿ=ಮೂರು ರೂಪಗಳು

ದಿವ್ಯಾನಿ=ಕ್ರೀಡಾದಿಗುಣವಿಶಿಷ್ಟಗಳಾಗಿ ವೇದವಚನೇ=ಬಳಿತ್ಥಾದಿಸೂಕ್ತಗಳಲ್ಲಿ ಉದಿತಾನಿ=ಹೇಳಲ್ಪಟ್ಟಿವೆಯೋ ಅವುಗಳಲ್ಲಿ ತೃತೀಯಕಂ=ಮೂರನೆಯದಾದ ಯತ್ತು= ಯಾವ ಮಧ್ವಃ=ಮಧ್ವರೂಪವಿದೆಯೋ ತೇನ=ಆ ರೂಪದಿಂದ ಹರೌ= ಭಗವದ್ವಿಷಯಕವಾಗಿ ಇದಂ ಕೃತಂ=ಈ ಗ್ರಂಥವು ರಚಿಸಲ್ಪಟ್ಟಿದೆ.

ಆ ವಾಯೋಃ=ವಾಯುದೇವನ ಮೂಲರೂಪವು ಬಟ್=ಬಲಾತ್ಮಕವಾದುದು, ದರ್ಶತಂ=ಜ್ಞಾನಾತ್ಮಕವಾದುದು ಭರ್ಗಃ=ಜಗದ್ಧಾರಕ–ಚೇಷ್ಟಕವಾದುದು ಮಹತ್= ಪೂಜ್ಯವಾದುದು, ತತ್=ಅದು ಇತ್ಥಮೇವ=ಮೂಲರೂಪದಲ್ಲಿರುವಂತೆಯೇ ಜ್ಞಾನಾನಂದಾತ್ಮಕವಾಗಿ ನಿಹಿತಂ=ಅವತಾರತ್ರಯಕ್ಕಾಗಿ ಭಗವಂತನಿಂದ ಪ್ರೇರಿಸಲ್ಪಟ್ಟಿದೆ, ಅವತರಿಸಿದೆಯೂ ಕೂಡ.

ಅವುಗಳಲ್ಲಿ ಪ್ರಥಮಕಂ=ಮೊದಲನೆಯದಾದ ಹನುಮ ರೂಪವು ರಾಮವಚೋನಯಂ=ರಾಮಸಂದೇಶವನ್ನು ಸೀತೆಗೆ ತಲುಪಿಸಿದೆ. ರಾಮಸಂದೇಶವನ್ನು ಮೂಲರಾಮಾಯಣದ ಮೂಲಕ ಶಿಷ್ಯರಿಗೆ ತಲುಪಿಸಿದೆ. ದ್ವಿತೀಯಂ ವಪುಃ=ಎರಡನೆಯದಾದ ಭೀಮರೂಪವು ಪೃಕ್ಷಃ=ಕೌರವ ಸೈನ್ಯವನ್ನು ನಾಶಮಾಡಿದೆ. ತೃತೀಯಂ=ಮೂರನೆಯದು ಮಧ್ವರೂಪ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**॥ ಓಂ ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್ ಓಂ ॥** (ಅತ್ರ ಮುಕ್ತಸ್ಯ ಭೋಗಾನ್ ಭುಂಜಾನಸ್ಯ ಅಪುನರಾವೃತ್ತಿರುಚ್ಯತೇ। ಮುಕ್ತಾನಾಮ್ ಅನಾವೃತ್ತಿಃ, ನ ತು ಸರ್ವಕಾಲಸ್ಯಾಪಿ ಸಮಾಪ್ತ್ಯಾ ಸ್ವರ್ಗಿವತ್ ಪುನರಾವೃತ್ತಿಃ। ಕುತಃ ? ''ನಚ ಪುನರಾವರ್ತತೇ'' ಇತಿ ಶಬ್ದಾತ್=ಶ್ರುತೇರಿತ್ಯರ್ಥಃ। ಜ್ಞಾಯತೇ ಇತಿ ಶೇಷಃ। ಸಮಸ್ತಶಾಸ್ತ್ರಾವಧಾರಣಾರ್ಥಾ ಸೂತ್ರಸ್ಯೈವಾತ್ರ ದ್ವಿರುಕ್ತಿಃ।)

ಈ ಅಧಿಕರಣದಲ್ಲಿ ಮುಕ್ತನು ಮತ್ತೆ ಸಂಸಾರಕ್ಕೆ ಬರುವುದಿಲ್ಲ, ಎಂದು ಹೇಳಲಾಗಿದೆ. ಮುಕ್ತನಿಗೆ ಅನಾವೃತ್ತಿಃ=ಸ್ವರ್ಗಕ್ಕೆ ಹೋದವರಂತೆ ಪುನರಾವೃತ್ತಿ ಇಲ್ಲ. ಶಬ್ದಾತ್='ನಚ ಪುನರಾವರ್ತತೇ' ಎಂಬ ಶ್ರುತಿಯಲ್ಲಿ ಹಾಗೆ ತಿಳಿದುಬರುವುದರಿಂದ. ಸಮಸ್ತಶಾಸ್ತ್ರಾರ್ಥದ ನಿರ್ಣಯ ಸೂಚಕವಾಗಿ ಸಮಗ್ರ ಸೂತ್ರದ ದ್ವಿರುಕ್ತಿ ಇದೆ.

**ವಿವರಣೆ**—ಮಹಾಭಾರತ ಯುದ್ಧ ನಡೆದ ಕೃಷ್ಣಪಕ್ಷದಲ್ಲಿ ಮೂರೂ ತಿಥಿಗಳೂ ಒಂದೇ ದಿನ ಸಮಾಪ್ತಿಯಾಗಿವೆ. ಸಾಮಾನ್ಯವಾಗಿ ಹದಿನೈದು ದಿನಗಳ ಒಂದು 'ಪಕ್ಷ'ದಲ್ಲಿ

ಒಂದು ತಿಥಿಲೋಪವಾಗುತ್ತದೆ. ಆದರೆ ಆ ಕೃಷ್ಣಪಕ್ಷದಲ್ಲಿ ಎರಡು ತಿಥಿಗಳು ಲೋಪವಾಗಿರುವ ಅಪೂರ್ವ ಘಟನೆ ನಡೆದಿದೆ.

ಚತುರ್ದಶೀಂ ಪಂಚದಶೀಂ ಭೂತಪೂರ್ವಾಂ ಚ ಷೋಡಶೀಮ್ ।
ಇಮಾಂ ತು ನಾಭಿಜಾನಾಮಿ ಅಮಾವಾಸ್ಯಾಂ ತ್ರಯೋದಶೀಮ್ ॥

ಪಕ್ಷದಲ್ಲಿ ತಿಥಿಲೋಪವಾದರೆ ಹದಿನಾಲ್ಕು ದಿನಗಳಿರುತ್ತವೆ, ಲೋಪವಾಗದಿದ್ದಲ್ಲಿ ಹದಿನೈದು ದಿನಗಳು, ವೃದ್ಧಿಯಾದರೆ ಹದಿನಾರು ದಿನಗಳು. ಆದರೆ, ಹದಿಮೂರನೇ ದಿನದಲ್ಲೇ ಅಮಾವಾಸ್ಯೆಯಾದುದು (ಕೃಷ್ಣಪಕ್ಷದ ಕೊನೆಯದಿನ) ಇಲ್ಲ. ಆದರೆ, ಈ ಪಕ್ಷದಲ್ಲಿ ಎರಡು ತಿಥಿಗಳು ಲೋಪವಾಗಿ ತ್ರಯೋದಶೀ, ಚತುರ್ದಶೀ, ಅಮಾವಾಸ್ಯೆಗಳು ಒಂದೇ ದಿನದಲ್ಲಿ ಮುಗಿದಿವೆ. ಇದು ಆಶ್ಚರ್ಯದ ಸಂಗತಿ. ಹೀಗೆಂದು ಮಹಾಭಾರತದಲ್ಲಿದೆ. ಇದರಂತೆಯೇ ಕಾಲವೂ ಮುಗಿದು ಬಿಡುವ ಅಚ್ಚರಿ ನಡೆಯಬಹುದೇ? ಸಾಧ್ಯವಿಲ್ಲ. ಒಂದು ದಿನ ಕಾಲವೇ ಇಲ್ಲದಾಗುತ್ತದೆ, ಎನ್ನುವುದು ವ್ಯಾಹತ.

## ಶಾಂಕರಭಾಷ್ಯದಲ್ಲಿ ಜಗದ್ವ್ಯಾಪಾರಾಧಿಕರಣ

**॥ ಜಗದ್ವ್ಯಾಪಾರವರ್ಜಮ್ ಪ್ರಕರಣಾದಸನ್ನಿಹಿತತ್ವಾಚ್ಚ ॥** ದ್ವೈತಭಾಷ್ಯದ 17 ಮತ್ತು 18ನೆಯ ಸೂತ್ರಗಳು ಸೇರಿ ಅದ್ವೈತಭಾಷ್ಯದ ಒಂದು ಸೂತ್ರ. ಸಗುಣೋಪಾಸನೆ ಮಾಡಿ ಭಗವಂತನ ಸಾಯುಜ್ಯವನ್ನು ಪಡೆದವರು ''ಆಪ್ನೋತಿ ಸ್ವಾರಾಜ್ಯಮ್'' (ತೈ. 1.6.2) ''ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ'' (ಛಾಂ.7.25.2) ಈ ಶ್ರುತಿಗಳಲ್ಲಿ ಭಗವಂತನ ಎಲ್ಲಾ ಐಶ್ವರ್ಯಗಳೂ ಬರುತ್ತವೆ ಎನ್ನಲಾಗಿದ್ದರೂ ಜಗತ್ತಿನ ಸೃಷ್ಟ್ಯಾದಿವ್ಯಾಪಾರಗಳನ್ನು ಬಿಟ್ಟು ಉಳಿದ ಅಂಶದಲ್ಲಿ ಮಾತ್ರ ಭಗವಂತನ ಸಾಮ್ಯ ಬರುತ್ತದೆ. ಜಗತ್ ಸೃಷ್ಟಿಯನ್ನು ಹೇಳುವ ಪ್ರಕರಣಗಳಲ್ಲಿ ಪ್ರಸ್ತುತನಾದವನು ಈಶ್ವರ ಮಾತ್ರ. ಜೀವರು ಅಲ್ಲಿ ಅಸನ್ನಿಹಿತರು. ಆದ್ದರಿಂದ ಮುಕ್ತಜೀವರಿಗೆ ಜಗತ್‌ಕರ್ತೃತ್ವವು ಇಲ್ಲ. ಜಗತ್‌ಕರ್ತೃತ್ವವನ್ನು ಹೇಳುವ ವೇದ ನಿತ್ಯ. ಮುಕ್ತಜೀವರು ಸಾದಿಯಾಗಿದ್ದಾರೆ. ಈಶ್ವರೋಪಾಸನೆಯಿಂದ ಅವರು ಮುಕ್ತರಾಗುವರು. ಆದ್ದರಿಂದ ನಿತ್ಯವಾದ ವೇದಕ್ಕೆ ಅವರು ನಿಲುಕುವವರಲ್ಲ– ಅಸನ್ನಿಹಿತರು.

**॥ ಪ್ರತ್ಯಕ್ಷೋಪದೇಶಾದಿತಿ ಚೇನ್ನಾಽಧಿಕಾರಿಕಮಂಡಲಸ್ಥೋಕ್ತೇಃ ॥** 'ಆಪ್ನೋತಿ ಸ್ವಾರಾಜ್ಯಂ' ಎಂದು ಪ್ರತ್ಯಕ್ಷವಾಗಿ ಹೇಳಿದ್ದರೂ ಮುಕ್ತರಿಗೆ ಅಣಿಮಾದಿ ಐಶ್ವರ್ಯಪ್ರಾಪ್ತಿ ಮಾತ್ರ. ಅದೂ ಆಧಿಕಾರಿಕ ಮಂಡಲಸ್ಥೋಕ್ತೇಃ=ಸೂರ್ಯಮಂಡಲಾದಿ ಸ್ಥಾನಗಳಲ್ಲಿ

ಇರುವ ಈಶ್ವರನಿಗೆ ಅಧೀನವಾಗಿಯೇ ಈ ಸ್ವಾರಾಜ್ಯಪ್ರಾಪ್ತಿಯನ್ನು ಹೇಳಲಾಗಿದೆ. ಅಂದಮೇಲೆ ಈಶ್ವರನ ಐಶ್ವರ್ಯಕ್ಕಿಂತ ನ್ಯೂನವಾದ ಅಣಿಮಾದಿ ಐಶ್ವರ್ಯಪ್ರಾಪ್ತಿಯೇ ಸ್ವಾರಾಜ್ಯಪ್ರಾಪ್ತಿ. ಆದ್ದರಿಂದಲೇ ಮುಂದಿನ ಶ್ರುತಿಭಾಗ–'ಆಪ್ನೋತಿ ಮನಸಸ್ಪತಿಂ' ಎಂದಿದೆ. ಸರ್ವಮನಸ್ಸುಗಳಿಗೂ ಅಧಿಪತಿ ಎಂದು ಸಿದ್ಧನಾದ ಈಶನನ್ನು ಸಗುಣೋಪಾಸಕನು ಹೊಂದುತ್ತಾನೆ, ಎಂದರ್ಥ. ಇದಕ್ಕನುಗುಣವಾಗಿ ಸ್ವಾರಾಜ್ಯಪ್ರಾಪ್ತಿಯನ್ನೂ ತಿಳಿಯಬೇಕು.

**॥ ವಿಕಾರಾವರ್ತಿ ಚ ತಥಾಹಿ ಸ್ಥಿತಿಮಾಹ ॥** ಸೂರ್ಯಾದಿ ವಿಕಾರಗತವಾದ ರೂಪವನ್ನು ಈಶ್ವರನಿಗೆ ಹೇಳಿರುವಂತೆಯೇ ನಿತ್ಯನಿರ್ವಿಕಾರವಾದ ರೂಪವನ್ನೂ ಹೇಳಲಾಗಿದೆ—''ಏತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪುರುಷಃ'' ಅಂತಹ ನಿರ್ವಿಕಾರರೂಪವನ್ನು ಸಗುಣೋಪಾಸಕರು ಹೊಂದುವುದಿಲ್ಲ. ಏಕೆಂದರೆ, ಅದರ ಉಪಾಸನೆಯನ್ನು ಅವರು ಮಾಡಿಲ್ಲ. ಅದರಂತೆ ಸಗುಣಬ್ರಹ್ಮನ ನಿರವಗ್ರಹ(ಪೂರ್ಣ) ಐಶ್ವರ್ಯವನ್ನೂ ಅವರು ಪಡೆಯಲಾರರು. 'ತಥಾಹಿ ದರ್ಶಯತಿ' ಎಂದು ದ್ವೈತಪಾಠ. 'ತಥಾಹಿ ಸ್ಥಿತಿಮಾಹ' ಎಂದು ಅದ್ವೈತಸೂತ್ರಪಾಠ. ಮುಂದಿನ ಸೂತ್ರದ ಪದ ಈ ಸೂತ್ರದಲ್ಲಿ ಸೇರಿದೆ.

**॥ ದರ್ಶಯತಶ್ಚೈವಂ ಪ್ರತ್ಯಕ್ಷಾನುಮಾನೇ ॥** ಪ್ರತ್ಯಕ್ಷಾನುಮಾನೇ=ಶ್ರುತಿ–ಸ್ಮೃತಿಗಳು ಬ್ರಹ್ಮನಿಗೆ ವಿಕಾರಾತೀತ (ನಿರ್ಗುಣ) ರೂಪವನ್ನೂ ದರ್ಶಯತಃ=ಹೇಳುತ್ತವೆ. ''ನ ತತ್ರ ಸೂರ್ಯೋ ಭಾತಿ'' (ಕಠ 5.15, ಶ್ವೇತಾ.6.14, ಮುಂಡಕ 2.2.10) 'ನ ತದ್ ಭಾಸಯತೇ ಸೂರ್ಯೋ' (ಗೀ.15.6) ಹೀಗೆ ನಿರ್ಗುಣರೂಪವು ಬ್ರಹ್ಮನಿಗಿದ್ದರೂ ಅದರ ಉಪಾಸನೆಯನ್ನು ಮಾಡದಿರುವ ಪ್ರಯುಕ್ತ ತತ್‌ಪ್ರಾಪ್ತಿ ಸಾಧಕನಿಗಿಲ್ಲ. ಅದರಂತೆ ಸಗುಣೋಪಾಸಕರೂ ಬ್ರಹ್ಮನ ನಿರವಗ್ರಹ ಐಶ್ವರ್ಯವನ್ನು ಉಪಾಸನೆ ಮಾಡುವಂತೆ ಆದೇಶಿಸುವ ಶ್ರುತಿ ಇಲ್ಲದಿರುವುದರಿಂದ ಹಾಗೆ ಉಪಾಸನೆ ಮಾಡಿಲ್ಲ. ಆದಕಾರಣ ಸಮಗ್ರೈಶ್ವರ್ಯಪ್ರಾಪ್ತಿ ಅವರಿಗಿಲ್ಲ. (ಯದಾ ಸವಿಕಾರೇ ಬ್ರಹ್ಮಣಿ ಉಪಾಸ್ಯಮಾನೇ ವಸ್ತುತಃ ಸ್ಥಿತಮಪಿ ನಿರ್ವಿಕಾರರೂಪಂ ನ ಪ್ರಾಪ್ಯತೇ । ತತ್ ಕಸ್ಯ ಹೇತೋಃ? ಅತತ್‌ಕ್ರತುತ್ವಾತ್ ಉಪಾಸಕಸ್ಯ ತಥಾ ತದ್ಗುಣೋಪಾಸಕಾಯ ವಸ್ತುತಃ ಸ್ಥಿತಮಪಿ ನಿರವಗ್ರಹತ್ವಂ ನಾಪ್ಯತೇ।)

**॥ ಭೋಗಮಾತ್ರಸಾಮ್ಯಲಿಂಗಾಚ್ಚ ॥** ಸಗುಣೋಪಾಸಕರಿಗೆ ನಿರಂಕುಶವಾದ ಈಶನ ಐಶ್ವರ್ಯವಿಲ್ಲ ಎನ್ನಲು ಇನ್ನೊಂದು ಕಾರಣ–'ಸ ಯಥೈತಾಂ ದೇವತಾಂ

ಸರ್ವಾಣಿ ಭೂತಾನಿ ಅವಯಂತಿ, ಏವಂ ಹೈವಂವಿದಂ ಸರ್ವಾಣಿ ಭೂತಾನಿ ಅವಯಂತಿ (ಬೃ.1.5.23)–ಹೇಗೆ ಬ್ರಹ್ಮನಿಗೆ ಎಲ್ಲರೂ ಅವಯಂತಿ=ಭೋಜಯಂತಿ=ಭೋಗ್ಯ ವಸ್ತುಗಳನ್ನು ನೀಡುವರೋ ಹಾಗೆ ಬ್ರಹ್ಮಜ್ಞಾನಿಗೂ ಎಲ್ಲರೂ ಭೋಗವನ್ನು ನೀಡುತ್ತಾರೆ. ಹೀಗೆ ಭೋಗಮಾತ್ರದಲ್ಲಷ್ಟೇ ಬ್ರಹ್ಮಸಾಮ್ಯವನ್ನು ಉಪನಿಷತ್ತುಗಳು ಹೇಳುತ್ತವೆ.

**॥ ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್ ॥** ಇಂತಹ ಸಗುಣಪ್ರಾಪ್ತಿರೂಪವಾದ ಮೋಕ್ಷವು ಸಾದಿಯಾದುದರಿಂದ ಇದಕ್ಕೆ ನಾಶವೂ ಇರಬೇಕು, ಎಂಬ ಶಂಕೆಯನ್ನು ಈ ಸೂತ್ರದಲ್ಲಿ ನಿರಾಕರಿಸಲಾಗಿದೆ. ಶಬ್ದಾತ್=''ತಯೋರ್ಧ್ವಮಾಯನ್ನಮೃತತ್ವಮೇತಿ'' (ಛಾಂ.8.6.6) ''ತೇಷಾಂ ನ ಪುನರಾವೃತ್ತಿಃ'' ಈ ಶ್ರುತಿಗಳಿಂದ ಅನಾವೃತ್ತಿಃ= ಸಗುಣಮುಕ್ತರು ತಿರುಗಿ ಬರುವುದಿಲ್ಲ. ''ಸೂತ್ರಾಭ್ಯಾಸಃ ಶಾಸ್ತ್ರಪರಿಸಮಾಪ್ತಿಂ ಸೂಚಯತಿ''–ಅಭ್ಯಾಸವು ಶಾಸ್ತ್ರದ ಸಮಾಪ್ತಿಸೂಚಕ.

''ಇಲ್ಲಿ ಜ್ಞಾನಿಪ್ರಾಪ್ಯ ಬ್ರಹ್ಮಲೋಕದ ನಿರೂಪಣೆಯನ್ನು ಭಾಷ್ಯದಲ್ಲಿ ಮಾಡಲಾಗಿದೆ–ಯಸ್ಮಿನ್ ಅರಶ್ಚ ವೈ ಣ್ಯಶ್ಚ ಅರ್ಣವೌ ಬ್ರಹ್ಮಲೋಕೇ, ತೃತೀಯಸ್ಯಾಮಿತೋ ದಿವಿ, ಯಸ್ಮಿನ್ನೈರಂ ಮದೀಯಂ ಸರಃ ಯಸ್ಮಿನ್ನಶ್ವತ್ಥಃ ಸೋಮಸವನಃ ಯಸ್ಮಿನ್ನಪರಾಜಿತಾ ಬ್ರಹ್ಮಪೂಃ, ಬ್ರಹ್ಮಣೋ ಯಸ್ಮಿಂಶ್ಚ ಪ್ರಭುವಿಮಿತಂ ಹಿರಣ್ಮಯಂ ವೇಶ್ಮ, ಯಶ್ಚಾನೇಕಧಾ ಮಂತ್ರಾರ್ಥವಾದಾದಿ ಪ್ರದೇಶೇಷು ಪ್ರಪಂಚ್ಯತೇ ತೇ ತಂ ಲೋಕಂ ಪ್ರಾಪ್ಯ ನ ಚಂದ್ರಲೋಕಾದಿವ ಭುಕ್ತಭೋಗಾ ಆವರ್ತಂತೇ ।''

ಭಾಷ್ಯಕಾರರೂ ಕೊನೆಯಲ್ಲಿ ''ಸಮ್ಯಗ್ದರ್ಶನ ವಿಧ್ವಸ್ತತಮಸಾಂ ತು ನಿತ್ಯಸಿದ್ಧನಿರ್ವಾಣಪರಾಯಣಾನಾಂ ಸಿದ್ಧೈವ ಅನಾವೃತ್ತಿಃ'' ಎಂದು ತಾವೇ ನಿರ್ಗುಣಮುಕ್ತಿಯನ್ನು ನಿರೂಪಿಸಿ ಸಮಾಪ್ತಿ ಮಾಡಿದ್ದಾರೆ.

**ವಿಮರ್ಶೆ**—''ಇತ ಉಪರಿ ಸಗುಣವಿದ್ಯಾಫಲಪ್ರಪಂಚಃ'' ಎಂದು ಶಾಂಕರ ಭಾಷ್ಯದಲ್ಲಿದೆ. 'ಈ ಅಧಿಕರಣದಲ್ಲಿ ಸಗುಣೋಪಾಸನೆಯ ಫಲವನ್ನು ಹೇಳಲಾಗಿದೆ' ಎಂದರ್ಥ. ಹಿಂದಿನ ಅಧಿಕರಣದಲ್ಲಿ ನಿರ್ಗುಣವಿದ್ಯೆಯ ಫಲವನ್ನು ಹೇಳಿ ಇಲ್ಲಿ ಪ್ರಕರಣಭಂಗ ಮಾಡಿ ಸಗುಣವಿದ್ಯೆಯ ಫಲವನ್ನು ಹೇಳಿರುವುದು ಯುಕ್ತವಲ್ಲ. ಇಲ್ಲಿ ಮುಕ್ತನಿಗೆ ಪಿತೃಲೋಕಸಂಕಲ್ಪದ ವಿಚಾರ ಮಾಡಲಾಗಿದೆ. ನಿಷ್ಪ್ರಪಂಚತಾರೂಪ ನಿರ್ಗುಣಮುಕ್ತಿಯಲ್ಲಿ ಸಂಕಲ್ಪಕ್ಕೆ ಅವಕಾಶವಿಲ್ಲ. ಆದ್ದರಿಂದ ಪ್ರಕರಣ ವಿಚ್ಛೇದ ಅನಿವಾರ್ಯ, ಎನ್ನುವ ಸಮಾಧಾನ ಯುಕ್ತವಲ್ಲ. ಹಿಂದಿನ ಅಧಿಕರಣದಲ್ಲೂ ''ಜಕ್ಷನ್

ಕ್ರೀಡನ್ ರಮಮಾಣಃ' ಎಂದು ಸಪ್ರಪಂಚತಾಶ್ರವಣ ಇದೆ. ಅದನ್ನು ವ್ಯಾವಹಾರಿಕ, ಎಂದು ಕಲ್ಪನೆ ಮಾಡಿದಂತೆ ಇಲ್ಲೂ ಸಂಕಲ್ಪಾದಿಗಳನ್ನು ವ್ಯಾವಹಾರಿಕ ಎಂದು ಕಲ್ಪನೆ ಮಾಡಿ ನಿರ್ಗುಣವಿದ್ಯಾಫಲವನ್ನೇ ಹೇಳಲಾಗಿದೆ ಎಂದು ಹೇಳಬಹುದು. ಆದ್ದರಿಂದ ಪ್ರಕರಣಭೇದಕ್ಕೆ ಕಾರಣವಿಲ್ಲ.

## ವಿಶಿಷ್ಟಾದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**॥ ಜಗದ್ವ್ಯಾಪಾರವರ್ಜಮ್ ಪ್ರಕರಣಾದಸನ್ನಿಹಿತತ್ವಾಚ್ಚ ॥** ''ನಿರಂಜನಃ ಪರಮಂ ಸಾಮ್ಯಮುಪೈತಿ'' ಎಂದು ಶ್ರುತಿ ಹೇಳಿದ್ದರೂ ಸರ್ವಾತ್ಮನಾ ಬ್ರಹ್ಮಸಾಮ್ಯ ಮುಕ್ತನಿಗೆ ಬರುವುದಿಲ್ಲ. ಜಗತ್‌ಸೃಷ್ಟಿ ನಿಯಮನಾದಿಗಳನ್ನು ಹೇಳುವ ಪ್ರಕರಣಗಳಲ್ಲಿ ಜೀವನು ಸನ್ನಿಹಿತನಲ್ಲ. ಅವೆಲ್ಲವೂ ಬ್ರಹ್ಮಪ್ರಕರಣಗಳಲ್ಲೇ ಹೇಳಲ್ಪಟ್ಟಿವೆ. ಆದ್ದರಿಂದ ಮುಕ್ತಜೀವನಿಗೆ ಬ್ರಹ್ಮನಂತೆ ಜಗತ್‌ಕರ್ತೃತ್ವಾದಿಗಳು ಬರುವುದಿಲ್ಲ. (ಶಾಂಕರಭಾಷ್ಯದಂತೆಯೇ ಈ ಸೂತ್ರಪಾಠ ವಿದೆ.)

**॥ ಪ್ರತ್ಯಕ್ಷೋಪದೇಶಾದಿತಿ ಚೇನ್ನಾऽಧಿಕಾರಿಕಮಂಡಲಸ್ಥೋಕ್ತೇಃ ॥** 'ಸ ಸ್ವರಾಡ್ ಭವತಿ, ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ' ಈ ಪ್ರತ್ಯಕ್ಷಶ್ರುತಿಯಲ್ಲಿ ಮುಕ್ತನಿಗೆ ಜಗದ್‌ವ್ಯಾಪಾರವನ್ನು ಹೇಳಲಾಗಿದೆ ಎನ್ನಬಾರದು. ಅಧಿಕಾರಿಕಾಃ=ಅಧಿ ಕಾರದಲ್ಲಿ ನಿಯುಕ್ತರಾದ ಹಿರಣ್ಯಗರ್ಭಾದಿಗಳು. ಅವರ ಮಂಡಲಾನಿ=ಲೋಕಗಳು ತತ್‌ಸ್ಥಾಃ=ಅಲ್ಲಿರುವ ಭೋಗಗಳು ಮುಕ್ತನಿಗೆ ಬರುತ್ತವೆ ಎಂದರ್ಥ. ಇದೇ ''ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ'' ಎಂಬ ಶ್ರುತಿಯ ಅರ್ಥ.

**॥ ವಿಕಾರಾವರ್ತಿ ಚ ತಥಾಹಿ ಸ್ಥಿತಿಮಾಹ ॥** (ಈ ಸೂತ್ರಪಾಠವೂ ಶಾಂಕರ ಭಾಷ್ಯದಂತೆಯೇ ಇದೆ. 'ವಿಕಾರವರ್ತಿ' ಎಂದು ದ್ವೈತಪಾಠ. 'ವಿಕಾರಾವರ್ತಿ' ಎಂದು ಎರಡು ಭಾಷ್ಯಗಳ ಪಾಠ. ಮುಂದಿನ ಸೂತ್ರದ ಸ್ಥಿತಿಪದ ಈ ಸೂತ್ರದಲ್ಲಿ ಸೇರಿದೆ.)

ವಿಕಾರೇ=ಜನ್ಮಾದಿಕೇ ನ ವರ್ತತೇ ಇತಿ ವಿಕಾರಾವರ್ತಿ. ವಿಕಾರರಹಿತವಾದ ಬ್ರಹ್ಮನನ್ನೇ ಮುಕ್ತರು ಭೋಗಿಸುತ್ತಾರೆ. ಬ್ರಹ್ಮಲೋಕಾದಿಗಳೂ ಪರಬ್ರಹ್ಮನ ವಿಭೂತಿ ಅಂತರ್ಗತವಾಗಿವೆ. ಆದ್ದರಿಂದ ಆ ಲೋಕದ ಭೋಗಗಳನ್ನು ಮುಕ್ತನು ಅನುಭವಿಸಿದರೂ ಅವನಿಗೆ ಬದ್ಧನಂತೆ ಭೋಗವು ಕ್ಷಣಿಕವಾಗುವುದಿಲ್ಲ. ಬ್ರಹ್ಮಾನುಭವ ವನ್ನೇ ಶ್ರುತಿಯು ಹೇಳುತ್ತದೆ. 'ರಸೋ ವೈ ಸಃ, ರಸಂ ಹ್ಯೇವಾಯಂ ಲಬ್ಧ್ವಾನಂದೀಭವತಿ''.

**|| ದರ್ಶಯತಶ್ಚೈವಂ ಪ್ರತ್ಯಕ್ಷಾನುಮಾನೇ ||** ನಿಖಿಲಜಗನ್ನಿಯಮನ ವ್ಯಾಪಾರವು ಭಗವಂತನ ಅಸಾಧಾರಣಧರ್ಮ ಎಂದು ಶ್ರುತಿ ಮತ್ತು ಸ್ಮೃತಿಗಳು ತಿಳಿಸುತ್ತವೆ. ''ಏತಸ್ಯ ವಾಕ್ಷರಸ್ಯ ಪ್ರಶಾಸನೇ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ'' (ಬೃ.5.8.9) ''ವಿಷ್ಟಭ್ಯಾಹಮಿದಂ ಕೃತ್ಸ್ನಂ'' (ಗೀ.10.42) ಎಂದು. ಆದ್ದರಿಂದ ಮುಕ್ತರಿಗೆಂದೂ ಅವುಗಳು ಬರುವುದಿಲ್ಲ.

**|| ಭೋಗಮಾತ್ರಸಾಮ್ಯಲಿಂಗಾಚ್ಚ ||** ಬ್ರಹ್ಮನ ಅನುಭವರೂಪವಾದ ಭೋಗ ಮಾತ್ರದಲ್ಲಷ್ಟೇ ಮುಕ್ತನಿಗೆ ಬ್ರಹ್ಮಸಾಮ್ಯವನ್ನು ಹೇಳಿರುವುದರಿಂದಾಗಿಯೂ ಜಗದ್ವ್ಯಾಪಾರದ ಹೊರತಾಗಿಯೇ ಕಾಮಗಳನ್ನು ಮುಕ್ತನು ಭೋಗಿಸುತ್ತಾನೆ. ''ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ''

**|| ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್ ||** ಮುಕ್ತನ ವೈಭವವು ಭಗವದಧೀನವಾದರೂ ಮುಕ್ತನಿಗೆ ಸಂಸಾರದಲ್ಲಿ ಪುನರಾವೃತ್ತಿ ಇಲ್ಲ.

**ಇಲ್ಲಿಗೆ ನಾಲ್ಕನೆಯ ಅಧ್ಯಾಯದ ನಾಲ್ಕನೆಯ ಪಾದ ಮುಗಿಯಿತು.**

**ಬ್ರಹ್ಮಸೂತ್ರಭಾಷ್ಯದ ಅನುವಾದ ಮುಗಿಯಿತು.**

**|| ಶ್ರೀಮಧ್ವೇಶಾರ್ಪಿತಮಸ್ತು ||**

# ಸರ್ವಮೂಲಗ್ರಂಥಗಳು

ಶ್ರೀ ಮಧ್ವಾಚಾರ್ಯರು ವಿರಚಿಸಿದ ಮೂವತ್ತೇಳು ಗ್ರಂಥಗಳು ಸರ್ವಮೂಲಗ್ರಂಥಗಳೆಂದು ಪ್ರಸಿದ್ಧವಾಗಿವೆ. ಇವುಗಳನ್ನು೧. ಗೀತಾಪ್ರಸ್ಥಾನ ೨. ಉಪನಿಷತ್ಪ್ರಸ್ಥಾನ ೩. ಸೂತ್ರಪ್ರಸ್ಥಾನ ೪. ಋಕ್‌ಪ್ರಸ್ಥಾನ ೫. ಇತಿಹಾಸ ಪುರಾಣಗಳು ೬. ದಶಪ್ರಕರಣಗಳು ೭. ತಂತ್ರಸಾರ ಮತ್ತು ಸ್ತೋತ್ರ ಪೂಜಾದಿಗಳು ಎಂದು ವಿಂಗಡಿಸಲಾಗುವುದು.

ತತ್ವಜ್ಞಾನ ಧರ್ಮ ಮತ್ತು ಭಾರತೀಯ ಸಂಸ್ಕೃತಿಯ ಸಮಗ್ರಸಾರವೇ ಇವುಗಳಲ್ಲಿ ಅಡಕವಾಗಿರುವುದು. ಈ ಸಾರವನ್ನು ಕನ್ನಡದಲ್ಲಿ ಒದಗಿಸಲು ಶ್ರೀ ಪೇಜಾವರ ಮಠಾಧೀಶ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ ಮಾರ್ಗದರ್ಶನದಲ್ಲಿ ಸರ್ವಮೂಲಗ್ರಂಥಗಳ ಕನ್ನಡ ಅನುವಾದದ ಯೋಜನೆಯನ್ನು ಕೈಕೊಳ್ಳಲಾಗಿದೆ.